# ಅಧ್ಯಾತ್ಮ ರಾಮಾಯಣ



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ, 2000

# ಅಧ್ಯಾತ್ಮರಾಮಾಯಣ



ಪಾರ್ವತೀಪರಮೇಶ್ವರರ ಸಂವಾದರೂಪವಾಗಿ ಸಂಸ್ಕೃತ ಭಾಷೆಯಲ್ಲಿ ಸುಂದರ ಸಾಹಿತ್ಯ, ವೃತ್ತ ಅಲಂಕಾರಾದಿಪರಿಕರಗಳಿಂದ ಕೂಡಿ ರಚಿಸಲ್ಪಟ್ಟಿರುವ ಈ ಗ್ರಂಥವು ರಾಮಭಕ್ತರಿಗೂ ವೇದಾಂತ ತತ್ತ್ವವಿಚಾರ ಜಿಜ್ಞಾಸುಗಳಿಗೂ ಅತ್ಯುಪಯುಕ್ತವಾದುದಾಗಿದೆ. ಪ್ರಾರಂಭದ ದೆಶೆಯಲ್ಲಿ ಅಧ್ಯಾತ್ಮ ವಿಚಾರರಸಿಕರು ಈ ಗ್ರಂಥವನ್ನು ಪಠನ ಮಾಡುವುದರಿಂದ ಬೇಸರಕ್ಕೆ ಅವಕಾಶವಿಲ್ಲದಂತೆ ರಾಮಾಯಣಕಥೆಯೊಡನೆ ತತ್ತ್ವಾನುಸಂಧಾನವೂ ವೇದಾಂತ ಪ್ರಕ್ರಿಯೆಯ ಪರಿಚಯವೂ ಉಂಟಾಗಿ ಮುಂದೆ ಉಪನಿಷದಾದಿ ಪ್ರಸ್ಥಾನಗಳನ್ನು ಅಭ್ಯಾಸ ಮಾಡಲು ಸಹಾಯವಾಗುವುದು. ಸಾಧನ ಪ್ರಿಯರಿಗಂತೂ ನಾಮಕೀರ್ತನೆ, ಸ್ಮರಣೆ, ಅರ್ಚನೆ - ಮುಂತಾಗಿ ನವವಿಧವಾದ ಭಕ್ತಿಗಳ ರುಚಿಯು ಅಂತಃಕರಣಕ್ಕೆ ನೇರವಾಗಿ ತಟ್ಟುವ ಮೂಲಕ ಸಗುಣೋಪಾಸನೆಯ ಸೋಪಾನಗಳನ್ನೇರಲು ಈ ಗ್ರಂಥವು ಊರುಗೋಲಾಗಿರುವುದು. ಭಗವದ್ಭಕ್ತರು ಈ ಕೃತಿಯನ್ನು ಓದಿ ಕೃತಾರ್ಥರಾಗುವಂತೆ ಪಾರ್ವತೀಪರಮೇಶ್ವರರು ಹರಸಲಿ.

# ಅಧ್ಯಾತ್ಮ ರಾಮಾಯಣ



ಅಧ್ಯಾತ್ಮ ಪ್ರಕಾಶ ಕಾರ್ಯಾಲಯ
ಹೊಳೆನರಸೀಪುರ
2000

ಅಧ್ಯಾತ್ಮಗ್ರಂಥಾವಳಿ

# ಅಧ್ಯಾತ್ಮರಾಮಾಯಣ

(ಸಂಸ್ಕೃತಮೂಲ, ಕನ್ನಡಾನುವಾದಸಹಿತ)

ಅನುವಾದಕ :
ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ
**ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ**

**ಕ್ರಮಾಂಕ ೧೮೭**

ಪ್ರಕಾಶಕರು:
ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.
೨೦೦೦

# ಮುನ್ನುಡಿ

ಅಧ್ಯಾತ್ಮರಾಮಾಯಣಗ್ರಂಥವು ಕನ್ನಡ ಅನುವಾದ ಸಹಿತವಾಗಿ 1984ರಲ್ಲಿ ಕಾರ್ಯಾಲಯದಿಂದ ಪ್ರಕಟವಾಯಿತು. ಆ ಕಾಲಕ್ಕೆ ಈ ಗ್ರಂಥವು 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಭಾಗಭಾಗವಾಗಿ ಆರುವರ್ಷಗಳ ಕಾಲ ಪ್ರಕಟವಾದ ಗ್ರಂಥದ ಮರಿ ಅಚ್ಚಾಗಿತ್ತು (Reprint). ಗ್ರಂಥವು ಜನಪ್ರಿಯವಾಗಿದ್ದು ಇದರ ಪ್ರತಿಗಳೆಲ್ಲವೂ ಮಾರಾಟವಾಗಿಬಿಟ್ಟಿದ್ದರಿಂದ ಈಗ ಎರಡನೆಯ ಮುದ್ರಣವಾಗಿ ಸರ್ವಾಂಗಸುಂದರವಾಗಿ ಸ್ವತಂತ್ರಗ್ರಂಥವಾಗಿ ಹೊರಬಂದು ವಾಚಕರ ಕರಕಮಲವನ್ನು ಅಲಂಕರಿಸಿರುತ್ತದೆ.

ನಮ್ಮ ಭರತಖಂಡದಲ್ಲಿ ರಾಮಾಯಣದ ಪ್ರಚಾರವು ಅನಾದಿಕಾಲದಿಂದಲೂ ನಡೆದುಬಂದಿದೆ. ಉತ್ತರಭಾರತದಲ್ಲಿ ಶ್ರೀ ತುಳಸಿದಾಸ ವಿರಚಿತ 'ರಾಮಚರಿತಮಾನಸ' ಎಂಬ ಹೆಸರಿನ ಹಿಂದೀಭಾಷೆಯ ರಾಮಾಯಣವೂ, ದಕ್ಷಿಣಭಾರತದಲ್ಲಿ 'ಕಂಬ ರಾಮಾಯಣವೆಂಬ ತಮಿಳು ರಾಮಾಯಣವೂ, ಇನ್ನೂ ದೇಶಭಾಷೆಗಳಲ್ಲಿರುವ ಕೆಲವು ರಾಮಾಯಣಗಳೂ ಪ್ರಚಾರದಲ್ಲಿವೆ. ಕನ್ನಡದಲ್ಲಿ 'ಶ್ರೀ ರಾಮಾಯಣದರ್ಶನಮ್' ಎಂಬ ರಾಷ್ಟ್ರಕವಿ ಕೆ.ವಿ. ಪುಟ್ಟಪ್ಪನವರ ರಾಮಾಯಣವೂ ಪ್ರಸಿದ್ಧವಾಗಿದೆ. ಆದರೆ ಸಂಸ್ಕೃತಭಾಷೆಯಲ್ಲಿ ಸಂಕ್ಷಿಪ್ತಕಥಾಭಾಗದೊಡನೆ ಉದಾತ್ತವಾದ ನೀತಿ, ಅಧ್ಯಾತ್ಮ ಬೋಧನೆಗಳಿಂದ ಅಲಂಕರಿಸಲ್ಪಟ್ಟು ರಸ, ಭಾವ, ಅಲಂಕಾರ, ವಿವಿಧ ಛಂದಸ್ಸುಗಳೇ ಮುಂತಾದ ಕಾವ್ಯಗುಣಗಳಿಂದಲೂ ಅಧ್ಯಾತ್ಮೋಪದೇಶಗಳಿಂದಲೂ ಕೂಡಿರುವ ಈ ಅಧ್ಯಾತ್ಮರಾಮಾಯಣವು ತನ್ನದೇ ಆದ ಅಸಾಧಾರಣಸ್ಥಾನವನ್ನು ಹೊಂದಿದ್ದು ಶ್ರೀರಾಮಭಕ್ತರಿಗೆ ಪಾರಾಯಣ, ಪಠನ, ಪ್ರವಚನಗಳಿಗೆ ಅತ್ಯಂತಯೋಗ್ಯವಾಗಿರುತ್ತದೆ.

ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವೇದಾಂತಪ್ರಕ್ರಿಯೆಯ ವಿಚಾರಕ್ಕೆ ಅನುವಾದಕರೇ ಪೀಠಿಕೆಯಲ್ಲಿ ವಿವರವಾಗಿ ತಿಳಿಸಿದ್ದಾರೆ. ಆದರೆ ಕೇವಲ ಭಕ್ತಿಶ್ರದ್ಧೆಗಳಿಂದ ಈ ಗ್ರಂಥವನ್ನು ಓದುವವರಿಗೆ ಈ ಪ್ರಕ್ರಿಯಾಭೇದಗಳ ವಿಮರ್ಶೆಯೇನೂ ಅವಶ್ಯವಾಗುವದಿಲ್ಲ. ಆದ್ದರಿಂದ ಶ್ರೀರಾಮಭಕ್ತರಾದವರು ಶ್ರೀರಾಮೋತ್ಸವಕಾಲದಲ್ಲಿ ಒಂಭತ್ತು ದಿನಗಳಲ್ಲಿ ಸುಲಭವಾಗಿ ಆಯಾಸವಿಲ್ಲದೆ ಈ ರಾಮಾಯಣವನ್ನು ಪಾರಾಯಣಮಾಡಿ ಶ್ರೀರಾಮದೇವರ ಕೃಪಾಪಾತ್ರರಾಗಬಹುದು. ಇತಿಹಾಸಪುರಾಣಗಳ ಪಠನಕ್ಕೆ ಸ್ತ್ರೀ ಶೂದ್ರಾದಿ ಎಲ್ಲಾ ಮಾನವರಿಗೂ ಅಧಿಕಾರವಿರುವುದರಿಂದ ರಾಮಭಕ್ತಿಯುಳ್ಳ, ಯಾವ ಸಾಧಕರಾದರೂ ಈ ಗ್ರಂಥ-ಪಾರಾಯಣವನ್ನು ಮಾಡಿ ಶ್ರೀರಾಮಚಂದ್ರ ಭಗವಂತನ ಕೃಪಾಪಾತ್ರರಾಗಬಹುದು.

ಈ ಗ್ರಂಥದಲ್ಲಿ ಆಯಾ ಕಥಾಸಂದರ್ಭಕ್ಕೆ ಹೊಂದಿಕೊಂಡಂತೆ ಬಂದಿರುವ ಕೆಲವು ಸ್ತೋತ್ರಗಳು ಬಹಳ ಅರ್ಥಗರ್ಭಿತವಾಗಿದ್ದು ಶ್ರೀರಾಮಭಕ್ತಿ ಪ್ರಚೋದಕವಾಗಿವೆ. ಬಾಲಕರು, ಸ್ತ್ರೀಯರಾದಿಯಾಗಿ ಮಾನವರೆಲ್ಲರೂ ಈ ಸ್ತೋತ್ರಗಳನ್ನು ಶುಭ್ರವಾದ ಉಚ್ಚಾರಣೆಯೊಡನೆ ಕಂಠಪಾಠಮಾಡಿಕೊಂಡು ಸಂದರ್ಭವು ಒದಗಿದಾಗಲೆಲ್ಲಾ ಪಠಿಸಬಹುದಾಗಿದೆ. ಇದರಿಂದ ರಾಮಭಕ್ತಿಯ ಪ್ರಚಾರಕ್ಕೆ ಅವಕಾಶವಾಗುತ್ತದೆ. ಸಂಗೀತಶಾಸ್ತ್ರದ ತಿಳಿವಳಿಕೆಯುಳ್ಳವರು ರಾಗಪ್ರಧಾನವಾಗಿಯೂ ಈ ಶ್ಲೋಕಗಳನ್ನು ಹಾಡಬಹುದು. ಶೈವ-ವೈಷ್ಣವ ಎಂಬ ಮತಭೇದವಿಲ್ಲದೆ ಎಲ್ಲಾ ಭಕ್ತರೂ ಶ್ರೀರಾಮರೂಪದಿಂದ ಭಗವಂತನನ್ನು ಆರಾಧಿಸಿ ಕೃತಾರ್ಥರಾಗಲು **ಅಧ್ಯಾತ್ಮರಾಮಾಯಣ**ವು ಕಾಮಧೇನುವಿನಂತಿದ್ದು ಕಲಿಯುಗದಲ್ಲಿ ಭಕ್ತರಿಗೆ ಚಿಂತಾಮಣಿಯಾಗಿದೆ.

ಈ ಗ್ರಂಥದ ಪ್ರಕಟನೆಗೆ (ದ್ವಿತೀಯ ಮುದ್ರಣಕ್ಕೆ) ಧನಸಹಾಯಮಾಡಿರುವ ಭಕ್ತಮಹನೀಯರುಗಳ ಹೆಸರುಗಳನ್ನು ಮುಂದೆ ಕೊಡಲಾಗಿದೆ. ಗ್ರಂಥದ ಅಚ್ಚಿನ ಕರಡುಗಳನ್ನು ತಿದ್ದುವದು, ಸೂಕ್ತ ಸಲಹೆಗಳನ್ನು ಕೊಡುವದೇ ಮುತಾದ ವಿಷಯಗಳಲ್ಲಿ ಬೆಂಗಳೂರು ನಗರದಲ್ಲಿರುವ ಶ್ರೀಯುತರುಗಳಾದ (೧) ಹೆಚ್.ಎನ್. ರಂಗಸ್ವಾಮಿಗಳು (೨) ಸಿ.ಎ. ಸಂಜೀವಮೂರ್ತಿಗಳು (೩) ಡಿ. ಗಣಪತಿಶಾಸ್ತ್ರಿಗಳು (೪) ಹೊಳೆನರಸೀಪುರದಲ್ಲಿರುವ ಹೆಚ್.ಎಸ್. ಚಂದ್ರಶೇಖರಶಾಸ್ತ್ರಿಗಳು - ಈ ಮಹನೀಯರುಗಳು ಸಹಾಯ ಮಾಡಿರುತ್ತಾರೆ. ಈ ಎಲ್ಲಾ ಮಹನೀಯರುಗಳಿಗೂ ಶ್ರೀ ರಾಮಚಂದ್ರಭಗವಂತನು ಆಯುರಾರೋಗ್ಯಐಶ್ವರ್ಯಭಕ್ತಿವೈರಾಗ್ಯಾದಿಸಂಪತ್ ಪರಂಪರೆಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸಿದೆ.

ಹೊಳೆನರಸೀಪುರ.
ವಿಕ್ರಮ ಸಂವತ್ಸರ ಆಷಾಢ
ಬಹುಳ ತ್ರಯೋದಶಿ.
೨೯-೭-೨೦೦೦

ಇತಿ-
**ಪ್ರಕಾಶಕರು**

# ಪೀಠಿಕೆ

## ಅಧ್ಯಾತ್ಮರಾಮಾಯಣದ ಸ್ಥಾನ

ನಮ್ಮ ಭರತಖಂಡದಲ್ಲಿ ರಾಮಾಯಣ-ಮಹಾಭಾರತಗಳೆಂಬ ಇತಿಹಾಸಗಳಿಗೆ ಹೆಚ್ಚಿನ ಪೂಜ್ಯಸ್ಥಾನವಿದೆ. ರಾಮಾಯಣದ ಕಥೆಯು ತ್ರೇತಾಯುಗದಲ್ಲಿ ನಡೆದದ್ದು. ಈವರೆಗೂ ಜನರು ಆ ಮಹಾಕಥೆಯನ್ನು ಓದುವದು, ಪ್ರವಚನಮಾಡುವದು, ಹೊಸ ಹೊಸದಾಗಿ ಕಾವ್ಯರೂಪದಿಂದ ಗ್ರಂಥವಾಗಿ ರಚಿಸುವದು, ಪ್ರತಿವರ್ಷವೂ ಚೈತ್ರಮಾಸದಲ್ಲಿ ರಾಮೋತ್ಸವವನ್ನು ನಡೆಯಿಸಿ ಪಾರಾಯಣಮಾಡುವದು- ಇತ್ಯಾದಿ ವಿಧಾನಗಳಿಂದ ರಾಮಾಯಣದ ಪ್ರಚಾರವನ್ನು ಕೈಗೊಂಡೇ ಇರುವರು. ವಾಲ್ಮೀಕಿಮಹಾಮುನಿಗಳಿಂದ ಸಂಸ್ಕೃತಭಾಷೆಯಲ್ಲಿ ೨೪ ಸಾವಿರಶ್ಲೋಕಗಳ ರೂಪದಿಂದ ಆದಿಯಲ್ಲಿ ರಚಿತವಾದ ಶ್ರೀಮದ್ರಾಮಾಯಣವು ಆದಿಕಾವ್ಯವೆಂದು ಗೌರವಿಸಲ್ಪಟ್ಟಿದೆ. ಹೀಗೆಯೇ ಇನ್ನೂ ಎಷ್ಟೋ ರಾಮಾಯಣಗಳು ಆಯಾ ದೇಶಭಾಷೆಗಳಲ್ಲಿಯೂ, ಪಾಶ್ಚಾತ್ಯ ದೇಶಗಳಲ್ಲಿ ಆಯಾ ದೇಶದ ಭಾಷೆಗಳ ಪರಿವರ್ತನ ರೂಪವಾಗಿಯೂ ಅವತಾರಮಾಡಿದ್ದು , ಶ್ರೀರಾಮನ ಅವತಾರವು ತ್ರೇತಾಯುಗದಲ್ಲಿ ಒಮ್ಮೆ ಮಾತ್ರ ಆಗಿದ್ದರೆ ರಾಮಾಯಣದ ಅವತಾರವು ಮಾತ್ರ ಈಗಲೂ ಆಗುತ್ತಲೇ ಇರುವದೊಂದು ಆಶ್ಚರ್ಯಕರ ಸಂಗತಿಯಾಗಿರುತ್ತದೆ.

ಸಂಸ್ಕೃತಭಾಷೆಯಲ್ಲಾದರೊ, ವಾಲ್ಮೀಕಿರಾಮಾಯಣದಿಂದ ಈಚಿನ ಕಾಲಕ್ಕೆ ಮನೋಹರರಾಮಾಯಣ, ಆನಂದರಾಮಾಯಣ, ಅದ್ಭುತರಾಮಾಯಣ, ತತ್ತ್ವಸಂಗ್ರಹರಾಮಾಯಣ- ಎಂಬೀ ಹೆಸರುಗಳಿಂದ ಕೆಲವು ರಾಮಾಯಣಗಳು ರಚಿತವಾಗಿವೆಯಾದರೂ ಅಷ್ಟಾಗಿ ಜನರಲ್ಲಿ ಪ್ರಚಾರದಲ್ಲಿಲ್ಲ. ಈ ಎಲ್ಲಾ ರಾಮಾಯಣಗಳೂ ಬಹಳ ಮಟ್ಟಿಗೆ ಕಥಾಪ್ರಧಾನವಾಗಿಯೂ ಕಾವ್ಯಗುಣಪ್ರಧಾನವಾಗಿಯೂ ರಚಿಸಲ್ಪಟ್ಟಿವೆ. ಆದರೆ ಪಾರ್ವತೀಪರಮೇಶ್ವರರ ಸಂವಾದರೂಪವಾಗಿ ಸರಳವಾದ ಭಾಷೆಯಲ್ಲಿ ರಸವತ್ತಾದ ಪದ್ಯಜಾಲಗಳಿಂದಲೂ ಭಕ್ತಿಜ್ಞಾನವೈರಾಗ್ಯಾದಿಸಾಮಗ್ರಿಗಳಿಂದ ಕೂಡಿದ ಉಪದೇಶ, ಸ್ತೋತ್ರಭಾಗಗಳಿಂದಲೂ ಹೆಣೆಯಲ್ಪಟ್ಟು ಆಕಾರದಲ್ಲಿ ಚಿಕ್ಕದಾಗಿಯೂ ಕೀರ್ತಿಯಲ್ಲಿ ಹಿರಿದಾಗಿಯೂ ಇರುವ **ಅಧ್ಯಾತ್ಮರಾಮಾಯಣ**ವು ಈಗಿನ ಕಲಿಗಾಲದ ಜನರಿಗೆ ಕಾಮಧೇನುವಾಗಿರುತ್ತದೆ. ರಾಮೋತ್ಸವ ಸಂದರ್ಭದಲ್ಲಿ ಒಂಭತ್ತು ದಿನಗಳ ಕಾಲದಲ್ಲಿ ಶ್ರೀಮದ್ರಾಮಾಯಣವನ್ನು ನಿಯಮದಿಂದ ಪೂರ್ಣವಾಗಿ ಪಾರಾಯಣಮಾಡಿ ಮುಗಿಸುವಂಥ ಹಿರಿಯರು ವಿರಳರಾಗುತ್ತಿರುವ ಈಗಿನ ಕಾಲಕ್ಕೆ ಅಧ್ಯಾತ್ಮರಾಮಾಯಣವೊಂದೇ ನಮಗೆ ಶ್ರೀರಾಮನ ಅನುಗ್ರಹಸಂಪಾದನೆಗೆ ಗತಿಯಾಗಿ

ರುತ್ತದೆ. ಇಂಥ ಅಮೋಘಗ್ರಂಥವು ಯಾವಾಗ ಯಾರಿಂದ ರಚಿತವಾಯಿತೆಂಬುದಕ್ಕೆ ಆಧಾರಗಳೇನೂ ಈವರೆಗೆ ಸಿಕ್ಕಿದಂತಿಲ್ಲ. ಇದು ವಿಶ್ವಾಮಿತ್ರರು ಹೇಳಿದ್ದೆಂದು ಒಂದು ಅಭಿಪ್ರಾಯವಿದೆ. ಶ್ರೀ ಸಿ.ಎನ್. ರಾಘವಾಚಾರ್-ಎಂಬವರು ಇದನ್ನು ವೇದವ್ಯಾಸರೇ ರಚಿಸಿದರೆಂದು ಅವರೇ ಕನ್ನಡಕ್ಕೆ ಅನುವಾದಿಸಿರುವ ಅಧ್ಯಾತ್ಮರಾಮಾಯಣ (೧೯೭೨) ಎಂಬ ಗ್ರಂಥದ ಪೀಠಿಕೆಯಲ್ಲಿ ತಿಳಿಸಿದ್ದಾರೆ. ಅಧ್ಯಾತ್ಮರಾಮಾಯಣವು ಮಹಾರಾಷ್ಟ್ರ ದೇಶದಲ್ಲಿ ಹೆಚ್ಚು ಪ್ರಚಾರದಲ್ಲಿದೆಯೆಂದೂ ನಾಗಪುರದ ಶ್ರೀಮೊಹರೀರ್ ಎಂಬವರು ಐವತ್ತು ವರ್ಷಗಳಿಂದ ಈ ರಾಮಾಯಣವನ್ನು ಪಾರಾಯಣಮಾಡುತ್ತಿದ್ದು ಅದೇ ಗ್ರಂಥವನ್ನೇ ತಮಗೆ ಕೊಟ್ಟದ್ದರಿಂದ ಕನ್ನಡಾನುವಾದವನ್ನು ಬರೆದದ್ದಾಗಿಯೂ ಶ್ರೀರಾಘವಾಚಾರ್ಯರು ತಿಳಿಸಿದ್ದಾರೆ. ಈ ಗ್ರಂಥವು ಸುದರ್ಶನಂ ಅಂಡ್ ಕಂ., ಬೆಂಗಳೂರು- ಇವರಿಂದ ಪ್ರಕಾಶಿತವಾಗಿದೆ. ಹೀಗೆ ಅಧ್ಯಾತ್ಮರಾಮಾಯಣವು ಈಗಲೂ ರಾಮಾಯಣಪ್ರಪಂಚದಲ್ಲಿ ತನ್ನದೇ ಆದ ವಿಶಿಷ್ಟಸ್ಥಾನವನ್ನು ಉಳಿಸಿಕೊಂಡಿದೆ.

## ಈ ಗ್ರಂಥದ ರಚನೆಯ ಕಾಲ

ಈ ಗ್ರಂಥರಚನೆಯು ಯಾವಾಗ ಆಗಿದೆಯೆಂಬುದನ್ನು ಐತಿಹಾಸಿಕವಾಗಿ ಹೇಳುವದು ಕಷ್ಟವಾಗಿದೆ. ಆದರೆ ಇದರಲ್ಲಿ ಕಥಾಭಾಗಕ್ಕೆ ಸೇರಿದಂತೆಯೇ ಹೆಣೆದು ಕೊಂಡಿರುವ ಅಧ್ಯಾತ್ಮೋಪದೇಶಗಳ ಪ್ರಕ್ರಿಯೆಯನ್ನೂ ಶಬ್ದಪ್ರಯೋಗಗಳನ್ನೂ ವಿಚಾರ ಮಾಡಿದರೆ ಇದು ಶ್ರೀಶಂಕರಾಚಾರ್ಯರ ಕಾಲಕ್ಕಿಂತ ಈಚೆಗೆ ರಚಿತವಾಗಿರಬೇಕೆಂದು ತಿಳಿದುಬರುತ್ತದೆ. ಇದರಲ್ಲಿ ಅದ್ವೈತವೇದಾಂತದ ಪ್ರಕ್ರಿಯೆಯೇ ಪ್ರಧಾನವಾಗಿ ನಿರೂಪಿಸಲ್ಪಟ್ಟಿದೆ. ಅದ್ವೈತಾಚಾರ್ಯರಾದ ಶ್ರೀಶಂಕರರ ಕಾಲಕ್ಕೆ ಈ ಗ್ರಂಥವು ಇದ್ದಿದ್ದರೆ ಅವರು ತಮ್ಮ ಭಾಷ್ಯಗ್ರಂಥಗಳಲ್ಲಿ ಇದರಿಂದ ಒಂದೆರಡು ಪ್ರಮಾಣವಚನ ಗಳನ್ನಾದರೂ ಉದಾಹರಿಸಬೇಕಾಗಿತ್ತು. ಇದೇ ರೀತಿಯಲ್ಲಿ ಈಗ ಅದ್ವೈತಗ್ರಂಥಗಳೆನಿಸಿ ಪ್ರಚಾರದಲ್ಲಿರುವ ಯೋಗವಾಸಿಷ್ಠ, ಸೂತಸಂಹಿತೆ, ಶ್ರೀಮದ್ಭಾಗವತ- ಈ ಮಹಾಗ್ರಂಥಗಳಿಂದಲೂ ಆದಿಶಂಕರಾಚಾರ್ಯರು ಪ್ರಮಾಣವಚನಗಳನ್ನು ಆರಿಸಿ ಕೊಂಡಿಲ್ಲ. ಆದ್ದರಿಂದ ಅವರ ಕಾಲಕ್ಕೆ ಇಲ್ಲದಿದ್ದ ಈ ಗ್ರಂಥಗಳು ಈಚೆಗೆ ಕೆಲವೇ ಶತಮಾನಗಳ ಹಿಂದೆ ರಚಿತವಾಗಿರಬೇಕೆಂದು ಊಹಿಸಬೇಕಾಗಿದೆ. ಇವುಗಳಲ್ಲಿ ಪ್ರತಿಪಾದಿತವಾಗಿರುವ ವೇದಾಂತಪ್ರಕ್ರಿಯೆಗಳಿಗೆ ಪರಸ್ಪರಹೋಲಿಕೆಯೂ ಕಂಡು ಬರುತ್ತದೆ. ಇಂಥ ಅದ್ವೈತಪ್ರಕ್ರಿಯೆಗಳು ಶಂಕರಾಚಾರ್ಯರ ಅನಂತರ ಅದ್ವೈತ ಪರಂಪರೆಯಲ್ಲಿ ಬಂದ ವ್ಯಾಖ್ಯಾನಕಾರರುಗಳ ಗ್ರಂಥಗಳಲ್ಲಿಯೂ ಕಂಡುಬರುತ್ತವೆ. ಆದ್ದರಿಂದ ಇಲ್ಲಿ ಪ್ರತಿಪಾದಿತವಾಗಿರುವ ವೇದಾಂತಪ್ರಕ್ರಿಯೆಯನ್ನು ಸ್ವಲ್ಪವಾದರೂ ವಿಚಾರಮಾಡುವದು ಒಳ್ಳೆಯದು.

## ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವೇದಾಂತಪ್ರಕ್ರಿಯೆ

೧) ಪ್ರಾರಂಭದ ಅಧ್ಯಾಯಕ್ಕೆ **ಶ್ರೀರಾಮಹೃದಯ**ವೆಂಬ ಹೆಸರಿದೆ. ಅದರಲ್ಲಿ

ಹನುಮಂತನಿಗೆ ಶ್ರೀರಾಮನೂ ಸೀತಾದೇವಿಯೂ ಮಾಡಿದ ತತ್ತ್ವೋಪದೇಶವಿದೆ. ಅಲ್ಲಿ ಶ್ರೀರಾಮನು ಉಪದೇಶಿಸುವಾಗ ಪ್ರತಿಬಿಂಬ, ಆಕಾಶ, ಅವಚ್ಛಿನ್ನ, ಬುದ್ಧ್ಯವಚ್ಛಿನ್ನಚೈತನ್ಯ (ಪು ೧೨, ೧೩) ಮುಂತಾಗಿರುವ ಶಬ್ದಪ್ರಯೋಗಗಳಿವೆ. ಆಕಾಶದೃಷ್ಟಾಂತವು ಶಂಕರಭಾಷ್ಯದಲ್ಲಿಯೂ ಕಂಡುಬರುತ್ತದೆಯಾದರೂ ಅದನ್ನು ಮೂರಾಗಿ ವಿಂಗಡಿಸಿ ಮಹಾಕಾಶ, ಜಲಾಶಯಾಕಾಶ, ಪ್ರತಿಬಿಂಬಾಕಾಶ-ಎಂದು ವಿವರಿಸಿ, ಅದರಂತೆಯೇ ಪೂರ್ಣಚೈತನ್ಯ, ಬುದ್ಧ್ಯವಚ್ಛಿನ್ನಚೈತನ್ಯ, ಆಭಾಸಚೈತನ್ಯ - ಎಂದು ಪರಬ್ರಹ್ಮವನ್ನೂ ವರ್ಣಿಸಿ ಪೂರ್ಣಚೈತನ್ಯವೇ ಸಾಕ್ಷಿಯು ; ಇದರಲ್ಲಿ ಅಜ್ಞಾನಿಗಳು ಬುದ್ಧಿಯನ್ನಾರೋಪಿಸಿ ಆ ಮೂಲಕ ಜೀವಭೇದವನ್ನು ಕಾಣುತ್ತಾರೆ. ಯಾವಾಗ **ತತ್ತ್ವಮಸಿ** ಮುಂತಾದ ವಾಕ್ಯಗಳಿಂದ ಬುದ್ಧ್ಯವಚ್ಛಿನ್ನಚೈತನ್ಯಕ್ಕೂ ಪೂರ್ಣ ಚೈತನ್ಯಕ್ಕೂ ಏಕತ್ವವನ್ನು ಕಂಡುಕೊಳ್ಳುವರೋ ಆಗ ಅವಿದ್ಯೆಯು ನಾಶವಾಗಿ ಐಕ್ಯಜ್ಞಾನವುಂಟಾಗುವದು-ಎಂಬ ಹೊಸರೀತಿಯ ಉಪದೇಶವು ಶಂಕರಭಾಷ್ಯದಲ್ಲಿ ಕಂಡುಬರುವದಿಲ್ಲ. ಜೀವಾತ್ಮಪರಮಾತ್ಮರುಗಳಿಗೆ ಐಕ್ಯಜ್ಞಾನವು ಮಹಾವಾಕ್ಯದಿಂದ ಉಂಟಾಗುವದು (ಪು. ೧೩) ಎಂಬ ಉಪದೇಶವೂ ಇಲ್ಲಿ ಕಂಡುಬರುತ್ತದೆ.

೨) ಈ ಗ್ರಂಥದ ಅರಣ್ಯಕಾಂಡದಲ್ಲಿ ಶ್ರೀರಾಮನು ಲಕ್ಷ್ಮಣನಿಗೆ ಮಾಡಿದ ಉಪದೇಶಭಾಗದಲ್ಲಿ (ಪು. ೨೧೬) **ವಿಕ್ಷೇಪ, ಆವರಣ**ಗಳೆಂಬ ಎರಡು ಮಾಯೆಯ ರೂಪಗಳನ್ನೂ ಅವುಗಳ ಕಾರ್ಯವನ್ನೂ ಉಲ್ಲೇಖಿಸಿದೆ. ಮುಂದುವರೆದು ಹಗ್ಗದಲ್ಲಿ ಹಾವಿನಂತೆ ಜಗತ್ತು ಭ್ರಾಂತಿಯಿಂದ ಪರಮಾತ್ಮನಲ್ಲಿ ಕಲ್ಪಿತವಾಗಿದೆ - ಎಂಬ ಶುದ್ಧಶಾಂಕರಪ್ರಕ್ರಿಯೋಪದೇಶವೂ ಇದೆ. ಇನ್ನೂ ಮುಂದುವರೆದು (ಪು.೨೧೯) ಹೇಳುವಲ್ಲಿ ೩೯ನೆಯ ಪದ್ಯದಲ್ಲಿ ಶಂಕರಭಾಷ್ಯಗಳಲ್ಲಿ ಎಲ್ಲಿಯೂ ಪ್ರಯೋಗಿಸದೆ ಇರುವ **ಮೂಲಾವಿದ್ಯಾ** ಎಂಬ ಪದಪ್ರಯೋಗವೂ ಕಂಡುಬರುತ್ತದೆ. ಈ ಕಾರಣಗಳಿಂದ ಈ ಗ್ರಂಥಕಾರರ ಪ್ರಕ್ರಿಯೆಯನ್ನು ಶಂಕರಭಾಷ್ಯಪ್ರಕ್ರಿಯೆಯೊಡನೆ ಹೋಲಿಸಿ ನೋಡಿ ಕೊಂಡೇ ಭಾಷ್ಯೋಪದೇಶಗಳಿಗೆ ವಿರೋಧವಿಲ್ಲದಂತೆ ವಿಚಾರಸರಣಿಯನ್ನು ಸ್ವೀಕರಿಸಬೇಕು.

೩) ಇದೇ ಗ್ರಂಥದ ಅರಣ್ಯಕಾಂಡದಲ್ಲಿ ಅಗಸ್ತ್ಯರು ರಾಮನನ್ನು ಸ್ವಾಗತಿಸಿ ಮಾತನಾಡುವಾಗ (ಪು. ೨೧೯ರಲ್ಲಿ) ''ಜಾಗ್ರತ್ - ಸ್ವಪ್ನ-ಸುಷುಪ್ತ್ಯಾಖ್ಯಾ ವೃತ್ತಯೋ ಬುದ್ಧಿಜೈರ್ಗುಣೈಃ'' ಎಂಬ ಮಾತಿದೆ. ವೃತ್ತಿ ಎಂಬುದು ಅಂತಃಕರಣದ ವಿಕಾರವು. ಸುಷುಪ್ತಿಯೆಂಬ ಅವಸ್ಥೆಯಲ್ಲಿ ಅಂತಃಕರಣವೇ ಇರುವದಿಲ್ಲವಾದ್ದರಿಂದ ಆ ಅವಸ್ಥೆಯು ಅಂತಃಕರಣವೃತ್ತಿಯೆಂದು ಹೇಗಾಯಿತು ? ಎಂಬಿದು ವಿಚಾರಣೀಯವಾಗಿದೆ. ಸುಷುಪ್ತಿಯನ್ನಾಗಲಿ, ಜಾಗ್ರತ್‌ಸ್ವಪ್ನಗಳನ್ನಾಗಲಿ, ಬುದ್ಧಿವೃತ್ತಿಗಳೆಂದು, ಶಾಂಕರ ಭಾಷ್ಯದಲ್ಲಿ ಎಲ್ಲಿಯೂ ಬರೆದಿಲ್ಲ. ಇವುಗಳನ್ನು ಅವಸ್ಥೆಗಳು - ಎಂದರೆ ಪರಮಾರ್ಥವು

ತೋರಿಕೊಳ್ಳುವ ಬಗೆಗಳೆಂದೂ ಆಯಾ ಅವಸ್ಥಾಂತರ್ಗತವಾಗಿ ಆಯಾ ಕಾಲಕ್ಕೆ ಮಾತ್ರ ಕಂಡುಬರುವ ಬುದ್ಧ್ಯಾದಿಗಳು ಆಯಾ ಅವಸ್ಥೆಯನ್ನು ಮೀರುವ ಸಂಭವವಿಲ್ಲವೆಂದೂ ಆತ್ಮನು ತಾನು ಮಾತ್ರ ಮೂರವಸ್ಥೆಗಳಿಗೂ ಸಾಕ್ಷಿಯಾಗಿದ್ದು ಯಾವದಕ್ಕೂ ಅಂಟಿಕೊಳ್ಳದೆ ಎರಡೂ ಅವಸ್ಥೆಗಳಲ್ಲಿಯೂ ತೋರುವ ಬುದ್ಧಿವೃತ್ತಿಗಳನ್ನೂ ದ್ವೈತವನ್ನೂ ದ್ವೈತಾಭಾಸವನ್ನೂ ಸುಷುಪ್ತಿಯಲ್ಲಿ ದ್ವೈತಾಭಾವವನ್ನೂ ಬೆಳಗುವವನೆಂದೂ ಅನುಭವದಿಂದ ಶಾಂಕರವೇದಾಂತದಲ್ಲಿ ತೋರಿಸಿಕೊಡಲಾಗಿದೆ. ಜಿಜ್ಞಾಸುಗಳು ಈ ಅನುಭವವೇದಾಂತದಿಂದ ಚಲಿತರಾಗಬಾರದು. ಹಾಗೆಯೇ ಅಯೋಧ್ಯಾಕಾಂಡದಲ್ಲಿ ನಾರದರ ವಾಕ್ಯದಲ್ಲಿ (ಪು. ೭೮) "ತಸ್ಮಾತ್ ಜ್ಞಾನಂ ಸದಾಽಭ್ಯಸೇತ್" ಎಂಬ ಮಾತಿದೆ. ಜ್ಞಾನಾಭ್ಯಾಸವೆಂಬುದೂ ಭಾಷ್ಯಪ್ರಕ್ರಿಯೆಗೆ ವಿರುದ್ಧವಾದುದು. ಆದರೆ ಅಭ್ಯಾಸವೆಂಬುದು ಜ್ಞಾನವುಂಟಾಗುವ ಮುಂಚೆ ಎಷ್ಟು ಬಾರಿಯಾದರೂ ಆಗಬಹುದು. ಜ್ಞಾನವಾದಮೇಲೆ ಮತ್ತೆ ಪ್ರಸಂಖ್ಯಾನವಿಲ್ಲ. ಈ ವಿಷಯದಲ್ಲಿಯೂ ಜಿಜ್ಞಾಸುಗಳು ಭಾಷ್ಯಕಾರ ಶ್ರೀಶಂಕರರ ಅಭಿಪ್ರಾಯಗಳನ್ನೇ ಅನುಸರಿಸಬೇಕು.

೪) ಇನ್ನು ಶಬರಿಯ ಕಥಾವೃತ್ತಾಂತಸಂದರ್ಭದಲ್ಲಿ ಪ್ರತಿಪಾದಿಸಿರುವ (ಪು.೨೭೪) ನವವಿಧಭಕ್ತಿಗಳ ವಿಚಾರ, ಸಂಪಾತಿವೃತ್ತಾಂತದ ಸಮಯದಲ್ಲಿ (ಪು.೩೫೬) ವರ್ಣಿಸಿರುವ ದೇಹೋತ್ಪತ್ತಿವಿಚಾರ - ಮುಂತಾದವುಗಳು ಭಕ್ತಿ ವೈರಾಗ್ಯಗಳನ್ನು ಬೆಳೆಯಿಸಿಕೊಳ್ಳಲು ಸಹಾಯಕವಾಗಿದ್ದು ಸಿದ್ಧಾಂತಕ್ಕೇನೂ ಹಾನಿಯುಂಟುಮಾಡುವಂತಿಲ್ಲವಾದ್ದರಿಂದ ಗ್ರಾಹ್ಯವಾಗಿವೆ. ಹೀಗೆಯೇ ಲಕ್ಷ್ಮಣನಿಗೆ ರಾಮನು ಉಪದೇಶಿಸಿರುವ ಪೂಜಾವಿಧಾನ (ಪು.೩೧೫) ಶ್ರೀರಾಮನು ಅಲ್ಲಲ್ಲಿ ಸಮಯಾನುಸಾರ ತನ್ನ ತಾಯಿಗೆ, (ಪು.೧೧೩) ಕೈಕೇಯಿಗೆ (ಪು.೧೭೯) ಮಾಡಿರುವ ಉಪದೇಶಗಳೂ ಮನನೀಯವಾಗಿವೆ. ಈ ಎಲ್ಲಾ ಉಪದೇಶಗಳ ಸಾರವನ್ನೂ ಸಿದ್ಧಾಂತಕ್ಕೆ ಹೊಂದುಗಡೆ ಮಾಡಿಕೊಂಡು ಅಳವಡಿಸಿಕೊಂಡಲ್ಲಿ ಈ ಗ್ರಂಥದಿಂದ ಜಿಜ್ಞಾಸುಗಳಿಗೆ ಪರಮಲಾಭವಾಗುವದರಲ್ಲಿ ಸಂಶಯವಿಲ್ಲ.

## ಕಥಾನಿರೂಪಣೆಯ ಕ್ರಮ

ಅಧ್ಯಾತ್ಮರಾಮಾಯಣದಲ್ಲಿ ಕಥೆಯೂ ತತ್ತ್ವವಿಚಾರವೂ ಸಮಪ್ರಧಾನವಾಗಿವೆ. ಆದರೆ ವಾಲ್ಮೀಕಿರಾಮಾಯಣದಷ್ಟು ವಿಸ್ತಾರವಾದ ಕಥಾನಿರೂಪಣೆಯು ಇಲ್ಲಿ ಇರುವದಿಲ್ಲ. ಮತ್ತೆ ಕೆಲವು ಸ್ಥಳಗಳಲ್ಲಿ ಕಥೆಯ ಧಾಟಿಯು ವಾಲ್ಮೀಕಿರಾಮಾಯಣಕ್ಕಿಂತ ಭಿನ್ನವಾಗಿದೆ. ಈಗ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡುವೆನು.

೧) ಶ್ರೀರಾಮನ ಜನನಕಾಲಕ್ಕೆ ಅವನು ಚತುರ್ಭುಜನಾಗಿ ಶಂಖಚಕ್ರಗದಾಪದ್ಮವನಮಾಲೆಗಳಿಂದಲಂಕೃತನಾಗಿ ಕೌಸಲ್ಯೆಗೆ ದರ್ಶನವನ್ನಿತ್ತನು (ಪು.೨೪) ಎಂದು ವರ್ಣಿಸಿದೆ. ಈ ವಿವರಣೆಯು ಶ್ರೀಮದ್ಭಾಗವತದ ಶ್ರೀಕೃಷ್ಣಭಗವಂತನ ಜನ್ಮಸಂದರ್ಭವನ್ನು ಸಂಪೂರ್ಣವಾಗಿ ಹೋಲುತ್ತದೆ. ಕೌಸಲ್ಯಾದೇವಿಯು ರಾಮನನ್ನು ಸ್ತೋತ್ರ

ಮಾಡಿದ್ದು, ಭೂಭಾರಹರಣಾರ್ಥವಾಗಿ, ಅದರಲ್ಲಿಯೂ ರಾವಣವಧೆಗಾಗಿಯೇ ತಾನು ಅವತಾರಮಾಡಿರುವದಾಗಿ ಭಗವಂತನು ಹೇಳಿಕೊಂಡಿರುವದು - ಇವು ಶ್ರೀಮದ್ರಾಮಾಯಣದಲ್ಲಿ ಇಲ್ಲ.

೨)ಅಯೋಧ್ಯಾಕಾಂಡದಲ್ಲಿ ರಾಮನು ವನವಾಸಕ್ಕೆ ಹೊರಡುವ ಮುಂಚೆ ಸೀತೆಯನ್ನು ಸಂಧಿಸಿದಾಗ ಆಕೆಗೆ ತಾನು ಕಾಡಿಗೆ ಹೋಗಲು ಪಿತ್ರಾಜ್ಞೆಯಾಗಿರುವದನ್ನು ತಿಳಿಸಿ ವನವಾಸಕ್ಕೆ ರಾಜಪುತ್ರಿಯಾದ ಸೀತೆಯನ್ನು ಬರಬಾರದೆಂತ ಹೇಳುತ್ತಾನೆ. ಆಗ ಸೀತೆಯು ತಾನೂ ಬಂದೇಬರುವದಾಗಿ ಹೇಳುವ ಸಂದರ್ಭದಲ್ಲಿ ಒಂದು ಮಾತು ಹೀಗಿದೆ : 'ಆರ್ಯಪುತ್ರನೆ, ನಾನು ಬಹಳವಾಗಿ ರಾಮಾಯಣಕಥೆಗಳನ್ನು ಬ್ರಾಹ್ಮಣರಿಂದ ಕೇಳಿದ್ದೇನೆ. ಆದರೆ ಎಲ್ಲಿಯೂ ಸೀತೆಯನ್ನು ಬಿಟ್ಟು ರಾಮನು ಕಾಡಿಗೆ ಹೋದನೆಂತ ಕಂಡುಬಂದಿಲ್ಲ' (ಪು. ೧೧೮) ಎಂಬ ಉಕ್ತಿಯಿದೆ. ಇದು ಸಹ ಶ್ರೀಮದ್ರಾಮಾಯಣದಲ್ಲಿಲ್ಲ. ಈ ಮಾತು ಬಾಲಿಶವಾಗಿ ಕಂಡುಬರುತ್ತಿದೆ.

೩) ಅಯೋಧ್ಯಾಕಾಂಡದಲ್ಲಿ ಭರದ್ವಾಜಾಶ್ರಮದಿಂದ ವಾಲ್ಮೀಕಿಗಳ ಆಶ್ರಮಕ್ಕೆ ಶ್ರೀರಾಮನು ಬಂದ ಕಥೆಯೂ (ಪು. ೧೩೭) ವಾಲ್ಮೀಕಿಗಳು ತಮ್ಮ ಪೂರ್ವವೃತ್ತಾಂತವನ್ನೆಲ್ಲ ಹೇಳಿಕೊಂಡಿರುವ ವಿಚಾರವೂ ಶ್ರೀಮದ್ರಾಮಾಯಣದಲ್ಲಿಲ್ಲ.

೪) ಅರಣ್ಯಕಾಂಡದಲ್ಲಿ ರಾವಣನು ಶೂರ್ಪನಖಿಯ ಮೂಲಕ ರಾಮನ ವೃತ್ತಾಂತವನ್ನು ಕೇಳಿದ ಮೇಲೆ 'ರಾಮನು ಮನುಷ್ಯನಲ್ಲ; ಅವನಿಂದ ನಾನು ಹತನಾದರೆ ವೈಕುಂಠರಾಜ್ಯವನ್ನು ಆಳಬಲ್ಲೆನು. ಆತನು ಭಕ್ತಿಗೆ ಬೇಗ ಒಲಿಯುವದಿಲ್ಲ. ಆದ್ದರಿಂದ ವಿರೋಧಬುದ್ಧಿಯಿಂದಲೇ ಅವನನ್ನು ಎದುರಿಸಿ ಬಳಿಸಾರುವೆನು' (ಪು. ೨೩೧) ಎಂದು ಹೇಳಿಕೊಂಡಿರುವದು ನೂತನವಾಗಿದೆ. ಹಾಗೆಯೇ ಶ್ರೀರಾಮನೂ ಸೀತೆಗೆ ಹೀಗೆ ಹೇಳಿದ್ದಾನೆ. 'ರಾವಣನು ಸಂನ್ಯಾಸಿವೇಷದಿಂದ ಬರಲಿದ್ದಾನೆ. ನೀನು ನಿನ್ನ ನೆರಳಿನಂತೆ ಮಾಯಾಸೀತೆಯನ್ನು ನಿರ್ಮಿಸಿಟ್ಟು ಒಂದು ವರ್ಷಕಾಲ ಅಗ್ನಿಯಲ್ಲಿ ಬಚ್ಚಿಟ್ಟುಕೊಂಡಿರು; ರಾವಣನ ವಧೆಯಾದ ಮೇಲೆ ನನ್ನನ್ನು ಪಡೆಯುವೆಯಂತೆ' (ಪು ೨೩೯) ಎಂದು ತಿಳಿಸಿರುವದೂ ಶ್ರೀಮದ್ರಾಮಾಯಣದಲ್ಲಿಲ್ಲ.

೫) ಯುದ್ಧಕಾಂಡದಲ್ಲಿ ರಾವಣನು ಲಕ್ಷ್ಮಣನನ್ನು ಮೂರ್ಛೆಕೆಡವಿದ ಅನಂತರ ಅವನನ್ನು ಎಬ್ಬಿಸಲು ಔಷಧಿಗಳನ್ನು ತರುವದಕ್ಕಾಗಿ ಹನುಮಂತನು ಹೊರಡುತ್ತಾನೆ. ಆದೇ ಸಮಯದಲ್ಲಿ ಅವನಿಗೆ ವಿಘ್ನವುಂಟುಮಾಡುವಂತೆ ಕಾಲನೇಮಿಯೆಂಬುವನನ್ನು ರಾವಣನು ಪ್ರಚೋದಿಸುವದು, ಅವನು ಮುಂದೆ ಹನುಮಂತನಿಂದ ಹತನಾಗುವದು - (ಪು. ೪೮೧ ರಿಂದ ೪೯೦) ಈ ಭಾಗವೂ ಶ್ರೀಮದ್ರಾಮಾಯಣದಲ್ಲಿಲ್ಲ. ಹಾಗೆಯೇ ರಾವಣನು ಇಂದ್ರಜಿತ್ತಿನ ವಧೆಯಾದ ಅನಂತರ ರಾಮನನ್ನು ಗೆಲ್ಲುವದಕ್ಕಾಗಿ ಶುಕ್ರಾಚಾರ್ಯರ ಅಪ್ಪಣೆಯಂತೆ ನಿಕುಂಭಿಳೆಯಲ್ಲಿ ಆಭಿಚಾರಿಕಹೋಮವನ್ನು ಮಾಡುವ

ವಿಚಾರವೂ (ಪು. ೫೧೮ ರಿಂದ ೫೨೨) ಶ್ರೀಮದ್ರಾಮಾಯಣದಲ್ಲಿಲ್ಲ. ಅಲ್ಲಿ ಇಂದ್ರಜಿತ್ತು ಈ ಹೋಮವನ್ನು ಮಾಡಿದನೆಂದಿದೆ. ಕಡೆಯಲ್ಲಿ ರಾವಣವಧೆಯಾದ ಅನಂತರ ಅರಣ್ಯಕಾಂಡದಲ್ಲಿ ಪ್ರಸ್ತಾಪಿಸಿದ್ದ ವಿಷಯಕ್ಕೆ ತಕ್ಕಂತೆ ಮಾಯಾಸೀತೆಯನ್ನು ವಿಸರ್ಜಿಸಿ ನಿಜಸೀತೆಯನ್ನು ಪಡೆಯಲು ಅಗ್ನಿಪ್ರವೇಶದ ಸನ್ನಿವೇಶವನ್ನು ರಾಮನು ಕಲ್ಪಿಸಿದ್ದಾಗಿ ತಿಳಿಸಿದೆ. ಹೀಗೆ ಇನ್ನೂ ಕೆಲವು ಸಂದರ್ಭಗಳು ಶ್ರೀಮದ್ರಾಮಾಯಣಕಥೆಗಿಂತ ಭಿನ್ನವಾಗಿವೆ.

## ಶ್ರೀಮದ್ರಾಮಾಯಣದೊಡನೆ ಹೋಲಿಕೆ

ಈಗ ಶ್ರೀಮದ್ರಾಮಾಯಣಕಥಾಭಾಗಕ್ಕೂ ಅಧ್ಯಾತ್ಮರಾಮಾಯಣಕಥಾಭಾಗಕ್ಕೂ ಹೋಲಿಸೋಣ. ಶ್ರೀಮದ್ರಾಮಾಯಣಕಥೆಯ ನಿರೂಪಣೆಯ ಸ್ವಾರಸ್ಯವೂ ಬಿಗಿಯೂ ಇಲ್ಲಿ ಕಂಡುಬರುವದಿಲ್ಲ. ಹೇಗೆಂದರೆ : ಇಲ್ಲಿ ರಾಮನು ತಾನು ವಿಷ್ಣುವೇ-ಎಂದು ಮುಂತಾಗಿ ಮುಂಚೆಮುಂಚೆಯೇ ತನ್ನ ತತ್ತ್ವವನ್ನು ಪ್ರಕಟಿಸಿಕೊಂಡುಬಿಟ್ಟಿರುವದರಿಂದ ಓದುಗರಿಗೆ ''ಓಹೋ, ವಿಷ್ಣುವಾದ್ದರಿಂದಲೇ ಆತನಿಗೆ ಇಂಥ ನಿರತಿಶಯವಾದ ಕಾರ್ಯಗಳೆಲ್ಲವೂ ಸಾಧ್ಯವಾಯಿತು. ಕೇವಲ ಮಾನವರಾದ ನಮಗೆ ಇದೆಲ್ಲ ಹೇಗಾದೀತು ?'' ಎಂಬ ಧೋರಣೆಯು ಸಂಭವಿಸಿ ಧರ್ಮಾಚರಣೆಯ ವಿಷಯಕ್ಕೆ ಸಡಿಲತೆಯು ಉಂಟಾಗಿಬಿಡುವಂತಿದೆ. ಶ್ರೀಮದ್ರಾಮಾಯಣದಲ್ಲಿ ಯಾದರೊ, ರಾಮನ ವಿಷ್ಣುತ್ವವನ್ನು ಸಂಪೂರ್ಣವಾಗಿ ಬಚ್ಚಿಟ್ಟು ಕಥೆಯೆಲ್ಲವೂ ಪೂರೈಸಿದ ಮೇಲೆಯೇ ಅದನ್ನು ಪ್ರಕಟಗೊಳಿಸಿದ್ದಾರೆ. ಪ್ರಾರಂಭದಲ್ಲಿ 'ವಿಷ್ಣುವಿನಂತೆ' ಎಂದೇ (ಸಾಕ್ಷಾದ್ವಿಷ್ಣುರಿವ) ಪ್ರತಿಪಾದಿಸುತ್ತಾ ಮಾನುಷತ್ವವನ್ನು ಎತ್ತಿಹಿಡಿದು ಮನುಷ್ಯಮಾತ್ರದವನೂ ಸತ್ಯಧರ್ಮಗಳ ಪರಿಪಾಲನೆಯನ್ನು ಸಾಧಿಸುವದಕ್ಕೆ ಸಾಧ್ಯವೆಂದೂ ಸತ್ಯಧರ್ಮಗಳ ಬಲದಿಂದ ಜಗತ್ತನ್ನೇ ಗೆದ್ದು ವಶಪಡಿಸಿಕೊಳ್ಳಬಹುದೆಂದೂ ಅದಕ್ಕೆ ಶ್ರೀರಾಮನು ಆದರ್ಶನೆಂದೂ ತಿಳಿಸಲಾಗಿದೆ. ಕಟ್ಟಕಡೆಯಲ್ಲಿ 'ರಾಮನೆಂದರೆ ವಿಷ್ಣುವೇ' (ಸ ಹಿ ವಿಷ್ಣುಃ ಸನಾತನಃ) ಎಂದು ಉಪಸಂಹಾರಮಾಡಿದೆ. ಹೀಗೆ ಕಥಾಭಾಗದ ಸ್ವಾರಸ್ಯವನ್ನು ಕಾಪಾಡಿ ಧರ್ಮಾನುಷ್ಠಾನವಿಷಯದಲ್ಲಿ ಮಾನವನಿಗೆ ಆದರ್ಶವನ್ನು ನಿರ್ಮಿಸಿರುವದರಲ್ಲಿ ವಾಲ್ಮೀಕಿಗಳೇ ಅಗ್ರಗಣ್ಯರಾಗಿದ್ದಾರೆ. ಆದರೂ ಅಧ್ಯಾತ್ಮರಾಮಾಯಣವನ್ನು ಓದುವವರಿಗೂ ಶ್ರೀರಾಮನಲ್ಲಿ ಭಕ್ತಿಯೂ ನಿಷ್ಠೆಯೂ ಉಂಟಾಗುವದರಲ್ಲಿ ಯಾವ ಸಂಶಯವೂ ಇಲ್ಲ. ಒಟ್ಟಿನಲ್ಲಿ ಈವರೆಗಿನ ರಾಮಾಯಣ ರಚನೆಗಳಾಗಲಿ, ಮುಂದೆ ಯಾರಾದರೂ ಬರೆಯಬಹುದಾದ ರಾಮಾಯಣಗಳಾಗಲೀ ವಾಲ್ಮೀಕಿರಾಮಾಯಣಕ್ಕೆ ಸರಿಸಾಟಿಯಾಗುವ ಸಂಭವವೇ ಇಲ್ಲ - ಎಂದು ಧಾರಾಳವಾಗಿ ಹೇಳಬಹುದು. ಸೂರ್ಯನಿಗೆ ಪ್ರತಿಯಾಗಿ ಬೇರೊಬ್ಬ ಸೂರ್ಯನನ್ನು ನಿರ್ಮಿಸಲಾದೀತೆ?

## ಈ ಗ್ರಂಥದ ಹೆಚ್ಚುಗಾರಿಕೆ

ಹೀಗಿದ್ದರೂ ಅಧ್ಯಾತ್ಮರಾಮಾಯಣದ ವೈಶಿಷ್ಟ್ಯವೇನೆಂದರೆ : ಭಕ್ತಿಯಿಂದ ಸಂಸಾರವನ್ನು ದಾಟಿ ಮೋಕ್ಷವನ್ನು ಪಡೆಯುಬಹುದೆಂಬ ಉಪದೇಶವೇ ಆಗಿದೆ. ಭಕ್ತಿರಹಿತವಾದ ಶಾಸ್ತ್ರಜ್ಞಾನವು ಕತ್ತಲೆಯ ಗುಂಡಿಯೆಂದೂ ಅದರಲ್ಲಿ ಬಿದ್ದವರಿಗೆ ಕೋಟಿಜನ್ಮಗಳಾದರೂ ಮೋಕ್ಷವು ಸಿಗಲಾರದೆಂದೂ (ಪು. ೧೩) ಸ್ಪಷ್ಟೋಕ್ತಿಯಿದೆ. ಆದರೆ ಜ್ಞಾನಭಕ್ತಿಗಳೆರಡೂ ಒಂದೇ ನಾಣ್ಯದ ಎರಡೂ ಮುಖಗಳಿದ್ದಂತೆ - **ಭಕ್ತಿಯೇ ಜ್ಞಾನವು, ಜ್ಞಾನವೇ ಭಕ್ತಿಯು** ಎಂಬ ಭಗವದ್ಗೀತೆಯ ಮಾದರಿಯ ಉಪದೇಶವು ಇಲ್ಲಿ ಕಂಡುಬರುವದಿಲ್ಲ. ಆದ್ದರಿಂದ ಕರ್ತೃತಂತ್ರವಾದ ಶಾಸ್ತ್ರೋಕ್ತವಾದ ಉಪಾಸನೆಗಿಂತ ವಿಲಕ್ಷಣವಾದ ವಸ್ತುತಂತ್ರವಾದ ಜ್ಞಾನವು ಗ್ರಂಥಕಾರರಿಗೆ ವಿವಕ್ಷಿತವಾಗಿತ್ತೆ ? ಎಂಬುದು ತಿಳಿಯುವಂತಿಲ್ಲ. ಭಕ್ತಿಯೇ ಮುಕ್ತಿಯನ್ನುಂಟುಮಾಡುವದು - ಎಂದು (ಪು. ೨೭೪) ಉಲ್ಲೇಖವೂ ಇದೆ. ಇದು ಹೇಗೇ ಇರಲಿ, ಈ ರಾಮಾಯಣದಲ್ಲಿ ಅಲ್ಲಲ್ಲಿ ಬರುವ ಸ್ತೋತ್ರಭಾಗಗಳೆಲ್ಲವೂ ಭಕ್ತಿಪ್ರಧಾನವಾಗಿದ್ದು ದ್ರಾಕ್ಷಾಪಾಕಸಾಹಿತ್ಯಮಯವಾಗಿದ್ದು ಭಾವುಕರಿಗೆ ಅತ್ಯುತ್ತಮವಾದ ಪರಿಣಾಮವನ್ನುಂಟುಮಾಡಿ ಮಾನಸಿಕವಾಗಿ ಉನ್ನತಿಯನ್ನು ಸಾಧಿಸಿಕೊಡುತ್ತಿವೆ. ಹೀಗೆ ಭಕ್ತಿಶಾಸ್ತ್ರದ ಪ್ರತಿನಿಧಿಯಂತಿರುವ ಈ ಗ್ರಂಥವು ಭಕ್ತಿಮುಕ್ತಿಪ್ರದಾಯಕವಾಗಿದ್ದು ಪ್ರವಚನ, ಪಾರಾಯಣ, ಶ್ರವಣಾದಿಗಳಿಗೆ ತಕ್ಕ ಶ್ರೇಷ್ಠಮಟ್ಟದ ಕೃತಿಯಾಗಿ ಪರಿಗಣಿಸಲ್ಪಟ್ಟಿರುತ್ತದೆ. ಆದರೂ ಈಗಿನ ಕಾಲಕ್ಕೆ ಇದರ ಪ್ರಚಾರವು ಸಾಕಷ್ಟು ಆಗದಿರುವದು ಶೋಚನೀಯವೇ ಸರಿ. ಇದು ಹಿಂದೀಭಾಷೆಯಲ್ಲಿ ಅನುವಾದಿತವಾಗಿ ಗೀತಾ ಪ್ರೆಸ್, ಗೋರಖಪುರ -ಇವರಿಂದ ಪ್ರಕಟಿಸಲ್ಪಟ್ಟಿದೆ.

ಈ ನನ್ನ ಅಲ್ಪಸೇವೆಯಿಂದ ಭಗವಾನ್ ಶ್ರೀರಾಮಚಂದ್ರನು ಸಂತುಷ್ಟನಾಗಲೆಂದೂ ಕಾರ್ಯಾಲಯದವರು ಅಧ್ಯಾತ್ಮಪ್ರಚಾರಸೇವೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ಕೈಗೊಳ್ಳುವಂತೆ ಅನುಗ್ರಹಿಸಲೆಂದೂ ಪ್ರಾರ್ಥಿಸಿ ಈ ಪೀಠಿಕೆಯನ್ನು ಪೂರ್ಣಗೊಳಿಸುವೆನು

ಇತಿ-

ಹೊಳೆನರಸೀಪುರ, **ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ,**

ತಾ॥ 1.6.2000 ಅನುವಾದಕ

# ವಿಷಯಾನುಕ್ರಮಣಿಕೆ

# ಅಧ್ಯಾತ್ಮರಾಮಾಯಣ
## ಗ್ರಂಥ ಪ್ರಕಟನೆಗೆ ಧನಸಹಾಯವನ್ನು ನೀಡಿದ
## ಮಹನೀಯರುಗಳು

**ಶ್ರೀಯುತರುಗಳಾದ :**

| | | | |
|---|---|---|---|
| 1. | ಶ್ರೀಮತಿ ಮನೋಹರ ಯರೆಹಳ್ಳಿ (ಎಸ್. ರಾಜೀವ್, ದಾವಣಗೆರೆ, ಅವರ ಮೂಲಕ) | U.S.A. | ರೂ. 10,000 |
| 2. | ನ್ಯಾಷನಲ್ ಕೋ-ಆಪರೇಟೀವ್ ಬ್ಯಾಂಕ್ (ಲಿ) | ಬೆಂಗಳೂರು | ರೂ. 5000 |
| 3. | ಅರಸೀಕೆರೆ ತಾ॥ ಬ್ರಾಹ್ಮಣ ಮಂಡಳಿ (ರಿ) | ಅರಸೀಕೆರೆ | ರೂ. 2700 |
| 4. | ವಿಘ್ನೇಶ್ವರ ಸಾರ್ವಜನಿಕ ವಿಶ್ವಸ್ಥಮಂಡಳಿ, ಬಿ.ಟಿ.ಎಮ್. ಎರಡನೇ ಹಂತ, ಬೆಂ - 76 | ಬೆಂಗಳೂರು | ರೂ. 2652 |
| 5. | ಶ್ರೀಕಾಮಾಕ್ಷೀ ಶಾರದಾಂಬ ಟ್ರಸ್ಟ್ | ಹೆಬ್ಬೂರು | ರೂ. 2350 |
| 6. | ಬಿ. ವೆಂಕಟರಾಮಶರ್ಮಾ | ಮೈಸೂರು | ರೂ. 1500 |
| 7. | ಶ್ರೀಮತಿ ಲಲಿತಮ್ಮ - ನಾರಾಯಣಸ್ವಾಮಿ (ಚಿಕ್ಕಮಗಳೂರು ಕಾಫಿವರ್ಕ್ಸ್) | ಅರಸೀಕೆರೆ | ರೂ. 1001 |
| 8. | ಶ್ರೀಮತಿ ಎಸ್. ಗಾಯತ್ರಿ | ಬೆಂಗಳೂರು | ರೂ. 1001 |
| 9. | ಎಂ.ಆರ್. ಸೇತೂರಾಮ್ | ಬೆಂಗಳೂರು | ರೂ. 1000 |
| 10. | ಎಸ್. ರಾಮರಾವ್ | '' | ರೂ. 1000 |
| 11. | IRA SCHEPETIN-ATMACHAITANYA | U.S.A. | Rs. 1000 |
| 12. | ಎಮ್. ವಿ. ರಾಮಚಂದ್ರ | ಬೆಂಗಳೂರು | ರೂ. 1000 |
| 13. | ಎಮ್. ವಿ. ರಾಮಸ್ವಾಮಿ | '' | ರೂ. 1000 |
| 14. | ಎಂ.ಎಚ್. ಗೋಪಾಲ್ (ಮಾತಾಪಿತೃಗಳಾದ ಜಯಮ್ಮ ಮತ್ತು ಹಿರಿಯಣ್ಣಯ್ಯನವರ ಹೆಸರಿನಲ್ಲಿ) | '' | ರೂ. 1000 |
| 15. | ಬಿ.ಆರ್. ಸತ್ಯನಾರಾಯಣ (ಗಜಾನನ) | ಬೆಂಗಳೂರು | ರೂ. 752 |
| 16. | ಪಿ.ಆರ್.ಆರ್. ರಾವ್ | '' | ರೂ. 750 |
| 17. | ಕೆ.ಟಿ. ಅನಂತಸುಬ್ಬರಾವ್ | '' | ರೂ. 604 |
| 18. | ಕೆ. ಸತ್ಯನಾರಾಯಣ | ಬೆಂಗಳೂರು | ರೂ. 505 |

| | | | |
|---|---|---|---|
| 19. | ಆರ್.ಎನ್. ಸ್ವಾಮಿ | ,, | ರೂ. 501 |
| 20. | ಕೆ.ಎನ್. ವೆಂಕಟೇಶ ಮೂರ್ತಿ | ಅರಸೀಕೆರೆ | ರೂ. 501 |
| 21. | ಜಿ.ವಿ. ವೆಂಕಟರಾಮಯ್ಯ | ಅರಸೀಕೆರೆ | ರೂ. 501 |
| 22. | ಶ್ರೀಮತಿ ಸಾವಿತ್ರಮ್ಮ | ಬೆಂಗಳೂರು | ರೂ. 501 |
| 23. | ಶ್ರೀಮತಿ ಲಕ್ಷ್ಮೀ - ಶರ್ಮಾ | ,, | ರೂ. 500 |
| 24. | ಶ್ರೀಮತಿ ಪದ್ಮಾ-ದತ್ತಾತ್ರೇಯ ನಾಡಿಗೇರ | ಹಾವೇರಿ | ರೂ. 500 |
| 25. | ಹೆಚ್.ಶ್ರೀನಿವಾಸಮೂರ್ತಿ | ಬೆಂಗಳೂರು | ರೂ. 500 |
| 26. | ಕೆ.ಪಿ. ಲಕ್ಷ್ಮೀನಾರಾಯಣ | ಬೆಂಗಳೂರು | ರೂ. 500 |
| 27. | ಡಾ॥ ಎನ್. ಶ್ರೀರಾಮ್ | ಮೈಸೂರು | ರೂ. 500 |
| 28. | ಟಿ.ಎನ್. ಲಕ್ಷ್ಮೀನಾರಾಯಣ | ಬೆಂಗಳೂರು | ರೂ. 500 |
| 29. | ಶ್ರೀಮತಿ ಹೆಚ್.ಕೆ. ಪಾರ್ವತಮ್ಮ | ಹಾಸನ | ರೂ. 500 |
| 30. | ಜಿ.ಎ. ಸೂರ್ಯನಾರಾಯಣ | ಬೆಂಗಳೂರು | ರೂ. 500 |
| 31. | ಎ.ಎನ್. ಕಾಮತ್ (ತಂದೆ ಶೇಷಗಿರಿ ಪಿ. ಕಾಮತ್ - ತಾಯಿ ಸರಸ್ವತಿ ಎಸ್. ಕಾಮತ್‌ರವರ ಹೆಸರಿನಲ್ಲಿ) | ,, | ರೂ. 500 |
| 32. | ಎಸ್.ವಿ. ತಿಮ್ಮಪ್ಪ | ,, | ರೂ. 500 |
| 33. | ಜಿ.ವಿ. ಶ್ರೀನಿವಾಸಯ್ಯ | ,, | ರೂ. 500 |
| 34. | ನರಸಿಂಹಮೂರ್ತಿ | ,, | ರೂ. 500 |
| 35. | ಡಿ.ಕೆ. ಶ್ರೀನಿವಾಸ್ | ,, | ರೂ. 251 |
| 36. | ಡಾ॥ ಕೆ. ವೆಂಕಟರಾಮ್ | ,, | ರೂ. 251 |
| 37. | ಬಿ.ಟಿ.ಎಮ್. ಬ್ರಾಹ್ಮಣಸಭಾ | ,, | ರೂ. 251 |
| 38. | ಪಿ.ಆರ್. ನಂಜುಂಡಯ್ಯ | ಮಧುಗಿರಿ | ರೂ. 250 |
| 39. | ಶ್ರೀಮತಿ ಅನ್ನಪೂರ್ಣಮ್ಮ - ಸೀತಾರಾಮಯ್ಯ | ಹೊ.ನ. ಪುರ | ರೂ. 250 |
| 40. | ಶ್ರೀಮತಿ ಭಾಗ್ಯಲಕ್ಷ್ಮಿ | ಬೆಂಗಳೂರು | ರೂ. 250 |
| 41. | ಡಿ. ತಿಮ್ಮಪ್ಪ | ದೇವೀಗೆರೆ | ರೂ. 250 |
| 42. | ಎಮ್.ಸಿ.ಆರ್. ಚೆಟ್ಟಿ | ಬೆಂಗಳೂರು | ರೂ. 250 |
| 43. | ಗುಡುತೂರು ಗೋಪಾಲಕೃಷ್ಣಶಕುಂತಲಮ್ಮ & ಶಾರದಮ್ಮ ಪಬ್ಲಿಕ್ ಛಾರಿಟಬಲ್ ಟ್ರಸ್ಟ್ | ಬಳ್ಳಾರಿ | ರೂ. 250 |
| | | ಒಟ್ಟು | ರೂ. 45,072 |

**ಮೇಲ್ಕಂಡ ದಾನಿಗಳಿಗೆಲ್ಲ ನಮ್ಮ ಕೃತಜ್ಞತಾ ಪೂರ್ವಕ ವಂದನೆಗಳು**

॥ಓಮ್॥

# ಅಧ್ಯಾತ್ಮರಾಮಾಯಣ

---0---

## ಬಾಲಕಾಂಡ

### ಒಂದನೆಯ ಸರ್ಗ

**ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ**
**ಸಂಜಾತಃ ಪೃಥಿವೀತಲೇ ರವಿಕುಲೇ ಮಾಯಾಮನುಷ್ಯೋಽವ್ಯಯಃ ।**
**ನಿಶ್ಚಕ್ರಂ ಹತರಾಕ್ಷಸಃ ಪುನರಗಾದ್ ಬ್ರಹ್ಮತ್ವಮಾದ್ಯಂ ಸ್ಥಿರಾಂ**
**ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀಶಂ ಭಜೇ ॥ ೧॥**

೧. ಭೂಮಿಯ ಭಾರವನ್ನು ಪರಿಹರಿಸಬೇಕೆಂದು ದೇವತೆಗಳು ಪ್ರಾರ್ಥಿಸಲಾಗಿ ಯಾವ ಚಿತ್ಸ್ವರೂಪನಾದ ಪರಮಾತ್ಮನು ತಾನು ಅವ್ಯಯನಾಗಿದ್ದರೂ ಮಾಯೆಯಿಂದ ಮನುಷ್ಯನಾಗಿ (ತೋರಿಕೊಂಡು), ಈ ಭೂಮಂಡಲದಲ್ಲಿ ಸೂರ್ಯ ವಂಶದಲ್ಲಿ ಅವತರಿಸಿ ಚಕ್ರಾಯುಧವಿಲ್ಲದೆಯೇ ರಾಕ್ಷಸರನ್ನು ಕೊಂದು ಲೋಕದ ಜನರ ಪಾಪಗಳನ್ನೆಲ್ಲ ಪರಿಹರಿಸುವಂಥ ಶಾಶ್ವತವಾದ ಕೀರ್ತಿಯನ್ನು ಇಲ್ಲಿಟ್ಟು ಮತ್ತೆ ಮೊದಲಿನ ತನ್ನ ಸ್ವರೂಪವನ್ನು ಹೊಂದಿದನೋ ಆ ಜಾನಕೀಶನನ್ನು ಭಜಿಸುತ್ತೇನೆ.

**ವಿಶ್ವೋದ್ಭವಸ್ಥಿತಿಲಯಾದಿಷು ಹೇತುಮೇಕಂ**
**ಮಾಯಾಶ್ರಯಂ ವಿಗತಮಾಯಮಚಿಂತ್ಯಮೂರ್ತಿಮ್ ।**
**ಆನಂದಸಾಂದ್ರಮಮಲಂ ನಿಜಬೋಧರೂಪಂ**
**ಸೀತಾಪತಿಂ ವಿದಿತತತ್ತ್ವಮಹಂ ನಮಾಮಿ ॥ ೨ ॥**

೨. ಪ್ರಪಂಚದ ಹುಟ್ಟು, ಇರುವಿಕೆ, ವಿನಾಶ - ಮುಂತಾದ ಎಲ್ಲಾ ಆಗುಹೋಗುಗಳಿಗೂ ತಾನೊಬ್ಬನೇ ಕಾರಣನಾಗಿಯೂ ಮಾಯೆಗೆ ಆಶ್ರಯನಾಗಿದ್ದರೂ (ತನ್ನಲ್ಲಿ) ಯಾವ ಮಾಯೆಯೂ ಇಲ್ಲದವನಾಗಿಯೂ ಇರುವ, (ಮನಸ್ಸಿನಿಂದ) ಚಿಂತಿಸಲು ಸಿಗದಿರುವ ಸ್ವರೂಪವುಳ್ಳ, ಆನಂದದ ಘಟ್ಟಿಯೂ ಪರಿಶುದ್ಧನೂ ನಿತ್ಯಜ್ಞಾನ

ಸ್ವರೂಪನೂ ಆಗಿರುವ, ತನ್ನ ತತ್ತ್ವವನ್ನು ನೇರಾಗಿ ಬಲ್ಲ, ಸೀತಾಪತಿಯಾದ (ಆತನನ್ನು) ನಾನು ನಮಸ್ಕರಿಸುವೆನು.

**ಪಠಂತಿ ಯೇ ನಿತ್ಯಮನನ್ಯಚೇತಸಃ**
**ಶೃಣ್ವನ್ತಿ ಚಾಧ್ಯಾತ್ಮಿಕಸಂಜ್ಞಿತಂ ಶುಭಮ್ ।**
**ರಾಮಾಯಣಂ ಸರ್ವಪುರಾಣಸಂಮತಂ**
**ನಿರ್ಧೂತಪಾಪಾ ಹರಿಮೇವ ಯಾನ್ತಿ ತೇ ॥ ೩ ॥**

೩. ಎಲ್ಲಾ ಪುರಾಣಗಳಿಗೂ ಒಪ್ಪಾಗಿರುವ 'ಅಧ್ಯಾತ್ಮಿಕ'ವೆಂಬ (ಹೆಸರಿನ) ಈ ಮಂಗಲಕರವಾದ ರಾಮಾಯಣವನ್ನು ಯಾರು ಇದರಲ್ಲಿಯೇ ಮನಸ್ಸನ್ನಿಟ್ಟು ಓದುವರೋ ಮತ್ತು ಕೇಳುವರೋ ಅವರು ಪಾಪಗಳನ್ನೆಲ್ಲ ತೊಳೆದುಕೊಂಡು ಶ್ರೀಹರಿಯನ್ನೇ ಸೇರುವರು.

**ಅಧ್ಯಾತ್ಮರಾಮಾಯಣಮೇವ ನಿತ್ಯಂ**
**ಪಠೇದ್ಯದೀಚ್ಛೇದ್ ಭವಬಂಧಮುಕ್ತಿಮ್ ।**
**ಗವಾಂ ಸಹಸ್ರಾಯುತಕೋಟಿದಾನಾದ್**
**ಫಲಂ ಲಭೇದ್ಯಃ ಶೃಣುಯಾತ್ ಸ ನಿತ್ಯಮ್ ॥ ೪ ॥**

೪. ಸಂಸಾರಬಂಧದಿಂದ ಬಿಡುಗಡೆಯಾಗಬೇಕೆಂದು ಇಚ್ಛೆಯಿದ್ದರೆ ಅಧ್ಯಾತ್ಮ ರಾಮಾಯಣವನ್ನೇ ನಿತ್ಯವೂ ಓದಬೇಕು. ನಿತ್ಯವೂ ಇದನ್ನು ಯಾವನು ಕೇಳುವನೋ ಅವನು ಒಂದು ಲಕ್ಷ ಕೋಟಿ ಸಂಖ್ಯೆಯ ಗೋವುಗಳನ್ನು ದಾನಮಾಡಿದ್ದಕ್ಕಿಂತಲೂ ಮೀರಿದ ಫಲವನ್ನು ಪಡೆದುಕೊಳ್ಳುವನು.

**ಪುರಾರಿಗಿರಿಸಂಭೂತಾ ಶ್ರೀರಾಮಾರ್ಣವಸಂಗತಾ ।**
**ಅಧ್ಯಾತ್ಮರಾಮಗಂಗೇಯಂ ಪುನಾತಿ ಭುವನತ್ರಯಮ್ ॥ ೫ ॥**

೫. ತ್ರಿಪುರಸಂಹಾರಿಯಾದ ಮಹಾದೇವನೆಂಬ ಬೆಟ್ಟದಲ್ಲಿ ಹುಟ್ಟಿ ಶ್ರೀರಾಮನೆಂಬ ಸಮುದ್ರವನ್ನು ಸೇರಿರುವ ಈ ಅಧ್ಯಾತ್ಮರಾಮಾಯಣವೆಂಬ ಗಂಗೆಯು ಮೂರು ಲೋಕಗಳನ್ನೂ ಪವಿತ್ರಗೊಳಿಸುವದು.

**ಕೈಲಾಸಾಗ್ರೇ ಕದಾಚಿದ್ರವಿಶತವಿಮಲೇ ಮಂದಿರೇ ರತ್ನಪೀಠೇ**
**ಸಂವಿಷ್ಟಂ ಧ್ಯಾನನಿಷ್ಠಂ ತ್ರಿಣಯನಮಭಯಂ ಸೇವಿತಂ ಸಿದ್ಧಸಂಘೈಃ ।**
**ದೇವೀ ವಾಮಾಂಕಸಂಸ್ಥಾ ಗಿರಿವರತನಯಾ ಪಾರ್ವತೀ ಭಕ್ತಿನಮ್ರಾ**
**ಪ್ರಾಹೇದಂ ದೇವಮೀಶಂ ಸಕಲಮಲಹರಂ ವಾಕ್ಯಮಾನಂದಕಂದಮ್ ॥ ೬ ॥**

೬. ಒಂದಾನೊಂದು ಕಾಲದಲ್ಲಿ ಕೈಲಾಸಪರ್ವತದ ಕೋಡುಗಲ್ಲಿನ ಮೇಲಿದ್ದ ನೂರು ಸೂರ್ಯರ ಪ್ರಕಾಶವುಳ್ಳ ಒಂದು ಮಂದಿರದಲ್ಲಿ ರತ್ನಮಯಪೀಠದಲ್ಲಿ ಕುಳಿತು ತಪಸ್ಸಿದ್ಧರಾದ ದೇವರ್ಷಿಬ್ರಹ್ಮರ್ಷಿಗಳ ತಂಡಗಳಿಂದ ಸೇವಿತನಾಗಿ ನಿರ್ಭೀತನಾಗಿ ಧ್ಯಾನಾಸಕ್ತನಾಗಿದ್ದ ಮುಕ್ಕಣ್ಣನಾದ (ಪರಮೇಶ್ವರ)ನನ್ನು ಕಂಡು ಎಡದ ತೊಡೆಯಮೇಲೆ ಕುಳಿತಿದ್ದ ಗಿರಿರಾಜನಾದ ಹಿಮವಂತನ ಮಗಳಾದ ಪಾರ್ವತೀದೇವಿಯು ಭಕ್ತಿಯಿಂದ ಬಾಗಿ ಸಮಸ್ತಪಾಪಗಳನ್ನೂ ಹೋಗಲಾಡಿಸುವವನಾಗಿಯೂ ಆನಂದಕ್ಕೆ ಕಾರಣ ನಾಗಿಯೂ ಇರುವ ದೇವನಾದ ಆ ಪರಮೇಶ್ವರನನ್ನು ಕುರಿತು ಈ ಮಾತನ್ನು ಕೇಳಿದಳು.

**ಪಾರ್ವತ್ಯುವಾಚ -**

**ನಮೋಽಸ್ತು ತೇ ದೇವ ಜಗನ್ನಿವಾಸ**
**ಸರ್ವಾತ್ಮದೃಕ್ ತ್ವಂ ಪರಮೇಶ್ವರೋಽಸಿ ।**
**ಪೃಚ್ಛಾಮಿ ತತ್ತ್ವಂ ಪುರುಷೋತ್ತಮಸ್ಯ**
**ಸನಾತನಂ ತ್ವಂ ಚ ಸನಾತನೋಽಸಿ ॥ ೭ ॥**

೭. ಪಾರ್ವತಿಯಿಂತೆಂದಳು : ಎಲೈ ಜಗತ್ತಿಗೆ ಆಶ್ರಯಭೂತನಾದ ದೇವನೆ, ನಿನಗೆ ನಮಸ್ಕಾರವಿರಲಿ ! ನೀನು ಸರ್ವರ ಅಂತಃಕರಣವನ್ನೂ ನೋಡುತ್ತಿರುವ ಪರಮೇಶ್ವರನಾಗಿದ್ದೀಯಲ್ಲವೆ ? ಪುರುಷೋತ್ತಮನಾದ ಮಹಾವಿಷ್ಣುವಿನ ಸನಾತನ ವಾದ ತತ್ತ್ವವನ್ನು ಕುರಿತು ನಿನ್ನನ್ನು ಒಂದು ಮಾತು ಕೇಳುತ್ತೇನೆ. ಏಕೆಂದರೆ ನೀನೂ ಸನಾತನ ಸ್ವರೂಪನಾಗಿದ್ದೀಯೆ.

**ಗೋಪ್ಯಂ ಯದತ್ಯನ್ತಮನನ್ಯವಾಚ್ಯಂ**
**ವದನ್ತಿ ಭಕ್ತೇಷು ಮಹಾನುಭಾವಾಃ ।**
**ತದಪ್ಯಹೋಽಹಂ ತವ ದೇವ ಭಕ್ತಾ**
**ಪ್ರಿಯೋಽಸಿ ಮೇ ತ್ವಂ ವದ ಯತ್ತು ಪೃಷ್ಟಮ್ ॥ ೮ ॥**

೮. ಯಾವದು ಮತ್ತೊಬ್ಬರಿಗೆ ಹೇಳತಕ್ಕದ್ದಲ್ಲವೋ ಅಂಥ ರಹಸ್ಯವನ್ನು ಕೂಡ ಮಹಾನುಭಾವರಾದವರು ತಮ್ಮಲ್ಲಿ ಭಕ್ತಿಯುಳ್ಳವರಿಗೆ ಹೇಳಿಬಿಡುತ್ತಾರಲ್ಲವೆ ? ಎಲೈ ದೇವನೆ, ನಾನು ನಿನ್ನ ಭಕ್ತಳು ; ನೀನು ನನ್ನ ಪ್ರಿಯನು. ಆದ್ದರಿಂದ ನಾನು ಕೇಳಿದ್ದನ್ನು ನೀನು ಹೇಳಬೇಕು.

**ಜ್ಞಾನಂ ಸವಿಜ್ಞಾನಮಥಾನುಭಕ್ತಿ -**
**ವೈರಾಗ್ಯಯುಕ್ತಂ ಚ ಮಿತಂ ವಿಭಾಸ್ವತ್ ।**

**ಜಾನಾಮ್ಯಹಂ ಯೋಷಿದಪಿ ತ್ವದುಕ್ತಂ**
**ಯಥಾ ತಥಾ ಬ್ರೂಹಿ ತರನ್ತಿ ಯೇನ ॥ ೯ ॥**

೯. ಯಾವ ಜ್ಞಾನದಿಂದ ಜನರು ಸಂಸಾರವನ್ನು ದಾಟುವರೋ, ಅನುಭವದಿಂದಲೂ ಭಕ್ತಿವೈರಾಗ್ಯಗಳಿಂದಲೂ ಕೂಡಿರುವ ಅಂಥ ಜ್ಞಾನವನ್ನು ನೀನು ಹೇಳಿದ್ದು ಹೆಂಗಸಾದರೂ ನನಗೆ ತಿಳಿಯುವ ಹಾಗೆ ಸಂಕ್ಷೇಪವಾಗಿ ಸ್ಪಷ್ಟವಾಗಿರುವಂತೆ ಹೇಳು.

**ಪೃಚ್ಛಾಮಿ ಚಾನ್ಯಚ್ಚ ಪರಂ ರಹಸ್ಯಂ**
**ತದೇವ ಚಾಗ್ರೇ ವದ ವಾರಿಜಾಕ್ಷ ।**
**ಶ್ರೀರಾಮಚಂದ್ರೇಽಖಿಲಲೋಕಸಾರೇ**
**ಭಕ್ತಿರ್ದೃಢಾ ನೌರ್ಭವತಿ ಪ್ರಸಿದ್ಧಾ ॥ ೧೦ ॥**

೧೦. ಎಲೈ ಕಮಲಾಕ್ಷನೆ, ಇನ್ನೂ ಒಂದು ಪರಮರಹಸ್ಯವನ್ನು ಕೇಳುತ್ತೇನೆ. ಅದನ್ನೇ ಮೊದಲು ಹೇಳು. ಸಮಸ್ತಲೋಕಗಳಿಗೂ ಸಾರನಾಗಿರುವ ಶ್ರೀರಾಮಚಂದ್ರನಲ್ಲಿರುವ ದೃಢವಾದ ಭಕ್ತಿಯು ಸಂಸಾರವನ್ನು ದಾಟುವದಕ್ಕೆ ಪ್ರಸಿದ್ಧವಾದ ನಾವೆಯಾಗಿರುತ್ತದೆ.

**ಭಕ್ತಿಃ ಪ್ರಸಿದ್ಧಾ ಭವಮೋಕ್ಷಣಾಯ**
**ನಾನ್ಯತ್ತತಃ ಸಾಧನಮಸ್ತಿ ಕಿಂಚಿತ್ ।**
**ತಥಾಪಿ ಹೃತ್ಸಂಶಯಬಂಧನಂ ಮೇ**
**ಬಿಭೇತ್ತುಮರ್ಹಸ್ಯಮಲೋಕ್ತಿಭಿಸ್ತ್ವಮ್ ॥ ೧೧ ॥**

೧೧. ಸಂಸಾರದಿಂದ ಬಿಡುಗಡೆಹೊಂದುವದಕ್ಕೆ ಭಕ್ತಿಯು ಪ್ರಸಿದ್ಧವಾದ ಸಾಧನವಾಗಿರುತ್ತದೆ. ಅದಕ್ಕಿಂತ ಹೆಚ್ಚಿನ ಸಾಧನವು ಯಾವದೂ ಇರುವದಿಲ್ಲ. ಹಾಗಿದ್ದರೂ ನನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂಶಯದ ಗಂಟನ್ನು ನಿರ್ಮಲವಾದ ವಚನಗಳಿಂದ ನೀನು ಬಿಚ್ಚಬೇಕಾಗಿದೆ.

**ವದನ್ತಿ ರಾಮಂ ಪರಮೇಕಮಾದ್ಯಂ**
**ನಿರಸ್ತಮಾಯಾಗುಣಸಂಪ್ರವಾಹಮ್ ।**
**ಭಜನ್ತಿ ಚಾಹರ್ನಿಶಮಪ್ರಮತ್ತಾಃ**
**ಪರಂ ಪದಂ ಯಾನ್ತಿ ತಥೈವ ಸಿದ್ಧಾಃ ॥ ೧೨ ॥**

೧೨. ರಾಮನು ಪರಮನು, ಅದ್ವಿತೀಯನು, ಜಗತ್ತಿಗೆಲ್ಲ ಕಾರಣನು, ಮಾಯಾಗುಣಗಳ ಪ್ರವಾಹವೇ ತನ್ನಲ್ಲಿಲ್ಲದವನು - ಎಂದು ಹೇಳುತ್ತಾರೆ. ಮತ್ತು ಜ್ಞಾನಸಿದ್ಧರು

ಹಗಲೂ ಇರುಳೂ ಸಾವಧಾನವಾಗಿ ಆತನನ್ನು ಭಜನೆಮಾಡಿ ಪರಮಪದವಿಯನ್ನು ಹೊಂದುತ್ತಲೂ ಇರುತ್ತಾರೆ.

**ವದನ್ತಿ ಕೇಚಿತ್ ಪರಮೋಽಪಿ ರಾಮಃ**
**ಸ್ವಾವಿದ್ಯಯಾ ಸಂವೃತಮಾತ್ಮಸಂಜ್ಞಮ್ ।**
**ಜಾನಾತಿ ನಾತ್ಮಾನಮತಃ ಪರೇಣ**
**ಸಂಬೋಧಿತೋ ವೇದ ಪರಾತ್ಮತತ್ತ್ವಮ್** ॥ ೧೩ ॥

೧೩. ಶ್ರೀರಾಮನು ಪರಮಾತ್ಮನೇ ಆದರೂ ತನ್ನ ಅವಿದ್ಯೆಯಿಂದ ಆತ್ಮನ ಸ್ವರೂಪವು ಮುಚ್ಚಿರುವದರಿಂದ ಅದನ್ನು ಅರಿಯದೆ ಇರುವನೆಂದೂ ಆದ್ದರಿಂದಲೇ ಮತ್ತೊಬ್ಬರು ಬೋಧಿಸಿದ ಮೇಲೆ ಪರಮಾತ್ಮತತ್ತ್ವವನ್ನು ಅರಿತುಕೊಳ್ಳುವನೆಂದೂ ಕೆಲವರು ಹೇಳುತ್ತಾರೆ.

**ಯದಿ ಸ್ಮ ಜಾನಾತಿ ಕುತೋ ವಿಲಾಪಃ**
**ಸೀತಾಕೃತೇ ತೇನ ಕೃತಃ ಪರೇಣ ।**
**ಜಾನಾತಿ ನೈವಂ ಯದಿ ಕೇನ ಸೇವ್ಯಃ**
**ಸಮೋ ಹಿ ಸರ್ವೈರಪಿ ಜೀವಜಾತೈಃ** ॥ ೧೪ ॥

೧೪. ಅವನು ತತ್ತ್ವವನ್ನು ತಿಳಿದವನಾಗಿದ್ದರೆ ಪರಮಾತ್ಮನಾದ (ಅವನು) ಸೀತೆಗಾಗಿ ಅತ್ತದ್ದು ಏಕೆ ? ಈ ರೀತಿಯಲ್ಲಿ ತಾನು ಪರಮಾತ್ಮನೆಂಬುದನ್ನು ಅರಿಯದೆ ಇದ್ದರೆ ಆತನನ್ನು ಏತಕ್ಕೆ ಸೇವಿಸಬೇಕು ? ಆಗ ಸಮಸ್ತಜೀವರಾಶಿಗಳಿಗೆ ಅವನೂ ಸಮನಾಗುವನಲ್ಲ !

**ಅತ್ರೋತ್ತರಂ ಕಿಂ ವಿದಿತಂ ಭವದ್ಭಿಃ**
**ತದ್ಬ್ರೂತ ಮೇ ಸಂಶಯಭೇದಿ ವಾಕ್ಯಮ್** ॥ ೧೪ ೧/೨॥

೧೪ ೧/೨. ಈ ವಿಷಯದಲ್ಲಿ ನಿಮಗೆ ತಿಳಿದಿರುವ ಉತ್ತರವೇನು ? ನನ್ನ ಸಂಶಯವನ್ನು ಕಳೆಯುವಂಥ ಆ ವಾಕ್ಯವನ್ನು ತಿಳಿಸಿರಿ.

**ಶ್ರೀ ಮಹಾದೇವ ಉವಾಚ-**
**ಧನ್ಯಾಸಿ ಭಕ್ತಾಸಿ ಪರಾತ್ಮನಸ್ತ್ವಂ**
**ಯಜ್ಜ್ಞಾತುಮಿಚ್ಛಾ ತವ ರಾಮತತ್ತ್ವಮ್ ।**
**ಪುರಾ ನ ಕೇನಾಪ್ಯಭಿಚೋದಿತೋಽಹಂ**
**ವಕ್ತುಂ ರಹಸ್ಯಂ ಪರಮಂ ನಿಗೂಢಮ್** ॥ ೧೫ ॥

೧೫. ಶ್ರೀಮಹಾದೇವನು ಹೇಳಿದನೇನೆಂದರೆ : ಪಾರ್ವತಿಯೆ, ನಿನಗೆ ರಾಮ ತತ್ತ್ವವನ್ನು ತಿಳಿದುಕೊಳ್ಳಬೇಕೆಂದು ತವಕವುಂಟಾಗಿರುವದರಿಂದ ನೀನು ಧನ್ಯಳಾಗಿರುವೆ. ಪರಮಾತ್ಮನ ಭಕ್ತಳಾಗಿರುವೆ. ಬಹಳ ಗೋಪ್ಯವಾಗಿರುವ ಈ ರಹಸ್ಯವನ್ನು ಹೇಳಬೇಕೆಂದು ಇದಕ್ಕೆ ಮೊದಲು ಯಾರೂ ನನ್ನನ್ನು ಕೇಳಿದ್ದಿಲ್ಲ.

**ತ್ವಯಾದ್ಯ ಭಕ್ತ್ಯಾ ಪರಿನೋದಿತೋಽಹಂ**
**ವಕ್ಷ್ಯೇ ನಮಸ್ಕೃತ್ಯ ರಘೂತ್ತಮಂ ತೇ ।**
**ರಾಮಃ ಪರಾತ್ಮಾ ಪ್ರಕೃತೇರನಾದಿ -**
**ರಾನನ್ದ ಏಕಃ ಪುರುಷೋತ್ತಮೋ ಹಿ ॥ ೧೬ ॥**

೧೬. ನೀನು ಈ ದಿನ ನನ್ನನ್ನು ಭಕ್ತಿಯಿಂದ ಪ್ರೇರಿಸಿರುತ್ತೀಯೆ. ಆದ್ದರಿಂದ ರಘುಶ್ರೇಷ್ಠನಾದ ಶ್ರೀರಾಮನನ್ನು ನಮಸ್ಕರಿಸಿ ನಿನಗೆ ಆ ತತ್ತ್ವವನ್ನು ಹೇಳುವೆನು. ನಿಜವಾಗಿಯೂ ರಾಮನು ಪರಮಾತ್ಮನೇ. ಅವನು ಪ್ರಕೃತಿಗಿಂತಲೂ ಅನಾದಿಯಾಗಿರುವ ಆನಂದಸ್ವರೂಪನು ; ಪುರುಷೋತ್ತಮನು.

**ಸ್ವಮಾಯಯಾ ಕೃತ್ಸ್ನಮಿದಂ ಹಿ ಸೃಷ್ಟ್ವಾ**
**ನಭೋವದನ್ತರ್ಬಹಿರಾಸ್ಥಿತೋ ಯಃ ।**
**ಸರ್ವಾನ್ತರಸ್ಥೋಽಪಿ ನಿಗೂಢ ಆತ್ಮಾ**
**ಸ್ವಮಾಯಯಾ ಸೃಷ್ಟಮಿದಂ ವಿಚಷ್ಟೇ ॥ ೧೭ ॥**

೧೭. ಈತನು ತನ್ನ ಮಾಯೆಯಿಂದ ಇದೆಲ್ಲವನ್ನೂ ಸೃಷ್ಟಿಮಾಡಿ ಆಕಾಶದಂತೆ ಒಳಗೂ ಹೊರಗೂ ಇರುವವನಾಗಿದ್ದಾನೆ. ಮತ್ತು ಎಲ್ಲಕ್ಕೂ ಒಳಗಡೆ ಇದ್ದುಕೊಂಡು ಗೂಢನಾಗಿರುವ ಆತ್ಮನಾದರೂ ತನ್ನ ಮಾಯೆಯಿಂದ ಸೃಷ್ಟವಾಗಿರುವ ಈ ಜಗತ್ತನ್ನು ನೋಡುತ್ತಲೇ ಇರುತ್ತಾನೆ.

**ಜಗನ್ತಿ ನಿತ್ಯಂ ಪರಿತೋ ಭ್ರಮನ್ತಿ**
**ಯತ್ಸಂನಿಧೌ ಚುಂಬಕಲೋಹವದ್ಧಿ ।**
**ಏತನ್ನ ಜಾನನ್ತಿ ವಿಮೂಢಚಿತ್ತಾಃ**
**ಸ್ವಾವಿದ್ಯಯಾ ಸಂವೃತಮಾನಸಾ ಯೇ ॥ ೧೮ ॥**

೧೮. ಈತನ ಸಂನಿಧಿಯಲ್ಲಿದ್ದುಕೊಂಡು ಸೂಜಿಗಲ್ಲಿನ ಬಳಿಯಲ್ಲಿರುವ ಕಬ್ಬಿಣದ ಹಾಗೆ ಜಗತ್ತು (ಲೋಕ) ಗಳು ಯಾವಾಗಲೂ ಸುತ್ತಲೂ ಓಡಾಡುತ್ತಿರುವವು. ಯಾರ ಮನಸ್ಸನ್ನು ಅವರ ಅಜ್ಞಾನವು ಕವಿದುಕೊಂಡಿರುವದೋ ಅಂಥ ವಿವಿಧವಾಗಿ ಮೋಹಗೊಂಡ ಮನಸ್ಸಿನ ಜನರು ಈ ತತ್ತ್ವವನ್ನು ಅರಿಯದೆ ಇರುವರು.

**ಸ್ವಾಜ್ಞಾನಮಪ್ಯಾತ್ಮನಿ ಶುದ್ಧಬೋಧೇ**
**ಹ್ಯಾರೋಪಯನ್ತೀಹ ನಿರಸ್ತಮಾಯೇ ।**
**ಸಂಸಾರಮೇವಾನುಸರನ್ತಿ ತೇ ವೈ**
**ಪುತ್ರಾದಿಸಕ್ತಾಃ ಪುರುಕರ್ಮಯುಕ್ತಾಃ ॥ ೧೯ ॥**

೧೯. ಅವರು ತಮ್ಮ ಅಜ್ಞಾನವನ್ನು ಶುದ್ಧನಾಗಿಯೂ ಜ್ಞಾನಸ್ವರೂಪನಾಗಿಯೂ ಮಾಯಾರಹಿತನಾಗಿಯೂ ಇರುವ ಆ ಪರಮಾತ್ಮನಲ್ಲಿ ಆರೋಪಿಸುತ್ತಿರುವರು. ಅವರು ಮಕ್ಕಳುಮರಿ - ಮುಂತಾದದ್ದರಲ್ಲಿರುವ ಆಸಕ್ತಿಯಿಂದ ಅನೇಕವಿಧವಾದ ಕರ್ಮಗಳನ್ನು ಮಾಡುತ್ತಾ ಸಂಸಾರವನ್ನೇ ಹೊಂದುತ್ತಿರುವರು. ಇದು ಪ್ರಸಿದ್ಧವಾಗಿದೆ.

**ಜಾನನ್ತಿ ನೈನಂ ಹೃದಯೇ ಸ್ಥಿತಂ ವೈ**
**ಚಾಮೀಕರಂ ಕಂಠಗತಂ ಯಥಾಜ್ಞಾಃ ॥ ೨೦ ॥**

೨೦. ಮೂಢರು ತಮ್ಮ ಕೊರಳಿನಲ್ಲಿಯೇ ಇರುವ ಚಿನ್ನದ ಸರವನ್ನು ಅರಿಯದೆ ಇರುವಂತೆ ತಮ್ಮ ಹೃದಯದಲ್ಲಿಯೇ ಇರುವ ಈ ಶ್ರೀರಾಮನನ್ನು ಅರಿಯಲಾರದೆ ಇರುವರು.

**ಯಥಾಽಪ್ರಕಾಶೋ ನ ತು ವಿದ್ಯತೇ ರವೌ**
**ಜ್ಯೋತಿಃಸ್ವಭಾವೇ ಪರಮೇಶ್ವರೇ ತಥಾ ।**
**ವಿಶುದ್ಧವಿಜ್ಞಾನಘನೇ ರಘೂತ್ತಮೇಽ-**
**ವಿದ್ಯಾ ಕಥಂ ಸ್ಯಾತ್ ಪರತಃ ಪರಾತ್ಮನಿ ॥ ೨೧ ॥**

೨೧. ಸೂರ್ಯನಲ್ಲಿ ಹೇಗೆ ಕತ್ತಲೆಯಿರುವದಿಲ್ಲವೋ ಜ್ಯೋತಿಃಸ್ವರೂಪನಾದ ಪರಮೇಶ್ವರನಲ್ಲಿಯೂ ಹಾಗೆಯೇ ಅಜ್ಞಾನವಿರಲಾರದು. ಅತ್ಯಂತ ಪರಿಶುದ್ಧವಾದ ಚೈತನ್ಯದ ಗಟ್ಟಿಯಾಗಿರುವ ಪರಾತ್ಪರನಾದ ಈ ರಘುಶ್ರೇಷ್ಠನಲ್ಲಿ ಹೇಗೆತಾನೆ ಅಜ್ಞಾನವಿದ್ದೀತು ?

**ಯಥಾ ಹಿ ಚಾಕ್ಷ್ಣಾ ಭ್ರಮತಾ ಗೃಹಾದಿಕಂ**
**ವಿನಷ್ಟದೃಷ್ಟೇರ್ಭ್ರಮತೀವ ದೃಶ್ಯತೇ ।**
**ತಥೈವ ದೇಹೇನ್ದ್ರಿಯಕರ್ತುರಾತ್ಮನಃ**
**ಕೃತಂ ಪರೇಽಧ್ಯಸ್ಯ ಜನೋ ವಿಮುಹ್ಯತಿ ॥ ೨೨ ॥**

೨೨. ಕಣ್ಣಿನ ದೋಷದಿಂದ ದೃಷ್ಟಿಪಾಟವವನ್ನು ಕಳೆದುಕೊಂಡು (ಗಿರಗಟ್ಟೆಯಂತೆ) ಸುತ್ತುತ್ತಲಿರುವವನಿಗೆ ಮನೆ ಮುಂತಾದದ್ದೆಲ್ಲವೂ ತಿರುಗುತ್ತಿರುವಂತೆ

ಹೇಗೆ ಅನುಭವವಾಗುವದೋ ಅದರಂತೆಯೇ ಶರೀರೇಂದ್ರಿಯಗಳ ಒಡೆಯನಾದ ಜೀವನು ಮಾಡಿದ್ದನ್ನು ಪರಮಾತ್ಮನಲ್ಲಿ ಆರೋಪಿಸಿ ಜನರು ಭ್ರಾಂತಿಗೊಳ್ಳುತ್ತಿರುವರು.

**ನಾಹೋ ನ ರಾತ್ರಿಃ ಸವಿತುರ್ಯಥಾ ಭವೇತ್**
**ಪ್ರಕಾಶರೂಪಾವ್ಯಭಿಚಾರತಃ ಕ್ವಚಿತ್ ।**
**ಜ್ಞಾನಂ ತಥಾಜ್ಞಾನಮಿದಂ ದ್ವಯಂ ಹರೌ**
**ರಾಮೇ ಕಥಂ ಸ್ಥಾಸ್ಯತಿ ಶುದ್ಧಚಿದ್ಘನೇ ॥ ೨೩ ॥**

೨೩. ಸೂರ್ಯನಿಗೆ ಪ್ರಕಾಶಸ್ವರೂಪವು ಎಂದಿಗೂ ಬೇರ್ಪಡದೆ ಇರುವ ಕಾರಣದಿಂದ ಅವನಿಗೆ ಹಗಲಾಗಲಿ, ರಾತ್ರಿಯಾಗಲಿ, ಹೇಗೆ ಇರುವದಿಲ್ಲವೋ ಅದರಂತೆ, ಶುದ್ಧಚೈತನ್ಯದ ಗಟ್ಟಿಯೇ ಆಗಿರುವ ಶ್ರೀ ಹರಿಸ್ವರೂಪನಾದ ರಾಮನಲ್ಲಿ ಅಜ್ಞಾನ, ಜ್ಞಾನ- ಈ ಎರಡೂ ಹೇಗೆ ಇದ್ದೀತು ?

**ತಸ್ಮಾತ್ ಪರಾನನ್ದಮಯೇ ರಘೂತ್ತಮೇ**
**ವಿಜ್ಞಾನರೂಪೇ ಹಿ ನ ವಿದ್ಯತೇ ತಮಃ ।**
**ಅಜ್ಞಾನಸಾಕ್ಷಿಣ್ಯರವಿನ್ದಲೋಚನೇ**
**ಮಾಯಾಶ್ರಯತ್ವಾನ್ನ ಹಿ ಮೋಹಕಾರಣಮ್ ॥ ೨೪ ॥**

೨೪. ಆದಕಾರಣ ಪರಮಾನಂದಸ್ವರೂಪನಾಗಿಯೂ ಚೈತನ್ಯರೂಪನಾಗಿಯೂ ಅಜ್ಞಾನಕ್ಕೆ ಸಾಕ್ಷಿಯಾಗಿಯೂ ಇರುವ ಕಮಲನೇತ್ರನಾದ ಆ ರಘುಶ್ರೇಷ್ಠನಲ್ಲಿ ಮೋಹಕ್ಕೆ ಕಾರಣವಾದ ಅಜ್ಞಾನವು ಇರುವದೇ ಇಲ್ಲ. ಏಕೆಂದರೆ ಅವನು ಮಾಯೆಗೆ ಆಶ್ರಯನಾಗಿ ಇರುತ್ತಾನೆ.

**ಅತ್ರ ತೇ ಕಥಯಿಷ್ಯಾಮಿ ರಹಸ್ಯಮಪಿ ದುರ್ಲಭಮ್ ।**
**ಸೀತಾರಾಮಮರುತ್ಸೂನುಸಂವಾದಂ ಮೋಕ್ಷಸಾಧನಮ್ ॥ ೨೫ ॥**

೨೫. ಈ ವಿಷಯದಲ್ಲಿ ರಹಸ್ಯವಾಗಿಯೂ ದುರ್ಲಭವಾಗಿಯೂ ಇರುವ ಸೀತೆ, ರಾಮ, ಮಾರುತಿ - ಈ ಮೂವರ ಸಂವಾದವನ್ನು ನಿನಗೆ ಹೇಳುವೆನು. ಇದು ಮೋಕ್ಷಕ್ಕೆ ಸಾಧನವಾಗಿರುವದು.

**ಪುರಾ ರಾಮಾಯಣೇ ರಾಮೋ ರಾವಣಂ ದೇವಕಂಟಕಮ್ ।**
**ಹತ್ವಾ ರಣೇ ರಣಶ್ಲಾಘೀ ಸಪುತ್ರಬಲವಾಹನಮ್ ॥ ೨೬ ॥**
**ಸೀತಯಾ ಸಹ ಸುಗ್ರೀವಲಕ್ಷ್ಮಣಾಭ್ಯಾಂ ಸಮನ್ವಿತಃ ।**
**ಅಯೋಧ್ಯಾಮಗಮದ್ರಾಮೋ ಹನೂಮತ್ ಪ್ರಮುಖೈರ್ವೃತಃ ॥ ೨೭ ॥**

೨೬-೨೭. ಪೂರ್ವದಲ್ಲಿ ರಾಮಾವತಾರದ ಕಾಲಕ್ಕೆ ಯುದ್ಧದಲ್ಲಿ ಹೊಗಳಿಸಿಕೊಳ್ಳುವದಕ್ಕೆ ತಕ್ಕವನೆನಿಸಿದ್ದ ಶ್ರೀರಾಮನು ದೇವತೆಗಳಿಗೆ ಶತ್ರುವಾಗಿದ್ದ ರಾವಣನನ್ನು ಅವನ ಮಕ್ಕಳು, ಬಲ, ವಾಹನ - ಇವುಗಳೊಡನೆ ನಾಶಮಾಡಿ ಸೀತೆಯಿಂದಲೂ ಸುಗ್ರೀವಲಕ್ಷ್ಮಣರಿಂದಲೂ ಕೂಡಿಕೊಂಡು ಹನುಮಂತನೇ ಮುಂತಾದ ಪರಿವಾರದವರೊಡನೆ ಅಯೋಧ್ಯೆಗೆ ಬಂದನು.

**ಅಭಿಷಿಕ್ತಃ ಪರಿವೃತೋ ವಸಿಷ್ಠಾದ್ಯೈರ್ಮಹಾತ್ಮಭಿಃ ।**
**ಸಿಂಹಾಸನೇ ಸಮಾಸೀನಃ ಕೋಟಿಸೂರ್ಯಸಮಪ್ರಭಃ ॥ ೨೮ ॥**

೨೮. ಅಲ್ಲಿ ಅಭಿಷಿಕ್ತನಾಗಿ ಮಹಾತ್ಮರಾದ ವಸಿಷ್ಠರೇ ಮೊದಲಾದವರು ತನ್ನನ್ನು ಬಳಸಿರಲು ಕೋಟಿಸೂರ್ಯರಂತೆ ಹೊಳೆಯುತ್ತಾ ಸಿಂಹಾಸನದಲ್ಲಿ ಕುಳಿತಿದ್ದನು.

**ದೃಷ್ಟ್ವಾ ತದಾ ಹನೂಮಂತಂ ಪ್ರಾಂಜಲಿಂ ಪುರತಃ ಸ್ಥಿತಮ್ ।**
**ಕೃತಕಾರ್ಯಂ ನಿರಾಕಾಂಕ್ಷಂ ಜ್ಞಾನಾಪೇಕ್ಷಂ ಮಹಾಮತಿಮ್ ॥ ೨೯ ॥**
**ರಾಮಃ ಸೀತಾಮುವಾಚೇದಂ ಬ್ರೂಹಿ ತತ್ತ್ವಂ ಹನೂಮತೇ ।**
**ನಿಷ್ಕಲ್ಮಷೋಽಯಂ ಜ್ಞಾನಸ್ಯ ಪಾತ್ರಂ ನೌ ನಿತ್ಯಭಕ್ತಿಮಾನ್ ॥ ೩೦ ॥**

೨೯-೩೦. ಆಗ ಕೃತಕೃತ್ಯನಾಗಿ ಮತ್ತೊಂದರ ಬಯಕೆಯಿಲ್ಲದೆ ಜ್ಞಾನವೊಂದನ್ನೇ ಬಯಸಿ ಕೈಮುಗಿದುಕೊಂಡು ಮುಂದೆ ನಿಂತಿದ್ದ ಮಹಾಬುದ್ಧಿಶಾಲಿಯಾದ ಹನುಮಂತನನ್ನು ಕಂಡು ರಾಮನು ಸೀತೆಗೆ ಈ ಮಾತನ್ನು ಹೇಳಿದನು. ''ಹನುಮಂತನಿಗೆ ತತ್ತ್ವವನ್ನು ತಿಳಿಸು. ಇವನು ಪರಿಶುದ್ಧನು. ನಮ್ಮಿಬ್ಬರಲ್ಲಿ ಯಾವಾಗಲೂ ಭಕ್ತಿಯುಳ್ಳವನು. ಆದ್ದರಿಂದ ಜ್ಞಾನಕ್ಕೆ ತಕ್ಕವನು.''

**ತಥೇತಿ ಜಾನಕೀ ಪ್ರಾಹ ತತ್ತ್ವಂ ರಾಮಸ್ಯ ನಿಶ್ಚಿತಮ್ ।**
**ಹನೂಮತೇ ಪ್ರಪನ್ನಾಯ ಸೀತಾ ಲೋಕವಿಮೋಹಿನೀ ॥ ೩೧ ॥**

೩೧. ಲೋಕವನ್ನೇ ಮೋಹಗೊಳಿಸುವ ಮಾಯಾಸ್ವರೂಪಳಾದ ಆ ಜಾನಕಿಯು 'ಹಾಗೆಯೇ ಆಗಲಿ !' ಎಂದು ಶರಣಾಗತನಾದ ಹನುಮಂತನಿಗೆ ರಾಮನ ನಿಜ ವಾದ ತತ್ತ್ವವನ್ನು ಹೀಗೆಂದು ಹೇಳಿದಳು.

**ರಾಮಂ ವಿದ್ಧಿ ಪರಂ ಬ್ರಹ್ಮ ಸಚ್ಚಿದಾನನ್ದಮದ್ವಯಮ್ ।**
**ಸರ್ವೋಪಾಧಿವಿನಿರ್ಮುಕ್ತಂ ಸತ್ತಾಮಾತ್ರಮಗೋಚರಮ್ ॥ ೩೨ ॥**
**ಆನಂದಂ ನಿರ್ಮಲಂ ಶಾಂತಂ ನಿರ್ವಿಕಾರಂ ನಿರಂಜನಮ್ ।**
**ಸರ್ವವ್ಯಾಪಿನಮಾತ್ಮಾನಂ ಸ್ವಪ್ರಕಾಶಮಕಲ್ಮಷಮ್ ॥ ೩೩ ॥**

೩೨-೩೩. ಶ್ರೀರಾಮನು ಸಚ್ಚಿದಾನಂದರೂಪನಾಗಿಯೂ ಅದ್ವಿತೀಯನಾಗಿಯೂ ಯಾವ ಉಪಾಧಿಯೂ ಇಲ್ಲದವನಾಗಿಯೂ ಕೇವಲ ಸದ್ರೂಪನಾಗಿಯೂ ಮತ್ತೆ ಯಾವದಕ್ಕೂ ವಿಷಯನಲ್ಲದವನಾಗಿಯೂ ಶುದ್ಧಾನಂದರೂಪನಾಗಿಯೂ ಶಾಂತನಾಗಿಯೂ ಯಾವ ವಿಕಾರವೂ ಇಲ್ಲದೆ ಯಾವದೊಂದರ ಅಂಟೂ ಇಲ್ಲದವನಾಗಿಯೂ ಎಲ್ಲೆಲ್ಲಿಯೂ ವ್ಯಾಪಿಸಿರುವವನಾಗಿಯೂ ಸ್ವಯಂಪ್ರಕಾಶಸ್ವರೂಪನಾಗಿಯೂ ಯಾವ ದೋಷವೂ ಇಲ್ಲದವನಾಗಿಯೂ ಇರುವ ಪರಬ್ರಹ್ಮವೆಂದು ತಿಳಿ.

**ಮಾಂ ವಿದ್ಧಿ ಮೂಲಪ್ರಕೃತಿಂ ಸರ್ಗಸ್ಥಿತ್ಯನ್ತಕಾರಿಣೀಮ್ ।**
**ತಸ್ಯ ಸಂನಿಧಿಮಾತ್ರೇಣ ಸೃಜಾಮೀದಮತಂದ್ರಿತಾ ॥ ೩೪ ॥**

೩೪. ನಾನು ಸೃಷ್ಟಿಸ್ಥಿತಿಪ್ರಲಯಗಳನ್ನು ಮಾಡುವ ಮೂಲಪ್ರಕೃತಿಯೆಂದು ತಿಳಿ. ಆತನ ಸಮೀಪದಲ್ಲಿದ್ದಮಾತ್ರದಿಂದ ಆಲಸ್ಯವಿಲ್ಲದೆ ಈ ಜಗತ್ತನ್ನು ಸೃಷ್ಟಿಮಾಡುತ್ತಿರುವೆನು.

**ತತ್ಸಾಂನಿಧ್ಯಾತ್ ಮಯಾ ಸೃಷ್ಟಂ ತಸ್ಮಿನ್ನಾರೋಪ್ಯತೇಽಬುಧೈಃ ।**
**ಅಯೋಧ್ಯಾನಗರೇ ಜನ್ಮ ರಘುವಂಶೇಽತಿನಿರ್ಮಲೇ ॥ ೩೫ ॥**

೩೫. ಆತನ ಸಂನಿಧಿಯಲ್ಲಿ ನಾನು ಸೃಷ್ಟಿಮಾಡಿದ್ದನ್ನು ಮೂಢರು ಅವನಲ್ಲಿ ಆರೋಪಿಸುತ್ತಾರೆ. ಹೇಗೆಂದರೆ : ಅಯೋಧ್ಯಾನಗರದಲ್ಲಿ ಬಹುಶುದ್ಧವಾದ ರಘುವಂಶದಲ್ಲಿ ಹುಟ್ಟಿದ್ದು .......

**ವಿಶ್ವಾಮಿತ್ರಸಹಾಯತ್ವಂ ಮಖಸಂರಕ್ಷಣಂ ತತಃ ।**
**ಅಹಲ್ಯಾಶಾಪಶಮನಂ ಚಾಪಭಂಗೋ ಮಹೇಶಿತುಃ ॥ ೩೬ ॥**

೩೬. ಆಮೇಲೆ ವಿಶ್ವಾಮಿತ್ರನಿಗೆ ಸಹಾಯವಾಗಿ ಅವರ ಯಜ್ಞವನ್ನು ಕಾಪಾಡಿದ್ದು, ಅಹಲ್ಯೆಯ ಶಾಪವನ್ನು ಪರಿಹರಿಸಿದ್ದು, ಮಹೇಶ್ವರನ ಧನುಸ್ಸನ್ನು ಮುರಿದದ್ದು .....

**ಮತ್ಪಾಣಿಗ್ರಹಣಂ ಪಶ್ಚಾದ್ ಭಾರ್ಗವಸ್ಯ ಮದಕ್ಷಯಃ ।**
**ಅಯೋಧ್ಯಾನಗರೇ ವಾಸೋ ಮಯಾ ದ್ವಾದಶವಾರ್ಷಿಕಃ ॥ ೩೭ ॥**

೩೭. ನನ್ನನ್ನು ಮದುವೆಯಾದದ್ದು, ಆಮೇಲೆ ಭೃಗುಪುತ್ರನಾದ ಪರಶುರಾಮನ ಗರ್ವವನ್ನು ಹೋಗಲಾಡಿಸಿದ್ದು, ಅಯೋಧ್ಯಾನಗರದಲ್ಲಿ ನನ್ನೊಡನೆ ಹನ್ನೆರಡು ವರ್ಷಗಳು ಇದ್ದದ್ದು.....

**ದಂಡಕಾರಣ್ಯಗಮನಂ ವಿರಾಧ ವಧ ಏವ ಚ ।**
**ಮಾಯಾಮಾರೀಚಮರಣಂ ಮಾಯಾಸೀತಾಹೃತಿಸ್ತಥಾ ॥ ೩೮ ॥**

೩೮. ದಂಡಕಾರಣ್ಯಕ್ಕೆ ಹೋದದ್ದು, ವಿರಾಧನನ್ನು ಕೊಂದದ್ದು, ಮಾಯಾ (ಜಿಂಕೆಯ ರೂಪನಾದ) ಮಾರೀಚನ ಸಾವು, ಮಾಯಾಸೀತೆಯನ್ನು ರಾವಣನು ಅಪಹರಿಸಿದ್ದು.......

**ಜಟಾಯುಷೋ ಮೋಕ್ಷಲಾಭಃ ಕಬಂಧಸ್ಯ ತಥೈವ ಚ ।**
**ಶಬರ್ಯಾಃ ಪೂಜನಂ ಪಶ್ಚಾತ್ ಸುಗ್ರೀವೇಣ ಸಮಾಗಮಃ ॥ ೩೯ ॥**

೩೯. ಜಟಾಯುವಿಗೆ ಮೋಕ್ಷಪ್ರಾಪ್ತಿಯಾದದ್ದು, ಮತ್ತು ಕಬಂಧನಿಗೂ ಸದ್ಗತಿಯಾದದ್ದು, ಶಬರಿಯ ಸತ್ಕಾರಪೂಜಾದಿಗಳು, ಅನಂತರ ಸುಗ್ರೀವನೊಡನೆ ಕೂಡಿದ್ದು...

**ವಾಲಿನಶ್ಚ ವಧಃ ಪಶ್ಚಾತ್ ಸೀತಾನ್ವೇಷಣಮೇವ ಚ ।**
**ಸೇತುಬಂಧಶ್ಚ ಜಲಧೌ ಲಂಕಾಯಾಶ್ಚ ನಿರೋಧನಮ್ ॥ ೪೦ ॥**

೪೦. ಅನಂತರ ವಾಲಿಯನ್ನು ಕೊಂದದ್ದು, ಮತ್ತು ಸೀತಾದೇವಿಯನ್ನು ಹುಡುಕಿದ್ದು, ಸಮುದ್ರದಲ್ಲಿ ಸೇತುವೆಯನ್ನು ನಿರ್ಮಿಸಿದ್ದು, ಲಂಕೆಗೆ ಮುತ್ತಿಗೆ ಹಾಕಿದ್ದು.....

**ರಾವಣಸ್ಯ ವಧೋ ಯುದ್ಧೇ ಸಪುತ್ರಸ್ಯ ದುರಾತ್ಮನಃ ।**
**ವಿಭೀಷಣೇ ರಾಜ್ಯದಾನಂ ಪುಷ್ಪಕೇಣ ಮಯಾ ಸಹ ॥ ೪೧ ॥**

೪೧. ಯುದ್ಧದಲ್ಲಿ ದುರಾತ್ಮನಾದ ಪುತ್ರಸಹಿತನಾದ ರಾವಣನ ವಧೆ, ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಟ್ಟದ್ದು, ನನ್ನೊಡನೆ ಪುಷ್ಪಕವಿಮಾನದಲ್ಲಿ........

**ಅಯೋಧ್ಯಾಗಮನಂ ಪಶ್ಚಾದ್ ರಾಜ್ಯೇ ರಾಮಾಭಿಷೇಚನಮ್ ।**
**ಏವಮಾದೀನಿ ಕರ್ಮಾಣಿ ಮಯ್ಯೈವಾಚರಿತಾನ್ಯಪಿ ।**
**ಆರೋಪಯನ್ತಿ ರಾಮೇಽಸ್ಮಿನ್ ನಿರ್ವಿಕಾರೇಽಖಿಲಾತ್ಮನಿ ॥ ೪೨ ॥**

೪೨. ಅಯೋಧ್ಯೆಗೆ ಬಂದದ್ದು, ಅನಂತರ ರಾಜ್ಯದಲ್ಲಿ ರಾಮನಿಗೆ ಪಟ್ಟಾಭಿಷೇಕವಾದದ್ದು -ಇವೇ ಮೊದಲಾದ ಕರ್ಮಗಳು ನನ್ನಿಂದಲೇ ಮಾಡಲ್ಪಟ್ಟಿದ್ದರೂ ನಿರ್ವಿಕಾರನೂ ಎಲ್ಲರ ಆತ್ಮನೂ ಆಗಿರುವ ಈ ರಾಮನಲ್ಲಿ ಆರೋಪಿಸುತ್ತಿರುವರು.

**ರಾಮೋ ನ ಗಚ್ಛತಿ ನ ತಿಷ್ಠತಿ ನಾನುಶೋಚ-**
**ತ್ಯಾಕಾಂಕ್ಷತೇ ತ್ಯಜತಿ ನೋ ನ ಕರೋತಿ ಕಿಂಚಿತ್ ।**
**ಆನಂದಮೂರ್ತಿರಚಲಃ ಪರಿಣಾಮಹೀನೋ**
**ಮಾಯಾಗುಣಾನನುಗತೋ ಹಿ ತಥಾ ವಿಭಾತಿ ॥ ೪೩ ॥**

೪೩. ರಾಮನು ಹೋಗುವದಿಲ್ಲ ; ನಿಲ್ಲುವದಿಲ್ಲ ; ಶೋಕಪಡುವದಿಲ್ಲ ; ಬಯಸುವದಿಲ್ಲ ; ಬಿಡುವದಿಲ್ಲ ; ಏನನ್ನೂ ಮಾಡುವದಿಲ್ಲ ; ಆನಂದಮೂರ್ತಿಯೂ ಚಲನವಿಲ್ಲದವನೂ ಬದಲಾವಣೆಯಿಲ್ಲದವನೂ (ಆಗಿರುವನು.) ಆದರೆ ಮಾಯೆಯ ಗುಣಗಳನ್ನು ಅನುಸರಿಸಿದವನಾದಾಗ (ಕ್ರಿಯೆಗಳು ಇರುವ) ಹಾಗೆ ತೋರಿಬರುತ್ತಾನೆ.

**ತತೋ ರಾಮಃ ಸ್ವಯಂ ಪ್ರಾಹ ಹನೂಮಂತಮುಪಸ್ಥಿತಮ್ ।**
**ಶೃಣು ತತ್ತ್ವಂ ಪ್ರವಕ್ಷ್ಯಾಮಿ ಹ್ಯಾತ್ಮಾನಾತ್ಮಪರಾತ್ಮನಾಮ್ ॥ ೪೪ ॥**

೪೪. ಆಗ ರಾಮನು ಸಮೀಪದಲ್ಲಿ ನಿಂತಿದ್ದ ಹನುಮಂತನನ್ನು ಕುರಿತು ತಾನೇ ಹೀಗೆಂದನು : ಆತ್ಮ, ಅನಾತ್ಮ ಪರಾತ್ಮಗಳ ತತ್ತ್ವವನ್ನು ಹೇಳುತ್ತೇನೆ. ಕೇಳು.

**ಆಕಾಶಸ್ಯ ಯಥಾ ಭೇದಸ್ತ್ರಿವಿಧೋ ದೃಶ್ಯತೇ ಮಹಾನ್ ।**
**ಜಲಾಶಯೇ ಮಹಾಕಾಶಸ್ತದವಚ್ಛಿನ್ನ ಏವ ಹಿ ।**
**ಪ್ರತಿಬಿಂಬಾಖ್ಯಮಪರಂ ದೃಶ್ಯತೇ ತ್ರಿವಿಧಂ ನಭಃ ॥ ೪೫ ॥**

೪೫. ಹೇಗೆ ಆಕಾಶಕ್ಕೆ ಮೂರುವಿಧವಾದ ಭೇದಗಳು ತೋರುವವೋ - ಎಂದರೆ (೧) ನೀರಿನಿಂದ ತುಂಬಿರುವ ಕೆರೆಯು ತಾನು ವ್ಯಾಪಿಸಿಕೊಂಡಿರುವಷ್ಟು ಭಾಗದ ಆಕಾಶ (ಅವಕಾಶ)ವು ಒಂದು ; (೨) ನೀರಿನಲ್ಲಿ ಪ್ರತಿಬಿಂಬಿತವಾಗಿರುವ ಆಕಾಶವು ಮತ್ತೊಂದು ; (೩) ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ ಮಹಾಕಾಶವು ಇನ್ನೊಂದು - ಹೀಗೆ ಮೂರು ವಿಧವಾಗಿ ತೋರುತ್ತಿರುವದು.

**ಬುದ್ಧ್ಯವಚ್ಛಿನ್ನ ಚೈತನ್ಯಮೇಕಂ ಪೂರ್ಣಮಥಾಪರಮ್ ।**
**ಆಭಾಸಸ್ತ್ವಪರಂ ಬಿಂಬಭೂತಮೇವಂ ತ್ರಿಧಾ ಚಿತಿಃ ॥ ೪೬ ॥**

೪೬. ಹಾಗೆಯೇ (೧) ಪೂರ್ಣವಾದ ಬಿಂಬರೂಪವಾದ ಚೈತನ್ಯವೊಂದು (೨) ಬುದ್ಧಿಯೆಂಬ ಉಪಾಧಿಯಿಂದ ಪರಿಚ್ಛಿನ್ನವಾಗಿ ತೋರುವ ಇನ್ನೊಂದು (೩) ಬುದ್ಧಿಯಲ್ಲಿಯೇ ಪ್ರತಿಬಿಂಬಿತವಾಗಿರುವ ಮತ್ತೊಂದು (ಚೈತನ್ಯದ) ಆಭಾಸವು - ಹೀಗೆ ಮೂರು ವಿಧವಾಗಿದ್ದುಕೊಂಡಿರುವದು.

**ಸಾಭಾಸಬುದ್ಧೇಃ ಕರ್ತೃತ್ವಮವಿಚ್ಛಿನ್ನೇಽವಿಕಾರಿಣಿ ।**
**ಸಾಕ್ಷಿಣ್ಯಾರೋಪ್ಯತೇ ಭ್ರಾಂತ್ಯಾ ಜೀವತ್ವಂ ಚ ತಥಾಽಬುಧೈಃ ॥ ೪೭ ॥**

೪೭. ಕಡಿವಡೆಯದೆ ವಿಕಾರವಾಗದೆ ಇದ್ದುಕೊಂಡಿರುವ ಸಾಕ್ಷಿಯಲ್ಲಿ, ಆಭಾಸದಿಂದ ಕೂಡಿದ ಬುದ್ಧಿಯ ಕರ್ತೃತ್ವವನ್ನು ಭ್ರಾಂತಿಯಿಂದ ಅಜ್ಞಾನಿಗಳು ಸಾಕ್ಷಿಸ್ವರೂಪದಲ್ಲಿ ಆರೋಪಿಸಿರುತ್ತಾರೆ.

**ಆಭಾಸಸ್ತು ಮೃಷಾಬುದ್ಧಿರವಿದ್ಯಾಕಾರ್ಯಮುಚ್ಯತೇ ।**
**ಅವಿಚ್ಛಿನ್ನಂ ತು ತದ್ಬ್ರಹ್ಮ ವಿಚ್ಛೇದಸ್ತು ವಿಕಲ್ಪತಃ ॥ ೪೮ ॥**

೪೮. ಆಭಾಸವಾದರೊ, ಸುಳ್ಳಾದ ತಿಳಿವಳಿಕೆಯು. ಇದನ್ನು ಅವಿದ್ಯೆಯ ಕಾರ್ಯವೆನ್ನುತ್ತಾರೆ. ಬ್ರಹ್ಮವಾದರೋ ಅಪರಿಚ್ಛಿನ್ನವಾದುದು. ಅದರಲ್ಲಿ ತೋರುವ ವಿಭಾಗವು ವಿಕಲ್ಪದಿಂದಾದದ್ದು.

**ಅವಚ್ಛಿನ್ನಸ್ಯ ಪೂರ್ಣೇನ ಏಕತ್ವಂ ಪ್ರತಿಪಾದ್ಯತೇ ।**
**ತತ್ತ್ವಮಸ್ಯಾದಿವಾಕ್ಯೈಶ್ಚ ಸಾಭಾಸಸ್ಯಾಹಮಸ್ತಥಾ ॥ ೪೯ ॥**
**ಐಕ್ಯಜ್ಞಾನಂ ಯದೋತ್ಪನ್ನಂ ಮಹಾವಾಕ್ಯೇನ ಚಾತ್ಮನೋಃ ।**
**ತದಾಽವಿದ್ಯಾ ಸ್ವಕಾರ್ಯೈಶ್ಚ ನಶ್ಯತ್ಯೇವ ನ ಸಂಶಯಃ ॥ ೫೦ ॥**

೪೯-೫೦. ಬುದ್ಧ್ಯವಚ್ಛಿನ್ನವಾದ (ಚೈತನ್ಯಕ್ಕೆ) ಪೂರ್ಣವಾದ ಚೈತನ್ಯದೊಡನೆ ಮತ್ತು ಆಭಾಸರೂಪವಾದ ಅಹಂಕಾರಕ್ಕೂ ಏಕತ್ವವು ತತ್ತ್ವಮಸಿ-ಮುಂತಾದ ಮಹಾವಾಕ್ಯಗಳಿಂದ ಪ್ರತಿಪಾದಿಸಲ್ಪಟ್ಟಿದೆ. ಹೀಗೆ ತಿಳಿಸಲ್ಪಟ್ಟ ಆತ್ಮರುಗಳ ಐಕ್ಯಜ್ಞಾನವು ಮಹಾವಾಕ್ಯದ ಮೂಲಕ ಯಾವಾಗ ಉಂಟಾಗುವದೋ ಆಗ ಅವಿದ್ಯೆಯು ತನ್ನ ಎಲ್ಲಾ ಕಾರ್ಯಗಳೊಡನೆ ನಾಶವಾಗಿಯೇ ತೀರುವದು. ಈ ವಿಷಯದಲ್ಲಿ ಸಂಶಯವಿಲ್ಲ.

**ಏತದ್ವಿಜ್ಞಾಯ ಮದ್ಭಕ್ತೋ ಮದ್ಭಾವಾಯೋಪಪದ್ಯತೇ ।**
**ಮದ್ಭಕ್ತಿವಿಮುಖಾನಾಂ ಹಿ ಶಾಸ್ತ್ರಗರ್ತೇಷು ಮುಹ್ಯತಾಮ್ ।**
**ನ ಜ್ಞಾನಂ ನ ಚ ಮೋಕ್ಷಃ ಸ್ಯಾತ್ ತೇಷಾಂ ಜನ್ಮಶತೈರಪಿ ॥ ೫೧ ॥**

೫೧. ಈ ತತ್ತ್ವವನ್ನು ತಿಳಿದವನಾದರೆ ನನ್ನ ಭಕ್ತನಾಗಿ ನನ್ನ ಸ್ವರೂಪವನ್ನೇ ಹೊಂದಿದವನಾಗುವನು. ಆದರೆ ಯಾರು ನನ್ನ ಭಕ್ತಿಯಿಲ್ಲದವರಾಗಿ ಕೇವಲ ಶಾಸ್ತ್ರಗಳ ಅಧ್ಯಯನವೆಂಬ ಗುಂಡಿಗಳಲ್ಲಿ ಬಿದ್ದು ಮೋಹಗೊಂಡಿರುವರೋ - ಅಂಥವರಿಗೆ ನೂರಾರು ಜನ್ಮಗಳು ಕಳೆದರೂ ಜ್ಞಾನವಾಗಲಿ, ಮೋಕ್ಷವಾಗಲಿ, ಉಂಟಾಗುವದಿಲ್ಲ.

**ಇದಂ ರಹಸ್ಯಂ ಹೃದಯಂ ಮಮಾತ್ಮನೋ**
**ಮಯೈವ ಸಾಕ್ಷಾತ್ ಕಥಿತಂ ತವಾನಘ ।**
**ಮದ್ಭಕ್ತಿಹೀನಾಯ ಶಠಾಯ ನ ತ್ವಯಾ**
**ದಾತವ್ಯಮೈಂದ್ರಾದಪಿ ರಾಜ್ಯತೋಽಧಿಕಮ್ ॥ ೫೨ ॥**

೫೨. ಎಲೈ ಪಾಪರಹಿತನೆ, ಈ ಗೋಪ್ಯವಾದ ನನ್ನ ಆತ್ಮರಹಸ್ಯವು ನೇರಾಗಿ ನನ್ನಿಂದಲೇ ನಿನಗೆ ಹೇಳಲ್ಪಟ್ಟಿದೆ. ನೀನಾದರೊ, ಇಂದ್ರನ ರಾಜ್ಯಪದವಿಗಿಂತಲೂ

ಹೆಚ್ಚಿನದಾದ ಈ ಉಪದೇಶವನ್ನು ನನ್ನಲ್ಲಿ ಭಕ್ತಿಯಿಲ್ಲದ ಮೂರ್ಖನಿಗೆ ಕೊಡಬಾರದು. (ಉಪದೇಶಿಸಕೂಡದು)

**ಶ್ರೀಮಹಾದೇವ ಉವಾಚ-**

**ಏತತ್ತೇऽಭಿಹಿತಂ ದೇವಿ ಶ್ರೀರಾಮಹೃದಯಂ ಮಯಾ ।**
**ಅತಿಗುಹ್ಯತಮಂ ಹೃದ್ಯಂ ಪವಿತ್ರಂ ಪಾಪಶೋಧನಮ್ ॥ ೫೩ ॥**

೫೩. ಶ್ರೀಮಹಾದೇವನಿಂತೆಂದನು : ಎಲೈ ಪಾರ್ವತಿಯೆ, ಅತಿರಹಸ್ಯವೂ ಹೃದಯಂಗಮವೂ ಪವಿತ್ರವೂ ಪಾಪಗಳನ್ನು ತೊಳೆಯತಕ್ಕದ್ದೂ ಆಗಿರುವ ಈ ಶ್ರೀರಾಮ ಹೃದಯವನ್ನು ನಾನು ನಿನಗೆ ಹೇಳಿರುವೆನು.

**ಸಾಕ್ಷಾದ್ರಾಮೇಣ ಕಥಿತಂ ಸರ್ವವೇದಾಂತಸಂಗ್ರಹಮ್ ।**
**ಯಃ ಪಠೇತ್ ಸತತಂ ಭಕ್ತ್ಯಾ ಸ ಮುಕ್ತೋ ನಾऽತ್ರ ಸಂಶಯಃ ॥ ೫೪ ॥**

೫೪. ಸಕಲೋಪನಿಷತ್ತುಗಳ ಸಂಗ್ರಹವಾದ, ಶ್ರೀರಾಮನಿಂದ ಹೇಳಲ್ಪಟ್ಟ (ಈ ರಾಮಹೃದಯವನ್ನು) ಯಾವನು ಯಾವಾಗಲೂ ಭಕ್ತಿಯಿಂದ ಪಠನಮಾಡುವನೋ ಅವನು ಮುಕ್ತನೇ ಸರಿ. ಈ ವಿಷಯದಲ್ಲಿ ಸಂಶಯವಿಲ್ಲ.

**ಬ್ರಹ್ಮಹತ್ಯಾದಿಪಾಪಾನಿ ಬಹುಜನ್ಮಾರ್ಜಿತಾನ್ಯಪಿ ।**
**ನಶ್ಯನ್ತ್ಯೇವ ನ ಸಂದೇಹೋ ರಾಮಸ್ಯ ವಚನಂ ಯಥಾ ॥ ೫೫ ॥**

೫೫. ಅನೇಕಜನ್ಮಗಳಿಂದ ಸಂಪಾದಿಸಿದ್ದ ಬ್ರಹ್ಮಹತ್ಯೆಯೇ ಮುಂತಾದ ಪಾಪಗಳು ಕೂಡ-ರಾಮನ ಮಾತು ಹೇಗೆ ಪ್ರಮಾಣವೋ ಹಾಗೆ - ಖಂಡಿತ ನಾಶವಾಗಿ ಬಿಡುವವು. ಈ ವಿಷಯದಲ್ಲಿ ಸಂಶಯವಿಲ್ಲ.

**ಯೋऽತಿಭ್ರಷ್ಟೋऽತಿಪಾಪೀ ಪರಧನಪರದಾರೇಷು ನಿತ್ಯೋದ್ಯತೋ ವಾ**
**ಸ್ತೇಯೀ ಬ್ರಹ್ಮಘ್ನಮಾತಾಪಿತೃವಧನಿರತೋ ಯೋಗಿವೃಂದಾಪಕಾರೀ ।**
**ಯಃ ಸಂಪೂಜ್ಯಾಭಿರಾಮಂ ಪಠತಿ ಚ ಹೃದಯಂ ರಾಮಚಂದ್ರಸ್ಯ ಭಕ್ತ್ಯಾ**
**ಯೋಗೀಂದ್ರೈರಪ್ಯಲಭ್ಯಂ ಪದಮಿಹ ಲಭತೇ ಸರ್ವದೇವೈಃ ಸ ಪೂಜ್ಯಮ್ ॥ ೫೬ ॥**

೫೬. ಯಾವನು ಹೆಚ್ಚಿನ ಕರ್ಮಭ್ರಷ್ಟನಾಗಿ ಅತಿಪಾಪಿಯೂ, ಮತ್ತೊಬ್ಬರ ಹಣ, ಸ್ತ್ರೀ - ಇವರಲ್ಲಿ ಯಾವಾಗಲೂ ಆಸಕ್ತನೂ, ಕಳ್ಳನೂ, ಬ್ರಹ್ಮಹತ್ಯೆ, ತಾಯಿತಂದೆಯರ ಕೊಲೆಗಳನ್ನು ಮಾಡಿದವನೂ ಆಗಿದ್ದು ಯೋಗಿಗಳ ಸಮೂಹಕ್ಕೆ ದ್ರೋಹಮಾಡಿದವನೂ ಆಗಿರುವನೋ ಅಂಥವನು ಕೂಡ ಶ್ರೀರಾಮನನ್ನು ಪೂಜಿಸಿ ಭಕ್ತಿಯಿಂದೊಡಗೂಡಿ ಶ್ರೀರಾಮಹೃದಯವನ್ನು ಪಾರಾಯಣಮಾಡಿದ್ದೇ ಆದರೆ ಯೋಗಿಶ್ರೇಷ್ಠರು

ಗಳಿಗೂ ದೊರಕಲಸಾಧ್ಯವಾದಂಥ, ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಡುವ ಸ್ಥಾನವನ್ನು ಇಲ್ಲಿ ಪಡೆಯುತ್ತಾನೆ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ**
**ಪ್ರಥಮಃ ಸರ್ಗಃ**

ಃಃಃಃಃಃಃಃಃ

## ಎರಡನೆಯ ಸರ್ಗ

**ಪಾರ್ವತ್ಯುವಾಚ-**

**ಧನ್ಯಾಸ್ಮ್ಯನುಗೃಹೀತಾಸ್ಮಿ ಕೃತಾರ್ಥಾಸ್ಮಿ ಜಗತ್ಪ್ರಭೋ ।**
**ವಿಚ್ಛಿನ್ನೋ ಮೇಽತಿಸಂದೇಹಗ್ರಂಥಿರ್ಭವದನುಗ್ರಹಾತ್ ॥ ೧ ॥**

೧. ಪಾರ್ವತಿಯಿಂತೆಂದಳು :- ಜಗದೊಡೆಯನಾದ (ಪರಮೇಶ್ವರನೆ), ನಿನ್ನ ಅನುಗ್ರಹದಿಂದ ನಾನು ಧನ್ಯಳಾದೆನು. ಕೃತಕೃತ್ಯಳಾದೆನು. ಮನೋರಥಪರಿಪೂರ್ಣಳಾದೆನು. ನನ್ನ ಹೆಚ್ಚಿನ ಸಂದೇಹವೂ ನಾಶವಾಯಿತು.

**ತ್ವನ್ಮುಖಾದ್ಗಲಿತಂ ರಾಮತತ್ತ್ವಾಮೃತರಸಾಯನಮ್ ।**
**ಪಿಬಂತ್ಯಾ ಮೇ ಮನೋ ದೇವ ನ ತೃಪ್ಯತಿ ಭವಾಪಹಮ್ ॥ ೨ ॥**

೨. ನಿನ್ನ ಮುಖದಿಂದ ಪಕ್ವವಾಗಿ ಹೊರಬಂದ ಸಂಸಾರನಾಶಕವಾದ 'ರಾಮತತ್ತ್ವಾಮೃತ'ವೆಂಬ ರಸಾಯನವನ್ನು ಕುಡಿಯುತ್ತಿರುವ ನನ್ನ ಮನಸ್ಸು ಇನ್ನೂ ತೃಪ್ತಿಯನ್ನು ಹೊಂದಿರುವದಿಲ್ಲ.

**ಶ್ರೀರಾಮಸ್ಯ ಕಥಾ ತ್ವತ್ತಃ ಶ್ರುತಾ ಸಂಕ್ಷೇಪತೋ ಮಯಾ ।**
**ಇದಾನೀಂ ಶ್ರೋತುಮಿಚ್ಛಾಮಿ ವಿಸ್ತರೇಣ ಸ್ಫುಟಾಕ್ಷರಮ್ ॥ ೩ ॥**

೩. ನಿನ್ನ ಕಡೆಯಿಂದ ಶ್ರೀರಾಮನ ಕಥೆಯು ಸಂಕ್ಷಿಪ್ತವಾಗಿ ನನ್ನಿಂದ ಕೇಳಲ್ಪಟ್ಟಿತು. ಈಗಲಾದರೊ, ವಿಸ್ತಾರವಾಗಿ ಸ್ಪಷ್ಟವಾದ ರೀತಿಯಿಂದ ಕೇಳಲಿಚ್ಛಿಸುವೆನು.

**ಶ್ರೀಮಹಾದೇವ ಉವಾಚ -**

**ಶೃಣು ದೇವಿ ಪ್ರವಕ್ಷ್ಯಾಮಿ ಗುಹ್ಯಾದ್ಗುಹ್ಯತರಂ ಮಹತ್ ।**
**ಅಧ್ಯಾತ್ಮರಾಮಚರಿತಂ ರಾಮೇಣೋಕ್ತಂ ಪುರಾ ಮಮ ॥ ೪ ॥**

೪. ಶ್ರೀ ಮಹಾದೇವನಿಂತೆಂದನು : ಎಲೌ ದೇವಿಯೆ, ಕೇಳು. ರಹಸ್ಯಗಳಿಗೂ ರಹಸ್ಯವಾದ, ಪೂಜ್ಯವಾದ, ಹಿಂದೆ ಶ್ರೀರಾಮನಿಂದ ನನಗೆ ಹೇಳಲ್ಪಟ್ಟ ಅಧ್ಯಾತ್ಮ ರಾಮಾಯಣವನ್ನು ಹೇಳುವೆನು.

**ತದದ್ಯ ಕಥಯಿಷ್ಯಾಮಿ ಶೃಣು ತಾಪತ್ರಯಾಪಹಮ್**
**ಯಚ್ಛ್ರುತ್ವಾ ಮುಚ್ಯತೇ ಜಂತುರಜ್ಞಾನೋತ್ಥಮಹಾಭಯಾತ್ ।**
**ಪ್ರಾಪ್ನೋತಿ ಪರಮಾಮೃದ್ಧಿಂ ದೀರ್ಘಾಯುಃ ಪುತ್ರಸಂತತಿಮ್ ॥ ೫ ॥**

೫. ಈಗ ಅದನ್ನು ಹೇಳುವೆನು. ತಾಪತ್ರಯಗಳನ್ನು ಪರಿಹರಿಸುವಂಥ ಹಾಗೂ ಯಾವ ಕಥೆಯನ್ನು ಕೇಳಿದ ಪ್ರಾಣಿಯು ಅಜ್ಞಾನದಿಂದುಂಟಾದ ಮಹಾಭಯದಿಂದ ಬಿಡುಗಡೆಯನ್ನು ಹೊಂದಿ ಹೆಚ್ಚಿನ ಸಮೃದ್ಧಿಯನ್ನೂ ಪುತ್ರಸಂತಾನವನ್ನೂ ಪಡೆಯುವನೋ (ಅಂಥ ಕಥೆಯನ್ನು) ಕೇಳು.

**ಭೂಮಿರ್ಭಾರೇಣ ಮಗ್ನಾ ದಶವದನಮುಖಾಶೇಷರಕ್ಷೋಗಣಾನಾಂ**
**ಧೃತ್ವಾ ಗೋರೂಪಮಾದೌ ದಿವಿಜಮುನಿಜನೈಃ ಸಾಕಮಬ್ಜಾಸನಸ್ಯ ।**
**ಗತ್ವಾ ಲೋಕಂ ರುದಂತೀ ವ್ಯಸನಮುಪಗತಂ ಬ್ರಹ್ಮಣೇ ಪ್ರಾಹ ಸರ್ವಂ**
**ಬ್ರಹ್ಮಾ ಧ್ಯಾತ್ವಾ ಮುಹೂರ್ತಂ ಸಕಲಮಪಿ ಹೃದಾ ವೇದಶೇಷಾತ್ಮಕತ್ವಾತ್ ॥ ೬ ॥**

೬. ದಶಕಂಠನೇ ಮೊದಲಾದ ಸಮಸ್ತರಾಕ್ಷಸರ ಸಮೂಹದ ಭಾರದಿಂದ ಬಾಗಿಹೋದ ಭೂದೇವಿಯು ಮೊದಲು ಗೋರೂಪವನ್ನು ಧರಿಸಿದವಳಾಗಿ ದೇವತೆಗಳು, ಋಷಿಗಳೊಡನೆ ಕೂಡಿ ಪದ್ಮಯೋನಿಯಾದ ಬ್ರಹ್ಮನ ಲೋಕಕ್ಕೆ ಹೋದಳು. ಅಲ್ಲಿ ಅಳುತ್ತಾ ತನಗೆ ಬಂದಿರುವ ಎಲ್ಲಾ ಕಷ್ಟವನ್ನೂ ಪೂರ್ತಿಯಾಗಿ ಬ್ರಹ್ಮನಲ್ಲಿ ಹೇಳಿಕೊಂಡಳು. ಸರ್ವಾಂತರ್ಯಾಮಿಯಾದ್ದರಿಂದ ಬ್ರಹ್ಮನು ಮುಹೂರ್ತಕಾಲ ಧ್ಯಾನಮಾಡಿ ಆಕೆಯ ಸಂಕಟವನ್ನೆಲ್ಲ ಅರಿತುಕೊಂಡನು.

**ತಸ್ಮಾತ್ ಕ್ಷೀರಸಮುದ್ರತೀರಮಗಮದ್ಬ್ರಹ್ಮಾಽಥ ದೇವೈರ್ವೃತೋ**
**ದೇವ್ಯಾ ಚಾಖಿಲಲೋಕಹೃತ್ಸ್ಥಮಜರಂ ಸರ್ವಜ್ಞ ಮೀಶಂ ಹರಿಮ್ ।**
**ಅಸ್ತೌಷೀತ್ ಶ್ರುತಿಸಿದ್ಧನಿರ್ಮಲಪದೈಃ ಸ್ತೋತ್ರೈಃ ಪುರಾಣೋದ್ಭವೈಃ**
**ಭಕ್ತ್ಯಾ ಗದ್ಗದಯಾ ಗಿರಾಽತಿವಿಮಲೈಃ ಆನಂದಬಾಷ್ಪೈರ್ವೃತಃ ॥ ೭ ॥**

೭. ಅನಂತರ ದೇವತೆಗಳಿಂದ ಪರಿವೃತನಾದ ಬ್ರಹ್ಮನು ಭೂದೇವಿಯೊಡಗೂಡಿ ಕ್ಷೀರಸಾಗರದ ತೀರಕ್ಕೆ ಬಂದನು. ಅತ್ಯಂತಶುದ್ಧವಾದ ಆನಂದಾಶ್ರುಗಳಿಂದ ಕೂಡಿದವನಾಗಿ ಗದ್ಗದವಾದ ಮಾತುಗಳಿಂದ, ಭಕ್ತಿಪೂರ್ವಕವಾಗಿ ವೇದಪ್ರಸಿದ್ಧವಾದ, ಪವಿತ್ರವಾದ ಹಾಗೂ ಪುರಾಣಗಳಿಂದ ಹುಟ್ಟಿದ ಸ್ತೋತ್ರಪಾಠಗಳಿಂದ

ಸಕಲಜನರ ಹೃದಯನಿವಾಸಿಯಾದ, ಮುಪ್ಪಿಲ್ಲದ, ಸರ್ವಜ್ಞನೂ ಈಶ್ವರನೂ ಆದ ಶ್ರೀಹರಿಯನ್ನು ಸ್ತುತಿಸಿದನು.

**ತತಃ ಸ್ಫುರತ್ಸಹಸ್ರಾಂಶುಸಹಸ್ರಸದೃಶಪ್ರಭಃ ।**
**ಆವಿರಾಸೀದ್ಧರಿಃ ಪ್ರಾಚ್ಯಾಂ ದಿಶಾಂ ವ್ಯಪನಯಂಸ್ತಮಃ ॥ ೮ ॥**

೮. ಅನಂತರ ಹೊಳೆಯುತ್ತಿರುವ ಸಾವಿರ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಶ್ರೀಹರಿಯು ದಿಕ್ಕುಗಳ ಕತ್ತಲೆಯನ್ನು ಹೋಗಲಾಡಿಸುತ್ತಾ ಪೂರ್ವದಿಕ್ಕಿನಲ್ಲಿ ಗೋಚರನಾದನು.

**ಕಥಂಚಿದ್ದೃಷ್ಟವಾನ್ ಬ್ರಹ್ಮಾ ದುರ್ದರ್ಶಮಕೃತಾತ್ಮನಾಮ್ ।**
**ಇಂದ್ರನೀಲಪ್ರತೀಕಾಶಂ ಸ್ಮಿತಾಸ್ಯಂ ಪದ್ಮಲೋಚನಮ್ ॥ ೯ ॥**
**ಕಿರೀಟಹಾರಕೇಯೂರಕುಂಡಲೈಃ ಕಟಕಾದಿಭಿಃ ।**
**ವಿಭ್ರಾಜಮಾನಂ ಶ್ರೀವತ್ಸಕೌಸ್ತುಭಪ್ರಭಯಾನ್ವಿತಮ್ ॥ ೧೦ ॥**
**ಸ್ತುವದ್ಭಿಃ ಸನಕಾದ್ಯೈಶ್ಚ ಪಾರ್ಷದೈಃ ಪರಿವೇಷ್ಟಿತಮ್ ।**
**ಶಂಖಚಕ್ರಗದಾಪದ್ಮವನಮಾಲಾವಿರಾಜಿತಮ್ ॥ ೧೧ ॥**
**ಸ್ವರ್ಣಯಜ್ಞೋಪವೀತೇನ ಸ್ವರ್ಣವರ್ಣಾಂಬರೇಣ ಚ ।**
**ಶ್ರಿಯಾ ಭೂಮ್ಯಾ ಚ ಸಹಿತಂ ಗರುಡೋಪರಿ ಸಂಸ್ಥಿತಮ್ ।**
**ಹರ್ಷಗದ್ಗದಯಾ ವಾಚಾ ಸ್ತೋತುಂ ಸಮುಪಚಕ್ರಮೇ ॥ ೧೨ ॥**

೯-೧೨. ಯೋಗಿಗಳಲ್ಲದವರಿಗೆ ನೋಡಲು ದುಸ್ಸಾಧ್ಯನಾದ, ಇಂದ್ರನೀಲದಂತೆ ಕಾಂತಿಯುಳ್ಳವನೂ, ಮುಗುಳುನಗೆಯಿಂದ ಕೂಡಿದವನೂ, ಕಮಲದಂತೆ ಕಣ್ಣುಗಳುಳ್ಳವನೂ ಕಿರೀಟ, ಹಾರ, ಭುಜಕೀರ್ತಿ, ಕರ್ಣಾಭರಣಗಳು, ಕೈಕಡಗಗಳೇ - ಮುಂತಾದ (ಒಡವೆಗಳಿಂದ) ಅಲಂಕೃತನಾದ, ಶ್ರೀವತ್ಸವೆಂಬ ಚಿಹ್ನೆ, ಕೌಸ್ತುಭವೆಂಬ ರತ್ನಮಣಿಯ ಕಾಂತಿಯಿಂದ ಕೂಡಿದವನಾದ, ಸ್ತೋತ್ರಮಾಡುತ್ತಿರುವ ಸನಕಾದಿಮುನಿಗಳಿಂದಲೂ ಅನುಚರರಾದ ಸೇವಕರುಗಳಿಂದಲೂ ಸುತ್ತುವರೆಯಲ್ಪಟ್ಟ, ಶಂಖ, ಚಕ್ರ, ಗದೆ, ಪದ್ಮ, ವನಮಾಲೆಗಳಿಂದ ಭೂಷಿತನಾದ, ಚಿನ್ನದ ಯಜ್ಞೋಪವೀತ, ಹೊಂಬಣ್ಣದ ಪೀತಾಂಬರದಿಂದ ಕೂಡಿದವನಾದ, ಲಕ್ಷ್ಮೀದೇವಿ, ಭೂದೇವಿಯರೊಡನೆ ಕೂಡಿ, ಗರುಡಾರೂಢನಾಗಿರುವ, ಶ್ರೀಹರಿಯನ್ನು ಬ್ರಹ್ಮನು ಹೇಗೋ (ಶ್ರಮದಿಂದ) ಕಂಡನು. ಸಂತೋಷದಿಂದ ಗದ್ಗದವಾದ ಧ್ವನಿಯಿಂದ ಕೂಡಿದ ಮಾತುಗಳಿಂದ ಸ್ತೋತ್ರಮಾಡಲಾರಂಭಿಸಿದನು.

ಬ್ರಹ್ಮೋವಾಚ -

**ನತೋಽಸ್ಮಿ ತೇ ಪದಂ ದೇವ ಪ್ರಾಣಬುದ್ಧೀಂದ್ರಿಯಾತ್ಮಭಿಃ ।**
**ಯಚ್ಚಿಂತ್ಯತೇ ಕರ್ಮಪಾಶಾದ್ ಹೃದಿ ನಿತ್ಯಂ ಮುಮುಕ್ಷುಭಿಃ ॥ ೧೪ ॥**
**ಮಾಯಯಾ ಗುಣಮಯ್ಯಾ ತ್ವಂ ಸೃಜಸ್ಯವಸಿ ಲುಂಪಸಿ ।**
**ಜಗತ್ತೇನ ನ ತೇ ಲೇಪ ಆನಂದಾನುಭವಾತ್ಮನಃ ॥ ೧೫ ॥**

೧೪-೧೫. ಬ್ರಹ್ಮನಿಂತೆಂದನು : ಎಲೈ ದೇವನೆ, ಕರ್ಮಪಾಶದಿಂದ ಬಿಡುಗಡೆ ಹೊಂದಲು ಮುಮುಕ್ಷುಗಳಾದವರು ನಿತ್ಯವೂ ಹೃದಯದಲ್ಲಿ ತಮ್ಮ ಪ್ರಾಣ, ಬುದ್ಧಿ, ಇಂದ್ರಿಯಗಳು, ಮನಸ್ಸು ಈ ಎಲ್ಲಾ ಕರಣಗಳಿಂದಲೂ ಯಾವ ಸ್ವರೂಪವನ್ನು ಚಿಂತಿಸುವರೋ ಅಂಥ ನಿನ್ನ ಪಾದಗಳಿಗೆ ನಮಸ್ಕರಿಸುವೆನು. ನೀನಾದರೊ, ಗುಣಮಯವಾದ ಮಾಯೆಯ ಮೂಲಕ ಜಗತ್ತನ್ನು ಸೃಷ್ಟಿಸುತ್ತೀಯೆ, ಕಾಪಾಡುವೆ ; ಮತ್ತು ಲಯಮಾಡುವೆ ; ಆದರೆ ಆನಂದಾನುಭವಸ್ವರೂಪನಾದ ನಿನಗೆ ಇದರ ಅಂಟು ಸ್ವಲ್ಪವೂ ಇರುವದಿಲ್ಲ.

**ತಥಾ ಶುದ್ಧಿರ್ನ ದುಷ್ಟಾನಾಂ ದಾನಾಧ್ಯಯನಕರ್ಮಭಿಃ ।**
**ಶುದ್ಧಾತ್ಮತಾ ತೇ ಯಶಸಿ ಸದಾ ಭಕ್ತಿಮತಾಂ ಯಥಾ ॥ ೧೬ ॥**
**ಅತಸ್ತವಾಂಘ್ರಿರ್ಮೇ ದೃಷ್ಟಶ್ಚಿತ್ತದೋಷಾಪನುತ್ತಯೇ ।**
**ಸದ್ಯೋಽನ್ತರ್ಹೃದಯೇ ನಿತ್ಯಂ ಮುನಿಭಿಃ ಸಾತ್ವತೈರ್ವೃತಃ ॥ ೧೭ ॥**

೧೬-೧೭. ಎಲೈ ಭಗವಂತನೆ, ನಿನ್ನ ಯಶಸ್ಸಿನ ಕೀರ್ತನೆಯಲ್ಲಿ ಸದಾ ಭಕ್ತಿಯುಳ್ಳವರಿಗೆ ಅಂತಃಕರಣಶುದ್ಧಿಯಾಗುವಂತೆ, ದಾನ, ವೇದಾಧ್ಯಯನವೇ ಮೊದಲಾದ ಕರ್ಮಾನುಷ್ಠಾನಗಳಿಂದಲೂ ಪಾಪಿಗಳಿಗೆ ಚಿತ್ತಶುದ್ಧಿಯು ಉಂಟಾಗಲಾರದು. ಆದ್ದರಿಂದಲೇ ಅಂತಃಕರಣದ ದೋಷಗಳನ್ನು ಕಳೆದುಕೊಳ್ಳುವದಕ್ಕಾಗಿ ಸತ್ತ್ವಪ್ರಧಾನರಾದ ಮುನಿಗಳಿಂದ ಯಾವಾಗಲೂ ಉಪಾಸಿಸಲ್ಪಡುತ್ತಿರುವ ನಿನ್ನ ಪಾದಗಳು ಕೂಡಲೆ ನನ್ನ ಹೃದಯದಲ್ಲಿ ಕಂಡುಕೊಳ್ಳಲ್ಪಟ್ಟವು.

**ಬ್ರಹ್ಮಾದ್ಯೈಃ ಸ್ವಾರ್ಥಸಿದ್ಧ್ಯರ್ಥಮಸ್ಮಾಭಿಃ ಪೂರ್ವಸೇವಿತಃ ।**
**ಅಪರೋಕ್ಷಾನುಭೂತ್ಯರ್ಥಂ ಜ್ಞಾನಿಭಿಃ ಹೃದಿ ಭಾವಿತಃ ॥ ೧೮ ॥**
**ತವಾಂಘ್ರಿಪೂಜಾನಿರ್ಮಾಲ್ಯತುಲಸೀಮಾಲಯಾ ವಿಭೋ ।**
**ಸ್ಪರ್ಧತೇ ವಕ್ಷಸಿ ಪದಂ ಲಬ್ಧ್ವಾಪಿ ಶ್ರೀಃ ಸಪತ್ನಿವತ್ ॥ ೧೯ ॥**

೧೮-೧೯. ಬ್ರಹ್ಮನೇ ಮೊದಲಾದ ದೇವತೆಗಳಾದ ನಮ್ಮಗಳಿಂದ ನೀನು ನಮ್ಮ ನಮ್ಮ ಇಷ್ಟಾರ್ಥಸಿದ್ಧಿಗಾಗಿ ಹಿಂದೆ ಆರಾಧಿಸಲ್ಪಟ್ಟಿರುವೆ. ಜ್ಞಾನಿಗಳಿಂದಲಾದರೊ,

ಅಪರೋಕ್ಷವಾದ ಆತ್ಮಾನುಭವಕ್ಕಾಗಿ ಹೃದಯದಲ್ಲಿ ಚಿಂತಿಸಲ್ಪಟ್ಟಿರುವೆ. ಎಲೈ ವಿಭುವೆ, ಲಕ್ಷ್ಮೀದೇವಿಯು ನಿನ್ನ ವಕ್ಷಸ್ಥಲದಲ್ಲಿ ಸ್ಥಾನವನ್ನು ಪಡೆದುಕೊಂಡಿದ್ದಾಳಾದರೂ ಸವತಿಯಂತೆ -ನಿನ್ನ ಪಾದಕಮಲಗಳಲ್ಲಿ ಪೂಜಿಸಿದ ಪ್ರಸಾದರೂಪವಾದ ತುಲಸೀಮಾಲೆಯೊಡನೆ ಸ್ಪರ್ಧಿಸುತ್ತಿರುವಳು. (ತುಲಸೀಪ್ರಸಾದವು ವಿಷ್ಣುಪದಪ್ರಾಪ್ತಿಗೆ ಮುಖ್ಯಸಾಧನವಾದ್ದರಿಂದ ಲಕ್ಷ್ಮೀದೇವಿಯು ಅದರೊಡನೆ ಸ್ಪರ್ಧಿಸುವಳೋ - ಎಂಬಂತೆ ನಿನ್ನ ವಕ್ಷಸ್ಥಳದಲ್ಲಿಯೇ ಇರುವಳು.)

**ಅತಸ್ತ್ವತ್ಪಾದಭಕ್ತೇಷು ತವ ಭಕ್ತಿಃ ಶ್ರಿಯೋಽಧಿಕಾ ।**
**ಭಕ್ತಿಮೇವಾಭಿವಾಂಛಂತಿ ತ್ವದ್ಭಕ್ತಾಃ ಸಾರವೇದಿನಃ ॥ ೨೦ ॥**
**ಅತಸ್ತ್ವತ್ಪಾದಕಮಲೇ ಭಕ್ತಿರೇವ ಸದಾಽಸ್ತು ಮೇ ।**
**ಸಂಸಾರಾಮಯತಪ್ತಾನಾಂ ಭೇಷಜಂ ಭಕ್ತಿರೇವ ತೇ ॥ ೨೧ ॥**

೨೦ -೨೧. ಆದ್ದರಿಂದ ನಿನ್ನ ಪಾದಾರವಿಂದಗಳನ್ನು ಭಜಿಸುವ ಭಕ್ತರ ವಿಷಯದಲ್ಲಿ ನಿನ್ನ ಪ್ರೇಮವು ಲಕ್ಷ್ಮೀದೇವಿಯ ಮೇಲಿರುವ ಪ್ರೇಮಕ್ಕಿಂತ ಹೆಚ್ಚಾಗಿಯೇ ಇರುವದು. ಸಾರವನ್ನು ಬಲ್ಲ ನಿನ್ನ ಭಕ್ತರು ಭಕ್ತಿಯನ್ನೇ ಬಯಸುವರು. ಆದ್ದರಿಂದ ನನಗೆ ನಿನ್ನ ಪಾದಕಮಲಗಳಲ್ಲಿಯೇ ಯಾವಾಗಲೂ ಭಕ್ತಿಯಿರಲಿ, ಸಂಸಾರವೆಂಬ ರೋಗದಿಂದ ಬಳಲಿದವರಿಗೆ ನಿನ್ನ ಭಕ್ತಿಯೊಂದೇ ಔಷಧವಾಗಿರುವದು.

**ಇತಿ ಬ್ರುವಂತಂ ಬ್ರಹ್ಮಾಣಂ ಬಭಾಷೇ ಭಗವಾನ್ ಹರಿಃ ।**
**ಕಿಂಕರೋಮೀತಿ ತಂ ವೇಧಾಃ ಪ್ರತ್ಯುವಾಚಾತಿಹರ್ಷಿತಃ ॥ ೨೨ ॥**

೨೨. ಹೀಗೆಂದು ಹೇಳುತ್ತಿರುವ ಬ್ರಹ್ಮನನ್ನು ಕುರಿತು ಭಗವಂತನಾದ ವಿಷ್ಣುವು 'ನನ್ನಿಂದೇನಾಗಬೇಕು ?' ಎನ್ನಲು ಬಹಳ ಸಂತೋಷದಿಂದ ಕೂಡಿದ ಬ್ರಹ್ಮನು ಹೀಗೆ ಪ್ರತ್ಯುತ್ತರವನ್ನು ಕೊಟ್ಟನು. ಏನೆಂದರೆ -

**ಭಗವನ್ ರಾವಣೋ ನಾಮ ಪೌಲಸ್ತ್ಯತನಯೋ ಮಹಾನ್ ।**
**ರಾಕ್ಷಸಾನಾಮಧಿಪತಿರ್ಮದ್ದತ್ತವರದರ್ಪಿತಃ ॥ ೨೩ ॥**
**ತ್ರಿಲೋಕೀಂ ಲೋಕಪಾಲಾಂಶ್ಚ ಬಾಧತೇ ವಿಶ್ವಬಾಧಕಃ ।**
**ಮಾನುಷೇಣ ಮೃತಿಸ್ತಸ್ಯ ಮಯಾ ಕಲ್ಯಾಣ ಕಲ್ಪಿತಾ ।**
**ಅತಸ್ತ್ವಂ ಮಾನುಷೋ ಭೂತ್ವಾ ಜಹಿ ದೇವರಿಪುಂ ಪ್ರಭೋ ॥ ೨೪ ॥**

೨೩ - ೨೪. ಭಗವಂತನೆ, ರಾವಣನೆಂಬ ಹೆಸರಿನ ಪೌಲಸ್ತ್ಯನ ಮಗನಾದ ಬಲಶಾಲಿಯಾದ ರಾಕ್ಷಸನೊಬ್ಬನು ತನ್ನ ಗುಂಪಿನವರಿಗೆಲ್ಲ ಒಡೆಯನಾಗಿದ್ದುಕೊಂಡು ನಾನು ಕೊಟ್ಟ ವರದಿಂದ ಕೊಬ್ಬಿದವನಾಗಿ ಮೂರು ಲೋಕಗಳನ್ನೂ ಹಾಗೂ ಲೋಕ

ಪಾಲಕರುಗಳನ್ನೂ ಹಿಂಸಿಸುತ್ತಾ ಲೋಕಕಂಟಕನಾಗಿರುವನು. ಎಲೈ ಕಲ್ಯಾಣ ಮೂರ್ತಿಯೆ, ಅವನಿಗೆ ಮನುಷ್ಯನಿಂದ ಸಾವು ಉಂಟಾಗುವಂತೆ ನಾನು ಏರ್ಪಡಿಸಿರುವೆನು. ಆದ್ದರಿಂದ ಎಲೈ ಪ್ರಭುವೆ, ನೀನು ಮನುಷ್ಯನಾಗಿ ಹುಟ್ಟಿ ದೇವವೈರಿಯಾದ ಅವನನ್ನು ನಾಶಮಾಡುವವನಾಗು.

**ಶ್ರೀಭಗವಾನುವಾಚ -**

**ಕಶ್ಯಪಸ್ಯ ವರೋ ದತ್ತಸ್ತಪಸಾ ತೋಷಿತೇನ ಮೇ ।**
**ಯಾಚಿತಃ ಪುತ್ರಭಾವಾಯ ತಥೇತ್ಯಂಗೀಕೃತಂ ಮಯಾ ॥ ೨೫ ॥**
**ಸ ಇದಾನೀಂ ದಶರಥೋ ಭೂತ್ವಾ ತಿಷ್ಠತಿ ಭೂತಲೇ ।**
**ತಸ್ಯಾಹಂ ಪುತ್ರತಾಮೇತ್ಯ ಕೌಸಲ್ಯಾಯಾಂ ಶುಭೇ ದಿನೇ ॥ ೨೬ ॥**
**ಚತುರ್ಧಾತ್ಮಾನಮೇವಾಹಂ ಸೃಜಾಮಿೀತರಯೋಃ ಪೃಥಕ್ ।**
**ಯೋಗಮಾಯಾಪಿ ಸೀತೇತಿ ಜನಕಸ್ಯ ಗೃಹೇ ತದಾ ॥ ೨೭ ॥**
**ಉತ್ಪತ್ಸ್ಯತೇ ತಯಾ ಸಾರ್ಧಂ ಸರ್ವಂ ಸಂಪಾದಯಾಮ್ಯಹಮ್ ।**
**ಇತ್ಯುಕ್ತ್ವಾಽನ್ತರ್ದಧೇ ವಿಷ್ಣುರ್ಬ್ರಹ್ಮಾ ದೇವಾನಥಾಬ್ರವೀತ್ ॥ ೨೮ ॥**

೨೫-೨೮. ಶ್ರೀಭಗವಂತನಿಂತೆಂದನು : ''ಕಶ್ಯಪನ ತಪಸ್ಸಿನಿಂದ ಸಂತುಷ್ಟನಾದ ನಾನು ಅವನಿಗೆ ವರವನ್ನು ಕೊಟ್ಟಿರುವೆನು. ಆತನು ನನ್ನನ್ನು ತನಗೆ ಮಗನಾಗಿ ಹುಟ್ಟಬೇಕೆಂದು ಬೇಡಿಕೊಂಡನು. ಹಾಗೆಯೇ ಆಗಲೆಂದು ನಾನು ಒಪ್ಪಿದೆನು. ಈಗ ಅವನು ಭೂಲೋಕದಲ್ಲಿ ದಶರಥನಾಗಿ ಇದ್ದುಕೊಂಡಿರುತ್ತಾನೆ. ನಾನು ಅವನಿಗೆ ಪುತ್ರನಾಗಿ ಆಗಿ, ನನ್ನನ್ನು ನಾಲ್ಕು ಭಾಗವಾಗಿ ವಿಂಗಡಿಸಿಕೊಂಡು ಶುಭದಿನದಲ್ಲಿ (ದಶರಥನ ಹಿರಿಯ ಹೆಂಡತಿಯಾದ) ಕೌಸಲ್ಯೆಯಲ್ಲಿ ಹುಟ್ಟುವೆನು. ಇನ್ನಿಬ್ಬರು ಹೆಂಡತಿಯರಲ್ಲಿ ಬೇರೆಬೇರೆಯಾಗಿ (ನನ್ನ ಅಂಶದಿಂದ) ಮಕ್ಕಳನ್ನು ಸೃಷ್ಟಿಮಾಡುವೆನು. ಯೋಗಮಾಯೆಯೂ ಕೂಡ ಸೀತೆ - ಎಂಬ ಹೆಸರಿನಿಂದ ಆಗ್ಗೆ ಜನಕನ ಮನೆಯಲ್ಲಿ ಹುಟ್ಟಲಿರುವಳು. ನಾನು ಆಕೆಯೊಡಗೂಡಿ ದೇವಕಾರ್ಯಗಳೆಲ್ಲವನ್ನೂ ನೆರವೇರಿಸಿ ಕೊಡುವೆನು.'' ಹೀಗೆಂದು ಹೇಳಿ ವಿಷ್ಣುವು ಮರೆಯಾದನು. ಆಗ ಬ್ರಹ್ಮನು ದೇವತೆಗಳನ್ನು ಕುರಿತು ಇಂತೆಂದನು :

**ಬ್ರಹ್ಮೋವಾಚ -**

**ವಿಷ್ಣುರ್ಮಾನುಷರೂಪೇಣ ಭವಿಷ್ಯತಿ ರಘೋಃ ಕುಲೇ ।**
**ಯೂಯಂ ಸೃಜಧ್ವಂ ಸರ್ವೇಽಪಿ ವಾನರೇಷ್ವಂಶಸಂಭವಾನ್ ॥ ೨೯ ॥**

**ವಿಷ್ಣೋಃ ಸಹಾಯಂ ಕುರುತ ಯಾವತ್ ಸ್ಥಾಸ್ಯತಿ ಭೂತಲೇ ।**
**ಇತಿ ದೇವಾನ್ ಸಮಾದಿಶ್ಯ ಸಮಾಶ್ವಾಸ್ಯ ಚ ಮೇದಿನೀಮ್ ।**
**ಯಯೌ ಬ್ರಹ್ಮಾ ಸ್ವಭವನಂ ವಿಜ್ವರಃ ಸುಖಮಾಸ್ಥಿತಃ ॥ ೩೦ ॥**

೨೯-೩೦. ಬ್ರಹ್ಮನು ಹೀಗೆಂದನು : ''ರಘುಕುಲದಲ್ಲಿ ಶ್ರೀಮಹಾವಿಷ್ಣುವು ಮನುಷ್ಯರೂಪದಿಂದ ಹುಟ್ಟಲಿರುವನು. ನೀವೆಲ್ಲರೂ ಕಪಿಜಾತಿಯಲ್ಲಿ ನಿಮ್ಮ ನಿಮ್ಮ ಅಂಶಗಳಿಂದ ಕೂಡಿದ ಕಪಿಗಳನ್ನು ಸೃಷ್ಟಿಮಾಡಿರಿ. ಭೂಮಿಯ ಮೇಲೆ ಆ ವಿಷ್ಣುವು (ಅವತಾರಲೀಲೆಯಿಂದ) ಎಷ್ಟು ಕಾಲ ಇರುವನೋ ಅಷ್ಟುಕಾಲವೂ ಆತನಿಗೆ ಸಹಾಯ ಮಾಡಿರಿ'' - ಹೀಗೆಂದು ದೇವತೆಗಳಿಗೆ ಅಪ್ಪಣೆಮಾಡಿ ಭೂದೇವಿಯನ್ನು ಸಮಾಧಾನ ಗೊಳಿಸಿ ಬ್ರಹ್ಮನು ತನ್ನ ಮನೆಯನ್ನು ಕುರಿತು ಹೊರಟನು. ಮತ್ತು ಅಲ್ಲಿ ನಿಶ್ಚಿಂತನಾಗಿ ಸುಖದಿಂದಿದ್ದನು.

**ದೇವಾಶ್ಚ ಸರ್ವೇ ಹರಿರೂಪಧಾರಿಣಃ**
**ಸ್ಥಿತಾಃ ಸಹಾಯಾರ್ಥಮಿತಸ್ತತೋ ಹರೇಃ ।**
**ಮಹಾಬಲಾಃ ಪರ್ವತವೃಕ್ಷಯೋಧಿನಃ**
**ಪ್ರತೀಕ್ಷಮಾಣಾ ಭಗವಂತಮೀಶ್ವರಮ್ ॥ ೩೧ ॥**

೩೧. ಆಗ ಎಲ್ಲಾ ದೇವತೆಗಳೂ ವಾನರರ ರೂಪವನ್ನು ಧರಿಸಿ ಅತ್ತಿತ್ತ ಸಂಚರಿಸುತ್ತಾ ಹೆಚ್ಚಿನ ಬಲಶಾಲಿಗಳೂ ಬೆಟ್ಟ, ಮರಗಳಿಂದ ಯುದ್ಧಮಾಡುವ ಸಾಮರ್ಥ್ಯವುಳ್ಳವರೂ ಆಗಿದ್ದುಕೊಂಡು, ತಮ್ಮ ಒಡೆಯನಾದ ಭಗವಂತನಾದ (ವಿಷ್ಣುವನ್ನು) ನಿರೀಕ್ಷಣೆಮಾಡುತ್ತಾ ಶ್ರೀಹರಿಯ ಸಹಾಯಕ್ಕಾಗಿ ಕಾದುಕೊಂಡಿದ್ದರು.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ
ದ್ವಿತೀಯಃ ಸರ್ಗಃ

ಃಃಃಃಃಃಃಃಃ

## ಮೂರನೆಯ ಸರ್ಗ

**ಶ್ರೀ ಮಹಾದೇವ ಉವಾಚ -**

**ಅಥ ರಾಜಾ ದಶರಥಃ ಶ್ರೀಮಾನ್ ಸತ್ಯಪರಾಯಣಃ ।**
**ಅಯೋಧ್ಯಾಧಿಪತಿರ್ವೀರಃ ಸರ್ವಲೋಕೇಷು ವಿಶ್ರುತಃ ॥ ೧ ॥**
**ಸೋಽನಪತ್ಯತ್ವದುಃಖೇನ ಪೀಡಿತೋ ಗುರುಮೇಕದಾ ।**
**ವಸಿಷ್ಠಂ ಸ್ವಕುಲಾಚಾರ್ಯಮಭಿವಾದ್ಯೇದಮಬ್ರವೀತ್ ॥ ೨॥**

೧-೨. ಶ್ರೀ ಮಹಾದೇವನಿಂತೆಂದನು : ಆಗ ಅಯೋಧ್ಯಾಧಿಪತಿಯೂ, ವೀರನೂ ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧನೂ ಶ್ರೀಮಂತನೂ ಸತ್ಯನಿಷ್ಠನೂ ಆದ ರಾಜನಾದ ದಶರಥನು ಭೂಮಿಯಲ್ಲಿ ರಾಜ್ಯಭಾರಮಾಡುತ್ತಿದ್ದನು. ಆತನು ತನಗೆ ಮಕ್ಕಳಿಲ್ಲದ ಕೊರತೆಯಿಂದ ದುಃಖಿತನಾಗಿ ತನ್ನ ಕುಲಾಚಾರ್ಯರೂ ಗುರುಗಳೂ ಆದ ವಸಿಷ್ಠರನ್ನು ಒಮ್ಮೆ ಕಂಡು ನಮಸ್ಕರಿಸಿ ಹೀಗೆಂದನು :

**ಸ್ವಾಮಿನ್ ಪುತ್ರಾಃ ಕಥಂ ಮೇ ಸ್ಯುಃ ಸರ್ವಲಕ್ಷಣಲಕ್ಷಿತಾಃ ।**
**ಪುತ್ರಹೀನಸ್ಯ ಮೇ ರಾಜ್ಯಂ ಸರ್ವಂ ದುಃಖಾಯ ಕಲ್ಪತೇ ॥ ೩ ॥**

೩. ಎಲೈ ಪೂಜ್ಯನೆ, ಸಕಲಲಕ್ಷಣಸಂಪನ್ನರಾದ ಗಂಡುಮಕ್ಕಳು ನನಗೆ ಹೇಗೆ ಉಂಟಾದಾರು ? (ಏಕೆಂದರೆ) ಮಕ್ಕಳಿಲ್ಲದ ನನಗೆ ಈ ರಾಜ್ಯವೇ ಮುಂತಾದ ಎಲ್ಲಾ ಸಂಪತ್ತುಗಳೂ ದುಃಖಕ್ಕೆ ಕಾರಣವಾಗಿವೆ.

**ತತೋಽಬ್ರವೀದ್ ವಸಿಷ್ಠಸ್ತಂ ಭವಿಷ್ಯನ್ತಿ ಸುತಾಸ್ತವ ।**
**ಚತ್ವಾರಃ ಸತ್ತ್ವಸಂಪನ್ನಾ ಲೋಕಪಾಲಾ ಇವಾಪರಾಃ ॥ ೪ ॥**
**ಶಾಂತಾಭರ್ತಾರಮಾನೀಯ ಋಷ್ಯಶೃಂಗಂ ತಪೋಧನಮ್ ।**
**ಅಸ್ಮಾಭಿಃ ಸಹಿತಃ ಪುತ್ರಕಾಮೇಷ್ಟಿಂ ಶೀಘ್ರಮಾಚರ ॥ ೫॥**

೪-೫. ಅನಂತರ ಅವನನ್ನು ಕುರಿತು ವಸಿಷ್ಠನು ಹೀಗೆಂದನು : ''ಎಲೈ (ರಾಜನೆ), ನಿನಗೆ ನಾಲ್ಕು ಜನ ಶಕ್ತಿಬಲಸಂಪನ್ನರೂ ಲೋಕಪಾಲಕರಂತೆ ಇರುವವರೂ ಆದ ಮಕ್ಕಳಾಗುತ್ತಾರೆ. ನೀನು ತಪೋನಿಷ್ಠನೂ ಶಾಂತಾದೇವಿಯ ಪತಿಯೂ ಆದ ಋಷ್ಯಶೃಂಗನನ್ನು ಕರೆತಂದು ನಮ್ಮೊಡಗೂಡಿ ಜಾಗ್ರತೆಯಾಗಿ 'ಪುತ್ರಕಾಮೇಷ್ಟಿ'(ಯೆಂಬ) ಯಜ್ಞವನ್ನು ಮಾಡು.''

**ತಥೇತಿ ಮುನಿಮಾನೀಯ ಮಂತ್ರಿಭಿಃ ಸಹಿತಃ ಶುಚಿಃ ।**
**ಯಜ್ಞಕರ್ಮ ಸಮಾರೇಭೇ ಮುನಿಭಿರ್ವೀತಕಲ್ಮಷೈಃ ॥ ೬ ॥**

೬. ಹಾಗೆಯೇ ಆಗಲೆಂದು ಒಪ್ಪಿ ಋಷಿಯನ್ನು ಕರೆತಂದು ಮಂತ್ರಿಗಳೊಡಗೂಡಿ ಶುಚಿರ್ಭೂತನಾದ (ದೀಕ್ಷಾಬದ್ಧನಾದ ರಾಜನು) ದೋಷರಹಿತರಾದ ಮುನಿಗಳಿಂದ ಪರಿವೃತನಾಗಿ ಯಜ್ಞಕರ್ಮವನ್ನು ಆರಂಭಿಸಿದನು.

**ಶ್ರದ್ಧಯಾ ಹೂಯಮಾನೇಽಗ್ನೌ ತಪ್ತಜಾಂಬೂನದಪ್ರಭಃ ।**
**ಪಾಯಸಂ ಸ್ವರ್ಣಪಾತ್ರಸ್ಥಂ ಗೃಹೀತ್ವೋವಾಚ ಹವ್ಯವಾಟ್ ॥೭॥**

೭. ಶ್ರದ್ಧೆಯಿಂದ ಅಗ್ನಿಯಲ್ಲಿ ಹೋಮಮಾಡುತ್ತಿರಲಾಗಿ, ಪುಟವಿಟ್ಟ ಚಿನ್ನದಂತೆ ಕಾಂತಿಯುಳ್ಳ ಯಜ್ಞಪುರುಷನು ಚಿನ್ನದ ಪಾತ್ರೆಯಲ್ಲಿದ್ದ ಪಾಯಸವನ್ನು ಕೈಯಲ್ಲಿ ಹಿಡಿದುಕೊಂಡು ಹೀಗೆಂದನು :

**ಗೃಹಾಣ ಪಾಯಸಂ ದಿವ್ಯಂ ಪುತ್ರೀಯಂ ದೇವನಿರ್ಮಿತಮ್**
**ಲಪ್ಸ್ಯಸೇ ಪರಮಾತ್ಮಾನಂ ಪುತ್ರತ್ವೇನ ನ ಸಂಶಯಃ ॥೮॥**
**ಇತ್ಯುಕ್ತ್ವಾ ಪಾಯಸಂ ದತ್ವಾ ರಾಜ್ಞೇ ಸೋಽನ್ತರ್ದಧೇಽನಲಃ ।**
**ವವಂದೇ ಮುನಿಶಾರ್ದೂಲೌ ರಾಜಾ ಲಬ್ಧಮನೋರಥಃ ॥೯॥**

೮-೯. "(ಎಲೈ ರಾಜನೆ) ಇದೊ, ದೇವತೆಗಳಿಂದ ಸಿದ್ಧಗೊಳಿಸಲ್ಪಟ್ಟ ಪುತ್ರಪ್ರದವಾದ ದಿವ್ಯವಾದ ಪಾಯಸವನ್ನು ತೆಗೆದುಕೊ, ಪರಮಾತ್ಮನನ್ನು ಮಗನನ್ನಾಗಿ ಹೊಂದುವೆ. ಈ ವಿಷಯದಲ್ಲಿ ಸಂಶಯವಿಲ್ಲ" ಹೀಗೆಂದು ಹೇಳಿ ರಾಜನಿಗೆ ಪಾಯಸವನ್ನು ಕೊಟ್ಟು ಅಗ್ನಿದೇವನು ಅದೃಶ್ಯನಾದನು. ರಾಜನಾದರೊ, ತನ್ನ ಬಯಕೆಗಳು ಈಡೇರಿದವನಾಗಿ ಮುನಿಶ್ರೇಷ್ಠರಾದ (ಋಷ್ಯಶೃಂಗ-ವಸಿಷ್ಠರನ್ನು) ನಮಸ್ಕರಿಸಿದನು.

**ವಸಿಷ್ಠಋಷ್ಯಶೃಂಗಾಭ್ಯಾಮನುಜ್ಞಾತೋ ದದೌ ಹವಿಃ ।**
**ಕೌಸಲ್ಯಾಯೈ ಸಕೈಕೇಯ್ಯೈ ಅರ್ಧಮರ್ಧಂ ಪ್ರಯತ್ನತಃ ॥೧೦॥**

೧೦. ವಸಿಷ್ಠರು ಮತ್ತು ಋಷ್ಯಶೃಂಗರುಗಳಿಂದ ಅಪ್ಪಣೆಯನ್ನು ಪಡೆದವನಾಗಿ ಚರು (ಪಾಯಸ) ವನ್ನು ಕೈಕೇಯಿ ಸಹಿತಳಾದ ಕೌಸಲ್ಯೆಗೆ ಅರ್ಧರ್ಧ ಮಾಡಿಕೊಟ್ಟನು.

**ತತಃ ಸುಮಿತ್ರಾ ಸಂಪ್ರಾಪ್ತಾ ಜಗೃಧ್ನುಃ ಪೌತ್ರಿಕಂ ಚರುಮ್ ।**
**ಕೌಸಲ್ಯಾ ತು ಸ್ವಭಾಗಾರ್ಧಂ ದದೌ ತಸ್ಯೈ ಮುದಾನ್ವಿತಾ ॥ ೧೧ ॥**
**ಕೈಕೇಯಿ ಚ ಸ್ವಭಾಗಾರ್ಧಂ ದದೌ ಪ್ರೀತಿಸಮನ್ವಿತಾ ॥**
**ಉಪಭುಜ್ಯ ಚರುಂ ಸರ್ವಾಃ ಸ್ತ್ರಿಯೋ ಗರ್ಭಸಮನ್ವಿತಾಃ ॥ ೧೨ ॥**
**ದೇವತಾ ಇವ ರೇಜುಸ್ತಾಃ ಸ್ವಭಾಸಾ ರಾಜಮಂದಿರೇ**

೧೧-೧೨. ಅನಂತರ ಪುತ್ರಪ್ರದವಾದ ಚರುವನ್ನು ಬಯಸಿ ಸುಮಿತ್ರೆಯು ಬಂದಳು. ಆಗ ಕೌಸಲ್ಯೆಯಾದರೊ, ತನ್ನ ಭಾಗದಲ್ಲಿ ಅರ್ಧಾಂಶವನ್ನು ಕೊಟ್ಟಳು. ಕೈಕೇಯಿಯೂ ಕೂಡ ತನ್ನ ಪಾಲಿನಲ್ಲಿ ಅರ್ಧದಷ್ಟನ್ನು ಪ್ರೀತಿಪೂರ್ವಕವಾಗಿ (ಅವಳಿಗೆ) ಕೊಟ್ಟಳು. ಹೀಗೆ ಎಲ್ಲರೂ ಪಾಯಸವನ್ನು ಊಟಮಾಡಿದವರಾಗಿ ಗರ್ಭವನ್ನು ಧರಿಸಿ ತಮ್ಮ ತೇಜಸ್ಸಿನಿಂದ ಅರಮನೆಯಲ್ಲಿ ದೇವತೆಗಳಂತೆ ಪ್ರಕಾಶಮಾನರಾಗಿದ್ದರು.

**ದಶಮೇ ಮಾಸಿ ಕೌಸಲ್ಯಾ ಸುಷುವೇ ಪುತ್ರಮದ್ಭುತಮ್ ॥ ೧೩॥**
**ಮಧುಮಾಸೇ ಸಿತೇ ಪಕ್ಷೇ ನವಮ್ಯಾಂ ಕರ್ಕಟೇ ಶುಭೇ ।**
**ಪುನರ್ವಸ್ವೃಕ್ಷಸಹಿತೇ ಉಚ್ಚಸ್ಥೇ ಗ್ರಹಪಂಚಕೇ ॥ ೧೪ ॥**
**ಮೇಷಂ ಪೂಷಣಿ ಸಂಪ್ರಾಪ್ತೇ ಪುಷ್ಪವೃಷ್ಟಿಸಮಾಕುಲೇ ।**
**ಆವಿರಾಸೀಜ್ಜಗನ್ನಾಥಃ ಪರಮಾತ್ಮಾ ಸನಾತನಃ । ॥ ೧೫॥**

೧೩-೧೫. ಹತ್ತನೆಯ ತಿಂಗಳಲ್ಲಿ ಕೌಸಲ್ಯೆಯು ಆಶ್ಚರ್ಯಕರನಾದ ಮಗನನ್ನು ಪಡೆದಳು. ಚೈತ್ರಮಾಸದ ಶುಕ್ಲಪಕ್ಷದ ನವಮೀ ತಿಥಿಯಲ್ಲಿ ಶುಭವಾದ ಕರ್ಕಾಟಕ ಲಗ್ನದಲ್ಲಿ ಪುನರ್ವಸು ನಕ್ಷತ್ರದಿಂದ ಕೂಡಿದ ಸಮಯದಲ್ಲಿ ಐದು ಗ್ರಹಗಳು ಉಚ್ಚಸ್ಥಾನ ದಲ್ಲಿರುವಾಗ ಹಾಗೂ ಸೂರ್ಯನು ಮೇಷರಾಶಿಯಲ್ಲಿರಲು (ಆಕಾಶದಿಂದ) ಹೂವಿನ ಮಳೆಯು ಉದುರುತ್ತಿರಲಾಗಿ ಸನಾತನನೂ ಜಗನ್ನಾಯಕನೂ ಆದ ಪರಮಾತ್ಮನು ಅವತರಿಸಿದನು.

**ನೀಲೋತ್ಪಲದಲಶ್ಯಾಮಃ ಪೀತವಾಸಾಶ್ಚತುರ್ಭುಜಃ ।**
**ಜಲಜಾರುಣನೇತ್ರಾನ್ತಃ ಸ್ಫುರತ್‌ಕುಂಡಲಮಂಡಿತಃ ॥೧೬॥**
**ಸಹಸ್ರಾರ್ಕಪ್ರತೀಕಾಶಃ ಕಿರೀಟೀ ಕುಂಚಿತಾಲಕಃ ।**
**ಶಂಖಚಕ್ರಗದಾಪದ್ಮವನಮಾಲಾವಿರಾಜಿತಃ ॥೧೭ ॥**
**ಅನುಗ್ರಹಾಖ್ಯಹೃತ್ಸ್ಥೇಂದುಸೂಚಕಸ್ಮಿತಚಂದ್ರಿಕಃ ।**
**ಕರುಣಾರಸಸಂಪೂರ್ಣವಿಶಾಲೋತ್ಪಲಲೋಚನಃ ॥೧೮॥**
**ಶ್ರೀವತ್ಸಹಾರಕೇಯೂರನೂಪುರಾದಿವಿಭೂಷಣಃ ॥**

೧೬-೧೮. (ಆ ಭಗವಂತನ ಸ್ವರೂಪವು ಹೇಗಿತ್ತೆಂದರೆ : ) ಕನ್ನೈದಿಲೆಯ ಎಸುಳಿನಂತೆ ನೀಲವರ್ಣನೂ ಹಳದಿಯ ಬಟ್ಟೆಯನ್ನುಟ್ಟವನೂ ಚತುರ್ಭುಜನಾಗಿಯೂ ಕಮಲದಂತಿರುವ ನಸುಗೆಂಪಾದ ಕಣ್ಣಿನ ಒಳಭಾಗದಲ್ಲಿ ಪ್ರತಿಬಿಂಬಿಸಿದಂಥ ಹೊಳೆಯುವ ಕರ್ಣಾಭರಣಗಳಿಂದ ಅಲಂಕೃತನಾಗಿಯೂ ಸಾವಿರಸೂರ್ಯರಿಗೆ ಸಮಾನ ವಾದ ಕಾಂತಿಯುಳ್ಳವನಾಗಿಯೂ ಕಿರೀಟವನ್ನು ತೊಟ್ಟವನಾಗಿಯೂ ಗುಂಗುರಾದ ತಲೆಕೂದಲುಳ್ಳವನಾಗಿಯೂ ಶಂಖ, ಚಕ್ರ, ಗದೆ, ಪದ್ಮ, ವನಮಾಲೆಗಳಿಂದ ಅಲಂಕೃತ ನಾಗಿಯೂ ಹೃದಯದಲ್ಲಿರುವ ಅನುಗ್ರಹವೆಂಬ ಹೆಸರಿನ ಚಂದ್ರನನ್ನು ಸೂಚಿಸು ವಂತಿರುವ ಮುಗುಳುನಗೆಯ ಕಾಂತಿಯುಳ್ಳವನೂ, ಕರುಣೆಯೆಂಬ ರಸದಿಂದ ಸಂಪೂರ್ಣವಾಗಿ ತುಂಬಿದ ಅಗಲವಾದ ನೀಲೋತ್ಪಲದಂತೆ ಕಣ್ಣುಗಳುಳ್ಳವನೂ, ಶ್ರೀವತ್ಸವೆಂಬ ಗುರುತು, ಹಾರ, ಕೈಗಳಿಗೆ ತೊಟ್ಟಿರುವ ಭುಜಕೀರ್ತಿ, ಕಾಲಿನ ಗೆಜ್ಜೆಸರವೇ ಮುಂತಾದ ಒಡವೆಗಳಿಂದ ಅಲಂಕೃತನೂ (ಆಗಿದ್ದನು.)

**ದೃಷ್ಟ್ವಾಂ ತಂ ಪರಮಾತ್ಮಾನಂ ಕೌಸಲ್ಯಾ ವಿಸ್ಮಯಾಕುಲಾ ।**
**ಹರ್ಷಾಶ್ರುಪೂರ್ಣನಯನಾ ನತ್ವಾ ಪ್ರಾಂಜಲಿರಬ್ರವೀತ್ ॥ ೧೯ ॥**

೧೯. ಕೌಸಲ್ಯೆಯು ಆ ಪರಮಾತ್ಮನನ್ನು ಕಂಡು ಆಶ್ಚರ್ಯಭರಿತಳಾಗಿ ಸಂತೋಷದ ಕಣ್ಣೀರಿನಿಂದ ಕೂಡಿದವಳಾಗಿ ನಮಸ್ಕರಿಸಿ ಕೈಮುಗಿದು ಹೀಗೆಂದಳು :

**ಕೌಸಲ್ಯೋವಾಚ-**

**ದೇವ ದೇವ ನಮಸ್ತೇಽಸ್ತು ಶಂಖಚಕ್ರಗದಾಧರ ।**
**ಪರಮಾತ್ಮಾಚ್ಯುತೋಽನಂತಃ ಪೂರ್ಣಸ್ತ್ವಂ ಪುರುಷೋತ್ತಮಃ ॥ ೨೦ ॥**

೨೦. ಕೌಸಲ್ಯೆಯಿಂತೆದಳು : ಎಲೈ ದೇವದೇವನೆ, ಶಂಖಚಕ್ರಗದೆಗಳನ್ನು ಧರಿಸಿರುವ ನೀನು ನಾಶವಿಲ್ಲದವನೂ, ಅನಂತನೂ, ಪೂರ್ಣನೂ, ಪುರುಷೋತ್ತಮನೂ ಆದ ಪರಮಾತ್ಮನಾಗಿರುವೆ.

**ವದಂತ್ಯಗೋಚರಂ ವಾಚಾಂ ಬುದ್ಧ್ಯಾದೀನಾಮತೀಂದ್ರಿಯಮ್ ।**
**ತ್ವಾಂ ವೇದವಾದಿನಃ ಸತ್ತಾಮಾತ್ರಂ ಜ್ಞಾನೈಕವಿಗ್ರಹಮ್ ॥ ೨೧ ॥**
**ತ್ವಮೇವ ಮಾಯಯಾ ವಿಶ್ವಂ ಸೃಜಸ್ಯವಸಿ ಹಂಸಿ ಚ ।**
**ಸತ್ತ್ವಾದಿಗುಣಸಂಯುಕ್ತಸ್ತುರ್ಯ ಏವಾಮಲಃ ಸದಾ ॥ ೨೨॥**

೨೧-೨೨. ಮಾತುಗಳಿಗೂ ಬುದ್ಧಿಯೇ ಮುಂತಾದವುಗಳಿಗೂ ನಿಲುಕದ ಅತೀಂದ್ರಿಯನಾದವನೆಂದೂ ಕೇವಲ ಇರುವಿಕೆಯ ಸ್ವರೂಪನೆಂದೂ ಜ್ಞಾನವೊಂದೇ ಶರೀರವಾಗುಳ್ಳವನೆಂದೂ ವೇದವಾದಿಗಳು ನಿನ್ನನ್ನು ಹೇಳುತ್ತಾರೆ. ಸತ್ತ್ವವೇ ಮುಂತಾದ ಗುಣಗಳಿಂದ ಕೂಡಿದವನಾಗಿ ನೀನೇ ಈ ಬ್ರಹ್ಮಾಂಡವನ್ನೆಲ್ಲ ಮಾಯೆಯಿಂದ ಸೃಷ್ಟಿಸುವೆ ; ಕಾಪಾಡುವೆ ; ಮತ್ತು ನಾಶಗೊಳಿಸುವೆ. ಆದರೂ ಯಾವಾಗಲೂ ಪರಿಶುದ್ಧನಾದ ತುರೀಯನಾಗಿರುವೆ.

**ಕರೋಷೀವ ನ ಕರ್ತಾ ತ್ವಂ ಗಚ್ಛಸೀವ ನ ಗಚ್ಛಸಿ ।**
**ಶೃಣೋಷಿ ನ ಶೃಣೋಷೀವ ಪಶ್ಯಸೀವ ನ ಪಶ್ಯಸಿ ॥ ೨೩॥**
**ಅಪ್ರಾಣೋ ಹ್ಯಮನಾಃ ಶುದ್ಧ ಇತ್ಯಾದಿ ಶ್ರುತಿರಬ್ರವೀತ್ ।**
**ಸಮಃ ಸರ್ವೇಷು ಭೂತೇಷು ತಿಷ್ಠನ್ನಪಿ ನ ಲಕ್ಷ್ಯಸೇ ॥ ೨೪ ॥**
**ಅಜ್ಞಾನಧ್ವಾಂತಚಿತ್ತಾನಾಂ ವ್ಯಕ್ತ ಏವ ಸುಮೇಧಸಾಮ್ ।**
**ಜಠರೇ ತವ ದೃಶ್ಯಂತೇ ಬ್ರಹ್ಮಾಂಡಾಃ ಪರಮಾಣವಃ ॥ ೨೫ ॥**

೨೩-೨೫. ನೀನಾದರೋ ಕರ್ತೃವಲ್ಲದಿದ್ದರೂ ಕರ್ಮವನ್ನು ಮಾಡುವವನಂತೆಯೂ ನಡೆಯುವದಿಲ್ಲವಾದರೂ ನಡೆಯುವವನಂತೆಯೂ ಕಂಡುಬರುವೆ. ಮತ್ತು ಕೇಳುವವನಲ್ಲವಾದರೂ ಕೇಳುವವನಂತೆಯೂ ನೋಡುವವನಲ್ಲವಾದರೂ ನೋಡುವವನಂತೆಯೂ ಕಂಡುಬರುವೆ. ನೀನು ಪ್ರಾಣರಹಿತನೂ, ಮನಸ್ಸಿಲ್ಲದವನೂ ಶುದ್ಧನೂ ಆಗಿರುವೆಯೆಂದು ಶ್ರುತಿಯು (ಮುಂಡಕ. ೨-೧-೨) ಹೇಳುತ್ತಿದೆ. ಎಲ್ಲಾ ಪ್ರಾಣಿಗಳಲ್ಲಿಯೂ ಸಮನಾಗಿದ್ದುಕೊಂಡಿರುವೆಯಾದರೂ ನೀನು ಅಜ್ಞಾನವೆಂಬ ಕತ್ತಲೆಯು ಮುಸುಕಿರುವ ಮನಸ್ಸಿನವರಿಗೆ ಗೋಚರನಲ್ಲ. ಆದರೆ ಜ್ಞಾನಿಗಳಿಗೆ ಗೋಚರನೇ

ಆಗಿರುವೆ. ಬ್ರಹ್ಮಾಂಡಗಳೆಲ್ಲವೂ ಪರಮಾಣುಗಳಂತೆ ನಿನ್ನ ಹೊಟ್ಟೆಯಲ್ಲಿ ಕಂಡು ಬರುತ್ತಿವೆ.

**ತ್ವಂ ಮಮೋದರಸಂಭೂತ ಇತಿ ಲೋಕಾನ್ ವಿಡಂಬಸೇ ।**
**ಭಕ್ತೇಷು ಪಾರವಶ್ಯಂ ತೇ ದೃಷ್ಟಂ ಮೇಽದ್ಯ ರಘೂತ್ತಮ ॥ ೨೬ ॥**

೨೬. ನೀನಾದರೋ, ನನ್ನ ಹೊಟ್ಟೆಯಲ್ಲಿ ಹುಟ್ಟಿದವನೆಂದು ಜನರಿಗೆ ತೋರಿಕೊಳ್ಳುತ್ತಿದೀಯೆ. ಎಲೈ ರಘುಶ್ರೇಷ್ಠನೆ, ಇದರಿಂದ ನೀನು ಭಕ್ತಪರಾಧೀನ ನೆಂಬುದು ನನಗೆ ತಿಳಿದಂತಾಯಿತು.

**ಸಂಸಾರಸಾಗರೇ ಮಗ್ನಾ ಪತಿಪುತ್ರಧನಾದಿಷು ।**
**ಭ್ರಮಾಮಿ ಮಾಯಯಾ ತೇಽದ್ಯ ಪಾದಮೂಲಮುಪಾಗತಾ ॥ ೨೭ ॥**
**ದೇವ ತ್ವದ್ರೂಪಮೇತನ್ಮೇ ಸದಾ ತಿಷ್ಠತು ಮಾನಸೇ ।**
**ಆವೃಣೋತು ನ ಮಾಂ ಮಾಯಾ ತವ ವಿಶ್ವವಿಮೋಹಿನೀ ॥ ೨೮ ॥**

೨೭-೨೮. ಗಂಡ, ಮಕ್ಕಳು, ಧನ - ಮುಂತಾದವುಗಳಿಂದ ಕೂಡಿದ ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ನಾನು ನಿನ್ನ ಮಾಯೆಯಿಂದ ತೊಳಲುತ್ತಾ ಈಗ ನಿನ್ನ ಚರಣಾರವಿಂದಗಳ ಬುಡಕ್ಕೆ ಶರಣಳಾಗಿ ಬಂದಿದ್ದೇನೆ. ಎಲೈ ದೇವನೆ, ನಿನ್ನ ಈ ರೂಪವೇ ಯಾವಾಗಲೂ ನನ್ನ ಮನಸ್ಸಿನಲ್ಲಿ ನೆಲೆಗೊಳ್ಳಲಿ. ಜಗತ್ತನ್ನೇ ವಂಚಿಸುವ ನಿನ್ನ ಮಾಯೆಯು ನನ್ನನ್ನು ಮುಚ್ಚದೆ ಇರಲಿ.

**ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್ ।**
**ದರ್ಶಯಸ್ವ ಮಹಾನಂದ ಬಾಲಭಾವಂ ಸುಕೋಮಲಮ್ ।**
**ಲಲಿತಾಲಿಂಗನಾಲಾಪೈಸ್ತರಿಷ್ಯಾಮ್ಯುತ್ಕಟಂ ತಮಃ ॥ ೨೯ ॥**

೨೯. ಎಲೈ ವಿಶ್ವಾತ್ಮನೆ, ಈ ನಿನ್ನ ಅಪ್ರಾಕೃತವಾದ ರೂಪವನ್ನು ಹಿಂತೆಗೆದುಕೊ. ಕೋಮಲವಾದ ಶಿಶುಭಾವವನ್ನು ತೋರಿಸುವವನಾಗು. ಸುಖಕರವಾದ ಮುದ್ದಾಡು ವಿಕೆ; ಮಾತುಗಳಿಂದ (ನಿನ್ನನ್ನು ಸೇವಿಸಿ) ಭಯಂಕರವಾದ (ಈ ಸಂಸಾರವೆಂಬ) ಕತ್ತಲೆ ಯನ್ನು ದಾಟುವೆನು.

**ಶ್ರೀಭಗವಾನುವಾಚ-**

**ಯದ್ಯದಿಷ್ಟಂ ತವಾಸ್ತ್ಯಂಬ ತತ್ತದ್ಭವತು ನಾನ್ಯಥಾ ॥ ೩೦ ॥**
**ಅಹಂ ತು ಬ್ರಹ್ಮಣಾ ಪೂರ್ವಂ ಭೂಮೇರ್ಭಾರಾಪನುತ್ತಯೇ ।**
**ಪ್ರಾರ್ಥಿತೋ ರಾವಣಂ ಹಂತುಂ ಮಾನುಷತ್ವಮುಪಾಗತಃ ॥ ೩೧ ॥**

೩೦-೩೧. ಶ್ರೀಭಗವಂತನಿಂತೆಂದನು : ಎಲೌ ತಾಯಿಯೆ, ನಿನಗೆ ಯಾವ ಯಾವದು ಬೇಕೊ, ಅದೆಲ್ಲವೂ ಹಾಗೆಯೇ ಉಂಟಾಗಲಿ ! ಈ ಮಾತು ಅನ್ಯಥಾ ಆಗದಿರಲಿ. ನಾನಾದರೊ, ಹಿಂದೆ ಬ್ರಹ್ಮನಿಂದ ಭೂಮಿಯ ಭಾರವನ್ನು ಇಳಿಸುವದಕ್ಕಾಗಿ ಪ್ರಾರ್ಥಿಸಲ್ಪಟ್ಟೆನು. ಆದ್ದರಿಂದ ರಾವಣನನ್ನು ಸಂಹಾರಮಾಡುವದಕ್ಕಾಗಿ ಮನುಷ್ಯ ಭಾವವನ್ನು ಹೊಂದಿರುವೆನು.

**ತ್ವಯಾ ದಶರಥೇನಾಹಂ ತಪಸಾರಾಧಿತಃ ಪುರಾ ।**
**ಮತ್ಪುತ್ರತ್ವಾಭಿಕಾಂಕ್ಷಿಣ್ಯಾ ತಥಾಕೃತಮನಿಂದಿತೇ ॥ ೩೨ ॥**
**ರೂಪಮೇತತ್ತ್ವಯಾ ದೃಷ್ಟಂ ಪ್ರಾಕ್ತನಂ ತಪಸಃ ಫಲಮ್ ।**
**ಮದ್ದರ್ಶನಂ ವಿಮೋಕ್ಷಾಯ ಕಲ್ಪತೇ ಹ್ಯನ್ಯದುರ್ಲಭಮ್ ॥ ೩೩ ॥**

೩೨-೩೩. ಎಲೈ ಪವಿತ್ರಾತ್ಮಳೆ, ನನ್ನನ್ನು ತನ್ನ ಮಗನಾಗಿ ಹುಟ್ಟಬೇಕೆಂದು ಬಯಸಿದ ದಶರಥನಿಂದಲೂ ನಿನ್ನಿಂದಲೂ ಹಿಂದೆ ತಪಸ್ಸಿನಿಂದ ಆರಾಧಿಸಲ್ಪಟ್ಟ ನಾನು ಹಾಗೆಯೇ ನಡೆದುಕೊಂಡಿರುವೆನು. ಹಿಂದಿನ ತಪಸ್ಸಿನ ಫಲವಾಗಿಯೇ ಈ ರೂಪವು ನಿನ್ನಿಂದ ನೋಡಲ್ಪಟ್ಟಿತು. ಬೇರೊಬ್ಬರಿಗೆ ದುರ್ಲಭವಾದ ಈ ನನ್ನ ದರ್ಶನವು ಮೋಕ್ಷಕ್ಕೆ ಕಾರಣವಾಗಿರುವದು.

**ಸಂವಾದಮಾವಯೋರ್ಯಸ್ತು ಪಠೇದ್ವಾ ಶೃಣುಯಾದಪಿ ।**
**ಸ ಯಾತಿ ಮಮ ಸಾರೂಪ್ಯಂ ಮರಣೇ ಮತ್ಸ್ಮೃತಿಂ ಲಭೇತ್ ।**
**ಇತ್ಯುಕ್ತ್ವಾ ಮಾತರಂ ರಾಮೋ ಬಾಲೋ ಭೂತ್ವಾ ರುರೋದ ಹ ॥ ೩೪ ॥**

೩೪. ಈ ನಮ್ಮಿಬ್ಬರ ಸಂವಾದವನ್ನು ಯಾವನು ಓದುವನೋ, ಅಥವಾ ಕೇಳುವನೋ ಅವನು ಸಾಯುವಾಗ ನನ್ನ ನೆನಪನ್ನು ಪಡೆದು ನನ್ನ ಸಾರೂಪ್ಯ (ಸಮಾನ ವಾದ ಆಕಾರ) ಮುಕ್ತಿಯನ್ನು ಹೊಂದುವನು. ರಾಮನು ಹೀಗೆಂದು ತಾಯಿಗೆ ಹೇಳಿ ಅನಂತರ ಮಗುವಾಗಿ ಅಳಲಾರಂಭಿಸಿದನು.

**ಬಾಲತ್ವೇಽಪೀಂದ್ರನೀಲಾಭೋ ವಿಶಾಲಾಕ್ಷೋಽತಿಸುಂದರಃ ।**
**ಬಾಲಾರುಣಪ್ರತೀಕಾಶೋ ಲಾಲಿತಾಖಿಲಲೋಕಪಃ ॥ ೩೫ ॥**

೩೫. ಮಗುವಾಗಿದ್ದಾಗಲೂ ಇಂದ್ರನೀಲಮಣಿಯಂತೆ ಕಾಂತಿಯುಳ್ಳವನೂ ಅಗಲವಾದ ಕಂಗಳುಳ್ಳವನೂ ಅತಿಸುಂದರನೂ ಎಳೆಯ ಸೂರ್ಯನಂತೆ ಕೆಂಪಾದ ಕಾಂತಿಯುಳ್ಳವನೂ ಎಲ್ಲಾ ಲೋಕಗಳನ್ನೂ ಕಾಪಾಡುವವನೂ ಆಗಿದ್ದನು.

**ಅಥ ರಾಜಾ ದಶರಥಃ ಶ್ರುತ್ವಾ ಪುತ್ರೋದ್ಭವೋತ್ಸವಮ್ ।**
**ಆನಂದಾರ್ಣವಮಗ್ನೋಽಸಾವಾಯಯೌ ಗುರುಣಾ ಸಹ ॥ ೩೬ ॥**

**ರಾಮಂ ರಾಜೀವಪತ್ರಾಕ್ಷಂ ದೃಷ್ಟ್ವಾ ಹರ್ಷಾಶ್ರುಸಂಪ್ಲುತಃ ।**
**ಗುರುಣಾ ಜಾತಕರ್ಮಾಣಿ ಕರ್ತವ್ಯಾನಿ ಚಕಾರ ಸಃ ॥ ೩೭ ॥**

೩೬-೩೭. ಅನಂತರ ದಶರಥರಾಜನು (ತನಗೆ) ಪುತ್ರನು ಹುಟ್ಟಿದ್ದರ ಸಂತೋಷ ಸಮಾರಂಭದ ಸುದ್ದಿಯನ್ನು ಕೇಳಿ ಆನಂದಸಮುದ್ರದಲ್ಲಿ ಮುಳುಗಿ ಗುರುವಾದ (ವಸಿಷ್ಠ) ನೊಡನೆ ಬಂದನು. ಕಮಲದಂತೆ ಕಣ್ಣುಗಳುಳ್ಳ ರಾಮನನ್ನು ಕಂಡು ಆನಂದ ಬಾಷ್ಪದಿಂದ ಕೂಡಿದವನಾಗಿ ಗುರುವಿನ ಮೂಲಕ ಜಾತಕರ್ಮವೇ ಮುಂತಾದ ಮಾಡ ಬೇಕಾದ ಸಂಸ್ಕಾರಗಳನ್ನು ಮಾಡಿದನು.

**ಕೈಕೇಯಿ ಚಾಥ ಭರತಮಸೂತ ಕಮಲೇಕ್ಷಣಮ್ ।**
**ಸುಮಿತ್ರಾಯಾಂ ಯಮೌ ಜಾತೌ ಪೂರ್ಣೇಂದುಸದೃಶಾನನೌ ॥ ೩೮ ॥**
**ತದಾ ಗ್ರಾಮಸಹಸ್ರಾಣಿ ಬ್ರಾಹ್ಮಣೇಭ್ಯೋ ಮುದಾ ದದೌ ।**
**ಸುವರ್ಣಾನಿ ಚ ರತ್ನಾನಿ ವಾಸಾಂಸಿ ಸುರಭೀಃ ಶುಭಾಃ ॥ ೩೯ ॥**

೩೮-೩೯. ಅನಂತರ ಕಮಲದಂತೆ ನೇತ್ರವುಳ್ಳ ಕೈಕೇಯಿಯು ಭರತನನ್ನು ಹಡೆದಳು. ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳ ಇಬ್ಬರು (ಗಂಡುಮಕ್ಕಳು) ಸುಮಿತ್ರೆಯಲ್ಲಿ ಹುಟ್ಟಿದವರಾದರು. ಆಗ ಸಂತೋಷದಿಂದ (ರಾಜನು) ಬ್ರಾಹ್ಮಣರಿಗೆ ಸಹಸ್ರಸಂಖ್ಯೆಯ ಗ್ರಾಮಗಳನ್ನೂ, ಚಿನ್ನರತ್ನಾದಿಗಳನ್ನೂ ಬಟ್ಟೆಗಳನ್ನೂ ಶುಭಲಕ್ಷಣವಾದ ಗೋವುಗಳನ್ನೂ ದಾನಮಾಡಿದನು.

**ಯಸ್ಮಿನ್ ರಮನ್ತೇ ಮುನಯೋ ವಿದ್ಯಯಾ ಜ್ಞಾನವಿಪ್ಲವೇ ।**
**ತಂ ಗುರುಃ ಪ್ರಾಹ ರಾಮೇತಿ ರಮಣಾದ್ರಾಮ ಇತ್ಯಪಿ ॥೪೦॥**
**ಭರಣಾದ್ ಭರತೋ ನಾಮ ಲಕ್ಷ್ಮಣಂ ಲಕ್ಷಣಾನ್ವಿತಮ್ ।**
**ಶತ್ರುಘ್ನಂ ಶತ್ರುಹಂತಾರಮೇವಂ ಗುರುರಭಾಷತ ॥೪೧॥**

೪೦-೪೧. ಮುನಿಗಳು ವಿದ್ಯೆಯಿಂದ ಕೂಡಿದ ಜ್ಞಾನವೆಂಬ ತೆಪ್ಪದಲ್ಲಿ ಕುಳಿತು ಯಾವ (ಆನಂದಸಮುದ್ರ)ದಲ್ಲಿ ಕ್ರೀಡಿಸುತ್ತಿರುವರೋ ಅವನನ್ನು ಗುರುವಾದ (ವಸಿಷ್ಠನು) 'ರಾಮ'ನೆಂದು ಕರೆದನು. ಎಲ್ಲರನ್ನೂ ಆನಂದಗೊಳಿಸುವವನಾದ್ದರಿಂದಲೂ ರಾಮನೆನಿಸಿದನು. (ಕೈಕೇಯೀಪುತ್ರನು) ಭೂಮಿಯನ್ನು ಭರಿಸುವ ಸಾಮರ್ಥ್ಯಪೂರ್ಣನಾಗಿದ್ದುದರಿಂದ ಭರತನೆನಿಸಿದನು: ಸುಮಿತ್ರೆಯ ಪುತ್ರರಾದವರಲ್ಲಿ ಲಕ್ಷಣದಿಂದ ಕೂಡಿದವನು ಲಕ್ಷ್ಮಣನೆಂದೂ, ಶತ್ರುಸಂಹಾರಕನಾದವನು ಶತ್ರುಘ್ನನೆಂದೂ ಗುರುವಾದ (ವಸಿಷ್ಠನಿಂದ) ಕರೆಯಲ್ಪಟ್ಟರು.

**ಲಕ್ಷ್ಮಣೋ ರಾಮಚಂದ್ರೇಣ ಶತ್ರುಘ್ನೋ ಭರತೇನ ಚ ।**
**ದ್ವಂದ್ವೀಭೂಯ ಚರಂತೌ ತೌ ಪಾಯಸಾಂಶಾನುಸಾರತಃ ॥ ೪೨॥**
**ರಾಮಸ್ತು ಲಕ್ಷ್ಮಣೇನಾಥ ವಿಚರನ್ ಬಾಲಲೀಲಯಾ ।**
**ರಮಯಾಮಾಸ ಪಿತರೌ ಚೇಷ್ಟಿತೈರ್ಮುಗ್ಧಭಾಷಿತೈಃ ॥ ೪೩॥**

೪೨-೪೩. ಪಾಯಸಾಂಶಕ್ಕೆ ಅನುಗುಣವಾಗಿ ಲಕ್ಷ್ಮಣನು ರಾಮನೊಡನೆ ಮತ್ತು ಶತ್ರುಘ್ನನು ಭರತನೊಡನೆ ಜೋಡಿಯಾಗಿ ಓಡಾಡುತ್ತಾ ಇದ್ದರು. ರಾಮನಾದರೋ, ಲಕ್ಷ್ಮಣನೊಡನೆ ಬಾಲಲೀಲೆಗಳಿಂದ ಸಂಚರಿಸುತ್ತಾ ಆಟಪಾಟಗಳಿಂದಲೂ ಮುದ್ದು ಮಾತುಗಳಿಂದಲೂ ತಂದೆತಾಯಿಗಳನ್ನು ಸಂತೋಷಪಡಿಸುತ್ತಿದ್ದನು.

**ಭಾಲೇ ಸ್ವರ್ಣಮಯಾಶ್ವತ್ಥಪರ್ಣಮುಕ್ತಾಫಲಪ್ರಭಮ್**
**ಕಂಠೇ ರತ್ನಮಣಿವ್ರಾತಮಧ್ಯದ್ವೀಪಿನಖಾಂಚಿತಮ್ ॥ ೪೪ ॥**
**ಕರ್ಣಯೋಃ ಸ್ವರ್ಣಸಂಪನ್ನರತ್ನಾರ್ಜುನಸಟಾಲುಕಮ್ ।**
**ಶಿಂಜಾನಮಣಿಮಂಜೀರಕಟಿಸೂತ್ರಾಂಗದೈರ್ವೃತಮ್ ॥ ೪೫ ॥**
**ಸ್ಮಿತವಕ್ತ್ರಾಲ್ಪದಶನಮಿಂದ್ರನೀಲಮಣಿಪ್ರಭಮ್ ।**
**ಅಂಗಣೇ ರಿಂಗಮಾಣಂ ತಂ ತರ್ಣಕಾನನುಸರ್ವತಃ ।**
**ದೃಷ್ಟ್ವಾ ದಶರಥೋ ರಾಜಾ ಕೌಸಲ್ಯಾ ಮುಮುದೇ ತದಾ ॥ ೪೬ ॥**

೪೪-೪೬. ಹಣೆಯಲ್ಲಿ ಮುತ್ತಿನಮಣಿಗಳಂತೆ ಕಾಂತಿಯುಳ್ಳ ಚಿನ್ನದ ಅರಳಿ ಎಲೆಗಳು, ಕೊರಳಿನಲ್ಲಿ ರತ್ನಮಣಿಗಳ ನಡುವೆ ಪೋಣಿಸಲ್ಪಟ್ಟಿರುವ ಹುಲಿಯುಗುರುಗಳಿಂದ ಕೂಡಿದ ಸರ, ಎರಡು ಕಿವಿಗಳಲ್ಲಿ ಅರ್ಜುನವೃಕ್ಷದ ಎಲೆಗಳಂತೆ ಇರುವ ರತ್ನಮಯವಾದ ಚಿನ್ನದ ಕರ್ಣಾಭರಣಗಳು, ಝಣಝಣಗುಟ್ಟುತ್ತಿರುವ ಮಣಿಗಳ ಸಮೂಹದಿಂದ ಕೂಡಿದ ಉಡಿದಾರ, ತೋಳುಬಳೆಗಳು, ಮುಗುಳುನಗೆಯ ಹಾಗೂ ಪುಟ್ಟಹಲ್ಲುಗಳುಳ್ಳ ಬಾಯಿ, ಇವುಗಳಿಂದ ಕೂಡಿ ಇಂದ್ರನೀಲಮಣಿಯಂತೆ ಕಾಂತಿಯುಳ್ಳವನಾದ, ಅಂಗಳದಲ್ಲಿ ಎಳೆಗರುಗಳೊಡನೆ ಆಡವಾಡುತ್ತಿರುವ ರಾಮನನ್ನು ದಶರಥನೂ ಕೌಸಲ್ಯೆಯೂ ಕಂಡರು. ಮತ್ತು ಸಂತೋಷಗೊಂಡರು.

**ಭೋಕ್ಷ್ಯಮಾಣೋ ದಶರಥೋ ರಾಮಮೇಹೀತಿ ಚಾಸಕೃತ್ ।**
**ಆಹ್ವಯತ್ಯತಿಹರ್ಷೇಣ ಪ್ರೇಮ್ಣಾ ನಾಯಾತಿ ಲೀಲಯಾ ॥ ೪೭॥**
**ಆನಯೇತಿ ಚ ಕೌಸಲ್ಯಾಮಾಹ ಸಾ ಸಸ್ಮಿತಾ ಸುತಮ್ ।**
**ಧಾವತ್ಯಪಿ ನ ಶಕ್ನೋತಿ ಸ್ಪ್ರಷ್ಟುಂ ಯೋಗಿಮನೋಗತಮ್ ॥ ೪೮॥**

**ಪ್ರಹಸನ್ ಸ್ವಯಮಾಯಾತಿ ಕರ್ದಮಾಂಕಿತಪಾಣಿನಾ ।**
**ಕಿಂಚಿದ್ ಗೃಹೀತ್ವಾ ಕವಲಂ ಪುನರೇವ ಪಲಾಯತೇ ॥ ೪೯॥**

೪೭-೪೯. ಊಟಮಾಡಲು ಸಿದ್ಧನಾದ ದಶರಥನು ರಾಮನನ್ನು ಅತಿ ಸಂತೋಷದಿಂದಲೂ ಪ್ರೇಮದಿಂದಲೂ ಕೂಡಿ ಬಹಳಬಾರಿಗೆ ಬಾ- ಎಂದು ಕರೆಯುವನು. ಆದರೆ ಲೀಲೆಯಿಂದ ಕೂಡಿದ ಅವನು ಬರಲೊಲ್ಲನು. 'ಕರೆದುಕೊಂಡು ಬಾ' ಎಂದು ಕೌಸಲ್ಯೆಗೆ ಹೇಳಲು ಆಕೆಯು ನಗುಮುಖದಿಂದ ಮಗನನ್ನು ಕರೆದುಕೊಳ್ಳಲು ಓಡಿದರೂ ಯೋಗಿಗಳ ಮನಸ್ಸಿನಲ್ಲಿ ನೆಲೆಸಿರುವ ಅವನನ್ನು ಮುಟ್ಟಲು ಸಮರ್ಥಳಾಗಲಿಲ್ಲ. ಆಗ ತಾನಾಗಿಯೇ ಕೆಸರಾದ ಕೈಯಿಂದ ಕೂಡಿ ಸಮೀಪಕ್ಕೆ ಬರುವನು. ಸ್ವಲ್ಪವೇ ತುತ್ತನ್ನು ಸ್ವೀಕರಿಸಿ ಮತ್ತೆ ಓಡುವನು.

**ಕೌಸಲ್ಯಾ ಜನನೀ ತಸ್ಯ ಮಾಸಿ ಮಾಸಿ ಪ್ರಕುರ್ವತೀ ।**
**ವಾಯನಾನಿ ವಿಚಿತ್ರಾಣಿ ಸಮಲಂಕೃತ್ಯ ರಾಘವಮ್ ॥ ೫೦॥**
**ಅಪೂಪಾನ್ ಮೋದಕಾನ್ ಕೃತ್ವಾ ಕರ್ಣಶಷ್ಕುಳಿಕಾಸ್ತಥಾ ।**
**ಕರ್ಣಪೂರಾಂಶ್ಚ ವಿವಿಧಾನ್ ವರ್ಷವೃದ್ಧೌ ಚ ವಾಯನಮ್ ॥ ೫೧॥**
**ಗೃಹಕೃತ್ಯಂ ತಯಾ ತ್ಯಕ್ತಂ ತಸ್ಯ ಚಾಪಲ್ಯಕಾರಣಾತ್ ।**

೫೦-೫೧. ಆತನ ತಾಯಿಯಾದ ಕೌಸಲ್ಯೆಯು ಪ್ರತಿತಿಂಗಳಲ್ಲಿಯೂ ರಾಮನಿಗೆ ಅಲಂಕಾರಮಾಡಿ ಬಗೆಬಗೆಯಾದ ಬಾಗಿನಗಳನ್ನು ಕೊಡುತ್ತಿದ್ದಳು. ಕಡುಬುಗಳು, ಮೋದಕಗಳು ಕಿವಿಯಂತಿರುವ ಚಕ್ಕುಲಿಗಳು, ಪೂರಿಗಳೇ ಮುಂತಾದ ಅನೇಕವಿಧವಾದ (ತಿಂಡಿಗಳನ್ನೂ) ವರ್ಷದ ಹೆಚ್ಚಿನ ಸಂದರ್ಭದಲ್ಲಿ ವಿಶೇಷಬಾಗಿನಗಳನ್ನೂ (ಕೊಡುತ್ತಿದ್ದಳು) ಆ (ರಾಮನ) ಚೇಷ್ಟೆಯ ನಿಮಿತ್ತದಿಂದ ಆಕೆಯು ಮನೆಗೆಲಸಗಳನ್ನೆಲ್ಲ ಬಿಟ್ಟುಬಿಟ್ಟಳು.

**ಏಕದಾ ರಘುನಾಥೋಽಸೌ ಗತೋ ಮಾತರಮಂತಿಕೇ ।**
**ಭೋಜನಂ ದೇಹಿ ಮೇ ಮಾತರ್ನ ಶ್ರುತಂ ಕಾರ್ಯಸಕ್ತಯಾ ॥ ೫೨ ॥**
**ತತಃ ಕ್ರೋಧೇನ ಭಾಂಡಾನಿ ಲಗುಡೇನಾಹನತ್ತದಾ ।**
**ಶಿಕ್ಯಸ್ಥಂ ಪಾತಯಾಮಾಸ ಗವ್ಯಂ ಚ ನವನೀತಕಮ್ ॥೫೩॥**
**ಲಕ್ಷ್ಮಣಾಯ ದದೌ ರಾಮೋ ಭರತಾಯ ಯಥಾಕ್ರಮಮ್ ।**
**ಶತ್ರುಘ್ನಾಯ ದದೌ ಪಶ್ಚಾದ್ದಧಿ ದುಗ್ಧಂ ತಥೈವ ಚ ॥೫೪॥**

೫೨-೫೪. ಒಮ್ಮೆ ರಾಮನು ತಾಯಿಯ ಬಳಿಗೆ ಹೋಗಿ 'ಅಮ್ಮಾ' ನನಗೆ ಊಟಕ್ಕೆ ಬಡಿಸು' ಎಂದನು. ಕೆಲಸಗಳಲ್ಲಿ ವ್ಯಗ್ರಳಾಗಿದ್ದ ಆಕೆಗೆ ಅದು ಕೇಳಲಿಲ್ಲ. ಅನಂತರ ಕೋಪ

ದಿಂದ ಕೋಲು ತೆಗೆದುಕೊಂಡು (ಮೊಸರಿನ) ಮಡಿಕೆಗಳನ್ನು ಒಡೆದನು. ನೆಲವುಗಳ ಮೇಲಿದ್ದ ಮೊಸರು, ಬೆಣ್ಣೆಗಳನ್ನು ಕೆಡಪಿದನು. ಲಕ್ಷ್ಮಣನಿಗೂ ಅನಂತರ ಕ್ರಮವಾಗಿ ಭರತನಿಗೂ ಶತ್ರುಘ್ನನಿಗೂ ಮೊಸರು, ಹಾಲು, ಬೆಣ್ಣೆ - ಇವುಗಳನ್ನು ಕೊಟ್ಟನು.

**ಸೂದೇನ ಕಥಿತೇ ಮಾತ್ರೇ ಹಾಸ್ಯಂ ಕೃತ್ವಾ ಪ್ರಧಾವತಿ ।**
**ಆಗತಾಂ ತಾಂ ವಿಲೋಕ್ಯಾಥ ತತಃ ಸರ್ವೈಃ ಪಲಾಯಿತಮ್ ॥೫೫॥**
**ಕೌಸಲ್ಯಾ ಧಾವಮಾನಾಪಿ ಪ್ರಸ್ಖಲಂತೀ ಪದೇ ಪದೇ ।**
**ರಘುನಾಥಂ ಕರೇ ಧೃತ್ವಾ ಕಿಂಚಿನ್ನೋವಾಚ ಭಾಮಿನೀ ॥೫೬॥**
**ಬಾಲಭಾವಂ ಸಮಾಶ್ರಿತ್ಯ ಮಂದಂ ಮಂದಂ ರುರೋದ ಹ ।**

೫೫-೫೬. ಅಡಿಗೆಯವನು ರಾಮನ ತಾಯಿಗೆ ಈ ವಿಚಾರವನ್ನು ಹೇಳಲಾಗಿ ಹಾಸ್ಯ ಮಾಡಿಕೊಂಡು ಓಡಿದನು. ಆಕೆಯು ಬಂದದ್ದನ್ನು ಕಂಡು ಎಲ್ಲರೂ ಓಡಿಹೋಗಿ ಬಿಟ್ಟರು. ಸ್ತ್ರೀಯಾದ ಕೌಸಲ್ಯೆಯು (ಹಿಂಬಾಲಿಸಿ) ಓಡಿದಳಾದರೂ ಹೆಜ್ಜೆಹೆಜ್ಜೆಗೂ ಜಾರುತ್ತಾ ಕೊನೆಗೆ ರಾಮನನ್ನು ಕೈಯಲ್ಲಿ ಹಿಡಿದುಕೊಂಡಳು. ಆಗ ರಾಮನು ಏನೂ ಮಾತನಾಡಲಿಲ್ಲ. ಹುಡುಗತನವನ್ನಾಶ್ರಯಿಸಿ ಮೆಲ್ಲ ಮೆಲ್ಲನೆ ಅತ್ತುಬಿಟ್ಟನು.

**ತೇ ಸರ್ವೇ ಲಾಲಿತಾ ಮಾತ್ರಾ ಗಾಢಮಾಲಿಂಗ್ಯ ಯತ್ನತಃ ।**
**ಏವಮಾನಂದಸಂದೋಹಜಗದಾನಂದಕಾರಕಃ**
**ಮಾಯಾಬಾಲವಪುರ್ಧೃತ್ವಾ ರಮಯಾಮಾಸ ದಂಪತೀ ॥ ೫೮॥**

೫೭-೫೮. ಆಗ ಅವರೆಲ್ಲರೂ ತಾಯಿಯಿಂದ ಸಮಾಧಾನಮಾಡಲ್ಪಟ್ಟವರಾಗಿ ಭದ್ರವಾಗಿ ತಾಯಿಯನ್ನು ಅಪ್ಪಿಕೊಂಡರು. ಹೀಗೆ ಆನಂದದ ಗಟ್ಟಿಯಾದ ಜಗತ್ತಿಗೆಲ್ಲ ಆನಂದವನ್ನುಂಟುಮಾಡುವ (ರಾಮನು) ಮಾಯಾಬಾಲಕನಾಗಿ ತೋರಿಕೊಂಡು ತಂದೆತಾಯಿಗಳನ್ನು ಸಂತೋಷಗೊಳಿಸಿದನು.

**ಅಥ ಕಾಲೇನ ತೇ ಸರ್ವೇ ಕೌಮಾರಂ ಪ್ರತಿಪೇದಿರೇ ।**
**ಉಪನೀತಾ ವಸಿಷ್ಠೇನ ಸರ್ವವಿದ್ಯಾವಿಶಾರದಾಃ ॥ ೫೯ ॥**
**ಧನುರ್ವೇದೇ ಚ ನಿರತಾಃ ಸರ್ವಶಾಸ್ತ್ರಾರ್ಥವೇದಿನಃ ।**
**ಬಭೂವುರ್ಜಗತಾಂ ನಾಥಾ ಲೀಲಯಾ ನರರೂಪಿಣಃ ॥ ೬೦॥**

೫೯-೬೦. ಅನಂತರ ಕಾಲವು ಕಳೆದಂತೆಲ್ಲ ಅವರೆಲ್ಲರೂ ಕುಮಾರವಯಸ್ಸನ್ನು ಹೊಂದಿದರು. ವಸಿಷ್ಠರಿಂದ ಉಪನಯನಮಾಡಲ್ಪಟ್ಟವರಾಗಿ ಎಲ್ಲಾ ವಿದ್ಯೆಗಳಲ್ಲಿಯೂ ಜಾಣರಾಗಿ ಎಲ್ಲಾ ಶಾಸ್ತ್ರಾರ್ಥಗಳನ್ನೂ ಬಲ್ಲವರಾಗಿ (ವಿಶೇಷವಾಗಿ) ಧನುರ್ವೇದದ

ಅಭ್ಯಾಸದಲ್ಲಿ ತೊಡಗಿದವರಾಗಿ ಲೀಲೆಯಿಂದ ಧರಿಸಿದ ಮನುಷ್ಯಾಕಾರದಿಂದ ಜಗತ್ತಿನ ಒಡೆಯರಾಗಿ ವಿರಾಜಿಸುತ್ತಿದ್ದರು.

**ಲಕ್ಷ್ಮಣಸ್ತು ಸದಾ ರಾಮಮನುಗಚ್ಛತಿ ಸಾದರಮ್ ।**
**ಸೇವ್ಯಸೇವಕಭಾವೇನ ಶತ್ರುಘ್ನೋ ಭರತಂ ತಥಾ ॥ ೬೧॥**

೬೧. ಲಕ್ಷ್ಮಣನಾದರೊ, ಪ್ರೀತಿಪೂರ್ವಕವಾಗಿ ರಾಮನನ್ನು ಪೂಜ್ಯನೆಂದು ಭಾವಿಸಿ ಯಾವಾಗಲೂ ತಾನು ಸೇವಕನಾಗಿ ಅನುಸರಿಸುತ್ತಿದ್ದನು. ಹಾಗೆಯೇ ಶತ್ರುಘ್ನನು ಭರತನನ್ನು ಅನುಸರಿಸುತ್ತಿದ್ದನು.

**ರಾಮಶ್ಚಾಪಧರೋ ನಿತ್ಯಂ ತೂಣೀಬಾಣಾನ್ವಿತಃ ಪ್ರಭುಃ ।**
**ಅಶ್ವಾರೂಢೋ ವನಂ ಯಾತಿ ಮೃಗಯಾಯೈ ಸಲಕ್ಷ್ಮಣಃ ।**
**ಹತ್ವಾ ದುಷ್ಟಮೃಗಾನ್ ಸರ್ವಾನ್ ಪಿತ್ರೇ ಸರ್ವಂ ನ್ಯವೇದಯತ್ ॥ ೬೨॥**

೬೨. ಪ್ರಭುವಾದ ಶ್ರೀರಾಮನು ಧನುರ್ಬಾಣಧಾರಿಯಾಗಿ ಕುದುರೆಯನ್ನೇರಿ ಬೇಟೆಗಾಗಿ ಲಕ್ಷ್ಮಣನೊಡನೆ ಯಾವಾಗಲೂ ಕಾಡಿಗೆ ಹೋಗುವನು. ಅಲ್ಲಿ ಎಲ್ಲಾ ದುಷ್ಟ ಮೃಗಗಳನ್ನೂ ಕೊಂದು ಎಲ್ಲವನ್ನೂ ತಂದೆಗೆ ವಿಜ್ಞಾಪಿಸುವನು.

**ಪ್ರಾತರುತ್ಥಾಯ ಸುಸ್ನಾತಃ ಪಿತರಾವಭಿವಾದ್ಯ ಚ ।**
**ಪೌರಕಾರ್ಯಾಣಿ ಸರ್ವಾಣಿ ಕರೋತಿ ವಿನಯಾನ್ವಿತಃ ॥ ೬೩॥**
**ಬಂಧುಭಿಃ ಸಹಿತೋ ನಿತ್ಯಂ ಭುಕ್ತ್ವಾ ಮುನಿಭಿರನ್ವಹಮ್ ।**
**ಧರ್ಮಶಾಸ್ತ್ರರಹಸ್ಯಾನಿ ಶೃಣೋತಿ ವ್ಯಾಕರೋತಿ ಚ ॥ ೬೪॥**

೬೩-೬೪. ಬೆಳಿಗ್ಗೆ ಎದ್ದು ಚೆನ್ನಾಗಿ ಸ್ನಾನಮಾಡಿ ತಂದೆತಾಯಿಗಳಿಗೆ ನಮಸ್ಕರಿಸಿ ವಿನಯದಿಂದ ಕೂಡಿದವನಾಗಿ ಎಲ್ಲಾ ರಾಜ್ಯಭಾರದ ನಿರ್ವಹಣೆಯನ್ನೂ ಮಾಡುವನು. ಬಂಧುಗಳೊಡಗೂಡಿ ಊಟವಾದ ಅನಂತರ ಪ್ರತಿದಿನವೂ ಮುನಿಗಳ ಜೊತೆಯಲ್ಲಿ ಸೇರಿ ಧರ್ಮಶಾಸ್ತ್ರಗಳ ಗುಟ್ಟನ್ನೆಲ್ಲ ಕೇಳುವನು ; ಮತ್ತು ವಿವರಿಸುವನು.

**ಏವಂ ಪರಾತ್ಮಾ ಮನುಜಾವತಾರೋ**
**ಮನುಷ್ಯಲೋಕಾನನುಸೃತ್ಯ ಸರ್ವಮ್**
**ಚಕ್ರೇಽವಿಕಾರೀ ಪರಿಣಾಮಹೀನಃ**
**ವಿಚಾರ್ಯಮಾಣೇ ನ ಕರೋತಿ ಕಿಂಚಿತ್ ॥ ೬೫॥**

೬೫. ಈ ರೀತಿಯಾಗಿ ಪರಮಾತ್ಮನು ಮನುಷ್ಯಾವತಾರದಲ್ಲಿ ಮನುಷ್ಯಲೋಕದವರನ್ನೇ ಅನುಸರಿಸಿ ನಡೆಯುತ್ತಾ ತಾನು ಪರಿಣಾಮಗಳಿಲ್ಲದವನೂ ವಿಕಾರರಹಿತನೂ

ಆಗಿದ್ದುಕೊಂಡೇ ಎಲ್ಲವನ್ನೂ ಮಾಡುತ್ತಿದ್ದನು ; ಎಂದರೆ ವಿಚಾರಮಾಡಿ ನೋಡಿದರೆ (ನಿಜವಾಗಿ) ಏನನ್ನೂ ಮಾಡುತ್ತಿರಲಿಲ್ಲ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ**

**ತೃತೀಯಃ ಸರ್ಗಃ**

ಃಃಃಃಃಃಃಃಃಃಃ

# ನಾಲ್ಕನೆಯ ಸರ್ಗ

**ಶ್ರೀಮಹಾದೇವ ಉವಾಚ –**

**ಕದಾಚಿತ್ ಕೌಶಿಕೋಽಭ್ಯಾಗಾದಯೋಧ್ಯಾಂ ಜ್ವಲನಪ್ರಭಃ ।**
**ದ್ರಷ್ಟುಂ ರಾಮಂ ಪರಾತ್ಮಾನಂ ಜಾತಂ ಜ್ಞಾತ್ವಾ ಸ್ವಮಾಯಯಾ ॥ ೧ ॥**

೧. ಶ್ರೀಮಹಾದೇವನಿಂತೆಂದನು : ಒಮ್ಮೆ ತೇಜಸ್ವಿಯಾದ ವಿಶ್ವಾಮಿತ್ರನು ಪರಮಾತ್ಮನಾದ ರಾಮನು ತನ್ನ ಮಾಯೆಯಿಂದ (ಅಯೋಧ್ಯೆಯಲ್ಲಿ) ಹುಟ್ಟಿರುವನೆಂಬುದನ್ನು ತಿಳಿದು (ಅವನನ್ನು) ಕಾಣಲು ಅಲ್ಲಿಗೆ ಬಂದನು.

**ದೃಷ್ಟ್ವಾ ದಶರಥೋ ರಾಜಾ ಪ್ರತ್ಯುತ್ಥಾಯಾಚಿರೇಣ ತು ।**
**ವಸಿಷ್ಠೇನ ಸಮಾಗಮ್ಯ ಪೂಜಯಿತ್ವಾ ಯಥಾವಿಧಿ ॥ ೨ ॥**
**ಅಭಿವಾದ್ಯ ಮುನಿಂ ರಾಜಾ ಪ್ರಾಂಜಲಿರ್ಭಕ್ತಿನಮ್ರಧೀಃ ।**

೨. ದಶರಥರಾಜನು ಅವನನ್ನು ಕಂಡಕೂಡಲೆ ಮೇಲೆದ್ದು ವಸಿಷ್ಠರೊಡಗೂಡಿ ಬಂದು ವಿಧಿಪ್ರಕಾರವಾಗಿ ಆತನನ್ನು ಪೂಜಿಸಿ ನಮಸ್ಕರಿಸಿ ಕೈಮುಗಿದುಕೊಂಡು ಭಕ್ತಿಯಿಂದ ನಮ್ರನಾಗಿ ಹೀಗೆಂದನು :-

**ಕೃತಾರ್ಥೋಽಸ್ಮಿ ಮುನೀಂದ್ರಾಹಂ ತ್ವದಾಗಮನಕಾರಣಾತ್ ॥ ೩ ॥**
**ತ್ವದ್ವಿಧಾ ಯದ್ಗೃಹಂ ಯಾಂತಿ ತತ್ರೈವಾಯಾಂತಿ ಸಂಪದಃ ।**
**ಯದರ್ಥಮಾಗತೋಽಸಿ ತ್ವಂ ಬ್ರೂಹಿ ಸತ್ಯಂ ಕರೋಮಿ ತತ್ ॥ ೪ ॥**

೩-೪. 'ಎಲೈ ಮುನಿಶ್ರೇಷ್ಠನೆ, ನೀನು ಬಂದ ನಿಮಿತ್ತದಿಂದ ನಾನು ಕೃತಾರ್ಥನಾಗಿರುವೆನು' ನಿಮ್ಮಂಥ ಮಹಾತ್ಮರು ಯಾವ ಮನೆಯನ್ನು ಹೋಗುವರೋ ಅಲ್ಲಿಗೇ ಸಂಪತ್ತುಗಳೆಲ್ಲವೂ ಬರುವವು. ನೀನು ಏತಕ್ಕಾಗಿ ಬಂದಿರುವೆ ? ದಯಪಿಟ್ಟು ಹೇಳು, ನಾನು ಸತ್ಯವಾಗಿಯೂ ಅದನ್ನು ನಡೆಯಿಸಿಕೊಡುವೆನು.

**ವಿಶ್ವಾಮಿತ್ರೋಽಪಿ ತಂ ಪ್ರೀತಃ ಪ್ರತ್ಯುವಾಚ ಮಹಾಮತಿಃ ।**
**ಅಹಂ ಪರ್ವಣಿ ಸಂಪ್ರಾಪ್ತೇ ದೃಷ್ಟ್ವಾ ಯಷ್ಟುಂ ಸುರಾನ್ ಪಿತೄನ್ ॥ ೫ ॥**
**ಯದಾರಭೇ ತದಾ ದೈತ್ಯಾ ವಿಘ್ನಂ ಕುರ್ವಂತಿ ನಿತ್ಯಶಃ ।**
**ಮಾರೀಚಶ್ಚ ಸುಬಾಹುಶ್ಚಾಪರೇ ಚಾನುಚರಾಸ್ತಯೋಃ ॥ ೬ ॥**
**ಅತಸ್ತಯೋರ್ವಧಾರ್ಥಾಯ ಜ್ಯೇಷ್ಠಂ ರಾಮಂ ಪ್ರಯಚ್ಛ ಮೇ ।**
**ಲಕ್ಷ್ಮಣೇನ ಸಹ ಭ್ರಾತ್ರಾ ತವ ಶ್ರೇಯೋ ಭವಿಷ್ಯತಿ ॥ ೭ ॥**
**ವಸಿಷ್ಠೇನ ಸಹಾಮಂತ್ರ್ಯ ದೀಯತಾಂ ಯದಿ ರೋಚತೇ ।**

೫-೭. ಮಹಾಬುದ್ಧಿಶಾಲಿಯಾದ ವಿಶ್ವಾಮಿತ್ರನೂ ಸಂತುಷ್ಟನಾಗಿ ಅವನನ್ನು ಕುರಿತು ಹೀಗೆಂದನು. (ಎಲೈ ರಾಜನೆ) ನಾನು ಪರ್ವಕಾಲವು ಬರಲಾಗಿ ದೇವತೆಗಳು, ಪಿತೃಗಳು ಇವರ ಪ್ರೀತಿಗಾಗಿ ಯಜ್ಞಮಾಡಲಾರಂಭಿಸಿದೊಡನೆಯೇ ಮಾರೀಚ ಮತ್ತು ಸುಬಾಹು ಎಂಬುವರೂ ಅವರ ಅನುಯಾಯಿಗಳೂ ಆದ ದೈತ್ಯರು ಯಾವಾಗಲೂ ವಿಘ್ನವನ್ನುಂಟುಮಾಡುತ್ತಿರುವರು. ಆದ್ದರಿಂದ ಅವರಿಬ್ಬರ ವಧೆಗಾಗಿ ಸಹೋದರನಾದ ಲಕ್ಷ್ಮಣನೊಡಗೂಡಿದ, ನಿನ್ನ ಹಿರಿಯ ಮಗನಾದ ರಾಮನನ್ನು ನನಗೆ ಕೊಡು. (ಇದರಿಂದ) ನಿನಗೆ ಶ್ರೇಯಸ್ಸು ಉಂಟಾಗಲಿದೆ. ವಸಿಷ್ಠರೊಡನೆ ಕಲೆತು ಆಲೋಚಿಸಿ ನಿನಗೆ ಒಪ್ಪಾದರೆ ಹಾಗೆ ಮಾಡು.

**ಪಪ್ರಚ್ಛ ಗುರಮೇಕಾಂತೇ ರಾಜಾ ಚಿಂತಾಪರಾಯಣಃ ॥ ೮ ॥**
**ಕಿಂ ಕರೋಮಿ ಗುರೋ ರಾಮಂ ತ್ಯಕ್ತುಂ ನೋತ್ಸಹತೇ ಮನಃ ।**
**ಬಹುವರ್ಷಸಹಸ್ರಾಂತೇ ಕಷ್ಟೇನೋತ್ಪಾದಿತಾಃ ಸುತಾಃ ॥ ೯ ॥**
**ಚತ್ವಾರೋಽಮರತುಲ್ಯಾಸ್ತೇ ತೇಷಾಂ ರಾಮೋಽತಿವಲ್ಲಭಃ ।**
**ರಾಮಸ್ತ್ವಿತೋ ಗಚ್ಛತಿ ಚೇನ್ನ ಜೀವಾಮಿ ಕಥಂಚನ ॥ ೧೦ ॥**
**ಪ್ರತ್ಯಾಖ್ಯಾತೋ ಯದಿ ಮುನಿಃ ಶಾಪಂ ದಾಸ್ಯತ್ಯಸಂಶಯಃ ।**
**ಕಥಂ ಶ್ರೇಯೋ ಭವೇನ್ಮಹ್ಯಂ ಅಸತ್ಯಂ ಚಾಪಿ ನ ಸ್ಪೃಶೇತ್ ॥ ೧೧ ॥**

೮-೧೧. ಚಿಂತಾಕುಲನಾದ ರಾಜನು ಗುರುವಾದ ವಸಿಷ್ಠನನ್ನು ಹೀಗೆಂದು ಕೇಳಿದನು. 'ಗುರುವೆ, ನಾನು ಈಗೇನು ಮಾಡಲಿ ? ರಾಮನನ್ನು ಬಿಟ್ಟಿರಲು ನನ್ನ ಮನಸ್ಸು ಒಪ್ಪುವಂತಿಲ್ಲ. ಅನೇಕ ಸಾವಿರವರ್ಷಗಳ ಕಾಲ ಕಾದು ಕಡೆಗೆ ಬಹಳ ಕಷ್ಟದಿಂದ (ಯಜ್ಞದ ಫಲವಾಗಿ) ಮಕ್ಕಳನ್ನು ಪಡೆದುಕೊಂಡಾಯಿತು. ದೇವಸಮಾನರಾದ ಆ ನಾಲ್ವರಲ್ಲಿ ರಾಮನು ನನಗೆ ತುಂಬ ಪ್ರಿಯನಾಗಿರುವನು. ರಾಮನು ಇಲ್ಲಿಂದ ಹೊರಟದ್ದೇ ಆದರೆ ಹೇಗೂ ನಾನು ಜೀವಿಸಲಾರೆನು. ಒಂದು ವೇಳೆ ಮುನಿಯನ್ನು ತಿರಸ್ಕರಿ

ಸಿದ್ದೇ ಆದರೆ ಆತನು ಶಾಪವನ್ನು ಕೊಡುವನು. ಈ ವಿಷಯದಲ್ಲಿ ಸಂಶಯವಿಲ್ಲ. ಈಗ ನನಗೆ ಶ್ರೇಯಸ್ಸಾಗುವ ಬಗೆ ಹೇಗೆ ? ಸುಳ್ಳು ಮಾತೂ ನನಗೆ ಸೋಂಕಬಾರದಲ್ಲವೆ?

**ವಸಿಷ್ಠ ಉವಾಚ-**

**ಶೃಣು ರಾಜನ್ ದೇವಗುಹ್ಯಂ ಗೋಪನೀಯಂ ಪ್ರಯತ್ನತಃ ।**
**ರಾಮೋ ನ ಮಾನುಷೋ ಜಾತಃ ಪರಮಾತ್ಮಾ ಸನಾತನಃ ॥ ೧೨ ॥**
**ಭೂಮೇರ್ಭಾರಾವತಾರಾಯ ಬ್ರಹ್ಮಣಾ ಪ್ರಾರ್ಥಿತಃ ಪುರಾ ।**
**ಸ ಏವ ಜಾತೋ ಭವನೇ ಕೌಸಲ್ಯಾಯಾಂ ತವಾನಘ ॥ ೧೩ ॥**
**ತ್ವಂ ತು ಪ್ರಜಾಪತಿಃ ಪೂರ್ವಂ ಕಶ್ಯಪೋ ಬ್ರಹ್ಮಣಃ ಸುತಃ ।**
**ಕೌಸಲ್ಯಾ ಚಾದಿತಿರ್ದೇವಮಾತಾ ಪೂರ್ವಂ ಯಶಸ್ವಿನೀ ॥ ೧೪ ॥**

೧೨-೧೪. ವಸಿಷ್ಠನಿಂತೆಂದನು : ಎಲೈ ರಾಜನೆ, ದೇವತೆಗಳಿಗೂ ರಹಸ್ಯವೆನಿಸಿರುವ ಮತ್ತು ಪ್ರಯತ್ನಪೂರ್ವಕವಾಗಿ ಗೋಪ್ಯವಾಗಿಟ್ಟುಕೊಳ್ಳಬೇಕಾಗಿರುವ ವಿಷಯವನ್ನು ಕೇಳು. ಏನೆಂದರೆ : ರಾಮನು ಮನುಷ್ಯನಲ್ಲ. ಸನಾತನನಾದ ಪರಮಾತ್ಮನು. ಭೂಭಾರವನ್ನು ಇಳಿಸುವದಕ್ಕಾಗಿ ಹಿಂದೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟು ಅವನೇ ಈಗ ಕೌಸಲ್ಯೆಯ (ಗರ್ಭದಲ್ಲಿ) ನಿಮ್ಮ ಮನೆಯಲ್ಲಿ ಹುಟ್ಟಿರುತ್ತಾನೆ. ಎಲೈ ಪಾಪರಹಿತನೆ, ನೀನಾದರೋ ಹಿಂದೆ ಬ್ರಹ್ಮಪುತ್ರನಾದ ಕಶ್ಯಪನೆಂಬ ಪ್ರಜಾಪತಿಯಾಗಿದ್ದೆ. ಕೀರ್ತಿವಂತಳಾದ ಕೌಸಲ್ಯೆಯು ದೇವಮಾತೆಯಾದ ಅದಿತಿಯಾಗಿದ್ದಳು.

**ಭವಂತೌ ತಪ ಉಗ್ರಂ ವೈ ತೇಪಾಥೇ ಬಹುವತ್ಸರಮ್ ।**
**ಅಗ್ರಾಮ್ಯವಿಷಯೌ ವಿಷ್ಣುಪೂಜಾಧ್ಯಾನೈಕತತ್ಪರೌ ॥ ೧೫ ॥**
**ತದಾ ಪ್ರಸನ್ನೋ ಭಗವಾನ್ ವರದೋ ಭಕ್ತವತ್ಸಲಃ**
**ವೃಣೀಷ್ವ ವರಮಿತ್ಯುಕ್ತಃ ತ್ವಂ ಮೇ ಪುತ್ರೋ ಭವಾಽಮಲ ॥ ೧೬ ॥**
**ಇತಿ ತ್ವಯಾ ಯಾಚಿತೋಽಸೌ ಭಗವಾನ್ ಭೂತಭಾವನಃ**
**ತಥೇತ್ಯುಕ್ತ್ವಾಽದ್ಯ ಪುತ್ರಸ್ತೇ ಜಾತೋ ರಾಮಃ ಸ ಏವ ಹಿ ॥ ೧೭ ॥**

೧೫-೧೭. ನೀವಿಬ್ಬರೂ ಬಹಳ ವರ್ಷಗಳ ಕಾಲ ಸಾಂಸಾರಿಕವಾದ ಸುಖಗಳನ್ನು ತ್ಯಜಿಸಿ ವಿಷ್ಣುಪೂಜೆ, ಧ್ಯಾನಗಳಲ್ಲಿಯೇ ನಿರತರಾಗಿ ಉಗ್ರವಾದ ತಪಸ್ಸನ್ನೂ ಕೈಗೊಂಡಿರಿ. ಆಗ ಭಗವಂತನೂ ಭಕ್ತವತ್ಸಲನೂ ವರಪ್ರದನೂ ಆದ ( ನಾರಾಯಣನು) ಪ್ರಸನ್ನನಾಗಿ 'ವರವನ್ನು ಕೇಳಿಕೊ' ಎಂದನು. ಆಗ್ಗೆ 'ಪರಿಶುದ್ದನೆ, ನೀನೇ ನನಗೆ ಮಗನಾಗು' ಎಂದು ನಿನ್ನಿಂದ ಪ್ರಾರ್ಥಿಸಲ್ಪಟ್ಟ ಭೂತಗಳ ಜನಕನಾದ ಭಗವಂತನು

'ಹಾಗೇ ಆಗಲಿ' - ಎಂದು ಹೇಳಿ ಈಗ ಅವನೇ ನಿನ್ನ ಮಗನಾದ ರಾಮನಾಗಿ ಹುಟ್ಟಿರುತ್ತಾನೆ.

**ಶೇಷಸ್ತು ಲಕ್ಷ್ಮಣೋ ರಾಜನ್ ರಾಮಮೇವಾನ್ವಪದ್ಯತ ।**
**ಜಾತೌ ಭರತಶತ್ರುಘ್ನೌ ಶಂಖಚಕ್ರೇ ಗದಾಭೃತಃ ॥ ೧೮॥**
**ಯೋಗಮಾಯಾಽಪಿ ಸೀತೇತಿ ಜಾತಾ ಜನಕನಂದಿನೀ ।**

೧೮. ಎಲೈ ರಾಜನೆ, ಆದಿಶೇಷನೇ ಲಕ್ಷ್ಮಣನಾಗಿ ಅವತರಿಸಿ ರಾಮನನ್ನೇ ಅನುಸರಿಸಿರುತ್ತಾನೆ. ಗದಾಧರನಾದ (ನಾರಾಯಣನ) ಶಂಖಚಕ್ರಗಳೇ ಭರತ ಶತ್ರುಘ್ನರಾಗಿ ಅವತಾರಮಾಡಿದ್ದಾರೆ. ಜನಕರಾಜನ ಮಗಳಾದ ಸೀತೆಯಾಗಿ ಯೋಗ ಮಾಯೆಯೇ ಹುಟ್ಟಿರುವಳು.

**ವಿಶ್ವಾಮಿತ್ರೋಽಪಿ ರಾಮಾಯ ತಾಂ ಯೋಜಯಿತುಮಾಗತಃ ।**
**ಏತದ್ ಗುಹ್ಯತಮಂ ರಾಜನ್ ನ ವಕ್ತವ್ಯಂ ಕದಾಚನ ॥ ೧೯॥**
**ಅತಃ ಪ್ರೀತೇನ ಮನಸಾ ಪೂಜಯಿತ್ವಾಥ ಕೌಶಿಕಮ್**
**ಪ್ರೇಷಯಸ್ವ ರಮಾನಾಥಂ ರಾಘವಂ ಸಹಲಕ್ಷ್ಮಣಮ್ ॥ ೨೦॥**

೧೯-೨೦. ವಿಶ್ವಾಮಿತ್ರನೂ ಕೂಡ ಆಕೆಯನ್ನು ರಾಮನಿಗೆ ಕೂಡಿಸುವದಕ್ಕಾಗಿಯೇ ಬಂದಿರುತ್ತಾನೆ. ಎಲೈ ರಾಜನೆ, ಇದು ಅತಿರಹಸ್ಯವು. ಯಾರಿಗೂ ಹೇಳಬಾರದು. ಆದ್ದರಿಂದ ಕೌಶಿಕಮುನಿಯನ್ನು ಪೂಜಿಸಿ ಒಳ್ಳೆಯ ಸಂತೃಪ್ತಮನಸ್ಸಿನಿಂದ ಲಕ್ಷ್ಮೀಪತಿಯಾದ ರಾಮನನ್ನು ಲಕ್ಷ್ಮಣನೊಡನೆ ಕಳುಹಿಸಿಕೊಡುವವನಾಗು.

**ವಸಿಷ್ಠೇನೈವಮುಕ್ತಸ್ತು ರಾಜಾ ದಶರಥಸ್ತದಾ**
**ಕೃತಕೃತ್ಯಮಿವಾತ್ಮಾನಂ ಮೇನೇ ಪ್ರಮುದಿತಾಂತರಃ ॥ ೨೧ ॥**
**ಆಹೂಯ ರಾಮರಾಮೇತಿ ಲಕ್ಷ್ಮಣೇತಿ ಚ ಸಾದರಮ್**
**ಆಲಿಂಗ್ಯ ಮೂರ್ಧ್ನ್ಯವಘ್ರಾಯ ಕೌಶಿಕಾಯ ಸಮರ್ಪಯತ್ ॥ ೨೨ ॥**

೨೧-೨೨. ವಸಿಷ್ಠರಿಂದ ಈ ರೀತಿಯಾಗಿ ಬೋಧಿಸಲ್ಪಟ್ಟ ದಶರಥರಾಜನು ಒಳಗೆ ಸಂತುಷ್ಟವಾದ ಹೃದಯವುಳ್ಳವನಾಗಿ ತನ್ನನ್ನು ಕೃತಕೃತ್ಯನೆಂದೇ ಭಾವಿಸಿಕೊಂಡನು. 'ರಾಮ, ಲಕ್ಷ್ಮಣ, ಬನ್ನಿರಿ'- ಎಂದು ಪ್ರೇಮಪೂರ್ವಕವಾಗಿ ಕರೆದು ಆಲಂಗಿಸಿಕೊಂಡು ನೆತ್ತಿಯಲ್ಲಿ ಮೂಸಿನೋಡಿ ವಿಶ್ವಾಮಿತ್ರನಿಗೆ ಒಪ್ಪಿಸಿದನು.

**ತತೋಽತಿಹೃಷ್ಟೋ ಭಗವಾನ್ ವಿಶ್ವಾಮಿತ್ರಃ ಪ್ರತಾಪವಾನ್ ।**
**ಆಶೀರ್ಭಿರಭಿನಂದ್ಯಾಥ ಆಗತೌ ರಾಮಲಕ್ಷ್ಮಣೌ ॥ ೨೩॥**
**ಗೃಹೀತ್ವಾ ಚಾಪತೂಣೀರಬಾಣಖಡ್ಗಧರೌ ಯಯೌ ।**

೨೩. ಅನಂತರ ತುಂಬ ಸಂತೋಷಗೊಂಡ ಪೂಜ್ಯನಾದ ಪ್ರತಾಪಶಾಲಿಯಾದ ವಿಶ್ವಾಮಿತ್ರನು ತನ್ನೊಡನೆ ಬಂದಂಥ, ಬಿಲ್ಲು - ಬತ್ತಳಿಕೆ- ಬಾಣ-ಕತ್ತಿಗಳನ್ನು ಧರಿಸಿರುವ,

ರಾಮಲಕ್ಷ್ಮಣರನ್ನು ಆಶೀರ್ವಾದಗಳಿಂದ ಅಭಿನಂದಿಸಿ ಅವರನ್ನು ಕರೆದುಕೊಂಡು ಹೊರಟನು.

**ಕಿಂಚಿದ್ದೇಶಮತಿಕ್ರಮ್ಯ ರಾಮಮಾಹೂಯ ಭಕ್ತಿತಃ ॥ ೨೪॥**
**ದದೌ ಬಲಾಂ ಚಾತಿಬಲಾಂ ವಿದ್ಯೇ ದ್ವೇ ದೇವನಿರ್ಮಿತೇ ।**
**ಯಯೋರ್ಗ್ರಹಣಮಾತ್ರೇಣ ಕ್ಷುತ್ ಕ್ಷಾಮಾದಿ ನ ಜಾಯತೇ ॥ ೨೫॥**

೨೪-೨೫. ಸ್ವಲ್ಪ ದೂರ ದಾಟಿದವನಾಗಿ (ವಿಶ್ವಾಮಿತ್ರನು) ಭಕ್ತಿಯಿಂದ ರಾಮನನ್ನು ಕರೆದು- ಯಾವ ಎರಡು ವಿದ್ಯೆಗಳನ್ನು ಸ್ವೀಕರಿಸಿದ್ದರಿಂದ ಹಸಿವು ಸಂಕಟಗಳುಂಟಾಗುವದಿಲ್ಲವೋ, ಅಂಥ ದೇವನಿರ್ಮಿತವಾದ ಬಲಾ, ಅತಿಬಲಾ ಎಂಬ ಎರಡು ವಿದ್ಯೆಗಳನ್ನು ಅನುಗ್ರಹಿಸಿದನು.

**ತತ ಉತ್ತೀರ್ಯ ಗಂಗಾಂ ತೇ ತಾಟಕಾವನಮಾಗಮನ್ ।**
**ವಿಶ್ವಾಮಿತ್ರಸ್ತದಾ ಪ್ರಾಹ ರಾಮಂ ಸತ್ಯಪರಾಕ್ರಮಮ್ ॥ ೨೬॥**
**ಅತ್ರಾಸ್ತಿ ತಾಟಕಾ ನಾಮ ರಾಕ್ಷಸೀ ಕಾಮರೂಪಿಣೀ ।**
**ಬಾಧತೇ ಲೋಕಮಖಿಲಂ ಜಹಿ ತಾಮವಿಚಾರಯನ್ ॥ ೨೭॥**

೨೬-೨೭. ಅನಂತರ ಅವರುಗಳು ಗಂಗೆಯನ್ನು ದಾಟಿದ ಮೇಲೆ ತಾಟಕೆಯ ವನಕ್ಕೆ ಬಂದರು. ಆಗ ಸತ್ಯಪರಾಕ್ರಮನಾದ ರಾಮನನ್ನು ಕುರಿತು ವಿಶ್ವಾಮಿತ್ರನು ''ಇಲ್ಲಿ ತಾಟಕೆಯೆಂಬ ಇಚ್ಛಾರೂಪವನ್ನು ಧರಿಸಬಲ್ಲ ರಾಕ್ಷಸಿಯಿದ್ದಾಳೆ. ಈಕೆಯು ಜನರಿಗೆಲ್ಲ ತೊಂದರೆಯುಂಟುಮಾಡುತ್ತಿದ್ದಾಳೆ. ಅವಳನ್ನು ಹೆಂಗಸೆಂದು ಪರಿಗಣಿಸದೆ (ಕ್ರೂರಳೆಂದೇ ತಿಳಿದು) ಕೊಲ್ಲುವವನಾಗು'' ಎಂದು ಹೇಳಿದನು.

**ತಥೇತಿ ಧನುರಾದಾಯ ಸಗುಣಂ ರಘುನಂದನಃ ।**
**ಟಂಕಾರಮಕರೋತ್ತೇನ ಶಬ್ದೇನಾಪೂರಯದ್ ವನಮ್ ॥ ೨೮॥**
**ತಚ್ಛ್ರುತ್ವಾಸಹಮಾನಾ ಸಾ ತಾಟಕಾ ಘೋರರೂಪಿಣೀ ।**
**ಕ್ರೋಧಸಂಮೂರ್ಛಿತಾ ರಾಮಮಭಿದುದ್ರಾವ ಮೇಘವತ್ ॥ ೨೯॥**

೨೮-೨೯. ಹಾಗೆಯೇ ಆಗಲೆಂದು ಹುರಿಗಟ್ಟಿದ ಬಿಲ್ಲನ್ನು ತೆಗೆದುಕೊಂಡು ರಾಮನು ಟಂಕಾರವನ್ನು ಮಾಡಿದನು. ಆ ಶಬ್ದದಿಂದ ಕಾಡೆಲ್ಲವೂ ಮೊಳಗಿತು. ಅದನ್ನು ಕೇಳಿ ಸಹಿಸಲಾರದೆ ಭಯಂಕರರೂಪಳಾದ ಆ ತಾಟಕೆಯು ಕೋಪದಿಂದ ಅಮಲೇರಿದವಳಾಗಿ ಮೇಘದಂತೆ ರಾಮನಿಗೆ ಇದಿರಾಗಿ ನುಗ್ಗಿದಳು.

**ತಾಮೇಕೇನ ಶರೇಣಾಶು ತಾಡಯಾಮಾಸ ವಕ್ಷಸಿ ।**
**ಪಪಾತ ವಿಪಿನೇ ಘೋರಾ ವಮಂತೀ ರುಧಿರಂ ಬಹು ॥ ೩೦॥**
**ತತೋऽತಿಸುಂದರೀ ಯಕ್ಷೀ ಸರ್ವಾಭರಣಭೂಷಿತಾ ।**

**ಶಾಪಾತ್ ಪಿಶಾಚತಾಂ ಪ್ರಾಪ್ತಾ ಮುಕ್ತಾ ರಾಮಪ್ರಸಾದತಃ ।**
**ನತ್ವಾ ರಾಮಂ ಪರಿಕ್ರಮ್ಯ ಗತಾ ರಾಮಾಜ್ಞಯಾ ದಿವಮ್ ॥ ೩೧॥**

೩೦-೩೧. ಕೂಡಲೆ (ರಾಮನು) ಆಕೆಯನ್ನು ಒಂದೇ ಬಾಣದಿಂದ ಎದೆಯಲ್ಲಿ ಹೊಡೆದನು. ಆ ಘೋರಳಾದ (ರಕ್ಕಸಿಯು) ಬಹಳವಾಗಿ ರಕ್ತವನ್ನು ಕಾರುತ್ತಾ ಕಾಡಿನಲ್ಲಿ ಸತ್ತುಬಿದ್ದಳು. ಅನಂತರ ಅತ್ಯಂತ ಸುಂದರಿಯೂ ಸರ್ವವಿಧವಾದ ಒಡವೆಗಳಿಂದ ಅಲಂಕೃತಳೂ ಆಗಿದ್ದ - ಹಿಂದೆ ಶಾಪದಿಂದ ಪಿಶಾಚಜನ್ಮವನ್ನು ಹೊಂದಿದ್ದ - ಯಕ್ಷಸ್ತ್ರೀಯು ರಾಮನ ದಯೆಯಿಂದ ಬಿಡುಗಡೆಯನ್ನು ಹೊಂದಿ ರಾಮನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ರಾಮನ ಅಪ್ಪಣೆಯಂತೆ ಸ್ವರ್ಗಲೋಕಕ್ಕೆ ಹೊರಟುಹೋದಳು.

**ತತೋಽತಿಹೃಷ್ಟಃ ಪರಿರಭ್ಯ ರಾಮಂ**
**ಮೂರ್ಧನ್ಯವಘ್ರಾಯ ವಿಚಿಂತ್ಯ ಕಿಂಚಿತ್ ।**
**ಸರ್ವಾಸ್ತ್ರಜಾಲಂ ಸರಹಸ್ಯಮಂತ್ರಂ**
**ಪ್ರೀತ್ಯಾಭಿರಾಮಾಯ ದದೌ ಮುನೀಂದ್ರಃ ॥ ೩೨॥**

೩೨. ಅನಂತರ ಮುನಿಶ್ರೇಷ್ಠನಾದ (ವಿಶ್ವಾಮಿತ್ರನು) ಬಹಳ ಸಂತೋಷಗೊಂಡವನಾಗಿ ರಾಮನನ್ನು ತಬ್ಬಿಕೊಂಡು ತಲೆಯಲ್ಲಿ ಮೂಸಿನೋಡಿ ಏನನ್ನೋ ಮನಸ್ಸಿನಲ್ಲಿ ಆಲೋಚಿಸಿ ರಹಸ್ಯಮಂತ್ರಗಳಿಂದ ಕೂಡಿದ ಎಲ್ಲಾ ಅಸ್ತ್ರವಿದ್ಯೆಗಳ ಸಮೂಹವನ್ನೂ ಪ್ರೀತಿಯಿಂದ ಶ್ರೀರಾಮನಿಗೆ ದಯಪಾಲಿಸಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ ಚತುರ್ಥಃ ಸರ್ಗಃ**

ಃಃಃಃಃಃಃಃಃಃಃ

# ಐದನೆಯ ಸರ್ಗ

**ಶ್ರೀಮಹಾದೇವ ಉವಾಚ -**

**ತತ್ರ ಕಾಮಾಶ್ರಮೇ ರಮ್ಯೇ ಕಾನನೇ ಮುನಿಸಂಕುಲೇ ।**
**ಉಷಿತ್ವಾ ರಜನೀಮೇಕಾಂ ಪ್ರಭಾತೇ ಪ್ರಸ್ಥಿತಾಃ ಶನೈಃ ॥ ೧ ॥**

೧. ಶ್ರೀಮಹಾದೇವನಿಂತೆಂದನು : (ವಿಶ್ವಾಮಿತ್ರಾದಿಗಳು) ಮುನಿಗಳಿಂದ ತುಂಬಿದ್ದ ರಮ್ಯವಾದ ಆ ಕಾಮಾಶ್ರಮದಲ್ಲಿ ಒಂದು ರಾತ್ರಿ ತಂಗಿದ್ದು ಬೆಳಗ್ಗೆ ಮೆಲ್ಲನೆ ಮುಂದಕ್ಕೆ ಹೊರಟವರಾದರು.

**ಸಿದ್ಧಾಶ್ರಮಂ ಗತಾಃ ಸರ್ವೇ ಸಿದ್ಧಚಾರಣಸೇವಿತಮ್ ।**
**ವಿಶ್ವಾಮಿತ್ರೇಣ ಸಂದಿಷ್ಟಾ ಮುನಯಸ್ತನ್ನಿವಾಸಿನಃ ॥ ೨ ॥**
**ಪೂಜಾಂ ಚ ಮಹತೀಂ ಚಕ್ರುಃ ರಾಮಲಕ್ಷ್ಮಣಯೋರ್ದ್ರುತಮ್ ।**

೨. ಎಲ್ಲರೂ ಕೂಡಿ ಸಿದ್ಧಚಾರಣರಿಂದ ಸೇವಿಸಲ್ಪಟ್ಟ ಸಿದ್ಧಾಶ್ರಮಕ್ಕೆ ಹೋದರು. ವಿಶ್ವಾಮಿತ್ರನಿಂದ ಅಪ್ಪಣೆಮಾಡಲ್ಪಟ್ಟ ಅಲ್ಲಿ ವಾಸಿಸುತ್ತಿದ್ದ ಋಷಿಗಳೆಲ್ಲರೂ ಜಾಗ್ರತೆಯಾಗಿ ರಾಮಲಕ್ಷ್ಮಣರಿಗೆ ಹೆಚ್ಚಿನದಾದ ಪೂಜೆಯನ್ನು ಮಾಡಿದರು.

**ಶ್ರೀರಾಮಃ ಕೌಶಿಕಂ ಪ್ರಾಹ ಮುನೇ ದೀಕ್ಷಾಂ ಪ್ರವಿಶ್ಯತಾಮ್ ।**
**ದರ್ಶಯಸ್ವ ಮಹಾಭಾಗ ಕುತಸ್ತೌ ರಾಕ್ಷಸಾಧಮೌ ॥ ೩ ॥**
**ತಥೇತ್ಯುಕ್ತ್ವಾ ಮುನಿರ್ಯಷ್ಟುಮಾರೇಭೇ ಮುನಿಭಿಃ ಸಹ ।**
**ಮಧ್ಯಾಹ್ನೇ ದದೃಶಾತೇ ತೌ ರಾಕ್ಷಸೌ ಕಾಮರೂಪಿಣೌ ॥ ೪ ॥**
**ಮಾರೀಚಶ್ಚ ಸುಬಾಹುಶ್ಚ ವರ್ಷಂತೌ ರುಧಿರಾಸ್ಥಿನೀ ।**

೩-೪. ಶ್ರೀರಾಮನು ವಿಶ್ವಾಮಿತ್ರನನ್ನು ಕುರಿತು 'ಮುನಿಗಳೆ, ದೀಕ್ಷೆಯನ್ನು ಸ್ವೀಕರಿಸೋಣವಾಗಲಿ. ಮಹಾಭಾಗನೆ, ಆ ಪಾಪಿಗಳಾದ ರಾಕ್ಷಸರು ಎಲ್ಲಿ ? ತೋರಿಸಿರಿ'- ಎಂದು ಕೇಳಿದನು. ಹಾಗೆಯೇ ಆಗಲೆಂದು (ವಿಶ್ವಾಮಿತ್ರ) ಋಷಿಯು ಉಳಿದ ಮುನಿಗಳೊಡಗೂಡಿ ಯಜ್ಞಮಾಡಲಾರಂಭಿಸಿದನು. ಮಧ್ಯಾಹ್ನಕಾಲಕ್ಕೆ ಕಾಮರೂಪಿಗಳೂ ರಕ್ತಮೂಳೆಗಳನ್ನು ಚೆಲ್ಲುವವರೂ ಆದ ಮಾರೀಚ - ಸುಬಾಹುಗಳೆಂಬ ಆ ರಾಕ್ಷಸರು ಕಾಣಿಸಿಕೊಂಡರು.

**ರಾಮೋಽಪಿ ಧನುರಾದಾಯ ದ್ವೌ ಬಾಣೌ ಸಂದಧೇ ಸುಧೀಃ ।**
**ಆಕರ್ಣಾಂತಂ ಸಮಾಕೃಷ್ಯ ವಿಸಸರ್ಜ ತಯೋಃ ಪೃಥಕ್ ॥೫॥**
**ತಯೋರೇಕಸ್ತು ಮಾರೀಚಂ ಭ್ರಾಮಯನ್ ಶತಯೋಜನಮ್ ।**
**ಪಾತಯಾಮಾಸ ಜಲಧೌ ತದದ್ಭುತಮಿವಾಭವತ್ ॥೬॥**
**ದ್ವಿತೀಯೋಽಗ್ನಿಮಯೋ ಬಾಣಃ ಸುಬಾಹುಮಜಯಕ್ ಕ್ಷಣಾತ್ ।**
**ಅಪರೇ ಲಕ್ಷ್ಮಣೇನಾಶು ಹೃತಾಸ್ತದನುಯಾಯಿನಃ ॥೭॥**

೫-೭. ಧನುರ್ವಿಧ್ಯಾನಿಪುಣನಾದ ರಾಮನಾದರೊ, ಬಿಲ್ಲನ್ನು ತೆಗೆದುಕೊಂಡು ಎರಡು ಬಾಣಗಳನ್ನು ಹೂಡಿ ಕಿವಿಯವರೆಗೆ ಜಗ್ಗಿ ಅವರಿಬ್ಬರಿಗೂ ಬೇರೆಬೇರೆಯಾಗಿ ಎಸೆದನು. ಅವುಗಳಲ್ಲೊಂದು ಮಾರೀಚನನ್ನು ನೂರು ಯೋಜನೆಗಳ ದೂರಕ್ಕೆ ಒಯ್ದು ತಿರುಗಿಸುತ್ತಾ ಸಮುದ್ರದಲ್ಲಿ ಕೆಡವಿತು. ಅದೊಂದು ಆಶ್ಚರ್ಯವೇ ಆಯಿತು. ಆಗ್ನೇಯಾಸ್ತ್ರರೂಪವಾದ ಎರಡನೆಯ ಬಾಣವು ಕ್ಷಣಮಾತ್ರದಲ್ಲಿ ಸುಬಾಹುವನ್ನು ಗದ್ದಿತು. ಉಳಿದ ಅವನ ಜೊತೆಗಾರರು (ರಾಕ್ಷಸರು) ಲಕ್ಷ್ಮಣನಿಂದ ದೂರಕ್ಕೆ ಓಡಿಸಲ್ಪಟ್ಟರು.

**ಪುಷ್ಪೌಘೈರಾಕಿರನ್ ದೇವಾ ರಾಘವಂ ಸಹ ಲಕ್ಷ್ಮಣಮ್ ।**
**ದೇವದುಂದುಭಯೋ ನೇದುಃ ತುಷ್ಟುವುಃ ಸಿದ್ಧಚಾರಣಾಃ ॥ ೮ ॥**
**ವಿಶ್ವಾಮಿತ್ರಸ್ತು ಸಂಪೂಜ್ಯ ಪೂಜಾರ್ಹಂ ರಘುನಂದನಮ್ ।**
**ಅಂಕೇ ನಿವೇಶ್ಯ ಚಾಲಿಂಗ್ಯ ಭಕ್ತ್ಯಾ ಬಾಷ್ಪಾಕುಲೇಕ್ಷಣಃ ॥ ೯ ॥**
**ಭೋಜಯಿತ್ವಾ ಸಹ ಭ್ರಾತ್ರಾ ರಾಮಂ ಪಕ್ವಫಲಾದಿಭಿಃ ।**
**ಪುರಾಣವಾಕ್ಯೈರ್ಮಧುರೈಃ ನಿನಾಯ ದಿವಸತ್ರಯಮ್ ॥ ೧೦ ॥**

೮-೧೦. ದೇವತೆಗಳು ಹೂಗಳ ಸಮೂಹದಿಂದ ರಾಮಲಕ್ಷ್ಮಣರೊಡನೆ (ಆಶ್ರಮವನ್ನೆಲ್ಲ) ತುಂಬಿದರು. ದೇವಲೋಕದ ನಗಾರಿಗಳು ಧ್ವನಿಮಾಡಿದವು. ಸಿದ್ಧಚಾರಣರು ಸ್ತೋತ್ರಮಾಡಿದರು. ವಿಶ್ವಾಮಿತ್ರನಾದರೊ, ಪೂಜೆಗೆ ಯೋಗ್ಯನಾದ ರಘುನಂದನನಾದ (ರಾಮನನ್ನು) ಗೌರವಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ತಬ್ಬಿಕೊಂಡು ಭಕ್ತಿಯಿಂದುಂಟಾದ ಆನಂದಬಾಷ್ಪಗಳಿಂದ ಕೂಡಿದವನಾದನು. ಚೆನ್ನಾಗಿ ಮಾಗಿದ ಒಳ್ಳೆಯ ಹಣ್ಣುಗಳಿಂದ ಸೋದರನೊಡಗೊಡಿದ ರಾಮನಿಗೆ ಊಟಮಾಡಿಸಿ ಮಧುರವಾದ ಪುರಾಣವಾಕ್ಯಗಳಿಂದ ಸಂತೈಸಿದನು. ಹೀಗೆ ಮೂರುದಿನಗಳನ್ನು ಕಳೆದನು.

**ಚತುರ್ಥೇಽಹನಿ ಸಂಪ್ರಾಪ್ತೇ ಕೌಶಿಕೋ ರಾಮಮಬ್ರವೀತ್ ।**
**ರಾಮ ರಾಮ ಮಹಾಯಜ್ಞಂ ದ್ರಷ್ಟುಂ ಗಚ್ಛಾಮಹೇ ವಯಮ್ ॥ ೧೧ ॥**
**ವಿದೇಹರಾಜನಗರೇ ಜನಕಸ್ಯ ಮಹಾತ್ಮನಃ ।**
**ತತ್ರ ಮಾಹೇಶ್ವರಂ ಚಾಪಮಸ್ತಿ ನ್ಯಸ್ತಂ ಪಿನಾಕಿನಾ ॥ ೧೨ ॥**
**ದ್ರಕ್ಷ್ಯಸಿ ತ್ವಂ ಮಹಾಸತ್ತ್ವಂ ಪೂಜ್ಯಸೇ ಜನಕೇನ ಚ ।**
**ಇತ್ಯುಕ್ತ್ವಾ ಮುನಿಭಿಸ್ತಾಭ್ಯಾಂ ಯಯೌ ಗಂಗಾಸಮೀಪಗಮ್ ॥ ೧೩ ॥**

೧೧-೧೩. ನಾಲ್ಕನೆಯ ದಿನವು ಬರಲಾಗಿ ವಿಶ್ವಾಮಿತ್ರನು ರಾಮನನ್ನು ಕುರಿತು ''ಎಲೈ ರಾಮನೆ, ನಾವು ಮಹಾಯಜ್ಞವನ್ನು ನೋಡಲು ಹೋಗೋಣ. ವಿದೇಹರಾಜನಾದ ಮಹಾತ್ಮನಾದ ಜನಕನ ಪಟ್ಟಣದಲ್ಲಿ ಪಿನಾಕಿಯಾದ (ಈಶ್ವರನಿಂದ)ಇಡಲ್ಪಟ್ಟಿರುವ ಮಾಹೇಶ್ವರಧನಸ್ಸು ಒಂದಿದೆ. ಆ ಮಹಾಶಕ್ತಿಯುತವಾದ ಬಿಲ್ಲನ್ನು ನೀನು ನೋಡಲಿರುವೆ ; ಹಾಗೂ ಜನಕನಿಂದಲೂ ಗೌರವಿಸಲ್ಪಡುವೆ.''- ಎಂದು ಹೇಳಿದನು. (ಅನಂತರ) ಋಷಿಗಳು ಮತ್ತು ಅವರಿಬ್ಬರೊಡನೆ (ವಿಶ್ವಾಮಿತ್ರನು) ಗಂಗಾನದಿಯ ಸಮೀಪದಲ್ಲಿರುವ (ಆಶ್ರಮಕ್ಕೆ) ಬಂದನು.

**ಗೌತಮಸ್ಯಾಶ್ರಮಂ ಪುಣ್ಯಂ ಯತ್ರಾಹಲ್ಯಾ ಸ್ಥಿತಾ ತಪಃ ।**
**ದಿವ್ಯಪುಷ್ಪಫಲೋಪೇತಪಾದಪೈಃ ಪರಿವೇಷ್ಟಿತಮ್ ॥೧೪॥**

**ಮೃಗಪಕ್ಷಿಗಣೈರ್ಹೀನಂ ನಾನಾಜಂತುವಿವರ್ಜಿತಮ್ ।**
**ದೃಷ್ಟ್ವೋವಾಚ ಮುನಿಂ ಶ್ರೀಮಾನ್ ರಾಮೋ ರಾಜೀವಲೋಚನಃ ॥ ೧೫॥**

೧೪-೧೫. ಎಲ್ಲಿ ಅಹಲ್ಯೆಯು ತಪಸ್ಸುಮಾಡಿಕೊಂಡಿದ್ದಳೋ ಅಂಥ, ದಿವ್ಯವಾದ ಹೂ-ಹಣ್ಣುಗಳಿಂದ ಕೂಡಿದ ಮರಗಳಿಂದ ಸುತ್ತುವರೆಯಲ್ಪಟ್ಟ, (ಆದರೆ) ಮೃಗಗಳಾಗಲಿ, ಹಕ್ಕಿಗಳಾಗಲಿ ಇಲ್ಲದಿರುವ, ಅನೇಕಪ್ರಾಣಿಗಳಿಲ್ಲದ ಗೌತಮನ ಪುಣ್ಯತಮವಾದ ಆಶ್ರಮವನ್ನು ಕಂಡು ಕಮಲನೇತ್ರನಾದ ಶ್ರೀಮಂತನಾದ ರಾಮನು ಮುನಿಯನ್ನು ಕುರಿತು ಇಂತೆಂದನು.

**ಕಸ್ಯೈತದಾಶ್ರಮಪದಂ ಭಾತಿ ಭಾಸ್ವತ್ ಶುಭಂ ಮಹತ್ ।**
**ಪತ್ರಪುಷ್ಪಫಲೈರ್ಯುಕ್ತಂ ಜಂತುಭಿಃ ಪರಿವರ್ಜಿತಮ್ ॥೧೬॥**
**ಆಹ್ಲಾದಯತಿ ಮೇ ಚೇತೋ ಭಗವನ್ ಬ್ರೂಹಿ ತತ್ತ್ವತಃ ।**

೧೬. ವಿರಾಜಮಾನವಾದ, ಶುಭವಾದ ಈ ದೊಡ್ಡದಾದ ಹಾಗೂ ಹಣ್ಣು, ಎಲೆ, ಹೂಗಳಿಂದ ಕೂಡಿದ್ದರೂ ಪ್ರಾಣಿಗಳೊಂದೂ ಇಲ್ಲದ ಈ ಆಶ್ರಮವು ಪೂಜ್ಯರೆ, ಯಾರದ್ದು? ನಿಜವೇನು ? ಹೇಳಿರಿ. ಇದು ನನ್ನ ಮನಸ್ಸಿಗೆ ಆನಂದವುಂಟು ಮಾಡುತ್ತಿದೆ.''

**ವಿಶ್ವಾಮಿತ್ರ ಉವಾಚ -**

**ಶೃಣು ರಾಮ ಪುರಾವೃತ್ತಂ ಗೌತಮೋ ಲೋಕವಿಶ್ರುತಃ ।**
**ಸರ್ವಧರ್ಮಭೃತಾಂ ಶ್ರೇಷ್ಠಸ್ತಪಸಾऽऽರಾಧಯನ್ ಹರಿಮ್ ॥೧೭॥**
**ತಸ್ಮೈ ಬ್ರಹ್ಮಾ ದದೌ ಕನ್ಯಾಮಹಲ್ಯಾಂ ಲೋಕಸುಂದರೀಮ್ ।**
**ಬ್ರಹ್ಮಚರ್ಯೇಣ ಸಂತುಷ್ಟಃ ಶುಶ್ರೂಷಣಪರಾಯಣಾಮ್ ॥ ೧೮ ॥**
**ತಯಾ ಸಾರ್ಧಮಿಹಾವಾತ್ಸೀತ್ ಗೌತಮಸ್ತಪತಾಂ ವರಃ**

೧೭-೧೮. ವಿಶ್ವಾಮಿತ್ರನಿಂತೆಂದನು : 'ಎಲೈ ರಾಮನೆ, ಹಿಂದಿನ ಕಥೆಯನ್ನು ಕೇಳು. ಒಮ್ಮೆ ಲೋಕವಿಖ್ಯಾತನೂ ಎಲ್ಲಾ ಧರ್ಮಿಷ್ಠರಿಗೂ ಹಿರಿಯನೂ ಆಗಿದ್ದ ಗೌತಮನೆಂಬುವನು ಶ್ರೀಹರಿಯನ್ನು ತಪಸ್ಸಿನಿಂದ ಆರಾಧಿಸುತ್ತಾ ಇದ್ದುಕೊಂಡಿದ್ದನು. ಅವನಿಗೆ- ಆತನ ಬ್ರಹ್ಮಚರ್ಯವ್ರತಕ್ಕೆ ಮನಸೋತವನಾದ ಬ್ರಹ್ಮನು ಸೇವಾತತ್ಪರಳೂ ಲೋಕಸುಂದರಿಯೂ ಆಗಿದ್ದ ಅಹಲ್ಯೆಯೆಂಬ ಕನ್ಯೆಯನ್ನು ಕೊಟ್ಟನು. ತಪಸ್ವಿಗಳಲ್ಲಿ ಶ್ರೇಷ್ಠನಾದ ಗೌತಮನು ಆಕೆಯೊಡನೆ ಇಲ್ಲಿ ವಾಸವಾಗಿದ್ದನು.

**ಶಕ್ರಸ್ತು ತಾಂ ಧರ್ಷಯಿತುಂ ಅಂತರಂ ಪ್ರೇಪ್ಸುರನ್ವಹಮ್ ।**
**ಕದಾಚಿನ್ಮುನಿವೇಷೇಣ ಗೌತಮೇ ನಿರ್ಗತೇ ಗೃಹಾತ್ ॥ ೧೯ ॥**
**ಧರ್ಷಯಿತ್ವಾಥ ನಿರಗಾತ್ ತ್ವರಿತಂ ಮುನಿರಪ್ಯಗಾತ್ ।**
**ದೃಷ್ಟ್ವಾ ಯಾಂತಂ ಸ್ವರೂಪೇಣ ಮುನಿಃ ಪರಮಕೋಪನಃ ॥ ೨೦ ॥**
**ಪಪ್ರಚ್ಛ ಕಸ್ತ್ವಂ ದುಷ್ಟಾತ್ಮನ್ ಮಮ ರೂಪಧರೋಽಧಮಃ ।**

೧೯-೨೦ ದೇವೇಂದ್ರನಾದರೊ, ಪ್ರತಿದಿನವೂ ಸಮಯವನ್ನು ಕಾಯುತ್ತಿದ್ದು, ಒಮ್ಮೆ ಗೌತಮನು ಮನೆಯಿಂದ ಹೊರಕ್ಕೆ ಹೋಗಿರಲಾಗಿ- ಆಕೆಯೊಡನೆ ಕೂಡುವದಕ್ಕಾಗಿ ಋಷಿಯ ವೇಷವನ್ನು ಧರಿಸಿ ಬಂದು ಅವಳನ್ನು ಅನುಭವಿಸಿ ಬೇಗ ಹೊರಬಂದನು. ಆ ವೇಳೆಗೆ ಋಷಿಯೂ ಬಂದನು. ತನ್ನ ರೂಪದಿಂದಲೇ ಹೊರಬರುತ್ತಿದ್ದ (ಆತನನ್ನು) ಕಂಡು ಅತಿಯಾದ ಕೋಪದಿಂದ ಕೂಡಿದವನಾದ ಋಷಿಯು 'ಎಲೈ ದುಷ್ಟಾತ್ಮನೆ, ನನ್ನ ರೂಪವನ್ನು ಹೊಂದಿರುವ ಅಧಮನಾದ ನೀನು ಯಾರು ? ಎಂದು ಕೇಳಿದನು.

**ಸತ್ಯಂ ಬ್ರೂಹಿ ನ ಚೇದ್ ಭಸ್ಮ ಕರಿಷ್ಯಾಮಿ ನ ಸಂಶಯಃ ।**
**ಸೋಽಬ್ರವೀದ್ದೇವರಾಜೋಽಹಂ ಪಾಹಿ ಮಾಂ ಕಾಮಕಿಂಕರಮ್ ॥ ೨೧ ॥**
**ಕೃತಂ ಜಗುಪ್ಸಿತಂ ಕರ್ಮ ಮಯಾ ಕುತ್ಸಿತಚೇತಸಾ ।**

೨೧. 'ನಿಜವನ್ನು ಹೇಳು, ಹಾಗಿಲ್ಲದಿದ್ದರೆ ಬೂದಿಮಾಡಿಬಿಡುವೆನು. ಈ ವಿಷಯದಲ್ಲಿ ಸಂಶಯವಿಲ್ಲ.' ಆಗ ಆತನೆಂದನು : 'ನಾನು ದೇವರಾಜನು. ಕಾಮದಾಸನಾದ ನನ್ನನ್ನು ಕಾಪಾಡು. ಕೆಟ್ಟಮನಸ್ಸಿನವನಾದ ನನ್ನಿಂದ ನಿಂದ್ಯವಾದ ಕೆಲಸವು ಮಾಡಲ್ಪಟ್ಟಿತು.

**ಗೌತಮಃ ಕ್ರೋಧತಾಮ್ರಾಕ್ಷಃ ಶಶಾಪ ದಿವಿಜಾಧಿಪಮ್ ।**
**ಯೋನಿಲಂಪಟ ದುಷ್ಟಾತ್ಮನ್ ಸಹಸ್ರಭಗವಾನ್ ಭವ ॥ ೨೨ ॥**
**ಶಪ್ತ್ವಾ ತಂ ದೇವರಾಜಾನಂ ಪ್ರವಿಶ್ಯ ಸ್ವಾಶ್ರಮಂ ದ್ರುತಮ್ ।**
**ದೃಷ್ಟ್ವಾಹಲ್ಯಾಂ ವೇಪಮಾನಾಂ ಪ್ರಾಂಜಲಿಂ ಗೌತಮೋಽಬ್ರವೀತ್ ॥ ೨೩ ॥**

೨೨-೨೩. ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಗೌತಮನು ದೇವೇಂದ್ರನನ್ನು ಕುರಿತು ''ದುಷ್ಟಾತ್ಮನೆ, ನೀನು ಸ್ತ್ರೀಸಂಭೋಗಚಾಪಲ್ಯವುಳ್ಳವನಾಗಿರುವೆ. ಆದ್ದರಿಂದ ಸಾವಿರಕಣ್ಣುಗಳುಳ್ಳವನಾಗು'' ಎಂದು ಶಪಿಸಿದನು. ಹೀಗೆ ಶಪಿಸಿದ ಅನಂತರ ಬೇಗನೆ ತನ್ನ ಆಶ್ರಮದೊಳಗೆ ಪ್ರವೇಶಿಸಿದವನಾಗಿ, ನಡುಗುತ್ತಾ ಕೈಮುಗಿದುಕೊಂಡು ನಿಂತಿದ್ದ ಅಹಲ್ಯೆಯನ್ನು ನೋಡಿ ಗೌತಮನಿಂತೆಂದನು.

**ದುಷ್ಟೇ ತ್ವಂ ತಿಷ್ಠ ದುರ್ವೃತ್ತೇ ಶಿಲಾಯಾಮಾಶ್ರಮೇ ಮಮ ।**
**ನಿರಾಹಾರಾ ದಿವಾರಾತ್ರಂ ತಪಃ ಪರಮಮಾಸ್ಥಿತಾ ॥ ೨೪ ॥**
**ಆತಪಾನಿಲವರ್ಷಾದಿಸಹಿಷ್ಣುಃ ಪರಮೇಶ್ವರಮ್ ।**
**ಧ್ಯಾಯಂತೀ ರಾಮಮೇಕಾಗ್ರಮನಸಾ ಹೃದಿ ಸಂಸ್ಥಿತಮ್ ॥ ೨೫ ॥**
**ನಾನಾಜಂತುವಿಹೀನೋಽಯಮಾಶ್ರಮೋ ಮೇ ಭವಿಷ್ಯತಿ ।**

೨೪-೨೫. ''ಎಲೈ ದುಷ್ಟಳೆ, ಕೆಟ್ಟನಡತೆಯವಳೆ, ನೀನು ನಿರಾಹಾರಳಾಗಿ ಹಗಲೂ ರಾತ್ರಿಯೂ ಹೆಚ್ಚಿನ ತಪಸ್ಸನ್ನಾಶ್ರಯಿಸಿ ನನ್ನ ಆಶ್ರಮದಲ್ಲಿಯೇ ಕಲ್ಲಿನಲ್ಲಿದ್ದುಕೊಂಡಿರು. ಬಿಸಿಲು, ಬೆಂಕಿ, ಮಳೆ - ಮುಂತಾದವುಗಳನ್ನು ಸಹಿಸುತ್ತಾ ಹೃದಯದಲ್ಲಿಯೇ ಇದ್ದುಕೊಂಡಿರುವ ಪರಮೇಶ್ವರನಾದ ರಾಮನನ್ನು ಏಕಾಗ್ರಚಿತ್ತಳಾಗಿ ಧ್ಯಾನಿಸುತ್ತಾ ಇರು. ಈ ನನ್ನ ಆಶ್ರಮವು ಅನೇಕವಿಧವಾದ ಪ್ರಾಣಿಗಳಿಲ್ಲದ್ದಾಗಿಬಿಡಲಿ'' (ಎಂದನು).

**ಏವಂ ವರ್ಷಸಹಸ್ರೇಷು ಹ್ಯನೇಕೇಷು ಗತೇಷು ಚ ।**
**ರಾಮೋ ದಾಶರಥಿಃ ಶ್ರೀಮಾನಾಗಮಿಷ್ಯತಿ ಸಾನುಜಃ ॥ ೨೬ ॥**
**ಯದಾ ತ್ವದಾಶ್ರಯಶಿಲಾಂ ಪಾದಾಭ್ಯಾಮಾಕ್ರಮಿಷ್ಯತಿ ।**
**ತದೈವ ಧೂತಪಾಪಾ ತ್ವಂ ರಾಮಂ ಸಂಪೂಜ್ಯ ಭಕ್ತಿತಃ ॥ ೨೭ ॥**
**ಪರಿಕ್ರಮ್ಯ ನಮಸ್ಕೃತ್ಯ ಸ್ತುತ್ವಾ ಶಾಪಾದ್ ವಿಮೋಕ್ಷ್ಯಸೇ ।**
**ಪೂರ್ವವನ್ಮಮ ಶುಶ್ರೂಷಾಂ ಕರಿಷ್ಯಸಿ ಯಥಾಸುಖಮ್ ॥ ೨೮ ॥**
**ಇತ್ಯುಕ್ತ್ವಾ ಗೌತಮಃ ಪ್ರಾಗಾದ್ಧಿಮವಂತಂ ನಗೋತ್ತಮಮ್ ॥**

೨೬-೨೮. 'ಈ ರೀತಿಯಾಗಿ ಅನೇಕಸಾವಿರವರ್ಷಗಳು ಕಳೆಯಲಾಗಿ ದಶರಥನ ಮಗನಾದ ಶ್ರೀಮಂತನಾದ ರಾಮನು ತಮ್ಮನೊಡನೆ ಬರಲಿದ್ದಾನೆ. ಆತನು ಯಾವಾಗ ನೀನು ಆಶ್ರಯಿಸಿಕೊಂಡಿರುವ ಕಲ್ಲನ್ನು ತನ್ನ ಕಾಲುಗಳಿಂದ (ತುಳಿದು) ದಾಟುವನೋ ಆ ಕೂಡಲೆ ನೀನು ಪಾಪಗಳಿಂದ ಬಿಡಲ್ಪಟ್ಟವಳಾಗುವೆ. ಮತ್ತು ಭಕ್ತಿಯಿಂದ ರಾಮನನ್ನು ಪೂಜಿಸಿ ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡಿ ಸ್ತುತಿಸಿ, ಶಾಪದಿಂದ ಬಿಡುಗಡೆಯನ್ನು ಹೊಂದುವೆ. ಹಿಂದಿನಂತೆಯೇ ನನ್ನ ಸೇವೆಯನ್ನು ಮಾಡಿಕೊಂಡು ಸುಖವಾಗಿರುವೆ'- ಹೀಗೆಂದು ಗೌತಮನು ನುಡಿದು ಪರ್ವತಶ್ರೇಷ್ಠನಾದ ಹಿಮವಂತನನ್ನು ಕುರಿತು ಹೊರಟನು.

**ತದಾದ್ಯಹಲ್ಯಾ ಭೂತಾನಾಮದೃಶ್ಯಾ ಸ್ವಾಶ್ರಮೇ ಶುಭೇ ।**
**ತವ ಪಾದರಜಃಸ್ಪರ್ಶಂ ಕಾಂಕ್ಷತೇ ಪವನಾಶನಾ ॥ ೨೯ ॥**
**ಆಸ್ತೇಽದ್ಯಾಪಿ ರಘುಶ್ರೇಷ್ಠ ತಪೋ ದುಷ್ಕರಮಾಸ್ಥಿತಾ ।**
**ಪಾವಯಸ್ವ ಮುನೇರ್ಭಾರ್ಯಾಮಹಲ್ಯಾಂ ಬ್ರಹ್ಮಣಃ ಸುತಾಮ್ ॥ ೩೦ ॥**

**ಇತ್ಯುಕ್ತ್ವಾ ರಾಘವಂ ಹಸ್ತೇ ಗೃಹೀತ್ವಾ ಮುನಿಪುಂಗವಃ ।**
**ದರ್ಶಯಾಮಾಸ ಚಾಹಲ್ಯಾಮುಗ್ರೇಣ ತಪಸಾ ಸ್ಥಿತಾಮ್ ॥ ೩೧ ॥**

೨೯-೩೧. ಆಗಿನಿಂದಲೂ ಅಹಲ್ಯೆಯು ಶುಭವಾದ ತನ್ನ ಆಶ್ರಮದಲ್ಲಿ ಪ್ರಾಣಿಗಳಿಗೆ ಕಾಣಿಸಿಕೊಳ್ಳದೆ ಗಾಳಿಯನ್ನು ಆಹಾರವಾಗಿ ಸೇವಿಸುತ್ತಾ ನಿನ್ನ ಕಾಲಿನ ಧೂಳಿಯ ಸ್ಪರ್ಶವನ್ನು ಬಯಸುತ್ತಿದ್ದಾಳೆ. ಎಲೈ ರಘುಶ್ರೇಷ್ಠನೆ, ದುಷ್ಕರವಾದ ತಪಸ್ಸನ್ನು ಮಾಡಿಕೊಂಡು ಅವಳು ಈಗಲೂ ಇದ್ದುಕೊಂಡಿರುವಳು. ಋಷಿಪತ್ನಿಯಾದ ಬ್ರಹ್ಮನ ಮಗಳಾದ ಅಹಲ್ಯೆಯನ್ನು ನೀನು ಪವಿತ್ರಗೊಳಿಸುವವನಾಗು. ಹೀಗೆಂದು ಹೇಳಿ ಮುನಿಶ್ರೇಷ್ಠನು ರಾಮನನ್ನು ಕೈಹಿಡಿದು ಕರೆತಂದು ಉಗ್ರವಾದ ತಪಸ್ಸಿನಲ್ಲಿದ್ದ ಅಹಲ್ಯೆಯನ್ನು ತೋರಿಸಿದನು.

**ರಾಮಃ ಶಿಲಾಂ ಪದಾ ಸ್ಪೃಷ್ಟ್ವಾ ತಾಂ ಚಾಪಶ್ಯತ್ ತಪೋಧನಾಮ್ ।**
**ನನಾಮ ರಾಘವೋಽಹಲ್ಯಾಂ ರಾಮೋಽಹಮಿತಿ ಚಾಬ್ರವೀತ್ ॥ ೩೨ ॥**
**ತತೋ ದೃಷ್ಟ್ವಾ ರಘುಶ್ರೇಷ್ಠಂ ಪೀತಕೌಶೇಯವಾಸಸಮ್ ।**
**ಚತುರ್ಭುಜಂ ಶಂಖಚಕ್ರಗದಾಪಂಕಜಧಾರಿಣಮ್ ॥ ೩೩ ॥**
**ಧನುರ್ಬಾಣಧರಂ ರಾಮಂ ಲಕ್ಷ್ಮಣೇನ ಸಮನ್ವಿತಮ್ ।**
**ಸ್ಮಿತವಕ್ತ್ರಂ ಪದ್ಮನೇತ್ರಂ ಶ್ರೀವತ್ಸಾಂಕಿತವಕ್ಷಸಮ್ ॥ ೩೪ ॥**
**ನೀಲಮಾಣಿಕ್ಯಸಂಕಾಶಂ ದ್ಯೋತಯಂತಂ ದಿಶೋ ದಶ ।**
**ದೃಷ್ಟ್ವಾ ರಾಮಂ ರಮಾನಾಥಂ ಹರ್ಷವಿಸ್ಫಾರಿತೇಕ್ಷಣಾ ॥ ೩೫ ॥**
**ಗೌತಮಸ್ಯ ವಚಃ ಸ್ಮೃತ್ವಾ ಜ್ಞಾತ್ವಾ ನಾರಾಯಣಂ ವರಮ್।**
**ಸಂಪೂಜ್ಯ ವಿಧಿವದ್ರಾಮಮರ್ಘ್ಯಾದಿಭಿರನಿಂದಿತಾ ॥ ೩೬ ॥**
**ಹರ್ಷಾಶ್ರುಜಲನೇತ್ರಾಂತಾ ದಂಡವತ್ ಪ್ರಣಿಪತ್ಯ ಸಾ ।**
**ಉತ್ಥಾಯ ಚ ಪುನರ್ದೃಷ್ಟ್ವಾ ರಾಮಂ ರಾಜೀವಲೋಚನಮ್ ॥ ೩೭ ॥**
**ಪುಲಕಾಂಕಿತಸರ್ವಾಂಗಾ ಗಿರಾ ಗದ್ಗದಯೈಲತ ।**

೩೨-೩೭. ರಾಮನು ಕಲ್ಲನ್ನು ಕಾಲಿನಿಂದ ಮುಟ್ಟಿದವನಾದನು. ಮತ್ತು ತಪೋಧನಳಾದ ಆಕೆಯನ್ನು ನೋಡಿದನು. 'ನಾನು ರಾಮನು' ಎಂದು ಹೇಳುತ್ತಾ ಅಹಲ್ಯೆಗೆ ನಮಸ್ಕರಿಸಿದನು. ಅನಂತರ ಹಳದಿಯ ರೇಷ್ಮೆಬಟ್ಟೆಯನ್ನು ಧರಿಸಿದ್ದ ಚತುರ್ಭುಜನೂ ಶಂಖ, ಚಕ್ರ, ಗದೆ, ಕಮಲಗಳನ್ನೂ (ಜೊತೆಗೆ ಹೆಗಲಲ್ಲಿ) ಧನರ್ಬಾಣಗಳನ್ನೂ ಧರಿಸಿ ಲಕ್ಷ್ಮಣನೊಡನೆ ಇರುವ, ಮುಗುಳುನಗೆಯ ಮುಖವುಳ್ಳ, ಪದ್ಮದಂತೆ ಕಂಗಳುಳ್ಳ, ಶ್ರೀವತ್ಸವೆಂಬ ಗುರುತಿನಿಂದ ಕೂಡಿದ ಎದೆಯುಳ್ಳ, ನೀಲವಾದ ಮಾಣಿಕ್ಯದಂತೆ ಕಾಂತಿಯುಳ್ಳ, ಹತ್ತುದಿಕ್ಕುಗಳನ್ನೂ ಬೆಳಗುತ್ತಿರುವ ಲಕ್ಷ್ಮೀಪತಿಯಾದ

ರಾಮನನ್ನು ಕಂಡು ಸಂತೋಷದಿಂದ ಅರಳಿದ ಕಣ್ಣುಗಳುಳ್ಳವಳಾಗಿ ಗೌತಮರ ಮಾತನ್ನು ನೆನೆದುಕೊಂಡು ಶ್ರೇಷ್ಠನಾದ ನಾರಾಯಣನೇ ಈತನೆಂದು ಅರಿತು ವಿಧಿ ಪೂರ್ವಕವಾಗಿ ಅರ್ಘ್ಯವೇ ಮುಂತಾದ ಉಪಚಾರಗಳಿಂದ ರಾಮನನ್ನು ಪೂಜಿಸಿ, ನಿಂದ್ಯಳಲ್ಲದವಳಾದ ಆಕೆಯು ಸಂತೋಷದಿಂದ ಉಂಟಾದ ಕಣ್ಣೀರುಳ್ಳವಳಾಗಿ ದಂಡ ದಂತೆ ನಮಸ್ಕರಿಸಿ ಮೇಲಕ್ಕೆದ್ದು ಮತ್ತೊಮ್ಮೆ ರಾಜೀವಲೋಚನನಾದ ರಾಮನನ್ನು ಕಂಡು ಮೈಯೆಲ್ಲೆಲ್ಲ ರೋಮಾಂಚನವುಂಟಾದವಳಾಗಿ ಗದ್ಗದವಾದ ಮಾತುಗಳಿಂದ ಸ್ತೋತ್ರಮಾಡಿದಳು.

## ಅಹಲ್ಯಾಕೃತರಾಮಸ್ತೋತ್ರ

**ಅಹಲ್ಯೋವಾಚ-**

**ಅಹೋ ಕೃತಾರ್ಥಾಸ್ಮಿ ಜಗನ್ನಿವಾಸ ತೇ**
**ಪಾದಾಬ್ಜಸಂಲಗ್ನರಜಃಕಣಾದಹಮ್ ।**
**ಸ್ಪೃಶಾಮಿ ಯತ್ಪದ್ಮಜಶಂಕರಾದಿಭಿಃ**
**ವಿಮೃಗ್ಯತೇ ರಂಧಿತಮಾನಸೈಃ ಸದಾ ॥ ೩೮ ॥**

೩೮. ಅಹಲ್ಯೆಯಿಂತೆಂದಳು : ಆಹಾ ! ನಾನು ಎಲೈ ಜಗನ್ನಿವಾಸನೆ, ನಿನ್ನ ಪಾದಗಳಿಗೆ ಅಂಟಿದ್ದ ಧೂಳಿನ ಕಣದಿಂದ ಕೃತಕೃತ್ಯಳಾದೆನು. ಯಾವ ಪಾದಗಳು ಅಂತಃ ಕರಣವನ್ನು ಬಿಗಿಹಿಡಿದ ಬ್ರಹ್ಮ, ಈಶ್ವರನೇ ಮುಂತಾದವರಿಂದ ಯಾವಾಗಲೂ ಹುಡುಕಲ್ಪಡುತ್ತಿವೆಯೋ ಅವುಗಳನ್ನು ಈಗ ನಾನು ಮುಟ್ಟುತ್ತಿರುವೆನು.

**ಅಹೋ ವಿಚಿತ್ರಂ ತವ ರಾಮ ಚೇಷ್ಟಿತಂ**
**ಮನುಷ್ಯಭಾವೇನ ವಿಮೋಹಿತಂ ಜಗತ್ ।**
**ಚಲಸ್ಯಜಸ್ರಂ ಚರಣಾದಿವರ್ಜಿತಃ**
**ಸಂಪೂರ್ಣ ಆನಂದಮಯೋಽತಿಮಾಯಿಕಃ ॥ ೩೯ ॥**

೩೯. ಎಲೈ ರಾಮನೆ, ನಿನ್ನ ಕರ್ಮಗಳು ಬಹಳ ವಿಚಿತ್ರವಾಗಿವೆ. ಈ ಜಗತ್ತೆಲ್ಲವೂ ನಿನ್ನ ಮನುಷ್ಯಭಾವದಿಂದ ಮೋಹಗೊಳಿಸಲ್ಪಟ್ಟಿರುವದು. ಏಕೆಂದರೆ -ಕಾಲೇ ಮುಂತಾದ (ಅವಯವ)ಗಳಿಲ್ಲದ, ಪರಿಪೂರ್ಣವಾದ ಆನಂದರೂಪನೇ ಆಗಿರುವ, ಮಾಯೆಯನ್ನು ದಾಟಿರುವ ನೀನು ಸದಾ ಓಡಾಡುವವನಾಗಿರುವೆ.

**ಯತ್ಪಾದಪಂಕಜಪರಾಗಪವಿತ್ರಗಾತ್ರಾ**
**ಭಾಗೀರಥೀ ಭವವಿರಿಂಚಿಮುಖಾನ್ ಪುನಾತಿ ।**
**ಸಾಕ್ಷಾತ್ಸ ಏವ ಮಮ ದೃಗ್ವಿಷಯೋ ಯದಾಸ್ತೇ**

**ಕಿಂ ವರ್ಣ್ಯತೇ ಮಮ ಪುರಾಕೃತಭಾಗಧೇಯಮ್ ॥ ೪೦ ॥**

೪೦. ಯಾವನ ಪಾದಪದ್ಮಗಳ ಧೂಳಿನ ಕಣದಿಂದ ಪರಿಶುದ್ಧವಾದ ಶರೀರವುಳ್ಳ ಗಂಗೆಯು ರುದ್ರ - ಬ್ರಹ್ಮರೇ ಮೊದಲಾದವರನ್ನು ಪವಿತ್ರಗೊಳಿಸುತ್ತಿರುವಳೋ ಆತನೇ ನೇರಾಗಿ ಈಗ ನನ್ನ ಕಣ್ಣುಗಳಿಗೆ ಗೋಚರನಾಗಿರುವಾಗ ನನ್ನ ಹಿಂದಿನ ಜನ್ಮದ ಪುಣ್ಯವನ್ನು ಏನೆಂದು ಕೊಂಡಾಡಲಿ ?

**ಮರ್ತ್ಯಾವತಾರೇ ಮನುಜಾಕೃತಿಂ ಹರಿಂ**
**ರಾಮಾಭಿಧೇಯಂ ರಮಣೀಯದೇಹಿನಮ್ ।**
**ಧನುರ್ಧರಂ ಪದ್ಮವಿಶಾಲಲೋಚನಂ**
**ಭಜಾಮಿ ನಿತ್ಯಂ ನ ಪರಾನ್ ಭಜಿಷ್ಯೇ ॥ ೪೧ ॥**

೪೧. ಮನುಷ್ಯಾವತಾರದಲ್ಲಿ ಪುರುಷರೂಪವನ್ನು ಧರಿಸಿ ರಾಮನೆಂಬ ಹೆಸರಿನಿಂದ ಕೂಡಿದ ಸುಂದರಾಕಾರವುಳ್ಳ ಧನುರ್ಧರನೂ ಕಮಲದಂತೆ ಅಗಲವಾದ ಕಣ್ಣುಗಳುಳ್ಳವನೂ ಆಗಿರುವ ಶ್ರೀಹರಿಯನ್ನು ನಾನು ಯಾವಾಗಲೂ ಸೇವಿಸುತ್ತೇನೆ. ಬೇರೊಬ್ಬರನ್ನು ಭಜಿಸುವದಿಲ್ಲ.

**ಯತ್ಪಾದಪಂಕಜರಜಃ ಶ್ರುತಿಭಿಃ ವಿಮೃಗ್ಯಂ**
**ಯನ್ನಾಭಿಪಂಕಜಭವಃ ಕಮಲಾಸನಶ್ಚ ।**
**ಯನ್ನಾಮಸಾರರಸಿಕೋ ಭಗವಾನ್ ಪುರಾರಿಃ**
**ತಂ ರಾಮಚಂದ್ರಮನಿಶಂ ಹೃದಿ ಭಾವಯಾಮಿ ॥ ೪೨ ॥**

೪೨. ಯಾವನ ಪಾದಪದ್ಮದ ಧೂಳಿಯು ವೇದಗಳಿಂದ ಹುಡುಕಲ್ಪಡುವದಾಗಿರುವದೋ ಕಮಲಾಸನನಾದ (ಬ್ರಹ್ಮ)ನೂ ಯಾವನ ನಾಭಿಪದ್ಮದಿಂದ ಹುಟ್ಟಿರುವನೋ, ಪೂಜ್ಯನಾದ ಶಿವನು ಯಾವನ ನಾಮದ ಸಾರದಲ್ಲಿಯೇ ಆಸಕ್ತನಾಗಿರುವನೋ ಅಂಥ ರಾಮಚಂದ್ರನನ್ನು ಯಾವಾಗಲೂ ಹೃದಯದಲ್ಲಿ ಚಿಂತಿಸುವೆನು.

**ಯಸ್ಯಾವತಾರಚರಿತಾನಿ ವಿರಿಂಚಿಲೋಕೇ**
**ಗಾಯನ್ತಿ ನಾರದಮುಖಾ ಭವಪದ್ಮಜಾದ್ಯಾಃ।**
**ಆನಂದಜಾಶ್ರುಪರಿಷಿಕ್ತಕುಚಾಗ್ರಸೀಮಾ**
**ವಾಗೀಶ್ವರೀ ಚ ತಮಹಂ ಶರಣಂ ಪ್ರಪದ್ಯೇ ॥ ೪೩ ॥**

೪೩. ಬ್ರಹ್ಮಲೋಕದಲ್ಲಿ ಯಾವನ ಅವತಾರಚರಿತ್ರೆಗಳನ್ನು ನಾರದನೇ ಮುಂತಾದವರೂ ಶಿವ- ಬ್ರಹ್ಮರುಗಳು ಕೂಡ ಗಾನಮಾಡುತ್ತಿರುವರೋ ಮತ್ತು ಆನಂದ

ಬಾಷ್ಪಗಳಿಂದ ತೋಯಿಸಲ್ಪಟ್ಟ ಕುಚಗಳ ಮೇಲ್ಭಾಗವುಳ್ಳ ಸರಸ್ವತೀದೇವಿಯೂ ಕೂಡ ಗಾನಮಾಡುತ್ತಿರುವಳೋ ಅಂಥ (ರಾಮನನ್ನು) ನಾನು ಶರಣುಹೊಕ್ಕಿರುತ್ತೇನೆ.

**ಸೋಽಯಂ ಪರಾತ್ಮಾ ಪುರುಷಃ ಪುರಾಣಃ**
**ಏಕಃ ಸ್ವಯಂಜ್ಯೋತಿರನನ್ತ ಆದ್ಯಃ ।**
**ಮಾಯಾತನುಂ ಲೋಕವಿಮೋಹನೀಯಾಂ**
**ಧತ್ತೇ ಪರಾನುಗ್ರಹ ಏಷ ರಾಮಃ ॥ ೪೪ ॥**

೪೪. ಆ ಈ ಪರಮಾತ್ಮನಾದ, ಪುರಾಣಪುರುಷನೂ ಏಕನೂ ಸ್ವಯಂಜ್ಯೋತಿಃಸ್ವರೂಪನೂ ಅನಂತನೂ ಆದ್ಯನೂ ಆದ ಈ ರಾಮನು ಲೋಕವನ್ನೆಲ್ಲ ಮೋಹಗೊಳಿಸುವಂಥ ಮಾಯಾಶರೀರವನ್ನು ಮತ್ತೊಬ್ಬರ ಉದ್ಧಾರಕ್ಕಾಗಿಯೇ ಧರಿಸಿರುವನು.

**ಅಯಂ ಹಿ ವಿಶ್ವೋದ್ಭವಸಂಯಮಾನಾಂ**
**ಏಕಃ ಸ್ವಮಾಯಾಗುಣಬಿಂಬಿತೋ ಯಃ ।**
**ವಿರಿಂಚಿವಿಷ್ಣ್ವೀಶ್ವರನಾಮಭೇದಾನ್**
**ಧತ್ತೇ ಸ್ವತಂತ್ರಃ ಪರಿಪೂರ್ಣ ಆತ್ಮಾ ॥ ೪೫ ॥**

೪೫. ಇವನಾದರೊ, ಜಗತ್ತಿನ ಹುಟ್ಟು, ನಿಯಮನ, ನಾಶ- ಇವುಗಳಿಗಾಗಿ ತಾನೊಬ್ಬನೇ ತನ್ನ ಮಾಯಾಗುಣಗಳಿಂದ ಕೂಡಿದವನಾಗಿ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ನಾಮಭೇದಗಳನ್ನು ಧರಿಸಿಯೂ ತಾನು ಮಾತ್ರ ಸ್ವತಂತ್ರನೂ ಪರಿಪೂರ್ಣಾತ್ಮನೂ ಆಗಿಯೇ ಇದ್ದುಕೊಂಡಿರುವನು.

**ನಮೋಽಸ್ತು ತೇ ರಾಮ ತವಾಂಘ್ರಿಪಂಕಜಂ**
**ಶ್ರಿಯಾ ಧೃತಂ ವಕ್ಷಸಿ ಲಾಲಿತಂ ಪ್ರಿಯಾತ್ ।**
**ಆಕ್ರಾಂತಮೇಕೇನ ಜಗತ್ತ್ರಯಂ ಪುರಾ**
**ಧ್ಯೇಯಂ ಮುನೀಂದ್ರೈರಭಿಮಾನವರ್ಜಿತೈಃ ॥ ೪೬ ॥**

೪೬. ಎಲೈ ರಾಮನೆ, ನಿನಗೆ ನಮಸ್ಕಾರ. ನಿನ್ನ ಪಾದಪಂಕಜವು ಪ್ರೀತಿಯಿಂದ ಕೂಡಿದ ಲಕ್ಷ್ಮೀದೇವಿಯಿಂದ ಆಕೆಯ ಎದೆಯ ಪ್ರದೇಶದಲ್ಲಿಯೇ ಇಟ್ಟು ಉಪಚರಿಸಲ್ಪಟ್ಟಿರುವದು. (ಅಂಥ ಪಾದಗಳಲ್ಲಿ) ಒಂದು ಪಾದವು ಅಭಿಮಾನವರ್ಜಿತರಾದ ಋಷಿಗಳಿಂದ ಧ್ಯಾನಿಸಲ್ಪಡುವಂಥದ್ದು - ಹಿಂದೆ ಮೂರುಲೋಕಗಳನ್ನೂ ವ್ಯಾಪಿಸಿಕೊಂಡು ಬಿಟ್ಟಿತ್ತು.

**ಜಗತಾಮಾದಿಭೂತಸ್ತ್ವಂ ಜಗತ್ತ್ವಂ ಜಗದಾಶ್ರಯಃ ।**
**ಸರ್ವಭೂತೇಷ್ವಸಂಯುಕ್ತ ಏಕೋ ಭಾತಿ ಭವಾನ್ ಪರಃ ॥ ೪೭ ॥**

**ಓಂಕಾರವಾಚ್ಯಸ್ತ್ವಂ ರಾಮ ವಾಚಾಮವಿಷಯಃ ಪುಮಾನ್ ।**
**ವಾಚ್ಯವಾಚಕಭೇದೇನ ಭವಾನೇವ ಜಗನ್ಮಯಃ ॥ ೪೮ ॥**
**ಕಾರ್ಯಕಾರಣಕರ್ತೃತ್ವಫಲಸಾಧನಭೇದತಃ ।**
**ಏಕೋ ವಿಭಾಸಿ ರಾಮ ತ್ವಂ ಮಾಯಯಾ ಬಹುರೂಪಯಾ ॥ ೪೯ ॥**
**ತ್ವನ್ಮಾಯಾಮೋಹಿತಧಿಯಸ್ತ್ವಾಂ ನ ಜಾನಂತಿ ತತ್ತ್ವತಃ ।**
**ಮಾನುಷಂ ತ್ವಾಭಿಮನ್ಯಂತೇ ಮಾಯಿನಂ ಪರಮೇಶ್ವರಮ್ ॥ ೫೦ ॥**

೪೭-೫೦. ನೀನಾದರೂ, ಜಗತ್ತಿಗೇ ಮೊದಲನೆಯವನಾಗಿರುವೆ. ಹಾಗೂ ಜಗತ್ತಿಗೆಲ್ಲ ಆಶ್ರಯನೂ ಆಗಿದ್ದೀಯೆ. ಪರಮನಾದ ನೀನು ಎಲ್ಲಾ ಪ್ರಾಣಿಗಳಲ್ಲಿಯೂ (ಪ್ರವೇಶಿಸಿದ್ದರೂ ಸಂಸಾರಕ್ಕೆ)ಅಂಟಿಕೊಳ್ಳದೆ ಒಬ್ಬನೇ ಆಗಿ ಪ್ರಕಾಶಿಸುತ್ತಿರುವೆ. ಎಲೈ ರಾಮನೆ, ನೀನು ಓಂಕಾರವಾಚ್ಯನು. ಮಾತುಗಳಿಗೆ ಸಿಗುವವನಲ್ಲದ ಪುರುಷನು, ಜಗತ್ತನ್ನೆಲ್ಲ ವಾಚ್ಯವಾಚಕಗಳೆಂಬ ರೂಪದಿಂದ ತುಂಬಿರುವವನೂ ನೀನೇ. ಎಲೈ ರಾಮನೆ, ನೀನು ಬಹುರೂಪವಾದ ಮಾಯೆಯಿಂದ ಕಾರ್ಯ, ಕಾರಣ ಕರ್ತೃ, ಫಲ, ಸಾಧನಗಳೆಂಬ ನಾನಾರೂಪನಾಗಿ ತೋರಿಕೊಂಡಿರುತ್ತೀಯೆ. ನಿನ್ನ ಮಾಯೆಯಿಂದ ಮೋಹಿತವಾದ ಬುದ್ಧಿಯುಳ್ಳವರು ನಿನ್ನ ನಿಜವನ್ನು ಅರಿಯರು. ಮಾಯಿಯಾದ ಪರಮೇಶ್ವರನಾದ ನಿನ್ನನ್ನು ಮನುಷ್ಯನೆಂದೇ ಭಾವಿಸಿರುವರು.

**ಆಕಾಶವತ್ ತ್ವಂ ಸರ್ವತ್ರ ಬಹಿರಂತರ್ಗತೋಽಮಲಃ ।**
**ಅಸಂಗೋ ಹ್ಯಚಲೋ ನಿತ್ಯಃ ಶುದ್ಧೋ ಬುದ್ಧಃ ಸದವ್ಯಯಃ ॥ ೫೧ ॥**
**ಯೋಷಿನ್ಮೂಢಾಽಹಮಜ್ಞಾ ತೇ ತತ್ತ್ವಂ ಜಾನೇ ಕಥಂ ವಿಭೋ ।**
**ತಸ್ಮಾತ್ತೇ ಶತಶೋ ರಾಮ ನಮಸ್ಕುರ್ಯಾಮನನ್ಯಧೀಃ ॥ ೫೨ ॥**
**ದೇವ ಮೇ ಯತ್ರ ಕುತ್ರಾಪಿ ಸ್ಥಿತಾಯಾ ಅಪಿ ಸರ್ವದಾ ।**
**ತ್ವತ್ಪಾದಕಮಲೇ ಸಕ್ತಾ ಭಕ್ತಿರೇವ ಸದಾಸ್ತು ಮೇ ॥ ೫೩ ॥**
**ನಮಸ್ತೇ ಪುರುಷಾಧ್ಯಕ್ಷ ನಮಸ್ತೇ ಭಕ್ತವತ್ಸಲ ।**
**ನಮಸ್ತೇಽಸ್ತು ಹೃಷೀಕೇಶ ನಾರಾಯಣ ನಮೋಽಸ್ತು ತೇ ॥ ೫೪ ॥**

೫೧-೫೪. ನೀನಾದರೋ ಆಕಾಶದಂತೆ ಎಲ್ಲೆಲ್ಲಿಯೂ ಹೊರಗೂ ಒಳಗೂ ಇದ್ದುಕೊಂಡು ಪರಿಶುದ್ಧನಾಗಿರುವೆ. ಮತ್ತು ಸಂಗವಿಲ್ಲದವನೂ, ಚಲನೆಯಿಲ್ಲದವನೂ ನಿತ್ಯಶುದ್ಧಬುದ್ಧ (ಮುಕ್ತ)ವಾದ ಸತ್ಸ್ವರೂಪನೂ ಆಗಿರುವೆ. ನಾನಾದರೋ ಅಜ್ಞಳಾದ, ಏನೂ ಅರಿಯದ ಹೆಂಗಸಾಗಿರುವೆನು. ಎಲೈ ವಿಭುವೆ, ನಿನ್ನ ತತ್ತ್ವವನ್ನು ಹೇಗೆ ತಾನೆ ತಿಳಿದೇನು? ಆದ್ದರಿಂದ ಎಲೈ ರಾಮನೆ, ನಿನಗೆ ಅನನ್ಯಬುದ್ಧಿಯಿಂದ ನೂರಾರುಬಾರಿ ನಾನು ನಮಸ್ಕರಿಸುವೆನು. ಎಲೈ ದೇವನೆ, ನನಗೆ ಎಲ್ಲಿಯೇ ಇದ್ದುಕೊಂಡಿದ್ದರೂ ನಿನ್ನ

ಪಾದಕಮಲದಲ್ಲಿಯೇ ಯಾವಾಗಲೂ ಅನುರಕ್ತವಾಗಿರುವ ಭಕ್ತಿಯು ಮಾತ್ರ ಇದ್ದು ಕೊಂಡಿರಲಿ. ಪುರುಷರಿಗೆಲ್ಲ ಒಡೆಯನೆ, ಭಕ್ತರಲ್ಲಿ ದಯೆಯುಳ್ಳವನೆ, ಇಂದ್ರಿಯಗಳಿಗೆಲ್ಲ ಪ್ರಭುವೆ, ನಾರಾಯಣನೆ, ನಿನಗೆ ಮತ್ತೆ ಮತ್ತೆ ನಮಸ್ಕಾರ.

**ಭವಭಯಹರಮೇಕಂ ಭಾನುಕೋಟಿಪ್ರಕಾಶಂ**
**ಕರಧೃತಶರಚಾಪಂ ಕಾಲಮೇಘಾವಭಾಸಮ್ ।**
**ಕನಕರುಚಿರವಸ್ತ್ರಂ ರತ್ನವತ್ಕುಂಡಲಾಢ್ಯಂ**
**ಕಮಲವಿಶದನೇತ್ರಂ ಸಾನುಜಂ ರಾಮಮೀಡೇ ॥ ೫೫ ॥**

೫೫. ಸಂಸಾರಭಯವನ್ನು ಹೋಗಲಾಡಿಸುವವನೂ ಕೋಟಿಸೂರ್ಯ ಪ್ರಕಾಶನೂ ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದವನೂ ಕಾಲಮೇಘದಂತೆ ಕಾಂತಿ ಯುಳ್ಳವನೂ ಚಿನ್ನದ ಬಣ್ಣದ ರಮಣೀಯವಾದ ಕಿವಿಯ ಆಭರಣವುಳ್ಳವನೂ ಕಮಲ ದಂತೆ ಅಗಲವಾದ ಕಣ್ಣುಗಳುಳ್ಳವನೂ ಆದ ಲಕ್ಷ್ಮಣಸಹಿತನಾದ ರಾಮನನ್ನು ಸ್ತೋತ್ರ ಮಾಡುವೆನು.

**ಸ್ತುತ್ವೈವಂ ಪುರುಷಂ ಸಾಕ್ಷಾದ್ರಾಘವಂ ಪುರತಃ ಸ್ಥಿತಮ್ ।**
**ಪರಿಕ್ರಮ್ಯ ಪ್ರಣಮ್ಯಾಶು ಸಾನುಜ್ಞಾತಾ ಯಯೌ ಪತಿಮ್ ॥ ೫೬ ॥**

೫೬. ಈ ರೀತಿಯಾಗಿ ಎದುರಿಗೇ ನಿಂತಿರುವ ಪುರುಷಶ್ರೇಷ್ಠನಾದ ಶ್ರೀರಾಮ ನನ್ನು ಸ್ತೋತ್ರಮಾಡಿದ ಆಕೆಯು ಪ್ರದಕ್ಷಿಣೆ- ನಮಸ್ಕಾರಗಳನ್ನು ಮಾಡಿದವಳಾಗಿ (ರಾಮನ) ಅಪ್ಪಣೆಯನ್ನು ಪಡೆದು ಕೂಡಲೆ ಗಂಡನಿದ್ದಲ್ಲಿಗೆ ಹೊರಟುಹೋದಳು.

**ಅಹಲ್ಯಯಾ ಕೃತಂ ಸ್ತೋತ್ರಂ ಯಃ ಪಠೇದ್ ಭಕ್ತಿಸಂಯುತಃ ।**
**ಸ ಮುಚ್ಯತೇಽಖಿಲೈಃ ಪಾಪೈಃ ಪರಂ ಬ್ರಹ್ಮಾಧಿಗಚ್ಛತಿ ॥ ೫೭ ॥**
**ಪುತ್ರಾದ್ಯರ್ಥೀ ಪಠೇದ್ ಭಕ್ತ್ಯಾ ರಾಮಂ ಹೃದಿ ನಿಧಾಯ ಚ ।**
**ಸಂವತ್ಸರೇಣ ಲಭತೇ ವಂಧ್ಯಾ ಅಪಿ ಸುಪುತ್ರಕಮ್ ॥ ೫೮ ॥**
**ಸರ್ವಾನ್ ಕಾಮಾನವಾಪ್ನೋತಿ ರಾಮಚಂದ್ರಪ್ರಸಾದತಃ ॥**

೫೭-೫೮. ಅಹಲ್ಯೆಯಿಂದ ಮಾಡಲ್ಪಟ್ಟ ಈ ಸ್ತೋತ್ರವನ್ನು ಯಾವನು ಭಕ್ತಿಯಿಂದ ಕೂಡಿದವನಾಗಿ ಪಠಿಸುವನೋ ಅವನು ಎಲ್ಲಾ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಪರಬ್ರಹ್ಮವನ್ನೇ ಸೇರುವನು. ಮಕ್ಕಳೇ ಮುಂತಾದ ಫಲವನ್ನು ಬಯಸಿ, ಶ್ರೀರಾಮನನ್ನೇ ಹೃದಯದಲ್ಲಿ ನೆನೆಯುತ್ತಾ ಭಕ್ತಿಯಿಂದ ಪಠಿಸಿದ್ದೇ ಆದರೆ ಬಂಜೆಯಾದವಳು ಕೂಡ ಒಂದು ವರ್ಷದೊಳಗೇ ಸತ್ಪುತ್ರನನ್ನು ಪಡೆಯುವಳು. ಮತ್ತು ಶ್ರೀರಾಮಚಂದ್ರನ ಪ್ರಸಾದದಿಂದ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುವಳು.

**ಬ್ರಹ್ಮಘ್ನೋ ಗುರುತಲ್ಪಗೋಽಪಿ ಪುರುಷಃ ಸ್ತೇಯೀ ಸುರಾಪೋಽಪಿ ವಾ**
**ಮಾತೃಭ್ರಾತೃವಿಹಿಂಸಕೋಽಪಿ ಸತತಂ ಭೋಗೈಕಬದ್ಧಾತುರಃ ।**
**ನಿತ್ಯಂ ಸ್ತೋತ್ರಮಿದಂ ಜಪನ್ ರಘುಪತಿಂ ಭಕ್ತ್ಯಾ ಹೃದಿಸ್ಥಂ ಸ್ಮರನ್**
**ಧ್ಯಾಯನ್ ಮುಕ್ತಿಮುಪೈತಿ ಕಿಂ ಪುನರಸೌ ಸ್ವಾಚಾರಯುಕ್ತೋ ನರಃ ॥ ೫೯॥**

೫೯. ಬ್ರಹ್ಮಹತ್ಯೆಯನ್ನು ಮಾಡಿದವನಾಗಿರಲಿ, ಗುರುತಲ್ಪಗಮನ (ಗುರುವಿನ ಹೆಂಡತಿಯನ್ನು ಕಾಮಿಸುವಿಕೆ)ವನ್ನು ಮಾಡಿದವನಾಗಿರಲಿ, ಕಳ್ಳನಾಗಿರಲಿ, ಮದ್ಯಪಾನ ಮಾಡುವವನಾಗಿರಲಿ, ತಾಯಿ, ಸೋದರರುಗಳನ್ನು ಹಿಂಸೆಮಾಡುವವನಾಗಿರಲಿ, ಸದಾ ಕಾಲವೂ ವಿಷಯಭೋಗಗಳಲ್ಲಿಯೇ ನೆಟ್ಟ ಮನಸ್ಸಿನವನಾಗಿರಲಿ, (ಇಂಥ ಮಹಾಪಾಪಿ ಯಾಗಿದ್ದರೂ) ಯಾವನೇ ಪುರುಷನು ಪ್ರತಿದಿನವೂ ಈ ಸ್ತೋತ್ರವನ್ನು ಜಪಿಸುತ್ತಾ ಹೃದಯದಲ್ಲಿರುವ ರಘುಪತಿಯನ್ನು ನೆನೆಯುತ್ತಾ (ರಾಮನನ್ನೇ) ಚಿಂತಿಸುವನೋ ಅಂಥವನು ಮುಕ್ತಿಯನ್ನು ಪಡೆಯುವನು. ಇನ್ನು ಸದಾಚಾರಯುಕ್ತನಾಗಿರುವ ಮನುಷ್ಯನು ಪಠಿಸಿದಲ್ಲಿ ಉದ್ಧಾರವಾಗುವನೆಂದು ಹೇಳತಕ್ಕದ್ದೇನಿದೆ ?

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ**
**ಪಂಚಮಃ ಸರ್ಗಃ**

:::::::::

## ಆರನೆಯ ಸರ್ಗ

**ಸೂತ ಉವಾಚ-**
**ವಿಶ್ವಾಮಿತ್ರೋಽಥ ತಂ ಪ್ರಾಹ ರಾಘವಂ ಸಹಲಕ್ಷ್ಮಣಮ್ ।**
**ಗಚ್ಛಾಮೋ ವತ್ಸ ಮಿಥಿಲಾಂ ಜನಕೇನಾಭಿಪಾಲಿತಾಮ್ ॥ ೧॥**
**ದೃಷ್ಟ್ವಾ ಕ್ರತುವರಂ ಪಶ್ಚಾದಯೋಧ್ಯಾಂ ಗಂತುಮರ್ಹಸಿ ।**
**ಇತ್ಯುಕ್ತ್ವಾ ಪ್ರಯಯೌ ಗಂಗಾಮುತ್ತರ್ತುಂ ಸಹರಾಘವಃ ॥ ೨ ॥**
**ತಸ್ಮಿನ್ ಕಾಲೇ ನಾವಿಕೇನ ನಿಷಿದ್ಧೋ ರಘುನಂದನಃ ॥**

೧-೨. ಸೂತನಿಂತೆಂದನು : ಅನಂತರ ಲಕ್ಷ್ಮಣಸಹಿತನಾದ ಆ ರಾಮನನ್ನು ಕುರಿತು ವಿಶ್ವಾಮಿತ್ರನು ಹೀಗೆಂದನು : ಅಪ್ಪಾ ಮಗು, ಜನಕನಿಂದ ಪರಿಪಾಲಿಸಲ್ಪಡು ತ್ತಿರುವ ಮಿಥಿಲಾನಗರಿಯನ್ನು ಕುರಿತು ನಾವು ಹೋಗೋಣ. (ಅಲ್ಲಿ ನಡೆಯುವ) ಶ್ರೇಷ್ಠವಾದ ಯಜ್ಞವನ್ನು ನೋಡಿಕೊಂಡು ಅನಂತರ ಅಯೋಧ್ಯೆಗೆ ನೀನು ಹೋಗಬಹು ದಾಗಿದೆ.' ಹೀಗೆಂದು ಹೇಳಿ ರಾಮನೊಡನೆ ಗಂಗೆಯನ್ನು ದಾಟಲು ಹೊರಟನು. ಆಗ ನಾವಿಕನು (ಅಂಬಿಗನು) ರಾಮನನ್ನು ತಡೆದನು.

**ನಾವಿಕ ಉವಾಚ-**

**ಕ್ಷಾಲಯಾಮಿ ತವ ಪಾದಪಂಕಜಂ**
**ನಾಥ ದಾರುದೃಷದೋಃ ಕಿಮಂತರಮ್ ।**
**ಮಾನುಷೀಕರಣಚೂರ್ಣಮಸ್ತಿ ತೇ**
**ಪಾದಯೋರಿತಿ ಕಥಾ ಪ್ರಥೀಯಸೀ ॥ ૩ ॥**
**ಪಾದಾಂಬುಜಂ ತೇ ವಿಮಲಂ ಹಿ ಕೃತ್ವಾ**
**ಪಶ್ಚಾತ್ ಪರಂ ತೀರಮಹಂ ನಯಾಮಿ ।**
**ನೋ ಚೇತ್ತರೀ ಸದ್ಯುವತೀ ಮಲೇನ**
**ಸ್ಯಾಚ್ಚೇದ್ವಿಭೋ ವಿದ್ಧಿ ಕುಟುಂಬಹಾನಿಃ ॥ ೪ ॥**

೩-೪. ನಾವಿಕನಿಂತೆಂದನು : ಎಲೈ ಪ್ರಭುವೆ, ನಿನ್ನ ಪಾದಕಮಲಗಳನ್ನು ತೊಳೆಯುವೆನು. ಏಕೆಂದರೆ ನಿನ್ನ ಕಾಲುಗಳಲ್ಲಿ (ಯಾವ ಪದಾರ್ಥವನ್ನಾದರೂ) ಮನುಷ್ಯನನ್ನಾಗಿ ಮಾಡುವಂಥ ಶಕ್ತಿಯುಳ್ಳ ಧೂಳು ಇದ್ದುಕೊಂಡಿದೆ - ಎಂದು ಪ್ರಸಿದ್ಧ ವಾದ ಕಥೆಯಿದೆ. ಮರಕ್ಕೂ ಕಲ್ಲಿಗೂ ವ್ಯತ್ಯಾಸವೇನಿದ್ದೀತು? (ಎರಡೂ ಅಚೇತನಗಳೇ ಆದ್ದರಿಂದ ಕಲ್ಲು ಸ್ತ್ರೀಯಾದದ್ದು ಅನುಭವದಲ್ಲಿರುವದರಿಂದ ನಿನ್ನ ಪಾದಸ್ಪರ್ಶದಿಂದ ನನ್ನ ದೋಣಿಯೂ ಹಾಗೇ ಆದೀತೆಂಬ ಭಯವುಂಟಾಗಿದೆ.) ಆದ್ದರಿಂದ ನಿನ್ನ ಪಾದಾರವಿಂದಗಳನ್ನು ಮಣ್ಣಿಲ್ಲದಂತೆ ತೊಳೆದು ಅನಂತರ (ನದಿಯ ಆ ಕಡೆಯ) ತೀರಕ್ಕೆ ನಿನ್ನನ್ನು ಕರೆದೊಯ್ಯುವೆನು. ಹಾಗಿಲ್ಲವಾದರೆ - ನಿನ್ನ ಪಾದದ ಮಣ್ಣಿನಿಂದ ನಾವೆಯು (ದೋಣಿಯು) ಯುವತಿಯಾಗಿಬಿಟ್ಟರೆ ಎಲೈ ವಿಭುವೆ, ನನ್ನ ಸಂಸಾರನಿರ್ವಹಣೆಗೇ ಹಾನಿಯಾದೀತಲ್ಲವೆ ? ಇದನ್ನು ನೀನು ತಿಳಿ.

**ಇತ್ಯುಕ್ತ್ವಾ ಕ್ಷಾಲಿತೌ ಪಾದೌ ಪರಂ ತೀರಂ ತತೋ ಗತಾಃ ।**
**ಕೌಶಿಕೋ ರಘುನಾಥೇನ ಸಹಿತೋ ಮಿಥಿಲಾಂ ಯಯೌ ॥ ೫ ॥**
**ವಿದೇಹಸ್ಯ ಪುರಂ ಪ್ರಾತಃ ಋಷಿವಾಟಂ ಸಮಾವಿಶತ್ ।**
**ಪ್ರಾಪ್ತಂ ಕೌಶಿಕಮಾಕರ್ಣ್ಯ ಜನಕೋಽತಿಮುದಾನ್ವಿತಃ ॥ ೬ ॥**
**ಪೂಜಾದ್ರವ್ಯಾಣಿ ಸಂಗೃಹ್ಯ ಸೋಪಾಧ್ಯಾಯಃ ಸಮಾಯಯೌ ।**
**ದಂಡವತ್ ಪ್ರಣಿಪತ್ಯಾಥ ಪೂಜಯಾಮಾಸ ಕೌಶಿಕಮ್ ॥ ೭ ॥**

೫-೭. ಈ ರೀತಿಯಾಗಿ ಹೇಳಿ ಎರಡುಪಾದಗಳನ್ನೂ (ನಾವಿಕನು) ತೊಳೆದನು. ಅನಂತರ (ಇವರುಗಳು) ಆಚೆಯ ದಡವನ್ನು ತಲುಪಿದರು. ವಿಶ್ವಾಮಿತ್ರನು ರಾಮ ನೊಡನೆ ವಿದೇಹರಾಜನ ಪಟ್ಟಣವಾದ ಮಿಥಿಲಾನಗರಿಗೆ ಹೋದನು. ಬೆಳಗ್ಗೆ ಋಷಿಗಳ ನಿವಾಸಸ್ಥಾನಕ್ಕೆ ಬಂದನು. ವಿಶ್ವಾಮಿತ್ರನು ಬಂದಿದ್ದಾನೆಂಬ ಸುದ್ದಿಯನ್ನು ಜನಕನು ಕೇಳಿ

ಬಹಳ ಸಂತೋಷದಿಂದ ಪೂಜಾದ್ರವ್ಯಗಳನ್ನೆಲ್ಲ ಜೋಡಿಸಿಕೊಂಡು ಪುರೋಹಿತನೊಡನೆ ಬಂದು ಸೇರಿದನು. ದೀರ್ಘದಂಡನಮಸ್ಕಾರವನ್ನು ಮಾಡಿ ವಿಶ್ವಾಮಿತ್ರನನ್ನು ಪೂಜಿಸಿದನು.

**ಪಪ್ರಚ್ಛ ರಾಘವೌ ದೃಷ್ಟ್ವಾ ಸರ್ವಲಕ್ಷಣಸಂಯುತೌ ।**
**ದ್ಯೋತಯಂತೌ ದಿಶಃ ಸರ್ವಾಶ್ಚಂದ್ರಸೂರ್ಯಾವಿವಾಪರೌ ॥ ೮ ॥**
**ಕಸ್ಯೈತೌ ನರಶಾರ್ದೂಲೌ ಪುತ್ರೌ ದೇವಸುತೋಪಮೌ ।**
**ಮನಃಪ್ರೀತಿಕರೌ ಮೇಽದ್ಯ ನರನಾರಾಯಣಾವಿವ ॥ ೯ ॥**

೮-೯. ಸರ್ವಸುಲಕ್ಷಣಸಂಪನ್ನರಾದ ರಾಮಲಕ್ಷ್ಮಣರನ್ನು ನೋಡಿದನು. ಕಾಂತಿಯಿಂದ ಎಲ್ಲಾ ದಿಕ್ಕುಗಳನ್ನೂ ಬೆಳಗುತ್ತಾ ಮತ್ತೊಬ್ಬ ಚಂದ್ರ-ಸೂರ್ಯರಂತೆ ಇರುವ ಇವರನ್ನು ಕಂಡು (ವಿಶ್ವಾಮಿತ್ರರನ್ನು) ಕೇಳಿದನು. ಏನೆಂದರೆ : ನರಶ್ರೇಷ್ಠರಾದ, ದೇವಪುತ್ರರಿಗೆ ಸಮಾನರಾದ, ನರನಾರಾಯಣರಂತೆ ಇರುವ ಹಾಗೂ ನನ್ನ ಮನಸ್ಸಿಗೆ ಸಂತೋಷ ವುಂಟುಮಾಡುತ್ತಿರುವ ಇವರಿಬ್ಬರು ಯಾರ (ಮಕ್ಕಳು?)

**ಪ್ರತ್ಯುವಾಚ ಮುನಿಃ ಪ್ರೀತೋ ಹರ್ಷಯನ್ ಜನಕಂ ತದಾ ।**
**ಪುತ್ರೌ ದಶರಥಸ್ಯೈತೌ ಭ್ರಾತರೌ ರಾಮಲಕ್ಷ್ಮಣೌ ॥ ೧೦ ॥**
**ಮಖಸಂರಕ್ಷಣಾರ್ಥಾಯ ಮಯಾಽಽನೀತೌ ಪಿತುಃ ಪುರಾತ್ ।**
**ಆಗಚ್ಛನ್ ರಾಘವೋ ಮಾರ್ಗೇ ತಾಟಕಾಂ ವಿಶ್ವಘಾತಿನೀಮ್ ॥ ೧೧ ॥**
**ಶರೇಣೈಕೇನ ಹತವಾನ್ ನೋದಿತೋ ಮೇಽತಿವಿಕ್ರಮಃ ।**
**ತತೋ ಮಮಾಶ್ರಮಂ ಗತ್ವಾ ಮಮ ಯಜ್ಞವಿಹಿಂಸಕಾನ್ ॥ ೧೨ ॥**
**ಸುಬಾಹುಪ್ರಮುಖಾನ್ ಹತ್ವಾ ಮಾರೀಚಂ ಸಾಗರೇಽಕ್ಷಿಪತ್ ।**

೧೦-೧೨. ಸಂತುಷ್ಟನಾದ ಮುನಿಯು ಜನಕನನ್ನು ಸಂತೋಷಗೊಳಿಸುತ್ತಾ ಪ್ರತ್ಯುತ್ತರವನ್ನು ಕೊಟ್ಟನು. (ಏನೆಂದರೆ) ಇವರಿಬ್ಬರೂ ದಶರಥನ ಮಕ್ಕಳಾದ, ಭ್ರಾತೃಗಳಾದ ರಾಮಲಕ್ಮಣರೆಂಬುವರು. ತಂದೆಯ ಊರಿನಿಂದ ಯಜ್ಞದ ಸಂರಕ್ಷಣೆಗಾಗಿ ನನ್ನಿಂದ ಕರೆತರಲ್ಪಟ್ಟಿದ್ದರು. ದಾರಿಯಲ್ಲಿ ಬರುತ್ತಾ ಹೆಚ್ಚಿನ ಪರಾಕ್ರಮಶಾಲಿಯಾದ ರಾಮನು ಲೋಕಕಂಟಕಿಯಾದ ತಾಟಕೆಯನ್ನು ನನ್ನಿಂದ ಪ್ರೇರಿತನಾಗಿ ಒಂದೇ ಬಾಣದಿಂದ ಕೊಂದುಬಿಟ್ಟನು. ಅನಂತರ ನನ್ನ ಆಶ್ರಮಕ್ಕೆ ಬಂದು ನನ್ನ ಯಜ್ಞಗಳನ್ನು ಹಾಳುಮಾಡುತ್ತಿದ್ದ ಸುಬಾಹುವೇ ಮುಂತಾದವರನ್ನು ಕೊಂದುಹಾಕಿ ಮಾರೀಚನನ್ನು ಸಮುದ್ರದಲ್ಲಿ ಕೆಡವಿದನು.

**ತತೋ ಗಂಗಾತಟೇ ಪುಣ್ಯೇ ಗೌತಮಸ್ಯಾಶ್ರಮಂ ಶುಭಮ್ ॥ ೧೩ ॥**
**ಗತ್ವಾ ತತ್ರ ಶಿಲಾರೂಪಾ ಗೌತಮಸ್ಯ ವಧೂಃ ಸ್ಥಿತಾ ।**
**ಪಾದಪಂಕಜಸಂಸ್ಪರ್ಶಾತ್ ಕೃತಾ ಮಾನುಷರೂಪಿಣೀ ॥ ೧೪ ॥**
**ದೃಷ್ಟ್ವಾಽಹಲ್ಯಾಂ ನಮಸ್ಕೃತ್ಯ ತಯಾ ಸಮ್ಯಕ್ ಪ್ರಪೂಜಿತಃ ।**
**ಇದಾನೀಂ ದ್ರಷ್ಟುಕಾಮಸ್ತೇ ಗೃಹೇ ಮಾಹೇಶ್ವರಂ ಧನುಃ ॥ ೧೫ ॥**
**ಪೂಜಿತಂ ರಾಜಭಿಃ ಸರ್ವೈರ್ದೃಷ್ಟಮಿತ್ಯನುಶುಶ್ರುವೇ ।**
**ಅತೋ ದರ್ಶಯ ರಾಜೇಂದ್ರ ಶೈವಂ ಚಾಪಮನುತ್ತಮಮ್ ॥ ೧೬ ॥**
**ದೃಷ್ಟ್ವಾಽಯೋಧ್ಯಾಂ ಜಿಗಮಿಷುಃ ಪಿತರಂ ದ್ರಷ್ಟುಮಿಚ್ಛತಿ ।**

೧೩-೧೬. ಅನಂತರ ಪುಣ್ಯತಮವಾದ ಗಂಗಾನದಿಯ ದಡದಲ್ಲಿರುವ ಶುಭಕರವಾದ ಗೌತಮನ ಆಶ್ರಮಕ್ಕೆ ಹೋಗಿ ಅಲ್ಲಿ ಶಿಲೆಯ ರೂಪಳಾಗಿದ್ದುಕೊಂಡಿದ್ದ ಆತನ ಹೆಂಡತಿಯನ್ನು ಪಾದಕಮಲಗಳ ಸಂಸ್ಪರ್ಶಮಾತ್ರದಿಂದ ಮನುಷ್ಯಳನ್ನಾಗಿ ಮಾಡಿದನು. ಅಹಲ್ಯೆಯನ್ನು ಕಂಡು ನಮಸ್ಕರಿಸಿ ಆಕೆಯಿಂದ ಪೂಜಿತನಾಗಿ ಈಗ ನಿನ್ನ ಮನೆಯಲ್ಲಿರುವ ಶಿವಧನುಸ್ಸನ್ನು ನೋಡಲಿಚ್ಛಿಸಿ ಬಂದಿರುತ್ತಾನೆ. ಮತ್ತು ಅದು ನಿಮ್ಮ ವಂಶೀಕರಿಂದ ಪೂಜಿಸಲ್ಪಟ್ಟು ಎಲ್ಲಾ ರಾಜರುಗಳಿಂದಲೂ ದರ್ಶನಮಾಡಲ್ಪಟ್ಟಿದೆ ಯೆಂದೂ ನಾನು ಕೇಳಿದ್ದೇನೆ. ಆದ್ದರಿಂದ ಎಲೈ ರಾಜೇಂದ್ರನೆ, ಅಮೂಲ್ಯವಾದ ಆ ಶಿವಧನುಸ್ಸನ್ನು ತೋರಿಸುವವನಾಗು. ಅದನ್ನು ನೋಡಿಕೊಂಡು (ರಾಮನು) ಅಯೋಧ್ಯೆಗೆ ಹಿಂತಿರುಗಿ ತಂದೆಯನ್ನು ನೋಡಲಿಚ್ಛಿಸುತ್ತಾನೆ.

**ಇತ್ಯುಕ್ತೋ ಮುನಿನಾ ರಾಜ್ಞಾ ಪೂಜಾರ್ಹಾವಿತಿ ಪೂಜಯಾ ।**
**ಪೂಜಯಾಮಾಸ ಧರ್ಮಜ್ಞೋ ವಿಧಿದೃಷ್ಟೇನ ಕರ್ಮಣಾ ॥ ೧೭ ॥**
**ತತಃ ಸಂಪ್ರೇಷಯಾಮಾಸ ಮಂತ್ರಿಣಂ ಬುದ್ಧಿಮತ್ತರಮ್ ।**

೧೭. ಈ ರೀತಿಯಾಗಿ ಮುನಿಯಿಂದ ತಿಳಿಸಲ್ಪಟ್ಟ ಧರ್ಮಜ್ಞನಾದ ಜನಕರಾಜನು 'ಇವರು ಗೌರವಕ್ಕೆ ಪಾತ್ರರು' ಎಂದು ಭಾವಿಸಿ ವಿಧ್ಯುಕ್ತವಾದ ಕ್ರಮದಿಂದ ಇವರನ್ನು ಪೂಜಿಸಿದನು. ಅನಂತರ ಬುದ್ಧಿವಂತನಾದ ಮಂತ್ರಿಯನ್ನು (ಧನುಸ್ಸು ತರಲು) ಕಳುಹಿಸಿದನು.

**ಜನಕ ಉವಾಚ-**

**ಶೀಘ್ರಮಾನಯ ವಿಶ್ವೇಶಚಾಪಂ ರಾಮಾಯ ದರ್ಶಯ ॥ ೧೮ ॥**
**ತತೋ ಗತೇ ಮಂತ್ರಿವರೇ ರಾಜಾ ಕೌಶಿಕಮಬ್ರವೀತ್ ।**
**ಯದಿ ರಾಮೋ ಧನುರ್ಧೃತ್ವಾ ಕೋಟ್ಯಾಮಾರೋಪಯೇತ್ ಗುಣಮ್ ॥ ೧೯ ॥**
**ತದಾ ಮಯಾತ್ಮಜಾ ಸೀತಾ ದೀಯತೇ ರಾಘವಾಯ ಹಿ ।**

**ತಥೇತಿ ಕೌಶಿಕೋಽಪ್ಯಾಹ ರಾಮಂ ಸಂವೀಕ್ಷ್ಯ ಸಸ್ಮಿತಮ್ ॥ ೨೦ ॥**
**ಶೀಘ್ರಂ ದರ್ಶಯ ಚಾಪಾಗ್ರ್ಯಂ ರಾಮಾಯಾಮಿತತೇಜಸೇ ।**

೧೮-೨೦. ಜನಕನಿಂತೆಂದನು : 'ಮಹೇಶ್ವರನ ಧನುಸ್ಸನ್ನು ಜಾಗ್ರತೆಯಾಗಿ ತೆಗೆದುಕೊಂಡು ಬಾ ; ರಾಮನಿಗೆ ತೋರಿಸು '. ಹೀಗೆಂದು ಹೇಳಿದಕೂಡಲೆ ಮಂತ್ರಿಯು ಹೊರಟುಹೋದನು. ಆಗ ರಾಜನು ವಿಶ್ವಾಮಿತ್ರನನ್ನು ಕುರಿತು 'ರಾಮನು ಒಂದು ವೇಳೆ ಧನುಸ್ಸನ್ನು ಎತ್ತಿ ತುದಿಗೆ ಹಗ್ಗವನ್ನು ಬಿಗಿದದ್ದೇ ಆದರೆ ಆಗ ನನ್ನ ಮಗಳಾದ ಸೀತೆಯನ್ನು ರಾಮನಿಗೆ ಕೊಡುವೆನು' ಎಂದನು. ವಿಶ್ವಾಮಿತ್ರನೂ ರಾಮನನ್ನು ಮುಗುಳುನಗೆಯಿಂದ ನೋಡಿ 'ಹಾಗೆಯೇ ಆಗಲಿ, ಆ ಶ್ರೇಷ್ಠಧನುಸ್ಸನ್ನು ಅಪಾರತೇಜಸ್ಸುಳ್ಳ ರಾಮನಿಗೆ ತೋರಿಸು' - ಎಂದನು.

**ಏವಂ ಬ್ರುವತಿ ಮೌನೀಶೇ ಆಗತಾಶ್ಚಾಪವಾಹಕಾಃ ।**
**ಚಾಪಂ ಗೃಹೀತ್ವಾ ಬಲಿನಃ ಪಂಚಸಾಹಸ್ರಸಂಖ್ಯಕಾಃ ॥ ೨೧ ॥**
**ಘಂಟಾಶತಸಮಾಯುಕ್ತಂ ಮಣಿವಜ್ರಾದಿಭೂಷಿತಮ್ ।**
**ದರ್ಶಯಾಮಾಸ ರಾಮಾಯ ಮಂತ್ರೀ ಮಂತ್ರಯತಾಂ ವರಃ ॥ ೨೨ ॥**

೨೧-೨೨. ಈ ರೀತಿಯಾಗಿ ಮುನಿಶ್ರೇಷ್ಠನು ಹೇಳುತ್ತಿರಲಾಗಿ ಧನುಸ್ಸನ್ನು ಹೊತ್ತುಕೊಂಡ ಬಲಿಷ್ಠರಾದ ಐದುಸಾವಿರ ಜನರು ನೂರಾರು ಘಂಟೆಗಳಿಂದ ಕೂಡಿದ ಮಾಣಿಕ್ಯ,ವಜ್ರಾದಿಗಳಿಂದ ಅಲಂಕೃತವಾದ ಬಿಲ್ಲನ್ನು ತೆಗೆದುಕೊಂಡು ಬಂದರು. ಮಂತ್ರಾಲೋಚನೆಯಲ್ಲಿ ಶ್ರೇಷ್ಠನಾದ ಆ ಮಂತ್ರಿಯು ಅದನ್ನು ರಾಮನಿಗೆ ತೋರಿಸಿದನು.

**ದೃಷ್ಟ್ವಾ ರಾಮಃ ಪ್ರಹೃಷ್ಟಾತ್ಮಾ ಬದ್ಧ್ವಾ ಪರಿಕರಂ ದೃಢಮ್ ।**
**ಗೃಹೀತ್ವಾ ವಾಮಹಸ್ತೇನ ಲೀಲಯಾ ತೋಲಯನ್ ಧನುಃ ॥ ೨೩ ॥**
**ಆರೋಪಯಾಮಾಸ ಗುಣಂ ಪಶ್ಯತ್ಸ್ವಖಿಲರಾಜಸು ।**
**ಈಷದಾಕರ್ಷಯಾಮಾಸ ಪಾಣಿನಾ ದಕ್ಷಿಣೇನ ಸಃ ॥ ೨೪ ॥**
**ಬಭಂಜಾಖಿಲಹೃತ್ಸಾರೋ ದಿಶಃ ಶಬ್ದೇನ ಪೂರಯನ್।**

೨೩-೨೪. (ಧನುಸ್ಸನ್ನು) ಕಂಡ ರಾಮನು ಸಂತೋಷದಿಂದ ಗಟ್ಟಿಯಾಗಿ ಸೊಂಟಕಟ್ಟಿದವನಾಗಿ ಎಡಗೈಯಿಂದ ಬಿಲ್ಲನ್ನು ಹಿಡಿದುಕೊಂಡು ಅಲುಗಾಡಿಸುತ್ತಾ ಎಲ್ಲಾ ರಾಜರೂ ನೋಡುತ್ತಿರುವಂತೆಯೇ ಹಗ್ಗವನ್ನು ಎತ್ತಿಕಟ್ಟಿದನು. ಹಾಗೂ ಎಲ್ಲರ ಹೃದಯಾಂತರಾತ್ಮನಾದ ರಾಮನು (ಅದನ್ನು) ಬಲಗೈಯಿಂದ ಸ್ವಲ್ಪ ಜಗ್ಗಿದನು. ದಿಕ್ಕುಗಳೆಲ್ಲವೂ ಮೊಳಗುವಂತೆ ಶಬ್ದಮಾಡುತ್ತಾ ಅದು ಮುರಿದುಬಿತ್ತು.

**ದಿಶಶ್ಚ ವಿದಿಶಶ್ಚೈವ ಸ್ವರ್ಗಂ ಮರ್ತ್ಯಂ ರಸಾತಲಮ್ ।**
**ತದದ್ಭುತಮಭೂತ್ತತ್ರ ದೇವಾನಾಂ ದಿವಿ ಪಶ್ಯತಾಮ್ ॥ ೨೫ ॥**
**ಆಚ್ಛಾದಯಂತಃ ಕುಸುಮೈರ್ದೇವಾಃ ಸ್ತುತಿಭಿರೀಡಿರೇ ।**
**ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋ ಗಣಾಃ ॥ ೨೬ ॥**
**ದ್ವಿಧಾ ಭಗ್ನಂ ಧನುರ್ದೃಷ್ಟ್ವಾ ರಾಜಾಲಿಂಗ್ಯ ರಘೂದ್ವಹಮ್ ।**
**ವಿಸ್ಮಯಂ ಲೇಭಿರೇ ಸೀತಾಮಾತರೋಂತಃಪುರಾಜಿರೇ ॥ ೨೭ ॥**

೨೫-೨೭. ದಿಕ್ಕುವಿದಿಕ್ಕುಗಳೂ ಸ್ವರ್ಗ, ಮರ್ತ್ಯ, ಪಾತಾಳಲೋಕಗಳೂ ಮೊಳಗಿದವು. ಆಕಾಶದಲ್ಲಿ ನೋಡುತ್ತಿದ್ದ ದೇವತೆಗಳಿಗೆ ಅದೊಂದು ಆಶ್ಚರ್ಯಕರವಾಗಿ ಕಂಡಿತು. ದೇವತೆಗಳೆಲ್ಲರೂ ಹೂಗಳಿಂದ ಮುಚ್ಚುವವರಾಗಿ ಸ್ತೋತ್ರಗಳಿಂದ ಹೊಗಳಿದರು. ದೇವದುಂದುಭಿಗಳು ಬಾರಿಸಲ್ಪಟ್ಟವು. ಅಪ್ಸರಸ್ತ್ರೀಯರು ಕುಣಿದಾಡಿದರು. ಎರಡುತುಂಡಾದ ಧನುಸ್ಸನ್ನು ಕಂಡು ಜನಕರಾಜನು ರಾಮನನ್ನು ಅಪ್ಪಿಕೊಂಡನು. ಅಂತಃಪುರದ, ಅಂಗಳದಲ್ಲಿ ನೆರದಿದ್ದ ಸೀತಾದೇವಿಯ ತಾಯಂದಿರೆಲ್ಲರೂ (ಹಿರಿಯ ಸ್ತ್ರೀಯರೆಲ್ಲರೂ) ಆಶ್ಚರ್ಯವನ್ನು ಹೊಂದಿದರು.

**ಸೀತಾ ಸ್ವರ್ಣಮಯೀಂ ಮಾಲಾಂ ಗೃಹೀತ್ವಾ ದಕ್ಷಿಣೇ ಕರೇ ।**
**ಸ್ಮಿತವಕ್ತ್ರಾ ಸ್ವರ್ಣವರ್ಣಾ ಸರ್ವಾಭರಣಭೂಷಿತಾ ॥ ೨೮ ॥**
**ಮುಕ್ತಾಹಾರೈಃ ಕರ್ಣಪತ್ರೈಃ ಕ್ವಣಚ್ಚರಣನೂಪುರಾ ।**
**ದುಕೂಲಪರಿಸಂವೀತಾ ವಸ್ತ್ರಾಂತರ್ವ್ಯಂಜಿತಸ್ತನೀ ॥ ೨೯ ॥**
**ರಾಮಸ್ಯೋಪರಿ ನಿಕ್ಷಿಪ್ಯ ಸ್ಮಯಮಾನಾ ಮುದಂ ಯಯೌ ।**

೨೮-೨೯. ಸೀತೆಯು ಚಿನ್ನದ ಮಾಲೆಯನ್ನು ಬಲಗೈಯಲ್ಲಿ ಹಿಡಿದು ಕೊಂಡಿದ್ದಳು. ಆಕೆಯು ಮುಗುಳುನಗೆಯಿಂದ ಕೂಡಿದ ಮುಖ, ಚಿನ್ನದಂಥ ಹೊಂಬಣ್ಣ, ಎಲ್ಲಾ ವಿಧವಾದ ಒಡವೆಗಳ ಅಲಂಕಾರ, ಮುತ್ತಿನ ಕಿವಿಯೋಲೆಗಳು, ಶಬ್ದಮಾಡುವ ಕಾಲುಗೆಜ್ಜೆಗಳು, ರೇಷ್ಮೆಯ ವಸ್ತ್ರದ ಉಡಿಗೆ, ತೆಳುವಾದ ಆ ಬಟ್ಟೆಯೊಳಗೆ ಯೌವನವನ್ನು ಸೂಚಿಸುವ ಸ್ತನಗಳು - ಇವುಗಳಿಂದ ಕೂಡಿದ್ದು ಮುಗುಳುನಗುತ್ತಾ ರಾಮನ ಮೇಲೆ ಆ ಚಿನ್ನದ ಹಾರವನ್ನು ತೊಡಿಸಿ ಸಂತೋಷವನ್ನು ಹೊಂದಿದಳು.

**ತತೋ ಮುಮುದಿರೇ ಸರ್ವೇ ರಾಜದಾರಾಃ ಸ್ವಲಂಕೃತಮ್ ।**
**ಗವಾಕ್ಷಜಾಲರಂಧ್ರೇಭ್ಯೋ ದೃಷ್ಟ್ವಾ ಲೋಕವಿಮೋಹನಮ್ ॥ ೩೦ ॥**

೩೦. ಅನಂತರ ರಾಜನ ಎಲ್ಲಾ ಪತ್ನಿಯರೂ ಕಿಟಕಿಗಳ ಸಂದುಗಳಿಂದ ಲೋಕ ವಿಮೋಹನನಾದ, ಚೆನ್ನಾಗಿ ಅಲಂಕೃತನಾದ ರಾಮನನ್ನು ನೋಡಿ ಸಂತೋಷಗೊಂಡರು.

**ತತೋಽಬ್ರವೀನ್ಮುನಿಂ ರಾಜಾ ಸರ್ವಶಾಸ್ತ್ರವಿಶಾರದಃ ।**
**ಭೋ ಕೌಶಿಕ ಮುನಿಶ್ರೇಷ್ಠ ಪತ್ರಂ ಪ್ರೇಷಯ ಸತ್ವರಮ್ ॥ ೩೧॥**
**ರಾಜಾ ದಶರಥಃ ಶೀಘ್ರಮಾಗಚ್ಛತು ಸಪುತ್ರಕಃ ।**
**ವಿವಾಹಾರ್ಥಂ ಕುಮಾರಾಣಾಂ ಸದಾರಃ ಸಹಮಂತ್ರಿಭಿಃ ॥ ೩೨॥**
**ತಥೇತಿ ಪ್ರೇಷಯಾಮಾಸ ದೂತಾಂಸ್ತ್ವರಿತವಿಕ್ರಮಾನ್ ।**

೩೧-೩೨. ಸರ್ವಶಾಸ್ತ್ರವಿಶಾರದನಾದ ರಾಜನು ಆನಂತರ ಋಷಿಯನ್ನು ಕುರಿತು ''ಎಲೈ ಮುನಿವರ್ಯನಾದ ವಿಶ್ವಾಮಿತ್ರನೆ, ಬೇಗ ಕಾಗದವನ್ನು ಕಳುಹಿಸು; ದಶರಥರಾಜನು ತನ್ನ ಮಕ್ಕಳ ವಿವಾಹಕ್ಕಾಗಿ (ಉಳಿದ) ಮಕ್ಕಳು, ಹೆಂಡತಿಯರು, ಮಂತ್ರಿಗಳೊಡನೆ ಜಾಗ್ರತೆಯಾಗಿ ಹೊರಟುಬರಲಿ'' ಎಂದನು. ಹಾಗೆಯೇ ಆಗಲೆಂದು (ವಿಶ್ವಾಮಿತ್ರನು) ವೇಗವಾಗಿ ಹೋಗುವಂಥ ಶಕ್ತಿಯುಳ್ಳ ದೂತರನ್ನು ಕಳುಹಿಸಿದನು.

**ತೇ ಗತ್ವಾ ರಾಜಶಾರ್ದೂಲಂ ರಾಮಶ್ರೇಯೋ ನ್ಯವೇದಯನ್ ।**
**ಶ್ರುತ್ವಾ ರಾಮಕೃತಂ ರಾಜಾ ಹರ್ಷೇಣ ಮಹತಾಪ್ಲುತಃ ॥ ೩೩॥**
**ಮಿಥಿಲಾಗಮನಾರ್ಥಾಯ ತ್ವರಯಾಮಾಸ ಮಂತ್ರಿಣಃ ।**
**ಗಚ್ಛಂತು ಮಿಥಿಲಾಂ ಸರ್ವೇ ಗಜಾಶ್ವರಥಪತ್ತಯಃ ॥ ೩೪॥**

೩೩-೩೪. ಅವರುಗಳು ರಾಜಶ್ರೇಷ್ಠನಾದ ದಶರಥನಲ್ಲಿಗೆ ಬಂದು ಶ್ರೀರಾಮನ ಶ್ರೇಯಸ್ಕರವಾದ ಕರ್ಮವನ್ನು ತಿಳಿಸಿದರು. ರಾಜನು ರಾಮನ ಕಾರ್ಯವನ್ನು ಕೇಳಿ ಮೆಚ್ಚಿ ಬಹಳ ಸಂತೋಷಭರಿತನಾಗಿ 'ಆನೆ,ಕುದುರೆ, ರಥ, ಕಾಲಾಳುಗಳೊಡನೆ ಎಲ್ಲರೂ ಮಿಥಿಲಾನಗರಿಗೆ ಹೊರಡಿರಿ' ಎಂದು ಮಂತ್ರಿಗಳನ್ನು ಮಿಥಿಲಾಪಟ್ಟಣಕ್ಕೆ ಹೋಗಲು ಆತುರಪಡಿಸಿದನು.

**ರಥಮಾನಯ ಮೇ ಶೀಘ್ರಂ ಗಚ್ಛಾಮ್ಯದ್ಯೈವ ಮಾ ಚಿರಮ್ ।**
**ವಸಿಷ್ಠಸ್ತ್ವಗ್ರತೋ ಯಾತು ಸದಾರಃ ಸಹಿತೋಽಗ್ನಿಭಿಃ ॥ ೩೫॥**
**ರಾಮಮಾತೄಃ ಸಮಾದಾಯ ಮುನಿರ್ಮೇ ಭಗವಾನ್ ಗುರುಃ ।**
**ಏವಂ ಪ್ರಸ್ಥಾಪ್ಯ ಸಕಲಂ ರಾಜರ್ಷಿರ್ವಿಪುಲಂ ರಥಮ್ ॥ ೩೬॥**
**ಮಹತ್ಯಾ ಸೇನಯಾ ಸಾರ್ಧಮಾರುಹ್ಯ ತ್ವರಿತೋ ಯಯೌ ॥**

೩೫-೩೬. 'ನನ್ನ ರಥವನ್ನು ಜಾಗ್ರತೆ ತೆಗೆದುಕೊಂಡು ಬಾ ; ಈಗಲೇ ಹೊರಡುವೆನು, ತಡಮಾಡಬೇಡ ; ಅಗ್ನಿಗಳೊಡನೆ ಪತ್ನೀಸಹಿತನಾದ ವಸಿಷ್ಠನು ಮುಂದಾಗಿ ಹೊರಡಲಿ, ನನ್ನ ಪೂಜ್ಯಗುರುವೂ ಮಹರ್ಷಿಯೂ ಆದ ಆತನು ರಾಮನ ತಾಯಂದಿರುಗಳನ್ನೂ ಕರೆದುಕೊಂಡು ಹೋಗಲಿ !' ಎಂದು (ದಶರಥ) ರಾಜರ್ಷಿಯು ಎಲ್ಲರನ್ನೂ ಕಳುಹಿಸಿ ತಾನು ವಿಶಾಲವಾದ ರಥವನ್ನು ಹತ್ತಿ ದೊಡ್ಡ ಸೇನಾಸಮೇತನಾಗಿ ಚುರುಕಾಗಿ ಪ್ರಯಾಣಮಾಡಿದನು.

**ಆಗತಂ ರಾಘವಂ ಶ್ರುತ್ವಾ ರಾಜಾ ಹರ್ಷಸಮಾಕುಲಃ ।**
**ಪ್ರತ್ಯುಜ್ಜಗಾಮ ಜನಕಃ ಶತಾನಂದಪುರೋಧಸಾ ॥ ೩೭॥**
**ಯಥೋಕ್ತಪೂಜಯಾ ಪೂಜ್ಯಂ ಪೂಜಯಾಮಾಸ ಸತ್ಕೃತಮ್ ॥**

೩೭. ರಘುವಂಶಜನಾದ ದಶರಥನು ಬಂದನೆಂಬ ವಿಚಾರವನ್ನು ಕೇಳಿ ಹರ್ಷಾವಿಷ್ಟನಾದ ಜನಕನು ತನ್ನ ಪುರೋಹಿತನಾದ ಶತಾನಂದನೊಡನೆ ಎದುರುಗೊಂಡು ಪೂಜ್ಯನಾದ ದಶರಥನನ್ನು ಶಾಸ್ತ್ರೋಕ್ತರೀತಿಯಿಂದ ಗೌರವಿಸಿದನು.

**ರಾಮಸ್ತು ಲಕ್ಷ್ಮಣೇನಾಶು ವವಂದೇ ಚರಣೌ ಪಿತುಃ ।**
**ತತೋ ಹೃಷ್ಟೋ ದಶರಥೋ ರಾಮಂ ವಚನಮಬ್ರವೀತ್ ॥ ೩೮ ॥**
**ದಿಷ್ಟ್ಯಾ ಪಶ್ಯಾಮಿ ತೇ ರಾಮ ಮುಖಂ ಫುಲ್ಲಾಂಬುಜೋಪಮಮ್ ।**
**ಮುನೇರನುಗ್ರಹಾತ್ ಸರ್ವಂ ಸಂಪನ್ನಂ ಮಮ ಶೋಭನಮ್ ॥ ೩೯ ॥**

೩೮-೩೯. ರಾಮನಾದರೊ, ಲಕ್ಷ್ಮಣನೊಡಗೂಡಿ ಕೂಡಲೆ ತಂದೆಯ ಪಾದಗಳಿಗೆ ನಮಸ್ಕರಿಸಿದನು. ಅನಂತರ ಸಂತೋಷಗೊಂಡ ದಶರಥನು ರಾಮನನ್ನು ಕುರಿತು ಈ ಮಾತನ್ನು ಹೇಳಿದನು. (ಏನೆಂದರೆ) 'ರಾಮನೆ, ಅರಳಿದ ಕೆಂದಾವರೆಯಂತಿರುವ ನಿನ್ನ ಮುಖವನ್ನು ನಾನು ಈಗ ಪುಣ್ಯವಿಶೇಷದಿಂದ ನೋಡುತ್ತಿದ್ದೇನೆ. ಮುನಿಯ ದಯೆಯಿಂದ ನನಗೆ ಒಳ್ಳೆಯದಾಗಿದೆ.'

**ಇತ್ಯುಕ್ತ್ವಾಘ್ರಾಯ ಮೂರ್ಧಾನಮಾಲಿಂಗ್ಯ ಚ ಪುನಃ ಪುನಃ ।**
**ಹರ್ಷೇಣ ಮಹತಾವಿಷ್ಟೋ ಬ್ರಹ್ಮಾನಂದಂ ಗತೋ ಯಥಾ ॥ ೪೦ ॥**

೪೦. ಹೀಗೆಂದು ಹೇಳಿ ತಲೆಯನ್ನು ಮೂಸಿನೋಡಿ ಮತ್ತೆ ಮತ್ತೆ ತಬ್ಬಿಕೊಂಡು ಬ್ರಹ್ಮಾನಂದವನ್ನು ಪಡೆದವನಂತೆ ಬಹಳ ಹರ್ಷದಿಂದ ಮೈಮರೆತನು.

**ತತೋ ಜನಕರಾಜೇನ ಮಂದಿರೇ ಸನ್ನಿವೇಶಿತಃ ।**
**ಶೋಭನೇ ಸರ್ವಭೋಗಾಢ್ಯೇ ಸದಾರಃ ಸಸುತಃ ಸುಖೀ ॥ ೪೧ ॥**

೪೧. ಅನಂತರ ಜನಕರಾಜನಿಂದ ಸರ್ವಭೋಗಸಮೃದ್ಧವಾದ, ಶೋಭನವಾದ ಅರಮನೆಯಲ್ಲಿ ಹೆಂಡತಿಮಕ್ಕಳೊಡನೆ ದಶರಥನು ಸುಖವಾಗಿ ತಂಗಿದ್ದನು.

**ತತಃ ಶುಭೇ ದಿನೇ ಲಗ್ನೇ ಸುಮುಹೂರ್ತೇ ರಘೂತ್ತಮಮ್ ।**
**ಆನಯಾಮಾಸ ಧರ್ಮಜ್ಞೋ ರಾಮಂ ಸಭ್ರಾತೃಕಂ ತದಾ ॥ ೪೨ ॥**
**ರತ್ನಸ್ತಂಭಸುವಿಸ್ತಾರೇ ಸುವಿತಾನೇ ಸುತೋರಣೇ ।**
**ಮಂಡಲೇ ಸರ್ವಶೋಭಾಢ್ಯೇ ಮುಕ್ತಾಪುಷ್ಪಫಲಾನ್ವಿತೇ ॥ ೪೩ ॥**

**ವೇದವಿದ್ಭಿಃ ಸುಸಂಬಾಧೇ ಬ್ರಾಹ್ಮಣೈಃ ಸ್ವರ್ಣಭೂಷಿತೈಃ ।**
**ಸುವಾಸಿನೀಭಿಃ ಪರಿತೋ ನಿಷ್ಕಕಂಠೀಭಿರಾವೃತೇ ॥ ೪೪ ॥**
**ಭೇರಿದುಂದುಭಿನಿರ್ಘೋಷೈರ್ಗೀತನೃತ್ಯೈಃ ಸಮಾಕುಲೇ ।**
**ದಿವ್ಯರತ್ನಾಂಚಿತೇ ಸ್ವರ್ಣಪೀಠೇ ರಾಮಂ ನ್ಯವೇಶಯತ್ ॥ ೪೫ ॥**

೪೨-೪೫. ಅನಂತರ ಶುಭದಿನದಲ್ಲಿ ಸುಮುಹೂರ್ತದಲ್ಲಿ ಒಳ್ಳೆಯ ಲಗ್ನದಲ್ಲಿ ಧರ್ಮಜ್ಞನಾದ (ಜನಕನು) ಸೋದರರೊಡಗೂಡಿದ ರಾಮನನ್ನು ಕರೆ ತಂದನು. ರತ್ನದ ಕಂಬಗಳಿಂದ ನಿರ್ಮಿತವಾದ ವಿಸ್ತಾರವಾದ ಅಗಲವಾದ ಹಾಗೂ ತೋರಣಗಳಿಂದ ಅಲಂಕೃತವಾದ, ಸಕಲವಿಧವಾದ ಕಾಂತಿಯಿಂದೊಡಗೂಡಿದ, ಮುತ್ತುಗಳು, ಫಲಗಳು, ಪುಷ್ಪಗಳಿಂದಲಂಕೃತವಾದ ಮಂಟಪದಲ್ಲಿ ನಡುವೆ ವಿರಾಜ ಮಾನವಾಗಿರುವ ಸುವರ್ಣಪೀಠದಲ್ಲಿ ರಾಮನನ್ನು ಕುಳ್ಳಿರಿಸಿದನು. ಆ ಪೀಠದ ಸುತ್ತಲೂ ಚಿನ್ನದ ಒಡವೆಗಳಿಂದ ಭೂಷಿತರಾದ ವೇದಜ್ಞರಾದ ಬ್ರಾಹ್ಮಣರೂ ಚಿನ್ನದ ಕಂಠಾಭರಣ ಗಳಿಂದ ಕೂಡಿದ ಸುವಾಸಿನಿಯರೂ ನೆರೆದಿದ್ದರು. ನಗಾರಿ, ತಮಟೆ, ವಾದ್ಯಗಳು ಮೊಳಗುತ್ತಿದ್ದವು. ಸಂಗೀತವೂ ನೃತ್ಯವೂ ನಡೆಯುತ್ತಿತ್ತು.

**ವಸಿಷ್ಠಂ ಕೌಶಿಕಂ ಚೈವ ಶತಾನಂದಃ ಪುರೋಹಿತಃ ।**
**ಯಥಾಕ್ರಮಂ ಪೂಜಯಿತ್ವಾ ರಾಮಸ್ಯೋಭಯಪಾರ್ಶ್ವಯೋಃ ॥ ೪೬ ॥**
**ಸ್ಥಾಪಯಿತ್ವಾ ಸ ತತ್ರಾಗ್ನಿಂ ಜ್ವಾಲಯಿತ್ವಾ ಯಥಾವಿಧಿ ।**
**ಸೀತಾಮಾನೀಯ ಶೋಭಾಢ್ಯಾಂ ನಾನಾರತ್ನವಿಭೂಷಿತಾಮ್ ॥ ೪೭ ॥**
**ಸಭಾರ್ಯೋ ಜನಕಃ ಪ್ರಾಯಾದ್ ರಾಮಂ ರಾಜೀವಲೋಚನಮ್ ।**
**ಪಾದೌ ಪ್ರಕ್ಷಾಲ್ಯ ವಿಧಿವತ್ ತದಪೋ ಮೂರ್ಧ್ನ್ಯಧಾರಯತ್ ॥ ೪೮ ॥**
**ಯಾ ಧೃತಾ ಮೂರ್ಧ್ನಿ ಶರ್ವೇಣ ಬ್ರಹ್ಮಣಾ ಮುನಿಭಿಃ ಸದಾ ॥**

೪೬-೪೮. ಪುರೋಹಿತನಾದ ಶತಾನಂದನು ರಾಮನ ಎರಡು ಪಕ್ಕಗಳ ಲ್ಲಿಯೂ ಕ್ರಮವಾಗಿ ವಸಿಷ್ಠನನ್ನೂ ವಿಶ್ವಾಮಿತ್ರನನ್ನೂ ಕೂಡಿಸಿ ಅಲ್ಲಿಯೇ ಅಗ್ನಿಯನ್ನು ಪ್ರತಿಷ್ಠಾಪಿಸಿ ಅದನ್ನು ಪ್ರಜ್ವಾಲನಮಾಡಿದನು. ಅನಂತರ ಹೆಂಡತಿಯೊಡನೆ ಜನಕನು ನಾನಾರತ್ನಾಲಂಕೃತಳಾದ ಕಾಂತಿಯುಕ್ತಳಾದ ಸೀತೆಯನ್ನು ಕರೆತಂದನು. ಕಮಲನೇತ್ರ ನಾದ ರಾಮನ ಎರಡು ಪಾದಗಳನ್ನೂ ವಿಧಿಪ್ರಕಾರವಾಗಿ ತೊಳೆದವನಾಗಿ ಆ ಪವಿತ್ರವಾದ ಜಲವನ್ನು - ಈಶ್ವರ, ಬ್ರಹ್ಮಾದಿಗಳೂ ಮಹರ್ಷಿಗಳೂ ಸದಾ ಯಾವದನ್ನು ಶಿರಸ್ಸಿನಲ್ಲಿ ಧರಿಸಿರುವರೋ ಅಂಥ ತೀರ್ಥವನ್ನು ತಾನೂ ತಲೆಯಲ್ಲಿ ಧರಿಸಿದನು.

**ತತಃ ಸೀತಾಂ ಕರೇ ಧೃತ್ವಾ ಸಾಕ್ಷತೋದಕಪೂರ್ವಕಮ್ ।**
**ರಾಮಾಯ ಪ್ರದದೌ ಪ್ರೀತ್ಯಾ ಪಾಣಿಗ್ರಹವಿಧಾನತಃ ॥ ೪೯ ॥**

**ಸೀತಾ ಕಮಲಪತ್ರಾಕ್ಷೀ ಸ್ವರ್ಣಮುಕ್ತಾದಿಭೂಷಿತಾ ।**
**ದೀಯತೇ ಮೇ ಸುತಾ ತುಭ್ಯಂ ಪ್ರೀತೋ ಭವ ರಘೂತ್ತಮ ॥ ೫೦ ॥**
**ಇತಿ ಪ್ರೀತೇನ ಮನಸಾ ಸೀತಾಂ ರಾಮಕರೇಽರ್ಪಯನ್ ।**
**ಮುಮೋದ ಜನಕೋ ಲಕ್ಷ್ಮೀಂ ಕ್ಷೀರಾಬ್ಧಿರಿವ ವಿಷ್ಣವೇ ॥ ೫೧ ॥**

೪೯-೫೧. ಅನಂತರ ಸೀತೆಯನ್ನು ಕೈಹಿಡಿದು ಕರೆತಂದು ಮಂತ್ರಾಕ್ಷತೆ ನೀರುಗಳ ಸಹಿತ ಪಾಣಿಗ್ರಹಣವಿಧಾನದಿಂದ ಪ್ರೀತಿಪೂರ್ವಕವಾಗಿ ರಾಮನಿಗೆ ಸಮರ್ಪಿಸಿದನು. ''ಎಲೈ ರಾಮನೆ, ಕಮಲಪತ್ರದಂತೆ ಕಣ್ಣುಳ್ಳ ಚಿನ್ನ-ಮುತ್ತುಗಳಿಂದ ಭೂಷಿತಳಾದ ನನ್ನ ಮಗಳಾದ ಸೀತೆಯನ್ನು ನಿನಗೆ ಕೊಡುತ್ತಿದ್ದೇನೆ. ಸುಪ್ರೀತನಾಗು'' ಎಂದು ಹೇಳುತ್ತಾ ತೃಪ್ತವಾದ ಮನಸ್ಸಿನಿಂದ ಸೀತೆಯನ್ನು ರಾಮನ ಕೈಗೆ ಒಪ್ಪಿಸಿ - ಸಮುದ್ರರಾಜನು ವಿಷ್ಣುವಿಗೆ ಲಕ್ಷ್ಮಿಯನ್ನು ದಾನಮಾಡಿದಾಗ ಆನಂದಗೊಂಡಂತೆ - ಸಂತೋಷಪಟ್ಟನು.

**ಊರ್ಮಿಲಾಂ ಚೌರಸೀಂ ಕನ್ಯಾಂ ಲಕ್ಷ್ಮಣಾಯ ದದೌ ಮುದಾ ।**
**ತಥೈವ ಶ್ರುತಕೀರ್ತಿಂ ಚ ಮಾಂಡವೀಂ ಭ್ರಾತೃಕನ್ಯಕೇ ॥ ೫೨ ॥**
**ಭರತಾಯ ದದಾವೇಕಾಂ ಶತ್ರುಘ್ನಾಯಾಪರಾಂ ದದೌ ।**
**ಚತ್ವಾರೋ ದಾರಸಂಪನ್ನಾಃ ಭ್ರಾತರಃ ಶುಭಲಕ್ಷಣಾಃ ॥ ೫೩ ॥**
**ವಿರೇಜುಃ ಪ್ರಭಯಾ ಸರ್ವೇ ಲೋಕಪಾಲಾ ಇವಾಪರೇ ।**

೫೨-೫೩. ತನ್ನ ಔರಸಪುತ್ರಿಯಾದ ಊರ್ಮಿಳೆಯನ್ನು ಸಂತೋಷದಿಂದ ಲಕ್ಷ್ಮಣನಿಗೆ ಕೊಟ್ಟನು. ಹಾಗೆಯೇ ತನ್ನ ಸಹೋದರನ ಹೆಣ್ಣುಮಕ್ಕಳಾದ ಮಾಂಡವೀ-ಶ್ರುತಕೀರ್ತಿಯರನ್ನು ಕ್ರಮವಾಗಿ ಭರತನಿಗೂ ಶತ್ರುಘ್ನನಿಗೂ ಕೊಟ್ಟನು. ಲಕ್ಷಣಯುಕ್ತರಾದ ಆ ನಾಲ್ವರೂ ಪತ್ನೀಸಹಿತರಾಗಿ ಲೋಕಪಾಲಕರುಗಳಂತೆ ತಮ್ಮ ಕಾಂತಿಯಿಂದ ವಿರಾಜಮಾನರಾಗಿದ್ದರು.

**ತತೋಽಬ್ರವೀದ್ ವಸಿಷ್ಠಾಯ ವಿಶ್ವಾಮಿತ್ರಾಯ ಮೈಥಿಲಃ ।**
**ಜನಕಃ ಸ್ವಸುತೋದಂತಂ ನಾರದೇನಾಭಿಭಾಷಿತಮ್ ॥ ೫೪ ॥**
**ಯಜ್ಞಭೂಮಿವಿಶುದ್ಧ್ಯರ್ಥಂ ಕರ್ಷತೋ ಲಾಂಗಲೇನ ಮೇ ।**
**ಸೀತಾಮುಖಾತ್ ಸಮುತ್ಪನ್ನಾ ಕನ್ಯಕಾ ಶುಭಲಕ್ಷಣಾ ॥ ೫೫ ॥**
**ತಾಮದ್ರಾಕ್ಷಮಹಂ ಪ್ರೀತ್ಯಾ ಪುತ್ರಿಕಾಭಾವಭಾವಿತಾಮ್ ।**
**ಅರ್ಪಿತಾ ಪ್ರಿಯಭಾರ್ಯಾಯೈ ಶರಚ್ಚಂದ್ರನಿಭಾನನಾ ॥ ೫೬ ॥**

೫೪-೫೬. ಅನಂತರ ಮಿಥಿಲೆಯ ರಾಜನಾದ (ಜನಕನು) ವಸಿಷ್ಠರಿಗೂ ವಿಶ್ವಾಮಿತ್ರರಿಗೂ ನಾರದರು ಹೇಳಿದಂಥ ತನ್ನ ಮಗಳ ವೃತ್ತಾಂತವನ್ನು ತಿಳಿಸಿದನು. ಏನೆಂದರೆ : ''ಋಷಿಗಳೆ, ಯಜ್ಞಕ್ಕಾಗಿ ಭೂಮಿಯನ್ನು ಶೋಧಿಸುವ ಸಮಯಕ್ಕೆ ನೇಗಿಲಿ

ನಿಂದ ಉಳುತ್ತಿದ್ದ ನನಗೆ (ನೇಗಿಲಿನ) ತುದಿಭಾಗದಿಂದ ಶುಭಲಕ್ಷಣಸಂಪನ್ನೆಯಾದ ಈ (ಸೀತೆಯೆಂಬ) ಕನ್ಯೆಯು ಉಂಟಾದಳು. ಮಗಳು ಎಂಬ ಭಾವನೆಯಿಂದ ತುಂಬಿದವನಾಗಿ ಆಕೆಯನ್ನು ನಾನು ಪ್ರೀತಿಯಿಂದ ಕಂಡೆನು. ಶರತ್ಕಾಲದ ಚಂದ್ರನಂತೆ ಕಾಂತಿಯಿಂದ ಕೂಡಿದ ಮುಖವುಳ್ಳ ಈ ಮಗುವನ್ನು ನನ್ನ ಪ್ರಿಯಪತ್ನಿಗೆ ಸಾಕಲು ಕೊಟ್ಟೆನು.

**ಏಕದಾ ನಾರದೋಽಭ್ಯಾಗಾತ್ ವಿವಿಕ್ತೇ ಮಯಿ ಸಂಸ್ಥಿತೇ ।**
**ರಣಯನ್ ಮಹತೀಂ ವೀಣಾಂ ಗಾಯನ್ ನಾರಾಯಣಂ ವಿಭುಮ್ ॥ ೫೭ ॥**
**ಪೂಜಿತಃ ಸುಖಮಾಸೀನೋ ಮಾಮುವಾಚ ಸುಖಾನ್ವಿತಃ ।**
**ಶೃಣುಷ್ವ ವಚನಂ ಗುಹ್ಯಂ ತವಾಭ್ಯುದಯಕಾರಣಮ್ ॥ ೫೮ ॥**

೫೭-೫೮. ಒಮ್ಮೆ ನಾನೊಬ್ಬನೇ ಇರುವ ಸಮಯಕ್ಕೆ ಮಹತೀ ಎಂಬ ವೀಣೆಯನ್ನು ನುಡಿಸುತ್ತಾ ವಿಭುವಾದ ನಾರಾಯಣನನ್ನು ಕೀರ್ತನಮಾಡುತ್ತಾ ನಾರದನು ಬಂದನು. ಪೂಜೆಯನ್ನು ಸ್ವೀಕರಿಸಿ ಸುಖಾಸನದಲ್ಲಿ ಕುಳಿತವನಾಗಿ ನನ್ನನ್ನು ಕುರಿತು ಇಂತೆಂದನು: (ಎಲೈ ರಾಜನೆ,) ''ನಿನ್ನ ಶ್ರೇಯಸ್ಸಿಗೆ ಕಾರಣವಾಗಿರುವ ರಹಸ್ಯವಾದ ನನ್ನ ಮಾತನ್ನು ಕೇಳು.

**ಪರಮಾತ್ಮಾ ಹೃಷೀಕೇಶೋ ಭಕ್ತಾನುಗ್ರಹಕಾಮ್ಯಯಾ ।**
**ದೇವಕಾರ್ಯಾರ್ಥಸಿದ್ಧ್ಯರ್ಥಂ ರಾವಣಸ್ಯ ವಧಾಯ ಚ ॥ ೫೯ ॥**
**ಜಾತೋ ರಾಮ ಇತಿ ಖ್ಯಾತೋ ಮಾಯಾಮಾನುಷವೇಷಧೃಕ್ ।**
**ಆಸ್ತೇ ದಾಶರಥಿರ್ಭೂತ್ವಾ ಚತುರ್ಧಾ ಪರಮೇಶ್ವರಃ ॥ ೬೦ ॥**
**ಯೋಗಮಾಯಾಪಿ ಸೀತೇತಿ ಜಾತಾ ವೈ ತವ ವೇಶ್ಮನಿ ।**
**ಅತಸ್ತ್ವಂ ರಾಘವಾಯೈವ ದೇಹಿ ಸೀತಾಂ ಪ್ರಯತ್ನತಃ ॥ ೬೧ ॥**

೫೯-೬೧. ಹೃಷೀಕೇಶನಾದ ಪರಮಾತ್ಮನಾದ ನಾರಾಯಣನು ದೇವತೆಗಳ ಕಾರ್ಯಸಿದ್ಧಿಗಾಗಿ ಮತ್ತು ರಾವಣನ ವಧೆಗಾಗಿ ಹಾಗೂ ಭಕ್ತರ ಉದ್ಧಾರಕ್ಕಾಗಿಯೂ ಕೂಡ ಮಾಯಾಮನುಷ್ಯವೇಷವನ್ನು ಧರಿಸಿ ದಶರಥಪುತ್ರನಾಗಿ ಹುಟ್ಟಿದವನಾಗಿ ರಾಮನೆಂಬ ಹೆಸರಿನಿಂದ ಪ್ರಖ್ಯಾತನಾಗಿ ತನ್ನನ್ನೇ ಆ ಪರಮೇಶ್ವರನು ನಾಲ್ಕು ಭಾಗವಾಗಿ ಮಾಡಿಕೊಂಡಿರುವನು. ಯೋಗಮಾಯೆಯಾದರೋ, ಸೀತೆ ಎಂಬ ಹೆಸರಿನಿಂದ ನಿನ್ನ ಮನೆಯಲ್ಲಿ ಹುಟ್ಟಿರುವಳು. ಆದ್ದರಿಂದ ನೀನು ಪ್ರಯತ್ನಮಾಡಿ ಆಕೆಯನ್ನು ಶ್ರೀರಾಮನಿಗೇ ಕೊಡುವವನಾಗು.''

**ನಾನ್ಯೇಭ್ಯಃ ಪೂರ್ವಭಾರ್ಯೈಷಾ ರಾಮಸ್ಯ ಪರಮಾತ್ಮನಃ ।**
**ಇತ್ಯುಕ್ತ್ವಾ ಪ್ರಯಯೌ ದೇವಗತಿಂ ದೇವಮುನಿಸ್ತದಾ ॥ ೬೨ ॥**

೬೨. "ಈಕೆಯಾದರೊ, ಪರಮಾತ್ಮನಾದ ಶ್ರೀರಾಮನ ಹೆಂಡತಿಯೇ ಆಗಿದ್ದಾಳೆ. ಬೇರೆಯವರಿಗೆ ಸೇರತಕ್ಕವಳಲ್ಲ." ಹೀಗೆಂದು ಹೇಳಿ ದೇವಮುನಿಯು ಆಕಾಶಮಾರ್ಗದಿಂದ ಹೊರಟುಹೋದನು.

**ತದಾರಭ್ಯ ಮಯಾ ಸೀತಾ ವಿಷ್ಣೋರ್ಲಕ್ಷ್ಮೀರ್ವಿಭಾವ್ಯತೇ ।**
**ಕಥಂ ಮಯಾ ರಾಘವಾಯ ದೀಯತೇ ಜಾನಕೀ ಶುಭಾ ॥ ೬೩ ॥**
**ಇತಿ ಚಿಂತಾಸಮಾವಿಷ್ಟಃ ಕಾರ್ಯಮೇಕಮಚಿಂತಯಮ್ ।**
**ಮತ್ಪಿತಾಮಹಗೇಹೇ ತು ನ್ಯಾಸಭೂತಮಿದಂ ಧನುಃ ॥ ೬೪ ॥**
**ಈಶ್ವರೇಣ ಪುರಾ ಕ್ಷಿಪ್ತಂ ಪುರದಾಹಾದನಂತರಮ್ ।**
**ಧನುರೇತತ್ ಪಣಂ ಕಾರ್ಯಮಿತಿ ಚಿಂತ್ಯ ಕೃತಂ ತಥಾ ॥ ೬೫ ॥**
**ಸೀತಾಪಾಣಿಗ್ರಹಾರ್ಥಾಯ ಸರ್ವೇಷಾಂ ಮಾನನಾಶನಮ್ ।**

೬೩-೬೫. ಆಗಿನಿಂದಲೂ ನಾನು ಸೀತೆಯನ್ನು ವಿಷ್ಣುವನ್ನೇ ಸೇರುವ ಲಕ್ಷ್ಮಿಯೆಂದೇ ಭಾವಿಸಿದ್ದೆನು. ಆದರೆ ಈ ಶುಭಳಾದ ಜಾನಕಿಯನ್ನು ರಾಮನಿಗೆ ಕೊಡುವದು ಹೇಗೆ ? ಎಂದು ಚಿಂತಾಕುಲನಾಗಿ ಒಂದು ಉಪಾಯವನು ಆಲೋಚಿಸಿದೆನು. ನನ್ನ ಅಜ್ಜನ ಮನೆಯಲ್ಲಿ ಹಿಂದೆ ತ್ರಿಪುರಾಸುರನ ಸಂಹಾರದ ಅನಂತರ ಪರಮೇಶ್ವರನಿಂದ ಇಡಲ್ಪಟ್ಟ ಈ ಧನುಸ್ಸು ಇತ್ತು. ಇದನ್ನೇ ಪಣವಾಗಿ ಮಾಡಿ ಸೀತೆಯ ಪಾಣಿಗ್ರಹಣವನ್ನು ನೆರವೇರಿಸಬೇಕೆಂದು ಆಲೋಚಿಸಿ ಹಾಗೆ ಮಾಡಿದೆನು. ಆದರೆ ಇದು ಎಲ್ಲರ ಮರ್ಯಾದೆಯನ್ನೂ ಕಳೆಯತಕ್ಕದ್ದಾಗಿತ್ತು.

**ತ್ವತ್ಪ್ರಸಾದಾನ್ಮುನಿಶ್ರೇಷ್ಠ ರಾಮೋ ರಾಜೀವಲೋಚನಃ ।**
**ಆಗತೋಽತ್ರ ಧನುರ್ದ್ರಷ್ಟುಂ ಫಲಿತೋ ಮೇ ಮನೋರಥಃ ॥ ೬೬ ॥**
**ಅದ್ಯ ಮೇ ಸಫಲಂ ಜನ್ಮ ರಾಮ ತ್ವಾಂ ಸಹ ಸೀತಯಾ ।**
**ಏಕಾಸನಸ್ಥಂ ಪಶ್ಯಾಮಿ ಭ್ರಾಜಮಾನಂ ರವಿಂ ಯಥಾ ॥ ೬೭ ॥**
**ತ್ವತ್ಪಾದಾಂಬುಧರೋ ಬ್ರಹ್ಮಾ ಸೃಷ್ಟಿಚಕ್ರಪ್ರವರ್ತಕಃ ।**
**ಬಲಿಸ್ತ್ವತ್ಪಾದಸಲಿಲಂ ಧೃತ್ವಾಭೂದ್ದಿವಿಜಾಧಿಪಃ ॥ ೬೮ ॥**
**ತ್ವತ್ಪಾದಪಾಂಸುಸಂಸ್ಪರ್ಶಾದಹಲ್ಯಾ ಭರ್ತೃಶಾಪತಃ ।**
**ಸದ್ಯ ಏವ ವಿನಿರ್ಮುಕ್ತಾ ಕೋಽನ್ಯಸ್ತ್ವತ್ತೋಽಧಿರಕ್ಷಿತಾ ॥ ೬೯ ॥**

೬೬-೬೯. ಈಗ ಎಲೈ ಋಷಿಶ್ರೇಷ್ಠನೆ, ನಿನ್ನ ಅನುಗ್ರಹದಿಂದ ಕಮಲಲೋಚನನಾದ ರಾಮನು ಧನುಸ್ಸನ್ನು ನೋಡುವದಕ್ಕಾಗಿ ಇಲ್ಲಿಗೆ ಬಂದನು. ನನ್ನ ಉದ್ದೇಶವು ನೆರವೇರಿತು. ಎಲೈ ರಾಮನೆ, ಈಗ ನನ್ನ ಜನ್ಮವು ಸಾರ್ಥಕವಾಯಿತು. ಏಕೆಂದರೆ ಸೀತೆಯೊಡನೆ ಒಂದೇ ಪೀಠದಲ್ಲಿ ಕುಳಿತಿರುವ, ಹಾಗೂ ಹೊಳೆಯುತ್ತಿರುವ

ಸೂರ್ಯನಂತಿರುವ ನಿನ್ನನ್ನು ನೋಡುತ್ತಿದ್ದೇನೆ. ನಿನ್ನ ಪಾದಗಂಗೆಯನ್ನು ಸ್ವೀಕರಿಸಿರುವ ಬ್ರಹ್ಮನು ಸೃಷ್ಟಿಕಾರ್ಯವನ್ನು ನೆರವೇರಿಸುತ್ತಿರುವನು. ಬಲಿರಾಜನು ನಿನ್ನ ಪಾದಜಲವನ್ನು ಧರಿಸಿ ಸ್ವರ್ಗಲೋಕಕ್ಕೆ ಒಡೆಯನಾದನು. ನಿನ್ನ ಪಾದಧೂಳಿಯು ಸೋಂಕಿದ್ದರಿಂದ ಅಹಲ್ಯೆಯು ತನ್ನ ಗಂಡನ ಶಾಪದಿಂದ ಕೂಡಲೆ ಬಿಡುಗಡೆಯನ್ನು ಹೊಂದಿದಳು. ಇನ್ನು ನಿನಗಿಂತಲೂ ಹೆಚ್ಚಾಗಿ ಕಾಪಾಡುವವನು ಯಾವನಿದ್ದಾನು ?

**ಯತ್ಪಾದಪಂಕಜಪರಾಗಸುರಾಗಯೋಗಿ**
**ವೃಂದೈರ್ಜಿತಂ ಭವಭಯಂ ಜಿತಕಾಲಚಕ್ರೈಃ ।**
**ಯನ್ನಾಮಕೀರ್ತನಪರಾ ಜಿತದುಃಖಶೋಕಾ**
**ದೇವಾಸ್ತಮೇವ ಶರಣಂ ಸತತಂ ಪ್ರಪದ್ಯೇ ॥ ೭೦ ॥**

೭೦. ಕಾಲಗತಿಯನ್ನು ಗೆದ್ದ, ಯಾವನ ಪಾದಕಮಲಗಳ ಪರಾಗಗಳಲ್ಲಿ ಆಸಕ್ತರಾದ ಯೋಗಿಗಳ ಸಮೂಹದಿಂದ ಸಂಸಾರಭಯವು ದಾಟಲ್ಪಟ್ಟಿತೋ ಮತ್ತು ದೇವತೆಗಳೂ ಯಾವನ ನಾಮಕೀರ್ತನದಲ್ಲಿ ತೊಡಗಿದವರಾಗಿ ದುಃಖಶೋಕಗಳನ್ನು ದಾಟಿರುವರೋ ಅಂಥವನನ್ನೇ ನಾನು ಯಾವಾಗಲೂ ಶರಣುಹೋಗುತ್ತೇನೆ.

**ಇತಿ ಸ್ತುತ್ವಾ ನೃಪಃ ಪ್ರಾದಾದ್ ರಾಘವಾಯ ಮಹಾತ್ಮನೇ ।**
**ದೀನಾರಾಣಾಂ ಕೋಟಿಶತಂ ರಥಾನಾಮಯುತಂ ತದಾ ॥ ೭೧ ॥**
**ಅಶ್ವಾನಾಂ ನಿಯುತಂ ಪ್ರಾದಾದ್ ಗಜಾನಾಂ ಷಟ್‌ಶತಂ ತಥಾ ।**
**ಪತ್ತೀನಾಂ ಲಕ್ಷಮೇಕಂ ತು ದಾಸೀನಾಂ ತ್ರಿಶತಂ ದದೌ ॥ ೭೨ ॥**
**ದಿವ್ಯಾಂಬರಾಣಿ ಹಾರಾಂಶ್ಚ ಮುಕ್ತಾರತ್ನಮಯೋಜ್ಜ್ವಲಾನ್ ।**
**ಸೀತಾಯೈ ಜನಕಃ ಪ್ರಾದಾತ್ ಪ್ರೀತ್ಯಾ ದುಹಿತೃವತ್ಸಲಃ ॥ ೭೩ ॥**

೭೧-೭೩. ಹೀಗೆ ಸ್ತೋತ್ರಮಾಡಿ ರಾಜನು ಮಹಾತ್ಮನಾದ ರಾಘವನಿಗೆ ಶತಕೋಟಿ ಸಂಖ್ಯೆಯ ಸುವರ್ಣನಾಣ್ಯಗಳನ್ನೂ ಹತ್ತುಸಾವಿರ ರಥಗಳನ್ನೂ ಹತ್ತು ಲಕ್ಷ ಕುದುರೆಗಳನ್ನೂ ಆರುನೂರು ಆನೆಗಳನ್ನೂ ಒಂದು ಲಕ್ಷ ಪದಾತಿ (ಕಾಲಾಳು)ಗಳನ್ನೂ ಕೊಟ್ಟನು. ಹಾಗೆಯೇ ಮಗಳಲ್ಲಿ ಪ್ರೇಮವುಳ್ಳ ಜನಕನು ಸೀತಾದೇವಿಗೆ ದಿವ್ಯವಾದ ವಸ್ತ್ರಗಳನ್ನೂ ಮುತ್ತುರತ್ನಗಳಿಂದ ಹೊಳೆಯುತ್ತಿರುವ ಹಾರಗಳನ್ನೂ ಮುನ್ನೂರು ಜನ ದಾಸಿಯರನ್ನೂ ಸಂತೋಷದಿಂದ ಕೊಟ್ಟನು.

**ವಸಿಷ್ಠಾದೀನ್ ಸುಸಂಪೂಜ್ಯ ಭರತಂ ಲಕ್ಷ್ಮಣಂ ತಥಾ ।**
**ಪೂಜಯಿತ್ವಾ ಯಥಾನ್ಯಾಯಂ ತಥಾ ದಶರಥಂ ನೃಪಮ್ ॥ ೭೪ ॥**
**ಪ್ರಸ್ಥಾಪಯಾಮಾಸ ನೃಪೋ ರಾಜಾನಂ ರಘುಸತ್ತಮಮ್ ।**

೭೪. ವಸಿಷ್ಠರೇ ಮುಂತಾದವರನ್ನು ಚೆನ್ನಾಗಿ ಪೂಜಿಸಿ ಮತ್ತು ಭರತ, ಲಕ್ಷ್ಮಣ (ಶತ್ರುಘ್ನ)ರುಗಳನ್ನೂ ಯೋಗ್ಯತಾನುಸಾರವಾಗಿ ಗೌರವಿಸಿ, ದಶರಥನನ್ನು (ಜನಕ) ರಾಜನು ಕಳುಹಿಸಿಕೊಟ್ಟನು.

**ಸೀತಾಮಾಲಿಂಗ್ಯ ರುದತೀಂ ಮಾತರಃ ಸಾಶ್ರುಲೋಚನಾಃ ।**
**ಶ್ವಶ್ರೂಶುಶ್ರೂಷಣಪರಾ ನಿತ್ಯಂ ರಾಮಮನುವ್ರತಾ ।**
**ಪಾತಿವ್ರತ್ಯಮುಪಾಲಂಬ್ಯ ತಿಷ್ಠ ವತ್ಸೇ ಯಥಾಸುಖಮ್ ॥ ೭೫ ॥**

೭೫. ಅಳುತ್ತಿರುವ ಸೀತೆಯನ್ನು ಕಣ್ಣೀರಿನಿಂದ ಕೂಡಿದ ತಾಯಂದಿರು ಆಲಂಗಿಸಿ ಕೊಂಡು 'ಮಗಳೆ, ನೀನು ಅತ್ತೆ (ಮಾವಂದಿರ) ಸೇವೆಯನ್ನು ಮಾಡುತ್ತಾ ಯಾವಾಗಲೂ ರಾಮನನ್ನೇ ಅನುಸರಿಸಿಕೊಂಡಿರುವವಳಾಗು. ಪಾತಿವ್ರತ್ಯಧರ್ಮವನ್ನಾಶ್ರಯಿಸಿ ಸುಖವಾಗಿ ಬಾಳು' (ಎಂದು ಹರಸಿದರು.)

**ಪ್ರಯಾಣಕಾಲೇ ರಘುನಂದನಸ್ಯ**
**ಭೇರೀಮೃದಂಗಾನಕತೂರ್ಯಘೋಷಃ ।**
**ಸ್ವರ್ವಾಸಿಭೇರೀಘನತೂರ್ಯಶಬ್ದೈಃ**
**ಸಂಮೂರ್ಛಿತೋ ಭೂತಭಯಂಕರೋಽಭೂತ್ ॥ ೭೬ ॥**

೭೬. ಶ್ರೀರಾಮನ ಪ್ರಯಾಣಕಾಲದಲ್ಲಿ ಭೇರಿ, ನಗಾರಿ, ತಬಲ, ತಮಟೆ. ವಾದ್ಯಗಳೇ ಮುಂತಾದವುಗಳ ಶಬ್ದವು, ಸ್ವರ್ಗಲೋಕವಾಸಿಗಳಾದವರೂ ಜೊತೆಗೆ ನುಡಿಸುತ್ತಿದ್ದ ನಗಾರಿ, ಭೇರಿ, ಮುಂತಾದವುಗಳ ಕಠಿಣಧ್ವನಿಯೊಡನೆ ಒಂದುಗೂಡಿ ಪ್ರಾಣಿಗಳಿಗೆಲ್ಲ ಭಯವುಂಟುಮಾಡುವಷ್ಟು ಮಟ್ಟಿಗೆ ತೀವ್ರವಾಗಿ ವ್ಯಾಪಿಸಿತ್ತು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ**

**ಷಷ್ಠಃ ಸರ್ಗಃ**

::::::::

# ಏಳನೆಯ ಸರ್ಗ

**ಸೂತ ಉವಾಚ-**
**ಅಥ ಗಚ್ಛತಿ ಶ್ರೀರಾಮೇ ಮೈಥಿಲಾದ್ ಯೋಜನತ್ರಯಮ್ ।**
**ನಿಮಿತ್ತಾನ್ಯತಿಘೋರಾಣಿ ದದರ್ಶ ನೃಪಸತ್ತಮಃ ॥ ೧ ॥**

**ನತ್ವಾ ವಸಿಷ್ಠಂ ಪ್ರಪಚ್ಛ ಕಿಮಿದಂ ಮುನಿಪುಂಗವ ।**
**ನಿಮಿತ್ತಾನೀಹ ದೃಶ್ಯಂತೇ ವಿಷಮಾಣಿ ಸಮನ್ತತಃ ॥ ೨ ॥**

೧-೨. ಸೂತನಿಂತೆಂದನು : ಶ್ರೀರಾಮನು ಮಿಥಿಲಾನಗರಿಯಿಂದ ಮುಂದಕ್ಕೆ ಮೂರು ಯೋಜನಗಳಷ್ಟು ದೂರ ಪ್ರಯಾಣವನ್ನು ಮಾಡಿದಮೇಲೆ ದಶರಥರಾಜನು ಅತಿಭಯಂಕರವಾದ ಕೆಲವು ಶಕುನಗಳನ್ನು ಕಂಡನು. ವಸಿಷ್ಠರಿಗೆ ನಮಸ್ಕರಿಸಿ ಮುನಿ ಶ್ರೇಷ್ಠರೆ, ಇದೇನು, ಸುತ್ತಲೂ ವಿಷಮವಾದ ಹಾಗೂ ಘೋರವಾದ ಶಕುನಗಳು ಕಂಡು ಬರುತ್ತಿವೆಯಲ್ಲ? ಎಂದು ಕೇಳಿದನು.

**ವಸಿಷ್ಠಸ್ತಮಥ ಪ್ರಾಹ ಭಯಮಾಗಾಮಿ ಸೂಚ್ಯತೇ ।**
**ಪುನರಪ್ಯಭಯಂ ತೇಽದ್ಯ ಶೀಘ್ರಮೇವ ಭವಿಷ್ಯತಿ ॥ ೩ ॥**
**ಮೃಗಾಃ ಪ್ರದಕ್ಷಿಣಂ ಯಾಂತಿ ಪಶ್ಯ ತ್ವಾಂ ಶುಭಸೂಚಕಾಃ ।**
**ಇತ್ಯೇವಂ ವದತಸ್ತಸ್ಯ ವವೌ ಘೋರತರೋಽನಿಲಃ ॥ ೪ ॥**
**ಮುಷ್ಣಂಶ್ಚಕ್ಷೂಂಷಿ ಸರ್ವೇಷಾಂ ಪಾಂಸುವೃಷ್ಟಿಭಿರರ್ದಯನ್ ।**

೩-೪. ಅನಂತರ ವಸಿಷ್ಠರು ಅವನನ್ನು ಕುರಿತು ಹೀಗೆಂದರು : ನಿನಗೆ ಮುಂದೆ ಭಯವುಂಟೆಂಬುದನ್ನು ಇವು ಸೂಚಿಸುತ್ತಿವೆ. ಆದರೆ ಕ್ಷಿಪ್ರವಾಗಿಯೇ ಮತ್ತೆ ಅಭಯವೂ ಕೂಡ ಉಂಟಾಗುತ್ತದೆ. ಇದೊ, ನೋಡು ; ಶುಭಸೂಚಕಗಳಾದ ಮೃಗಗಳು ನಿನಗೆ ಪ್ರದಕ್ಷಿಣೆಯಾಗಿ ಹೋಗುತ್ತಿವೆ. ಹೀಗೆ ಅವರು ಹೇಳುತ್ತಿರುವಂತೆಯೇ ಭಯಂಕರವಾದ, ಹಾಗೂ ಎಲ್ಲರ ಕಣ್ಣುಗಳನ್ನೂ ಧೂಳುಗಳ ಮಳೆಯಿಂದ ಹಿಂಸಿಸುತ್ತಾ ಮುಚ್ಚಿಸುತ್ತಿರುವ ಬಿರುಗಾಳಿಯು ಬೀಸಿತು.

**ತತೋ ವ್ರಜನ್ ದದರ್ಶಾಗ್ರೇ ತೇಜೋರಾಶಿಮುಪಸ್ಥಿತಮ್ ।**
**ಕೋಟಿಸೂರ್ಯಪ್ರತೀಕಾಶಂ ವಿದ್ಯುತ್ಪುಂಜಸಮಪ್ರಭಮ್ ॥**
**ತೇಜೋರಾಶಿಂ ದದರ್ಶಾಥ ಜಾಮದಗ್ನ್ಯಂ ಪ್ರತಾಪವಾನ್ ॥ ೫ ॥**

೫. ಅನಂತರ ಮುಂದಕ್ಕೆ ಹೋಗುತ್ತಿರುವಾಗಲೇ ತೇಜಸ್ಸಿನ ಬೆಟ್ಟದಂತೆ ಎದುರಾದ ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಮಿಂಚುಗಳ ಸಮೂಹ ದಂತೆ ಪ್ರಕಾಶಮಾನನಾದ, ಜಮದಗ್ನಿಯ ಮಗನಾದ ಪರಶುರಾಮನೆಂಬ ತೇಜೋರಾಶಿ ಯನ್ನು ಪ್ರತಾಪಶಾಲಿಯಾದ (ದಶರಥನು) ಕಂಡನು.

**ನೀಲಮೇಘನಿಭಂ ಪ್ರಾಂಶುಂ ಜಟಾಮಂಡಲಮಂಡಿತಮ್ ।**
**ಧನುಃಪರಶುಪಾಣಿಂ ಚ ಸಾಕ್ಷಾತ್ ಕಾಲಮಿವಾಂತಕಮ್ ॥ ೬॥**

**ಕಾರ್ತವೀರ್ಯಾಂತಕಂ ರಾಮಂ ದೃಪ್ತಕ್ಷತ್ರಿಯಮರ್ದನಮ್**
**ಪ್ರಾಪ್ತಂ ದಶರಥಸ್ಯಾಗ್ರೇ ಕಾಲಮೃತ್ಯುಮಿವಾಪರಮ್ ॥ ೭ ॥**
**ತಂ ದೃಷ್ಟ್ವಾ ಭಯಸಂತ್ರಸ್ತೋ ರಾಜಾ ದಶರಥಸ್ತದಾ ।**
**ಅರ್ಘ್ಯಾದಿಪೂಜಾಂ ವಿಸ್ಮೃತ್ಯ ತ್ರಾಹಿ ತ್ರಾಹೀತಿ ಚಾಬ್ರವೀತ್ ॥ ೮ ॥**

೬-೮. ಕಪ್ಪಾದ ಮೋಡದಂತೆ ಕಾಂತಿಯುಳ್ಳ, ಎತ್ತರವಾದ ಜಟೆಗಳ ಸಮೂಹದಿಂದ ಕೂಡಿದ, ಹಾಗೂ ಕೈಯಲ್ಲಿ ಧನುಸ್ಸು ಮತ್ತು ಕೊಡಲಿಗಳನ್ನು ಹಿಡಿದುಕೊಂಡು ಪ್ರತ್ಯಕ್ಷಯಮನಂತೆಯೇ ಇರುವ, ಕಾರ್ತವೀರ್ಯಾರ್ಜುನನನ್ನು ನಾಶಮಾಡಿದ ಮತ್ತು ಕೊಬ್ಬಿದ ಕ್ಷತ್ರಿಯರನ್ನೆಲ್ಲ ಸದೆಬಡಿದಂಥ, ಕಾಲಮೃತ್ಯುವಿನ ಅಪರಾವತಾರವಾಗಿರುವ ಪರಶುರಾಮನು ದಶರಥನ ಎದುರಿಗೆ ಬಂದನು. ಆಗ ದಶರಥರಾಜನು ಅವನನ್ನು ಕಂಡು ಭಯದಿಂದ ನಡುಗುತ್ತಾ ಆತನಿಗೆ ಅರ್ಘ್ಯಪಾದ್ಯಾದಿರೂಪವಾದ ಪೂಜೆಯನ್ನು ಮಾಡುವದನ್ನೂ ಮರೆತು 'ಕಾಪಾಡು, ಕಾಪಾಡು'- ಎಂದನು.

**ದಂಡವತ್ ಪ್ರಣಿಪತ್ಯಾಹ ಪುತ್ರಪ್ರಾಣಂ ಪ್ರಯಚ್ಛ ಮೇ ।**
**ಇತಿ ಬ್ರುವಂತಂ ರಾಜಾನಂ ಅನಾದೃತ್ಯ ರಘೂತ್ತಮಮ್ ॥ ೯ ॥**
**ಉವಾಚ ನಿಷ್ಠುರಂ ವಾಕ್ಯಂ ಕ್ರೋಧಾತ್ ಪ್ರಚಲಿತೇಂದ್ರಿಯಃ ।**

೯. ದಶರಥನು ದೀರ್ಘದಂಡನಮಸ್ಕಾರವನ್ನು ಮಾಡಿ 'ನನಗೆ ಮಗನ ಪ್ರಾಣವನ್ನುಳಿಸಿಕೊಡುವ (ವರ)ವನ್ನು ಕೊಡು'-ಎಂದನು. ಹೀಗೆ ಹೇಳುತ್ತಿರುವ ರಘುಶ್ರೇಷ್ಠನಾದ ರಾಜನನ್ನು ತಿರಸ್ಕರಿಸಿ ಕೋಪದಿಂದ ಇಂದ್ರಿಯಗಳ ಮೇಲಿನ ಹತೋಟಿಯನ್ನು ಕಳೆದುಕೊಂಡ (ಭಾರ್ಗವನು) ನಿಷ್ಠುರವಾದ ಮಾತಿನಿಂದ ಹೀಗೆಂದನು :

**ತ್ವಂ ರಾಮ ಇತಿ ನಾಮ್ನಾ ಮೇ ಚರಸಿ ಕ್ಷತ್ರಿಯಾಧಮ ।**
**ದ್ವಂದ್ವಯುದ್ಧಂ ಪ್ರಯಚ್ಛಾಶು ಯದಿ ತ್ವಂ ಕ್ಷತ್ರಿಯೋಽಸಿ ವೈ ॥ ೧೦ ॥**
**ಪುರಾಣಂ ಜರ್ಜರಂ ಚಾಪಂ ಭಂಕ್ತ್ವಾ ತ್ವಂ ಕತ್ಥಸೇ ಮುಧಾ ।**
**ಅಸ್ಮಿಂಸ್ತು ವೈಷ್ಣವೇ ಚಾಪೇ ಆರೋಪಯಸಿ ಚೇದ್ ಗುಣಮ್ ॥ ೧೧ ॥**
**ತದಾ ಯುದ್ಧಂ ತ್ವಯಾ ಸಾರ್ಧಂ ಕರೋಮಿ ರಘುವಂಶಜ ।**
**ನೋ ಚೇತ್ ಸರ್ವಾನ್ ಹನಿಷ್ಯಾಮಿ ಕ್ಷತ್ರಿಯಾಂತಕರೋ ಹ್ಯಹಮ್ ॥ ೧೨ ॥**

೧೦-೧೨. ''ಎಲೈ ರಾಮನೆ, ನೀನು ನನ್ನ ಹೆಸರಿನಿಂದ ಮೆರೆಯುತ್ತಿರುವ ಕ್ಷತ್ರಿಯಾಧಮನಾಗಿರುವೆ ; ನೀನು ಕ್ಷತ್ರಿಯನೇ ಆದರೆ ಇದೊ, ನನ್ನೊಡನೆ ದ್ವಂದ್ವಯುದ್ಧವನ್ನು ಮಾಡು. ಹಳೆಯದಾದ ಮುದಿಯಾಗಿದ್ದ (ಶೈವ)ಧನುಸ್ಸನ್ನು ಮುರಿದು ನೀನು ವ್ಯರ್ಥವಾಗಿ ಜಂಭಕೊಚ್ಚುತ್ತಿರುವೆ. ಈ ವೈಷ್ಣವಧನುಸ್ಸಿನಲ್ಲಿ ನೀನು ಹಗ್ಗವನ್ನು ಏರಿಸುವೆಯಾದರೆ ಆಗ ನಾನು ರಘುವಂಶಜನೆ, ನಿನ್ನೊಡನೆ ಯುದ್ಧಮಾಡುವೆನು.

ಹಾಗಿಲ್ಲದಿದ್ದರೆ ಎಲ್ಲರನ್ನೂ ಕೊಂದುಹಾಕುವೆನು. ನಾನು ಕ್ಷತ್ರಿಯರನ್ನೆಲ್ಲ ಕೊನೆಗಾಣಿಸು
ವವನು.''

**ಇತಿ ಬ್ರುವತಿ ವೈ ತಸ್ಮಿಂಶ್ಚಚಾಲ ವಸುಧಾ ಭೃಶಮ್ ।**
**ಅಂಧಕಾರೋ ಬಭೂವಾಥ ಸರ್ವೇಷಾಮಪಿ ಚಕ್ಷುಷಾಮ್ ॥ ೧೩ ॥**
**ರಾಮೋ ದಾಶರಥಿರ್ವೀರೋ ವೀಕ್ಷ್ಯ ತಂ ಭಾರ್ಗವಂ ರುಷಾ ।**
**ಧನುರಾಚ್ಛಿದ್ಯ ತದ್ಧಸ್ತಾದಾರೋಪ್ಯ ಗುಣಮಂಜಸಾ ॥ ೧೪ ॥**
**ತೂಣೀರಾದ್‌ಬಾಣಮಾದಾಯ ಸಂಧಾಯಾಕೃಷ್ಯ ವೀರ್ಯವಾನ್ ।**
**ಉವಾಚ ಭಾರ್ಗವಂ ರಾಮಂ ಶೃಣು ಬ್ರಹ್ಮನ್ ವಚೋ ಮಮ ॥ ೧೫ ॥**

೧೩-೧೫. ಹೀಗೆ ಹೇಳುತ್ತಿರಲಾಗಿ ಭೂಮಿಯು ಚೆನ್ನಾಗಿ ಅಲುಗಾಡಿತು ಎಲ್ಲರ ಕಣ್ಣುಗಳಿಗೂ ಕತ್ತಲೆಯು ಆವರಿಸಿತು. ಆಗ ವೀರನಾದ ದಶರಥಪುತ್ರನಾದ ರಾಮನು ಕೋಪದಿಂದ ಆ ಭಾರ್ಗವನನ್ನು ನೋಡಿ ಕೂಡಲೆ ಆತನ ಕೈಯಿಂದ ಬಿಲ್ಲನ್ನು ಕಸಿದುಕೊಂಡು ಅದರ ಹಗ್ಗವನ್ನು ಬಿಗಿದುಕಟ್ಟಿ ಬತ್ತಳಿಕೆಯಿಂದ ಬಾಣವನ್ನು ತೆಗೆದು ಕೊಂಡು ಹೂಡಿ ಚೆನ್ನಾಗಿ ಸೆಳೆದು ವೀರ್ಯವಂತನಾದ ಅವನು ಭಾರ್ಗವರಾಮನಿಗೆ 'ಎಲೈ ಬ್ರಾಹ್ಮಣನೆ, ನನ್ನ ಮಾತನ್ನು ಕೇಳು' (ಎಂದನು).

**ಲಕ್ಷ್ಯಂ ದರ್ಶಯ ಬಾಣಸ್ಯ ಹ್ಯಮೋಘೋ ಮಮ ಸಾಯಕಃ ।**
**ಲೋಕಾನ್ ಪಾದಯುಗಂ ವಾಪಿ ವದ ಶೀಘ್ರಂ ಮಮಾಜ್ಞಯಾ ॥ ೧೬ ॥**
**ಅಯಂ ಲೋಕಃ ಪರೋ ವಾಥ ತ್ವಯಾ ಗಂತುಂ ನ ಶಕ್ಯತೇ ।**
**ಏವಂ ತ್ವಂ ಹಿ ಪ್ರಕರ್ತವ್ಯಂ ವದ ಶೀಘ್ರಂ ಮಮಾಜ್ಞಯಾ ॥ ೧೭ ॥**

೧೬-೧೭. (ಎಲೈ ಭಾರ್ಗವನೆ,) ''ನನ್ನ ಬಾಣಕ್ಕೆ ಗುರಿಯನ್ನು ತೋರಿಸು, ಏಕೆಂದರೆ ನನ್ನ ಬಾಣವು ಅಮೋಘವಾದದ್ದು. ಈಗ (ನಿನ್ನ ತಪಃಫಲವಾದ ಪುಣ್ಯ)ಲೋಕಗಳನ್ನಾಗಲಿ ಅಥವಾ ನಿನ್ನ ಎರಡು ಕಾಲುಗಳನ್ನಾಗಲಿ, ನನ್ನ ಆಜ್ಞೆಯಂತೆ ಕೂಡಲೆ ತೋರಿಸಿ ಹೇಳುವನಾಗು. ಇನ್ನು ಈ ಲೋಕವಾಗಲಿ, ಪರಲೋಕವಾಗಲಿ ಯಾವದಾದರೊಂದನ್ನು ನೀನು ಪಡೆಯಲು ಸಾಧ್ಯವಿಲ್ಲ.* ಈಗ ನೀನು ಹೀಗೆಯೇ ನಡೆದುಕೊಳ್ಳಬೇಕು. ಬೇಗ ಹೇಳು'' ಎಂದನು.

**ಏವಂ ವದತಿ ಶ್ರೀರಾಮೇ ಭಾರ್ಗವೋ ವಿಕೃತಾನನಃ ।**
**ಸಂಸ್ಮರನ್ ಪೂರ್ವವೃತ್ತಾಂತಮಿದಂ ವಚನಮಬ್ರವೀತ್ ॥ ೧೮ ॥**

* ಕಾಲುಗಳನ್ನು ಕತ್ತರಿಸಿಬಿಟ್ಟರೆ ಈ ಲೋಕದಲ್ಲಿ ನಡೆಯುವದಾಗಲಾರದು. ಪರಲೋಕಗಳಿಗೆ ಸಾಧನವಾದ ಪುಣ್ಯವನ್ನು ನಾಶಗೊಳಿಸಿದರೆ ಆ ಲೋಕಗಳು ದಕ್ಕಲಾರವು. ಅಂತೂ ಯಾವದಾದರೊಂದನ್ನು ಬಾಣಕ್ಕೆ ಗುರಿಯಾಗಿ ಮಾಡು - ಎಂದಭಿಪ್ರಾಯ.

**ರಾಮ ರಾಮ ಮಹಾಬಾಹೋ ಜಾನೇ ತ್ವಾಂ ಪರಮೇಶ್ವರಮ್ ।**
**ಪುರಾಣಪುರುಷಂ ವಿಷ್ಣುಂ ಜಗತ್ಸರ್ಗಲಯೋದ್ಭವಮ್ ॥ ೧೯ ॥**
**ಬಾಲ್ಯೇಽಹಂ ತಪಸಾ ವಿಷ್ಣುಮಾರಾಧಯಿತುಮಂಜಸಾ ।**
**ಚಕ್ರತೀರ್ಥಂ ಶುಭಂ ಗತ್ವಾ ತಪಸಾ ವಿಷ್ಣುಮನ್ವಹಮ್ ॥ ೨೦ ॥**
**ಅತೋಷಯಂ ಮಹಾತ್ಮಾನಂ ನಾರಾಯಣಮನನ್ಯಧೀಃ ।**

೧೮-೨೦. ಶ್ರೀರಾಮನು ಹೀಗೆ ಹೇಳುತ್ತಿರಲಾಗಿ ಪೆಚ್ಚುಮುಖದಿಂದ ಕೂಡಿದ ಪರಶುರಾಮನು ಹಿಂದಿನ ವೃತ್ತಾಂತವನ್ನು ನೆನೆಯಿಸಿಕೊಳ್ಳುತ್ತಾ ಈ ಮಾತನ್ನಾಡಿದನು. ''ಮಹಾಬಾಹುವಾದ ರಾಮನೆ, ನೀನು ಪರಮೇಶ್ವರನೆಂದು ಬಲ್ಲೆನು. ಪುರಾಣ ಪುರುಷನೂ ಜಗತ್ತಿನ ಹುಟ್ಟುಲಯಗಳಿಗೆ ಮೂಲನಾದವನೂ ವಿಷ್ಣುವೂ ಆಗಿರುವೆ ಯೆಂದು ತಿಳಿದಿದ್ದೇನೆ. ನಾನು ಬಾಲ್ಯದಲ್ಲಿಯೇ ವಿಷ್ಣುವನ್ನು ತಪಸ್ಸಿನಿಂದ ಆರಾಧಿಸುವುದ ಕ್ಕಾಗಿ ಶುಭವಾದ ಚಕ್ರತೀರ್ಥವನ್ನು ಹೊಕ್ಕು ಅಲ್ಲಿ ಪ್ರತಿದಿನವೂ ಏಕಾಗ್ರತೆಯಿಂದ ಅನನ್ಯಮನಸ್ಕನಾಗಿ ಮಹಾತ್ಮನಾದ ನಾರಾಯಣನನ್ನು ಧ್ಯಾನಿಸಿ ಸಂತೋಷಗೊಳಿಸಿದೆನು.

**ತತಃ ಪ್ರಸನ್ನೋ ದೇವೇಶಃ ಶಂಖಚಕ್ರಗದಾಧರಃ ।**
**ಉವಾಚ ಮಾಂ ರಘುಶ್ರೇಷ್ಠ ಪ್ರಸನ್ನಮುಖಪಂಕಜಃ ॥ ೨೧ ॥**

೨೦. ಎಲೈ ರಘುಶ್ರೇಷ್ಠನೆ, ಅನಂತರ ಪ್ರಸನ್ನನಾದ ಶಂಖಚಕ್ರಗದಾಧಾರಿ ಯಾದ ಆ ನಾರಾಯಣನು ಅರಳಿದ ಮುಖಕಮಲವುಳ್ಳವನಾಗಿ ನನ್ನನ್ನು ಕುರಿತು ಹೀಗೆಂದನು :

**ಶ್ರೀಭಗವಾನುವಾಚ-**

**ಉತ್ತಿಷ್ಠ ತಪಸೋ ಬ್ರಹ್ಮನ್ ಫಲಿತಂ ತೇ ತಪೋ ಮಹತ್ ।**
**ಮಚ್ಚಿದಂಶೇನ ಯುಕ್ತಸ್ತ್ವಂ ಜಹಿ ಹೈಹಯಪುಂಗವಮ್ ॥ ೨೧ ॥**
**ಕಾರ್ತವೀರ್ಯಂ ಪಿತೃಹಣಂ ಯದರ್ಥಂ ತಪಸಃ ಶ್ರಮಃ ।**
**ತತಃ ತ್ರಿಃಸಪ್ತಕೃತ್ವಸ್ತ್ವಂ ಹತ್ವಾ ಕ್ಷತ್ರಿಯಮಂಡಲಮ್ ॥ ೨೨ ॥**
**ಕೃತ್ಸ್ನಾಂ ಭೂಮಿಂ ಕಾಶ್ಯಪಾಯ ದತ್ವಾ ಶಾಂತಿಮುಪಾವಹ ।**
**ತ್ರೇತಾಮುಖೇ ದಾಶರಥಿಃ ಭೂತ್ವಾ ರಾಮೋಽಹಮವ್ಯಯಃ ॥ ೨೩ ॥**
**ಉತ್ಪತ್ಸ್ಯೇ ಪರಯಾ ಶಕ್ತ್ಯಾ ತದಾ ದ್ರಕ್ಷ್ಯಸಿ ಮಾಂ ಪುನಃ ।**

೨೧-೨೩. ಶ್ರೀಭಗವಂತನಿಂತೆಂದನು : ''ಎಲೈ ಬ್ರಾಹ್ಮಣನೆ, ನಿನ್ನ ಮಹತ್ತಾದ ತಪಸ್ಸು ಸಿದ್ಧಿಸಿರುತ್ತದೆ. ಆದ್ದರಿಂದ ಅದನ್ನು ಬಿಟ್ಟು ಮೇಲೇಳು. ನೀನಾದರೋ ನನ್ನ ಚಿದಂಶದಿಂದ ಕೂಡಿದವನಾಗಿ ಹೈಹಯಶ್ರೇಷ್ಠನೂ ನಿನ್ನ ತಂದೆಯನ್ನು ಕೊಂದವನೂ ಆದ ಕಾರ್ತವೀರ್ಯನನ್ನು ಕೊಲ್ಲುವವನಾಗು. ಅದಕ್ಕಾಗಿ

ಯಲ್ಲವೆ, ನಿನ್ನಿಂದ ಶ್ರಮಪ್ರದವಾದ ತಪಸ್ಸು ಮಾಡಲ್ಪಟ್ಟಿತು ? ಅನಂತರ ಇಪ್ಪತ್ತೊಂದು ಬಾರಿ ನೀನು (ಭೂಮಿಯನ್ನು ಸುತ್ತಾಡಿ) ಕ್ಷತ್ರಿಯರ ಗುಂಪೆಲ್ಲವನ್ನೂ ಕೊಂದು ಇಡಿಯ ಭೂಮಿಯನ್ನೇ ಕಾಶ್ಯಪನಿಗೆ ದಾನಮಾಡಿ ಶಾಂತಿಯನ್ನು ಹೊಂದುವವನಾಗು. ತ್ರೇತಾಯುಗದ ಆದಿಯಲ್ಲಿ ಅವ್ಯಯನಾದ ನಾನು - ದಶರಥಪುತ್ರನಾದ ರಾಮನಾಗಿ ಅವತರಿಸಿ ನನ್ನ ಪರಮವಾದ ಶಕ್ತಿಯಿಂದ ಹುಟ್ಟಲಿರುವೆನು. ಆಗ ನೀನು ಮತ್ತೆ ನನ್ನನ್ನು ನೋಡಲಿರುವೆ.

**ಮತ್ತೇಜಃ ಪುನರಾದಾಸ್ಯೇ ತ್ವಯಿ ದತ್ತಂ ಮಯಾ ಪುರಾ ।**
**ತದಾ ತಪಶ್ಚರನ್ ಲೋಕೇ ತಿಷ್ಠ ತ್ವಂ ಬ್ರಹ್ಮಣೋ ದಿನಮ್ ॥ ೨೪ ॥**
**ಇತ್ಯುಕ್ತ್ವಾಽನ್ತರ್ದಧೇ ದೇವಃ ತಥಾ ಸರ್ವಂ ಕೃತಂ ಮಯಾ ।**
**ಸ ಏವ ವಿಷ್ಣುಸ್ತ್ವಂ ರಾಮ ಜಾತೋಽಸಿ ಬ್ರಹ್ಮಣಾರ್ಥಿತಃ ॥ ೨೫ ॥**
**ಮಯಿ ಸ್ಥಿತಂ ತು ತ್ವತ್ತೇಜಃ ತ್ವಯ್ಯೈವ ಪುನರಾಹೃತಮ್ ।**
**ಅದ್ಯ ಮೇ ಸಫಲಂ ಜನ್ಮ ಪ್ರತೀತೋಽಸಿ ಮಮ ಪ್ರಭೋ ॥ ೨೬ ॥**

೨೪-೨೬. ನಿನ್ನಲ್ಲಿ ನಾನು ಇಟ್ಟಿರುವ ತೇಜಸ್ಸನ್ನು ಪುನಃ ಹಿಂದಕ್ಕೆ ತೆಗೆದು ಕೊಳ್ಳುವೆನು. ಆಗ ನೀನು ಲೋಕದಲ್ಲಿ ತಪಸ್ಸು ಮಾಡಿಕೊಂಡು ಬ್ರಹ್ಮನ ದಿನವು (ಪೂರೈಸುವವರೆಗೂ) ಇದ್ದುಕೊಂಡಿರು.'' ಹೀಗೆಂದು ಹೇಳಿ ಆ ದೇವನು ಕಣ್ಮರೆ ಯಾದನು. ಹಾಗೆಯೇ ನಾನು ಎಲ್ಲವನ್ನೂ ಮಾಡಿದೆನು. ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟಂತೆ ಆ ವಿಷ್ಣುವೇ ನೀನಾಗಿರುವೆ. ಎಲೈ ರಾಮನೆ, ನನ್ನಲ್ಲಿದ್ದ ನಿನ್ನ ತೇಜಸ್ಸು ಪುನಃ ನಿನ್ನಿಂದಲೇ ಹಿಂತೆಗೆದುಕೊಳ್ಳಲ್ಪಟ್ಟಿತು. ಈಗ ನನ್ನ ಜನ್ಮವು ಸಾರ್ಥಕವಾಯಿತು. ಎಲೈ ಪ್ರಭುವೆ, ನೀನು ನನಗೆ ಗೋಚರನಾಗಿರುವೆಯಲ್ಲವೆ?

**ಬ್ರಹ್ಮಾದಿಭಿರಲಭ್ಯಸ್ತ್ವಂ ಪ್ರಕೃತೇಃ ಪಾರಗೋ ಮತಃ ।**
**ತ್ವಯಿ ಜನ್ಮಾದಿಷಡ್ಭಾವಾ ನ ಸಂತ್ಯಜ್ಞಾನಸಂಭವಾಃ ॥ ೨೭ ॥**
**ನಿರ್ವಿಕಾರೋಽಸಿ ಪೂರ್ಣಸ್ತ್ವಂ ಗಮನಾದಿವಿವರ್ಜಿತಃ ।**
**ಯಥಾ ಜಲೇ ಫೇನಜಾಲಂ ಧೂಮೋ ವಹ್ನೌ ತಥಾ ತ್ವಯಿ ॥ ೨೮ ॥**
**ತ್ವದಾಧಾರಾ ತ್ವದ್ವಿಷಯಾ ಮಾಯಾ ಕಾರ್ಯಂ ಸೃಜತ್ಯಹೋ ।**

೨೭-೨೮. ಬ್ರಹ್ಮಾದಿದೇವತೆಗಳಿಗೂ ದೊರಕದವನಾದ ನೀನು ಪ್ರಕೃತಿ ಯನ್ನು ದಾಟಿದವನಾಗಿರುತ್ತೀಯೆ. ಅಜ್ಞಾನದಿಂದುಂಟಾದ ಜನ್ಮಾದಿ ಆರು ಭಾವವಿಕಾರ ಗಳು ನಿನ್ನಲ್ಲಿರುವದಿಲ್ಲ. ನೀನು ಪರಿಪೂರ್ಣನೂ ಗಮನಾದಿಗಳಿಲ್ಲದವನೂ ನಿರ್ವಿ ಕಾರನೂ ಆಗಿದ್ದೀಯೆ. ಹೇಗೆ ನೀರಿನಲ್ಲಿ ನೊರೆಯ ಸಮೂಹವೂ ಬೆಂಕಿಯಲ್ಲಿ

ಹೊಗೆಯೂ ಇರುವವೋ ಹಾಗೆ ನಿನ್ನನ್ನೇ ವಿಷಯೀಕರಿಸಿಕೊಂಡು ನಿನ್ನನ್ನೇ ಆಶ್ರಯಿಸಿರುವ ಮಾಯೆಯು ಸೃಷ್ಟ್ಯಾದಿಕಾರ್ಯಗಳನ್ನು ಮಾಡುತ್ತಿದೆ. ಆಶ್ಚರ್ಯವು.

**ಯಾವನ್ಮಾಯಾವೃತಾಲೋಕಾಸ್ತಾವತ್ತ್ವಾಂ ನ ವಿಜಾನತೇ ।**
**ಅವಿಚಾರಿತಸಿದ್ಧೈಷಾಽವಿದ್ಯಾವಿದ್ಯಾವಿರೋಧಿನೀ ॥ ೨೯ ॥**
**ಅವಿದ್ಯಾಕೃತದೇಹಾದಿಸಂಘಾತೇ ಪ್ರತಿಬಿಂಬಿತಾ ।**
**ಚಿಚ್ಛಕ್ತಿರ್ಜೀವಲೋಕೇಽಸ್ಮಿನ್ ಜೀವ ಇತ್ಯಭಿಧೀಯತೇ ॥ ೩೦ ॥**

೨೯-೩೦. ಜನರು ಎಲ್ಲಿಯವರೆಗೆ ಮಾಯೆಯಿಂದ ಮುಚ್ಚಲ್ಪಟ್ಟಿರುವರೋ ಅಲ್ಲಿಯವರೆಗೂ ನಿನ್ನನ್ನು ಅರಿಯಲಾರರು. ಈ (ಮಾಯೆಯೆಂಬ), ವಿಚಾರಮಾಡದೆ ಇರುವ ಸ್ಥಿತಿಯಲ್ಲಿಯೇ ತೋರಿಕೊಳ್ಳುವ, ವಿದ್ಯೆಗೆ ವಿರೋಧವಾಗಿರುವ ಅವಿದ್ಯೆಯಿಂದ ಉಂಟಾದ ದೇಹವೇ ಮುಂತಾದವುಗಳ ಗುಂಪಿನಲ್ಲಿ ಪ್ರತಿಬಿಂಬಿತವಾಗಿರುವ ಚಿಚ್ಛಕ್ತಿಯು ಈ ಜೀವಲೋಕದಲ್ಲಿ ಜೀವನೆನಿಸಿರುವದು.

**ಯಾವದ್ದೇಹಮನಃಪ್ರಾಣಬುದ್ಧ್ಯಾದಿಷ್ವಭಿಮಾನವಾನ್ ।**
**ತಾವತ್ ಕರ್ತೃತ್ವಭೋಕ್ತೃತ್ವಸುಖದುಃಖಾದಿಭಾಗ್ ಭವೇತ್ ॥ ೩೧ ॥**
**ಆತ್ಮನಃ ಸಂಸೃತಿರ್ನಾಸ್ತಿ ಬುದ್ಧೇರ್ಜ್ಞಾನಂ ನ ಜಾತ್ವಿತಿ ।**
**ಅವಿವೇಕಾದ್ ದ್ವಯಂ ಯುಂಕ್ತ್ವಾ ಸಂಸಾರೀತಿ ಪ್ರವರ್ತತೇ ॥ ೩೨ ॥**

೩೧-೩೨. ಎಲ್ಲಿಯವರೆಗೆ ದೇಹ, ಮನಸ್ಸು, ಪ್ರಾಣ, ಬುದ್ಧ್ಯಾದಿಗಳಲ್ಲಿ ಜೀವನು ತಾನೆಂದು ಅಭಿಮಾನವುಳ್ಳವನಾಗಿರುವನೋ ಅಲ್ಲಿಯವರೆಗೂ ಕರ್ತೃತ್ವ ಭೋಕ್ತೃತ್ವಗಳು ಇದ್ದುಕೊಂಡಿರುವದರಿಂದ ಸುಖದುಃಖಾದಿಗಳನ್ನು ಪಡೆದುಕೊಂಡೇ ಇರುವನು. ಆದರೆ ಕೇವಲ ಆತ್ಮನಿಗೆ ಸಂಸಾರವಿರುವದಿಲ್ಲ. ಇವೆರಡನ್ನೂ ಅವಿವೇಕದಿಂದ ಕೂಡಿಸಿಕೊಂಡಾಗ ಸಂಸಾರಿಯು ತಾನೆಂದು ಭಾವಿಸಿಕೊಂಡು (ಕರ್ಮಗಳಲ್ಲಿ) ತೊಡಗುತ್ತಾನೆ.

**ಜಡಸ್ಯ ಚಿತ್ಸಮಾಯೋಗಾತ್ ಚಿತ್ತ್ವಂ ಭೂಯಾಚ್ಚಿತೇಸ್ತಥಾ ।**
**ಜಡಸಂಗಾಜ್ಜಡತ್ವಂ ಹಿ ಜಲಾಗ್ನ್ಯೋರ್ಮೇಲನಂ ಯಥಾ ॥ ೩೩ ॥**

೩೩. ಜಡವಸ್ತುವಿಗೆ ಚಿದ್ವಸ್ತುವಿನ ಸಂಪರ್ಕದಿಂದ ಚೈತನ್ಯವೂ ಚಿದ್ವಸ್ತುವಿಗೆ ಜಡವಸ್ತುವಿನ ಸಂಪರ್ಕದಿಂದ ಜಡತ್ವವೂ ಬೆಂಕಿಗೂ - ನೀರಿಗೂ ಸಂಬಂಧವಾದಾಗ (ಪರಸ್ಪರ ಶೀತೋಷ್ಣಧರ್ಮಗಳು ಸಂಕ್ರಾಂತವಾಗುವಂತೆ) ಔಪಾಧಿಕವಾಗಿ ಉಂಟಾಗುತ್ತದೆ.

**ಯಾವತ್ ತ್ವತ್ಪಾದಭಕ್ತಾನಾಂ ಸಂಗಸೌಖ್ಯಂ ನ ವಿಂದತಿ ।**
**ತಾವತ್ ಸಂಸಾರದುಃಖೌಘಾನ್ನ ನಿವರ್ತೇನ್ನರಃ ಸದಾ ॥ ೩೪ ॥**
**ಸತ್ಸಂಗಲಬ್ಧಯಾ ಭಕ್ತ್ಯಾ ಯದಾ ತ್ವಾಂ ಸಮುಪಾಸತೇ ।**
**ತದಾ ಮಾಯಾ ಶನೈರ್ಯಾತಿ ತಾನವಂ ಪ್ರತಿಪದ್ಯತೇ ॥ ೩೫ ॥**

೩೪-೩೫. ಎಲ್ಲಿಯವರೆಗೆ ನಿನ್ನ ಪಾದಭಕ್ತರುಗಳ ಸಂಗಸುಖವನ್ನು ಮನುಷ್ಯನು ಪಡೆಯುವದಿಲ್ಲವೋ ಅಲ್ಲಿಯವರೆಗೂ ಸಂಸಾರದುಃಖಸಮೂಹದಿಂದ ಹಿಂದಿರುಗುವದಿಲ್ಲ. (ಆದರೆ) ಸತ್ಸಂಗವು ದೊರಕಿತೆಂದರೆ ಅದರಿಂದುಂಟಾದ ಭಕ್ತಿಯಿಂದ ಕೂಡಿ ಯಾವಾಗ ನಿನ್ನನ್ನು ಚಿಂತಿಸುವನೋ ಆಗ ಮಾಯೆಯು ಮೆಲ್ಲಗೆ ಹೊರಟು ಹೋಗುವದು. ಹಾಗೂ ಕೃಶವಾಗುವದು.

**ತತಸ್ತ್ವಜ್ಜ್ಞಾನಸಂಪನ್ನಃ ಸದ್ಗುರುಸ್ತೇನ ಲಭ್ಯತೇ ।**
**ವಾಕ್ಯಜ್ಞಾನಂ ಗುರೋರ್ಲಬ್ಧ್ವಾ ತ್ವತ್ಪ್ರಸಾದಾದ್ ವಿಮುಚ್ಯತೇ ॥ ೩೬ ॥**
**ತಸ್ಮಾತ್ ತ್ವದ್ಭಕ್ತಿಹೀನಾನಾಂ ಕಲ್ಪಕೋಟಿಶತೈರಪಿ ।**
**ನ ಮುಕ್ತಿಶಂಕಾ ವಿಜ್ಞಾನಶಂಕಾ ನೈವ ಸುಖಂ ತಥಾ ॥ ೩೭ ॥**

೩೬-೩೭. ಅನಂತರ ನಿನ್ನ ಜ್ಞಾನದಿಂದ ಕೂಡಿದ ಸದ್ಗುರುವು ಅವನಿಗೆ ದೊರಕುವನು. ಆಗ ಗುರುವಿನ ಮೂಲಕ (ವೇದಾಂತ) ವಾಕ್ಯಜ್ಞಾನವನ್ನು ಪಡೆದುಕೊಂಡು ನಿನ್ನ ದಯೆಯಿಂದ ಸಂಸಾರದಿಂದ ಬಿಡುಗಡೆಹೊಂದುವನು. ಹೀಗಿರುವದರಿಂದ ನಿನ್ನ ಭಕ್ತಿಯಿಲ್ಲದವರಿಗೆ ನೂರುಕೋಟಿಕಲ್ಪಗಳಾದರೂ ಜ್ಞಾನದ ಆಸೆಯಾಗಲಿ ಮುಕ್ತಿಯ ಆಸೆಯಾಗಲಿ ಸುಖವಾಗಲಿ ದೊರಕುವ ಸಂಭವವೇ ಇರುವದಿಲ್ಲ.

**ಅತಸ್ತ್ವತ್ಪಾದಕಮಲೇಭಕ್ತಿರ್ಮೇ ಜನ್ಮಜನ್ಮನಿ ।**
**ಸ್ಯಾತ್ ತ್ವದ್ಭಕ್ತಿಮತಾಂ ಸಂಗೋಽವಿದ್ಯಾ ಯಾಭ್ಯಾಂ ವಿನಶ್ಯತಿ ॥ ೩೮ ॥**
**ಲೋಕೇ ತ್ವದ್ಭಕ್ತಿನಿರತಾಸ್ತ್ವದ್ಧರ್ಮಾಮೃತವರ್ಷಿಣಃ ।**
**ಪುನಂತಿ ಲೋಕಮಖಿಲಂ ಕಿಂ ಪುನಃ ಸ್ವಕುಲೋದ್ಭವಾನ್ ॥ ೩೯ ॥**

೩೮-೩೯. ಆದ್ದರಿಂದ ಯಾವ ಎರಡರಿಂದ ವಿದ್ಯೆಯು ನಾಶವಾಗುವದೋ ಆ ಎರಡು ವಸ್ತುಗಳಿಂದ ನಿನ್ನ ಪಾದಕಮಲದಲ್ಲಿ ಭಕ್ತಿಯೂ ನಿನ್ನ ಭಕ್ತರುಗಳೊಡನೆ ಸಂಗವೂ ನನಗೆ ಜನ್ಮಜನ್ಮದಲ್ಲಿಯೂ ಉಂಟಾಗಲಿ ! ಲೋಕದಲ್ಲಿ ನಿನ್ನ ಭಕ್ತಿಯಲ್ಲಿಯೇ ತೊಡಗಿರುವವರೂ ನಿನ್ನ ಧರ್ಮವೆಂಬ ಅಮೃತವನ್ನೇ ಸುರಿಸುವವರೂ ಆದ ಜನರು ಇಡಿಯ ಲೋಕವನ್ನೇ ಪಾವನಗೊಳಿಸುವರು. ಹೀಗಿರುವಲ್ಲಿ ತಮ್ಮ ವಂಶದಲ್ಲಿಯೇ ಹುಟ್ಟಿರುವವರನ್ನು ಉದ್ಧಾರಮಾಡುತ್ತಾರೆಂದು ಹೇಳತಕ್ಕದ್ದೇನಿದೆ ?

**ನಮೋಽಸ್ತು ಜಗತಾಂ ನಾಥ ನಮಸ್ತೇ ಭಕ್ತಿಭಾವನ ।**
**ನಮಃ ಕಾರುಣಿಕಾನಂತ ರಾಮಚಂದ್ರ ನಮೋಽಸ್ತು ತೇ ॥ ೪೦ ॥**

೪೦. ಜಗತ್ತಿಗೆಲ್ಲ ಒಡೆಯನಾದವನೆ, ಭಕ್ತಿಭಾವನನೆ, (ಭಕ್ತಿಯನ್ನು ಬೆಳೆಸುವವನೆ) ಕರುಣಾಮೂರ್ತಿಯೆ, ಅನಂತನೆ, ರಾಮಚಂದ್ರನೆ, ನಿನಗೆ ನಮಸ್ಕಾರವಿರಲಿ!

**ತತಃ ಪ್ರಸನ್ನೋ ಭಗವಾನ್ ಶ್ರೀರಾಮಃ ಕರುಣಾಮಯಃ ।**
**ಪ್ರಸನ್ನೋಽಸ್ಮಿ ತವ ಬ್ರಹ್ಮನ್ ಯತ್ತೇ ಮನಸಿ ವರ್ತತೇ ॥ ೪೧ ॥**
**ದಾಸ್ಯೇ ತದಖಿಲಂ ಕಾಮಂ ಮಾ ಕುರುಷ್ವಾತ್ರ ಸಂಶಯಮ್ ।**

೪೧. ಅನಂತರ ಪ್ರಸನ್ನನಾದ ಭಗವಂತನಾದ ಕರುಣಾಮಯನಾದ ಶ್ರೀ ರಾಮನು 'ಎಲೈ ಬ್ರಹ್ಮವಿದನೆ, ನಿನ್ನ ವಿಷಯದಲ್ಲಿ ನಾನು ಅನುಗ್ರಹಬುದ್ಧಿಯುಳ್ಳವನಾಗಿರುವೆನು. ನಿನ್ನ ಮನಸ್ಸಿನಲ್ಲಿ ಏನೇನು ಇಷ್ಟಾರ್ಥಗಳುಂಟೋ ಅವೆಲ್ಲವನ್ನೂ ನಾನು ಕೊಡುವೆನು. ಈ ವಿಷಯದಲ್ಲಿ ಸಂಶಯಪಡಬೇಡ' - ಎಂದನು.

**ತತಃ ಪ್ರೀತೇನ ಮನಸಾ ಭಾರ್ಗವೋ ರಾಮಮಬ್ರವೀತ್ ।**
**ಯದಿ ಮೇಽನುಗ್ರಹೋ ರಾಮ ತವಾಸ್ತಿ ಮಧುಸೂದನ ॥ ೪೨ ॥**
**ತ್ವದ್ಭಕ್ತಸಂಗಸ್ತ್ವತ್ಪಾದೇ ದೃಢಾ ಭಕ್ತಿಃ ಸದಾಽಸ್ತು ಮೇ ।**
**ಸ್ತೋತ್ರಮೇತತ್ ಪಠೇದ್ಯಸ್ತು ಭಕ್ತಿಹೀನೋಽಪಿ ಸರ್ವದಾ ॥ ೪೩ ॥**
**ತ್ವದ್ಭಕ್ತಿಸ್ತಸ್ಯ ವಿಜ್ಞಾನಂ ಭೂಯಾದಂತೇ ಸ್ಮೃತಿಸ್ತವ ।**

೪೨-೪೩. ಅನಂತರ ಪ್ರೀತಿಯಿಂದ ಕೂಡಿದ ಮನಸ್ಸಿನಿಂದ ಶ್ರೀರಾಮನನ್ನು ಕುರಿತು ಪರಶುರಾಮನು ಹೀಗೆಂದನು : '' ಎಲೈ ರಾಮನೆ, ನೀನು ನನಗೆ ಅನುಗ್ರಹಿಸುವದಾದರೆ ಮಧುಸೂದನನೆ, ನಿನ್ನ ಭಕ್ತರ ಸಂಗವೂ ನಿನ್ನ ಪಾದದಲ್ಲಿ ದೃಢವಾದ ಭಕ್ತಿಯೂ ನನಗೆ ಸದಾ ಇರುವಂತೆ ಮಾಡುವವನಾಗು. ಮತ್ತು ಯಾವನು ಈ ಸ್ತೋತ್ರವನ್ನು ಪಠಿಸುವನೋ ಅಂಥವನಿಗೆ, ಅವನು ಭಕ್ತಿಯಿಲ್ಲದವನಾದರೂ ಭಕ್ತಿಯುಂಟಾಗುವಂತೆಯೂ ಮತ್ತು ಜ್ಞಾನವುಂಟಾಗುವಂತೆಯೂ ಕಡೆಯಲ್ಲಿ ನಿನ್ನ ಸ್ಮರಣೆಯು ದೊರಕುವಂತೆಯೂ ದಯಪಾಲಿಸುವವನಾಗು.''

**ತಥೇತಿ ರಾಘವೇಣೋಕ್ತಃ ಪರಿಕ್ರಮ್ಯ ಪ್ರಣಮ್ಯ ತಮ್ ।**
**ಪೂಜಿತಸ್ತದನುಜ್ಞಾತೋ ಮಹೇಂದ್ರಾಚಲಮನ್ವಗಾತ್ ॥ ೪೪ ॥**

೪೪. ಹಾಗೆಯೇ ಆಗಲಿ ಎಂದು ಶ್ರೀರಾಮನಿಂದ ಹೇಳಲ್ಪಟ್ಟ ಆತನು ರಾಮನಿಗೆ ಪ್ರದಕ್ಷಿಣೆಮಾಡಿ ಅವನಿಂದ ಗೌರವಿಸಲ್ಪಟ್ಟವನಾಗಿ ಅವನ ಅಪ್ಪಣೆಯನ್ನು ಪಡೆದುಕೊಂಡು ಮಹೇಂದ್ರಪರ್ವತವನ್ನು ಕುರಿತು ಹೊರಟುಹೋದನು.

**ರಾಜಾ ದಶರಥೋ ಹೃಷ್ಟೋ ರಾಮಂ ಮೃತಮಿವಾಗತಮ್ ।**
**ಆಲಿಂಗ್ಯಾಲಿಂಗ್ಯ ಹರ್ಷೇಣ ನೇತ್ರಾಭ್ಯಾಂ ಜಲಮುತ್ಸೃಜತ್ ॥ ೪೫ ॥**
**ತತಃ ಪ್ರೀತೇನ ಮನಸಾ ಸ್ವಸ್ಥಚಿತ್ತಃ ಪುರಂ ಯಯೌ ।**

೪೫. ಸಂತುಷ್ಟನಾದ ರಾಜನಾದ ದಶರಥನು ಸತ್ತುಬದುಕಿಬಂದಂತೆ ಆದ ರಾಮನನ್ನು ಮತ್ತೆ ಮತ್ತೆ ತಬ್ಬಿಕೊಂಡು ಸಂತೋಷದಿಂದ ಎರಡೂ ಕಣ್ಣುಗಳಿಂದ ಆನಂದಬಾಷ್ಪವನ್ನು ಸುರಿಸಿದನು. ಪ್ರೀತಿಯಿಂದ ಕೂಡಿದ ಹಾಗೂ ಸಮಾಧಾನವಾದ ಮನಸ್ಸಿನಿಂದ ಪಟ್ಟಣವನ್ನು ಕುರಿತು ಹೊರಟನು.

**ರಾಮಲಕ್ಷ್ಮಣಶತ್ರುಘ್ನಭರತಾ ದೇವಸಂಮಿತಾಃ ।**
**ಸ್ವಾಂ ಸ್ವಾಂ ಭಾರ್ಯಾಮುಪಾದಾಯ ರೇಮಿರೇ ಸ್ವಸ್ವಮಂದಿರೇ ॥ ೪೬ ॥**

೪೬. ದೇವತೆಗಳಂತೆ ವಿರಾಜಮಾನರಾದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರುಗಳು ಕೂಡ ತಮ್ಮ ತಮ್ಮ ಪತ್ನಿಯರೊಡಗೂಡಿ ತಮ್ಮ ತಮ್ಮ ಗೃಹಗಳಲ್ಲಿ ಆನಂದದಿಂದ ಇರುತ್ತಿದ್ದರು

**ಮಾತಾಪಿತೃಭ್ಯಾಂ ಸಂಹೃಷ್ಟೋ ರಾಮಃ ಸೀತಾಸಮನ್ವಿತಃ ।**
**ರೇಮೇ ವೈಕುಂಠಭವನೇ ಶ್ರಿಯಾ ಸಹ ಯಥಾ ಹರಿಃ ॥ ೪೭ ॥**

೪೭. ಸಂತೋಷಯುಕ್ತನಾದ ರಾಮನು ಸೀತೆಯೊಡನೆ ಹಾಗೂ ತಾಯಿತಂದೆಗಳ ಜೊತೆಗೂಡಿ ವೈಕುಂಠನಿಲಯದಲ್ಲಿ ಶ್ರೀಹರಿಯು ಲಕ್ಷ್ಮೀಸಮೇತನಾಗಿ ಸುಖದಿಂದ ವಿಹರಿಸುತ್ತಿರುವಂತೆ ಆನಂದದಿಂದ ಇದ್ದುಕೊಂಡಿರುವನಾದನು.

**ಯುಧಾಜಿನ್ನಾಮ ಕೈಕೇಯೀಭ್ರಾತಾ ಭರತಮಾತುಲಃ ।**
**ಭರತಂ ನೇತುಮಾಗಚ್ಛತ್ ಸ್ವರಾಜ್ಯಂ ಪ್ರೀತಿಸಂಯುತಃ ॥ ೪೮ ॥**
**ಪ್ರೇಷಯಾಮಾಸ ಭರತಂ ರಾಜಾ ಸ್ನೇಹಸಮನ್ವಿತಃ ।**
**ಶತ್ರುಘ್ನಂ ಚಾಪಿ ಸಂಪೂಜ್ಯ ಯುಧಾಜಿತಮರಿಂದಮಃ ॥ ೪೯ ॥**

೪೮-೪೯. ಯುಧಾಜಿತ್ತು ಎಂಬ ಹೆಸರಿನ ಕೈಕೇಯಿಯ ಸೋದರನಾದ ಭರತನ ಸೋದರಮಾವನು ಭರತನನ್ನು ತನ್ನ ಊರಿಗೆ ಕರೆದೊಯ್ಯುವದಕ್ಕಾಗಿ ಪ್ರೀತಿಯುಕ್ತನಾಗಿ ಬಂದನು. ಶತ್ರುಸಂಹಾರಕನಾದ ದಶರಥರಾಜನು ಸ್ನೇಹಪೂರ್ವಕವಾಗಿ ಆತನನ್ನು ಗೌರವಿಸಿ ಭರತನನ್ನೂ ಶತ್ರುಘ್ನನನ್ನೂ ಕಳುಹಿಸಿಕೊಟ್ಟನು.

**ಕೌಸಲ್ಯಾ ಶುಶುಭೇ ದೇವೀ ರಾಮೇಣ ಸಹ ಸೀತಯಾ ।**
**ದೇವಮಾತೇವ ಪೌಲೋಮ್ಯಾ ಶಚ್ಯಾ ಶಕ್ರೇಣ ಶೋಭನಾ ॥ ೫೦ ॥**

೫೦. ದೇವಮಾತೆಯಾದ ಅದಿತಿಯು ಇಂದ್ರ ಮತ್ತು ಶಚೀದೇವಿಯರೊಡಗೂಡಿ ಸುಖಿನಿಯಾಗಿರುವಂತೆ ಶೋಭನಳಾದ ಕೌಸಲ್ಯೆಯು ರಾಮ ಮತ್ತು ಸೀತೆಯರೊಡಗೂಡಿ ವಿರಾಜಮಾನಳಾಗಿದ್ದಳು.

**ಸಾಕೇತೇ ಲೋಕನಾಥಪ್ರಥಿತಗುಣಗಣೋ ಲೋಕಸಂಗೀತಕೀರ್ತಿಃ**
**ಶ್ರೀರಾಮಃ ಸೀತಯಾಸ್ತೇಽಖಿಲಜನನಿಕರಾನಂದಸಂದೋಹಮೂರ್ತಿಃ ।**
**ನಿತ್ಯಶ್ರೀರ್ನಿರ್ವಿಕಾರೋ ನಿರವಧಿವಿಭವೋ ನಿತ್ಯಮಾಯಾನಿರಾಸೋ**
**ಮಾಯಾಕಾರ್ಯಾನುಸಾರೀ ಮನುಜ ಇವ ಸದಾ ಭಾತಿ ದೇವೋಽಖಿಲೇಶಃ ॥ ೫೧ ॥**

೫೧. ಅಯೋಧ್ಯಾನಗರಿಯಲ್ಲಿ ಲೋಕಪಾಲಕರುಗಳಲ್ಲಿಯೂ ಹೊಗಳಲ್ಪಟ್ಟಂಥ ಗುಣಗಳ ಸಮೂಹದಿಂದ ಕೂಡಿದ, ಜಗತ್ತಿನಲ್ಲೆಲ್ಲ ಗಾನಮಾಡಲ್ಪಟ್ಟ ಕೀರ್ತಿಯುಳ್ಳ, ಎಲ್ಲಾ ಜನಸಮೂಹಕ್ಕೂ ಆನಂದದ ಗಟ್ಟಿಯಾದ ಆಕಾರವೆತ್ತಂತಿರುವ, ನಿತ್ಯಲಕ್ಷ್ಮೀಯುಕ್ತನೂ ನಿರ್ವಿಕಾರನೂ, ಮಿಗಿಲಿಲ್ಲದ ಮಹಿಮೆಯುಳ್ಳವನೂ ಮಾಯೆಯನ್ನು ಯಾವಾಗಲೂ ಕಳೆದುಕೊಂಡಿರುವವನೂ, ಆದರೂ ಮಾಯೆಯ ಕಾರ್ಯವನ್ನು ಅನುಸರಿಸಿ ಮನುಷ್ಯನಂತೆ ನಟಿಸುವವನೂ ಎಲ್ಲರಿಗೂ ಒಡೆಯನೂ ಆದ ಶ್ರೀರಾಮನು ಸೀತಾಸಮೇತನಾಗಿ ಯಾವಾಗಲೂ ಇದ್ದುಕೊಂಡಿರುವನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಬಾಲಕಾಂಡೇ ಸಪ್ತಮಃ ಸರ್ಗಃ**
**ಸಮಾಪ್ತಮಿದಂ ಬಾಲಕಾಂಡಮ್**

ಃಃಃಃಃಃಃಃಃಃಃ

# ಅಯೋಧ್ಯಾಕಾಂಡ

## ಒಂದನೆಯ ಸರ್ಗ

**ಶ್ರೀಮಹಾದೇವ ಉವಾಚ-**
**ಏಕದಾ ಸುಖಮಾಸೀನಂ ರಾಮಂ ಸ್ವಾಂತಃಪುರಾಜಿರೇ ।**
**ಸರ್ವಾಭರಣಸಂಪನ್ನಂ ರತ್ನಸಿಂಹಾಸನೇ ಸ್ಥಿತಮ್ ॥ ೧ ॥**
**ನೀಲೋತ್ಪಲದಲಶ್ಯಾಮಂ ಕೌಸ್ತುಭಾಮುಕ್ತಕಂಧರಮ್ ।**
**ಸೀತಯಾ ರತ್ನದಂಡೇನ ಚಾಮರೇಣಾಥ ವೀಜಿತಮ್ ॥ ೨ ॥**
**ವಿನೋದಯಂತಂ ತಾಂಬೂಲಚರ್ವಣಾದಿಭಿರಾದರಾತ್ ।**
**ನಾರದೋಽವತರತ್ ದ್ರಷ್ಟುಮಂಬರಾದ್ ಯತ್ರ ರಾಘವಃ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಒಮ್ಮೆ ತನ್ನ ಅಂತಃಪುರದ ಅಂಗಳದಲ್ಲಿ ಕುಳಿತಿದ್ದ, ಸರ್ವಾಭರಣಗಳಿಂದ ಅಲಂಕೃತನೂ ರತ್ನಸಿಂಹಾಸನದಲ್ಲಿ ಮಂಡಿತನೂ ಆದ, ಕನ್ನೈದಿಲೆಯಂತೆ ನೀಲವರ್ಣನಾದ, ಕೌಸ್ತುಭಮಣಿಯಿಂದ ವಿರಾಜಮಾನವಾದ ಕಂಠವುಳ್ಳ ಮತ್ತು ರತ್ನದ ಕೋಲಿನಿಂದ ಕೂಡಿದ ಚಾಮರದಿಂದ ಸೀತೆಯು ಗಾಳಿಹಾಕುತ್ತಿರುವಲ್ಲಿ ಹಾಗೂ ವಿಳ್ಳೆದೆಲೆಯನ್ನು ಸವಿಯುತ್ತಾ ಪ್ರೇಮದಿಂದ ಆಕೆಯನ್ನು ವಿನೋದಗೊಳಿಸುತ್ತಿರುವ ರಾಮನನ್ನು ದರ್ಶನಮಾಡುವದಕ್ಕಾಗಿ ನಾರದ ಮಹಾಮುನಿಯು ಶ್ರೀರಾಮನಿದ್ದಲ್ಲಿಗೆ ಆಕಾಶಮಾರ್ಗದಿಂದ ಇಳಿದುಬಂದನು.

**ಶುದ್ಧಸ್ಫಟಿಕಸಂಕಾಶಃ ಶರಚ್ಚಂದ್ರ ಇವಾಮಲಃ ।**
**ಅತರ್ಕಿತಮುಪಾಯಾತೋ ನಾರದೋ ದಿವ್ಯದರ್ಶನಃ ॥ ೪ ॥**
**ತಂ ದೃಷ್ಟ್ವಾ ಸಹಸೋತ್ಥಾಯ ರಾಮಃ ಪ್ರೀತ್ಯಾ ಕೃತಾಂಜಲಿಃ ।**
**ನನಾಮ ಶಿರಸಾ ಭೂಮೌ ಸೀತಯಾ ಸಹ ಭಕ್ತಿಮಾನ್ ॥ ೫ ॥**

೪-೫. ಬಿಳುಪಾದ ಸ್ಫಟಿಕದಂತೆ ಕಾಂತಿಯುಳ್ಳವನೂ ಶರತ್ಕಾಲದ ಚಂದ್ರನಂತೆ ಪರಿಶುದ್ಧನೂ ಆಗಿರುವ ದಿವ್ಯರೂಪವುಳ್ಳ ನಾರದನು ಅನಿರೀಕ್ಷಿತವಾಗಿ ಬಂದನು. ರಾಮನು ಅವನನ್ನು ನೋಡಿ ಕೂಡಲೆ ಮೇಲೆದ್ದು ಕೈಮುಗಿದು ಪ್ರೀತಿಯಿಂದ ಭಕ್ತಿಯುಳ್ಳವನಾಗಿ ಸೀತೆಯೊಡಗೂಡಿ ತಲೆಬಾಗಿ ನೆಲಮುಟ್ಟಿ ನಮಸ್ಕರಿಸಿದನು.

**ಉವಾಚ ನಾರದಂ ರಾಮಃ ಪ್ರೀತ್ಯಾ ಪರಮಯಾ ಯುತಃ ।**
**ಸಂಸಾರಿಣಾಂ ಮುನಿಶ್ರೇಷ್ಠ ದುರ್ಲಭಂ ತವ ದರ್ಶನಮ್ ॥ ೬ ॥**
**ಅಸ್ಮಾಕಂ ವಿಷಯಾಸ್ತಕಚೇತಸಾಂ ನಿತರಾಂ ಮುನೇ ।**

೬. ಪರಮವಾದ ಪ್ರೀತಿಯಿಂದ ಕೂಡಿದ ರಾಮನು ನಾರದನನ್ನು ಕುರಿತು 'ಎಲೈ ಮುನಿಶ್ರೇಷ್ಠನೆ, ಸಂಸಾರಿಗಳಾದವರಿಗೆ ನಿನ್ನ ದರ್ಶನವು ದುರ್ಲಭವೇ ಸರಿ ; ಅದರಲ್ಲಿಯೂ ವಿಷಯಾಸಕ್ತವಾದ ಚಿತ್ತವುಳ್ಳ ನಮ್ಮಗಳಿಗೆ ಇನ್ನೂ ಅತಿ ದುರ್ಲಭವೆಂದೇ ತಿಳಿದಿದ್ದೇನೆ.'

**ಅವಾಪ್ತಂ ಮೇ ಪೂರ್ವಜನ್ಮಕೃತಪುಣ್ಯಮಹೋದಯೈಃ ।**
**ಸಂಸಾರಿಣಾಪಿ ಹಿ ಮುನೇ ಲಭ್ಯತೇ ಸತ್ಸಮಾಗಮಃ ॥ ೭ ॥**
**ಅತಸ್ತ್ವದ್ದರ್ಶನಾದೇವ ಕೃತಾರ್ಥೋಽಸ್ಮಿ ಮುನೀಶ್ವರ ।**
**ಕಿಂ ಕಾರ್ಯಂ ತೇ ಮಯಾ ಕಾರ್ಯಂ ಬ್ರೂಹಿ ತತ್ಕರವಾಣಿ ಭೋಃ ॥ ೮ ॥**

೭-೮. 'ನನ್ನ ಪೂರ್ವಜನ್ಮದ ಪುಣ್ಯವಿಶೇಷಗಳಿಂದ ಹಾಗೂ ಸುಕೃತಗಳಿಂದ ನನಗೆ ತಮ್ಮ ದರ್ಶನವು ದೊರೆಯಿತು. ಸಂಸಾರಿಯಾಗಿರುವವನಿಗೂ ಹೀಗೆ (ಪುಣ್ಯವಿಶೇಷ ದಿಂದ) ಸತ್ಪುರುಷರ ದರ್ಶನವು ದೊರಕುತ್ತದೆ. ಆದ್ದರಿಂದ ನಿನ್ನ ದರ್ಶನಮಾತ್ರ ದಿಂದಲೇ ಎಲೈ ಮುನಿವರ್ಯನೆ, ನಾನು ಕೃತಕೃತ್ಯನಾದೆನು. ನನ್ನಿಂದ ಈಗ ಆಗಬೇಕಾದ ಕೆಲಸವಾದರೂ ಏನು ? ಹೇಳೋಣವಾಗಲಿ ; ಅದನ್ನು ಮಾಡುವೆನು' ಎಂದನು.

**ಅಥ ತಂ ನಾರದೋಽಪ್ಯಾಹ ರಾಘವಂ ಭಕ್ತವತ್ಸಲಮ್ ।**
**ಕಿಂ ಮೋಹಯಸಿ ಮಾಂ ರಾಮ ವಾಕ್ಯೈರ್ಲೋಕಾನುಸಾರಿಭಿಃ ॥ ೯ ॥**
**ಸಂಸಾರ್ಯಹಮಿತಿ ಪ್ರೋಕ್ತಂ ಸತ್ಯಮೇತತ್ ತ್ವಯಾ ವಿಭೋ ।**
**ಜಗತಾಮಾದಿಭೂತಾ ಯಾ ಸಾ ಮಾಯಾ ಗೃಹಿಣೀ ತವ ॥ ೧೦ ॥**

೯-೧೦. ಅನಂತರ ಭಕ್ತವತ್ಸಲನಾದ ಆ ರಾಮನನ್ನು ಕುರಿತು ನಾರದನೂ ಹೀಗೆಂದನು : 'ಎಲೈ ರಾಮನೆ, ಲೋಕದ ಜನರಿಗೆ ಯೋಗ್ಯವಾದ (ಪ್ರಾಕೃತವಾದ) ವಾಕ್ಯಗಳಿಂದ ನನ್ನನ್ನೇಕೆ ಮೋಹಗೊಳಿಸುತ್ತಿರುವೆ ? ಎಲೈ ವಿಭುವೆ, 'ನಾನು ಸಂಸಾರಿ' - ಎಂದು ನೀನು ಹೇಳಿದೆಯಲ್ಲವೆ ? ಅದು ನಿಜ. ಜಗತ್ತಿಗೇ ಮೂಲರೂಪಳಾಗಿರುವ ಯಾವ ಮಾಯೆಯಿದ್ದಾಳೋ ಆಕೆಯು ನಿನ್ನ ಪತ್ನಿಯು.

**ತ್ವತ್ಸಂನಿಕರ್ಷಾಜ್ಜಾಯಂತೇ ತಸ್ಯಾಂ ಬ್ರಹ್ಮಾದಯಃ ಪ್ರಜಾಃ ।**
**ತ್ವದಾಶ್ರಯಾ ಸದಾ ಭಾತಿ ಮಾಯಾ ಯಾ ತ್ರಿಗುಣಾತ್ಮಿಕಾ ॥ ೧೧ ॥**
**ಸೂತೇಽಜಸ್ರಂ ಶುಕ್ಲಕೃಷ್ಣಲೋಹಿತಾಃ ಸರ್ವದಾ ಪ್ರಜಾಃ ।**
**ಲೋಕತ್ರಯಮಹಾಗೇಹೇ ಗೃಹಸ್ಥಃ ತ್ವಮುದಾಹೃತಃ ॥ ೧೨ ॥**

೧೧-೧೨. ನಿನ್ನ ಸಾಂನಿಧ್ಯಮಾತ್ರದಿಂದ ಆಕೆಯಲ್ಲಿ ಬ್ರಹ್ಮನೇ ಮುಂತಾದ ಪ್ರಜೆಗಳು ಹುಟ್ಟುವರು. ತ್ರಿಗುಣಾತ್ಮಕವಾದ, ನಿನ್ನನ್ನು ಆಶ್ರಯಿಸಿರುವ ಯಾವ ಮಾಯೆ

ಯುಂಟೋ ಅದು ಯಾವಾಗಲೂ ಕಪ್ಪು, ಕೆಂಪು, ಬಿಳುಪುಗಳ ಬಣ್ಣದ ಪ್ರಜೆಗಳನ್ನು ಸತತವಾಗಿ ಹಡೆಯುತ್ತಿರುವದು. ಲೋಕತ್ರಯಗಳೆಂಬ ಈ ಮಹಾಗೃಹದಲ್ಲಿ ನೀನು ಗೃಹಸ್ಥನೆನಿಸಿರುವೆ.

**ತ್ವಂ ವಿಷ್ಣುರ್ಜಾನಕೀ ಲಕ್ಷ್ಮೀಃ ಶಿವಸ್ತ್ವಂ ಜಾನಕೀ ಶಿವಾ ।**
**ಬ್ರಹ್ಮಾ ತ್ವಂ ಜಾನಕೀ ವಾಣೀ ಸೂರ್ಯಸ್ತ್ವಂ ಜಾನಕೀ ಪ್ರಭಾ ॥ ೧೩ ॥**
**ಭವಾನ್ ಶಶಾಂಕಃ ಸೀತಾ ತು ರೋಹಿಣೀ ಶುಭಲಕ್ಷಣಾ ।**
**ಶಕ್ರಸ್ತ್ವಮೇವ ಪೌಲೋಮೀ ಸೀತಾ ಸ್ವಾಹಾಽನಲೋ ಭವಾನ್ ॥ ೧೪ ॥**
**ಯಮಸ್ತ್ವಂ ಕಾಲರೂಪಶ್ಚ ಸೀತಾ ಸಂಯಮನೀ ಪ್ರಭೋ ।**
**ನಿರ್ಋತಿಸ್ತ್ವಂ ಜಗನ್ನಾಥ ತಾಮಸೀ ಜಾನಕೀ ಶುಭಾ ॥ ೧೫ ॥**
**ರಾಮ ತ್ವಮೇವ ವರುಣೋ ಭಾರ್ಗವೀ ಜಾನಕೀ ಶುಭಾ ।**
**ವಾಯುಸ್ತ್ವಂ ರಾಮ ಸೀತಾ ತು ಸದಾಗತಿರಿತೀರಿತಾ ॥ ೧೬ ॥**
**ಕುಬೇರಸ್ತ್ವಂ ರಾಮ ಸೀತಾ ಸರ್ವಸಂಪತ್ ಪ್ರಕೀರ್ತಿತಾ ।**
**ರುದ್ರಾಣೀ ಜಾನಕೀ ಪ್ರೋಕ್ತಾ ರುದ್ರಸ್ತ್ವಂ ಲೋಕನಾಶಕೃತ್ ॥ ೧೭ ॥**
**ಲೋಕೇ ಸ್ತ್ರೀವಾಚಕಂ ಯಾವತ್ ತತ್ಸರ್ವಂ ಜಾನಕೀ ಶುಭಾ ।**
**ಪುನ್ನಾಮ ವಾಚಕಂ ಯಾವತ್ ತತ್ಸರ್ವಂ ತ್ವಂ ಹಿ ರಾಘವ ॥ ೧೮ ॥**
**ತಸ್ಮಾಲ್ಲೋಕತ್ರಯೇ ದೇವ ಯುವಾಭ್ಯಾಂ ನಾಸ್ತಿ ಕಿಂಚನ ।**

೧೩-೧೮. ನೀನು ವಿಷ್ಣುವೆನಿಸಿದಾಗ ಜಾನಕಿಯು ಲಕ್ಷ್ಮಿಯಾಗಿರುವಳು. ಹಾಗೆಯೇ ನೀನು ಶಿವನಾದಾಗ ಆಕೆಯು ಪಾರ್ವತಿಯು. ನೀನು ಬ್ರಹ್ಮನೆನಿಸಿದಾಗ ಆಕೆಯು ಸರಸ್ವತಿಯು. ಸೂರ್ಯನೆನಿಸಿದಾಗ ಅವಳು ಪ್ರಭೆಯು. ನೀನು ಚಂದ್ರನಾಗಿರುವಾಗ ಆಕೆಯೇ ಶುಭಲಕ್ಷಣಳಾದ ರೋಹಿಣಿಯು. ನೀನು ಇಂದ್ರನೆನಿಸಿದಾಗ ಆಕೆಯು ಶಚೀದೇವಿಯು. ಸೀತೆಯು ಸ್ವಾಹಾದೇವಿಯೆನಿಸಿದಾಗ ನೀನು ಅಗ್ನಿದೇವನು. ಮೃತ್ಯುರೂಪನಾದ ಯಮನೇ ನೀನಾದಾಗ ಆಕೆಯು ಸಂಯಮಿನಿಯು. ಎಲೈ ಜಗತ್ಪತಿಯೆ, ನೀನು ನಿರ್ಋತಿ (ಎಂಬ ಲೋಕಪಾಲ)ನೆನಿಸಿದಾಗ ಆಕೆಯು ತಾಮಸೀ ಎನಿಸುವಳು. ನೀನು ವರುಣನಾದಾಗ ಆಕೆಯು ಭಾರ್ಗವಿಯು. ನೀನು ವಾಯುವೆನಿಸಿದಾಗ ಸೀತೆಯು ಸದಾಗತಿಯೆನಿಸುವಳು. ನೀನು ಕುಬೇರನೆನಿಸಿದಾಗ ಆಕೆಯು ಸರ್ವಸಂಪತ್ ಎನಿಸುವಳು. ಸೀತೆಯು ರುದ್ರಾಣೀ ಎನಿಸಿದರೆ ನೀನು ಲೋಕನಾಶಕನಾದ ರುದ್ರನೆನಿಸುವೆ. ಹೀಗೆ ಲೋಕದಲ್ಲಿ ಸ್ತ್ರೀಲಿಂಗವಾಚಕವಾಗಿರುವ ಯಾವ ಶಬ್ದಗಳುಂಟೋ ಅವೆಲ್ಲವೂ ಶುಭಳಾದ ಜಾನಕಿಯೇ. ಪುಲ್ಲಿಂಗವಾಚಕವಾಗಿರುವ ಯಾವ ಶಬ್ದಗಳಿವೆಯೋ ಅವೆಲ್ಲವೂ ಎಲೈ ರಾಘವನೆ, ನೀನೇ ಆಗಿರುವೆ. ಆದ್ದರಿಂದ ಮೂರು ಲೋಕಗಳಲ್ಲಿಯೂ ಎಲೈ ದೇವನೆ, ನಿಮ್ಮಿಬ್ಬರ ಹೊರತಾಗಿ ಮತ್ತೇನೂ ಇರುವದೇ ಇಲ್ಲ.

**ತ್ವದಾಭಾಸೋದಿತಾಜ್ಞಾನಮವ್ಯಾಕೃತಮಿತೀರ್ಯತೇ ।**
**ತಸ್ಮಾನ್ಮಹಾನ್ ತತಃ ಸೂತ್ರಂ ಲಿಂಗಂ ಸರ್ವಾತ್ಮಕಂ ತತಃ ॥ ೧೯ ॥**
**ಅಹಂಕಾರಶ್ಚ ಬುದ್ಧಿಶ್ಚ ಪಂಚ ಪ್ರಾಣೇಂದ್ರಿಯಾಣಿ ಚ ।**
**ಲಿಂಗಮಿತ್ಯುಚ್ಯತೇ ಪ್ರಾಜ್ಞೈರ್ಜನ್ಮಮೃತ್ಯುಸುಖಾದಿಮತ್ ॥ ೨೦ ॥**
**ಸ ಏವ ಜೀವಸಂಜ್ಞಶ್ಚ ಲೋಕೇ ಭಾತಿ ಜಗನ್ಮಯಃ ।**

೧೯-೨೦. ನಿನ್ನ ಆಭಾಸದಿಂದ ಹುಟ್ಟಿದ ಅಜ್ಞಾನವು ಅವ್ಯಾಕೃತವೆನಿಸುವದು. ಅದರಿಂದ ಮಹತ್ತತ್ತ್ವವೂ ಅದರಿಂದ ಸರ್ವಾತ್ಮಕವಾದ ಲಿಂಗ (ಸೂಕ್ಷ್ಮವಾದ) ಅಹಂಕಾರವೂ ಬುದ್ಧಿಯೂ ಐದು ಪ್ರಾಣಗಳೂ ಇಂದ್ರಿಯಗಳೂ (ಹೊರಬರುವವು). ಈ ಲಿಂಗಶರೀರವೇ (ಚಿದಾಭಾಸದಿಂದ ಕೂಡಿದ್ದಾಗಿ) ಬಲ್ಲವರಿಂದ ಹುಟ್ಟು, ಸಾವು, ಸುಖಾದಿಗಳುಳ್ಳ ಜೀವನೆಂಬ ಹೆಸರಿನಿಂದ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುವ ತತ್ತ್ವವೆಂದು ಬಲ್ಲವರಿಂದ ಕರೆಯಲ್ಪಡುವದು.

**ಅವಾಚ್ಯಾನಾದ್ಯವಿದ್ಯೈವ ಕಾರಣೋಪಾಧಿರುಚ್ಯತೇ ।**
**ಸ್ಥೂಲಂ ಸೂಕ್ಷ್ಮಂ ಕಾರಣಾಖ್ಯಮುಪಾಧಿತ್ರಿತಯಂ ಚಿತೇಃ ॥ ೨೧ ॥**
**ಏತೈರ್ವಿಶಿಷ್ಟೋ ಜೀವಃ ಸ್ಯಾದ್ವಿಯುಕ್ತಃ ಪರಮೇಶ್ವರಃ ।**

೨೧. ಸತ್ತೆಂದಾಗಲಿ ಅಸತ್ತೆಂದಾಗಲಿ ಹೇಳಲು ಬಾರದೆ ಇರುವಂಥ ಅನಾದಿಯಾದ ಅವಿದ್ಯೆಯನ್ನು ಚಿತ್ಸ್ವರೂಪಕ್ಕೆ ಕಾರಣೋಪಾಧಿಯೆಂದು ಕರೆಯುವರು. ಅದು ಸ್ಥೂಲಸೂಕ್ಷ್ಮಗಳೆಂಬ ವಿಕಾರವನ್ನು ಹೊಂದಿ (ಒಟ್ಟಿನಲ್ಲಿ) ಚಿತ್‌ತತ್ತ್ವಕ್ಕೆ ಮೂರು ಉಪಾಧಿಗಳಾಗಿ ಪರಿಗಣಿಸಲ್ಪಟ್ಟಿರುವದು. ಈ ಉಪಾಧಿಗಳಿಂದ ಕೂಡಿದವನೇ ಜೀವನು. ಬಿಡುಗಡೆಹೊಂದಿದರೆ ಅವನೇ ಪರಮೇಶ್ವರನು.

**ಜಾಗ್ರತ್ ಸ್ವಪ್ನಸುಷುಪ್ತ್ಯಾಖ್ಯಾ ಸಂಸೃತಿರ್ಯಾ ಪ್ರವರ್ತತೇ ।**
**ತಸ್ಯಾ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರಸ್ತ್ವಂ ರಘೂತ್ತಮ ॥ ೨೨ ॥**
**ತ್ವತ್ತ ಏವ ಜಗಜ್ಜಾತಂ ತ್ವಯಿ ಸರ್ವಂ ಪ್ರತಿಷ್ಠಿತಮ್ ।**
**ತ್ವಯ್ಯೇವ ಲೀಯತೇ ಕೃತ್ಸ್ನಂ ತಸ್ಮಾತ್ ತ್ವಂ ಸರ್ವಕಾರಣಮ್ ॥ ೨೩ ॥**
**ರಜ್ಜಾವಹಿಮಿವಾತ್ಮಾನಂ ಜೀವಂ ಜ್ಞಾತ್ವಾ ಭಯಂ ಭವೇತ್ ।**
**ಪರಾತ್ಮಾಹಮಿತಿ ಜ್ಞಾತ್ವಾ ಭಯದುಃಖೈರ್ವಿಮುಚ್ಯತೇ ॥ ೨೪ ॥**

೨೨-೨೪. ಎಲೈ ರಘುಶ್ರೇಷ್ಠನೆ, ಎಚ್ಚರ, ಕನಸು, ನಿದ್ರೆ - ಗಳೆಂಬ ಅವಸ್ಥೆಗಳಲ್ಲಿ ಯಾವ ಸಂಚಾರವು (ಈ ಜೀವನಿಗೆ) ಉಂಟೋ ಅದಕ್ಕಿಂತ ವಿಲಕ್ಷಣನಾದ ಸಾಕ್ಷಿಯೇ ನೀನಾಗಿರುವೆ. ಜಗತ್ತೆಲ್ಲವೂ ನಿನ್ನಿಂದಲೇ ಹುಟ್ಟಿರುವದು. ಎಲ್ಲವೂ ನಿನ್ನಲ್ಲಿಯೇ ಇದ್ದುಕೊಂಡಿರುವದು. ಸಮಸ್ತವೂ ನಿನ್ನಲ್ಲಿಯೇ ಒಂದಾಗುವದು. ಆದ್ದರಿಂದ

ನೀನು ಎಲ್ಲಕ್ಕೂ ಕಾರಣನೆನಿಸಿರುವೆ. ಹಗ್ಗದಲ್ಲಿ ಹಾವನ್ನು ಕಂಡಂತೆ ತನ್ನನ್ನು ಜೀವನೆಂದು (ತಪ್ಪಾಗಿ) ತಿಳಿದಾಗ ಭಯವುಂಟಾಗುವದು. ತಾನೇ ಪರಮಾತ್ಮನು ಎಂದುಕೊಂಡಾಗ ಭಯದುಃಖಾದಿಗಳಿಂದ ಬಿಡುಗಡೆಯನ್ನು ಹೊಂದುವನು.

**ಚಿನ್ಮಾತ್ರಜ್ಯೋತಿಷಾ ಸರ್ವಾಃ ಸರ್ವದೇಹೇಷು ಬುದ್ಧಯಃ ।**
**ತ್ವಯಾ ಯಸ್ಮಾತ್ ಪ್ರಕಾಶ್ಯಂತೇ ಸರ್ವಸ್ಯಾತ್ಮಾ ತತೋ ಭವಾನ್ ॥ ೨೫ ॥**
**ಅಜ್ಞಾನಾನ್ನ್ಯಸ್ಯತೇ ಸರ್ವಂ ತ್ವಯಿ ರಜ್ಜೌ ಭುಜಂಗವತ್ ।**
**ತ್ವಜ್ಜ್ಞಾನಾಲ್ಲೀಯತೇ ಸರ್ವಂ ತಸ್ಮಾಜ್ಜ್ಞಾನಂ ಸದಾಽಭ್ಯಸೇತ್ ॥ ೨೬ ॥**
**ತ್ವತ್ಪಾದಭಕ್ತಿಯುಕ್ತಾನಾಂ ವಿಜ್ಞಾನಂ ಭವತಿ ಕ್ರಮಾತ್ ।**
**ತಸ್ಮಾತ್ ತ್ವದ್ಭಕ್ತಿಯುಕ್ತಾ ಯೇ ಮುಕ್ತಿಭಾಜಸ್ತ ಏವ ಹಿ ॥ ೨೭ ॥**

೨೫-೨೭ ಚಿತ್ತೊಂದೇ ಆಗಿರುವ ನಿನ್ನ ಬೆಳಕಿನಿಂದ ಎಲ್ಲಾ ದೇಹಗಳಲ್ಲಿಯೂ ಇದ್ದುಕೊಂಡಿರುವ ಬುದ್ಧಿವೃತ್ತಿಗಳೆಲ್ಲವೂ ನಿನ್ನಿಂದ ಬೆಳಗಲ್ಪಡುತ್ತಿವೆಯಾದ್ದರಿಂದ ನೀನು ಎಲ್ಲರ ಆತ್ಮನಾಗಿರುವೆ. ಹಗ್ಗದಲ್ಲಿ ಹಾವನ್ನು (ಆರೋಪಿಸಿದಂತೆ) ಅಜ್ಞಾನದಿಂದ ಎಲ್ಲವೂ ನಿನ್ನಲ್ಲಿ ಅಧ್ಯಾಸಮಾಡಲ್ಪಡುವವು. ಆದರೆ ನಿನ್ನ ಸ್ವರೂಪವನ್ನು ಅರಿತು ಕೊಳ್ಳುವದರಿಂದ ಎಲ್ಲಾ (ಸಂಸಾರದುಃಖಗಳೂ) ನಾಶವಾಗಿಬಿಡುವವು. ಆದ್ದರಿಂದ ಸಾಧಕನು ಯಾವಾಗಲೂ ಜ್ಞಾನಾನುಸಂಧಾನವನ್ನು ಮಾಡುತ್ತಿರಬೇಕು. ನಿನ್ನ ಚರಣಾರ ವಿಂದಗಳಲ್ಲಿ ಭಕ್ತಿಯಿಂದ ಕೂಡಿದವರಿಗೆ ಕ್ರಮವಾಗಿ ವಿಜ್ಞಾನವುಂಟಾಗುವದು. ಆದ್ದರಿಂದ ಯಾರು ನಿನ್ನಲ್ಲಿ ಭಕ್ತಿಯುಳ್ಳವರಾಗಿರುವರೋ ಅವರೇ ಮುಕ್ತಿಗೆ ಯೋಗ್ಯ ರಾಗಿರುವರು.

**ಅಹಂ ತ್ವದ್ಭಕ್ತಭಕ್ತಾನಾಂ ತದ್ಭಕ್ತಾನಾಂ ಚ ಕಿಂಕರಃ ।**
**ಅತೋ ಮಾಮನುಗೃಹ್ಣೀಷ್ವ ಮೋಹಯಸ್ವ ನ ಮಾಂ ಪ್ರಭೋ ॥ ೨೮ ॥**
**ತ್ವನ್ನಾಭಿಕಮಲೋತ್ಪನ್ನೋ ಬ್ರಹ್ಮಾ ಮೇ ಜನಕಃ ಪ್ರಭೋ ।**
**ಅತಸ್ತವಾಹಂ ಪೌತ್ರೋಽಸ್ಮಿ ಭಕ್ತಂ ಮಾಂ ಪಾಹಿ ರಾಘವ ॥ ೨೯ ॥**

೨೮-೨೯-. ನಾನಾದರೊ, ನಿನ್ನ ಭಕ್ತರ ಸೇವಕರ ಸೇವಕನು. ಆದ್ದರಿಂದ ನನ್ನನ್ನು ಅನುಗ್ರಹಿಸು ; ನನ್ನನ್ನು ಮೋಹಗೊಳಿಸಬೇಡ. ನನ್ನ ತಂದೆಯಾದ ಬ್ರಹ್ಮನು ಎಲೈ ಪ್ರಭುವೆ, ನಿನ್ನ ನಾಭಿಕಮಲದಿಂದ ಹುಟ್ಟಿರುವನು. ಆದ್ದರಿಂದ ನಾನು ನಿನ್ನ ಮೊಮ್ಮಗನಾಗಿರುವೆನು. ಭಕ್ತನಾದ ನನ್ನನ್ನು ಎಲೈ ರಘುವಂಶೋತ್ಪನ್ನನೆ, ಕಾಪಾಡು.

**ಇತ್ಯುಕ್ತ್ವಾ ಬಹುಶೋ ನತ್ವಾ ಸ್ವಾನಂದಾಶ್ರುಪರಿಪ್ಲುತಃ ।**
**ಉವಾಚ ವಚನಂ ರಾಮ ಬ್ರಹ್ಮಣಾ ನೋದಿತೋಽಸ್ಮ್ಯಹಮ್ ॥ ೩೦ ॥**

**ರಾವಣಸ್ಯ ವಧಾರ್ಥಾಯ ಜಾತೋಽಸಿ ರಘುಸತ್ತಮ ।**
**ಇದಾನೀಂ ರಾಜ್ಯರಕ್ಷಾರ್ಥಂ ಪಿತಾ ತ್ವಾಮಭಿಷೇಕ್ಷ್ಯತಿ ॥ ೩೧ ॥**
**ಯದಿ ರಾಜ್ಯಾಭಿಸಂಸಕ್ತೋ ರಾವಣಂ ನ ಹನಿಷ್ಯಸಿ ।**
**ಪ್ರತಿಜ್ಞಾ ತೇ ಕೃತಾ ರಾಮ ಭೂಭಾರಹರಣಾಯ ವೈ ॥ ೩೨ ॥**
**ತತ್ಸತ್ಯಂ ಕುರು ರಾಜೇಂದ್ರ ಸತ್ಯಸಂಧಸ್ತ್ವಮೇವ ಹಿ ।**

೩೦-೩೨. ಹೀಗೆಂದು ಹೇಳಿ ಬಹಳವಾಗಿ ನಮಸ್ಕರಿಸಿ ಆನಂದಬಾಷ್ಪದಿಂದ ಕೂಡಿದವನಾಗಿ ನಾರದನು ಹೀಗೆಂದನು : ''ಎಲೈ ರಾಮನೆ, ನಾನು ಬ್ರಹ್ಮನಿಂದ ಪ್ರೇರಿತನಾಗಿ ಬಂದಿರುವೆನು. ಎಲೈ ರಘುಶ್ರೇಷ್ಠನೆ, ರಾವಣನ ವಧೆಗಾಗಿ ನೀನು ಹುಟ್ಟಿರುವೆ. ಈಗ ರಾಜ್ಯದ ರಕ್ಷಣೆಗಾಗಿ ತಂದೆಯು ನಿನ್ನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಲಿದ್ದಾನೆ. ಆದರೆ ನೀನು ರಾಜ್ಯದಲ್ಲಿ ಆಸಕ್ತಿಯುಳ್ಳವನಾಗಿ ರಾವಣನನ್ನು ಕೊಲ್ಲದೆ (ಇದ್ದರೆ ಪ್ರತಿಜ್ಞೆಯು ನೆರವೇರಿದಂತಾಗುವದಿಲ್ಲ.) ಭೂಭಾರವನ್ನು ಪರಿಹರಿಸುವದಕ್ಕಾಗಿ ನೀನು ಪ್ರತಿಜ್ಞೆಯನ್ನು ಕೈಗೊಂಡಿರುವೆ. ಅದನ್ನು ಸತ್ಯವಾಗಿ ಮಾಡು. ಸತ್ಯಸಂಧನೆಂದರೆ ನೀನೇ ಅಲ್ಲವೆ?

**ಶ್ರುತ್ವೈತದ್ಗದಿತಂ ರಾಮೋ ನಾರದಂ ಪ್ರಾಹ ಸಸ್ಮಿತಮ್ ।**
**ಶೃಣು ನಾರದ ಮೇ ಕಿಂಚಿದ್ ವಿದ್ಯತೇಽವಿದಿತಂ ಕ್ವಚಿತ್ ॥ ೩೩ ॥**
**ಪ್ರತಿಜ್ಞಾತಂ ಚ ಯತ್ಪೂರ್ವಂ ಕರಿಷ್ಯೇ ತನ್ನ ಸಂಶಯಃ ।**
**ಕಿಂ ತು ಲೋಕಾನುರೋಧೇನ ತತ್ತತ್ಪ್ರಾರಬ್ಧಸಂಕ್ಷಯಾತ್ ॥ ೩೪ ॥**
**ಹರಿಷ್ಯೇ ಸರ್ವಭೂಭಾರಂ ಕ್ರಮೇಣಾಸುರಮಂಡಲಮ್ ।**

೩೩-೩೪. ಹೀಗೆ ಹೇಳಿದ್ದನ್ನು ಕೇಳಿದ ಶ್ರೀರಾಮನು ಮುಗುಳುನಗೆಯಿಂದ ಕೂಡಿ ನಾರದನನ್ನು ಕುರಿತು ಹೀಗೆಂದನು : ಎಲೈ ನಾರದನೆ, ಕೇಳು. ನನಗೆ ತಿಳಿಯದೆ ಇರುವದು ಏನೂ ಇರುವದಿಲ್ಲ. ಹಿಂದೆ ನಾನು ಏನು ಪ್ರತಿಜ್ಞೆಯನ್ನು ಕೈಗೊಂಡಿರುವೆನೋ ಅದನ್ನು ನಡೆಯಿಸುವೆನು. ಈ ವಿಷಯದಲ್ಲಿ ಸಂಶಯವಿಲ್ಲ. ಆದರೆ ಲೋಕದ ಜನರನ್ನು ಅನುಸರಿಸಿ (ವ್ಯವಹರಿಸುತ್ತಾ) ಯಾರ ಯಾರ ಪ್ರಾರಬ್ಧಕರ್ಮಗಳು ಪೂರೈಸುವವೋ ಅವರವರನ್ನು ಸಂಹಾರಮಾಡುವೆನು. ಹೀಗೆ ಕ್ರಮವಾಗಿ ರಾಕ್ಷಸರ ಸಮೂಹವನ್ನೆಲ್ಲ ನಾಶಮಾಡಿ ಭೂಭಾರವನ್ನು ಪರಿಹರಿಸುವೆನು.

**ರಾವಣಸ್ಯ ವಿನಾಶಾರ್ಥಂ ಶ್ವೋ ಗಂತಾ ದಂಡಕಾವನಮ್ ।**
**ಚತುರ್ದಶ ಸಮಾಸ್ತತ್ರ ಹ್ಯುಷಿತ್ವಾ ಮುನಿವೇಷಧೃಕ್ ॥ ೩೫ ॥**
**ಸೀತಾಮಿಷೇಣ ತಂ ದುಷ್ಟಂ ಸಕುಲಂ ನಾಶಯಾಮ್ಯಹಮ್ ।**
**ಏವಂ ರಾಮೇ ಪ್ರತಿಜ್ಞಾತೇ ನಾರದಃ ಪ್ರಮುಮೋದ ಹ ॥ ೩೬ ॥**

**ಪ್ರದಕ್ಷಿಣತ್ರಯಂ ಕೃತ್ವಾ ದಂಡವತ್ ಪ್ರಣಿಪತ್ಯ ತಮ್ ।**
**ಅನುಜ್ಞಾತಶ್ಚ ರಾಮೇಣ ಯಯೌ ದೇವಗತಿಂ ಮುನಿಃ ॥ ೩೭ ॥**

೩೫-೩೭. ರಾವಣನ ವಿನಾಶಕ್ಕಾಗಿ ನಾಳೆಯದಿನ ದಂಡಕಾವನಕ್ಕೆ ಹೋಗುವೆನು. ಹದಿನಾಲ್ಕು ವರ್ಷಗಳ ಕಾಲ ಅಲ್ಲಿ ಋಷಿಗಳ ವೇಷವನ್ನು ಧರಿಸಿ ಉಳಿದುಕೊಂಡು ಸೀತೆಯ ನೆಪದಿಂದ ಆ ದುಷ್ಟನನ್ನು ಕುಲಬಾಂಧವರ ಸಮೇತವಾಗಿ ನಾಶಮಾಡುವೆನು. ಹೀಗೆಂದು ರಾಮನು ಪ್ರತಿಜ್ಞೆಮಾಡಲಾಗಿ ನಾರದನು ಸಂತೋಷಗೊಂಡನು. ಮೂರು ಪ್ರದಕ್ಷಿಣೆಗಳನ್ನು ಮಾಡಿ ದಂಡಪ್ರಣಾಮವನ್ನು ಮಾಡಿ ರಾಮನಿಂದ ಅಪ್ಪಣೆಯನ್ನು ಪಡೆದು ಮುನಿಯು ಆಕಾಶಮಾರ್ಗದಿಂದ ನಡೆದನು.

**ಸಂವಾದಂ ಪಠತಿ ಶೃಣೋತಿ ಸಂಸ್ಮರೇದ್ವಾ**
**ಯೋ ನಿತ್ಯಂ ಮುನಿವರರಾಮಯೋಃ ಸ ಭಕ್ತ್ಯಾ॥**
**ಸಂಪ್ರಾಪ್ನೋತ್ಯಮರಸುದುರ್ಲಭಂ ವಿಮೋಕ್ಷಂ**
**ಕೈವಲ್ಯಂ ವಿರತಿಪುರಸ್ಸರಂ ಕ್ರಮೇಣ ॥ ೩೮ ॥**

೩೮. ಯಾವನು ಪ್ರತಿದಿನವೂ ಭಕ್ತಿಯಿಂದ ನಾರದ-ರಾಮರ ಈ ಸಂವಾದವನ್ನು ಓದುತ್ತಾನೋ, ಕೇಳುತ್ತಾನೋ, ಅಥವಾ ನೆನೆಯುವನೋ, ಅವನು ವೈರಾಗ್ಯದಿಂದ ಕೂಡಿದವನಾಗಿ (ಜೀವನ್ಮುಕ್ತಿಯನ್ನೂ) ಮುಂದೆ ಕ್ರಮವಾಗಿ ದೇವತೆಗಳಿಗೂ ದುರ್ಲಭವಾದ ವಿದೇಹಮುಕ್ತಿಯನ್ನೂ ಹೊಂದುವನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಪ್ರಥಮಃ ಸರ್ಗಃ**

ಃಃಃಃಃಃಃಃಃ

## ಎರಡನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಅಥ ರಾಜಾ ದಶರಥಃ ಕದಾಚಿತ್ ರಹಸಿ ಸ್ಥಿತಃ ।**
**ವಸಿಷ್ಠಂ ಸ್ವಕುಲಾಚಾರ್ಯಮಾಹೂಯೇದಮಭಾಷತ ॥ ೧ ॥**
**ಭಗವನ್ ರಾಮಮಖಿಲಾಃ ಪ್ರಶಂಸಂತಿ ಮುಹುರ್ಮುಹುಃ ।**
**ಪೌರಾಶ್ಚ ನಿಗಮಾ ವೃದ್ಧಾ ಮಂತ್ರಿಣಶ್ಚ ವಿಶೇಷತಃ ॥ ೨ ॥**

**ತತಃ ಸರ್ವಗುಣೋಪೇತಂ ರಾಮಂ ರಾಜೀವಲೋಚನಮ್ ।**
**ಜ್ಯೇಷ್ಠಂ ರಾಜ್ಯೇಽಭಿಷೇಕ್ಷ್ಯಾಮಿ ವೃದ್ಧೋಽಹಂ ಮುನಿಪುಂಗವ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಅನಂತರ ದಶರಥಮಹಾರಾಜನು ಒಮ್ಮೆ ಏಕಾಂತದಲ್ಲಿರುವಾಗ ತನ್ನ ಕುಲಗುರುಗಳಾದ ವಸಿಷ್ಠರನ್ನು ಬರಮಾಡಿಕೊಂಡು ಹೀಗೆಂದನು : 'ಪೂಜ್ಯರೆ, ಪಟ್ಟಣಿಗರೂ ವೇದವಿದರಾದ ವೃದ್ಧರೂ ವಿಶೇಷವಾಗಿ ಮಂತ್ರಿಗಳೂ ಮತ್ತೆ ಮತ್ತೆ ಶ್ರೀರಾಮನನ್ನು ಹೊಗಳುತ್ತಿದಾರೆ. ಆದ್ದರಿಂದ ಸಕಲಗುಣ ಸಂಪನ್ನನೂ ಹಿರಿಯ (ಮಗನೂ)ಆದ, ಕಮಲದಂತೆ ಕಣ್ಣುಗಳುಳ್ಳ ರಾಮನನ್ನು ರಾಜ್ಯದಲ್ಲಿ ಅಭಿಷೇಕಮಾಡಬೇಕೆಂದಿರುವೆನು. ಎಲೈ ಮುನಿಶ್ರೇಷ್ಠನೆ, ಹೇಗೂ ನಾನು ಮುದುಕನಾಗಿರುತ್ತೇನೆ.

**ಭರತೋ ಮಾತುಲಂ ದ್ರಷ್ಟುಂ ಗತಃ ಶತ್ರುಘ್ನಸಂಯುತಃ ।**
**ಅಭಿಷೇಕ್ಷ್ಯೇ ಶ್ವ ಏವಾಶು ಭವಾಂಸ್ತಚ್ಚಾನುಮೋದತಾಮ್ ॥ ೪ ॥**
**ಸಂಭಾರಾಃ ಸಂಭ್ರಿಯಂತಾಂ ಚ ಗಚ್ಛ ಮಂತ್ರಯ ರಾಘವಮ್ ।**
**ಉಚ್ಛ್ರೀಯಂತಾಂ ಪತಾಕಾಶ್ಚ ನಾನಾವರ್ಣಾಃ ಸಮನ್ತತಃ ॥ ೫ ॥**
**ತೋರಣಾನಿ ವಿಚಿತ್ರಾಣಿ ಸ್ವರ್ಣಮುಕ್ತಾಮಯಾನಿ ವೈ ।**

೪-೫. ಭರತನು ಸೋದರಮಾವನನ್ನು ಭೇಟಿಮಾಡುವದಕ್ಕಾಗಿ ಶತ್ರುಘ್ನನೊಡನೆ ಹೊರಟುಹೋಗಿರುತ್ತಾನೆ. ಇರಲಿ ; ನಾಳೆಯೇ ಬೇಗನೆ (ರಾಮನಿಗೆ) ಪಟ್ಟಾಭಿಷೇಕಮಾಡಲಿದ್ದೇನೆ. ತಾವೂ ಒಪ್ಪೋಣವಾಗಬೇಕು. (ಅಭಿಷೇಕ) ಸಂಭಾರಗಳನ್ನೆಲ್ಲ ಕೂಡಿಸಿರಿ. ತಾವು ರಾಮನೊಡನೆ ಸಮಾಲೋಚಿಸಲು ಹೋಗಿರಿ. ನಾನಾ ಬಣ್ಣದ ಬಾವುಟಗಳನ್ನೂ ವಿಚಿತ್ರವಾದ ಚಿನ್ನದ ಹಾಗೂ ಮುತ್ತಿನ ತೋರಣಗಳನ್ನೂ ಸುತ್ತಲೂ ಎತ್ತಿಕಟ್ಟಲಿ.

**ಆಹೂಯ ಮಂತ್ರಿಣಂ ರಾಜಾ ಸುಮಂತ್ರಂ ಮಂತ್ರಿಸತ್ತಮಮ್ ।**
**ಆಜ್ಞಾಪಯತಿ ಯದ್ಯತ್ ತ್ವಾಂ ಮುನಿಸ್ತತ್ತತ್ಸಮಾನಯ ॥ ೬ ॥**
**ಯೌವರಾಜ್ಯೇಽಭಿಷೇಕ್ಷ್ಯಾಮಿ ಶ್ವೋಭೂತೇ ರಘುನಂದನಮ್ ।**
**ತಥೇತಿ ಹರ್ಷಾತ್ ಸ ಮುನಿಂ ಕಿಂ ಕರೋಮಿತ್ಯಭಾಷತ ॥ ೭ ॥**

೬-೭. ದಶರಥರಾಜನು ಮಂತ್ರಿಶ್ರೇಷ್ಠನಾದ ಸುಮಂತ್ರನನ್ನು ಕರೆದು ''ನಿನ್ನನ್ನು ಕುರಿತು (ವಸಿಷ್ಠ) ಮುನಿಯು ಏನೇನು ಅಪ್ಪಣೆಮಾಡುತ್ತಾನೋ ಅವೆಲ್ಲವನ್ನೂ ತಂದಿಡು. ನಾಳೆಯ ದಿನವೇ ರಘುನಂದನನಾದ (ರಾಮನನ್ನು) ಯೌವರಾಜ್ಯದಲ್ಲಿರಿಸಿ ಅಭಿಷೇಕಮಾಡಲಿದ್ದೇನೆ'' ಎಂದನು. ಹಾಗೆಯೇ ಆಗಲಿ ! ಎಂದು ಸಂತೋಷದಿಂದ ಅವನು ಋಷಿಯನ್ನು ಕುರಿತು 'ಏನು ಮಾಡಲಿ' ? ಎಂದನು.

ತಮುವಾಚ ಮಹಾತೇಜಾ ವಸಿಷ್ಠೋ ಜ್ಞಾನಿನಾಂ ವರಃ ।
ಶ್ವಃ ಪ್ರಭಾತೇ ಮಧ್ಯಕಕ್ಷೇ ಕನ್ಯಕಾಃ ಸ್ವರ್ಣಭೂಷಿತಾಃ ॥ ೮ ॥
ತಿಷ್ಠಂತು ಷೋಡಶ ಗಜಃ ಸ್ವರ್ಣರತ್ನಾದಿಭೂಷಿತಃ ।
ಚತುರ್ದಂತಃ ಸಮಾಯಾತು ಐರಾವತಕುಲೋದ್ಭವಃ ॥ ೯ ॥
ನಾನಾತೀರ್ಥೋದಕೈಃ ಪೂರ್ಣಾಃ ಸ್ವರ್ಣಕುಂಭಾಃ ಸಹಸ್ರಶಃ ।
ಸ್ಥಾಪ್ಯತಾಂ ನವವೈಯಾಘ್ರಚರ್ಮಾಣಿ ತ್ರೀಣಿ ಚಾನಯ ॥ ೧೦ ॥
ಶ್ವೇತಚ್ಛತ್ರಂ ರತ್ನದಂಡಂ ಮುಕ್ತಾಮಣಿವಿರಾಜಿತಮ್ ।
ದಿವ್ಯಮಾಲ್ಯಾನಿ ವಸ್ತ್ರಾಣಿ ದಿವ್ಯಾನ್ಯಾಭರಣಾನಿ ಚ ॥ ೧೧ ॥
ಮುನಯಃ ಸತ್ಕೃತಾಸ್ತತ್ರ ತಿಷ್ಠಂತು ಕುಶಪಾಣಯಃ ॥

೮-೧೧. ಮಹಾತೇಜಸ್ವಿಯಾದ ಹಾಗೂ ಜ್ಞಾನಿಗಳಲ್ಲಿ ಶ್ರೇಷ್ಠನಾದ ವಸಿಷ್ಠನು ಅವನನ್ನು ಕುರಿತು ಹೀಗೆಂದನು : ''ನಾಳೆಯದಿನ ಪ್ರಾತಃಕಾಲಕ್ಕೆ ಸರಿಯಾಗಿ ನಡುವಿನ ಸಭಾಂಗಣದಲ್ಲಿ ಸುವರ್ಣಭೂಷಿತರಾದ ಹದಿನಾರು ಜನ ಕನ್ನಿಕೆಯರು (ಎಂಟು ವರ್ಷದೊಳಗಿನ ಹುಡುಗಿಯರು) ಸಿದ್ಧರಾಗಿರಲಿ. ಚಿನ್ನವೇ ಮುಂತಾದ ಅನರ್ಘ್ಯವಸ್ತುಗಳಿಂದ ಅಲಂಕೃತವಾದ ಐರಾವತಕುಲದಲ್ಲಿ ಹುಟ್ಟಿದ ನಾಲ್ಕುದಂತಗಳ ಆನೆಯು ಬಂದು ನಿಂತಿರಲಿ. ಅನೇಕ ತೀರ್ಥವಿಶೇಷಗಳಿಂದ ತುಂಬಿದ ಸಾವಿರಾರು ಸಂಖ್ಯೆಯ ಚಿನ್ನದ ಕಲಶಗಳು ಸಿದ್ಧವಾಗಲಿ. ಮೂರು ಹೊಸದಾದ (ಉಪಯೋಗಿಸದೆ ಇರುವಂಥ) ಹುಲಿಯ ಚರ್ಮಗಳನ್ನು ತಂದು ಇಡುವವನಾಗು. ಬಿಳಿಯ ವರ್ಣದ ಛತ್ರಿ, ರತ್ನಗಳನ್ನು ಮೆಟ್ಟಿರುವ ಹಾಗೂ ಮುತ್ತಿನ ಮಣಿಗಳಿಂದ ಕೂಡಿದ ರಾಜದಂಡ, ದಿವ್ಯವಾದ ಹಾರಗಳು, ವಸ್ತ್ರಗಳು, ಬೆಲೆಬಾಳುವ ಆಭರಣಗಳು - ಸಿದ್ಧವಾಗಿರಲಿ. ದರ್ಭೆಗಳನ್ನು ಧರಿಸಿದ ಪೂಜಿತರಾದ ಮುನಿಗಳೂ ಸನ್ನಿಹಿತರಾಗಿರಲಿ.''

ನರ್ತಕ್ಯೋ ವಾರಮುಖ್ಯಾಶ್ಚ ಗಾಯಕಾ ವೇಣುಕಾಸ್ತಥಾ ।
ನಾನಾವಾದಿತ್ರಕುಶಲಾ ವಾದಯಂತು ನೃಪಾಂಗಣೇ ॥ ೧೨ ॥
ಹಸ್ತ್ಯಶ್ವರಥಪಾದಾತಾ ಬಹಿಸ್ತಿಷ್ಠಂತು ಸಾಯುಧಾಃ ।
ನಗರೇ ಯಾನಿ ತಿಷ್ಠಂತಿ ದೇವತಾಯತನಾನಿ ಚ ॥ ೧೩ ॥
ತೇಷು ಪ್ರವರ್ತತಾಂ ಪೂಜಾ ನಾನಾಬಲಿಭಿರಾವೃತಾ ।
ರಾಜಾನಃ ಶೀಘ್ರಮಾಯಾಂತು ನಾನೋಪಾಯನಪಾಣಯಃ ॥ ೧೪ ॥
ಇತ್ಯಾದಿಶ್ಯ ಮುನಿಃ ಶ್ರೀಮಾನ್ ಸುಮಂತ್ರಂ ನೃಪಮಂತ್ರಿಣಮ್ ।
ಸ್ವಯಂ ಜಗಾಮ ಭವನಂ ರಾಘವಸ್ಯಾತಿಶೋಭನಮ್ ॥ ೧೫ ॥

೧೨-೧೫. "ನರ್ತಕಿಯರು, ವೇಶ್ಯಾಸ್ತ್ರೀಯರು, ಸಂಗೀತಗಾರರು, ಕೊಳಲೂದುವವರು, ನಾನಾವಿಧವಾದ ಧ್ವನಿವಾದ್ಯಗಳನ್ನು ಬಾರಿಸುವ ಜಾಣರು, ಇವರುಗಳು ಕೂಡಿ ರಾಜಸಭಾಭವನದಲ್ಲಿ ನೃತ್ಯವಾದ್ಯಗಳನ್ನು ನಡೆಯಿಸುತ್ತಿರಲಿ ; ಹೊರಭಾಗದಲ್ಲಿ ಶಸ್ತ್ರಧಾರಿಗಳಾದ ಪದಾತಿಗಳು, ಆನೆ, ಕುದುರೆ, ರಥಗಳಲ್ಲಿ ಮಂಡಿಸಿರುವ ರಥಿಕರು, ಮುಂತಾದ ಚತುರಂಗಸೈನ್ಯದವರೂ ಸಜ್ಜಾಗಿರಲಿ. ಈ ನಗರದಲ್ಲಿ ಯಾವ ಯಾವ ದೇವಾಲಯಗಳು ಇರುವವೋ ಅವುಗಳಲ್ಲೆಲ್ಲ ಅನೇಕ ರೀತಿಯ ವಿಶೇಷಪೂಜಾ ವಿಧಾನಗಳಿಂದ ಅರ್ಚನೆಗಳು ನೆರವೇರಲಿ ; ಬಹುವಿಧವಾದ ಕಪ್ಪಕಾಣಿಕೆಗಳನ್ನು ಹೊತ್ತ ಸಾಮಂತರಾಜರುಗಳು ಜಾಗ್ರತೆಯಾಗಿ ಹಾಜರಾಗಲಿ." ಹೀಗೆಂದ ಶ್ರೀಮಂತನಾದ (ವಸಿಷ್ಠ) ಮುನಿಯು ರಾಜನ ಮಂತ್ರಿಯಾದ ಸುಮಂತ್ರನಿಗೆ ಅಪ್ಪಣೆಮಾಡಿ ತಾನು ಶ್ರೀರಾಮನ ಅತ್ಯಂತಮಂಗಳಕರವಾದ ಮನೆಯನ್ನು ಪ್ರವೇಶಿಸಿದನು.

**ರಥಮಾರುಹ್ಯ ಭಗವಾನ್ ವಸಿಷ್ಠೋ ಮುನಿಸತ್ತಮಃ ।**
**ತ್ರೀಣಿ ಕಕ್ಷ್ಯಾಣ್ಯತಿಕ್ರಮ್ಯ ರಥಾತ್ ಕ್ಷಿತಿಮವಾತರತ್ ॥ ೧೬ ॥**
**ಅಂತಃ ಪ್ರವಿಶ್ಯ ಭವನಂ ಸ್ವಾಚಾರ್ಯತ್ವಾದವಾರಿತಃ ।**

೧೬. ಪೂಜ್ಯನಾದ ಮುನಿಶ್ರೇಷ್ಠನಾದ ವಸಿಷ್ಠನು (ರಾಮನ) ಗುರುವಾದ್ದರಿಂದ ಯಾರಿಂದಲೂ ಅಡ್ಡಿಮಾಡಲ್ಪಡದೆ ರಥದಲ್ಲಿಯೇ ಕುಳಿತು (ಅರಮನೆಯ ಒಳಭಾಗದ) ಮೂರು ಅಂಗಳಗಳನ್ನೂ ದಾಟಿ ರಥದಿಂದ ಕೆಳಕ್ಕೆ ಇಳಿದು ಮನೆಯ ಒಳಭಾಗವನ್ನು ಪ್ರವೇಶಿಸಿದನು.

**ಗುರುಮಾಗತಮಾಜ್ಞಾಯ ರಾಮಸ್ತೂರ್ಣಂ ಕೃತಾಂಜಲಿಃ ।**
**ಪ್ರತ್ಯುದ್ಗಮ್ಯ ನಮಸ್ಕೃತ್ಯ ದಂಡವದ್ ಭಕ್ತಿಸಂಯುತಃ ॥ ೧೭ ॥**
**ಸ್ವರ್ಣಪಾತ್ರೇಣ ಪಾನೀಯಮಾನಿನಾಯಾಶು ಜಾನಕೀ ।**
**ರತ್ನಾಸನೇ ಸಮಾವೇಶ್ಯ ಪಾದೌ ಪ್ರಕ್ಷಾಲ್ಯ ಭಕ್ತಿತಃ ॥ ೧೮ ॥**
**ತದಪಃ ಶಿರಸಾ ಧೃತ್ವಾ ಸೀತಯಾ ಸಹ ರಾಘವಃ ।**
**ಧನ್ಯೋಽಸ್ಮೀತ್ಯಬ್ರವೀದ್ರಾಮಸ್ತವ ಪಾದಾಂಬುಧಾರಣಾತ್ ॥ ೧೯ ॥**

೧೭-೧೯. ಗುರುವಾದ (ವಸಿಷ್ಠನು) ಬಂದದ್ದನ್ನು ತಿಳಿದು ಕೂಡಲೆ ರಾಮನು ಎದುರುಗೊಂಡು, ಕೈಮುಗಿದು (ಭಕ್ತಿಯಿಂದ ಕೂಡಿದವನಾಗಿ) ದಂಡ ನಮಸ್ಕಾರವನ್ನು ಮಾಡಿದನು. ಜಾನಕಿಯು ಬೇಗನೆ ಚಿನ್ನದ ಪಾತ್ರೆಯಲ್ಲಿ ನೀರನ್ನು ತಂದಳು. ಎರಡು ಕಾಲುಗಳನ್ನೂ ತೊಳೆದು ರಾಘವನು ಸೀತೆಯೊಡನೆ ಆ ಪಾದೋದಕವನ್ನು ತಲೆಯಲ್ಲಿ ಧರಿಸಿ 'ಎಲೈ ಮುನಿಯೆ, ನಿನ್ನ ಪಾದತೀರ್ಥದಿಂದ ನಾನು ಧನ್ಯನಾದೆನು' - ಎಂದನು.

**ಶ್ರೀರಾಮೇಣೈವಮುಕ್ತಸ್ತು ಪ್ರಹಸನ್ ಮುನಿರಬ್ರವೀತ್ ।**
**ತ್ವತ್ಪಾದಸಲಿಲಂ ಧೃತ್ವಾ ಧನ್ಯೋಽಭೂದ್ ಗಿರಿಜಾಪತಿಃ ॥ ೨೦ ॥**
**ಬ್ರಹ್ಮಾಪಿ ಮತ್ಪಿತಾ ತೇ ಹಿ ಪಾದತೀರ್ಥಹತಾಶುಭಃ ।**
**ಇದಾನೀಂ ಭಾಷಸೇ ಯತ್ತ್ವಂ ಲೋಕಾನಾಮುಪದೇಶಕೃತ್ ॥ ೨೧ ॥**
**ಜಾನಾಮಿ ತ್ವಾಂ ಪರಾತ್ಮಾನಂ ಲಕ್ಷ್ಮ್ಯಾ ಸಂಜಾತಮೀಶ್ವರಮ್ ।**
**ದೇವಕಾರ್ಯಾರ್ಥಸಿದ್ಧ್ಯರ್ಥಂ ಭಕ್ತಾನಾಂ ಭಕ್ತಿಸಿದ್ಧಯೇ ॥ ೨೨ ॥**

೨೦-೨೨. ಶ್ರೀರಾಮನಿಂದ ಹೀಗೆ ಹೇಳಲ್ಪಟ್ಟ ವಸಿಷ್ಠಮುನಿಯು ನಗುತ್ತಾ ಹೀಗೆಂದನು : ''ಅಯ್ಯಾ, ನಿನ್ನ ಪಾದೋದಕವನ್ನು ತಲೆಯಲ್ಲಿ ಹೊತ್ತದ್ದರಿಂದ ಪರಮೇಶ್ವರನು ಧನ್ಯನಾದನು. ನನ್ನ ತಂದೆಯಾದ ಬ್ರಹ್ಮನು ಕೂಡ ನಿನ್ನ ಪಾದತೀರ್ಥದ ಮಹಿಮೆಯಿಂದ ಎಲ್ಲಾ ಅಮಂಗಳಗಳನ್ನೂ ಪರಿಹರಿಸಿಕೊಂಡಿರುವನು, ಹೀಗಿರುವಲ್ಲಿ ಲೋಕಕ್ಕೆಲ್ಲ ಉಪದೇಶಮಾಡುವ ನೀನು ಈಗ ಏನು ಹೇಳುತ್ತಿರುವೆಯೋ ಅದು ಆಶ್ಚರ್ಯಕರವಾಗಿದೆ. ಲಕ್ಷ್ಮಿಯೊಡನೆ ಅವತಾರಮಾಡಿರುವ ನೀನು ದೇವತೆಗಳ ಕಾರ್ಯಸಿದ್ಧಿಗಾಗಿಯೂ ಭಕ್ತರಿಗೆ ಭಕ್ತಿಯನ್ನುಂಟುಮಾಡುವದಕ್ಕಾಗಿಯೂ ಬಂದಿರುವ ಪರಮಾತ್ಮನೆಂದು ಬಲ್ಲೆನು.

**ರಾವಣಸ್ಯ ವಧಾರ್ಥಾಯ ಜಾತಂ ಜಾನಾಮಿ ರಾಘವ ।**
**ತಥಾಪಿ ದೇವಕಾರ್ಯಾರ್ಥಂ ಗುಹ್ಯಂ ನೋದ್ಘಾಟಯಾಮ್ಯಹಮ್ ॥ ೨೩ ॥**
**ಯಥಾ ತ್ವಂ ಮಾಯಯಾ ಸರ್ವಂ ಕರೋಷಿ ರಘುನಂದನ ।**
**ತಥೈವಾನುವಿಧಾಸ್ಯೇಽಹಂ ಶಿಷ್ಯಸ್ತ್ವಂ ಗುರುರಪ್ಯಹಮ್ ॥ ೨೪ ॥**
**ಗುರುರ್ಗುರೂಣಾಂ ತ್ವಂ ದೇವ ಪಿತೄಣಾಂ ತ್ವಂ ಪಿತಾಮಹಃ ।**
**ಅಂತರ್ಯಾಮೀ ಜಗದ್ಯಾತ್ರಾವಾಹಕಸ್ತ್ವಮಗೋಚರಃ ॥ ೨೫ ॥**

೨೩-೨೫. ''ರಾಘವನೆ, ದೇವಕಾರ್ಯಕ್ಕಾಗಿ - ಎಂದರೆ ರಾವಣನ ವಧೆಗಾಗಿ ನೀನು ಹುಟ್ಟಿರುವೆಯೆಂಬುದನ್ನು ಬಲ್ಲೆನು. ಆದರೂ ಈ ಗುಟ್ಟನ್ನು ನಾನು ಹೊರಗೆಡಹುವದಿಲ್ಲ. ಹೇಗೆ ನೀನು ಮಾಯೆಯಿಂದ ಎಲ್ಲವನ್ನೂ ಮಾಡಿದಂತೆ ನಟಿಸುವೆಯೋ ಹಾಗೆಯೇ ನಾನೂ ಅನುಕರಿಸುವೆನು. (ಈಗ) ನೀನು ಶಿಷ್ಯನು ; ನಾನು ಗುರುವು. ಆದರೆ ನಿಜವೇನೆಂದರೆ : ಗುರುವಿಗೂ ಗುರುವಾಗಿರುವವನು ನೀನು. ತಂದೆಯರಿಗೆಲ್ಲ ತಂದೆಯೂ ನೀನೇ. ಪ್ರಪಂಚದ ವ್ಯಾಪಾರಗಳನ್ನು ನಡೆಸುತ್ತಾ ಯಾರಿಗೂ ಕಾಣಿಸದ ಅಂತರ್ಯಾಮಿಯಾಗಿರುವವನೂ ನೀನೇ ಆಗಿರುತ್ತೀಯೆ.

**ಶುದ್ಧಸತ್ತ್ವಮಯಂ ದೇಹಂ ಧೃತ್ವಾ ಸ್ವಾಧೀನಸಂಭವಮ್ ।**
**ಮನುಷ್ಯ ಇವ ಲೋಕೇಽಸ್ಮಿನ್ ಭಾಸಿ ತ್ವಂ ಯೋಗಮಾಯಯಾ ॥ ೨೬ ॥**

**ಪೌರೋಹಿತ್ಯಮಹಂ ಜಾನೇ ವಿಗರ್ಹ್ಯಂ ದೂಷ್ಯಜೀವನಮ್ ।**
**ಇಕ್ಷ್ವಾಕೂಣಾಂ ಕುಲೇ ರಾಮಃ ಪರಮಾತ್ಮಾ ಜನಿಷ್ಯತೇ ॥ ೨೭॥**
**ಇತಿ ಜ್ಞಾತಂ ಮಯಾ ಪೂರ್ವಂ ಬ್ರಹ್ಮಣಾ ಕಥಿತಂ ಪುರಾ ।**
**ತತೋಽಹಮಾಶಯಾ ರಾಮ ತವ ಸಂಬಂಧಕಾಂಕ್ಷಯಾ ॥ ೨೮ ॥**
**ಅಕಾರ್ಷಂ ಗರ್ಹಿತಮಪಿ ತವಾಚಾರ್ಯತ್ವಸಿದ್ಧಯೇ ।**

೨೬-೨೮. ''ಶುದ್ಧಸತ್ತ್ವಗುಣದಿಂದ ಕೂಡಿದ ಸ್ವತಂತ್ರವಾದ ಹಾಗೂ ಇಚ್ಛಾಧೀನವಾದ ಶರೀರವನ್ನು ನೀನು ಯೋಗಮಾಯೆಯಿಂದ ಧರಿಸಿದವನಾಗಿ ಈ ಲೋಕದಲ್ಲಿ ಮನುಷ್ಯನಂತೆ ತೋರಿಕೊಳ್ಳುತ್ತಿರುವೆ. ಪೌರೋಹಿತ್ಯವೆಂಬುದು ಕೀಳಾದದ್ದು ಹಾಗೂ ಪಾಪಜೀವನವೆಂಬುದನ್ನು ನಾನು ಬಲ್ಲೆನು. ಆದರೂ ಇಕ್ಷ್ವಾಕು ವಂಶದಲ್ಲಿ ಪರಮಾತ್ಮನು ರಾಮನಾಗಿ ಹುಟ್ಟಲಿದ್ದಾನೆ - ಎಂದು ಬ್ರಹ್ಮನು ಹಿಂದೆ ಹೇಳಿದ್ದನ್ನು ನಾನು ಬಲ್ಲವನಾಗಿದ್ದೆನು. ಅನಂತರ ನಾನು ಎಲೈ ರಾಮನೆ, ಈ ನಿಮಿತ್ತದಿಂದ ನಿನ್ನ ಸಂಬಂಧವು ದೊರಕುತ್ತದೆ - ಎಂಬ ಆಶೆಯಿಂದ ನಿನಗೆ ಆಚಾರ್ಯನಾಗುವದಕ್ಕಾಗಿ ಕೀಳಾದರೂ ಈ (ಪೌರೋಹಿತ್ಯ) ಕರ್ಮವನ್ನು ಮಾಡಿದೆನು.

**ತತೋ ಮನೋರಥೋ ಮೇಽದ್ಯ ಫಲಿತೋ ರಘುನಂದನ ।**
**ತ್ವದಧೀನಾ ಮಹಾಮಾಯಾ ಸರ್ವಲೋಕೈಕಮೋಹಿನೀ ॥ ೨೯ ॥**
**ಮಾಂ ಯಥಾ ಮೋಹಯೇನ್ನೈವ ತಥಾ ಕುರು ರಘೂದ್ವಹ ।**
**ಗುರುನಿಷ್ಕೃತಿಕಾಮಸ್ತ್ವಂ ಯದಿ ದೇಹ್ಯೇತದೇವ ಮೇ ॥ ೩೦ ॥**

೨೯-೩೦. ''ಎಲೈ ರಘುವಂಶಜನೆ, ಅನಂತರ ನನ್ನ ಇಷ್ಟಾರ್ಥವು ಈಗ ಸಫಲವಾಯಿತು. ಎಲೈ ರಘೂತ್ತಮನೆ, ಎಲ್ಲಾ ಲೋಕವನ್ನೂ ಮೋಹಗೊಳಿಸುವ ನಿನ್ನ ಅಧೀನವಾಗಿರುವ ಮಹಾಮಾಯೆಯು ಹೇಗಾದರೆ ನನ್ನನ್ನು ಮೋಹಗೊಳಿಸಲಾರದೋ ಹಾಗೆ ಮಾಡುವವನಾಗು. ನೀನು ಗುರುದಕ್ಷಿಣೆಯನ್ನು ಕೊಟ್ಟು ಕೃತಾರ್ಥನಾಗಬೇಕೆಂದಿದ್ದರೆ ಈ (ವರವನ್ನೇ) ಕೊಡು.

**ಪ್ರಸಂಗಾತ್ ಸರ್ವಮುಪ್ಯುಕ್ತಂ ನ ವಾಚ್ಯಂ ಕುತ್ರಚಿನ್ಮಯಾ ।**
**ರಾಜ್ಞಾ ದಶರಥೇನಾಹಂ ಪ್ರೇಷಿತೋಽಸ್ಮಿ ರಘೂದ್ವಹ ॥ ೩೧ ॥**
**ತ್ವಾಮಾಮಂತ್ರಯಿತುಂ ರಾಜ್ಯೇ ಶ್ವೋಽಭಿಷೇಕ್ಷ್ಯತಿ ರಾಘವ ।**
**ಅದ್ಯ ತ್ವಂ ಸೀತಯಾ ಸಾರ್ಧಮುಪವಾಸಂ ಯಥಾವಿಧಿ ॥ ೩೨ ॥**
**ಕೃತ್ವಾ ಶುಚಿರ್ಭೂಮಿಶಾಯೀ ಭವ ರಾಮ ಜಿತೇಂದ್ರಿಯಃ ।**
**ಗಚ್ಛಾಮಿ ರಾಜಸಾನ್ನಿಧ್ಯಂ ತ್ವಂ ತು ಪ್ರಾತರ್ಗಮಿಷ್ಯಸಿ ॥ ೩೩ ॥**
**ಇತ್ಯುಕ್ತ್ವಾ ರಥಮಾರುಹ್ಯ ಯಯೌ ರಾಜಗುರುರ್ದ್ರುತಮ್ ।**

೩೧-೩೩. ''ಸಂದರ್ಭವು ಒದಗಿದ್ದರಿಂದ ಎಲ್ಲವನ್ನೂ ಹೇಳಿರುತ್ತೇನೆ. ಬೇರೆಲ್ಲಿಯೂ ಈ ವಿಷಯಗಳನ್ನು ಹೇಳಲಾರೆನು. ಎಲೈ ರಾಮನೆ, ರಾಜನಾದ ದಶರಥನಿಂದ ನಿನ್ನನ್ನು ಕರೆಯುವದಕ್ಕಾಗಿ ನಾನು ಕಳುಹಿಸಲ್ಪಟ್ಟಿರುವೆನು. ಎಲೈ ರಾಘವನೆ, ನಾಳೆಯ ದಿನ ರಾಜ್ಯದಲ್ಲಿ (ರಾಜನು) ನಿನ್ನನ್ನು ಪಟ್ಟಾಭಿಷೇಕಮಾಡಿ ಕುಳ್ಳಿರಿಸಲಿದ್ದಾನೆ. ಈಗ ನೀನು ಸೀತೆಯೊಡನೆ ವಿಧಿಗನುಸಾರವಾಗಿ ಉಪವಾಸಮಾಡಿ ಜಿತೇಂದ್ರಿಯನಾಗಿದ್ದುಕೊಂಡು ನೆಲದ ಮೇಲೆ ಮಲಗುವವನಾಗಿರು. ನಾನು ಈಗ ರಾಜನ ಹತ್ತಿರಕ್ಕೆ ಹೋಗುವೆನು. ನೀನು ಬೆಳಗ್ಗೆ ಹೋಗುವೆಯಂತೆ'' - ಹೀಗೆಂದು ಹೇಳಿ ರಾಜಗುರುವಾದ (ವಸಿಷ್ಠನು) ಜಾಗ್ರತೆಯಾಗಿ ರಥವನ್ನೇರಿ ಹೊರಟುಹೋದನು.

**ರಾಮೋಽಪಿ ಲಕ್ಷ್ಮಣಂ ದೃಷ್ಟ್ವಾ ಪ್ರಹಸನ್ನಿದಮಬ್ರವೀತ್ ।**
**ಸೌಮಿತ್ರೇ ಯೌವರಾಜ್ಯೇ ಮೇ ಶ್ವೋಽಭಿಷೇಕೋ ಭವಿಷ್ಯತಿ ॥ ೩೪ ॥**
**ನಿಮಿತ್ತಮಾತ್ರಮೇವಾಹಂ ಕರ್ತಾ ಭೋಕ್ತಾ ತ್ವಮೇವ ಹಿ ॥**
**ಮಮ ತ್ವಂ ಹಿ ಬಹಿಃಪ್ರಾಣೋ ನಾತ್ರ ಕಾರ್ಯಾ ವಿಚಾರಣಾ ।**
**ತತೋ ವಸಿಷ್ಠೇನ ಯಥಾ ಭಾಷಿತಂ ತತ್ತಥಾಽಕರೋತ್ ॥ ೩೫ ॥**

೩೪-೩೫. ರಾಮನಾದರೊ, ಲಕ್ಷ್ಮಣನನ್ನು ಕಂಡು ನಸುನಗುತ್ತಾ ಹೀಗೆಂದನು : 'ಎಲೈ ಸೌಮಿತ್ರಿಯೆ, ನನಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕವು ನಾಳೆಯ ದಿನ ಆಗಲಿದೆ; ಆದರೆ ನಾನು ನೆಪಮಾತ್ರಕ್ಕೆ (ಯುವರಾಜ)ನಾಗಿರುವೆನು. ನೀನಾದರೊ, ಎಲ್ಲಾ ಕೆಲಸಗಳನ್ನೂ ಮಾಡುವವನೂ ಫಲವನ್ನು (ಸುಖವನ್ನು) ಅನುಭವಿಸುವವನೂ ಆಗಿರುವೆ. ಏಕೆಂದರೆ ನೀನೇ ನನ್ನ ಹೊರಗಿನ ಪ್ರಾಣವಾಗಿರುವೆ. ಈ ವಿಷಯದಲ್ಲಿ (ಅಭಿಪ್ರಾಯಭೇದವಿಲ್ಲವಾಗಿ) ವಿಚಾರಮಾಡತಕ್ಕದ್ದೇನೂ ಇರುವದಿಲ್ಲ'- ಎಂದು ತಿಳಿಸಿದನು. ಅನಂತರ ವಸಿಷ್ಠರು ಹೇಳಿದಂತೆ ಎಲ್ಲವನ್ನೂ ಹಾಗೆಯೇ ಮಾಡಿದನು.

**ವಸಿಷ್ಠೋಽಪಿ ನೃಪಂ ಗತ್ವಾ ಕೃತಂ ಸರ್ವಂ ನ್ಯವೇದಯತ್ ।**
**ವಸಿಷ್ಠಸ್ಯ ಪುರೋ ರಾಜ್ಞಾ ಹ್ಯುಕ್ತಂ ರಾಮಾಭಿಷೇಚನಮ್ ॥ ೩೬ ॥**
**ಯದಾ ತದೈವ ನಗರೇ ಶ್ರುತ್ವಾ ಕಶ್ಚಿತ್ ಪುಮಾನ್ ಜಗೌ ।**
**ಕೌಸಲ್ಯಾಯೈ ರಾಮಮಾತ್ರೇ ಸುಮಿತ್ರಾಯೈ ತಥೈವ ಚ ॥ ೩೭ ॥**
**ಶ್ರುತ್ವಾ ತೇ ಹರ್ಷಸಂಪೂರ್ಣೇ ದದತುರ್ಹಾರಮುತ್ತಮಮ್ ।**
**ತಸ್ಮೈ ತತಃ ಪ್ರೀತಮನಾಃ ಕೌಸಲ್ಯಾ ಪುತ್ರವತ್ಸಲಾ ॥ ೩೮ ॥**

೩೬-೩೮. ವಸಿಷ್ಠನಾದರೊ, ರಾಜನ ಬಳಿಗೆ ಬಂದು ಎಲ್ಲವನ್ನೂ ಮಾಡಿದ್ದಾಗಿದೆ- ಎಂದು ವಿಜ್ಞಾಪಿಸಿದನು. ಆಗ ಆ ಪಟ್ಟಣದಲ್ಲಿ ವಸಿಷ್ಠರೊಡನೆ ರಾಜನು ರಾಮನ ಅಭಿಷೇಕದ ವಿಷಯವನ್ನು ಮಾತನಾಡಿದ್ದುದನ್ನು ಕೇಳಿದ ಒಬ್ಬ ಪುರುಷನು

ರಾಮನ ತಾಯಿಯಾದ ಕೌಸಲ್ಯೆಗೂ ಮತ್ತು ಸುಮಿತ್ರೆಗೂ ಈ ವಿಚಾರವನ್ನು ತಿಳಿಸಿದನು. ಅವರಿಬ್ಬರೂ ಬಹಳ ಸಂತೋಷಗೊಂಡವರಾದರು ; ಮತ್ತು ಉತ್ತಮವಾದ ಒಂದು ಹಾರವನ್ನು ಪುತ್ರವತ್ಸಲೆಯಾದ ಕೌಸಲ್ಯೆಯು ಪ್ರೀತಿಯಿಂದ ನೀಡಿದಳು.

**ಲಕ್ಷ್ಮೀಂ ಪರ್ಯಚರದ್ದೇವೀಂ ರಾಮಸ್ಯಾರ್ಥಪ್ರಸಿದ್ಧಯೇ ।**
**ಸತ್ಯವಾದೀ ದಶರಥಃ ಕರೋತ್ಯೇವ ಪ್ರತಿಶ್ರುತಮ್ ॥ ೩೯ ॥**
**ಕೈಕೇಯೀವಶಗಃ ಕಿಂ ತು ಕಾಮುಕಃ ಕಿಂ ಕರಿಷ್ಯತಿ ।**
**ಇತಿ ವ್ಯಾಕುಲಚಿತ್ತಾ ಸಾ ದುರ್ಗಾಂ ದೇವೀಮಪೂಜಯತ್ ॥ ೪೦ ॥**

೩೯-೪೦. ರಾಮನ ಕಾರ್ಯಸಿದ್ಧಿಗಾಗಿ ಲಕ್ಷ್ಮೀದೇವಿಯ ಪೂಜೆಯನ್ನು ಆಕೆಯು ಮಾಡಿದಳು. ಮತ್ತು ಸತ್ಯವಾದಿಯಾದ ದಶರಥನೇನೋ ಮಾತನಾಡಿದ್ದನ್ನು ನಡೆಯಿಸಿಯೇ ತೀರುವನು. ಆದರೆ ಕಾಮುಕನಾದ ಆತನು ಕೈಕೇಯಿಯ ಅಧೀನನಾಗಿರುವದರಿಂದ ಏನು ಮಾಡುತ್ತಾನೋ, ಹೀಗೆಂದು ಕದಡಿದ ಮನಸ್ಸುಳ್ಳ ಆಕೆಯು ದುರ್ಗಾದೇವಿಯನ್ನು ಪೂಜಿಸಿದಳು.

**ಏತಸ್ಮಿನ್ನಂತರೇ ದೇವಾ ದೇವೀಂ ವಾಣೀಮಚೋದಯನ್ ।**
**ಗಚ್ಛ ದೇವಿ ಭುವೋ ಲೋಕಮಯೋಧ್ಯಾಯಾಂ ಪ್ರಯತ್ನತಃ ॥ ೪೧ ॥**
**ರಾಮಾಭಿಷೇಕವಿಘ್ನಾರ್ಥಂ ಯತಸ್ವ ಬ್ರಹ್ಮವಾಕ್ಯತಃ ।**
**ಮಂಥರಾಂ ಪ್ರವಿಶಸ್ವಾದೌ ಕೈಕೇಯೀಂ ಚ ತತಃ ಪರಮ್ ॥ ೪೨ ॥**
**ತತೋ ವಿಘ್ನೇ ಸಮುತ್ಪನ್ನೇ ಪುನರೇಹಿ ದಿವಂ ಶುಭೇ ।**
**ತಥೇತ್ಯುಕ್ತ್ವಾ ತಥಾ ಚಕ್ರೇ ಪ್ರವಿವೇಶಾಥ ಮಂಥರಾಮ್ ॥ ೪೩ ॥**

೪೧-೪೩. ಈ ನಡುವೆ ದೇವತೆಗಳು ದೇವಿಯಾದ ಸರಸ್ವತಿ (ವಾಕ್ಕು)ಯನ್ನು ಕುರಿತು ''ಎಲೌ ತಾಯೆ, ನೀನು ಭೂಲೋಕದಲ್ಲಿ ಅಯೋಧ್ಯಾನಗರಿಗೆ ಹೋಗುವವಳಾಗು. ಬ್ರಹ್ಮನ ಮಾತಿನಂತೆ ರಾಮನ ಪಟ್ಟಾಭಿಷೇಕಕ್ಕೆ ಅಡ್ಡಿಯಾಗುವಂತೆ ಪ್ರಯತ್ನವನ್ನು ಮಾಡುವವಳಾಗು. ಮೊದಲು ಮಂಥರೆಯನ್ನೂ ಅನಂತರ ಕೈಕೇಯಿಯನ್ನೂ ಒಳಹೊಕ್ಕು (ಅವರುಗಳು) ವಿಘ್ನವುಂಟುಮಾಡುವಂತೆ ಮಾಡು. ವಿಘ್ನಮಾಡಿದ ಅನಂತರ ಮತ್ತೆ ಸ್ವರ್ಗಲೋಕಕ್ಕೆ ಬಂದುಬಿಡು.'' ಎಂದು ಪ್ರೇರಿಸಿದರು. ಹಾಗೆಯೇ ಆಗಲಿ ಎಂದು ಆಕೆಯು ತಿಳಿಸಿ ಮಂಥರೆಯಲ್ಲಿ ಪ್ರವೇಶಿಸಿದಳು.

**ಸಾಪಿ ಕುಬ್ಜಾ ತ್ರಿವಕ್ರಾ ತು ಪ್ರಾಸಾದಾಗ್ರಮಥಾರುಹತ್ ।**
**ನಗರಂ ಪರಿತೋ ದೃಷ್ಟ್ವಾ ಸರ್ವತಃ ಸಮಲಂಕೃತಮ್ ॥ ೪೪ ॥**
**ನಾನಾತೋರಣಸಂಬಾಧಂ ಪತಾಕಾಭಿರಲಂಕೃತಮ್ ।**
**ಸರ್ವೋತ್ಸವಸಮಾಯುಕ್ತಂ ವಿಸ್ಮಿತಾ ಪುನರಾಗಮತ್ ॥ ೪೫ ॥**

೪೪-೪೫. ಆಕೆಯಾದರೊ, ಕುಳ್ಳಾದವಳೂ ಮೂರು ಕಡೆ ಶರೀರದಲ್ಲಿ ಬಾಗಿದವಳೂ ಆದ ಮುದುಕಿಯು - ಉಪ್ಪರಿಗೆಯ ಮೇಲ್ಭಾಗವನ್ನೇರಿ ಸುತ್ತಲೂ ನಗರ ವನ್ನು ಎಲ್ಲಾ ಕಡೆಯಲ್ಲಿಯೂ ಅಲಂಕೃತವಾಗಿರುವದನ್ನು ಕಂಡಳು. ಅನೇಕ ರೀತಿಯ ತೋರಣಗಳಿಂದಲೂ ಪತಾಕೆಗಳಿಂದಲೂ ಸಜ್ಜುಗೊಂಡು ಎಲ್ಲಾ ವಿಧದಿಂದಲೂ ವೈಭವ ದಿಂದ ಕೂಡಿದ್ದ ಪಟ್ಟಣವನ್ನು ನೋಡಿ ಆಶ್ಚರ್ಯಭರಿತಳಾಗಿ ಹಿಂದಿರುಗಿದಳು.

**ಧಾತ್ರೀಂ ಪಪ್ರಚ್ಛ ಮಾತಃ ಕಿಂ ನಗರಂ ಸಮಲಂಕೃತಮ್ ।**
**ನಾನೋತ್ಸವಸಮಾಯುಕ್ತಾ ಕೌಸಲ್ಯಾ ಚಾತಿಹರ್ಷಿತಾ ॥ ೪೬ ॥**
**ದದಾತಿ ವಿಪ್ರಮುಖ್ಯೇಭ್ಯೋ ವಸ್ತ್ರಾಣಿ ವಿವಿಧಾನಿ ಚ।**
**ತಾಮುವಾಚ ತದಾ ಧಾತ್ರೀ ರಾಮಚಂದ್ರಾಭಿಷೇಚನಮ್ ॥ ೪೭॥**
**ಶ್ವೋ ಭವಿಷ್ಯತಿ ತೇನಾದ್ಯ ಸರ್ವತೋಽಲಂಕೃತಂ ಪುರಮ್ ॥**

೪೬-೪೭. (ಒಬ್ಬಳು) ದಾದಿಯನ್ನು ಕುರಿತು ''ಅಮ್ಮಾ, ಇದೇನು ? ಊರೆಲ್ಲವೂ ಅಲಂಕೃತವಾಗಿದೆಯಲ್ಲ ? ಕೌಸಲ್ಯೆಯೂ ಕೂಡ ಅನೇಕ ರೀತಿಯಿಂದ ಬಹಳ ಸಂತೋಷ ಮತ್ತು ಉತ್ಸಾಹಭರಿತಳಾಗಿ ಓಡಾಡುತ್ತಿರುವಳಲ್ಲ ! ಅನೇಕ ವಿಧ ವಾದ ಬಟ್ಟೆಗಳನ್ನು ಬ್ರಾಹ್ಮಣರಿಗೆ ದಾನಮಾಡುತ್ತಿರುವಳು. ಕಾರಣವೇನು ?'' ಎಂದು ಕೇಳಿದಳು. ಆಗ ಆ ದಾದಿಯು ''ನಾಳೆಯ ದಿನವೇ ಶ್ರೀರಾಮನಿಗೆ ಪಟ್ಟಾಭಿಷೇಕ ವಾಗಲಿದೆ ; ಆದ್ದರಿಂದ ಈಗಿನಿಂದಲೇ ಊರೆಲ್ಲ ಸಜ್ಜಾಗುತ್ತಿದೆ'' ಎಂದಳು.

**ತಚ್ಛ್ರುತ್ವಾ ತ್ವರಿತಂ ಗತ್ವಾ ಕೈಕೇಯೀಂ ವಾಕ್ಯಮಬ್ರವೀತ್ ।**
**ಪರ್ಯಂಕಸ್ಥಾಂ ವಿಶಾಲಾಕ್ಷೀಮೇಕಾಂತೇ ಪರ್ಯವಸ್ಥಿತಾಮ್ ॥ ೪೮ ॥**
**ಕಿಂ ಶೇಷೇ ದುರ್ಭಗೇ ಮೂಢೇ ಮಹದ್ಭಯಮುಪಸ್ಥಿತಮ್ ।**
**ನ ಜಾನೀಷೇಽತಿಸೌಂದರ್ಯಮಾನಿನೀ ಮತ್ತಗಾಮಿನೀ ॥ ೪೯ ॥**
**ರಾಮಸ್ಯಾನುಗ್ರಹಾದ್ರಾಜ್ಞಃ ಶ್ವೋಽಭಿಷೇಕೋ ಭವಿಷ್ಯತಿ ।**
**ತಚ್ಛ್ರುತ್ವಾ ಸಹಸೋತ್ಥಾಯ ಕೈಕೇಯೀ ಪ್ರಿಯವಾದಿನೀ ॥ ೫೦ ॥**
**ತಸ್ಯೈ ದಿವ್ಯಂ ದದೌ ಸ್ವರ್ಣನೂಪುರಂ ರತ್ನಭೂಷಿತಮ್ ॥**

೪೮-೫೦. ಅದನ್ನು ಕೇಳಿ ವಿಶಾಲವಾದ ಕಣ್ಣುಗಳುಳ್ಳ, ಒಬ್ಬಳೇ ಆಗಿ ಮಂಚದ ಮೇಲೆ ಇದ್ದ ಕೈಕೇಯಿಯ ಬಳಿಗೆ ಬಂದ (ಮಂಥರೆಯು) ಜಾಗ್ರತೆಯಾಗಿ ಹೀಗೆಂದಳು : ''ಎಲ್ಲೆ ದುರದೃಷ್ಟವಂತಳೆ, ದಡ್ಡಳೆ, ಏಕೆ ಸುಮ್ಮನೆ ಮಲಗಿರುವೆ ? (ಉದಾಸೀನಳಾಗಿರುವೆ ?) ಬಹಳ ದೊಡ್ಡ ಭಯವೇ ಈಗ ಬಂದೊದಗಿರುವದು. ನಾನೇ ಸುಂದರಿಯೆಂದು ಭಾವಿಸಿಕೊಂಡು ಮೈಮರೆತಿರುವ ಮಂದಗತಿಯ ನೀನು (ಈ ಭಯವನ್ನು) ಅರಿಯದೆ ಇರುವೆ. ರಾಜನ ದಯದಿಂದ ರಾಮನಿಗೆ ನಾಳೆಯೇ

ಪಟ್ಟಾಭಿಷೇಕವಾಗಲಿದೆ'' - ಎಂದಳು. ಅದನ್ನು ಕೇಳಿ ತಟ್ಟನೆ ಮೇಲಕ್ಕೆದ್ದ ಪ್ರಿಯವಾದಿನಿ-ಯಾದ ಕೈಕೇಯಿಯು ರತ್ನಗಳಿಂದ ಅಲಂಕೃತವಾದ ಚಿನ್ನದ ದಿವ್ಯವಾದ ಒಂದು ಗೆಜ್ಜೆಯ ಸರವನ್ನು ಆಕೆಗೆ ಕೊಟ್ಟಳು.

**ಹರ್ಷಸ್ಥಾನೇ ಕಿಮಿತಿ ಮೇ ಕಥ್ಯತೇ ಭಯಮಾಗತಮ್ ।**
**ಭರತಾದಧಿಕೋ ರಾಮಃ ಪ್ರಿಯಕೃನ್ಮೇ ಪ್ರಿಯಂವದಃ ॥ ೫೧ ॥**
**ಕೌಸಲ್ಯಾಂ ಮಾಂ ಸಮಂ ಪಶ್ಯನ್ ಸದಾ ಶುಶ್ರೂಷತೇ ಹಿ ಮಾಮ್ ।**
**ರಾಮಾದ್ಭಯಂ ಕಿಮಾಪನ್ನಂ ತವ ಮೂಢೇ ವದಸ್ವ ಮೇ ॥ ೫೨ ॥**
**ತಚ್ಛ್ರುತ್ವಾ ವಿಷಸಾದಾಥ ಕುಬ್ಜಾಽಕಾರಣವೈರಿಣೀ ॥**

೫೧-೫೨. ಸಂತೋಷಪಡುವ ಸಂದರ್ಭದಲ್ಲಿ ಭಯವು ಉಂಟಾಗಿದೆಯೆಂದು ನನಗೆ ಏಕೆ ಹೇಳುತ್ತಿರುವೆ ? ನನಗೆ ಪ್ರಿಯವನ್ನು ಮಾಡುವಂಥ, ಪ್ರೀತಿಯ ಮಾತುಗಳನ್ನೇ ಆಡುವ ರಾಮನು ಭರತನಿಗಿಂತಲೂ ಹೆಚ್ಚಿನವನಾಗಿರುವನು. ಅವನು ಕೌಸಲ್ಯೆಯನ್ನೂ ನನ್ನನ್ನೂ ಒಂದೇ ರೀತಿಯಿಂದ ಕಾಣುತ್ತಾ ಯಾವಾಗಲೂ ಸೇವಿಸುತ್ತಿರುವನು. ಎಲೈ ಮೂಢಳೆ, ರಾಮನ ಕಡೆಯಿಂದ ನನಗಾದರೂ ಭಯವೇಕೆ ಬಂದೀತು ? ಅದನ್ನು ಹೇಳು - ಎಂದು ಕೈಕೇಯಿಯು ಕೇಳಿದಳು. ಇದರಿಂದ ಆ ಕುಳ್ಳಿಯಾದ ಹಾಗೂ ನಿರ್ನಿಮಿತ್ತವಾಗಿ ದ್ವೇಷಮಾಡುವ ಸ್ವಭಾವದ ಆಕೆಯು ಬಹಳ ತಳಮಳಗೊಂಡಳು.

**ಶೃಣು ಮದ್ವಚನಂ ದೇವಿ ಯಥಾರ್ಥಂ ತೇ ಮಹದ್ಭಯಮ್ ।**
**ತ್ವಾಂ ತೋಷಯನ್ ಸದಾ ರಾಜಾ ಪ್ರಿಯವಾಕ್ಯಾನಿ ಭಾಷತೇ ॥ ೫೩ ॥**
**ಕಾಮುಕೋಽತಥ್ಯವಾದೀ ಚ ತ್ವಾಂ ವಾಚಾ ಪರಿತೋಷಯನ್ ।**
**ಕಾರ್ಯಂ ಕರೋತಿ ತಸ್ಯಾ ವೈ ರಾಮಮಾತುಃ ಸುಪುಷ್ಕಲಮ್ ॥ ೫೪ ॥**
**ಮನಸ್ಯೇತನ್ನಿಧಾಯ್ಯೈವ ಪ್ರೇಷಯಾಮಾಸ ತೇ ಸುತಮ್ ।**
**ಭರತಂ ಮಾತುಲಕುಲೇ ಪ್ರೇಷಯಾಮಾಸ ಸಾನುಜಮ್ ॥ ೫೫ ॥**

೫೩-೫೫. (ಅನಂತರ ಹೀಗೆಂದಳು :) ''ಎಲೌ ದೇವಿಯೆ, ನನ್ನ ಮಾತನ್ನು ಕೇಳು. ನಿನಗೆ ಭಯವುಂಟಾಗಿರುವದು ನಿಜ. ರಾಜನು ನಿನ್ನನ್ನು ಸಂತೋಷಗೊಳಿಸುತ್ತಾ ಯಾವಾಗಲೂ ಒಳ್ಳೆಯ ಮಾತುಗಳನ್ನೇ ಆಡುತ್ತಾನೆ. ಆದರೆ ಕಾಮುಕನೂ ಸುಳ್ಳುಗಾರನೂ ಆದ ಆತನು ನಿನ್ನನ್ನು ಮಾತುಗಳಿಂದ ಮಾತ್ರ ಸಂತೋಷಗೊಳಿಸುತ್ತಾ ರಾಮನ ತಾಯಿಗೆ (ಅನುಕೂಲವಾದ) ಕೆಲಸವನ್ನೇ ಚೆನ್ನಾಗಿ ಮಾಡುತ್ತಾನೆ. (ಪಟ್ಟಾಭಿಷೇಕದ ಉದ್ದೇಶ)ವನ್ನು ಮನಸ್ಸಿನಲ್ಲಿಟ್ಟುಕೊಂಡೇ ನಿನ್ನ ಮಗನಾದ ಸೋದರಸಹಿತನಾದ ಭರತನನ್ನು ಸೋದರಮಾವನ ಮನೆಗೆ ಕಳುಹಿಸಿರುತ್ತಾನೆ.

**ಸುಮಿತ್ರಾಯಾಃ ಸಮೀಚೀನಂ ಭವಿಷ್ಯತಿ ನ ಸಂಶಯಃ ।**
**ಲಕ್ಷ್ಮಣೋ ರಾಮಮನ್ವೇತಿ ರಾಜ್ಯಂ ಸೋಽನುಭವಿಷ್ಯತಿ ॥ ೫೬ ॥**
**ಭರತೋ ರಾಘವಸ್ಯಾಗ್ರೇ ಕಿಂಕರೋ ವಾ ಭವಿಷ್ಯತಿ ।**
**ವಿವಾಸ್ಯತೇ ವಾ ನಗರಾದ್ ಪ್ರಾಣೈರ್ವಾ ಹಾಪ್ಯತೇಽಚಿರಾದ್ ॥ ೫೭ ॥**

೫೬-೫೭. ಲಕ್ಷ್ಮಣನು ರಾಮನನ್ನು ಅನುಸರಿಸುತ್ತಾನೆ. ಆದ್ದರಿಂದ ಅವನು ರಾಜ್ಯಸುಖವನ್ನು ಅನುಭವಿಸಲಿರುವನು. ಇದರಿಂದ ಸುಮಿತ್ರೆಗೂ ಒಳ್ಳೆಯದಾಗುವದು. ಸಂದೇಹವಿಲ್ಲ. ಭರತನಾದರೊ, ರಾಮನ ಮುಂದೆ ಸೇವಕನಾಗಿಬಿಡುವನು. ಜಾಗ್ರತೆಯಾಗಿ ಆತನನ್ನು ಪಟ್ಟಣದಿಂದ ಓಡಿಸುತ್ತಾರೆ ; ಅಥವಾ ಪ್ರಾಣವನ್ನು ತೆಗೆದು ಬಿಡಲಿದ್ದಾರೆ.

**ತ್ವಂ ತು ದಾಸೀವ ಕೌಸಲ್ಯಾಂ ನಿತ್ಯಂ ಪರಿಚರಿಷ್ಯಸಿ ।**
**ತತೋಽಪಿ ಮರಣಂ ಶ್ರೇಯೋ ಯತ್ಸಪತ್ನ್ಯಾಃ ಪರಾಭವಃ ॥ ೫೮ ॥**
**ಅತಃ ಶೀಘ್ರಂ ಯತಸ್ವಾದ್ಯ ಭರತಸ್ಯಾಭಿಷೇಚನೇ ।**
**ರಾಮಸ್ಯ ವನವಾಸಾರ್ಥಂ ವರ್ಷಾಣಿ ನವ ಪಂಚ ಚ ॥ ೫೯ ॥**
**ತತೋ ರೂಢೋಽಭಯೇ ಪುತ್ರಸ್ತವ ರಾಜ್ಞಿ ಭವಿಷ್ಯತಿ ।**
**ಉಪಾಯಂ ತೇ ಪ್ರವಕ್ಷ್ಯಾಮಿ ಪೂರ್ವಮೇವ ಸುನಿಶ್ಚಿತಮ್ ॥ ೬೦ ॥**

೫೮-೬೦. ನೀನಾದರೋ ದಾಸಿಯಂತೆ ಕೌಸಲ್ಯೆಯನ್ನು ಯಾವಾಗಲೂ ಸೇವೆ ಮಾಡಿಕೊಂಡಿರಬೇಕಾಗುವದು. ಸವತಿಯಿಂದ ಹೀಗೆ ತಿರಸ್ಕರಿಸಲ್ಪಡುವದಕ್ಕಿಂತ ಸಾಯುವದೇ ಲೇಸು. ಆದ್ದರಿಂದ ಭರತನಿಗೆ ಪಟ್ಟಾಭಿಷೇಕವಾಗಲು ಮತ್ತು ರಾಮನು ಹದಿನಾಲ್ಕು ವರ್ಷಗಳ ಕಾಲ ವನವಾಸವನ್ನು ಮಾಡಲು ಪ್ರಯತ್ನಪಡು. ಎಲೈ ರಾಣಿಯೆ, ಆಗ ಹೆದರಿಕೆಯಿಲ್ಲದೆ ಅಧಿಕಾರಾರೂಢನಾಗಿ ನಿನ್ನ ಮಗನು ಆಗುವನು. ಇದಕ್ಕೆ ತಕ್ಕ ಉಪಾಯವನ್ನು ಈ ಹಿಂದೆಯೇ ನಿಶ್ಚಯಿಸಿರುವದನ್ನು ಹೇಳಲಿರುವೆನು. (ಕೇಳು)

**ಪುರಾ ದೇವಾಸುರೇ ಯುದ್ಧೇ ರಾಜಾ ದಶರಥಃ ಸ್ವಯಮ್ ।**
**ಇಂದ್ರೇಣ ಯಾಚಿತೋ ಧನ್ವೀ ಸಹಾಯಾರ್ಥಂ ಮಹಾರಥಃ ॥ ೬೧ ॥**
**ಜಗಾಮ ಸೇನಯಾ ಸಾರ್ಧಂ ತ್ವಯಾ ಸಹ ಶುಭಾನನೇ ।**
**ಯುದ್ಧಂ ಪ್ರಕುರ್ವತಸ್ತಸ್ಯ ರಾಕ್ಷಸೈಃ ಸಹ ಧನ್ವಿನಃ ॥ ೬೨ ॥**
**ತದಾಕ್ಷಕೀಲೋ ನ್ಯಪತಚ್ಛಿನ್ನಸ್ತಸ್ಯ ನ ವೇದ ಸಃ ।**
**ತ್ವಂ ತು ಹಸ್ತಂ ಸಮಾವೇಶ್ಯ ಕೀಲರಂಧ್ರೇಽತಿಧೈರ್ಯತಃ ॥ ೬೩ ॥**
**ಸ್ಥಿತವತ್ಯಸಿತಾಪಾಂಗಿ ಪತಿಪ್ರಾಣಪರೀಪ್ಸಯಾ ॥**

೧೧-೧೩. ಎಲೆ ಶುಭಾಂಗಿಯೆ, ಹಿಂದೆ ದೇವಾಸುರರ ಯುದ್ಧಕಾಲದಲ್ಲಿ ದೇವೇಂದ್ರನಿಂದ ಸಹಾಯಕ್ಕಾಗಿ ಪ್ರಾರ್ಥಿಸಲ್ಪಟ್ಟ ಧನುರ್ಧಾರಿಯೂ ಮಹಾರಥನೂ ಆದ ದಶರಥನು ಯುದ್ಧಕ್ಕೆ ತಾನೇ ಸೇನಾಸಮೇತನಾಗಿ ನಿನ್ನೊಡನೆ ಹೊರಟನು. ಧನ್ವಿಯಾದ ಆತನು ರಾಕ್ಷಸರೊಡನೆ ಯುದ್ಧಮಾಡುತ್ತಿದ್ದಾಗ ರಥದ ಅಚ್ಚಿನ ಮೊಳೆಯು ತುಂಡಾಗಿ ಬಿದ್ದಿತು. ಅವನು ಅದನ್ನು ಅರಿಯಲಿಲ್ಲ. ನೀನಾದರೋ ಕೈಯನ್ನು ಅದರ ತೂತಿನೊಳಗೆ ಚಾಚಿ ಬಹಳ ಧೈರ್ಯದಿಂದ ಗಂಡನ ಪ್ರಾಣವನ್ನುಳಿಸಲು ನಿಂತವಳಾದೆ.

**ತತೋ ಹತ್ವಾಸುರಾನ್ ಸರ್ವಾನ್ ದದರ್ಶ ತ್ವಾಮರಿಂದಮಃ ।**
**ಆಶ್ಚರ್ಯಂ ಪರಮಂ ಲೇಭೇ ತ್ವಾಮಾಲಿಂಗ್ಯ ಮುದಾನ್ವಿತಃ ॥ ೧೪ ॥**
**ವೃಣೀಷ್ವ ಯತ್ತೇ ಮನಸಿ ವಾಂಛಿತಂ ವರದೋಽಸ್ಮ್ಯಹಮ್ ।**
**ವರದ್ವಯಂ ವೃಣೀಷ್ವ ತ್ವಮೇವಂ ರಾಜಾಽವದತ್ ಸ್ವಯಮ್ ॥ ೧೫ ॥**
**ತ್ವಯೋಕ್ತೋ ವರದೋ ರಾಜನ್ ಯದಿ ದತ್ತಂ ವರದ್ವಯಮ್ ।**
**ತ್ವಯ್ಯೇವ ತಿಷ್ಠತು ಚಿರಂ ನ್ಯಾಸಭೂತಂ ಮಮಾನಘ ॥ ೧೬ ॥**
**ಯದಾ ಮೇಽವಸರೋ ಭೂಯಾತ್ ತದಾ ದೇಹಿ ವರದ್ವಯಮ್**
**ತಥೇತ್ಯುಕ್ತ್ವಾ ಯಯೌ ರಾಜಾ ಮಂದಿರಂ ತವ ಸುವ್ರತೇ ॥ ೧೭ ॥**

೧೪-೧೭. ಅನಂತರ ಎಲ್ಲಾ ರಾಕ್ಷಸರನ್ನೂ ಸಂಹಾರಮಾಡಿ ಶತ್ರುನಾಶಕನಾದ ರಾಜನು ನಿನ್ನ ಕಡೆಗೆ ನೋಡಿದನು. ಬಹಳ ಆಶ್ಚರ್ಯವನ್ನು ಹೊಂದಿದವನಾಗಿ ಸಂತೋಷದಿಂದ ನಿನ್ನನ್ನು ತಬ್ಬಿಕೊಂಡು 'ಇದೊ, ನಾನು ವರವನ್ನು ಕೊಡುವವನಾಗಿರುವೆನು - ನಿನ್ನ ಮನಸ್ಸಿನ ಬಯಕೆಯೇನಿದೆಯೋ ಅದನ್ನು ಕೇಳು ; ಈಗ ಎರಡು ವರಗಳನ್ನು ಬೇಡುವವಳಾಗು '' ಎಂದು ರಾಜನು ತಾನಾಗಿಯೇ ಹೇಳಿದನು. ಆಗ ನೀನು ''ಎಲೈ ರಾಜನೆ, ನೀನು ಎರಡು ವರಗಳನ್ನು ಕೊಟ್ಟಿರುವೆಯಾದರೆ ಅವು ಮೀಸಲಾಗಿ ನಿನ್ನಲ್ಲಿಯೇ ಚಿರಕಾಲ ಇದ್ದುಕೊಂಡಿರಲಿ ; ನನಗೆ ಯಾವಾಗ ಸಂದರ್ಭವೊದಗುವದೋ ಆಗ ಈ ಎರಡುವರಗಳನ್ನು ನೀನು ಕೊಡುವೆಯಂತೆ ;'' ಎಂದವಳಾದೆ. ಹಾಗೇ ಆಗಲಿ ; ಎಂದು ರಾಜನು ಹೇಳಿ ನಿನ್ನ ಅರಮನೆಗೆ ಹೊರಟನು.

**ತ್ವತ್ತಃ ಶ್ರುತಂ ಮಯಾ ಪೂರ್ವಮಿದಾನೀಂ ಸ್ಮೃತಿಮಾಗತಮ್ ।**
**ಅತಃ ಶೀಘ್ರಂ ಪ್ರವಿಶ್ಯಾದ್ಯ ಕ್ರೋಧಾಗಾರಂ ರುಷಾನ್ವಿತಾ ॥ ೧೮ ॥**
**ವಿಮುಚ್ಯ ಸರ್ವಾಭರಣಂ ಸರ್ವತೋ ವಿನಿಕೀರ್ಯ ಚ ।**
**ಭೂಮಾವೇವ ಶಯಾನಾ ತ್ವಂ ತೂಷ್ಣೀಮಾತಿಷ್ಠ ಭಾಮಿನಿ ॥ ೧೯ ॥**
**ಯಾವತ್ ಸತ್ಯಂ ಪ್ರತಿಜ್ಞಾಯ ರಾಜಾಽಭೀಷ್ಟಂ ಕರೋತಿ ತೇ ॥**

೬೮-೬೯. ನಿನ್ನಿಂದ ಹಿಂದೆಯೇ ಕೇಳಿದ್ದ ವಿಷಯವು ಈಗ ನೆನಪಿಗೆ ಬಂದಿದೆ. ಆದ್ದರಿಂದ ಜಾಗ್ರತೆಯಾಗಿ ನೀನು ಕೋಪಗೊಂಡವಳಾಗಿ ಎಲ್ಲಾ ಒಡವೆಗಳನ್ನೂ ಕಳಚಿ ದಿಕ್ಕಾಪಾಲಾಗಿ ಎಸೆದು ಕೋಪಾಗಾರದಲ್ಲಿ ಹೊಕ್ಕು ನೆಲದ ಮೇಲೆಯೇ ಮಲಗಿದವಳಾಗಿ ಸುಮ್ಮನೆ ಇದ್ದುಕೊಂಡುಬಿಡು. ರಾಜನು ನಿನ್ನ ಇಷ್ಟವನ್ನು ಸತ್ಯವಾಗಿ ನಡೆಯಿಸಿ ಕೊಡುತ್ತೇನೆಂದು ಪ್ರತಿಜ್ಞೆ ಮಾಡುವವರೆಗೂ ಹಾಗೆಯೇ ಇರುವವಳಾಗು.

**ಶ್ರುತ್ವಾ ತ್ರಿವಕ್ರಯೋಕ್ತಂ ತತ್ತದಾ ಕೇಕಯನಂದಿನೀ ।**
**ತಥ್ಯಮೇವಾಖಿಲಂ ಮೇನೇ ದುಸ್ಸಂಗಾಹಿತವಿಭ್ರಮಾ ॥ ೭೦ ॥**
**ತಾಮಾಹ ಕೈಕಯೀ ದುಷ್ಟಾ ಕುತಸ್ತೇ ಬುದ್ಧಿರೀದೃಶೀ ।**
**ಏವಂ ತ್ವಾಂ ಬುದ್ಧಿಸಂಪನ್ನಾಂ ನ ಜಾನೇ ವಕ್ರಸುಂದರಿ ॥ ೭೧ ॥**
**ಭರತೋ ಯದಿ ರಾಜಾ ಮೇ ಭವಿಷ್ಯತಿ ಸುತಃ ಪ್ರಿಯಃ ।**
**ಗ್ರಾಮಾನ್ ಶತಂ ಪ್ರದಾಸ್ಯಾಮಿ ಮಮ ತ್ವಂ ಪ್ರಾಣವಲ್ಲಭಾ ॥ ೭೨ ॥**

೭೦-೭೨. ತ್ರಿವಕ್ರೆಯಾದ ಮಂಥರೆಯು ಹೇಳಿದ್ದನ್ನು ಕೇಳಿದ ಕೇಕಯ ರಾಜನ ಮಗಳು ಕೆಟ್ಟಸಹವಾಸದಿಂದ ಬುದ್ಧಿವೈಪರೀತ್ಯಕ್ಕೆ ಒಳಗಾಗಿ ಎಲ್ಲವೂ ನಿಜವೇ - ಎಂದು ಭಾವಿಸಿದಳು. ದುಷ್ಟಳಾಗಿ (ಪರಿವರ್ತಿತಳಾದ) ಕೈಕೇಯಿಯು ಆಕೆಯನ್ನು ಕುರಿತು 'ಎಲೈ, ನಿನಗೆ ಇಂಥ ಬುದ್ಧಿಯು ಹೇಗೆ ಹೊಳೆಯಿತು ? ಎಲೈ ವಕ್ರಸುಂದರಿಯೆ, ನೀನು ಇಷ್ಟೊಂದು ಬುದ್ಧಿವಂತಳೆಂತ ನಾನು ತಿಳಿದಿರಲಿಲ್ಲ. ನನ್ನ ಪ್ರಿಯಪುತ್ರನಾದ ಭರತನೇ ನಾದರೂ ರಾಜನಾದರೆ, ನನ್ನ ಪ್ರಾಣಕ್ಕಿಂತ ಪ್ರೀತಿಪಾತ್ರಳಾದ ನಿನಗೆ ಒಂದುನೂರು ಗ್ರಾಮಗಳನ್ನು ಕೊಡಲಿರುವೆನು.

**ಇತ್ಯುಕ್ತ್ವಾ ಕೋಪಭವನಂ ಪ್ರವಿಶ್ಯ ಸಹಸಾ ರುಷಾ ।**
**ವಿಮುಚ್ಯ ಸರ್ವಾಭರಣಂ ಪರಿಕೀರ್ಯ ಸಮಂತತಃ ॥ ೭೩ ॥**
**ಭೂಮೌ ಶಯಾನಾ ಮಲಿನಾ ಮಲಿನಾಂಬರಧಾರಿಣೀ।**
**ಪ್ರೋವಾಚ ಶೃಣು ಮೇ ಕುಬ್ಜೇ ಯಾವದ್ರಾಮೋ ವನಂ ವ್ರಜೇತ್ ॥ ೭೪ ॥**
**ಪ್ರಾಣಾಂಸ್ತ್ಯಕ್ಷ್ಯೇಽಥವಾ ವಕ್ರೇ ಶಯಿಷ್ಯೇ ತಾವದೇವ ಹಿ ।**
**ನಿಶ್ಚಯಂ ಕುರು ಕಲ್ಯಾಣಿ ಕಲ್ಯಾಣಂ ತೇ ಭವಿಷ್ಯತಿ ॥ ೭೫ ॥**
**ಇತ್ಯುಕ್ತಾ ಪ್ರಯಯೌ ಕುಬ್ಜಾ ಗೃಹಂ ಸಾಪಿ ತಥಾಽಕರೋತ್॥**

೭೩-೭೫. ಹೀಗೆಂದು ಹೇಳಿ ತಟಕ್ಕನೆ ಸಿಟ್ಟಿನಿಂದ ಕೋಪಭವನವನ್ನು ಹೊಕ್ಕು ಎಲ್ಲಾ ಒಡವೆಗಳನ್ನೂ ಕಳಚಿ ಸುತ್ತಲೂ ಹರಡಿದವಳಾಗಿ ಮೈಯನ್ನು ಕೊಳೆಮಾಡಿ ಕೊಂಡು ಕೊಳಕುಬಟ್ಟೆಯನ್ನುಟ್ಟು ನೆಲದಮೇಲೆ ಮಲಗಿದಳು. ಕುಬ್ಜೆಯನ್ನು ಕುರಿತು 'ಎಲೌ ಕಲ್ಯಾಣಿಯೆ, ಕೇಳು. ನಿನಗೆ ಒಳ್ಳೆಯದಾಗುತ್ತದೆ. ಹೇಗೆಂದರೆ : ರಾಮನು ಕಾಡಿಗೆ ಹೋಗುವವರೆಗೂ ಹೀಗೆಯೇ ಮಲಗಿರುವೆನು. ಅಥವಾ ಪ್ರಾಣತ್ಯಾಗಮಾಡಿ ಬಿಡುವೆನು ; ಇದು ಖಂಡಿತ '- ಹೀಗೆಂದು (ಕೈಕೇಯಿಯು) ಹೇಳಿದ ಮೇಲೆ ಆ

ಕುಳ್ಳಿಯು ಮನೆಗೆ ಹೋದಳು. ಕೈಕೇಯಿಯೂ ಅದೇ ರೀತಿಯಾಗಿ ನಡೆದುಕೊಂಡಳು.

**ಧೀರೋಽತ್ಯಂತದಯಾನ್ವಿತೋಽಪಿ ಸುಗುಣಾಚಾರಾನ್ವಿತೋ ವಾಽಥವಾ**
**ನೀತಿಜ್ಞೋ ವಿಧಿವಾದದೇಶಿಕಪರೋ ವಿದ್ಯಾವಿವೇಕೋಽಥವಾ ॥**
**ದುಷ್ಟಾನಾಮತಿಪಾಪಭಾವಿತಧಿಯಾಂ ಸಂಗಂ ಸದಾ ಚೇದ್ ಭಜೇತ್**
**ತದ್ಬುದ್ಧ್ಯಾ ಪರಿಭಾವಿತೋ ವ್ರಜತಿ ತತ್ಸಾಮ್ಯಂ ಕ್ರಮೇಣ ಸ್ಫುಟಮ್ ॥ ೭೬ ॥**
**ಅತಃ ಸಂಗಃ ಪರಿತ್ಯಾಜ್ಯೋ ದುಷ್ಟಾನಾಂ ಸರ್ವದೈವ ಹಿ ।**
**ದುಃಸಂಗೀ ಚ್ಯವತೇ ಸ್ವಾರ್ಥಾದ್ ಯಥೇಯಂ ರಾಜಕನ್ಯಕಾ★ ॥ ೭೭ ॥**

೭೬-೭೭. ಧೀರನಾಗಲಿ, ಬಹಳ ದಯಾವಂತನೇ ಆಗಿರಲಿ, ಒಳ್ಳೆಯ ಗುಣ, ಆಚಾರಗಳಿಂದ ಕೂಡಿದವನಾಗಿರಲಿ, ನೀತಿಯನ್ನು ತಿಳಿದವನಾಗಿರಲಿ, ವೇದಶಾಸ್ತ್ರಗಳನ್ನು ಜನರಿಗೆ ಅನುಶಾಸನಮಾಡುವವನೇ ಆಗಿರಲಿ, ವಿದ್ಯಾವಿವೇಕವುಳ್ಳವನಾಗಿರಲಿ, ಇಂಥ ವನೂ ಬಹಳ ಪಾಪಬುದ್ಧಿಯುಳ್ಳ ದುಷ್ಟರ ಸಂಗವನ್ನು ಯಾವಾಗಲಾದರೂ ಮಾಡಿದ್ದೇ ಆದರೆ ಆ ದುರ್ಬುದ್ಧಿಯಿಂದ ಕೂಡಿದವನಾಗಿ ಮೆಲ್ಲಮೆಲ್ಲನೆ ಅವರಂತೆಯೇ ಆಗಿಬಿಡು ತ್ತಾನೆ. ಇದು ನಿಶ್ಚಯವು. ಆದ್ದರಿಂದ ದುಷ್ಟರ ಸಂಗವನ್ನು ಯಾವಾಗಲೂ ಬಿಟ್ಟುಬಿಡ ಬೇಕು. ಏಕೆಂದರೆ ಈ ರಾಜಪುತ್ರಿಯಾದ (ಕೈಕೇಯಿಯಂತೆ) ಕೆಟ್ಟಸಂಗವುಳ್ಳವನು ಪುರುಷಾರ್ಥದಿಂದ ಜಾರಿ ಬೀಳುತ್ತಾನೆ.

**ಇತಿ ಶ್ರೀ ಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ ದ್ವಿತೀಯಃ ಸರ್ಗಃ**

ಃಃಃಃಃಃಃಃಃಃಃಃಃಃಃ.

---

★ ಕೈಕೇಯಿಯು ಸ್ವತಃ ಒಳ್ಳೆಯವಳಾದರೂ ಚಾಡಿಯ ಮಾತಿನಿಂದ ಪ್ರೇರಿತಳಾಗಿ ತನ್ನ ವಿವೇಕವನ್ನೆಲ್ಲ ಕಳೆದುಕೊಂಡು ಅನರ್ಥಕ್ಕೆ ಒಳಗಾದಳು - ಎಂಬ ಉದಾಹರಣೆಯಿಂದ ಈ ಸಂದರ್ಭದಲ್ಲಿ ದುಸ್ಸಂಗದ ಕೆಟ್ಟಪರಿಣಾಮವನ್ನು ಕುರಿತು ವಿಚಾರಮಾಡಿದೆ. ಸಂಗವೇ ಕೆಟ್ಟದ್ದು - ಎಂದು ಅಧ್ಯಾತ್ಮಶಾಸ್ತ್ರಗಳಲ್ಲಿ ಬಹಳ ಕಡೆಗಳಲ್ಲಿ ಹೇಳಿದೆ. ಅದರಲ್ಲಿಯೂ ನೀಚಸಂಗವು ಮನುಷ್ಯನನ್ನು ತೀರ ಕೆಟ್ಟ ಸ್ಥಿತಿಗೆ ಒಯ್ಯುತ್ತದೆ. ಸ್ವಭಾವದಿಂದಲೇ ಬಹಿರ್ಮುಖವಾದ ಇಂದ್ರಿಯ ಗಳಿಗೆ ದುಷ್ಟವಿಷಯಗಳ ಸಂಗವೂ ಉಂಟಾಗಿಬಿಟ್ಟರೆ ಮುಂದೆ ಅವುಗಳನ್ನು ಬಗ್ಗಿಸುವದೇ ದುಸ್ಸಾಧ್ಯವಾಗುವದು. ಆದ್ದರಿಂದ ಯಾರ ಸಂಗವೂ ಇಲ್ಲದೆ ಒಬ್ಬನೇ ಇದ್ದರೂ ಚಿಂತೆಯಿಲ್ಲ, ದುಷ್ಟಸಂಗವನ್ನು ಮಾತ್ರ ಮಾಡಬಾರದು. ಸಜ್ಜನಸಂಗವನ್ನು ಮಾಡುವದು ನಮ್ಮ ಕರ್ತವ್ಯ. ದುಷ್ಟಸಂಗದಿಂದ ನಮ್ಮನ್ನು ಬಿಡಿಸುವಂತೆ ಭಗವಂತನನ್ನು ಕೇಳಿಕೊಳ್ಳುವದೂ ನಮ್ಮ ಜವಾಬ್ದಾರಿಯೇ ಆಗಿದೆ. ಭಗವಂತನನ್ನೂ ಅವನ ಭಕ್ತರನ್ನೂ ನಾವು ಗುರುತಿಸಿ ಆಶ್ರಯಿಸಿದಂತೆಲ್ಲ ಸತ್ಸಂಗದ ಪರಿಣಾಮವು ನಮ್ಮ ಮೇಲೆ ಉಂಟಾಗಲಿದೆ. ಅಂತೂ ಜಗತ್ತಿನಲ್ಲಿ ನಾವು ಸಾಧಕಾವಸ್ಥೆಯಲ್ಲಿರುವ ವರೆಗೂ ಸತ್ಸಂಗವನ್ನೇ ಆಶ್ರಯಿಸಬೇಕು. ಅನಂತರ ನಿಸ್ಸಂಗತ್ವದ ಮೂಲಕ ಜೀವನ್ಮುಕ್ತರಾಗ ಬಹುದು- ಎಂದು ಅಭಿಪ್ರಾಯ.

## ಮೂರನೆಯ ಸರ್ಗ

**ಶ್ರೀ ಮಹಾದೇವ ಉವಾಚ -**

**ತತೋ ದಶರಥೋ ರಾಜಾ ರಾಮಾಭ್ಯುದಯಕಾರಣಾತ್ ।**
**ಆದಿಶ್ಯ ಮಂತ್ರಿಪ್ರಕೃತೀಃ ಸಾನಂದೋ ಗೃಹಮಾವಿಶತ್ ॥ ೧ ॥**
**ತತ್ರಾದೃಷ್ಟ್ವಾ ಪ್ರಿಯಾಂ ರಾಜಾ ಕಿಮೇತದಿತಿ ವಿಹ್ವಲಃ ।**
**ಯಾ ಪುರಾ ಮಂದಿರಂ ತಸ್ಯಾಃ ಪ್ರವಿಷ್ಟೇ ಮಯಿ ಶೋಭನಾ ॥ ೨ ॥**
**ಹಸಂತೀ ಮಾಮುಪಾಯಾತಿ ಸಾ ಕಿಂ ನೈವಾದ್ಯ ದೃಶ್ಯತೇ ।**
**ಇತ್ಯಾತ್ಮನ್ಯೇವ ಸಂಚಿಂತ್ಯ ಮನಸಾಽತಿವಿದೂಯತಾ ॥ ೩ ॥**
**ಪಪ್ರಚ್ಛ ದಾಸೀನಿಕರಂ ಕುತೋ ವಃ ಸ್ವಾಮಿನೀ ಶುಭಾ ।**
**ನಾಯಾತಿ ಮಾಂ ಯಥಾ ಪೂರ್ವಂ ಮತ್ಪ್ರಿಯಾ ಪ್ರಿಯದರ್ಶನಾ ॥ ೪ ॥**

೧-೪. ಶ್ರೀ ಮಹಾದೇವನಿಂತೆಂದನು : ಅನಂತರ ದಶರಥರಾಜನು ರಾಮನ ಏಳಿಗೆಗಾಗಿ (ಪಟ್ಟಾಭಿಷೇಕದ ವ್ಯವಸ್ಥೆಯನ್ನು ) ಕುರಿತು ಪ್ರಜೆಗಳಿಗೂ ಮಂತ್ರಿಗಳಿಗೂ ಅಪ್ಪಣೆಮಾಡಿ ಆನಂದದಿಂದ ಮನೆಗೆ ಬಂದನು. ಅಲ್ಲಿ ರಾಜನು ಪ್ರಿಯಳಾದ ಹೆಂಡತಿಯಾದ (ಕೈಕೇಯಿಯನ್ನು) ಕಾಣದೆ, ಇದೇನು ? ಎಂದು ಚಿಂತಾಕ್ರಾಂತನಾಗಿ ಮನಸ್ಸಿನಲ್ಲಿಯೇ 'ಯಾವಾಕೆಯು ನಾನು ಮನೆಯನ್ನು ಪ್ರವೇಶಿಸಿದೊಡನೆಯೇ ನಗುತ್ತಾ ಸುಮುಖಿಯಾಗಿ ನನ್ನನ್ನು ಎದುರುಗೊಳ್ಳುತ್ತಿದ್ದಳೋ ಆಕೆಯು ಈಗೇಕೆ ಕಾಣಿಸಿಕೊಳ್ಳುತ್ತಿಲ್ಲ ?' ಎಂದು ಯೋಚಿಸುತ್ತಾ ಬಹಳವಾಗಿ ತಳಮಳಗೊಂಡ ಮನಸ್ಸಿನಿಂದ ದಾಸಿಯರ ಗುಂಪನ್ನು ಕುರಿತು 'ನಿಮ್ಮ ಯಜಮಾನಿಯು ಎಲ್ಲಿ ? ಎಂದಿನಂತೆ ನನ್ನನ್ನು ಎದುರುಗೊಳ್ಳಲಿಲ್ಲವೇಕೆ ? ಪ್ರಿಯದರ್ಶನಳೂ ನನಗೆ ಪ್ರೀತಿಪಾತ್ರಳೂ ಆದ ಅವಳೆಲ್ಲಿ?' ಎಂದು ಕೇಳಿದನು.

**ತಾ ಊಚುಃ ಕ್ರೋಧಭವನಂ ಪ್ರವಿಷ್ಟಾ ನೈವ ವಿದ್ಮಹೇ ।**
**ಕಾರಣಂ ತತ್ರ ದೇವ ತ್ವಂ ಗತ್ವಾ ನಿಶ್ಚೇತುಮರ್ಹಸಿ ॥ ೫ ॥**
**ಇತ್ಯುಕ್ತೋ ಭಯಸಂತ್ರಸ್ತೋ ರಾಜಾ ತಸ್ಯಾಃ ಸಮೀಪಗಃ ।**
**ಉಪವಿಶ್ಯ ಶನೈರ್ದೇಹಂ ಸ್ಪೃಶನ್ ವೈ ಪಾಣಿನಾಽಬ್ರವೀತ್ ॥ ೬ ॥**

೫-೬. 'ಎಲೈ ಸ್ವಾಮಿಯೆ, ಆಕೆಯು ಕೋಪಾಗಾರವನ್ನು ಹೊಕ್ಕಿರುತ್ತಾಳೆ. ನಾವು ಕಾರಣವನ್ನರಿಯೆವು. ನೀವೇ ಹೋಗಿ ತಿಳಿದುಕೊಳ್ಳಿರಿ' ಎಂದು ಆ (ದಾಸಿಯರು) ಹೇಳಿದರು. ಆಗ ರಾಜನು ಹೆದರಿದವನಾಗಿ ಆಕೆಯ ಸಮೀಪಕ್ಕೆ ಹೋಗಿ ಕುಳಿತು ಮೆಲ್ಲನೆ ತನ್ನ ಕೈಯಿಂದ ಅವಳ ಮೈಯನ್ನು ತಡವುತ್ತಾ ಹೀಗೆಂದನು.

**ಕಿಂ ಶೇಷೇ ವಸುಧಾಪೃಷ್ಠೇ ಪರ್ಯಂಕಾದೀನ್ ವಿಹಾಯ ಚ ।**
**ಮಾಂ ತ್ವಂ ಖೇದಯಸೇ ಭೀರು ಯತೋ ಮಾಂ ನಾವಭಾಷಸೇ ॥ ೭ ॥**
**ಅಲಂಕಾರಂ ಪರಿತ್ಯಜ್ಯ ಭೂಮೌ ಮಲಿನವಾಸಸಾ ।**
**ಕಿಮರ್ಥಂ ಬ್ರೂಹಿ ಸಕಲಂ ವಿಧಾಸ್ಯೇ ತವ ವಾಂಛಿತಮ್ ॥ ೮ ॥**
**ಕೋ ವಾ ತವಾಹಿತಂ ಕರ್ತಾ ನಾರೀ ವಾ ಪುರುಷೋಽಪಿ ವಾ ।**
**ಸ ಮೇ ದಂಡ್ಯಶ್ಚ ವಧ್ಯಶ್ಚ ಭವಿಷ್ಯತಿ ನ ಸಂಶಯಃ ॥ ೯ ॥**
**ಬ್ರೂಹಿ ದೇವಿ ಯಥಾ ಪ್ರೀತಿಸ್ತದವಶ್ಯಂ ಮಮಾಗ್ರತಃ ।**
**ತದಿದಾನೀಂ ಸಾಧಯಿಷ್ಯೇ ಸುದುರ್ಲಭಮಪಿ ಕ್ಷಣಾತ್ ॥ ೧೦ ॥**

೭-೧೦. 'ಎಲೈ ಹೆದರುವ ಸ್ವಭಾವದವಳೆ, ಮಂಚವೇ ಮುಂತಾದ ಸೌಕರ್ಯಗಳನ್ನು ಬಿಟ್ಟು ನೆಲದ ಮೇಲೆ ಏಕೆ ಮಲಗಿರುವೆ ? ನನ್ನನ್ನು ಮಾತನಾಡಿಸದೆ ದುಃಖವನ್ನೇಕೆ ಉಂಟುಮಾಡಿರುವೆ ? ಒಡವೆಗಳನ್ನು ಬಿಸುಟು ನೆಲದ ಮೇಲೆ ಕೊಳೆಬಟ್ಟೆಯಿಂದ ಕೂಡಿದವಳಾಗಿ ಏಕೆ ಇದ್ದೀಯೆ ? ಎಲ್ಲವನ್ನೂ ಹೇಳು. ನಿನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡುವೆನು. ನಿನಗೆ ಅಹಿತವಾದದ್ದನ್ನು ಮಾಡಿದ ಗಂಡಸಾಗಲಿ ಹೆಂಗಸಾಗಲಿ ಯಾರು ? ಅಂಥವನು ನನ್ನಿಂದ ಶಿಕ್ಷಿಸಲ್ಪಡಲು ಮತ್ತು ಕೊಲ್ಲಲ್ಪಡಲು ತಕ್ಕವನಾಗುವನು. ಇದರಲ್ಲಿ ಸಂಶಯವಿಲ್ಲ. ಎಲೌ ದೇವಿಯೆ, ನಿನಗೆ ನನ್ನಲ್ಲಿರುವ ನಂಬಿಕೆ (ಪ್ರೀತಿ)ಗೆ ತಕ್ಕಂತೆ ಅವಶ್ಯವಾಗಿ ಹೇಳು. ಅದು ಎಷ್ಟೇ ಕಷ್ಟಕರವಾಗಿದ್ದರೂ ಕ್ಷಣಮಾತ್ರದಲ್ಲಿ ಸಾಧಿಸಿಕೊಡುವೆನು.

**ಜಾನಾಸಿ ತ್ವಂ ಮಮ ಸ್ವಾಂತಂ ಪ್ರಿಯಂ ಮಾಂ ಸ್ವವಶೇ ಸ್ಥಿತಮ್ ।**
**ತಥಾಪಿ ಮಾಂ ಖೇದಯಸೇ ವೃಥಾ ತವ ಪರಿಶ್ರಮಃ ॥ ೧೧ ॥**
**ಬ್ರೂಹಿ ಕಂ ಧನಿನಂ ಕುರ್ಯಾಂ ದರಿದ್ರಂ ತೇ ಪ್ರಿಯಂಕರಮ್ ।**
**ಧನಿನಂ ಕ್ಷಣಮಾತ್ರೇಣ ನಿರ್ಧನಂ ಚ ತವಾಹಿತಮ್ ॥ ೧೨ ॥**
**ಬ್ರೂಹಿ ಕಂ ವಾ ವಧಿಷ್ಯಾಮಿ ವಧಾರ್ಹೋ ವಾ ವಿಮೋಕ್ಷ್ಯತೇ ।**
**ಕಿಮತ್ರ ಬಹುನೋಕ್ತೇನ ಪ್ರಾಣಾನ್ ದಾಸ್ಯಾಮಿ ತೇ ಪ್ರಿಯೇ ॥ ೧೩ ॥**
**ಮಮ ಪ್ರಾಣಾತ್ ಪ್ರಿಯತರೋ ರಾಮೋ ರಾಜೀವಲೋಚನಃ ।**
**ತಸ್ಯೋಪರಿ ಶಪೇ ಬ್ರೂಹಿ ತ್ವದ್ಧಿತಂ ತತ್ಕರೋಮ್ಯಹಮ್ ॥ ೧೪ ॥**

೧೧-೧೪. ನೀನು ನನ್ನ ಅಂತರಂಗವನ್ನು ಬಲ್ಲವಳು. ನಿನ್ನ ಅಧೀನದಲ್ಲಿರುವ ಪ್ರಿಯನಾದ ನನ್ನನ್ನು ತಿಳಿದೂ ದುಃಖಕ್ಕೆ ಈಡುಮಾಡಿರುವೆ. ಇದು ನಿನಗೆ ವ್ಯರ್ಥಶ್ರಮವಲ್ಲವೆ? ನಿನಗೆ ಬೇಕಾದವನಾದ ಯಾವ ದರಿದ್ರನನ್ನು ನಾನು ಧನವಂತನನ್ನಾಗಿ ಮಾಡಲಿ ? ಅಥವಾ ನಿನಗೆ ಬೇಡದವನಾದ ಯಾವ ಧನಿಕನನ್ನು

ನಿರ್ಧನನನ್ನಾಗಿ ಮಾಡಲಿ ? ಯಾವನನ್ನು ಸಂಹಾರಮಾಡಲಿ ; ಅಥವಾ ವಧೆಗೆ ಅರ್ಹನಾದವನನ್ನು ಬಿಡುಗಡೆಮಾಡಲಿ ? ಎಲೈ ಪ್ರಿಯಳೆ, ಬಹಳ ಹೇಳಿದ್ದರಿಂದೇನು ? ನಿನಗೆ ನನ್ನ ಪ್ರಾಣಗಳನ್ನಾದರೂ ಅರ್ಪಿಸಿಬಿಡುವೆನು. ಕಮಲದಂತೆ ಕಣ್ಣುಗಳುಳ್ಳ ರಾಮನು ನನಗೆ ಪ್ರಾಣಕ್ಕಿಂತ ಹೆಚ್ಚಿನವನು. ಅವನ ಮೇಲೆ ಆಣೆಯಿಟ್ಟು ಹೇಳುವೆನು. ನಿನಗೆ ಇಷ್ಟವಾದದ್ದು ಯಾವದೋ ಅದನ್ನು ಮಾಡುವೆನು. ಹೇಳು.

**ಇತಿ ಬ್ರುವಾಣಂ ರಾಜಾನಂ ಶಪಂತಂ ರಾಘವೋಪರಿ ।**
**ಶನೈರ್ವಿಸೃಜ್ಯ ನೇತ್ರೇ ಸಾ ರಾಜಾನಂ ಪ್ರತ್ಯಭಾಷತ ॥ ೧೫ ॥**
**ಯದಿ ಸತ್ಯಪ್ರತಿಜ್ಞೋಽಸಿ ಶಪಥಂ ಕುರುಷೇ ಯದಿ ।**
**ಯಾಚ್ಞಾಂ ಮೇ ಸಫಲಾಂ ಕರ್ತುಂ ಶೀಘ್ರಮೇವ ತ್ವಮರ್ಹಸಿ ॥ ೧೬ ॥**
**ಪೂರ್ವಂ ದೇವಾಸುರೇ ಯುದ್ಧೇ ಮಯಾ ತ್ವಂ ಪರಿರಕ್ಷಿತಃ ।**
**ತದಾ ವರದ್ವಯಂ ದತ್ತಂ ತ್ವಯಾ ಮೇ ತುಷ್ಟಚೇತಸಾ ॥ ೧೭ ॥**
**ತದ್ದ್ವಯಂ ನ್ಯಾಸಭೂತಂ ಮೇ ಸ್ಥಾಪಿತಂ ತ್ವಯಿ ಸುವ್ರತ**
**ತತ್ರೈಕೇನ ವರೇಣಾಶು ಭರತಂ ಮೇ ಪ್ರಿಯಂ ಸುತಮ್ ॥ ೧೮ ॥**
**ಏಭಿಃ ಸಂಭೃತಸಂಭಾರೈರ್ಯೌವರಾಜ್ಯೇಽಭಿಷೇಚಯ ।**
**ಅಪರೇಣ ವರೇಣಾಶು ರಾಮೋ ಗಚ್ಛತು ದಂಡಕಾನ್ ॥ ೧೯ ॥**

೧೫-೧೯. ಹೀಗೆ ರಾಮನಮೇಲೆ ಆಣೆಯಿಟ್ಟು ಹೇಳುತ್ತಿರುವ ರಾಜನನ್ನು ಮೆಲ್ಲನೆ ಕಣ್ಣುತೆರೆದು ನೋಡಿದ ಆಕೆಯು ಪ್ರತ್ಯುತ್ತರವನ್ನು ಕೊಟ್ಟಳು. ಏನೆಂದರೆ : '(ರಾಜನೆ) ನೀನು ಸತ್ಯಪ್ರತಿಜ್ಞನಾದರೆ, ಹಾಗೂ ಶಪಥಮಾಡುವೆಯಾದರೆ, ನನ್ನ ಪ್ರಾರ್ಥನೆಯನ್ನು ಬೇಗನೆ ಸಫಲಗೊಳಿಸಲು ನೀನು ತಕ್ಕವನಾಗು. ಹಿಂದೆ ದೇವಾಸುರರ ಯುದ್ಧಸಮಯದಲ್ಲಿ ನೀನು ನನ್ನಿಂದ ಕಾಪಾಡಲ್ಪಟ್ಟಿರುವೆ. ಆಗ ಸಂತುಷ್ಟಮನಸ್ಸಿನ ವನಾದ ನಿನ್ನಿಂದ ನನಗೆ ಎರಡು ವರಗಳು ಕೊಡಲ್ಪಟ್ಟವು. ಈಗ ಅವುಗಳಲ್ಲಿ ಒಂದರಿಂದ ನನ್ನ ಪ್ರಿಯಪುತ್ರನಾದ ಭರತನನ್ನು ಈಗ ಸಿದ್ಧಗೊಳಿಸಲ್ಪಟ್ಟಿರುವ ಪದಾರ್ಥಗಳಿಂದ ಯೌವರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡು. ಮತ್ತೊಂದು ವರದಿಂದ ರಾಮನು ದಂಡಕಾರಣ್ಯಕ್ಕೆ ಹೋಗಲಿ.

**ಮುನಿವೇಷಧರಃ ಶ್ರೀಮಾನ್ ಜಟಾವಲ್ಕಲಭೂಷಣಃ ।**
**ಚತುರ್ದಶ ಸಮಾಸ್ತತ್ರ ಕಂದಮೂಲಫಲಾಶನಃ ॥ ೨೦ ॥**
**ಪುನರಾಯಾತು ತಸ್ಯಾಂತೇಽವನೇ ವಾ ತಿಷ್ಠತು ಸ್ವಯಮ್ ।**
**ಪ್ರಭಾತೇ ಗಚ್ಛತು ವನಂ ರಾಮೋ ರಾಜೀವಲೋಚನಃ ॥ ೨೧ ॥**

**ಯದಿ ಕಿಂಚಿದ್ ವಿಳಂಬೇತ ಪ್ರಾಣಾಂಸ್ತ್ಯಕ್ಷ್ಯೇ ತವಾಗ್ರತಃ ।**
**ಭವ ಸತ್ಯಪ್ರತಿಜ್ಞಸ್ತ್ವಮೇತದೇವ ಮಮ ಪ್ರಿಯಮ್ ॥ ೨೨ ॥**

೨೦-೨೨. ಶ್ರೀರಾಮನು ಮುನಿಗಳ ವೇಷವನ್ನು ಧರಿಸಿ ಜಟಾವಲ್ಕಲಗಳನ್ನುಟ್ಟು ಹದಿನಾಲ್ಕು ವರ್ಷಗಳ ಕಾಲ ಕಾಡಿನಲ್ಲಿ ಕಂದಮೂಲಫಲಗಳನ್ನು ತಿನ್ನುತ್ತಾ ಇದ್ದುಕೊಂಡಿರಲಿ. ಆ ಅವಧಿಯ ಕೊನೆಯಲ್ಲಿ ಹಿಂತಿರುಗಲಿ, ಅಥವಾ ಅವನೇ ಇಷ್ಟಪಟ್ಟರೆ ಕಾಡಿನಲ್ಲಿಯೇ ಇದ್ದುಕೊಂಡಿರಲಿ. ರಾಜೀವನೇತ್ರರಾಮನು ನಾಳೆ ಬೆಳಗ್ಗೆ ಕಾಡಿಗೆ ಹೊರಡಲಿ. ಒಂದು ವೇಳೆ ಅವನು ಸ್ವಲ್ಪವಾದರೂ ತಡಮಾಡಿದರೆ ನಿನ್ನ ಎದುರಿನಲ್ಲೇ ನಾನು ಪ್ರಾಣತ್ಯಾಗ ಮಾಡಿಬಿಡುವೆನು. ನೀನು ಸತ್ಯಪ್ರತಿಜ್ಞನಾಗು. ಇದೇ ನನಗೆ ಬೇಕಾದದ್ದು.'

**ಶ್ರುತ್ವೈತದ್ದಾರುಣಂ ವಾಕ್ಯಂ ಕೈಕೇಯ್ಯಾ ರೋಮಹರ್ಷಣಮ್ ।**
**ನಿಪಪಾತ ಮಹೀಪಾಲೋ ವಜ್ರಾಹತ ಇವಾಚಲಃ ॥ ೨೩ ॥**
**ಶನೈರುನ್ಮೀಲ್ಯ ನಯನೇ ವಿಮೃಜ್ಯ ಪರಯಾ ಭಿಯಾ ।**
**ದುಃಸ್ವಪ್ನೋ ವಾ ಮಯಾ ದೃಷ್ಟೋ ಹ್ಯಥವಾ ಚಿತ್ತವಿಭ್ರಮಃ ॥ ೨೪ ॥**
**ಇತ್ಯಾಲೋಕ್ಯ ಪುರಃ ಪತ್ನೀಂ ವ್ಯಾಘ್ರೀಮಿವ ಪುರಃಸ್ಥಿತಾಮ್ ।**
**ಕಿಮಿದಂ ಭಾಷಸೇ ಭದ್ರೇ ಮಮ ಪ್ರಾಣಹರಂ ವಚಃ ॥ ೨೫ ॥**
**ರಾಮಃ ಕಮಪರಾಧಂ ತೇ ಕೃತವಾನ್ ಕಮಲೇಕ್ಷಣಃ ।**

೨೩-೨೫. ರೋಮಾಂಚಕರವೂ ಕ್ರೂರವೂ ಆದ ಕೈಕೇಯಿಯ ಮಾತನ್ನು ಕೇಳಿ ರಾಜನು ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟದಂತೆ ಬಿದ್ದುಬಿಟ್ಟನು. ನಿಧಾನವಾಗಿ ಎರಡು ಕಣ್ಣುಗಳನ್ನು ತಿಕ್ಕಿ ತೆರೆದವನಾಗಿ ಬಹಳವಾದ ಹೆದರಿಕೆಯಿಂದ 'ಓಹೊ, ನಾನು ಕೆಟ್ಟಕನಸನ್ನು ಕಂಡೆನೊ ? ಅಥವಾ ನನಗೆ ಬುದ್ಧಿ ವಿಕಲ್ಪವಾಗಿರಬಹುದೆ ?' ಎಂದುಕೊಂಡು ಹೆಣ್ಣುಹುಲಿಯಂತೆ ಮುಂದುಗಡೆ ಇರುವ ಆಕೆಯನ್ನು ಕುರಿತು 'ಎಲೌ ಭದ್ರೆ, ನೀನೇನು ಮಾತನಾಡುತ್ತಿರುವೆ ? ನನ್ನ ಪ್ರಾಣಗಳು ನಿಲ್ಲಲಾರವಲ್ಲವೆ ?' ಕಮಲನಯನ ರಾಮನು ನಿನಗೆ ಯಾವ ಅಪರಾಧಮಾಡಿದನು ?

**ಮಮಾಗ್ರೇ ರಾಘವಗುಣಾನ್ ವರ್ಣಯಸ್ಯನಿಶಂ ಶುಭಾನ್ ।**
**ಕೌಸಲ್ಯಾಂ ಮಾಂ ಸಮಂ ಪಶ್ಯನ್ ಶುಶ್ರೂಷಾಂ ಕುರುತೇ ಸದಾ ॥ ೨೬ ॥**
**ಇತಿ ಬ್ರುವಂತೀ ತ್ವಂ ಪೂರ್ವಮಿದಾನೀಂ ಭಾಷಸೇಽನ್ಯಥಾ ।**
**ರಾಜ್ಯಂ ಗೃಹಾಣ ಪುತ್ರಾಯ ರಾಮಸ್ತಿಷ್ಠತು ಮಂದಿರೇ ॥ ೨೭ ॥**
**ಅನುಗೃಹ್ಣೀಷ್ವ ಮಾಂ ವಾಮೇ ರಾಮಾನ್ನಾಸ್ತಿ ಭಯಂ ತವ ।**
**ಇತ್ಯುಕ್ತ್ವಾಽಶ್ರುಪರೀತಾಕ್ಷಃ ಪಾದಯೋರ್ನಿಪಪಾತ ಹ ॥ ೨೮ ॥**

೨೬-೨೮. 'ನನ್ನೆದುರಿಗೆ ಯಾವಾಗಲೂ ರಾಮನ ಸದ್ಗುಣಗಳನ್ನು ನೀನು ವರ್ಣಿಸುತ್ತಿದ್ದೆಯಲ್ಲವೆ ? (ರಾಮನು) ನನ್ನನ್ನೂ ಕೌಸಲ್ಯೆಯನ್ನೂ ಒಂದೇ ರೀತಿಯಾಗಿ ಕಾಣುತ್ತಾ ಯಾವಾಗಲೂ ಸೇವಿಸುತ್ತಾನೆ - ಎಂದು ಈ ಮೊದಲು ಹೇಳುತ್ತಿದ್ದವಳು ಈಗ ಬೇರೆಯ ಮಾತನ್ನಾಡುತ್ತಿರುವೆಯಲ್ಲ ? ನಿನ್ನ ಮಗನಿಗೆ ರಾಜ್ಯವನ್ನು ಬೇಕಾದರೆ ತೆಗೆದುಕೊ. ರಾಮನು ಮನೆಯಲ್ಲಿದ್ದುಕೊಂಡಿರಲಿ. ಎಲೌ ವಕ್ರಳೆ, ನನ್ನನ್ನು ಅನುಗ್ರಹಿಸು. ನಿನಗೆ ರಾಮನಿಂದೇನೂ ಭಯವಿಲ್ಲ.' ಹೀಗೆಂದು ಹೇಳಿ ಕಣ್ಣೀರಿನಿಂದ ಕೂಡಿದ ರಾಜನು ಆಕೆಯ ಕಾಲುಗಳಿಗೆ ಬಿದ್ದನು.

**ಕೈಕೇಯಿ ಪ್ರತ್ಯುವಾಚೇದಂ ಸಾಪಿ ರಕ್ತಾಂತಲೋಚನಾ ।**
**ರಾಜೇಂದ್ರ ಕಿಂ ತ್ವಂ ಭ್ರಾಂತೋಽಸಿ ಉಕ್ತಂ ತದ್ಭಾಷಸೇಽನ್ಯಥಾ ॥ ೨೯ ॥**
**ಮಿಥ್ಯಾ ಕರೋಷಿ ಚೇತ್ ಸ್ವೀಯಂ ಭಾಷಿತಂ ನರಕೋ ಭವೇತ್ ।**
**ವನಂ ನ ಗಚ್ಛೇದ್ಯದಿ ರಾಮಚಂದ್ರಃ**
**ಪ್ರಭಾತಕಾಲೇಽಜಿನಚೀರಯುಕ್ತಃ ।**
**ಉದ್ಬಂಧನಂ ವಾ ವಿಷಭಕ್ಷಣಂ ವಾ**
**ಕೃತ್ವಾ ಮರಿಷ್ಯೇ ಪುರತಸ್ತವಾಹಮ್ ॥ ೩೦ ॥**
**ಸತ್ಯಪ್ರತಿಜ್ಞೋಽಹಮಿತೀಹ ಲೋಕೇ**
**ವಿಡಂಬಸೇ ಸರ್ವಸಭಾಂತರೇಷು ।**
**ರಾಮೋಪರಿ ತ್ವಂ ಶಪಥಂ ಚ ಕೃತ್ವಾ**
**ಮಿಥ್ಯಾಪ್ರತಿಜ್ಞೋ ನರಕಂ ಪ್ರಯಾಹಿ ॥ ೩೧ ॥**

೨೯-೩೧. ಕೆಂಪಾದ ಕಣ್ಣುಗಳುಳ್ಳ ಆ ಕೈಕೇಯಿಯಾದರೋ ಹೀಗೆ ಪ್ರತ್ಯುತ್ತರಕೊಟ್ಟಳು. ''ಎಲೈ ರಾಜಶ್ರೇಷ್ಠನೆ, ನೀನು ಭ್ರಾಂತನಾಗಿರುವೆಯೊ ? ಹೇಳಿದ್ದಕ್ಕೆ ವಿರುದ್ಧವಾಗಿ ಮಾತನಾಡುತ್ತಿರುವೆಯಲ್ಲ ? ನಿನ್ನ ಮಾತನ್ನೇ ಸುಳ್ಳಾಗಿಸುವೆಯಾದರೆ ನರಕವಾದೀತು. ನಾಳೆಯ ಬೆಳಗ್ಗೆ ಶ್ರೀರಾಮನು ಜಟಾಚೀರಧಾರಿಯಾಗಿ ಕಾಡಿಗೆ ಹೋಗದೆ ಹೋದರೆ ನಾನು ನೇಣುಹಾಕಿಕೊಂಡಾಗಲಿ ವಿಷವನ್ನು ತಿಂದಾಗಲಿ, ನಿನ್ನ ಎದುರಿಗೇ ಸಾಯಲಿರುವೆನು. 'ನಾನು ಸತ್ಯಪ್ರತಿಜ್ಞನು' ಎಂದು ಈ ಲೋಕದಲ್ಲಿ ಎಲ್ಲಾ ಸಭಾ (ಸದರ) ಮುಂದೆ ಕೊಚ್ಚಿಕೊಳ್ಳುತ್ತಿರುವೆ. ರಾಮನಮೇಲೆ ಆಣೆಯಿಟ್ಟು ನೀನು ಮಾಡಿದ ಪ್ರತಿಜ್ಞೆಯು ಸುಳ್ಳಾಗಲಿ ; ನೀನು ನರಕಕ್ಕೆ ಬೀಳುವವನಾಗು.''

**ಇತ್ಯುಕ್ತಃ ಪ್ರಿಯಯಾ ದೀನೋ ಮಗ್ನೋ ದುಃಖಾರ್ಣವೇ ನೃಪಃ ।**
**ಮೂರ್ಛಿತಃ ಪತಿತೋ ಭೂಮೌ ವಿಸಂಜ್ಞೋ ಮೃತಕೋ ಯಥಾ ॥ ೩೨ ॥**

**ಏವಂ ರಾತ್ರಿರ್ಗತಾ ತಸ್ಯ ದುಃಖಾತ್ ಸಂವತ್ಸರೋಪಮಾ ।**
**ಅರುಣೋದಯಕಾಲೇ ತು ವಂದಿನೋ ಗಾಯಕಾ ಜಗುಃ ॥ ೩೩ ॥**
**ನಿವಾರಯಿತ್ವಾ ತಾನ್ ಸರ್ವಾನ್ ಕೈಕೇಯಿೀ ರೋಷಮಾಸ್ಥಿತಾ ।**

೩೨-೩೩. ಈ ರೀತಿಯಾಗಿ ಹೆಂಡತಿಯಿಂದ ಹೇಳಲ್ಪಟ್ಟ ದೀನನಾದ ರಾಜನು ದುಃಖಸಾಗರದಲ್ಲಿ ಮುಳುಗಿದವನಾಗಿ ಜ್ಞಾನವಿಲ್ಲದೆ ಸತ್ತುಬಿದ್ದಿರುವ ವ್ಯಕ್ತಿಯಂತೆ ಮೂರ್ಛಿತನಾಗಿ ನೆಲದಮೇಲೆ ಉರುಳಿದನು. ಹೀಗೆ ದುಃಖದಿಂದ ಕೂಡಿದ ಅವನಿಗೆ ವರ್ಷದಷ್ಟು ಉದ್ದವಾದ ರಾತ್ರಿಯು ಕಳೆಯಿತು. ಅರುಣೋದಯದ ಸಮಯದಲ್ಲಿ ವಂದಿಮಾಗಧರೂ ಗಾಯಕರೂ ಹಾಡಲಾರಂಭಿಸಿದರು. ಕೈಕೇಯಿಯು ಅವರನ್ನೆಲ್ಲ ತಡೆಗಟ್ಟಿ ಕೋಪದಿಂದ ಕುಳಿತಳು.

**ತತಃ ಪ್ರಭಾತಸಮಯೇ ಮಧ್ಯಕಕ್ಷಮುಪಸ್ಥಿತಾಃ ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಋಷಯಃ ಕನ್ಯಕಾಸ್ತಥಾ ॥ ೩೪ ॥**
**ಛತ್ರಂ ಚ ಚಾಮರಂ ದಿವ್ಯಂ ಗಜೋ ವಾಜೀ ತಥೈವ ಚ ।**
**ಅನ್ಯಾಶ್ಚ ವಾರಮುಖ್ಯಾ ಯಾ ಪೌರಜಾನಪದಾಸ್ತಥಾ ॥ ೩೫ ॥**
**ವಸಿಷ್ಠೇನ ಯಥಾಜ್ಞಪ್ತಂ ತತ್ಸರ್ವಂ ತತ್ರ ಸಂಸ್ಥಿತಮ್ ॥**

೩೪-೩೫. ಅನಂತರ ಬೆಳಗಿನವೇಳೆಗೆ ಸರಿಯಾಗಿ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಋಷಿಗಳೂ, ಕನ್ನಿಕೆಯರೂ ಅರಮನೆಯ ಮಧ್ಯದ ಅಂಗಳಕ್ಕೆ ಬಂದು ಸೇರಿದರು. ಹಾಗೆಯೇ ಛತ್ರಿ, ಚಾಮರ, ಆನೆ, ಕುದುರೆ, ಉಳಿದ ವೇಶ್ಯಾಸ್ತ್ರೀಯರು, ನಾಗರಿಕರೇ -ಮುಂತಾದ ಎಲ್ಲರೂ ಬಂದಿದ್ದರು. ವಸಿಷ್ಠರು ಯಾವರೀತಿ ಆಜ್ಞೆ ಮಾಡಿದ್ದರೋ ಹಾಗೆ ಸಮಸ್ತವೂ ಸಿದ್ಧವಾಗಿತ್ತು.

**ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ರಾತ್ರೌ ನಿದ್ರಾಂ ನ ಲೇಭಿರೇ ।**
**ಕದಾ ದ್ರಕ್ಷ್ಯಾಮಹೇ ರಾಮಂ ಪೀತಕೌಶೇಯವಾಸಸಮ್ ॥ ೩೬ ॥**
**ಸರ್ವಾಭರಣಸಂಪನ್ನಂ ಕಿರೀಟಕಟಕೋಜ್ಜ್ವಲಮ್ ।**
**ಕೌಸ್ತುಭಾಭರಣಂ ಶ್ಯಾಮಂ ಕಂದರ್ಪಶತಸುಂದರಮ್ ॥ ೩೭ ॥**
**ಅಭಿಷಿಕ್ತಂ ಸಮಾಯಾಂತಂ ಗಜಾರೂಢಂ ಸ್ಮಿತಾನನಮ್ ।**
**ಶ್ವೇತಚ್ಛತ್ರಧರಂ ತತ್ರ ಲಕ್ಷ್ಮಣಂ ಲಕ್ಷಣಾನ್ವಿತಮ್ ॥ ೩೮ ॥**
**ರಾಮಂ ಕದಾ ವಾ ದ್ರಕ್ಷ್ಯಾಮಃ ಪ್ರಭಾತಂ ವಾ ಕದಾ ಭವೇತ್ ।**
**ಇತ್ಯುತ್ಸುಕಧಿಯಃ ಸರ್ವೇ ಬಭೂವುಃ ಪುರವಾಸಿನಃ ॥ ೩೯ ॥**

೩೬-೩೯. ಹೆಂಗಸರು, ಬಾಲಕರು, ವಯಸ್ಕರು ಯಾರೊಬ್ಬರೂ ರಾತ್ರೆಯಲ್ಲಿ ನಿದ್ರೆಮಾಡಲಿಲ್ಲ. 'ಹಳದಿಯ ರೇಷ್ಮೆಯ ವಸ್ತ್ರವನ್ನುಟ್ಟು ಎಲ್ಲಾ ಆಭರಣಗಳಿಂದ

ಅಲಂಕೃತನಾಗಿ, ಕಿರೀಟ, ಕಡಗಗಳಿಂದ ಹೊಳೆಯುತ್ತಿರುವ, ಕೌಸ್ತುಭವೆಂಬ ಆಭರಣ ದಿಂದ ಕೂಡಿ ನೀಲವಾದ ಕಾಂತಿಯುಳ್ಳವನಾದ ನೂರು ಮನ್ಮಥರಷ್ಟು ಸುಂಧರನಾದ, ಪಟ್ಟಾಭಿಷಿಕ್ತನಾಗಿ ಮುಗುಳುನಗೆಯಿಂದ ಕೂಡಿ ಆನೆಯನ್ನೇರಿ ಬರುತ್ತಿರುವ ರಾಮ ನನ್ನೂ ಬಿಳಿಯ ಛತ್ರಿಯನ್ನು ಹಿಡಿದು (ರಾಮನೊಡನೆ) ಇರುವ ಲಕ್ಷಣಸಂಪನ್ನನಾದ ಲಕ್ಷ್ಮಣನನ್ನೂ ನಾವು ಯಾವಾಗ ಕಂಡೇವು ? ಯಾವಾಗ ಬೆಳಗಾದೀತು ?' ಹೀಗೆಂದು ಕುತೂಹಲದಿಂದ ಕೂಡಿದವರಾಗಿ ಪಟ್ಟಣಿಗರೆಲ್ಲರೂ ನಿರೀಕ್ಷಿಸುತ್ತಿದ್ದರು.

**ನೇದಾನೀಮುತ್ಥಿತೋ ರಾಜಾ ಕಿಮರ್ಥಂ ಚೇತಿ ಚಿಂತಯನ್ ।**
**ಸುಮಂತ್ರಃ ಶನಕೈಃ ಪ್ರಾಯಾದ್ಯತ್ರ ರಾಜಾಽವತಿಷ್ಠತೇ ॥ ೪೦ ॥**
**ವರ್ಧಯನ್ ಜಯಶಬ್ದೇನ ಪ್ರಣಮನ್ ಶಿರಸಾ ನೃಪಮ್ ।**
**ಅತಿಖಿನ್ನಂ ನೃಪಂ ದೃಷ್ಟ್ವಾ ಕೈಕೇಯೀಂ ಸಮಪೃಚ್ಛತ ॥ ೪೧ ॥**

೪೦-೪೧. ಸುಮಂತ್ರನಾದರೊ, ಇದೇನು ? ರಾಜನು ಇಷ್ಟುಹೊತ್ತಾದರೂ ಎದ್ದಿಲ್ಲವಲ್ಲ ? ಏಕೆ ? ಎಂದು ಯೋಚಿಸುತ್ತಾ ಮೆಲ್ಲನೆ ರಾಜನಿದ್ದಲ್ಲಿಗೆ ಬಂದನು. ಜಯ ಶಬ್ದದಿಂದ ರಾಜನನ್ನು ಅಭಿನಂದಿಸುತ್ತಾ ತಲೆಬಾಗಿ ನಮಸ್ಕರಿಸುತ್ತಾ ಬಹಳವಾಗಿ ದುಃಖಿತ ನಾದ ನೃಪನನ್ನು ಕಂಡು ಕೈಕೇಯಿಯನ್ನು ಕೇಳಿದನು.

**ದೇವಿ ಕೈಕೇಯಿ ವರ್ಧಸ್ವ ಕಿಂ ರಾಜಾ ದೃಶ್ಯತೇಽನ್ಯಥಾ ।**
**ತಮಾಹ ಕೈಕಯೀ ರಾಜಾ ರಾತ್ರೌ ನಿದ್ರಾಂ ನ ಲಬ್ಧವಾನ್ ॥ ೪೨ ॥**
**ರಾಮ ರಾಮೇತಿ ರಾಮೇತಿ ರಾಮಮೇವಾನುಚಿಂತಯನ್ ।**
**ಪ್ರಜಾಗರೇಣ ವೈ ರಾಜಾ ಹ್ಯಸ್ವಸ್ಥ ಇವ ಲಕ್ಷ್ಯತೇ ॥ ೪೩ ॥**
**ರಾಮಮಾನಯ ಶೀಘ್ರಂ ತ್ವಂ ರಾಜಾ ದ್ರಷ್ಟುಮಿಹೇಚ್ಛತಿ ।**

೪೨-೪೩. 'ದೇವಿ, ಕೈಕೇಯಿ, ನಿನಗೆ ಅಭಿವೃದ್ಧಿಯುಂಟಾಗಲಿ ; ರಾಜನು ಬೇರೆಯ ರೀತಿಯಲ್ಲಿ ಕಂಡುಬರುತ್ತಿರುವನಲ್ಲ !' -ಎಂದನು. ಕೈಕೇಯಿಯು ಅವನನ್ನು ಕುರಿತು 'ರಾಜನು ರಾತ್ರೆಯಲ್ಲಿ ನಿದ್ರೆಮಾಡಲಿಲ್ಲ ;ರಾಮ, ರಾಮ -ಎಂದು ರಾಮನನ್ನೇ ನೆನೆಯುತ್ತಾ ಎಚ್ಚರಗೊಂಡವನಾಗಿಯೇ ಇದ್ದುಕೊಂಡು ಅನಾರೋಗ್ಯದಿಂದ ಕೂಡಿರು ವಂತೆ ಕಂಡುಬರುತ್ತಿದಾನೆ. ನೀನಾದರೊ, ರಾಮನನ್ನು ಬೇಗನೆ ಕರೆದುಕೊಂಡು ಬಾ ; ರಾಜನು ನೋಡಲಿಚ್ಛಿಸುತ್ತಾನೆ'.

**ಸುಮಂತ್ರ ಉವಾಚ-**
**ಅಶ್ರುತ್ವಾ ರಾಜವಚನಂ ಕಥಂ ಗಚ್ಛಾಮಿ ಭಾಮಿನಿ ।**
**ತಚ್ಛ್ರುತ್ವಾ ಮಂತ್ರಿಣೋ ವಾಕ್ಯಂ ರಾಜಾ ಮಂತ್ರಿಣಮಬ್ರವೀತ್ ॥ ೪೪ ॥**

**ಸುಮಂತ್ರ ರಾಮಂ ದ್ರಕ್ಷ್ಯಾಮಿ ಶೀಘ್ರಮಾನಯ ಸುಂದರಮ್ ।**
**ಇತ್ಯುಕ್ತಸ್ತ್ವರಿತಂ ಗತ್ವಾ ಸುಮಂತ್ರೋ ರಾಮಮಂದಿರಮ್ ॥ ೪೫ ॥**
**ಅವಾರಿತಃ ಪ್ರವಿಷ್ಟೋಽಯಂ ತ್ವರಿತಂ ರಾಮಮಬ್ರವೀತ್ ॥**

೪೪-೪೫. (ಆಗ) ಸುಮಂತ್ರನಿಂತೆಂದನು : 'ಎಲೌ ತಾಯಿಯೆ, ರಾಜನ ಅಪ್ಪಣೆಯನ್ನು ಕೇಳದೆ ಹೇಗೆ ಹೋಗಲಿ ?' ಅದನ್ನು ಕೇಳಿದ ರಾಜನು ಮಂತ್ರಿಯನ್ನು ಕುರಿತು 'ಎಲೈ ಸುಮಂತ್ರನೆ, ರಾಮನನ್ನು ನೋಡಲಿಚ್ಛಿಸುತ್ತೇನೆ. ಸುಂದರನಾದ ಅವನನ್ನು ಬೇಗನೆ ಕರೆದುಕೊಂಡು ಬಾ' ಎಂದನು. ಕೂಡಲೆ ಸುಮಂತ್ರನು ರಾಮನ ಅರಮನೆಗೆ ಜಾಗ್ರತೆಯಾಗಿ ಹೋಗಿ ಅಲ್ಲಿ ಯಾರಿಂದಲೂ ತಡೆಯಲ್ಪಡದೆ ಈತನು ಒಳಗೆ ಹೊಕ್ಕು ಅವಸರದಿಂದ ರಾಮನನ್ನು ಕುರಿತು ಹೀಗೆಂದನು :

**ಶೀಘ್ರಮಾಗಚ್ಛ ಭದ್ರಂ ತೇ ರಾಮ ರಾಜೀವಲೋಚನ ।**
**ಪಿತುರ್ಗೇಹಂ ಮಯಾ ಸಾರ್ಧಂ ರಾಜಾ ತ್ವಾಂ ದ್ರಷ್ಟುಮಿಚ್ಛತಿ ॥ ೪೬ ॥**
**ಇತ್ಯುಕ್ತೋ ರಥಮಾರುಹ್ಯ ಸಂಭ್ರಮಾತ್ ತ್ವರಿತೋ ಯಯೌ ।**
**ರಾಮಃ ಸಾರಥಿನಾ ಸಾರ್ಧಂ ಲಕ್ಷ್ಮಣೇನ ಸಮನ್ವಿತಃ ॥ ೪೭ ॥**

೪೬-೪೭. 'ಎಲೈ ರಾಮನೆ, ನಿನಗೆ ಒಳ್ಳೆಯದಾಗಲಿ ; ರಾಜೀವಲೋಚನನೆ, ನನ್ನೊಡನೆ ತಂದೆಯ ಅರಮನೆಗೆ ಬರುವವನಾಗು. ರಾಜನು ನಿನ್ನನ್ನು ನೋಡಬಯಸಿದ್ದಾನೆ.' ಹೀಗೆನ್ನಲು ರಾಮನು ಬೇಗನೆ ಲಕ್ಷ್ಮಣನ ಜೊತೆ ಸಾರಥಿಯೊಡಗೂಡಿ ರಥವನ್ನೇರಿ ಹೊರಟನು.

**ಮಧ್ಯಕಕ್ಷೇ ವಸಿಷ್ಠಾದೀನ್ ಪಶ್ಯನ್ನೇವ ತ್ವರಾನ್ವಿತಃ ।**
**ಪಿತುಃ ಸಮೀಪಂ ಸಂಗಮ್ಯ ನನಾಮ ಚರಣೌ ಪಿತುಃ ॥ ೪೮ ॥**
**ರಾಮಮಾಲಿಂಗಿತುಂ ರಾಜಾ ಸಮುತ್ಥಾಯ ಸಸಂಭ್ರಮಃ ।**
**ಬಾಹೂ ಪ್ರಸಾರ್ಯ ರಾಮೇತಿ ದುಃಖಾನ್ಮಧ್ಯೇ ಪಪಾತ ಹ ॥ ೪೯ ॥**
**ಹಾಹೇತಿ ರಾಮಸ್ತಂ ಶೀಘ್ರಮಾಲಿಂಗ್ಯಾಂಕೇ ನ್ಯವೇಶಯತ್ ।**
**ರಾಜಾನಂ ಮೂರ್ಛಿತಂ ದೃಷ್ಟ್ವಾ ಚುಕ್ರುಶುಃ ಸರ್ವಯೋಷಿತಃ ॥ ೫೦ ॥**

೪೮-೫೦. ಮಧ್ಯದ ಅಂಗಳದಲ್ಲಿದ್ದ ವಸಿಷ್ಠರೇ ಮುಂತಾದವರನ್ನು ನೋಡುತ್ತಲೇ ಆತುರದಿಂದ ತಂದೆಯ ಸಮೀಪಕ್ಕೆ ಬಂದು ಎರಡು ಕಾಲುಗಳಿಗೂ ನಮಸ್ಕರಿಸಿದನು. ರಾಜನು ಶ್ರೀರಾಮನನ್ನು ಅಪ್ಪಿಕೊಳ್ಳುವದಕ್ಕಾಗಿ ಸಂಭ್ರಮದಿಂದ ಮೇಲೆದ್ದವನಾಗಿ ಎರಡು ತೋಳುಗಳನ್ನು ಚಾಚಿ ದುಃಖದಿಂದ ಹಾ ! ಹಾ ! ಎನ್ನುತ್ತಾ ಅಷ್ಟರಲ್ಲಿಯೇ

ಕುಸಿದುಬಿದ್ದನು. ರಾಮನು ಅವನನ್ನು ಬೇಗನೆ ತಬ್ಬಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಮೂರ್ಛೆಹೊಂದಿದ ರಾಜನನ್ನು ಕಂಡು ಎಲ್ಲಾ ಸ್ತ್ರೀಯರೂ ಅಳುತ್ತಿದ್ದರು.

**ಕಿಮರ್ಥಂ ರೋದನಮಿತಿ ವಸಿಷ್ಠೋಽಪಿ ಸಮಾವಿಶತ್ ।**
**ರಾಮಃ ಪ್ರಪಚ್ಛ ಕಿಮಿದಂ ರಾಜ್ಞೋ ದುಃಖಸ್ಯ ಕಾರಣಮ್ ॥ ೫೧ ॥**
**ಏವಂ ಪೃಚ್ಛತಿ ರಾಮೇ ಸಾ ಕೈಕೇಯೀ ರಾಮಮಬ್ರವೀತ್ ।**
**ತ್ವಮೇವ ಕಾರಣಂ ಹ್ಯತ್ರ ರಾಜ್ಞೋ ದುಃಖೋಪಶಾಂತಯೇ ॥ ೫೨ ॥**
**ಕಿಂಚಿತ್ ಕಾರ್ಯಂ ತ್ವಯಾ ರಾಮ ಕರ್ತವ್ಯಂ ನೃಪತೇರ್ಹಿತಮ್ ।**
**ಕುರು ಸತ್ಯಪ್ರತಿಜ್ಞಸ್ತ್ವಂ ರಾಜಾನಂ ಸತ್ಯವಾದಿನಮ್ ॥ ೫೩ ॥**

೫೧-೫೩. 'ಇದೇನು ಅಳುತ್ತಿರುವದು ?' ಏಕೆ ? ಎಂದು ವಸಿಷ್ಠನೂ ಅಲ್ಲಿಗೆ ಬಂದನು. ರಾಮನು 'ಇದೇನು ? ರಾಜನ ದುಃಖಕ್ಕೆ ಕಾರಣವೇನು ?' ಎಂದು ಕೇಳಿದನು. ಹೀಗೆ ರಾಮನು ಪ್ರಶ್ನಿಸಲಾಗಿ ಕೈಕೇಯಿಯು ರಾಮನನ್ನು ಕುರಿತು ಇಂತೆಂದಳು : 'ಎಲೈ ರಾಮನೆ, ರಾಜನ ಸಂಕಟಪರಿಹಾರಕ್ಕೆ ನೀನೇ ಕಾರಣನು. ಹೇಗೆಂದರೆ : ರಾಜನಿಗೆ ಹಿತವಾದ ಒಂದು ಚಿಕ್ಕ ಕೆಲಸವು ನಿನ್ನಿಂದಾಗಬೇಕಾಗಿದೆ. ಸತ್ಯಪ್ರತಿಜ್ಞನಾದ ನೀನು ರಾಜನನ್ನು ಸತ್ಯವಾದಿಯನ್ನಾಗಿ ಮಾಡುವವನಾಗು.

**ರಾಜ್ಞಾ ವರದ್ವಯಂ ದತ್ತಂ ಮಮ ಸಂತುಷ್ಟಚೇತಸಾ ।**
**ತ್ವದಧೀನಂ ತು ತತ್ಸರ್ವಂ ವಕ್ತುಂ ತ್ವಾಂ ಲಜ್ಜತೇ ನೃಪಃ ॥ ೫೪ ॥**
**ಸತ್ಯಪಾಶೇನ ಸಂಬದ್ಧಂ ಪಿತರಂ ತ್ರಾತುಮರ್ಹಸಿ ।**
**ಪುತ್ರಶಬ್ದೇನ ಚೈತದ್ಧಿ ನರಕಾತ್ ತ್ರಾಯತೇ ಪಿತಾ ॥ ೫೫ ॥**
**ರಾಮಸ್ತಯೋದಿತಂ ಶ್ರುತ್ವಾ ಶೂಲೇನಾಭಿಹತೋ ಯಥಾ ।**
**ವ್ಯಥಿತಃ ಕೈಕಯೀಂ ಪ್ರಾಹ ಕಿಂ ಮಾಮೇವಂ ಪ್ರಭಾಷಸೇ ॥ ೫೬ ॥**

೫೪-೫೬. ಸಂತುಷ್ಟಮನಸ್ಸಿನ ರಾಜನಿಂದ ನನಗೆ ಎರಡು ವರಗಳು ಕೊಡಲ್ಪಟ್ಟವು. ಆದರೆ ಅದೆಲ್ಲವೂ ನಿನ್ನ ಸ್ವಾಧೀನದಲ್ಲಿದೆ. ರಾಜನು ನಿನ್ನನ್ನು ಕುರಿತು ಹೇಳಲು ನಾಚಿಕೆಪಡುವನು. ಹೀಗೆ ಸತ್ಯದ ಪಾಶದಿಂದ ಕಟ್ಟಲ್ಪಟ್ಟಿರುವ ತಂದೆಯನ್ನು ನೀನು ಕಾಪಾಡಬೇಕಾಗಿದೆ. ತಂದೆಯು ನರಕದಿಂದ ಕಾಪಾಡಲ್ಪಟ್ಟರೆ ಅವನನ್ನೇ ಪುತ್ರನೆಂದು ಹೇಳುವರಷ್ಟೆ!' ಎಂದಳು. ಆಕೆಯು ಹೇಳಿದ್ದನ್ನು ಕೇಳಿದ ರಾಮನು ಶೂಲದಿಂದ ತಿವಿಯಲ್ಪಟ್ಟವನಂತೆ ಬಹಳ ದುಃಖಗೊಂಡವನಾಗಿ ಕೈಕೇಯಿಯನ್ನು ಕುರಿತು 'ಇದೇನು ನನ್ನನ್ನು ಕುರಿತು ಹೀಗೆ ಹೇಳುತ್ತಿರುವೆ ?'

**ಪಿತ್ರರ್ಥೇ ಜೀವಿತಂ ದಾಸ್ಯೇ ಪಿಬೇಯಂ ವಿಷಮುಲ್ಬಣಮ್ ।**
**ಸೀತಾಂ ತ್ಯಕ್ಷ್ಯೇಽಥ ಕೌಸಲ್ಯಾಂ ರಾಜ್ಯಂ ಚಾಪಿ ತ್ಯಜಾಮ್ಯಹಮ್ ॥ ೫೭ ॥**

**ಅನಾಜ್ಞಪ್ತೋಽಪಿ ಕುರುತೇ ಪಿತುಃ ಕಾರ್ಯಂ ಸ ಉತ್ತಮಃ ।**
**ಉಕ್ತಃ ಕರೋತಿ ಯಃ ಪುತ್ರಃ ಸ ಮಧ್ಯಮ ಉದಾಹೃತಃ ॥ ೫೮ ॥**
**ಉಕ್ತೋಽಪಿ ಕುರುತೇ ನೈವ ಸ ಪುತ್ರೋ ಮಲ ಉಚ್ಯತೇ ।**
**ಅತಃ ಕರೋಮಿ ತತ್ಸರ್ವಂ ಯನ್ಮಾಮಾಹ ಪಿತಾ ಮಮ ॥ ೫೯ ॥**
**ಸತ್ಯಂ ಸತ್ಯಂ ಕರೋಮ್ಯೇವ ರಾಮೋ ದ್ವಿರ್ನಾಭಿಭಾಷತೇ ।**

೫೭-೫೯. ಮುಂದುವರೆದು ''ನಾನು ತಂದೆಗಾಗಿ ಪ್ರಾಣವನ್ನಾದರೂ ಕೊಡುವೆನು. ಕ್ರೂರವಾದ ವಿಷವನ್ನು ಕುಡಿದೇನು. ಸೀತೆಯನ್ನಾಗಲಿ, ಕೌಸಲ್ಯೆಯನ್ನಾಗಲೀ ರಾಜ್ಯವನ್ನೇ ಆಗಲಿ ಬಿಟ್ಟುಬಿಡುವೆನು. ತಂದೆಯು ಅಪ್ಪಣೆಮಾಡದೆ ಹೋದರೂ ಪಿತೃವಿನ ಕರ್ತವ್ಯವನ್ನು ಅರಿತು ಯಾವನು ಮಾಡುವನೋ ಅವನು ಉತ್ತಮನು. ಹೇಳಿಸಿಕೊಂಡು ಅನಂತರ ಮಾಡುವವನು ಮಧ್ಯಮನು. ಹೇಳಿದರೂ ಮಾಡದೆಯೇ ಇರುವವನು ಮಲ(ಕೊಳೆ) ನೆನಿಸುವನು. ಆದ್ದರಿಂದ ತಂದೆಯು ಏನು ಹೇಳಿರುವನೋ ಅದೆಲ್ಲವನ್ನೂ ಮಾಡುವೆನು. ನಿಜವಾಗಿಯೂ ಖಂಡಿತವಾಗಿಯೂ ಮಾಡಿಯೇ ತೀರುವೆನು. ರಾಮನೆಂದರೆ ಎರಡು ಬಗೆಯ ಮಾತನಾಡುವವನಲ್ಲ'' ಎಂದನು.

**ಇತಿ ರಾಮಪ್ರತಿಜ್ಞಾಂ ಸಾ ಶ್ರುತ್ವಾ ವಕ್ತುಂ ಪ್ರಚಕ್ರಮೇ ।**
**ರಾಮ ತ್ವದಭಿಷೇಕಾರ್ಥಂ ಸಂಭಾರಾಃ ಸಂಭೃತಾಶ್ಚ ಯೇ ॥ ೬೦ ॥**
**ತೈರೇವ ಭರತೋಽವಶ್ಯಮಭಿಷೇಚ್ಯಃ ಪ್ರಿಯೋ ಮಮ ।**
**ಅಪರೇಣ ವರೇಣಾಶು ಚೀರವಾಸಾ ಜಟಾಧರಃ ॥ ೬೧ ॥**
**ವನಂ ಪ್ರಯಾಹಿ ಶೀಘ್ರಂ ತ್ವಮದ್ಯೈವ ಪಿತುರಾಜ್ಞಯಾ ।**
**ಚತುರ್ದಶ ಸಮಾಸ್ತತ್ರ ವಸ ಮುನ್ಯನ್ನಭೋಜನಃ ॥ ೬೨ ॥**
**ಏತದೇವ ಪಿತುಸ್ತೇಽದ್ಯ ಕಾರ್ಯಂ ತ್ವಂ ಕರ್ತುಮರ್ಹಸಿ ।**
**ರಾಜಾ ತು ಲಜ್ಜತೇ ವಕ್ತುಂ ತ್ವಾಮೇವಂ ರಘುನಂದನ ॥ ೬೩ ॥**

೬೦-೬೩. ಹೀಗೆ ರಾಮನು ಪ್ರತಿಜ್ಞೆಮಾಡಿದುದನ್ನು ಆಕೆಯು ಕೇಳಿ ಹೀಗೆ ಹೇಳಲಾರಂಭಿಸಿದಳು. ''ಎಲೈ ರಾಮನೆ, ನಿನ್ನ ಪಟ್ಟಾಭಿಷೇಕಕ್ಕಾಗಿ ಸಜ್ಜುಗೊಂಡಿರುವ ಸಾಮಗ್ರಿಗಳಿಂದಲೇ ನನಗೆ ಪ್ರಿಯನಾದ ಭರತನು ಪಟ್ಟಾಭಿಷಿಕ್ತನಾಗಲಿ. ಮತ್ತೊಂದು ವರದಿಂದ ನೀನು ಈಗಲೆ ತಂದೆಯ ಅಪ್ಪಣೆಯಂತೆ ಹದಿನಾಲ್ಕುವರ್ಷಗಳ ಕಾಲ ಕಾಡಿಗೆ ಹೊರಡುವವನಾಗು. ಅಲ್ಲಿ ಮುನಿಗಳಿಗೆ ಆಹಾರವಾಗಿರುವ (ಗೆಡ್ಡೆಗೆಣಸುಗಳನ್ನು ತಿಂದುಕೊಂಡು) ವಾಸಮಾಡುವವನಾಗು. ಇದೇ ನಿನ್ನ ತಂದೆಯು ನಿನಗೆ ವಿಧಿಸಿರುವ ಕರ್ತವ್ಯವು. ಇದನ್ನು ನೀನು ಮಾಡಬೇಕು. ರಘುನಂದನನೆ, ರಾಜನಾದರೊ, ಬಾಯಿಬಿಟ್ಟು ಹೀಗೆ ಹೇಳಲು ನಾಚಿಕೊಳ್ಳುತ್ತಿರುವನು.

**ಶ್ರೀರಾಮ ಉವಾಚ-**

**ಭರತಸ್ಯೈವ ರಾಜ್ಯಂ ಸ್ಯಾದಹಂ ಗಚ್ಛಾಮಿ ದಂಡಕಾನ್ ।**
**ಕಿಂ ತು ರಾಜಾ ನ ವಕ್ತೀಹ ಮಾಂ ನ ಜಾನೇಽತ್ರ ಕಾರಣಮ್ ॥ ೬೪ ॥**
**ಶ್ರುತ್ವೈತದ್ರಾಮವಚನಂ ದೃಷ್ಟ್ವಾ ರಾಮಂ ಪುರಃ ಸ್ಥಿತಮ್ ।**
**ಪ್ರಾಹ ರಾಜಾ ದಶರಥಃ ದುಃಖಿತೋ ದುಃಖಿತಂ ವಚಃ ॥ ೬೫ ॥**
**ಸ್ತ್ರೀಜಿತಂ ಭ್ರಾಂತಹೃದಯಮುನ್ಮಾರ್ಗಪರಿವರ್ತಿನಮ್ ।**
**ನಿಗೃಹ್ಯ ಮಾಂ ಗೃಹಾಣೇದಂ ರಾಜ್ಯಂ ಪಾಪಂ ನ ತದ್ಭವೇತ್ ॥ ೬೬ ॥**
**ಏವಂ ಚೇದನೃತಂ ನೈವ ಮಾಂ ಸ್ಪೃಶೇದ್ರಘುನಂದನ ।**
**ಇತ್ಯುಕ್ತ್ವಾ ದುಃಖಸಂತಪ್ತೋ ವಿಲಲಾಪ ನೃಪಸ್ತದಾ ॥ ೬೭ ॥**

೬೪-೬೭. ಶ್ರೀರಾಮನಿಂತಂದೆನು : 'ರಾಜ್ಯವು ಭರತನಿಗೇ ಆಗಲಿ ; ನಾನು ದಂಡಕಾರಣ್ಯಕ್ಕೆ ಹೋಗುವೆನು. ಆದರೆ ರಾಜನು ನನ್ನನ್ನು ಕುರಿತು ಹಾಗೆ ಹೇಳದೆ ಇರಲು ಕಾರಣವೇನೋ ತಿಳಿಯದಾಗಿದೆ.' - ಎನ್ನಲು ರಾಮನ ಈ ಮಾತನ್ನು ಕೇಳಿ ಎದುರಿಗೇ ಇದ್ದ ಅವನನ್ನು ಕುರಿತು ರಾಜನಾದ ದಶರಥನು ಬಹಳ ದುಃಖದಿಂದ ಈ ರೀತಿ ಹೇಳಿದನು. ''ಹೆಂಗಸಿಗೆ ಸೋತವನಾಗಿಯೂ ಬುದ್ಧಿಭ್ರಮಣೆಯಾಗಿರುವವನೂ ಅಡ್ಡದಾರಿಯನ್ನು ತುಳಿಯುತ್ತಿರುವವನೂ ಆಗಿರುವ ನನ್ನನ್ನು ಶಿಕ್ಷಿಸಿ ಈ ರಾಜ್ಯವನ್ನು ನೀನು ಸ್ವೀಕರಿಸು. ಅದೆಂದಿಗೂ ಪಾಪವಾಗಲಾರದು. ಹೀಗಾದರೆ ಎಲೈ ರಘುನಂದನನೆ, ಅಸತ್ಯವೂ ನನ್ನನ್ನು ಮುಟ್ಟುವದಿಲ್ಲ.'' ಹೀಗೆಂದು ಹೇಳಿ ದುಃಖದಿಂದ ಪೀಡಿತನಾದ ರಾಜನು ಅಳುತ್ತಿದ್ದನು.

**ಹಾ ರಾಮ ಹಾ ಜಗನ್ನಾಥ ಹಾ ಮಮ ಪ್ರಾಣವಲ್ಲಭ ।**
**ಮಾಂ ವಿಸೃಜ್ಯ ಕಥಂ ಘೋರಂ ವಿಪಿನಂ ಗಂತುಮರ್ಹಸಿ ॥ ೬೮ ॥**
**ಇತಿ ರಾಮಂ ಸಮಾಲಿಂಗ್ಯ ಮುಕ್ತಕಂಠೋ ರುರೋದ ಹ ।**
**ವಿಮೃಜ್ಯ ನಯನೇ ರಾಮಃ ಪಿತುಃ ಸಜಲಪಾಣಿನಾ ॥ ೬೯ ॥**
**ಆಶ್ವಾಸಯಾಮಾಸ ನೃಪಂ ಶನೈಃ ಸ ನಯಕೋವಿದಃ ॥**

೬೮-೬೯. 'ಎಲೈ ರಾಮನೆ, ಜಗನ್ನಾಥನೆ, ನನ್ನ ಪ್ರಾಣಗಳೊಡೆಯನೆ, ನನ್ನನ್ನು ಬಿಟ್ಟು ಭಯಂಕರವಾದ ಕಾಡಿಗೆ ನೀನೊಬ್ಬನೇ ಹೇಗೆ ಹೋಗುವೆ ?' ಹೀಗೆನ್ನುತ್ತಾ ರಾಮನನ್ನು ಅಪ್ಪಿಕೊಂಡು ಗಟ್ಟಿಯಾಗಿ ಅತ್ತನು. ಜಾಣನಾದ ರಾಮನು ಒದ್ದೆಯಾದ ಕೈಯಿಂದ ತಂದೆಯ ಕಣ್ಣುಗಳೆರಡನ್ನೂ ಒರಸುತ್ತಾ ಮೆಲ್ಲನೆ ರಾಜನನ್ನು ಸಮಾಧಾನಮಾಡುತ್ತಿದ್ದನು.

**ಕಿಮತ್ರ ದುಃಖೇನ ವಿಭೋ ರಾಜ್ಯಂ ಶಾಸತು ಮೇಽನುಜಃ ।**
**ಅಹಂ ಪ್ರತಿಜ್ಞಾಂ ನಿಸ್ತೀರ್ಯ ಪುನರ್ಯಾಸ್ಯಾಮಿ ತೇ ಪುರಮ್ ॥ ೨೦ ॥**
**ರಾಜ್ಯಾತ್ ಕೋಟಿಗುಣಂ ಸೌಖ್ಯಂ ಮಮ ರಾಜನ್ ವನೇ ಸತಃ ।**
**ತ್ವತ್ಸತ್ಯಪಾಲನಂ ದೇವಕಾರ್ಯಂ ಚಾಪಿ ಭವಿಷ್ಯತಿ ॥ ೨೧ ॥**
**ಕೈಕೇಯ್ಯಾಶ್ಚ ಪ್ರಿಯೋ ರಾಜನ್ ವನವಾಸೋ ಮಹಾಗುರುಃ ।**

೨೦-೨೧. "ಎಲೈ ಪ್ರಭುವೆ, ಇದರಲ್ಲಿ ದುಃಖಕರವಾದುದಾದರೂ ಏನಿದ್ದೀತು? ನನ್ನ ತಮ್ಮನು ರಾಜ್ಯಭಾರವನ್ನು ಮಾಡಲಿ! ನಾನು ಪ್ರತಿಜ್ಞೆಯನ್ನು ಪೂರೈಸಿ ನಿನ್ನ ಪಟ್ಟಣಕ್ಕೆ ಹಿಂದಿರುಗುವೆನು. ವನದಲ್ಲಿರುವ ನನಗೆ ರಾಜ್ಯಕ್ಕಿಂತಲೂ ಕೋಟಿಯಷ್ಟು ಹೆಚ್ಚಿನ ಸೌಖ್ಯವು ದೊರಕಲಿದೆ. ನಿನ್ನ ಸತ್ಯವಾದ ಮಾತನ್ನು ಪರಿಪಾಲಿಸುವದು, ದೇವತೆಗಳ ಕಾರ್ಯವನ್ನು ನೆರವೇರಿಸುವದು-ಎರಡೂ ಆಗಲಿದೆ. ಮತ್ತು ಕೈಕೇಯಿಗೂ ಪ್ರಿಯವಾಗಿರುವ ನನ್ನ ಈ ವನವಾಸವು ಹೆಚ್ಚು ಪೂಜ್ಯವಾದದ್ದಾಗಿದೆ."

**ಇದಾನೀಂ ಗಂತುಮಿಚ್ಛಾಮಿ ವ್ಯೇತು ಮಾತುಶ್ಚ ಹೃಜ್ಜ್ವರಃ ।**
**ಸಂಭಾರಾಶ್ಚೋಪಹ್ರಿಯಂತಾಮಭಿಷೇಕಾರ್ಥಮಾದೃತಾಃ ॥ ೨೨ ॥**
**ಮಾತರಂ ಚ ಸಮಾಶ್ವಾಸ್ಯ ಅನುನೀಯ ಚ ಜಾನಕೀಮ್ ।**
**ಆಗತ್ಯ ಪಾದೌ ವಂದಿತ್ವಾ ತವ ಯಾಸ್ಯೇ ಸುಖಂ ವನಮ್ ॥ ೨೩ ॥**
**ಇತ್ಯುಕ್ತ್ವಾ ತು ಪರಿಕ್ರಮ್ಯ ಮಾತರಂ ದ್ರಷ್ಟುಮಾಯಯೌ ॥**

೨೨-೨೩. ಈಗ ನಾನು (ಕಾಡಿಗೆ) ಹೊರಡಲು ಇಷ್ಟಪಡುತ್ತೇನೆ. ತಾಯಿಯಾದ ಕೈಕೇಯಿಯ ಮನೋವ್ಯಥೆಯು ಪರಿಹಾರವಾಗಲಿ; ಅಭಿಷೇಕಕ್ಕಾಗಿ ತಂದಿರುವ ಎಲ್ಲಾ ಪದಾರ್ಥಗಳೂ ಇಲ್ಲಿಗೆ ಬರಲಿ ; ನಾನು ತಾಯಿಯಾದ (ಕೌಸಲ್ಯೆ) ಯನ್ನೂ (ಹೆಂಡತಿ) ಯಾದ ಸೀತೆಯನ್ನೂ ಸಮಾಧಾನಗೊಳಿಸಿ ಮತ್ತೆ ಇಲ್ಲಿಗೆ ಬಂದು ನಿನ್ನ ಪಾದಗಳಿಗೆ ನಮಸ್ಕರಿಸಿ ಸುಖವಾಗಿ ಕಾಡಿಗೆ ಹೋಗುವೆನು. ಹೀಗೆಂದು ಹೇಳಿ ತಾಯಿಯನ್ನು ನೋಡುವದಕ್ಕಾಗಿ ಹೊರಟನು.

**ಕೌಸಲ್ಯಾಪಿ ಹರೇಃ ಪೂಜಾಂ ಕುರುತೇ ರಾಮಕಾರಣಾತ್ ।**
**ಹೋಮಂ ಚ ಕಾರಯಾಮಾಸ ಬ್ರಾಹ್ಮಣೇಭ್ಯೋ ದದೌ ಧನಮ್ ॥ ೨೪ ॥**
**ಧ್ಯಾಯತೇ ವಿಷ್ಣುಮೇಕಾಗ್ರಮನಸಾ ಮೌನಮಾಸ್ಥಿತಾ ।**
**ಅಂತಸ್ಥಮೇಕಂ ಘನಚಿತ್ಪ್ರಕಾಶಂ ।**
**ನಿರಸ್ತಸರ್ವಾತಿಶಯಸ್ವರೂಪಮ್ ।**
**ವಿಷ್ಣುಂ ಸದಾನಂದಮಯಂ ಹೃದಬ್ಜೇ**
**ಸಾ ಭಾವಯಂತೀ ನ ದದರ್ಶ ರಾಮಮ್ ॥ ೨೫ ॥**

೭೪-೭೫. ಕೌಸಲ್ಯೆಯು ಕೂಡ ವಿಷ್ಣುಪೂಜೆಯನ್ನು ಶ್ರೀರಾಮನಿಗೆ ಒಳ್ಳೆಯದಾಗಲೆಂಬ ಕಾರಣದಿಂದ ಮಾಡುತ್ತಿದ್ದಳು. ಬ್ರಾಹ್ಮಣರಿಂದ ಹೋಮಗಳನ್ನು ಮಾಡಿಸಿ ಧನವನ್ನು ದಾನಮಾಡಿದಳು. ಮೌನದಿಂದಲೂ ಏಕಾಗ್ರಮನಸ್ಸಿನಿಂದಲೂ ವಿಷ್ಣುವನ್ನು ಧ್ಯಾನಮಾಡುತ್ತಿದ್ದಳು. ಎಲ್ಲರ ಹೃದಯದೊಳಗಿರುವವನೂ ಚಿತ್ತ್ರಕಾಶಸ್ವರೂಪನೂ ಎಲ್ಲಾ ವಸ್ತುಗಳನ್ನೂ ಮೀರಿದ ಹೆಚ್ಚಿನ ಸ್ವರೂಪನೂ ಸದಾನಂದಮಯನೂ ಆದ ವಿಷ್ಣುವನ್ನು ಹೃದಯಕಮಲದಲ್ಲಿ ಆಕೆಯು ಚಿಂತಿಸುತ್ತಾ ಇದ್ದಳಾದ್ದರಿಂದ ರಾಮನು ಬಂದದ್ದನ್ನು ನೋಡಲಿಲ್ಲ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ತೃತೀಯಃ ಸರ್ಗಃ**

ಃಃಃಃಃಃಃಃಃಃ

# ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ತತಃ ಸುಮಿತ್ರಾ ದೃಷ್ಟ್ವೈನಂ ರಾಮಂ ರಾಜ್ಞೀಂ ಸಸಂಭ್ರಮಾ ।**
**ಕೌಸಲ್ಯಾಂ ಬೋಧಯಾಮಾಸ ರಾಮೋಽಯಂ ಸಮುಪಸ್ಥಿತಃ ॥ ೧ ॥**
**ಶ್ರುತ್ವೈವ ರಾಮನಾಮೈಷಾ ಬಹಿರ್ದೃಷ್ಟಿಪ್ರವಾಹಿತಾ ।**
**ರಾಮಂ ದೃಷ್ಟ್ವಾ ವಿಶಾಲಾಕ್ಷಮಾಲಿಂಗ್ಯಾಂಕೇ ನ್ಯವೇಶಯತ್ ॥ ೨ ॥**
**ಮೂರ್ಧ್ನ್ಯವಘ್ರಾಯ ಪಸ್ಪರ್ಶ ಗಾತ್ರಂ ನೀಲೋತ್ಪಲಚ್ಛವಿ ।**
**ಭುಂಕ್ಷ್ವ ಪುತ್ರೇತಿ ಚ ಪ್ರಾಹ ಮಿಷ್ಟಮನ್ನಂ ಕ್ಷುಧಾರ್ದಿತಃ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಸುಮಿತ್ರೆಯಾದರೊ, ರಾಮನು ಬಂದದ್ದನ್ನು ನೋಡಿ ಸಂಭ್ರಮದಿಂದ ಕೂಡಿ ರಾಣಿಯಾದ ಕೌಸಲ್ಯೆಯನ್ನು 'ರಾಮನು ಬಂದಿದ್ದಾನೆ' ಎಂದು ಎಚ್ಚರಿಸಿದಳು. ರಾಮನೆಂಬ ಹೆಸರನ್ನು ಕೇಳಿದೊಡನೆಯೇ ಬಹಿರ್ಮುಖಳಾದ ಆಕೆಯು ವಿಶಾಲವಾದ ಕಣ್ಣುಗಳುಳ್ಳ ರಾಮನನ್ನು ನೋಡಿ ತಬ್ಬಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡಳು. ಮತ್ತು ತಲೆಯನ್ನು ಮೂಸಿನೋಡಿ ಕನ್ನೈದಿಲೆಯ ಬಣ್ಣದ ಅವನ ಮೈಯನ್ನು ತಡವಿ 'ಮಗು, ಹಸಿದಿರುವ ನೀನು ಇದೊ, ಮೃಷ್ಟಾನ್ನವನ್ನು ಊಟಮಾಡು' ಎಂದಳು.

**ರಾಮಃ ಪ್ರಾಹ ನ ಮೇ ಮಾತರ್ಭೋಜನಾವಸರಃ ಕುತಃ ।**
**ದಂಡಕಾಗಮನೇ ಶೀಘ್ರಂ ಮಮ ಕಾಲೋಽದ್ಯ ನಿಶ್ಚಿತಃ ॥ ೪ ॥**

**ಕೈಕೇಯಿವರದಾನೇನ ಸತ್ಯಸಂಧಃ ಪಿತಾ ಮಮ ।**
**ಭರತಾಯ ದದೌ ರಾಜ್ಯಂ ಮಮಾಪ್ಯಾರಣ್ಯಮುತ್ತಮಮ್ ॥ ೫ ॥**
**ಚತುರ್ದಶ ಸಮಾಸ್ತತ್ರ ಹ್ಯುಷಿತ್ವಾ ಮುನಿವೇಷಧೃಕ್ ।**
**ಆಗಮಿಷ್ಯೇ ಪುನಃ ಶೀಘ್ರಂ ನ ಚಿಂತಾಂ ಕರ್ತುಮರ್ಹಸಿ ॥ ೬ ॥**

೪-೬. ರಾಮನಿಂತೆಂದನು : 'ತಾಯೆ, ನನಗೆ ಈಗ ಊಟಮಾಡಲು ಅವಕಾಶವಿಲ್ಲ. ಜಾಗ್ರತೆಯಾಗಿ ದಂಡಕಾರಣ್ಯಕ್ಕೆ ಹೋಗಲು ನನ್ನ ಸಮಯವು ನಿಶ್ಚಯ ವಾ ದಿದೆ. ಸತ್ಯಸಂಧನಾದ ನನ್ನ ತಂದೆಯು ಕೈಕೇಯಿಗೆ ಕೊಟ್ಟಿದ್ದ ವರಗಳ ಪ್ರಕಾರ ಭರತನಿಗೆ ರಾಜ್ಯವನ್ನೂ ನನಗೆ ಅರಣ್ಯವಾಸವನ್ನೂ ಅನುಗ್ರಹಿಸಿರುತ್ತಾನೆ. ಅಲ್ಲಿ ನಾನು ಹದಿನಾಲ್ಕು ವರ್ಷಗಳ ಕಾಲ ಋಷಿಗಳ ವೇಷದಿಂದ ವಾಸಮಾಡಿಕೊಂಡಿದ್ದು ಮತ್ತೆ ಬೇಗನೆ ಹಿಂದಿರುಗಿ ಬರುವೆನು. ನೀನೇನೂ ಚಿಂತಿಸಬೇಡ.'

**ತಚ್ಛ್ರುತ್ವಾ ಸಹಸೋದ್ವಿಗ್ನಾ ಮೂರ್ಛಿತಾ ಪುನರುತ್ಥಿತಾ ।**
**ಆಹ ರಾಮಂ ಸುದುಃಖಾರ್ತಾ ದುಃಖಸಾಗರಸಂಪ್ಲುತಾ ॥ ೭ ॥**
**ಯದಿ ರಾಮ ವನಂ ಸತ್ಯಂ ಯಾಸಿ ಚೇನ್ನಯ ಮಾಂ ಪಿ ।**
**ತ್ವದ್ವಿಹೀನಾ ಕ್ಷಣಾರ್ಧಂ ವಾ ಜೀವಿತಂ ಧಾರಯೇ ಕಥಮ್ ॥ ೮ ॥**
**ಯಥಾ ಗೌರ್ಬಾಲಕಂ ವತ್ಸಂ ತ್ಯಕ್ತ್ವಾ ತಿಷ್ಠೇನ್ನ ಕುತ್ರಚಿತ್।**
**ತಥೈವ ತ್ವಾಂ ನ ಶಕ್ನೋಮಿ ತ್ಯಕ್ತುಂ ಪ್ರಾಣಾತ್ ಪ್ರಿಯಂ ಸುತಮ್ ॥ ೯॥**
**ಭರತಾಯ ಪ್ರಸನ್ನಶ್ಚೇದ್ರಾಜ್ಯಂ ರಾಜಾ ಪ್ರಯಚ್ಛತು ।**
**ಕಿಮರ್ಥಂ ವನವಾಸಾಯ ತ್ವಾಮಾಜ್ಞಾಪಯತಿ ಪ್ರಿಯಮ್ ॥ ೧೦ ॥**

೭-೧೦. ಆ ಮಾತನ್ನು ಕೇಳಿ ಕೂಡಲೆ ತಳಮಳಗೊಂಡವಳಾದ ಆಕೆಯು ಮೂರ್ಛೆಹೋಗವಳಾದಳು. ಮತ್ತೆ ಮೇಲೆದ್ದು ರಾಮನನ್ನು ಕುರಿತು ದುಃಖದಿಂದ ಬಳಲಿದವಳು ಹಾಗೂ ಶೋಕಸಮುದ್ರದಲ್ಲಿ ಮುಳುಗಿದವಳಾಗಿ 'ಎಲೈ ರಾಮನೆ, ನೀನು ನಿಜವಾಗಿಯೂ ಕಾಡಿಗೆ ಹೋಗುವದಾದರೆ ನನ್ನನ್ನೂ ಕರೆದುಕೊಂಡು ಹೋಗು. ನೀನಿಲ್ಲದೆ ಅರ್ಧಕ್ಷಣಕಾಲವೂ ನಾನು ಬದುಕಿರಲಾರೆನು. ಪ್ರಾಣಕ್ಕಿಂತಲೂ ಪ್ರಿಯನಾದ ಮಗನಾದ ನಿನ್ನನ್ನು ಹೇಗೆ ತಾಯಿಹಸುವು ತನ್ನ ಚಿಕ್ಕ ಕರುವನ್ನು ಬಿಟ್ಟಿರಲಾರದೋ ಹಾಗೆ-ಬಿಟ್ಟಿರಲಾರೆನು. ರಾಜನು ಸಂತೋಷಗೊಂಡು ಭರತನಿಗೆ ರಾಜ್ಯವನ್ನು ಕೊಡುವ ದಾದರೆ ಕೊಟ್ಟುಕೊಳ್ಳಲಿ. ನನಗೆ ಪ್ರಿಯನಾದ ನಿನ್ನನ್ನು ವನವಾಸಕ್ಕೇಕೆ ಕಳುಹಿಸಬೇಕು ?

**ಕೈಕೇಯ್ಯಾ ವರದೋ ರಾಜಾ ಸರ್ವಸ್ವಂ ವಾ ಪ್ರಯಚ್ಛತು ।**
**ತ್ವಯಾ ಕಿಮಪರಾದ್ಧಂ ಹಿ ಕೈಕೇಯ್ಯಾ ವಾ ನೃಪಸ್ಯ ವಾ ॥ ೧೧ ॥**

**ಪಿತಾ ಗುರುರ್ಯಥಾ ರಾಮ ತವಾಹಮಧಿಕಾ ತತಃ ।**
**ಪಿತ್ರಾಜ್ಞಪ್ತೋ ವನಂ ಗಂತುಂ ವಾರಯೇಯಮಹಂ ಸುತಮ್ ॥ ೧೨ ॥**
**ಯದಿ ಗಚ್ಛಸಿ ಮದ್ವಾಕ್ಯಮುಲ್ಲಂಘ್ಯ ನೃಪವಾಕ್ಯತಃ ।**
**ತದಾ ಪ್ರಾಣಾನ್ ಪರಿತ್ಯಜ್ಯ ಗಚ್ಛಾಮಿ ಯಮಸಾದನಮ್ ॥ ೧೩ ॥**

೧೧-೧೩. 'ರಾಜನು ಕೈಕೇಯಿಗೆ ವರವನ್ನು ಕೊಟ್ಟಿರುವನಾದರೆ ಎಲ್ಲವನ್ನೂ ಆಕೆಗೇ ಕೊಡಲಿ ! ಆದರೆ ರಾಜನಿಗಾಗಲಿ, ಕೈಕೇಯಿಯಾಗಲಿ - ನೀನು ಮಾಡಿರುವ ಅಪರಾಧವಾದರೂ ಏನು ? ಎಲೈ ರಾಮನೆ, ನಿನಗೆ ತಂದೆಯು ಹೇಗೆ ಪೂಜ್ಯನೋ ಅದಕ್ಕಿಂತ ಹೆಚ್ಚಾಗಿ ನಾನು ಪೂಜ್ಯಳು. ತಂದೆಯಿಂದ ಅಪ್ಪಣೆಯನ್ನು ಪಡೆದು ಕಾಡಿಗೆ ಹೋಗಲಿರುವೆಯಾದರೆ ನಾನು ಅದನ್ನು ತಡೆಯುತ್ತೇನೆ. ಆದರೆ ನನ್ನ ಮಾತನ್ನು ಮೀರಿ ರಾಜನ ಮಾತಿನಂತೆಯೇ ನೀನು ಕಾಡಿಗೇ ಹೋಗುವೆಯಾದರೆ ಆಗ ನಾನು ಪ್ರಾಣಗಳನ್ನು ಕಳೆದುಕೊಂಡು ಯಮನ ನಗರಿಗೆ ಹೋಗುವೆನು.

**ಲಕ್ಷ್ಮಣೋಽಪಿ ತತಃ ಶ್ರುತ್ವಾ ಕೌಸಲ್ಯಾವಚನಂ ರುಷಾ ।**
**ಉವಾಚ ರಾಘವಂ ವೀಕ್ಷ್ಯ ದಹನ್ನಿವ ಜಗತ್ತ್ರಯಮ್ ॥ ೧೪ ॥**
**ಉನ್ಮತ್ತಂ ಭ್ರಾಂತಮನಸಂ ಕೈಕೇಯೀವಶವರ್ತಿನಮ್ ।**
**ಬದ್ಧ್ವಾ ನಿಹನ್ಮಿ ಭರತಂ ತದ್ಬಂಧೂನ್ ಮಾತುಲಾನಪಿ ॥ ೧೫ ॥**
**ಅದ್ಯ ಪಶ್ಯಂತು ಮೇ ಶೌರ್ಯಂ ಲೋಕಾನ್ ಪ್ರದಹತಃ ಪುರಾ ।**
**ರಾಮ ತ್ವಮಭಿಷೇಕಾಯ ಕುರು ಯತ್ನಮರಿಂದಮ ॥ ೧೬ ॥**
**ಧನುಷ್ಪಾಣಿರಹಂ ತತ್ರ ನಿಹನ್ಯಾಂ ವಿಘ್ನಕಾರಿಣಃ ॥**

೧೪-೧೬. ಅನಂತರ ಲಕ್ಷ್ಮಣನೂ ಕೌಸಲ್ಯೆಯ ಮಾತನ್ನು ಕೇಳಿ ರಾಮನನ್ನು ಕುರಿತು ಮೂರು ಲೋಕಗಳನ್ನೂ ಸುಡುವವನಂತೆ ಕೋಪದಿಂದ ಹೀಗೆಂದನು : 'ರಾಮನೆ, ಹುಚ್ಚನಾಗಿಯೂ ಬುದ್ಧಿಗೆಟ್ಟವನಾಗಿಯೂ ಕೈಕೇಯಿಯ ಅಧೀನನಾಗಿಯೂ ಇರುವ (ತಂದೆಯನ್ನೂ) ಭರತನನ್ನೂ ಅವನ ಬಂಧುಗಳಾದ ಸೋದರಮಾವಂದಿರನ್ನೂ ಕಟ್ಟಿಹಾಕಿ ನಾಶಮಾಡಿಬಿಡುವೆನು. ಈಗ ಲೋಕಗಳನ್ನೆಲ್ಲ ಸುಟ್ಟುಬಿಡುವ (ಕಾಲನಂತಿರುವ) ನನ್ನ ಪೌರುಷವನ್ನು ಎಲ್ಲರೂ ಕಂಡುಕೊಳ್ಳಲಿ. ನೀನು ಪಟ್ಟಾಭಿಷೇಕಕ್ಕಾಗಿ ಪ್ರಯತ್ನಮಾಡು. ಅದಕ್ಕೆ ಅಡ್ಡಿಮಾಡುವವರನ್ನು ಧನುರ್ಧಾರಿಯಾದ ನಾನು ನಾಶ ಮಾಡುವೆನು.

**ಇತಿ ಬ್ರುವಂತಂ ಸೌಮಿತ್ರಿಮಾಲಿಂಗ್ಯ ರಘುನಂದನಃ ।**
**ಶೂರೋಽಸಿ ರಘುಶಾರ್ದೂಲ ಮಮಾತ್ಯಂತಹಿತೇ ರತಃ ॥ ೧೭ ॥**

**ಜಾನಾಮಿ ಸರ್ವಂ ತೇ ಸತ್ಯಂ ಕಿಂ ತು ತತ್ಸಮಯೋ ನ ಹಿ ।**

೧೭. ಹೀಗೆ ಹೇಳುತ್ತಿರುವ ಲಕ್ಷ್ಮಣನನ್ನು ಬಾಚಿ ತಬ್ಬಿಕೊಂಡು ರಘುನಂದನನಾದ ರಾಮನು 'ಎಲೈ ರಘುಶ್ರೇಷ್ಠನೆ, ನೀನು ಶೂರನೆಂಬುದು ಸರಿ, ನನ್ನ ಹಿತದಲ್ಲಿಯೇ ನೀನು ನಿರತನಾಗಿರುವೆ. ಎಲ್ಲವನ್ನೂ ಬಲ್ಲೆನು. ಆದರೆ ಅದಕ್ಕೆ ಈಗ ಕಾಲವಲ್ಲ.

**ಯದಿದಂ ದೃಶ್ಯತೇ ಸರ್ವಂ ರಾಜ್ಯಂ ದೇಹಾದಿಕಂ ಚ ಯತ್ ।**
**ಯದಿ ಸತ್ಯಂ ಭವೇತ್ತತ್ರ ಆಯಾಸಃ ಸಫಲಶ್ಚ ತೇ ॥ ೧೮ ॥**
**ಭೋಗಾ ಮೇಘವಿತಾನಸ್ಥವಿದ್ಯುಲ್ಲೇಖೇವ ಚಂಚಲಾಃ ।**
**ಆಯುರಪ್ಯಗ್ನಿಸಂತಪ್ತಲೋಹಸ್ಥಜಲಬಿಂದುವತ್ ॥ ೧೯ ॥**
**ಯಥಾ ವ್ಯಾಲಗಲಸ್ಥೋಽಪಿ ಭೇಕೋ ದಂಶಾನಪೇಕ್ಷತೇ ।**
**ತಥಾ ಕಾಲಾಹಿನಾ ಗ್ರಸ್ತೋ ಲೋಕೋ ಭೋಗಾನಶಾಶ್ವತಾನ್ ॥ ೨೦ ॥**

೧೮-೨೦. ಈ ರಾಜ್ಯವು, ಶರೀರಾದಿಗಳೇ ಮುಂತಾಗಿ ಏನೇನು ಕಂಡುಬರುತ್ತಿವೆಯೋ ಅವು ನಿಜವಾಗಿದ್ದಿದ್ದರೆ ನಿನ್ನ ಶ್ರಮವು ಸಾರ್ಥಕವಾಗುತ್ತಿತ್ತು. (ಆದರೆ) ಭೋಗಗಳಾದರೋ ಹರಡಿರುವ ಮೋಡಗಳ ನಡುವೆ ತೋರಿಬರುವ ಮಿಂಚಿನಬಳ್ಳಿಯಂತೆ ಅನಿತ್ಯವಾಗಿವೆ. ಆಯುಷ್ಯವಾದರೊ, ಬೆಂಕಿಯಿಂದ ಕಾಯಿಸಲ್ಪಟ್ಟ ಕಬ್ಬಿಣದ ಮೇಲಿರುವ ನೀರಿನ ಹನಿಯಂತೆ ಅಲ್ಪಕಾಲದ್ದಾಗಿದೆ. ಹೇಗೆ ಹೆಬ್ಬಾವಿನ ಬಾಯಿಯಲ್ಲಿ ಸಿಕ್ಕಿಕೊಂಡಿದ್ದರೂ ಕಪ್ಪೆಯು ನೊಣಗಳನ್ನು ಬಯಸುವದೋ ಹಾಗೆ ಕಾಲನೆಂಬ ಮೃತ್ಯುವಿನಿಂದ ನುಂಗಲ್ಪಟ್ಟ ಪ್ರಪಂಚದ (ಜನರು) ಅಶಾಶ್ವತವಾದ ಭೋಗಗಳನ್ನು ಬಯಸುವವರಾಗಿರುತ್ತಾರೆ.

**ಕರೋತಿ ದುಃಖೇನ ಹಿ ಕರ್ಮತಂತ್ರಂ**
**ಶರೀರಭೋಗಾರ್ಥಮಹರ್ನಿಶಂ ನರಃ ।**
**ದೇಹಸ್ತು ಭಿನ್ನಃ ಪುರುಷಾತ್ ಸಮೀಕ್ಷ್ಯತೇ**
**ಕೋ ವಾಽತ್ರ ಭೋಗಃ ಪುರುಷೇಣ ಭುಜ್ಯತೇ ॥ ೨೧ ॥**
**ಪಿತೃಮಾತೃಸುತಭ್ರಾತೃದಾರಬಂಧ್ವಾದಿಸಂಗಮಃ ।**
**ಪ್ರಪಾಯಾಮಿವ ಜಂತೂನಾಂ ನದ್ಯಾಂ ಕಾಷ್ಠೌಘವಚ್ಚಲಃ ॥ ೨೨ ॥**
**ಛಾಯೇವ ಲಕ್ಷ್ಮೀಃ ಚಪಲಾ ಪ್ರತೀತಾ**
**ತಾರುಣ್ಯಮಂಬೂರ್ಮಿವದಧ್ರುವಂ ಚ ।**
**ಸ್ವಪ್ನೋಪಮಂ ಸ್ತ್ರೀಸುಖಮಾಯುರಲ್ಪಂ**
**ತಥಾಪಿ ಜಂತೋರಭಿಮಾನ ಏಷಃ ॥ ೨೩ ॥**

೨೧-೨೩. ಮನುಷ್ಯನು ಶರೀರಸುಖಕ್ಕಾಗಿ ಹಗಲೂ ರಾತ್ರೆಯೂ ಕರ್ಮವಶನಾಗಿ ಕಷ್ಟದಿಂದ ಕೆಲಸಮಾಡುತ್ತಾನೆ. ಆದರೆ ಪುರುಷನಿಗಿಂತ (ಆತ್ಮನಿಗಿಂತ) ದೇಹವು ಬೇರೆಯೇ ಆಗಿದೆ. ಹೀಗಿರುವಲ್ಲಿ ಪುರುಷನು ಯಾವ ಭೋಗವನ್ನು ತಾನೆ ತನಗಾಗಿ ಅನುಭವಿಸಿಯಾನು ? ತಂದೆ, ತಾಯಿ, ಮಗ, ಸೋದರ, ಹೆಂಡತಿ, ಬಂಧುಗಳೇ ಮುಂತಾದವರ ಸಂಬಂಧವು ಅರವಟ್ಟಿಗೆಗಳಲ್ಲಿ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಒಟ್ಟುಗೂಡಿದ ಪ್ರಾಣಿಗಳಂತೆ ಅಥವಾ ಪ್ರವಾಹದಲ್ಲಿ ತೇಲಿಬಂದ ಮರದ ತುಂಡುಗಳಂತೆ ಕ್ಷಣಕಾಲ ಮಾತ್ರ ಒಡನಿದ್ದು ಅನಂತರ ಇಲ್ಲವಾಗುವದು. ಐಶ್ವರ್ಯವಾದರೋ, ನೆರಳಿನಂತೆ ಅಶಾಶ್ವತವಾಗಿರುವದು ; ನೀರಿನ ತೆರೆಗಳಂತೆ ಯೌವನವು ಅನಿತ್ಯವಾಗಿರುವದು. ಸ್ತ್ರೀಸುಖವಾದರೋ, ಕನಸಿಗೆ ಸಮಾನವಾಗಿದೆ. ಆಯುಷ್ಯವು ತೀರ ಕಡಿಮೆಯಿದೆ. ಆದರೂ ಈ (ಮನುಷ್ಯ)ಜಂತುವಿಗೆ (ನಾನು, ನನ್ನದು) - ಎಂಬ ಅಭಿಮಾನವು ಬಿಗಿದುಕೊಂಡಿದೆ.

**ಸಂಸೃತಿಃ ಸ್ವಪ್ನಸದೃಶೀ ಸದಾ ರೋಗಾದಿಸಂಕುಲಾ ।**
**ಗಂಧರ್ವನಗರಪ್ರಖ್ಯಾ ಮೂಢಸ್ತಾಮನುವರ್ತತೇ ॥ ೨೪ ॥**
**ಆಯುಷ್ಯಂ ಕ್ಷೀಯತೇ ಯಸ್ಮಾದಾದಿತ್ಯಸ್ಯ ಗತಾಗತೈಃ ।**
**ದೃಷ್ಟ್ವಾನ್ಯೇಷಾಂ ಜರಾಮೃತ್ಯೂ ಕದಾಚಿನ್ನೈವ ಬುಧ್ಯತೇ ॥ ೨೫ ॥**
**ಸ ಏವ ದಿವಸಃ ಸೈವ ರಾತ್ರಿರಿತ್ಯೇವ ಮೂಢಧೀಃ ।**
**ಭೋಗಾನನುಪತತ್ಯೇವ ಕಾಲವೇಗಂ ನ ಪಶ್ಯತಿ ॥ ೨೬ ॥**
**ಪ್ರತಿಕ್ಷಣಂ ಕ್ಷರತ್ಯೇತದಾಯುರಾಮಘಟಾಂಬುವತ್ ।**
**ಸಪತ್ನಾ ಇವ ರೋಗೌಘಾಃ ಶರೀರಂ ಪ್ರಹರಂತ್ಯಹೋ ॥ ೨೭ ॥**

೨೪-೨೭. ಸಂಸಾರವೆಂಬುದು ಯಾವಾಗಲೂ ರೋಗಾದಿಗಳಿಂದ ಕೂಡಿರುವದಾಗಿ ಸ್ವಪ್ನಸಮಾನವಾಗಿದೆ. ಗಂಧರ್ವನಗರದಂತೆ ಹುಸಿತೋರಿಕೆಯಾಗಿರುವ ಅದನ್ನು ದಡ್ಡನು ಮಾತ್ರ ಆಶ್ರಯಿಸುವನು. ಸೂರ್ಯನ ಬರುವಿಕೆ, ಹೋಗುವಿಕೆಗಳಿಂದ ಆಯುಷ್ಯವು ಕ್ಷೀಣವಾಗುತ್ತಿದೆ. ಬೇರೊಬ್ಬರಿಗೆ ಸಂಭವಿಸುವ ಮುಪ್ಪು ಮರಣಗಳನ್ನು ಕಂಡುಕೊಂಡಾದರೂ ಮಾನವನು ಒಮ್ಮೆಯೂ ಎಚ್ಚತ್ತುಕೊಳ್ಳುವದಿಲ್ಲ. ಅದೇ ದಿನ, ಅದೇ ರಾತ್ರಿಯೇ ಬರುತ್ತಿದೆ - ಎಂಬ ಭ್ರಾಂತಿಯಿಂದ ಮೂಢನು ಭೋಗಗಳನ್ನು ಅನುಸರಿಸಿ ಕಾಲಕಳೆಯುತ್ತಾ ಮೃತ್ಯುವಿನ ವೇಗದ (ಬರುವಿಕೆಯನ್ನು) ಗಮನಿಸುತ್ತಿಲ್ಲ. ಹಸಿಯ ಮಡಕೆಯಲ್ಲಿರುವ ನೀರಿನಂತೆ ಪ್ರತಿಕ್ಷಣವೂ ಆಯುಸ್ಸು ಸೋರಿಹೋಗುತ್ತಿದೆ. ರೋಗಗಳ ಸಮೂಹವು ಸವತಿಯರಂತೆ ಶರೀರವನ್ನು ಬಾಧಿಸುತ್ತಿದೆ.

**ಜರಾ ವ್ಯಾಘ್ರೀವ ಪುರತಸ್ತರ್ಜಯಂತ್ಯವತಿಷ್ಠತೇ ।**
**ಮೃತ್ಯುಃ ಸಹೈವ ಯಾತ್ಯೇಷ ಸಮಯಂ ಸಂಪ್ರತೀಕ್ಷತೇ ॥ ೨೮ ॥**
**ದೇಹೇಽಹಂಭಾವಮಾಪನ್ನೋ ರಾಜಾಽಹಂ ಲೋಕವಿಶ್ರುತಃ ।**
**ಇತ್ಯಸ್ಮಿನ್ ಮನುತೇ ಜಂತುಃ ಕ್ರಿಮಿವಿಡ್ಭಸ್ಮಸಂಜ್ಞಿತೇ ॥ ೨೯ ॥**
**ತ್ವಗಸ್ಥಿಮಾಂಸವಿಣ್ಮೂತ್ರರೇತೋರಕ್ತಾದಿಸಂಯುತಃ ।**
**ವಿಕಾರೀ ಪರಿಣಾಮೀ ಚ ದೇಹ ಆತ್ಮಾ ಕಥಂ ವದ ॥ ೩೦ ॥**
**ಯಮಾಸ್ಥಾಯ ಭವಾಂಲ್ಲೋಕಂ ದಗ್ಧುಮಿಚ್ಛತಿ ಲಕ್ಷ್ಮಣ ।**
**ದೇಹಾಭಿಮಾನಿನಃ ಸರ್ವೇ ದೋಷಾಃ ಪ್ರಾದುರ್ಭವನ್ತಿ ಹಿ ॥ ೩೧ ॥**

೨೮-೩೧. ಮುಪ್ಪು ಹೆಣ್ಣುಹುಲಿಯಂತೆ ಗರ್ಜನೆಮಾಡುತ್ತಾ ಎದುರಾಗಿದೆ. ಜೊತೆಯಲ್ಲಿಯೇ ಮೃತ್ಯುವೂ ಇದ್ದುಕೊಂಡು ಸಮಯವನ್ನು ನಿರೀಕ್ಷಿಸುತ್ತಿರುವನು. ಪ್ರಾಣಿಯಾದ (ಮನುಜನು) ಕೇವಲ ಕ್ರಿಮಿಗಳು, ಕೊಳಕು, ಬೂದಿಯಾಗಿ ಮಾರ್ಪಡುವ ಈ ದೇಹದಲ್ಲಿ ನಾನು ಎಂಬ ಅಭಿಮಾನವನ್ನು ಹೊಂದಿ 'ರಾಜನಾದ ನಾನು ಲೋಕಪ್ರಸಿದ್ಧನು' ಎಂದು ಭಾವಿಸಿರುತ್ತಾನೆ. ಚರ್ಮ, ಎಲುಬು, ಮಾಂಸ, ರೇತಸ್ಸು, ಅಮೇಧ್ಯ, ಮೂತ್ರ, ರಕ್ತಗಳಿಂದ ಕೂಡಿ ವಿಕಾರಹೊಂದುವಂಥದ್ದೂ ಬದಲಾವಣೆಯಾಗತಕ್ಕದ್ದೂ ಆಗಿರುವ ಈ ದೇಹವು ಹೇಗೆ ಆತ್ಮನಾದೀತೆಂಬುದನ್ನು ಹೇಳು. ಎಲೈ ಲಕ್ಷ್ಮಣನೆ, ನೀನು ಯಾವ ಈ ದೇಹವನ್ನು ಮುಂದುಮಾಡಿಕೊಂಡು ಲೋಕಗಳನ್ನೆಲ್ಲ ಸುಡುವೆನೆಂದು ಹೊರಟಿರುವೆಯೋ ಅದು ಸರಿಯಲ್ಲ. ದೇಹಾಭಿಮಾನಿಯಾದವನಿಗೆ ಈ ಎಲ್ಲಾ ದೋಷಗಳೂ ಕಾಣಿಸಿ ಕೊಳ್ಳುವವು.

**ದೇಹೋಽಹಮಿತಿ ಯಾ ಬುದ್ಧಿರವಿದ್ಯಾ ಸಾ ಪ್ರಕೀರ್ತಿತಾ ।**
**ನಾಹಂ ದೇಹಶ್ಚಿದಾತ್ಮೇತಿ ಬುದ್ಧಿರ್ವಿದ್ಯೇತಿ ಭಣ್ಯತೇ ॥ ೩೨॥**
**ಅವಿದ್ಯಾ ಸಂಸೃತೇರ್ಹೇತುರ್ವಿದ್ಯಾ ತಸ್ಯಾ ನಿವರ್ತಿಕಾ**
**ತಸ್ಮಾದ್ಯತ್ನಃ ಸದಾ ಕಾರ್ಯೋ ವಿದ್ಯಾಭ್ಯಾಸೇ ಮುಮುಕ್ಷುಭಿಃ ॥ ೩೩ ॥**

೩೨-೩೩. ಈ ದೇಹವೇ ನಾನು ಎಂಬ ತಪ್ಪು ತಿಳಿವಳಿಕೆಯೇ ಅವಿದ್ಯೆಯು. ನಿಜವಾಗಿ ಈ ದೇಹವು ನಾನಲ್ಲ. ಚಿತ್ಸ್ವರೂಪನಾದ ಆತ್ಮನು ನಾನು ಎಂಬ ನಿಶ್ಚಯವೇ ವಿದ್ಯೆಯೆನಿಸುವದು. ಅವಿದ್ಯೆಯೇ ಸಂಸಾರಕ್ಕೆ ಕಾರಣವು. ವಿದ್ಯೆಯು ಅದನ್ನು ನಾಶಗೊಳಿಸತಕ್ಕದ್ದಾಗಿದೆ. ಆದ್ದರಿಂದ ಮುಮುಕ್ಷುಗಳು ಯಾವಾಗಲೂ ವಿದ್ಯೆಯನ್ನು ಅನುಸಂಧಾನಮಾಡುವದರಲ್ಲಿಯೇ ಕಾರ್ಯಮಗ್ನರಾಗಬೇಕು.

**ಕಾಮಕ್ರೋಧಾದಯಸ್ತತ್ರ ಶತ್ರವಃ ಶತ್ರುಸೂದನ ।**
**ತತ್ರಾಪಿ ಕ್ರೋಧ ಏವಾಲಂ ಮೋಕ್ಷವಿಘ್ನಾಯ ಸರ್ವದಾ ॥ ೩೪ ॥**

**ಯೇನಾವಿಷ್ಟಃ ಪುಮಾನ್ ಹಂತಿ ಪಿತೃಭ್ರಾತೃಸುಹೃತ್‌ಸಖೀನ್ ।**
**ಕ್ರೋಧಮೂಲೋ ಮನಸ್ತಾಪಃ ಕ್ರೋಧಃ ಸಂಸಾರಬಂಧನಃ ॥**
**ಧರ್ಮಕ್ಷಯಕರಃ ಕ್ರೋಧಸ್ತಸ್ಮಾತ್ ಕ್ರೋಧಂ ಪರಿತ್ಯಜ ।**
**ಕ್ರೋಧ ಏಷ ಮಹಾನ್ ಶತ್ರುಸ್ತೃಷ್ಣಾ ವೈತರಣೀ ನದೀ ॥ ೩೬ ॥**

೩೪-೩೬. ಎಲೈ ಶತ್ರುನಾಶಕನೆ, ಕಾಮಕ್ರೋಧಗಳೇ ಮುಂತಾದವು ವಿದ್ಯೆಗೆ ಶತ್ರುಗಳು. ಅದರಲ್ಲಿಯೂ ಮೋಕ್ಷಕ್ಕೆ ಅಡ್ಡಿಯನ್ನುಂಟುಮಾಡುವದರಲ್ಲಿ ಕೋಪವೇ ಯಾವಾಗಲೂ ಮುಖ್ಯವಾದುದು. ಏಕೆಂದರೆ ಅದರಿಂದ ಮೈಮರೆತವನು ತಂದೆ, ಸೋದರರು, ಸ್ನೇಹಿತರನ್ನೂ ಕೊಂದುಬಿಡುವನು. ಮನಸ್ಸಿನ ಉದ್ವೇಗಕ್ಕೆ ಕೋಪವೇ ಮೂಲವು. ಅದೇ ಸಂಸಾರವೆಂಬ ಬಂಧನವು. ಈ ಕೋಪವು ಧರ್ಮವನ್ನೂ ಕೂಡ ಕರಗಿಸಿಬಿಡುವದು. ಆದ್ದರಿಂದ ಕೋಪವನ್ನು ಬಿಟ್ಟುಬಿಡುವವನಾಗು ಈ ಕ್ರೋಧವು ದೊಡ್ಡವೈರಿಯು. ಆಸೆಯೆಂಬುದೇ ವೈತರಣೀನದಿಯೆಂದು (ತಿಳಿ).

**ಸಂತೋಷೋ ನಂದನವನಂ ಶಾಂತಿರೇವ ಹಿ ಕಾಮಧುಕ್ ।**
**ತಸ್ಮಾಚ್ಛಾಂತಿಂ ಭಜಸ್ವಾದ್ಯ ಶತ್ರುರೇವಂ ಭವೇನ್ನ ತೇ ॥ ೩೭ ॥**
**ದೇಹೇಂದ್ರಿಯಮನಃಪ್ರಾಣಬುದ್ಧ್ಯಾದಿಭ್ಯೋ ವಿಲಕ್ಷಣಃ ।**
**ಆತ್ಮಾ ಶುದ್ಧಃ ಸ್ವಯಂಜ್ಯೋತಿರವಿಕಾರೀ ನಿರಾಕೃತಿಃ ॥ ೩೮ ॥**

೩೭-೩೮. ಸಂತೋಷವೇ ನಂದನವನವು. ಶಾಂತಿಯೇ ಕಾಮಧೇನುವು. ಆದ್ದರಿಂದ ನೀನು ಶಾಂತಿಯನ್ನು ಹೊಂದುವವನಾಗು. ಹಾಗಾದರೆ ನಿನಗೆ ಶತ್ರುಗಳಿರಲಾರರು. ಆತ್ಮನು ದೇಹ, ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಬುದ್ಧಿ - ಇವುಗಳಿಗಿಂತ ವಿಲಕ್ಷಣನಾದ ಶುದ್ಧನಾದ ಸ್ವಯಂಜ್ಯೋತಿಯೂ ವಿಕಾರರಹಿತನೂ ಆಕಾರವಿಲ್ಲದವನೂ ಆಗಿರುವನು.

**ಯಾವದ್ದೇಹೇಂದ್ರಿಯಪ್ರಾಣೈರ್ಭಿನ್ನತ್ವಂ ನಾತ್ಮನೋ ವಿದುಃ ।**
**ತಾವತ್ ಸಂಸಾರದುಃಖೌಘೈಃ ಪೀಡ್ಯಂತೇ ಮೃತ್ಯುಸಂಯುತಾಃ ॥ ೩೯ ॥**
**ತಸ್ಮಾತ್ ತ್ವಂ ಸರ್ವದಾ ಭಿನ್ನಮಾತ್ಮಾನಂ ಹೃದಿ ಭಾವಯ ।**
**ಬುದ್ಧ್ಯಾದಿಭ್ಯೋ ಬಹಿಃ ಸರ್ವಮನುವರ್ತಸ್ವ ಮಾ ಖಿದಃ ॥ ೪೦ ॥**
**ಭುಂಜನ್ ಪ್ರಾರಬ್ಧಮಖಿಲಂ ಸುಖಂ ವಾ ದುಃಖಮೇವ ವಾ ।**
**ಪ್ರವಾಹಪತಿತಂ ಕಾರ್ಯಂ ಕುರ್ವನ್ನಪಿ ನ ಲಿಪ್ಯಸೇ ॥ ೪೧ ॥**

೩೯-೪೧. ಎಲ್ಲಿಯವರೆಗೆ ದೇಹ, ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಇವುಗಳಿಗಿಂತ ಆತ್ಮನು ಬೇರೆಯೆಂದು (ಜನರು) ತಿಳಿಯುವದಿಲ್ಲವೋ ಅಲ್ಲಿಯವರೆಗೆ

ಮೃತ್ಯುವಿನಿಂದ ಕೂಡಿದವರಾಗಿ (ಶೋಕಮೋಹಾದಿ) ಸಂಸಾರದುಃಖಗಳಿಂದ ಪೀಡಿಸಲ್ಪಡುವರು. ಆದ್ದರಿಂದ ನೀನು ಯಾವಾಗಲೂ ಬುದ್ಧ್ಯಾದಿಗಳಿಗಿಂತ ಬೇರೆಯಾದ ಆತ್ಮನನ್ನೇ ಮನಸ್ಸಿನಲ್ಲಿ ತಿಳಿಯುವವನಾಗು. ಹೊರಗಡೆ (ವ್ಯವಹಾರದಲ್ಲಿ) ಎಲ್ಲವನ್ನೂ (ಎಲ್ಲರಂತೆಯೇ) ಅನುಸರಿಸುವವನಾಗು. ದುಃಖಪಡಬೇಡ. ಪ್ರಾರಬ್ಧಕರ್ಮಗಳೆಲ್ಲವನ್ನೂ ಭೋಗಿಸುತ್ತಾ ಸುಖವಾಗಲಿ, ದುಃಖವಾಗಲಿ, ಜೀವನದಲ್ಲಿ ಪ್ರವಾಹದಂತೆ ಒದಗಿಬರುವವುಗಳನ್ನು ಮಾಡುತ್ತಿದ್ದರೂ ನಿನಗೆ ಲೇಪವಾಗುವದಿಲ್ಲ.

**ಬಾಹ್ಯೇ ಸರ್ವತ್ರ ಕರ್ತೃತ್ವಮಾವಹನ್ನಪಿ ರಾಘವ ।**
**ಅಂತಃಶುದ್ಧಸ್ವಭಾವಸ್ತ್ವಂ ಲಿಪ್ಯಸೇ ನ ಚ ಕರ್ಮಭಿಃ ॥ ೪೨ ॥**
**ಏತನ್ಮಯೋದಿತಂ ಕೃತ್ಸ್ನಂ ಹೃದಿ-ಭಾವಯ ಸರ್ವದಾ ।**
**ಸಂಸಾರದುಃಖೈರಖಿಲೈರ್ಬಾಧ್ಯಸೇ ನ ಕದಾಚನ ॥ ೪೩॥**

೪೨-೪೩. ಎಲೈ ರಾಘವನೆ, ವ್ಯವಹಾರದಲ್ಲಿ ಎಲ್ಲಾ ಕಡೆಯಲ್ಲಿಯೂ ನೀನು ಕರ್ತೃತ್ವವನ್ನು ಇಟ್ಟುಕೊಂಡಿದ್ದರೂ ಒಳಗೆ ಶುದ್ಧಸ್ವಭಾವದಿಂದ ಇದ್ದುಕೊಂಡವನಾದರೆ ಯಾವ ಕರ್ಮಗಳಿಂದಲೂ ನೀನು ಲಿಪ್ತನಾಗುವದಿಲ್ಲ. ಈವರೆಗೆ ನಾನು ಹೇಳಿದ್ದನ್ನೆಲ್ಲ ಯಾವಾಗಲೂ ಹೃದಯದಲ್ಲಿ ನೆನೆಯುತ್ತಿರು. ಹಾಗಾದರೆ ಎಲ್ಲಾ ಸಂಸಾರದುಃಖಗಳ ಬಾಧೆಯಿಂದಲೂ ಮುಕ್ತನಾಗುವೆ.

**ತ್ವಮಪ್ಯಂಬ ಮಯಾಽಽದಿಷ್ಟಂ ಹೃದಿ ಭಾವಯ ನಿತ್ಯದಾ ।**
**ಸಮಾಗಮಂ ಪ್ರತೀಕ್ಷಸ್ವ ನ ದುಃಖೈಃ ಪೀಡ್ಯಸೇ ಚಿರಮ್ ॥ ೪೪ ॥**
**ನ ಸದೈಕತ್ರ ಸಂವಾಸಃ ಕರ್ಮಮಾರ್ಗಾನುವರ್ತಿನಾಮ್ ।**
**ಯಥಾ ಪ್ರವಾಹಪತಿತಪ್ಲವಾನಾಂ ಸರಿತಾಂ ತಥಾ ॥ ೪೫ ॥**

೪೪-೪೫. ತಾಯೆ, ನೀನೂ ಸಹ ನಾನು ಉಪದೇಶಮಾಡಿದ್ದನ್ನು ಯಾವಾಗಲೂ ಹೃದಯದಲ್ಲಿ ಚಿಂತಿಸುವವಳಾಗು. ಮತ್ತೆ ಹಿಂದಿರುಗಿ ಬರುವದನ್ನೇ ಅಪೇಕ್ಷಿಸುತ್ತಾ ಕಾದುಕೊಂಡಿರು. ಹಾಗಾದರೆ ಬಹಳ ಕಾಲ ದುಃಖಗಳಿಂದ ಪೀಡಿತಳಾಗದೆ ಇರುವೆ. ಏಕೆಂದರೆ ಕರ್ಮಮಾರ್ಗವನ್ನನುಸರಿಸುವ ಜೀವರಿಗೆ - ಹೇಗೆ ನದಿಯ ಪ್ರವಾಹದಲ್ಲಿ ಬಿದ್ದಿರುವ ದೋಣಿಗಳಿಗೆ ಒಂದೇಜಾಗದಲ್ಲಿ ಇರುವಿಕೆಯು ಸಾಧ್ಯವಾಗಲಾರದೋ ಗತಿಯು ಒಂದೇ ಸ್ಥಳಕ್ಕೆ ಇರಲಾರದೋ ಹಾಗೆ - ಒಂದೇ ಸ್ಥಳದಲ್ಲಿ ವಾಸವು ದೊರಕಲಾರದು.

**ಚತುರ್ದಶ ಸಮಾ ಸಂಖ್ಯಾ ಕ್ಷಣಾರ್ಧಮಿವ ಜಾಯತೇ ।**
**ಅನುಮನ್ಯಸ್ವ ಮಾಮಂಬ ದುಃಖಂ ಸಂತ್ಯಜ್ಯ ದೂರತಃ ॥ ೪೬ ॥**

**ಏವಂ ಚೇತ್ ಸುಖಸಂವಾಸೋ ಭವಿಷ್ಯತಿ ವನೇ ಮಮ ।**
**ಇತ್ಯುಕ್ತ್ವಾ ದಂಡವನ್ಮಾತುಃ ಪಾದಯೋರಪತಚ್ಚಿರಮ್ ॥ ೪೭ ॥**

೪೬-೪೭. ಎಲೈ ತಾಯೆ, ಹದಿನಾಲ್ಕು ವರ್ಷಗಳ ಸಂಖ್ಯೆಯ ಕಾಲವು ಅರ್ಧ ಕ್ಷಣದಂತೆ ಕಳೆದುಹೋಗಲಿದೆ. ದುಃಖವನ್ನು ದೂರೀಕರಿಸಿ ನನಗೆ ಅಪ್ಪಣೆಯನ್ನು ಕೊಡು. ಹಾಗಾದರೆ ನನಗೆ ವನವಾಸವು ಸುಖಕರವಾಗುವದು. ಹೀಗೆಂದು ಹೇಳಿ (ಕೋಲನ್ನು ನೆಲದಮೇಲಿಟ್ಟಂತೆ) ತಾಯಿಯ ಎರಡು ಕಾಲುಗಳಿಗೂ ದೀರ್ಘಕಾಲ ನಮಸ್ಕರಿಸಿದನು.

**ಉತ್ಥಾಪ್ಯಾಂಕೇ ಸಮಾವೇಶ್ಯ ಆಶೀರ್ಭಿರಭಿನಂದಯತ್ ।**
**ಸರ್ವೇ ದೇವಾಸ್ಸಗಂಧರ್ವಾ ಬ್ರಹ್ಮವಿಷ್ಣುಶಿವಾದಯಃ ॥ ೪೮ ॥**
**ರಕ್ಷಂತು ತ್ವಾಂ ಸದಾ ಯಾಂತಂ ತಿಷ್ಠಂತಂ ನಿದ್ರಯಾ ಯುತಮ್ ।**
**ಇತಿ ಪ್ರಸ್ಥಾಪಯಾಮಾಸ ಸಮಾಲಿಂಗ್ಯ ಪುನಃ ಪುನಃ ॥ ೪೯ ॥**

೪೮-೪೯. (ರಾಮನನ್ನು) ಮೇಲಕ್ಕೆಬ್ಬಿಸಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು (ಕೌಸಲ್ಯೆಯು) ಆಶೀರ್ವಾದಗಳಿಂದ ಹರಸಿದಳು. 'ನಿನ್ನನ್ನು ಎಲ್ಲಾ ದೇವತೆಗಳೂ ಗಂಧರ್ವರೂ ಬ್ರಹ್ಮವಿಷ್ಣುಶಿವಾದಿಗಳೂ ನೀನು ನಡೆಯುತ್ತಿರುವಾಗ, ನಿದ್ರಿಸುತ್ತಿರುವಾಗ, ನಿಂತಿರುವಾಗ-ಹೀಗೆ ಎಲ್ಲಾ ಕಾಲಗಳಲ್ಲಿಯೂ ಕಾಪಾಡಲಿ !' ಹೀಗೆಂದು ಹರಸಿ ಮತ್ತೆ ಮತ್ತೆ ಆಲಂಗಿಸಿಕೊಂಡು ಅನಂತರ ಕಳುಹಿಸಿಕೊಟ್ಟಳು.

**ಲಕ್ಷ್ಮಣಸ್ತು ತದಾ ರಾಮಂ ನತ್ವಾ ಹರ್ಷಾಶ್ರುಗದ್ಗದಃ ।**
**ಆಹ ರಾಮ ಮಮಾಂತಃಸ್ಥಃ ಸಂಶಯೋಽಯಂ ತ್ವಯಾ ಹೃತಃ ॥ ೫೦ ॥**
**ಯಾಸ್ಯಾಮಿ ಪೃಷ್ಠತೋ ರಾಮ ಸೇವಾಂ ಕರ್ತುಂ ತದಾದಿಶ ।**
**ಅನುಗೃಹ್ಣೀಷ್ವ ಮಾಂ ರಾಮ ನೋ ಚೇತ್ ಪ್ರಾಣಾನ್ ತ್ಯಜಾಮ್ಯಹಮ್ ॥ ೫೧॥**
**ತಥೇತಿ ರಾಘವೋಽಪ್ಯಾಹ ಲಕ್ಷ್ಮಣಂ ಯಾಹಿ ಮಾ ಚಿರಮ್ ।**
**ಪ್ರತಸ್ಥೇ ತಾಂ ಸಮಾಧಾತುಂ ಗತಃ ಸೀತಾಪತಿರ್ವಿಭುಃ ॥ ೫೨ ॥**

೫೦-೫೨. ಆಗ ಲಕ್ಷ್ಮಣನು ರಾಮನಿಗೆ ನಮಸ್ಕರಿಸಿ ಹರ್ಷದಿಂದ ಗದ್ಗದ ಕಂಠನಾಗಿ (ರಾಮನನ್ನು) ಕುರಿತು 'ಎಲೈ ರಾಮನೆ, ನನ್ನ ಒಳಗಿನ ಸಂಶಯವು ನಿನ್ನಿಂದ ದೂರೀಕರಿಸಲ್ಪಟ್ಟಿತು. ನಿನ್ನ ಸೇವೆಯನ್ನು ಮಾಡುವದಕ್ಕಾಗಿ ನಿನ್ನ ಹಿಂದೆಯೇ ಬರುವೆನು. ಅದಕ್ಕೆ ಅಪ್ಪಣೆಮಾಡು. ನನ್ನನ್ನು ಹೀಗೆ ಅನುಗ್ರಹಿಸು. ಹಾಗಿಲ್ಲದಿದ್ದರೆ ನಾನು ಪ್ರಾಣತ್ಯಾಗಮಾಡಿಬಿಡುವೆನು.' ಹೀಗೆನ್ನಲು ರಾಮನು ಲಕ್ಷ್ಮಣನಿಗೆ 'ಆಗಲಿ, ಹಾಗೆಯೇ ಮಾಡು ತಡಮಾಡಬೇಡ, ಬೇಗನೆ ಬಾ' ಎಂದನು. ಅನಂತರ ಸರ್ವವ್ಯಾಪಕನಾದ, ಸೀತಾಪತಿಯಾದ ಆತನು ಆಕೆಯನ್ನು ಸಮಾಧಾನಗೊಳಿಸಲು ಹೊರಟನು.

**ಆಗತಂ ಪತಿಮಾಲೋಕ್ಯ ಸೀತಾ ಸುಸ್ಮಿತಭಾಷಿಣೀ ।**
**ಸ್ವರ್ಣಪಾತ್ರಸ್ಥಸಲಿಲೈಃ ಪಾದೌ ಪ್ರಕ್ಷಾಲ್ಯ ಭಕ್ತಿತಃ ॥ ೫೩ ॥**
**ಪಪ್ರಚ್ಛ ಪತಿಮಾಲೋಕ್ಯ ದೇವ ಕಿಂ ಸೇನಯಾ ವಿನಾ ।**
**ಆಗತೋಽಸಿ ಗತಃ ಕುತ್ರ ಶ್ವೇತಚ್ಛತ್ರಂ ಚ ತೇ ಕುತಃ ॥ ೫೪ ॥**
**ವಾದಿತ್ರಾಣಿ ನ ವಾದ್ಯಂತೇ ಕಿರೀಟಾದಿವಿವರ್ಜಿತಃ ।**
**ಸಾಮಂತರಾಜಸಹಿತಃ ಸಂಭ್ರಮಾನ್ನಾಗತೋಽಸಿ ಕಿಮ್ ॥ ೫೫ ॥**
**ಇತಿ ಸ್ಮ ಸೀತಯಾ ಪೃಷ್ಟಂ ರಾಮಃ ಸಸ್ಮಿತಮಬ್ರವೀತ್ ।**

೫೩-೫೫. ಬಂದಂಥ ಗಂಡನನ್ನು ನೋಡಿ ಸೀತೆಯು ಮುಗುಳುನಗೆಯಿಂದ ಕೂಡಿ ಮಾತುಗಳನ್ನಾಡುತ್ತಾ ಭಕ್ತಿಯಿಂದ ಚಿನ್ನದ ಪಾತ್ರೆಗಳಲ್ಲಿ ನೀರು ತಂದು ಕಾಲುಗಳನ್ನು ತೊಳೆದವಳಾಗಿ ಯಜಮಾನನನ್ನು ಕುರಿತು ಹೀಗೆಂದು ಕೇಳಿದಳು. ''ಸ್ವಾಮಿ, ಇದೇನು ? ಸೈನ್ಯದ ಗೌರವವಿಲ್ಲದೆ ಒಬ್ಬರೇ ಬಂದಿರುವಿರಿ ? ಎಲ್ಲಿಂದ ಬಂದಿರಿ ? ರಾಜಚಿಹ್ನೆಯಾದ ಬಿಳಿಯ ಛತ್ರಿ ಏನಾಯಿತು ? ವಾದ್ಯಗಳೇಕೆ ಮೊಳಗುತ್ತಿಲ್ಲ ? ಕಿರೀಟಾದಿಗಳಿಲ್ಲದ್ದರ ಕಾರಣವೇನು ? ಸಾಮಂತರಾಜರುಗಳೊಡಗೂಡಿ ಸಂಭ್ರಮದಿಂದೇಕೆ ಬರಲಿಲ್ಲ ? ಹೀಗೆಂದು ಸೀತೆಯಿಂದ ಕೇಳಲ್ಪಟ್ಟ ರಾಮನು ಮುಗುಳುನಗೆಯಿಂದ ಹೀಗೆಂದನು.

**ರಾಜ್ಞಾ ಮೇ ದಂಡಕಾರಣ್ಯೇ ರಾಜ್ಯಂ ದತ್ತಂ ಶುಭೇಽಖಿಲಮ್ ।**
**ಅತಸ್ತತ್ಪಾಲನಾರ್ಥಾಯ ಶೀಘ್ರಂ ಯಾಸ್ಯಾಮಿ ಭಾಮಿನಿ ॥ ೫೬ ॥**
**ಅದ್ಯೈವ ಯಾಸ್ಯಾಮಿ ವನಂ ತ್ವಂ ತು ಶ್ವಶ್ರೂಸಮೀಪಗಾ ।**
**ಶುಶ್ರೂಷಾಂ ಕುರು ಮೇ ಮಾತುರ್ನ ಮಿಥ್ಯಾವಾದಿನೋ ವಯಮ್ ॥ ೫೭॥**
**ಇತಿ ಬ್ರುವಂತಂ ಶ್ರೀರಾಮಂ ಸೀತಾ ಭೀತಾಽಬ್ರವೀದ್ವಚಃ ॥**

೫೬-೫೭. ಎಲೈ ಶುಭಳೆ, ರಾಜನಿಂದ ನನಗೆ ದಂಡಕಾರಣ್ಯದಲ್ಲಿ ರಾಜ್ಯವು ಕೊಡಲ್ಪಟ್ಟಿದೆ. ಆದ್ದರಿಂದ ಅದನ್ನು ಕಾಪಾಡುವದಕ್ಕಾಗಿ ನಾನು ಜಾಗ್ರತೆಯಾಗಿ ಹೊರಡಲಿರುವೆನು. ಎಲೌ ಸ್ತ್ರೀಯೆ, ಈಗಲೆ ನಾನು ಕಾಡಿಗೆ ಹೋಗುವೆನು. ನೀನಾದರೊ, ಅತ್ತೆಯ ಸಮೀಪದಲ್ಲಿದ್ದುಕೊಂಡವಳಾಗಿ ನನ್ನ ತಾಯಿಯ ಸೇವೆಯನ್ನು ಮಾಡಿಕೊಂಡಿರು. ನಾವು ಯಾವಾಗಲೂ ಸುಳ್ಳುಹೇಳುವವ್ವರಲ್ಲ. ಹೀಗೆಂದು ಹೇಳುತ್ತಿರುವ ಶ್ರೀರಾಮನನ್ನು ಕುರಿತು ಹೆದರಿದವಳಾದ ಸೀತೆಯು ಹೀಗೆಂದಳು.

**ಕಿಮರ್ಥಂ ವನರಾಜ್ಯಂ ತೇ ಪಿತ್ರಾ ದತ್ತಂ ಮಹಾತ್ಮನಾ ।**
**ತಾಮಾಹ ರಾಮಃ ಕೈಕೇಯ್ಯೈ ರಾಜಾ ಪ್ರೀತೋ ವರಂ ದದೌ ॥ ೫೮ ॥**

**ಭರತಾಯ ದದೌ ರಾಜ್ಯಂ ವನವಾಸಂ ಮಮಾನಘೇ ।**
**ಚತುರ್ದಶ ಸಮಾಸ್ತತ್ರ ವಾಸೋ ಮೇ ಕಿಲ ಯಾಚಿತಃ ॥ ೫೯ ॥**
**ತಯಾ ದೇವ್ಯಾ ದದೌ ರಾಜಾ ಸತ್ಯವಾದೀ ದಯಾಪರಃ ।**
**ಅತಃ ಶೀಘ್ರಂ ಗಮಿಷ್ಯಾಮಿ ಮಾ ವಿಘ್ನಂ ಕುರು ಭಾಮಿನಿ ॥ ೬೦ ॥**

೫೮-೬೦. 'ಮಹಾತ್ಮನಾದ ನಿನ್ನ ತಂದೆಯಿಂದ ವನರಾಜ್ಯವೇಕೆ ಕೊಡಲ್ಪಟ್ಟಿತು?' ಆಗ ರಾಮನೆಂದನು : "ರಾಜನು ಕೈಕೇಯಿಯ ವಿಷಯಕ್ಕೆ ಸಂತುಷ್ಟನಾಗಿ ವರವನ್ನು ಕೊಟ್ಟನು. ಭರತನಿಗೆ ರಾಜ್ಯವನ್ನೂ ನನಗೆ ವನವಾಸವನ್ನೂ ಅನುಗ್ರಹಿಸಿದನು. ಎಲೈ ಪಾಪರಹಿತಳೆ, ಹದಿನಾಲ್ಕು ವರ್ಷಗಳಕಾಲ ಅಲ್ಲಿ ವಾಸಮಾಡಬೇಕೆಂತ ನನ್ನನ್ನು ಕೇಳಲಾಯಿತು. ದಯಾಪರನೂ ಸತ್ಯವಾದಿಯೂ ಆದ ರಾಜನು ಹೀಗೆ ಬೇಡಿಕೊಂಡ ಕೈಕೇಯಿಗೆ ವರವನ್ನು ಕೊಟ್ಟಿರುವನು. ಆದ್ದರಿಂದ ನಾನು ಜಾಗ್ರತೆಯಾಗಿ ಹೊರಡಲಿರುವೆನು. ಎಲೌ ಭಾಮಿನಿಯೆ, ಇದಕ್ಕೆ ವಿಘ್ನಮಾಡಬೇಡ."

**ಶ್ರುತ್ವಾ ತದ್ರಾಮವಚನಂ ಜಾನಕೀ ಪ್ರೀತಿಸಂಯುತಾ ।**
**ಅಹಮಗ್ರೇ ಗಮಿಷ್ಯಾಮಿ ವನಂ ಪಶ್ಚಾತ್ ತ್ವಮೇಷ್ಯಸಿ ॥ ೬೧ ॥**
**ಇತ್ಯಾಹ ಮಾಂ ವಿನಾ ಗಂತುಂ ತವ ರಾಘವ ನೋಚಿತಮ್ ।**

೬೧. ರಾಮನ ಆ ಮಾತನ್ನು ಕೇಳಿ ಸೀತೆಯು ಪ್ರೀತಿಯಿಂದ ಕೂಡಿದವಳಾಗಿ 'ರಾಘವನೆ, ಕಾಡಿಗೆ ನಾನು ಮುಂದಾಗಿ ಹೋಗುವೆನು ; ಅನಂತರ ನೀನು ಬರುವೆಯಂತೆ ; ನನ್ನನ್ನು ಬಿಟ್ಟುಹೋಗುವದು ನಿನಗೆ ತಕ್ಕದ್ದಲ್ಲ' - ಎಂದಳು.

**ತಾಮಾಹ ರಾಘವಃ ಪ್ರೀತಃ ಸ್ವಪ್ರಿಯಾಂ ಪ್ರಿಯವಾದಿನೀಮ್ ।**
**ಕಥಂ ವನಂ ತ್ವಾಂ ನೇಷ್ಯೇಽಹಂ ಬಹುವ್ಯಾಘ್ರಸಮಾಕುಲಮ್ ॥ ೬೨ ॥**
**ರಾಕ್ಷಸಾ ಘೋರರೂಪಾಶ್ಚ ಸಂತಿ ಮಾನುಷಭೋಜಿನಃ ।**
**ಸಿಂಹವ್ಯಾಘ್ರವರಾಹಾಶ್ಚ ಸಂಚರಂತಿ ಸಮಂತತಃ ॥ ೬೩ ॥**
**ಕಟ್ವಮ್ಲಫಲಮೂಲಾನಿ ಭೋಜನಾರ್ಥಂ ಸುಮಧ್ಯಮೇ ।**
**ಅಪೂಪಾನಿ ವ್ಯಂಜನಾನಿ ವಿದ್ಯಂತೇ ನ ಕದಾಚನ ॥ ೬೪ ॥**
**ಕಾಲೇ ಕಾಲೇ ಫಲಂ ವಾಪಿ ವಿದ್ಯತೇ ಕುತ್ರ ಸುಂದರಿ ।**
**ಮಾರ್ಗೋ ನ ದೃಶ್ಯತೇ ಕ್ವಾಪಿ ಶರ್ಕರಾಕಂಟಕಾನ್ವಿತಃ ॥ ೬೫ ॥**

೬೨-೬೫. ಪ್ರಿಯವಾದ ಮಾತನ್ನಾಡುವ ತನ್ನ ಹೆಂಡತಿಯನ್ನು ಕುರಿತು ರಾಮನು ಸಂತುಷ್ಟನಾಗಿ ಆಕೆಗೆ ಹೀಗೆ ಹೇಳಿದನು : ಬಹಳವಾದ ಹುಲಿ - ಮುಂತಾದವುಗಳಿಂದ ಕೂಡಿದ ಕಾಡಿಗೆ ನಿನ್ನನ್ನು ಹೇಗೆ ಕರೆದೊಯ್ಯಲಿ ? ಅಲ್ಲಿ ಭಯಂಕರರಾದ, ಮನುಷ್ಯರನ್ನೇ ತಿಂದುಹಾಕುವಂಥ ರಾಕ್ಷಸರೂ ಸಿಂಹ, ಹುಲಿ, ಕಾಡುಹಂದಿ ಮೊದಲಾ

ದವೂ ಸಂಚಾರಮಾಡುತ್ತಿರುವವು. ಎಲೈ ಸುಮಧ್ಯಮಳೆ, (ಶೋಭನವಾದ ನಡುವುಳ್ಳ ವಳೆ) ಅಲ್ಲಿ ಕಹಿ, ಹುಳಿಯಾದ ಗೆಡ್ಡೆಗೆಣಸುಗಳು, ಹಣ್ಣುಗಳೇ ಊಟಕ್ಕೆ ದೊರಕುವವು. ಕಡುಬುಗಳು, ತರಕಾರಿಗಳು ಎಂದಿಗೂ ಸಿಗಲಾರವು. ಎಲೌ ಸುಂದರಿಯೆ, ಹಣ್ಣು ಕೂಡ ಕಾಲಕಾಲಕ್ಕೆ (ಬೇಕಾದಾಗಲೆಲ್ಲ) ಎಲ್ಲಿರುತ್ತದೆ ? ಕಲ್ಲುಮುಳ್ಳುಗಳಿಂದ ಕೂಡಿದ ಆ ಜಾಗದಲ್ಲಿ ದಾರಿಯೂ ಇರುವದಿಲ್ಲ.

**ಗುಹಾಗಹ್ವರಸಂಬಾಧಂ ಝಿಲ್ಲೀದಂಶಾದಿಭಿರ್ಯುತಮ್ ।**
**ಏವಂ ಬಹುವಿಧಂ ದೋಷಂ ವನಂ ದಂಡಕಸಂಜ್ಞಿತಮ್ ॥ ೬೬ ॥**
**ಪಾದಚಾರೇಣ ಗಂತವ್ಯಂ ಶೀತವಾತಾತಪಾದಿಮತ್ ।**
**ರಾಕ್ಷಸಾದೀನ್ ವನೇ ದೃಷ್ಟ್ವಾ ಜೀವಿತಂ ಹಾಸ್ಯಸೇಽಚಿರಾತ್ ॥ ೬೭ ॥**
**ತಸ್ಮಾದ್ ಭದ್ರೇ ಗೃಹೇ ತಿಷ್ಠ ಶೀಘ್ರಂ ದ್ರಕ್ಷ್ಯಸಿ ಮಾಂ ಪುನಃ ॥**

೬೬-೬೭. ದಟ್ಟವಾದ ಪೊದೆಗಳಿಂದಲೂ ಗುಹೆಗಳಿಂದಲೂ ಕೂಡಿರುವ ಹಾಗೂ ಚಿಗಟ ಸೊಳ್ಳೆಗಳಿಂದ ತುಂಬಿರುವ ದಂಡಕಾರಣ್ಯವೆಂಬ ಕಾಡು ಅನೇಕ ವಿಧ ವಾದ ತೊಂದರೆಗಳಿಂದ ಕೂಡಿರುತ್ತದೆ. ಅಲ್ಲಿ ಕಾಲುನಡಿಗೆಯಿಂದಲೇ ಹೋಗಬೇಕು. ಚಳಿ, ಗಾಳಿ, ಬಿಸಿಲುಗಳಿಂದ ಕೂಡಿರುವ ಆ ಜಾಗವು (ವಾಸಕ್ಕೆ ಕಷ್ಟಕರವು). ನೀನು ರಾಕ್ಷಸರೇ ಮುಂತಾದವರನ್ನು ಕಂಡು ಬಹುಬೇಗನೆ (ಹೆದರಿ) ಪ್ರಾಣವನ್ನು ಬಿಟ್ಟು ಬಿಡುತ್ತೀಯೆ. ಆದ್ದರಿಂದ ಎಲೈ ಮಂಗಳಕರಳೆ, ನೀನು ಮನೆಯಲ್ಲಿಯೇ ಇದ್ದು ಕೊಂಡಿರು. ಮತ್ತೆ ಬೇಗನೆ ನನ್ನನ್ನು ನೋಡುವೆಯಂತೆ.

**ರಾಮಸ್ಯ ವಚನಂ ಶ್ರುತ್ವಾ ಸೀತಾ ದುಃಖಸಮನ್ವಿತಾ ।**
**ಪ್ರತ್ಯುವಾಚ ಸ್ಫುರದ್‌ವಕ್ತ್ರಾ ಕಿಂಚಿತ್ ಕೋಪಸಮನ್ವಿತಾ ॥ ೬೮॥**
**ಕಥಂ ಮಾಮಿಚ್ಛಸೇ ತ್ಯಕ್ತುಂ ಧರ್ಮಪತ್ನೀಂ ಪತಿವ್ರತಾಮ್ ।**
**ತ್ವದನನ್ಯಾಮದೋಷಾಂ ಮಾಂ ಧರ್ಮಜ್ಞೋಽಸಿ ದಯಾಪರಃ ॥ ೬೯ ॥**
**ತ್ವತ್ಸಮೀಪೇ ಸ್ಥಿತಾಂ ರಾಮ ಕೋ ವಾ ಮಾಂ ಧರ್ಷಯೇದ್ವನೇ ।**
**ಫಲಮೂಲಾದಿಕಂ ಯದ್ಯತ್ ತವ ಭುಕ್ತಾವಶೇಷಿತಮ್ ॥ ೭೦ ॥**
**ತದೇವಾಮೃತತುಲ್ಯಂ ಮೇ ತೇನ ತುಷ್ಟಾ ರಮಾಮ್ಯಹಮ್**

೬೮-೭೦. ರಾಮನ ಮಾತನ್ನು ಕೇಳಿ ದುಃಖದಿಂದ ಕೂಡಿದ ಸೀತೆಯು ಕೊಂಚ ಕೋಪವುಳ್ಳ ಮುಖದಿಂದ ಕೂಡಿದವಳಾಗಿ ಪ್ರತ್ಯುತ್ತರವನ್ನು ಕೊಟ್ಟಳು. ''ಧರ್ಮಪತ್ನಿಯೂ ಪತಿವ್ರತೆಯೂ ಆದ, ದೋಷರಹಿತಳಾದ, ಎಂದೆಂದಿಗೂ ನಿನಗಿಂತ ಬೇರೆಯಲ್ಲದ, ನನ್ನನ್ನು ದಯಾಪೂರ್ಣನೂ ಧರ್ಮವನ್ನು ಅರಿತಿರುವವನೂ ಆದ ನೀನು ಬಿಡಲು ಹೇಗೆ ಇಷ್ಟಪಡುವೆ? ಎಲೈ ರಾಮನೆ, ನಿನ್ನ ಸಮೀಪದಲ್ಲಿಯೇ ಇದ್ದು

ಕೊಂಡಿರುವ ನನ್ನನ್ನು ಯಾವನು ತಾನೆ ಅಪಹರಿಸಿಯಾನು ? ನೀನು ತಿಂದು ಉಳಿಯುವ ಕಂದಮೂಲಫಲಗಳೇನಿರುವವೋ ಅದೇ ನನಗೆ ಅಮೃತಸಮಾನವು. ಅದರಿಂದಲೇ ತೃಪ್ತಳಾಗಿ ಆನಂದದಿಂದಿರುವೆನು.''

**ತ್ವಯಾ ಸಹ ಚರಂತ್ಯಾ ಮೇ ಕುಶಾಃ ಕಾಶಾಶ್ಚ ಕಂಟಕಾಃ ।**
**ಪುಷ್ಪಾಸ್ತರಣತುಲ್ಯಾ ಮೇ ಭವಿಷ್ಯನ್ತಿ ನ ಸಂಶಯಃ ॥ ೭೧ ॥**
**ಅಹಂ ತ್ವಾ ಕ್ಲೇಶಯೇ ನೈವ ಭವೇಯಂ ಕಾರ್ಯಸಾಧಿನೀ ।**
**ಬಾಲ್ಯೇ ಮಾಂ ವೀಕ್ಷ್ಯ ಕಶ್ಚಿದ್ ವೈ ಜ್ಯೋತಿಃಶಾಸ್ತ್ರವಿಶಾರದಃ ॥ ೭೨ ॥**
**ಪ್ರಾಹ ತೇ ವಿಪಿನೇ ವಾಸಃ ಪತ್ಯಾ ಸಹ ಭವಿಷ್ಯತಿ ।**
**ಸತ್ಯವಾದೀ ದ್ವಿಜೋ ಭೂಯಾದ್ ಗಮಿಷ್ಯಾಮಿ ತ್ವಯಾ ಸಹ ॥ ೭೩ ॥**

೭೧-೭೩. ''ನಿನ್ನೊಡನೆ ಸಂಚಾರಮಾಡುವಾಗ ದರ್ಭೆಹುಲ್ಲುಗಳು, ಕಳೆಗಳು, ಮುಳ್ಳುಗಳು - ಎಲ್ಲವೂ ಹೂವಿನ ಹಾಸಿಗೆಯಂತೆ (ಸುಖಕರ)ವಾಗುವದರಲ್ಲಿ ಸಂಶಯವಿಲ್ಲ. ನಾನು ನಿನಗೆ ಎಂದಿಗೂ ಹಿಂಸೆಯನ್ನು ಕೊಡುವದಿಲ್ಲ. ನಿನ್ನ ಕೆಲಸಗಳಿಗೆ ಅನುಕೂಲಳಾಗಿಯೇ ಇದ್ದುಕೊಂಡಿರುವೆನು. ನನ್ನ ಚಿಕ್ಕವಯಸ್ಸಿನಲ್ಲಿಯೇ ಒಬ್ಬ ಜೋಯಿಸನು ನನ್ನನ್ನು ನೋಡಿ 'ಮಗಳೆ, ನಿನಗೆ ಗಂಡನೊಡನೆ ಕಾಡಿನಲ್ಲಿ ವಾಸಿಸುವ ಯೋಗವಿದೆ' ಎಂದು ಹೇಳಿದ್ದನು. ಆ ಬ್ರಾಹ್ಮಣನ ಮಾತು ನಿಜವಾಗಲಿ ! ನಾನು ನಿನ್ನೊಡನೆ ಕಾಡಿಗೆ ಬರಲಿರುವೆನು.''

**ಅನ್ಯತ್ ಕಿಂಚಿತ್ ಪ್ರವಕ್ಷ್ಯಾಮಿ ಶ್ರುತ್ವಾ ಮಾಂ ನಯ ಕಾನನಮ್ ।**
**ರಾಮಾಯಣಾನಿ ಬಹುಶಃ ಶ್ರುತಾನಿ ಬಹುಭಿರ್ದ್ವಿಜೈಃ ॥ ೭೪ ॥**
**ಸೀತಾಂ ವಿನಾ ವನಂ ರಾಮೋ ಗತಃ ಕಿಂ ಕುತ್ರಚಿದ್ವದ ।**
**ಅತಸ್ತ್ವಯಾ ಗಮಿಷ್ಯಾಮಿ ಸರ್ವಥಾ ತ್ವತ್ಸಹಾಯಿನೀ ॥ ೭೫ ॥**
**ಯದಿ ಗಚ್ಛಸಿ ಮಾಂ ತ್ಯಕ್ತ್ವಾ ಪ್ರಾಣಾಂಸ್ತ್ಯಕ್ಷ್ಯಾಮಿ ತೇಽಗ್ರತಃ ।**

೭೪-೭೫. ಮತ್ತೊಂದು ವಿಚಾರವನ್ನು ಸ್ವಲ್ಪವೇ ಹೇಳಲಿರುವೆನು ; ಕೇಳು ಅನಂತರ ನನ್ನನ್ನು ಕರೆದೊಯ್ಯುವವನಾಗು. ಬ್ರಾಹ್ಮಣರಿಂದ ಬಹಳ ಸಲ ಅನೇಕ ರಾಮಾಯಣಕಥೆಗಳನ್ನು ಕೇಳಿರುವೆನು. ಆದರೆ ಎಲ್ಲಿಯಾದರೂ ರಾಮನು ಸೀತೆಯನ್ನು ಬಿಟ್ಟು ಕಾಡಿಗೆ ಹೋದಂಥ ಸಂದರ್ಭವುಂಟೆ ? ಹಾಗಿದ್ದರೆ ಎಲ್ಲಿ ? ಎಂಬುದನ್ನು ಹೇಳು. ಆದ್ದರಿಂದ ನಾನು ಎಲ್ಲಾ ರೀತಿಯಿಂದಲೂ ನಿನಗೆ ಸಹಾಯಕಳಾಗಿ ನಿನ್ನೊಡನೆ ಬರಲಿರುವೆನು ಒಂದು ವೇಳೆ ನನ್ನನ್ನು ಬಿಟ್ಟು ನೀನು ಒಬ್ಬನೇ ಕಾಡಿಗೆ ಹೊರಡುವೆಯಾದರೆ ನಿನ್ನ ಎದುರಿಗೇ ಪ್ರಾಣಗಳನ್ನು ಕಳೆದುಕೊಂಡುಬಿಡುವೆನು.

**ಇತಿ ತಂ ನಿಶ್ಚಯಂ ಜ್ಞಾತ್ವಾ ಸೀತಾಯಾ ರಘುನಂದನಃ ।**
**ಅಬ್ರವೀದ್ದೇವಿ ಗಚ್ಛ ತ್ವಂ ವನಂ ಶೀಘ್ರಂ ಮಯಾ ಸಹ ॥ ೭೬ ॥**
**ಅರುಂಧತ್ಯೈ ಪ್ರಯಚ್ಛಾಶು ಹಾರಾನಾಭರಣಾನಿ ಚ ।**
**ಬ್ರಾಹ್ಮಣೇಭ್ಯೋ ಧನಂ ಸರ್ವಂ ದತ್ವಾ ಗಚ್ಛಾಮಹೇ ವಯಮ್ ॥ ೭೭ ॥**

೭೬-೭೭. ಶ್ರೀರಾಮನು ಸೀತೆಯ ಆ ನಿರ್ಣಯವನ್ನರಿತವನಾಗಿ ''ಎಲೌ ದೇವಿಯೆ, ನೀನು ಜಾಗ್ರತೆಯಾಗಿ ನನ್ನೊಡನೆ ಕಾಡಿಗೆ ಹೊರಡುವವಳಾಗು ; ಹಾರಗಳನ್ನೂ ಒಡವೆಗಳನ್ನೂ ಅರುಂಧತಿಗೆ ಕೊಡುವವಳಾಗು ; ನಮ್ಮ ಎಲ್ಲಾ ಧನವನ್ನೂ ಬ್ರಾಹ್ಮಣರಿಗೆ ಕೊಟ್ಟು ನಾವು ಹೊರಡೋಣ'' ಎಂದನು.

**ಇತ್ಯುಕ್ತ್ವಾ ಲಕ್ಷ್ಮಣೇನಾಶು ದ್ವಿಜಾನಾಹೂಯ ಭಕ್ತಿತಃ ।**
**ದದೌ ಗವಾಂ ವೃಂದಶತಂ ಧನಾನಿ**
**ವಸ್ತ್ರಾಣಿ ದಿವ್ಯಾನಿ ವಿಭೂಷಣಾನಿ ।**
**ಕುಟುಂಬವದ್ಭ್ಯಃ ಶ್ರುತಶೀಲವದ್ಭ್ಯಃ**
**ಮುದಾ ದ್ವಿಜೇಭ್ಯೋ ರಘುವಂಶಕೇತುಃ ॥ ೭೮ ॥**
**ಅರುಂಧತ್ಯೈ ದದೌ ಸೀತಾ ಮುಖ್ಯಾನ್ಯಾಭರಣಾನಿ ಚ ।**
**ರಾಮೋ ಮಾತುಃ ಸೇವಕೇಭ್ಯೋ ದದೌ ಧನಮನೇಕಧಾ ॥ ೭೯ ॥**
**ಸ್ವಕಾಂತಃಪುರವಾಸಿಭ್ಯಃ ಸೇವಕೇಭ್ಯಃ ತಥೈವ ಚ ।**
**ಪೌರಜಾನಪದೇಭ್ಯಶ್ಚ ಬ್ರಾಹ್ಮಣೇಭ್ಯಃ ಸಹಸ್ರಶಃ ॥ ೮೦ ॥**

೭೮-೮೦. ಹೀಗೆಂದು ಹೇಳಿ ಲಕ್ಷ್ಮಣನ ಮೂಲಕ ಬ್ರಾಹ್ಮಣರನ್ನು ಕರೆಯಿಸಿ ಭಕ್ತಿಯಿಂದ ನೂರಾರು ಗೋವುಗಳ ಗುಂಪನ್ನೂ ಹಣವನ್ನೂ ಬಟ್ಟೆಗಳನ್ನೂ ಅಮೂಲ್ಯವಾದ ಆಭರಣಗಳನ್ನೂ ಒಳ್ಳೆಯ ವಿದ್ಯೆ-ನಡೆತೆಗಳಿಂದ ಕೂಡಿದವರೂ ಕುಟುಂಬವಂತರೂ ಆದ ದ್ವಿಜರಿಗೆ ಸಂತೋಷದಿಂದ ಶ್ರೀರಾಮನು ದಾನಮಾಡಿದನು. ಸೀತಾ-ದೇವಿಯು ಮುಖ್ಯವಾದ ಕೆಲವು ಒಡವೆಗಳನ್ನು ಅರುಂಧತಿಗೆ ಕೊಟ್ಟಳು. ರಾಮನು ತನ್ನ ತಾಯಿಯ ಪರಿಚಾರಕರಿಗೆ ಅನೇಕ ರೀತಿಯ ಹಣವನ್ನು ಕೊಟ್ಟನು. ಹಾಗೆಯೇ ತನ್ನ ಅಂತಃಪುರನಿವಾಸಿಗಳಾದ ಸೇವಕರಿಗೂ ಪೌರರಿಗೂ ನಾಗರಿಕರಿಗೂ ಸಹಸ್ರಗಟ್ಟಲೆಯ ಬ್ರಾಹ್ಮಣರಿಗೂ ದಾನಮಾಡಿದನು.

**ಲಕ್ಷ್ಮಣೋಽಪಿ ಸುಮಿತ್ರಾಂ ತು ಕೌಸಲ್ಯಾಯೈ ಸಮರ್ಪಯತ್ ।**
**ಧನುಷ್ಪಾಣಿಃ ಸಮಾಗತ್ಯ ರಾಮಸ್ಯಾಗ್ರೇ ವ್ಯವಸ್ಥಿತಃ ॥ ೮೧ ॥**

ರಾಮಃ ಸೀತಾಲಕ್ಷ್ಮಣಶ್ಚ ಜಗ್ಮುಃ ಸರ್ವೇ ನೃಪಾಲಯಮ್ ।
ಶ್ರೀರಾಮಃ ಸಹ ಸೀತಯಾ ನೃಪಪಥೇ ಗಚ್ಛನ್ ಶನೈಃ ಸಾನುಜಃ
ಪೌರಾನ್ ಜಾನಪದಾನ್ ಕುತೂಹಲದೃಶಃ ಸಾನಂದಮುದ್ವೀಕ್ಷಯನ್ ।
ಶ್ಯಾಮಃ ಕಾಮಸಹಸ್ರಸುಂದರವಪುಃ ಕಾಂತ್ಯಾ ದಿಶೋ ಭಾಸಯನ್
ಪಾದನ್ಯಾಸಪವಿತ್ರಿತಾಖಿಲಜಗತ್ ಪ್ರಾಪಾಲಯಂ ತತ್ಪಿತುಃ ॥ ೮೨ ॥

೮೧-೮೨. ಲಕ್ಷ್ಮಣನಾದರೋ, ತನ್ನ ತಾಯಿಯಾದ ಸುಮಿತ್ರೆಯನ್ನು ಕೌಸಲ್ಯೆಯ ವಶಕ್ಕೊಪ್ಪಿಸಿದನು. ತಾನು ಧನುರ್ಧಾರಿಯಾಗಿ ಬಂದು ರಾಮನ ಮುಂದೆ ನಿಂತುಕೊಂಡನು. ರಾಮ, ಸೀತೆ, ಲಕ್ಷ್ಮಣರು (ಮೂವರೂ) ದಶರಥರಾಜನ ಅರಮನೆಗೆ ಹೋದರು. (ಹಾಗೆ ಹೋಗುವಾಗ) ಸೀತಾಸಮೇತನಾದ ರಾಮನು ರಾಜ ಮಾರ್ಗದಲ್ಲಿ ಮೆಲ್ಲನೆ ಹೆಜ್ಜೆಯಿಡುತ್ತಾ ತಮ್ಮನೊಡನೆ ಕೂಡಿ ಕುತೂಹಲದೃಷ್ಟಿಯಿಂದ ನೋಡುತ್ತಿರುವ ಪಟ್ಟಣಿಗರು, ಹೊರಗಿನ ಜನರುಗಳನ್ನು ಆನಂದದಿಂದ ನೋಡುತ್ತಾ ಸಾವಿರಮನ್ಮಥರಿಗೆ ಸಮಾನವಾದ ಸುಂದರವಾದ ಕಾಂತಿಯುಳ್ಳ ನೀಲವಾದ ತನ್ನ ಶರೀರಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತಾ ಹೆಜ್ಜೆಯಿಟ್ಟಮಾತ್ರದಿಂದ ಪಾವನಗೊಳಿಸಲ್ಪಟ್ಟ ಇಡಿಯ ಪ್ರಪಂಚವುಳ್ಳವನಾಗಿ ತನ್ನ ತಂದೆಯ ಅರಮನೆಯನ್ನು ತಲುಪಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಚತುರ್ಥಃ ಸರ್ಗಃ**

ಃಃಃಃಃಃಃಃಃಃಃ

## ಐದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

ಆಯಾಂತಂ ನಾಗರಾ ದೃಷ್ಟ್ವಾ ಮಾರ್ಗೇ ರಾಮಂ ಸಜಾನಕಿಮ್ ।
ಲಕ್ಷ್ಮಣೇನ ಸಮಂ ವೀಕ್ಷ್ಯ ಊಚುಃ ಸರ್ವೇ ಪರಸ್ಪರಮ್ ॥ ೧ ॥
ಕೈಕೇಯ್ಯಾ ವರದಾನಾದಿ ಶ್ರುತ್ವಾ ದುಃಖಸಮಾವೃತಾಃ ।
ಬತ ರಾಜಾ ದಶರಥಃ ಸತ್ಯಸಂಧಂ ಪ್ರಿಯಂ ಸುತಮ್ ॥ ೨ ॥
ಸ್ತ್ರೀಹೇತೋರತ್ಯಜತ್ ಕಾಮೀ ತಸ್ಯ ಸತ್ಯವತಾ ಕುತಃ ।
ಕೈಕೇಯೀ ವಾ ಕಥಂ ದುಷ್ಟಾ ರಾಮಂ ಸತ್ಯಂ ಪ್ರಿಯಂಕರಮ್ ॥ ೩ ॥
ವಿವಾಸಯಾಮಾಸ ಕಥಂ ಕ್ರೂರಕರ್ಮಾತಿಮೂಢಧೀಃ ।
ಹೇ ಜನಾ ನಾತ್ರ ವಸ್ತವ್ಯಂ ಗಚ್ಛಾಮೋಽದ್ಯೈವ ಕಾನನಮ್ ॥ ೪ ॥

**ಯತ್ರ ರಾಮಃ ಸಭಾರ್ಯಶ್ಚ ಸಾನುಜೋ ಗಂತುಮಿಚ್ಛತಿ ॥**

೧-೪. ಶ್ರೀ ಮಹಾದೇವನಿಂತೆಂದನು : ದಾರಿಯಲ್ಲಿ ಸೀತಾಲಕ್ಷ್ಮಣರೊಡನೆ ಬರುತ್ತಿರುವ ರಾಮನನ್ನು ನಾಗರಿಕರು ನೋಡಿ ಕೈಕೇಯಿಗೆ ರಾಜನು ಕೊಟ್ಟ ವರಗಳ ವಿಷಯವನ್ನು ಕೇಳಿ ದುಃಖಿತರಾಗಿ ಒಬ್ಬರಿಗೊಬ್ಬರು ಮಾತನಾಡಿಕೊಂಡರು. ''ಅಯ್ಯೊ, ಕಾಮುಕನಾದ ದಶರಥರಾಜನು ಸತ್ಯಸಂಧನೂ ಪ್ರೀತಿಯ ಪುತ್ರನೂ ಆದ ರಾಮನನ್ನು ಹೆಂಗಸಿನ ನಿಮಿತ್ತವಾಗಿ ಕೈಬಿಟ್ಟನಲ್ಲ! ಇವನ ಸತ್ಯವೆಲ್ಲಿ ಹೋಯಿತು ? ಕ್ರೂರಕರ್ಮಳೂ ತೀರ ದಡ್ಡಳೂ ದುಷ್ಟಳೂ ಆದ ಕೈಕೇಯಿಯಾದರೂ ಪ್ರಿಯಕರನಾದ ಸತ್ಯನಿಷ್ಠನಾದ ರಾಮನನ್ನು ಹೇಗೆ ತಾನೆ ಊರಿನಿಂದ ಹೊರಡಿಸಿದಳು ? ಎಲೈ ಜನಗಳಿರಾ ! ಇಲ್ಲಿ ವಾಸಮಾಡತಕ್ಕದ್ದಲ್ಲ ; ಶ್ರೀರಾಮನು ಸೋದರ ಹಾಗೂ ಪತ್ನಿಯೊಡನೆ ಎಲ್ಲಿಗೆ ಹೋಗಲಿಚ್ಛಿಸುವನೋ ಆ ಕಾಡಿಗೆ ಈಗಲೇ ನಾವೂ ಹೋಗೋಣ.''

**ಪಶ್ಯಂತು ಜಾನಕೀಂ ಸರ್ವೇ ಪಾದಚಾರೇಣ ಗಚ್ಛತೀಮ್ ।**
**ಪುಂಭಿಃ ಕದಾಚಿದ್ ದೃಷ್ಟ್ವಾ ವಾ ಜಾನಕೀ ಲೋಕಸುಂದರೀ ॥ ೫ ॥**
**ಸಾಪಿ ಪಾದೇನ ಗಚ್ಛಂತೀ ಜನಸಂಘೇಷ್ವನಾವೃತಾ ।**
**ರಾಮೋಽಪಿ ಪಾದಚಾರೇಣ ಗಜಾಶ್ವಾದಿವಿವರ್ಜಿತಃ ॥ ೬ ॥**
**ಗಚ್ಛತಿ ದ್ರಕ್ಷ್ಯಥ ವಿಭುಂ ಸರ್ವಲೋಕೈಕಸುಂದರಮ್ ।**
**ರಾಕ್ಷಸೀ ಕೈಕಯೀ ನಾಮ್ನಾ ಜಾತಾ ಸರ್ವವಿನಾಶಿನೀ ॥ ೭ ॥**
**ರಾಮಸ್ಯಾಪಿ ಭವೇದ್ದುಃಖಂ ಸೀತಾಯಾಃ ಪಾದಯಾನತಃ ।**
**ಬಲವಾನ್ ವಿಧಿರೇವಾತ್ರ ಪುಂಪ್ರಯತ್ನೋ ಹಿ ದುರ್ಬಲಃ ॥ ೮ ॥**

೫-೮. ''ಕಾಲುನಡಿಗೆಯಿಂದ ಹೋಗುತ್ತಿರುವ ಸೀತೆಯನ್ನು ಎಲ್ಲರೂ ನೋಡಿರಿ. ಲೋಕಸುಂದರಿಯಾದ ಈಕೆಯು ಗಂಡಸರ ಕಣ್ಣಿಗೆ ಗೋಚರಳಾಗಿದ್ದಳೊ ? ಇಲ್ಲವೊ ? ಅಂಥವಳು ಕೂಡ ಜನಗಳ ಗುಂಪಿನಲ್ಲಿ ಮುಸುಕನ್ನು ಹಾಕಿಕೊಳ್ಳದೆ ಕಾಲುನಡಗೆಯಿಂದ ಹೋಗುತ್ತಿದ್ದಾಳೆ. ಶ್ರೀರಾಮನೂ ಆನೆ, ಕುದುರೆಗಳ ವಾಹನವಿಲ್ಲದೆ ನಡೆದೇ ಬರುತ್ತಿದ್ದಾನೆ. ಸರ್ವಲೋಕಸುಂದರನೂ ವಿಭುವೂ ಆದ ಅವನನ್ನು ನೋಡಿರಿ. ಎಲ್ಲವನ್ನೂ ನಾಶಗೊಳಿಸುವ ಕೈಕೇಯಿ ಎಂಬ ಹೆಸರಿನ ರಾಕ್ಷಸಿಯು ಹುಟ್ಟಿರುವಳು. ಸೀತಾದೇವಿಯು ನಡೆದುಹೋಗುತ್ತಿರುವದರಿಂದ ರಾಮನಿಗೂ ದುಃಖವಾಗಿರಬೇಕು. ಇದರಿಂದ ದೈವವೇ ಪ್ರಬಲವೆಂದಾಯಿತು. ಮನುಷ್ಯಪ್ರಯತ್ನವು ದುರ್ಬಲವೇ ಸರಿ.''

**ಇತಿ ದುಃಖಾಕುಲೇ ವೃಂದೇ ಸಾಧೂನಾಂ ಮುನಿಪುಂಗವಃ ।**
**ಅಬ್ರವೀದ್ವಾಮದೇವೋಽಥ ಸಾಧೂನಾಂ ಸಂಘಮಧ್ಯಗಃ ॥ ೯ ॥**

ಮಾನುಶೋಚಥ ರಾಮಂ ವಾ ಸೀತಾಂ ವಾ ವಚ್ಮಿ ತತ್ತ್ವತಃ ।
ಏಷ ರಾಮಃ ಪರೋ ವಿಷ್ಣುರಾದಿನಾರಾಯಣಃ ಸ್ಮೃತಃ ॥ ೧೦ ॥
ಏಷಾ ಸಾ ಜಾನಕೀ ಲಕ್ಷ್ಮೀರ್ಯೋಗಮಾಯೇತಿ ವಿಶ್ರುತಾ
ಅಸೌ ಶೇಷಸ್ತಮನ್ವೇತಿ ಲಕ್ಷ್ಮಣಾಖ್ಯಶ್ಚ ಸಾಂಪ್ರತಮ್ ॥ ೧೧ ॥
ಏಷ ಮಾಯಾಗುಣೈರ್ಯುಕ್ತಸ್ತತ್ತದಾಕಾರವಾನಿವ ।
ಏಷ ಏವ ರಜೋಯುಕ್ತೋ ಬ್ರಹ್ಮಾಭೂದ್ವಿಶ್ವಭಾವನಃ ॥ ೧೨ ॥
ಸತ್ತ್ವಾವಿಷ್ಟಸ್ತಥಾ ವಿಷ್ಣುಸ್ತ್ರಿಜಗತ್‌ಪರಿಪಾಲಕಃ
ಏಷ ರುದ್ರಸ್ತಾಮಸೋಂತೇ ಜಗತ್ಪ್ರಲಯಕಾರಣಮ್ ॥ ೧೩ ॥

೯-೧೩. ಹೀಗೆ ಗುಂಪಿನ ಜನರು ದುಃಖದಲ್ಲಿ ಮುಳುಗಿರಲಾಗಿ ಸಾಧುಗಳಲ್ಲಿ ಶ್ರೇಷ್ಠನಾದ ಹಾಗೂ ಸಾಧುಗಳ ಮಧ್ಯದಲ್ಲಿಯೇ ಇದ್ದ ವಾಮದೇವನೆಂಬ ಮುನಿಯು ಹೀಗೆಂದನು : ''ಎಲೈ ಜನಗಳಿರಾ, ಸೀತೆಯನ್ನಾಗಲಿ, ರಾಮನನ್ನಾಗಲಿ ಕುರಿತು ದುಃಖಪಡಬೇಡಿರಿ. ನಿಜವನ್ನು ಹೇಳುವೆನು ; ಕೇಳಿರಿ. ಈ ರಾಮನೆಂಬುವನು ಆದಿನಾರಾಯಣನಾದ ಪರಮನಾದ ವಿಷ್ಣುವು. ಈ ಸೀತೆಯಾದರೊ, ಯೋಗಮಾಯೆ ಯೆಂದು ಪ್ರಸಿದ್ಧಳಾದ ಲಕ್ಷ್ಮಿಯು. ಈಗ(ರಾಮನನ್ನು)ಅನುಸರಿಸಿರುವ ಲಕ್ಷ್ಮಣನೆಂಬುವನು ಆದಿಶೇಷನು. ಈ ರಾಮನು ಮಾಯಾಗುಣಗಳಿಂದ ವಿಶಿಷ್ಟನಾಗಿ ಆಯಾ ರೂಪಗಳುಳ್ಳವನಂತೆ ತೋರುವನು. ಈತನೇ ರಜೋಗುಣದಿಂದ ಕೂಡಿ ಜಗತ್ತನ್ನು ಸೃಷ್ಟಿಮಾಡುವ ಬ್ರಹ್ಮನಾಗಿದ್ದನು. ಹಾಗೆಯೇ ಸತ್ತ್ವಗುಣವಿಶಿಷ್ಟನಾದಾಗ ವಿಷ್ಣುವೆಂದೂ ಪ್ರಸಿದ್ಧನಾಗಿ ಮೂರು ಲೋಕಗಳನ್ನೂ ಕಾಪಾಡುವವನಾಗಿರುವನು. ಇವನೇ ತಮೋಗುಣದಿಂದ ಕೂಡಿದ ರುದ್ರನಾಗಿ ಪ್ರಲಯಕಾಲದಲ್ಲಿ ಜಗತ್ತನ್ನು ನಾಶಗೊಳಿಸುವ ಕಾರಣನಾಗುವನು.

ಏಷ ಮತ್ಸ್ಯಃ ಪುರಾ ಭೂತ್ವಾ ಭಕ್ತಂ ವೈವಸ್ವತಂ ಮನುಮ್ ।
ನಾವ್ಯಾರೋಪ್ಯ ಲಯಸ್ಯಾಂತೇ ಪಾಲಯಾಮಾಸ ರಾಘವಃ ॥ ೧೪ ॥
ಸಮುದ್ರಮಥನೇ ಪೂರ್ವಂ ಮಂದರೇ ಸುತಲಂ ಗತೇ ।
ಆಧಾರಯತ್ ಸ್ವಪೃಷ್ಠೇಽದ್ರಿಂ ಕೂರ್ಮರೂಪೀ ರಘೂತ್ತಮಃ ॥ ೧೫ ॥
ಮಹೀ ರಸಾತಲಂ ಯಾತಾ ಪ್ರಲಯೇ ಸೂಕರೋಽಭವತ್ ।
ತೋಲಯಾಮಾಸ ದಂಷ್ಟ್ರಾಗ್ರೇ ತಾಂ ಕ್ಷೋಣೀಂ ರಘುನಂದನಃ ॥ ೧೬ ॥
ನಾರಸಿಂಹಂ ವಪುಃ ಕೃತ್ವಾ ಪ್ರಹ್ಲಾದವರದಃ ಪುರಾ ।
ತ್ರೈಲೋಕ್ಯಕಂಟಕಂ ರಕ್ಷಃ ಪಾಟಯಾಮಾಸ ತನ್ನಖೈಃ ॥ ೧೭ ॥

೧೪-೧೭. "ಇವನು ಹಿಂದೆ ಮತ್ಸ್ಯನಾಗಿ ಅವತರಿಸಿ ಭಕ್ತನಾದ ವೈವಸ್ವತ ಮನುವನ್ನು ಹಡಗಿನಲ್ಲಿ ಏರಿಸಿ ಕುಳ್ಳಿರಿಸಿಕೊಂಡು ಪ್ರಲಯಕಾಲದ ಕೊನೆಯಲ್ಲಿ ಕಾಪಾಡಿದನು. ಹಾಗೆಯೇ ಮತ್ತೊಮ್ಮೆ ಹಿಂದೆ ಸಮುದ್ರವನ್ನು ಕಡೆಯುತ್ತಿರುವಾಗ (ಕಡಗೋಲಾಗಿದ್ದ) ಮಂದರಪರ್ವತವು ಸುತಲಲೋಕಕ್ಕೆ ಮುಳುಗಿಹೋಗಲಾಗಿ ಆಗ ಕೂರ್ಮನಾದ ರಘುವರನು ತನ್ನ ಬೆನ್ನಿನಮೇಲೆ ಬೆಟ್ಟವನ್ನು ಧರಿಸಿಕೊಂಡಿದ್ದನು. ಪ್ರಲಯಕಾಲದಲ್ಲಿ ರಸಾತಲಕ್ಕೆ ಮುಳುಗಿಹೋಗಿದ್ದ ಭೂಮಿಯನ್ನು ರಘುನಂದನನು ಆ ಕಾಲಕ್ಕೆ ಹಂದಿಯ ರೂಪವನ್ನು ಧರಿಸಿ ಕೋರೆದಾಡೆಯ ತುದಿಯಿಂದ ಎತ್ತಿ ತಂದನು. ಇನ್ನೊಮ್ಮೆ ಹಿಂದೆ ಪ್ರಹ್ಲಾದವರದನಾದ ಈತನು ನರಸಿಂಹರೂಪವನ್ನು ತಾಳಿ ಮೂರು ಲೋಕಗಳಿಗೂ ಕಂಟಕನಾಗಿದ್ದ ರಾಕ್ಷಸನನ್ನು ತನ್ನ ಉಗುರುಗಳಿಂದ ಸೀಳಿಹಾಕಿದನು.

**ಪುತ್ರರಾಜ್ಯಂ ಹೃತಂ ದೃಷ್ಟ್ವಾ ಹ್ಯದಿತ್ಯಾ ಯಾಚಿತಃ ಪುರಾ ।**
**ವಾಮನತ್ವಮುಪಾಗಮ್ಯ ಯಾಚ್ಞಯಾ ಚಾಹರತ್ ಪುನಃ ॥ ೧೮ ॥**
**ದುಷ್ಟಕ್ಷತ್ರಿಯಭೂಭಾರನಿವೃತ್ತ್ಯೈ ಭಾರ್ಗವೋಽಭವತ್ ।**
**ಸ ಏವ ಜಗತಾಂ ನಾಥ ಇದಾನೀಂ ರಾಮತಾಂ ಗತಃ ॥ ೧೯ ॥**
**ರಾವಣಾದೀನಿ ರಕ್ಷಾಂಸಿ ಕೋಟಿಶೋ ನಿಹನಿಷ್ಯತಿ ।**
**ಮಾನುಷೇಣೈವ ಮರಣಂ ತಸ್ಯ ದೃಷ್ಟಂ ದುರಾತ್ಮನಃ ॥ ೨೦ ॥**

೧೮-೨೦. "ಮಗನಾದ (ಇಂದ್ರನ) ರಾಜ್ಯವು ಅಸುರರಿಂದ ಅಪಹರಿಸಲ್ಪಟ್ಟಾಗ ಅದಿತಿಯು ಬಂದು ಪ್ರಾರ್ಥಿಸಿಕೊಳ್ಳಲಾಗಿ ತಾನು ವಾಮನನಾಗಿ ಭಿಕ್ಷೆಬೇಡಿ ಮತ್ತೆ ತಿರುಗಿ ರಾಜ್ಯವನ್ನು ತಂದುಕೊಟ್ಟನು. ದುಷ್ಟರಾದ ಕ್ಷತ್ರಿಯರಿಂದ ಭೂಮಿಯ ಭಾರವು ಹೆಚ್ಚಾದಾಗ ಅದನ್ನು ಪರಿಹರಿಸಲು ಪರಶುರಾಮನಾದನು. ಆ ಜಗತ್ಪತಿಯಾದ (ವಿಷ್ಣುವೇ) ಈಗ ರಾಮನಾಗಿರುತ್ತಾನೆ. ಮುಂದೆ ರಾವಣನೇ ಮುಂತಾದ ಕೋಟಿಗಟ್ಟಲೆಯ ರಾಕ್ಷಸರನ್ನೆಲ್ಲ ಕೊಲ್ಲಲಿದ್ದಾನೆ. ಏಕೆಂದರೆ ಆ ದುರಾತ್ಮನಾದ ರಾವಣನಿಗೆ ಮನುಷ್ಯನಿಂದಲೇ ಮರಣವುಂಟಾಗ ಬೇಕಾಗಿದೆ.

**ರಾಜ್ಞಾ ದಶರಥೇನಾಪಿ ತಪಸಾಽಽರಾಧಿತೋ ಹರಿಃ ।**
**ಪುತ್ರತ್ವಾಕಾಂಕ್ಷಯಾ ವಿಷ್ಣೋಃ ತದಾ ಪುತ್ರೋಽಭವದ್ಧರಿಃ ॥ ೨೧ ॥**
**ಸ ಏವ ವಿಷ್ಣುಃ ಶ್ರೀರಾಮೋ ರಾವಣಾದಿವಧಾಯ ಹಿ ।**
**ಗಂತಾಽದ್ಯೈವ ವನಂ ರಾಮೋ ಲಕ್ಷ್ಮಣೇನ ಸಹಾಯವಾನ್ ॥ ೨೨ ॥**
**ಏಷಾ ಸೀತಾ ಹರೇರ್ಮಾಯಾ ಸೃಷ್ಟಿಸ್ಥಿತ್ಯಂತಕಾರಿಣೀ ।**
**ರಾಜಾ ವಾ ಕೈಕಯೀ ವಾಪಿ ನಾತ್ರ ಕಾರಣಮಣ್ವಪಿ ॥ ೨೩ ॥**

೨೧-೨೩. ''ರಾಜನಾದ ದಶರಥನಿಂದಲೂ ತಪಸ್ಸಿನಿಂದ ಆರಾಧಿಸಲ್ಪಟ್ಟ ಶ್ರೀಹರಿಯು ಮಗನಾಗಿ ಹುಟ್ಟಬೇಕೆಂತ ಪ್ರಾರ್ಥಿಸಲ್ಪಟ್ಟವನಾಗಿ, (ಈಗ)ಮಗನಾಗಿ ಹುಟ್ಟಿರುತ್ತಾನೆ. ಆ ವಿಷ್ಣುವೇ ಶ್ರೀರಾಮನು. ರಾವಣಾದಿಗಳನ್ನು ಕೊಲ್ಲುವದಕ್ಕಾಗಿ ಲಕ್ಷ್ಮಣನ ಸಹಾಯವನ್ನು ಪಡೆದು ಆತನು ಈಗಲೇ ಕಾಡಿಗೆ ಹೋಗಲಿದ್ದಾನೆ. ಈ ಸೀತೆಯಾದರೊ, ಶ್ರೀಹರಿಯ ಮಾಯಾಶಕ್ತಿರೂಪಿಣಿಯಾಗಿರುವಳು. ಜಗತ್ತಿನ ಉತ್ಪತ್ತಿ ಸ್ಥಿತಿಲಯಗಳನ್ನು ಮಾಡುತ್ತಿರುವಳು. ಆದ್ದರಿಂದ (ಈ ವನವಾಸದ ವಿಚಾರದಲ್ಲಿ) ದಶರಥರಾಜನಾಗಲಿ, ಕೈಕೇಯಿಯಾಗಲಿ ಒಂದು (ಸಾಸಿವೆ)ಕಾಳಿನಷ್ಟೂ ಕಾರಣರಲ್ಲ.

**ಪೂರ್ವೇದ್ಯುರ್ನಾರದಃ ಪ್ರಾಹ ಭೂಭಾರಹರಣಾಯ ಚ ।**
**ರಾಮೋಽಪ್ಯಾಹ ಸ್ವಯಂ ಸಾಕ್ಷಾತ್ ಶ್ವೋ ಗಮಿಷ್ಯಾಮ್ಯಹಂ ವನಮ್ ॥ ೨೪ ॥**
**ಅತೋ ರಾಮಂ ಸಮುದ್ದಿಶ್ಯ ಚಿಂತಾಂ ತ್ಯಜತ ಬಾಲಿಶಾಃ ।**
**ರಾಮ ರಾಮೇತಿ ಯೇ ನಿತ್ಯಂ ಜಪಂತಿ ಮನುಜಾ ಭುವಿ ॥ ೨೫ ॥**
**ತೇಷಾಂ ಮೃತ್ಯುಭಯಾದೀನಿ ನ ಭವಂತಿ ಕದಾಚನ ।**
**ಕಾ ಪುನಸ್ತಸ್ಯ ರಾಮಸ್ಯ ದುಃಖಶಂಕಾ ಮಹಾತ್ಮನಃ ॥ ೨೬ ॥**

೨೪-೨೬. ''ಹಿಂದಿನ ದಿನ ನಾರದನು (ಬಂದು)ಭೂಭಾರವನ್ನು ಪರಿಹಾರಮಾಡಬೇಕೆಂದು ಹೇಳಿದನು. ರಾಮನೂ ಖುದ್ದಾಗಿ 'ನಾನು ನಾಳೆ ಕಾಡಿಗೆ ಹೋಗುವೆನು' ಎಂದು ತಾನೇ ಹೇಳಿದನು. ಆದ್ದರಿಂದ ಅಲ್ಪಪ್ರಜ್ಞರಾದ ನೀವು ರಾಮನನ್ನು ಕುರಿತು ದುಃಖಿಸುವದನ್ನು ಬಿಡಿರಿ. ಯಾವ ಮನುಷ್ಯರು ಯಾವಾಗಲೂ ರಾಮ ! ರಾಮ ! ಎಂದು ಜಪಮಾಡುವರೋ ಅವರಿಗೆ ಮೃತ್ಯುವಿನ ಅಂಜಿಕೆಯೇ ಮುಂತಾದವುಗಳಾವುವೂ ಉಂಟಾಗುವದಿಲ್ಲ. ಹೀಗಿರುವಲ್ಲಿ ಮಹಾತ್ಮನಾದ ಆ ರಾಮನಿಗೆ ದುಃಖವು ಒದಗುವ ವಿಚಾರದಲ್ಲಿ ಶಂಕೆಯಾದರೂ ಹೇಗೆ ಬಂದೀತು ?

**ರಾಮನಾಮ್ನೈವ ಮುಕ್ತಿಃ ಸ್ಯಾತ್ ಕಲೌ ನಾನ್ಯೇನ ಕೇನಚಿತ್ ।**
**ಮಾಯಾಮಾನುಷರೂಪೇಣ ವಿಡಂಬಯತಿ ಲೋಕಕೃತ್ ॥ ೨೭ ॥**
**ಭಕ್ತಾನಾಂ ಭಜನಾರ್ಥಾಯ ರಾವಣಸ್ಯ ವಧಾಯ ಚ ।**
**ರಾಜ್ಞಶ್ಚಾಭೀಷ್ಟಸಿದ್ಧ್ಯರ್ಥಂ ಮಾನುಷಂ ವಪುರಾಶ್ರಿತಃ ॥ ೨೮ ॥**
**ಇತ್ಯುಕ್ತ್ವಾ ವಿರರಾಮಾಥ ವಾಮದೇವೋ ಮಹಾಮುನಿಃ ॥**

೨೭-೨೮. ''ಕಲಿಯುಗದಲ್ಲಿ ರಾಮನಾಮವೊಂದರಿಂದಲೇ ಮುಕ್ತಿಯಾಗಲಿದೆ. ಬೇರೆ ಯಾವದರಿಂದಲೂ ಆಗಲಾರದು. ಮನುಷ್ಯಶರೀರವನ್ನಾಶ್ರಯಿಸಿರುವ ರಾಮನು ಭಕ್ತರುಗಳು ಸೇವಿಸುವದಕ್ಕೆ ತಕ್ಕವನಾಗಿಯೂ ರಾವಣನನ್ನು ಸಂಹಾರಮಾಡುವದಕ್ಕಾಗಿಯೂ ದಶರಥನ ಇಷ್ಟಾರ್ಥಸಿದ್ಧಿಗಾಗಿಯೂ ಮಾಯಾಮನುಷ್ಯನಾಗಿದ್ದು

ಕೊಂಡು ತೋರುತ್ತಿರುವನು.'' ಹೀಗೆಂದು ಹೇಳಿ ವಾಮದೇವಮಹಾಮುನಿಯು ಸುಮ್ಮನಾದನು.

**ಶ್ರುತ್ವಾ ತೇऽಪಿ ದ್ವಿಜಾಃ ಸರ್ವೇ ರಾಮಂ ಜ್ಞಾತ್ವಾ ಹರಿಂ ವಿಭುಮ್ ।**
**ಜಹುರ್ಹೃತ್ಸಂಶಯಗ್ರಂಥಿಂ ರಾಮಮೇವಾನ್ವಚಿಂತಯನ್ ॥ ೨೯ ॥**
**ಯ ಇದಂ ಚಿಂತಯೇನ್ನಿತ್ಯಂ ರಹಸ್ಯಂ ರಾಮಸೀತಯೋಃ ।**
**ತಸ್ಯ ರಾಮೇ ದೃಢಾ ಭಕ್ತಿರ್ಭವೇದ್ವಿಜ್ಞಾನಪೂರ್ವಿಕಾ ॥ ೩೦ ॥**
**ರಹಸ್ಯಂ ಗೋಪನೀಯಂ ವೋ ಯೂಯಂ ವೈ ರಾಘವಪ್ರಿಯಾಃ ।**
**ಇತ್ಯುಕ್ತ್ವಾ ಪ್ರಯಯೌ ವಿಪ್ರಸ್ತೇऽಪಿ ರಾಮಂ ಪರಂ ವಿದುಃ ॥ ೩೧ ॥**

೨೯-೩೧. ಈ ಉಪದೇಶವನ್ನು ಕೇಳಿ ಶ್ರೀರಾಮನನ್ನು ವಿಭುವಾದ ಶ್ರೀಹರಿಯೆಂದೇ ಆ ಬ್ರಾಹ್ಮಣರೆಲ್ಲರೂ ತಿಳಿದವರಾಗಿ ಹೃದಯದಲ್ಲಿದ್ದ ಸಂಶಯದ ಗಂಟನ್ನು ಕಳಚಿಕೊಂಡರು ; ಮತ್ತು ರಾಮನನ್ನೇ ಧ್ಯಾನಿಸುತ್ತಿದ್ದರು. ಸೀತಾ-ರಾಮರ ಈ ತತ್ತ್ವವನ್ನು ಯಾವನು ಸದಾ ಅನುಸಂಧಾನಮಾಡುತ್ತಾನೋ ಅವನಿಗೆ ಶ್ರೀರಾಮನಲ್ಲಿ ಜ್ಞಾನಪೂರ್ವಕವಾದ ದೃಢವಾದ ಭಕ್ತಿಯು ಉಂಟಾಗುವದು. ಆದ್ದರಿಂದ ನೀವುಗಳು ರಾಮನಿಗೆ ಬೇಕಾದವರಾಗಿದ್ದೀರಿ. ಈ ರಹಸ್ಯವನ್ನು ಕಾಪಾಡಿಕೊಳ್ಳಿರಿ. ಹೀಗೆಂದು ಹೇಳಿ ಬ್ರಾಹ್ಮಣನು ಹೊರಟುಹೋದನು. ಅವರುಗಳೂ ರಾಮನನ್ನು ಪರಬ್ರಹ್ಮನೆಂದೇ ತಿಳಿದು ಸುಮ್ಮನಾದರು.

**ತತೋ ರಾಮಃ ಸಮಾವಿಶ್ಯ ಪಿತೃಗೇಹಮವಾರಿತಃ ।**
**ಸಾನುಜಃ ಸೀತಯಾ ಗತ್ವಾ ಕೈಕೇಯೀಮಿದಮಬ್ರವೀತ್ ॥ ೩೨ ॥**
**ಆಗತಾಃ ಸ್ಮೋ ವಯಂ ಮಾತಃ ತ್ರಯಸ್ತೇ ಸಂಮತಂ ವನಮ್ ।**
**ಗಂತುಂ ಕೃತಧಿಯಃ ಶೀಘ್ರಮಾಜ್ಞಾಪಯತು ನಃ ಪಿತಾ ॥ ೩೩ ॥**
**ಇತ್ಯುಕ್ತಾ ಸಹಸೋತ್ಥಾಯ ಚೀರಾಣಿ ಪ್ರದದೌ ಸ್ವಯಮ್ ।**
**ರಾಮಾಯ ಲಕ್ಷ್ಮಣಾಯಾಥ ಸೀತಾಯೈ ಚ ಪೃಥಕ್ ಪೃಥಕ್ ॥ ೩೪ ॥**

೩೨-೩೪. ಅನಂತರ ರಾಮನು ತಡೆಯಿಲ್ಲದೆ ತಂದೆಯ ಅರಮನೆಯನ್ನು ಹೊಕ್ಕು ಸೀತಾಲಕ್ಷ್ಮಣರೊಡಗೂಡಿ ಕೈಕೇಯಿಯನ್ನು ಕುರಿತು ಹೀಗೆಂದನು : 'ತಾಯೆ, ನಾವು ಮೂವರು ನಿನಗೆ ಇಷ್ಟವಾದ ವನವಾಸವನ್ನು ಮಾಡಲು ಬಂದಿದ್ದೇವೆ. ಕಾಡಿಗೆ ಹೊರಡಲು ನಿಶ್ಚಯಿಸಿದ್ದೇವೆ. ತಂದೆಯ ಅಪ್ಪಣೆಯನ್ನು ಬೇಡುತ್ತೇವೆ'- ಎಂದನು. ಹೀಗೆ ಹೇಳಲ್ಪಟ್ಟ (ಕೈಕೇಯಿಯು) ಕೂಡಲೆ ಮೇಲೆದ್ದು ತಾನೇ ಸ್ವತಃ ರಾಮನಿಗೂ ಲಕ್ಷ್ಮಣನಿಗೂ ಸೀತೆಗೂ ಬೇರೆ ಬೇರೆಯಾಗಿ ನಾರುಮಡಿಗಳನ್ನು ಕೊಟ್ಟಳು.

**ರಾಮಸ್ತು ವಸ್ತ್ರಾಣ್ಯುತ್ಸೃಜ್ಯ ವನ್ಯಚೀರಾಣಿ ಪರ್ಯಧಾತ್ ।**
**ಲಕ್ಷ್ಮಣೋಽಪಿ ತಥಾ ಚಕ್ರೇ ಸೀತಾ ತನ್ನ ವಿಜಾನತೀ ॥ ೩೫ ॥**
**ಹಸ್ತೇ ಗೃಹೀತ್ವಾ ರಾಮಸ್ಯ ಲಜ್ಜಯಾ ಮುಖಮೈಕ್ಷತ ।**
**ರಾಮೋ ಗೃಹಿತ್ವಾ ತಚ್ಚೀರಮಂಶುಕೇ ಪರ್ಯವೇಷ್ಟಯತ್ ॥ ೩೬ ॥**
**ತದ್ ದೃಷ್ಟ್ವಾ ರುರುದುಃ ಸರ್ವೇ ರಾಜದಾರಾಃ ಸಮನ್ತತಃ ॥**

೩೫-೩೬. ರಾಮನಾದರೋ (ರೇಷ್ಮೆ) ವಸ್ತ್ರಗಳನ್ನು ಬಿಚ್ಚಿ ನಾರುಮಡಿಗಳನ್ನು ಧರಿಸಿಕೊಂಡನು. ಲಕ್ಷ್ಮಣನೂ ಹಾಗೇ ಮಾಡಿದನು. ಆದರೆ ಸೀತೆಯು ಆ ನಾರುಬಟ್ಟೆಯನ್ನುಡಲು ಅರಿಯದವಳಾಗಿ ಕೈಯಲ್ಲೇ ಹಿಡಿದುಕೊಂಡು ನಾಚಿಕೆಯಿಂದ ರಾಮನ ಮುಖವನ್ನು ನೋಡಿದಳು. ರಾಮನು ಆ ಬಟ್ಟೆಯನ್ನು ತೆಗೆದು ಕೊಂಡು ಸೀತೆಯು ಉಟ್ಟಿದ್ದ ಸೀರೆಯ ಮೇಲೆಯೇ ಉಡಿಸಿದನು. ಇದನ್ನು ನೋಡಿ ಸುತ್ತಲೂ ಇದ್ದ ರಾಜಪತ್ನಿಯರೂ ಅಳಲಾರಂಭಿಸಿದರು.

**ವಸಿಷ್ಠಸ್ತು ತದಾಕರ್ಣ್ಯ ರುದಿತಂ ಭರ್ತ್ಸಯನ್ ರುಷಾ ।**
**ಕೈಕೇಯೀಂ ಪ್ರಾಹ ದುರ್ವೃತ್ತೇ ರಾಮ ಏವ ತ್ವಯಾ ವೃತಃ ॥ ೩೭ ॥**
**ವನವಾಸಾಯ ದುಷ್ಟೇ ತ್ವಂ ಸೀತಾಯೈ ಕಿಂ ಪ್ರಯಚ್ಛಸಿ ।**
**ಯದಿ ರಾಮಂ ಸಮನ್ವೇತಿ ಸೀತಾ ಭಕ್ತ್ಯಾ ಪತಿವ್ರತಾ ॥ ೩೮ ॥**
**ದಿವ್ಯಾಂಬರಧರಾ ನಿತ್ಯಂ ಸರ್ವಾಭರಣಭೂಷಿತಾ ।**
**ರಮಯತ್ವನಿಶಂ ರಾಮಂ ವನದುಃಖನಿವಾರಿಣೀ ॥ ೩೯ ॥**

೩೭-೩೯. ಆ ಅಳುವನ್ನು ವಸಿಷ್ಠನು ಕೇಳಿದವನಾಗಿ ಕೋಪದಿಂದ ಕೈಕೇಯಿ ಯನ್ನು ಗದರಿಸುತ್ತಾ ಹೀಗೆಂದನು : ''ಎಲೌ ದುಷ್ಟಳೆ, ವನವಾಸಕ್ಕಾಗಿ ರಾಮನನ್ನು ಮಾತ್ರವೇ ನೀನು ಕೇಳಿಕೊಂಡಿರುವೆ. ಸೀತೆಗೇಕೆ (ನಾರುಮಡಿಯನ್ನು) ಕೊಡುತ್ತಿರುವೆ? ಪತಿವ್ರತೆಯಾದ ಸೀತೆಯು ಭಕ್ತಿಯಿಂದ ಒಂದು ವೇಳೆ ರಾಮನನ್ನು ಅನುಸರಿಸುತ್ತಾ ಳಾದರೆ ಆಕೆಯು ದಿವ್ಯವಸ್ತ್ರಗಳನ್ನುಟ್ಟು ಸರ್ವಾಭರಣಗಳಿಂದಲೂ ಅಲಂಕೃತಳಾಗಿ ಅರಣ್ಯ ವಾಸದ ದುಃಖವನ್ನು ಕಳೆಯುತ್ತಾ ರಾಮನನ್ನು ಯಾವಾಗಲೂ ಸಂತೋಷಗೊಳಿ ಸುತ್ತಿರಲಿ'' !

**ರಾಜಾ ದಶರಥೋಽಪ್ಯಾಹ ಸುಮಂತ್ರಂ ರಥಮಾನಯ ।**
**ರಥಮಾರುಹ್ಯ ಗಚ್ಛಂತು ವನಂ ವನಚರಪ್ರಿಯಾಃ ॥ ೪೦ ॥**
**ಇತ್ಯುಕ್ತ್ವಾ ರಾಮಮಾಲೋಕ್ಯ ಸೀತಾಂ ಚೈವ ಸಲಕ್ಷ್ಮಣಮ್ ।**
**ದುಃಖಾನ್ನಿಪತಿತೋ ಭೂಮೌ ರುರೋದಾಶ್ರುಪರಿಪ್ಲುತಃ ॥ ೪೧ ॥**

೪೦-೪೧. ದಶರಥರಾಜನೂ ಸುಮಂತ್ರನನ್ನು ಕುರಿತು 'ರಥವನ್ನು ತೆಗೆದುಕೊಂಡು ಬಾ ; ವನಚರರಿಗೆ ಪ್ರಿಯರಾದ ಇವರುಗಳು ರಥವನ್ನೇರಿ ಕಾಡಿಗೆ ಹೋಗಲಿ' ಎಂದು ಹೇಳುತ್ತಾ ಲಕ್ಷ್ಮಣಸಹಿತನಾದ ರಾಮನನ್ನೂ ಸೀತೆಯನ್ನೂ ನೋಡಿ ದುಃಖದಿಂದ ನೆಲದ ಮೇಲೆ ಬಿದ್ದವನಾಗಿ ಕಣ್ಣೀರುತುಂಬಿಕೊಂಡವನಾಗಿ ಅತ್ತನು.

**ಆರುರೋಹ ರಥಂ ಸೀತಾ ಶೀಘ್ರಂ ರಾಮಸ್ಯ ಪಶ್ಯತಃ ।**
**ರಾಮಃ ಪ್ರದಕ್ಷಿಣಂ ಕೃತ್ವಾ ಪಿತರಂ ರಥಮಾರುಹತ್ ॥ ೪೨ ॥**
**ಲಕ್ಷ್ಮಣಃ ಖಡ್ಗಯುಗಳಂ ಧನುಸ್ತೂಣೀಯುಗಂ ತಥಾ ।**
**ಗೃಹೀತ್ವಾ ರಥಮಾರುಹ್ಯ ನೋದಯಾಮಾಸ ಸಾರಥಿಮ್ ॥ ೪೩ ॥**
**ತಿಷ್ಠ ತಿಷ್ಠ ಸುಮಂತ್ರೇತಿ ರಾಜಾ ದಶರಥೋಽಬ್ರವೀತ್ ।**
**ಗಚ್ಛ ಗಚ್ಛೇತಿ ರಾಮೇಣ ನೋದಿತೋಽಚೋದಯದ್ರಥಮ್ ॥ ೪೪॥**
**ರಾಮೇ ದೂರಂ ಗತೇ ರಾಜಾ ಮೂರ್ಛಿತಃ ಪ್ರಾಪತದ್ ಭುವಿ ।**

೪೨-೪೪. ರಾಮನು ನೋಡುತ್ತಿದ್ದಂತೆಯೇ ಸೀತೆಯು ಜಾಗ್ರತೆಯಾಗಿ ರಥವನ್ನೇರಿದಳು. ರಾಮನು ತಂದೆಗೆ ಪ್ರದಕ್ಷಿಣೆಯನ್ನು ಮಾಡಿ ರಥವನ್ನೇರಿದನು. ಲಕ್ಷ್ಮಣನು ಒಂದು ಜೊತೆ ಕತ್ತಿಗಳು, ಬಿಲ್ಲು ಎರಡು ಬತ್ತಳಿಕೆಗಳು (ಬಾಣಗಳನ್ನು) ತೆಗೆದುಕೊಂಡು ರಥವನ್ನೇರಿ ಸಾರಥಿಯನ್ನು ಪ್ರೇರಿಸಿದನು. ದಶರಥರಾಜನು 'ಸುಮಂತ್ರನೆ, ನಿಲ್ಲು ನಿಲ್ಲು'- ಎಂದನು. 'ಹೊರಡು, ಹೊರಡು'-ಎಂದು ರಾಮನಿಂದ ಪ್ರೇರಿತನಾದವನಾಗಿ (ಸುಮಂತ್ರನು) ರಥವನ್ನು ಓಡಿಸಿದನು. ರಾಮನು ದೂರಕ್ಕೆ ಹೊರಟುಹೋಗಲಾಗಿ ರಾಜನು ಮೂರ್ಛಿತನಾಗಿ ನೆಲದಮೇಲೆ ಬಿದ್ದನು.

**ಪೌರಾಸ್ತು ಬಾಲವೃದ್ಧಾಶ್ಚ ವೃದ್ಧಾ ಬ್ರಾಹ್ಮಣಸತ್ತಮಾಃ ।**
**ತಿಷ್ಠ ತಿಷ್ಠೇತಿ ರಾಮೇತಿ ಕ್ರೋಶನ್ತೋ ರಥಮನ್ವಯುಃ ॥ ೪೫ ॥**
**ರಾಜಾ ರುದಿತ್ವಾ ಸುಚಿರಂ ಮಾಂ ನಯಂತು ಗೃಹಂ ಪ್ರತಿ**
**ಕೌಸಲ್ಯಾಯಾ ರಾಮಮಾತುರಿತ್ಯಾಹ ಪರಿಚಾರಕಾನ್ ॥ ೪೬ ॥**
**ಕಿಂಚಿತ್ಕಾಲಂ ಭವೇತ್ತತ್ರ ಜೀವನಂ ದುಃಖಿತಸ್ಯ ಮೇ ।**
**ಅಥ ಊರ್ಧ್ವಂ ನ ಜೀವಾಮಿ ಚಿರಂ ರಾಮಂ ವಿನಾ ಕೃತಃ ॥ ೪೭ ॥**
**ತತೋ ಗೃಹಂ ಪ್ರವಿಶ್ಯೈವ ಕೌಸಲ್ಯಾಯಾಃ ಪಪಾತ ಹ ।**
**ಮೂರ್ಛಿತಶ್ಚ ಚಿರಾದ್ ಬುದ್ಧ್ವಾ ತೂಷ್ಣೀಮೇವಾವತಸ್ಥಿವಾನ್ ॥ ೪೮ ॥**

೪೫-೪೮. ಹುಡುಗರು ಮುದುಕರೇ ಮುಂತಾದ ಎಲ್ಲಾ ನಾಗರಿಕರೂ ಮತ್ತು ಪೂಜ್ಯರಾದ ಬ್ರಾಹ್ಮಣಶ್ರೇಷ್ಠರೂ ರಾಮನೆ, ನಿಲ್ಲು ನಿಲ್ಲು, ಎಂದು ಕೂಗುತ್ತಾ ರಥವನ್ನೇ ಹಿಂಬಾಲಿಸಿದರು. ರಾಜನು ಬಹಳಕಾಲ ದುಃಖಪಟ್ಟವನಾಗಿ ಅನಂತರ

ಪರಿಚಾರಕರನ್ನು ಕುರಿತು 'ರಾಮನ ತಾಯಿಯಾದ ಕೌಸಲ್ಯೆಯ ಮನೆಗೆ ನನ್ನನ್ನು ಕರೆದೊಯ್ಯಿರಿ ; ದುಃಖಿತನಾದ ನನಗೆ ಸ್ವಲ್ಪವೇ ಸಮಯದವರೆಗೆ ಜೀವವು ಇದ್ದು ಕೊಂಡೀತು ; ಅನಂತರ ರಾಮನಿಂದ ಬೇರೆಯಾದ ನಾನು ಹೆಚ್ಚುಕಾಲ ಬದುಕಲಾರೆ' ಎಂದನು. ಹಾಗೆಯೇ ಕೌಸಲ್ಯೆಯ ಅರಮನೆಯನ್ನು ಪ್ರವೇಶಿಸಿದವನೇ ಬಿದ್ದವನಾಗಿ ಮೂರ್ಛೆಹೋದನು. ಬಹಳ ಹೊತ್ತಿನ ಮೇಲೆ ಎಚ್ಚತ್ತು ಸುಮ್ಮನೆ ಕುಳಿತುಕೊಂಡನು.

**ರಾಮಸ್ತು ತಮಸಾತೀರಂ ಗತ್ವಾ ತತ್ರಾವಸತ್ ಸುಖೀ ।**
**ಜಲಂ ಪ್ರಾಶ್ಯ ನಿರಾಹಾರೋ ವೃಕ್ಷಮೂಲೇಽಸ್ವಪದ್ ವಿಭುಃ ॥ ೪೯ ॥**
**ಸೀತಯಾ ಸಹ ಧರ್ಮಾತ್ಮಾ ಧನುಷ್ಪಾಣಿಸ್ತು ಲಕ್ಷ್ಮಣಃ ।**
**ಪಾಲಯಾಮಾಸ ಧರ್ಮಜ್ಞಃ ಸುಮಂತ್ರೇಣ ಸಮನ್ವಿತಃ ॥ ೫೦ ॥**

೪೯-೫೦. ಇತ್ತಕಡೆ ವಿಭುವಾದ, ಧರ್ಮಾತ್ಮನಾದ ರಾಮನು ತಮಸಾನದಿಯ ತೀರಕ್ಕೆ ಬಂದು ಅಲ್ಲಿ ನೀರನ್ನು ಕುಡಿದು ನಿರಾಹಾರನಾಗಿ ಮರದ ಬುಡದಲ್ಲಿ ಸೀತೆಯೊಡನೆ ವಿಶ್ರಾಂತಿಯನ್ನು ಹೊಂದಿದನು. ಧನುರ್ಧಾರಿಯಾದ ಧರ್ಮಜ್ಞನಾದ ಲಕ್ಷ್ಮಣನು ಸುಮಂತ್ರನೊಡಗೂಡಿ ಕಾವಲು ಕಾಯುತ್ತಿದ್ದನು.

**ಪೌರಾಃ ಸರ್ವೇ ಸಮಾಗತ್ಯ ಸ್ಥಿತಾಃ ತಸ್ಯಾವಿದೂರತಃ ।**
**ಶಕ್ತಾ ರಾಮಂ ಪುರಂ ನೇತುಂ ನೋ ಚೇದ್ ಗಚ್ಛಾಮಹೇ ವನಮ್ ॥ ೫೧ ॥**
**ಇತಿ ನಿಶ್ಚಯಮಾಜ್ಞಾಯ ತೇಷಾಂ ರಾಮೋಽತಿವಿಸ್ಮಿತಃ ।**
**ನಾಹಂ ಗಚ್ಛಾಮಿ ನಗರಮೇತೇ ವೈ ಕ್ಲೇಶಭಾಗಿನಃ ॥ ೫೨ ॥**
**ಭವಿಷ್ಯಂತೀತಿ ನಿಶ್ಚಿತ್ಯ ಸುಮಂತ್ರಮಿದಮಬ್ರವೀತ್ ।**

೫೧-೫೨. ಪಟ್ಟಣಿಗರೆಲ್ಲರೂ ಬಂದವರಾಗಿ ರಾಮನಿಗೆ ಸ್ವಲ್ಪವೇ ದೂರದಲ್ಲಿ ನೆಲಸಿದವರಾಗಿ ನಾವು ರಾಮನನ್ನು ಪಟ್ಟಣಕ್ಕೆ ಹಿಂತಿರುಗಿ ಕರೆದುಕೊಂಡು ಹೋಗಲು ಶಕ್ತರಾಗದಿದ್ದರೆ ವನಕ್ಕೇ ಹೊರಡುತ್ತೇವೆ-ಎಂದು ನಿಶ್ಚಯಿಸಿದರು. ಇದನ್ನು ತಿಳಿದವನಾದ ರಾಮನು ಆಶ್ಚರ್ಯಯುಕ್ತನಾಗಿ 'ನಾನು ಊರೊಳಕ್ಕೆ ಹೋಗುವದಿಲ್ಲ, ಆದರೆ ಇವರುಗಳು ತೊಂದರೆಗೆ ಒಳಗಾಗುತ್ತಾರೆ' ಎಂದಾಲೋಚಿಸಿ ಸುಮಂತ್ರನನ್ನು ಕುರಿತು ಇಂತೆಂದನು :

**ಇದಾನೀಮೇವ ಗಚ್ಛಾಮಃ ಸುಮಂತ್ರ ರಥಮಾನಯ ।**
**ಇತ್ಯಾಜ್ಞಪ್ತಃ ಸುಮಂತ್ರೋಽಪಿ ರಥಂ ವಾಹೈರಯೋಜಯತ್ ॥ ೫೩ ॥**
**ಆರುಹ್ಯ ರಾಮಃ ಸೀತಾ ಚ ಲಕ್ಷ್ಮಣೋಽಪಿ ಯಯುರ್ದ್ರುತಮ್ ।**
**ಅಯೋಧ್ಯಾಭಿಮುಖಂ ಗತ್ವಾ ಕಿಂಚಿದ್ದೂರಂ ತತೋ ಯಯುಃ ॥ ೫೪ ॥**

**ತೇಽಪಿ ರಾಮಮದೃಷ್ಟ್ವೈವ ಪ್ರಾತರುತ್ಥಾಯ ದುಃಖಿತಾಃ ।**
**ರಥನೇಮಿಗತಂ ಮಾರ್ಗಂ ಪಶ್ಯಂತಸ್ತೇ ಪುರಂ ಯಯುಃ ॥ ೫೫ ॥**
**ಹೃದಿ ರಾಮಂ ಸಸೀತಂ ತೇ ಧ್ಯಾಯಂತಸ್ತಸ್ಥುರನ್ವಹಮ್॥**

೫೪.-೫೫. 'ಸುಮಂತ್ರನೆ, ರಥವನ್ನು ತೆಗೆದುಕೊಂಡು ಬಾ ; ಈಗಲೆ ಹೊರಡೋಣ'. ಹೀಗೆಂದು ಅಪ್ಪಣೆಮಾಡಲ್ಪಟ್ಟ ಸುಮಂತ್ರನು ರಥವನ್ನು ಕುದುರೆಗಳಿಂದ ಸಜ್ಜುಗೊಳಿಸಿದನು. ಸೀತಾ-ರಾಮ-ಲಕ್ಷ್ಮಣರು ರಥವನ್ನೇರಿ ವೇಗವಾಗಿ ಹೊರಟರು. ಸ್ವಲ್ಪ ದೂರದವರೆಗೆ ಅಯೋಧ್ಯೆಯ ಕಡೆಗೆ ಹೋಗಿ ಅನಂತರ ವನಕ್ಕೆ ತೆರಳಿದರು. ಆ(ಪೌರರೂ) ಬೆಳಗ್ಗೆ ಎದ್ದು ರಾಮನನ್ನು ಕಾಣದೆ ದುಃಖಿತರಾಗಿ ರಥದ ಚಕ್ರಗಳ ಗುರುತನ್ನು ನೋಡಿಕೊಂಡವರಾಗಿ ಊರಿಗೆ ಹಿಂತಿರುಗಿದರು. ಹೃದಯದಲ್ಲಿ ಸೀತಾ ಸಮೇತನಾದ ರಾಮನನ್ನು ಯಾವಾಗಲೂ ಧ್ಯಾನಿಸುತ್ತಾ ಇದ್ದುಕೊಂಡಿದ್ದರು.

**ಸುಮಂತ್ರೋಽಪಿ ರಥಂ ಶೀಘ್ರಂ ನೋದಯಾಮಾಸ ಸಾದರಮ್ ।**
**ಸ್ಫೀತಾನ್ ಜನಪದಾನ್ ಪಶ್ಯನ್ ರಾಮಃ ಸೀತಾಸಮನ್ವಿತಃ ॥ ೫೬ ॥**
**ಗಂಗಾತೀರಂ ಸಮಾಗಚ್ಛತ್ ಶೃಂಗವೇರಾವಿದೂರತಃ ।**
**ಗಂಗಾಂ ದೃಷ್ಟ್ವಾ ನಮಸ್ಕೃತ್ಯ ಸ್ನಾತ್ವಾ ಸಾನಂದಮಾನಸಃ ॥ ೫೭ ॥**
**ಶಿಂಶಪಾವೃಕ್ಷಮೂಲೇ ಸ ನಿಷಸಾದ ರಘೂತ್ತಮಃ ॥**

೫೬-೫೭. ಸುಮಂತ್ರನೂ ರಥವನ್ನು ವೇಗವಾಗಿ ಶ್ರದ್ಧೆಯಿಂದ ನಡೆಯಿಸುತ್ತಿದ್ದನು. ಸೀತಾಸಮೇತನಾದ ರಾಮನು ವಿಸ್ತಾರವಾದ ದೇಶವಿಭಾಗಗಳನ್ನು ನೋಡುತ್ತಾ ಶೃಂಗವೇರ-ಎಂಬ ಪಟ್ಟಣಕ್ಕೆ ಸಮೀಪದಲ್ಲಿ ಗಂಗಾನದಿಯ ತೀರಕ್ಕೆ ಬಂದನು. ಗಂಗೆಯನ್ನು ಕಂಡು ನಮಸ್ಕರಿಸಿ ಆನಂದಮನಸ್ಕನಾಗಿ ಸ್ನಾನಮಾಡಿ ರಘುಶ್ರೇಷ್ಠನಾದ ರಾಮನು ಶಿಂಶಪಾವೃಕ್ಷದ ಬುಡದಲ್ಲಿ ಕುಳಿತುಕೊಂಡನು.

**ತತೋ ಗುಹೋ ಜನೈಃ ಶ್ರುತ್ವಾ ರಾಮಾಗಮಮಹೋತ್ಸವಮ್ ।**
**ಸಖಾಯಂ ಸ್ವಾಮಿನಂ ದ್ರಷ್ಟುಂ ಹರ್ಷಾತ್ತೂರ್ಣಂ ಸಮಾಪತತ್ ॥ ೫೮ ॥**
**ಫಲಾನಿ ಮಧುಪುಷ್ಪಾದಿ ಗೃಹೀತ್ವಾ ಭಕ್ತಿಸಂಯುತಃ ।**
**ರಾಮಸ್ಯಾಗ್ರೇ ವಿನಿಕ್ಷಿಪ್ಯ ದಂಡವತ್ ಪ್ರಾಪತತ್ ಭುವಿ ॥ ೫೯ ॥**
**ಗುಹಮುತ್ಥಾಯ ತಂ ತೂರ್ಣಂ ರಾಘವಃ ಪರಿಷಸ್ವಜೇ ।**
**ಸಂಪೃಷ್ಟಕುಶಲೋ ರಾಮಂ ಗುಹಃ ಪ್ರಾಂಜಲಿರಬ್ರವೀತ್ ॥ ೬೦ ॥**

೫೮-೬೦. ಅನಂತರ ಗುಹನು ರಾಮನ ಬಂದಿರುವಿಕೆಯ ಸಂತೋಷ (ಸುದ್ದಿ)ಯನ್ನು ಜನರಿಂದ ಕೇಳಿ ಸ್ನೇಹಿತನೂ ಪ್ರಭುವೂ ಆದ ಅವನನ್ನು ನೋಡುವದಕ್ಕಾಗಿ ಹರ್ಷದಿಂದ ಬಂದನು. ಹಣ್ಣುಗಳು, ಜೇನು, ಹೂವು - ಮುಂತಾದವುಗಳನ್ನು

ತೆಗೆದುಕೊಂಡು ಭಕ್ತಿಯಿಂದ ಕೂಡಿದವನಾಗಿ ಬಂದು ರಾಮನ ಮುಂದೆ ಎಲ್ಲವನ್ನೂ ಸಮರ್ಪಿಸಿ ದಂಡವತ್ ಪ್ರಣಾಮವನ್ನು ಮಾಡಿದನು. ರಾಮನು ಬೇಗನೆ ಗುಹನನ್ನು ಮೇಲಕ್ಕೆತ್ತಿಕೊಂಡವನಾಗಿ ಆಲಂಗಿಸಿಕೊಂಡನು. ಕುಶಲಪ್ರಶ್ನೆಯನ್ನು ಮಾಡಲ್ಪಟ್ಟ ಗುಹನು ಕೈಮುಗಿದುಕೊಂಡು ರಾಮನನ್ನು ಕುರಿತು ಹೀಗೆಂದನು :

**ಧನ್ಯೋಽಹಮದ್ಯ ಮೇ ಜನ್ಮ ನೈಷಾದಂ ಲೋಕಪಾವನ ।**
**ಬಭೂವ ಪರಮಾನಂದಃ ಸ್ಪೃಷ್ಟ್ವಾ ತೇಽಂಗಂ ರಘೂತ್ತಮ ॥ ೬೧ ॥**
**ನೈಷಾದರಾಜ್ಯಮೇತತ್ತೇ ಕಿಂಕರಸ್ಯ ರಘೂತ್ತಮ ।**
**ತ್ವದಧೀನಂ ವಸನ್ನತ್ರ ಪಾಲಯಾಸ್ಮಾನ್ ರಘೂದ್ವಹ ॥ ೬೨ ॥**
**ಆಗಚ್ಛ ಯಾಮೋ ನಗರಂ ಪಾವನಂ ಕುರು ಮೇ ಗೃಹಮ್ ।**
**ಗೃಹಾಣ ಫಲಮೂಲಾನಿ ತ್ವದರ್ಥಂ ಸಂಚಿತಾನಿ ಮೇ ।**
**ಅನುಗೃಹ್ಣೀಷ್ವ ಭಗವನ್ ದಾಸಸ್ತೇಽಹಂ ಸುರೋತ್ತಮ ॥ ೬೩ ॥**

೬೧-೬೩. ''ಎಲೈ ಲೋಕಪಾವನನೆ, ರಘುಶ್ರೇಷ್ಠನೆ, ನನ್ನ ಈ ನಿಷಾದ (ಬೇಡರ ಜಾತಿಯ) ಹುಟ್ಟು ಸಾರ್ಥಕವಾಯಿತು. ನಾನು ಧನ್ಯನಾದೆನು. ನಿನ್ನ ಶರೀರವನ್ನು ಮುಟ್ಟಿದ್ದರಿಂದ ನನಗೆ ಪರಮಾನಂದವಾಗಿದೆ. ಸೇವಕನಾದ ನನ್ನ ಈ ನೈಷಾದ ರಾಜ್ಯವು ನಿನ್ನ ಅಧೀನವಾಗಿದೆ. ಇಲ್ಲಿ ವಾಸಮಾಡುತ್ತಾ ನಮ್ಮನ್ನು ಕಾಪಾಡುವವನಾಗು. ಬಾ, ಊರೊಳಕ್ಕೆ ಹೋಗೋಣ, ನನ್ನ ಮನೆಯನ್ನು ಪವಿತ್ರಗೊಳಿಸುವವನಾಗು. ನಿನಗಾಗಿ ಸಂಗ್ರಹಿಸಿಟ್ಟಿರುವ ಈ ಕಂದಮೂಲಫಲಗಳನ್ನು ತೆಗೆದುಕೊ, ಪೂಜ್ಯನೆ, ಸುರಶ್ರೇಷ್ಠನೆ, ನಿನ್ನ ದಾಸನು ನಾನು. ನನ್ನನ್ನು ಅನುಗ್ರಹಿಸು.''

**ರಾಮಸ್ತಮಾಹ ಸುಪ್ರೀತೋ ವಚನಂ ಶೃಣು ಮೇ ಸಖೇ ।**
**ನ ವೇಕ್ಷ್ಯಾಮಿ ಗೃಹಂ ಗ್ರಾಮಂ ನವ ವರ್ಷಾಣಿ ಪಂಚ ಚ ॥ ೬೪ ॥**
**ದತ್ತಮನ್ಯೇನ ನೋ ಭುಂಜೇ ಫಲಮೂಲಾದಿ ಕಿಂಚನ ।**
**ರಾಜ್ಯಂ ಮಮೈತತ್ತೇ ಸರ್ವಂ ತ್ವಂ ಸಖಾ ಮೇಽತಿವಲ್ಲಭಃ ॥ ೬೫ ॥**

೬೪-೬೫. ಸಂತುಷ್ಟನಾದ ರಾಮನು ಹೀಗೆಂದನು : ''ಎಲೈ ಸ್ನೇಹಿತನೆ, ನನ್ನ ಮಾತನ್ನು ಕೇಳು ; ನಾನು ಊರನ್ನಾಗಲಿ, ಮನೆಯನ್ನಾಗಲಿ ಹದಿನಾಲ್ಕುವರ್ಷಗಳ ಕಾಲ ಪ್ರವೇಶಿಸುವದಿಲ್ಲ. ಕಂದಮೂಲಫಲಗಳೇ ಮುಂತಾಗಿ ಏನನ್ನೂ ಬೇರೊಬ್ಬರು ಕೊಟ್ಟದ್ದನ್ನು ನಾನು ತಿನ್ನುವದಿಲ್ಲ. ನಿನ್ನ ಈ ರಾಜ್ಯವೆಲ್ಲವೂ ನನ್ನದೇ. ನೀನು ನನಗೆ ಅತ್ಯಂತ ಪ್ರೀತಿಪಾತ್ರನಾದ ಸ್ನೇಹಿತನು.''

**ವಟಕ್ಷೀರಂ ಸಮಾನಾಯ್ಯ ಜಟಾಮುಕುಟಮಾದರಾತ್ ।**
**ಬಬಂಧ ಲಕ್ಷ್ಮಣೇನಾಥ ಸಹಿತೋ ರಘುನಂದನಃ ॥ ೬೬ ॥**

**ಜಲಮಾತ್ರಂ ತು ಸಂಪ್ರಾಶ್ಯ ಸೀತಯಾ ಸಹ ರಾಘವಃ ।**
**ಆಸ್ತೃತಂ ಕುಶಪರ್ಣಾದ್ಯೈಃ ಶಯನಂ ಲಕ್ಷ್ಮಣೇನ ಹಿ ॥ ೬೭ ॥**
**ಉವಾಸ ತತ್ರ ನಗರಪ್ರಾಸಾದಾಗ್ರೇ ಯಥಾ ಪುರಾ ।**
**ಸುಷ್ವಾಪ ತತ್ರ ವೈದೇಹ್ಯಾ ಪರ್ಯಂಕ ಇವ ಸಂಸ್ಕೃತೇ ॥ ೬೮ ॥**

೬೬-೬೮. (ಹೀಗೆಂದು ಹೇಳಿದ ಅನಂತರ) ರಾಮನು ಲಕ್ಷ್ಮಣನೊಡಗೂಡಿ ಆಲದ ಹಾಲನ್ನು ತರಿಸಿ ಜಟಾಕಿರೀಟವನ್ನು ಕಟ್ಟಿಕೊಂಡನು. ಸೀತೆಯೊಡನೆ ನೀರನ್ನು ಮಾತ್ರ ಕುಡಿದು ಲಕ್ಷ್ಮಣನಿಂದ ಹರಡಿ ಸಿದ್ಧಗೊಳಿಸಲ್ಪಟ್ಟ ಹುಲ್ಲು ಎಲೆಗಳ ಹಾಸಿಗೆಯನ್ನು ಆಶ್ರಯಿಸಿ, ನಗರದ ಉಪ್ಪರಿಗೆಯ ಮೇಲೆ ಸೀತೆಯೊಡಗೂಡಿ ಮಂಚದ ಮೇಲೆ ಹೇಗೆ ಹಿಂದೆ ವಾಸಿಸುತ್ತಿದ್ದನೋ ಅದೇ ರೀತಿಯಿಂದ ಅಲ್ಲಿ ಮಲಗಿ ನಿದ್ರೆಮಾಡಿದನು.

**ತತೋಽವಿದೂರೇ ಪರಿಗೃಹ್ಯ ಚಾಪಂ**
**ಸಬಾಣತೂಣೀರಧನುಃ ಸ ಲಕ್ಷ್ಮಣಃ ।**
**ರರಕ್ಷ ರಾಮಂ ಪರಿತೋ ವಿಪಶ್ಯನ್**
**ಗುಹೇನ ಸಾರ್ಧಂ ಸಶರಾಸನೇನ ॥ ೬೯ ॥**

೬೯. ಅನಂತರ ಆ ಲಕ್ಷ್ಮಣನು ಬಾಣಬತ್ತಳಿಕೆಗಳೊಡಗೂಡಿದ ಬಿಲ್ಲನ್ನು ಹಿಡಿದವನಾಗಿ ಸಮೀಪದಲ್ಲೇ ಇದ್ದುಕೊಂಡು ಧನುರ್ಧಾರಿಯಾಗಿದ್ದ ಗುಹನೊಡಗೂಡಿ ಸುತ್ತಲೂ ಕಾವಲು ಕಾಯುತ್ತಾ ರಾಮನನ್ನು ಕಾಪಾಡುತ್ತಿದ್ದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಪಂಚಮ ಸರ್ಗಃ**

ঃঃঃঃঃঃঃঃ

# ಆರನೆಯ ಸರ್ಗ

**ಶ್ರೀ ಮಹಾದೇವ ಉವಾಚ -**
**ಸುಪ್ತಂ ರಾಮಂ ಸಮಾಲೋಕ್ಯ ಗುಹಃ ಸೋಽಶ್ರುಪರಿಪ್ಲುತಃ ।**
**ಲಕ್ಷ್ಮಣಂ ಪ್ರಾಹ ವಿನಯಾತ್ ಭ್ರಾತಃ ಪಶ್ಯಸಿ ರಾಘವಮ್ ॥ ೧॥**
**ಶಯಾನಂ ಕುಶಪತ್ರೌಘಸಂಸ್ತರೇ ಸೀತಯಾ ಸಹ ।**
**ಯಃ ಶೇತೇ ಸ್ವರ್ಣಪರ್ಯಂಕೇ ಸ್ವಾಸ್ತೀರ್ಣೇ ಭವನೋತ್ತಮೇ ॥ ೨ ॥**

**ಕೈಕೇಯಿ ರಾಮದುಃಖಸ್ಯ ಕಾರಣಂ ವಿಧಿನಾ ಕೃತಾ ।**
**ಮಂಥರಾಬುದ್ಧಿಮಾಸ್ಥಾಯ ಕೈಕೇಯಿ ಪಾಪಮಾಚರತ್ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಮಲಗಿದ್ದ ರಾಮನನ್ನು ನೋಡಿದ ಗುಹನು ಕಣ್ಣೀರುತುಂಬಿದವನಾಗಿ ವಿನಯದಿಂದ ಲಕ್ಷ್ಮಣನನ್ನು ಕುರಿತು 'ಸೋದರನೆ, ರಾಮನನ್ನು ನೋಡು; ಯಾವಾತನು ಉತ್ತಮವಾದ ವಿಶಾಲವಾದ ಅರಮನೆಯಲ್ಲಿ ಚಿನ್ನದ ಮಂಚದ ಮೇಲೆ ಸೀತೆಯೊಡನೆ ಮಲಗುತ್ತಿದ್ದನೋ ಅವನು ಹುಲ್ಲು ಎಲೆಗಳನ್ನು ಹರಡಿರುವ ನೆಲದ ಮೇಲೆ ಮಲಗಿರುವನು. ದೈವವು ಕೈಕೇಯಿಯನ್ನು ರಾಮನ ಕಷ್ಟಕ್ಕೆ ಕಾರಣಳನ್ನಾಗಿ ಮಾಡಿತು. ಆಕೆಯಾದರೊ, ಮಂಥರೆಯ ಬುದ್ಧಿಯನ್ನು ಅನುಸರಿಸಿ ಪಾಪವನ್ನು ಮಾಡಿದಳು' ಎಂದನು.

**ತಚ್ಛ್ರುತ್ವಾ ಲಕ್ಷ್ಮಣಃ ಪ್ರಾಹ ಸಖೇ ಶೃಣು ವಚೋ ಮಮ ।**
**ಕಃ ಕಸ್ಯ ಹೇತುರ್ದುಃಖಸ್ಯ ಕಶ್ಚ ಹೇತುಃ ಸುಖಸ್ಯ ವಾ ॥ ೪ ॥**
**ಸ್ವಪೂರ್ವಾರ್ಜಿತಕರ್ಮೈವ ಕಾರಣಂ ಸುಖದುಃಖಯೋಃ ॥**

೪. ಅದನ್ನು ಕೇಳಿ ಲಕ್ಷ್ಮಣನಿಂತೆಂದನು : 'ಎಲೈ ಸ್ನೇಹಿತನೆ, ನನ್ನ ಮಾತನ್ನು ಕೇಳು. ದುಃಖಕ್ಕಾಗಲಿ, ಸುಖಕ್ಕಾಗಲಿ ಯಾರು ಯಾರಿಗೆ ಕಾರಣರು ? (ಅದು ಸರಿಯಲ್ಲ.) ಅವನವನ ಹಿಂದಿನ ಕರ್ಮವೇ ಸುಖದುಃಖಗಳಿಗೆ ಕಾರಣವು.

**ಸುಖಸ್ಯ ದುಃಖಸ್ಯ ನ ಕೋಽಪಿ ದಾತಾ**
**ಪರೋ ದದಾತೀತಿ ಕುಬುದ್ಧಿರೇಷಾ।**
**ಅಹಂ ಕರೋಮೀತಿ ವೃಥಾಭಿಮಾನಃ**
**ಸ್ವಕರ್ಮಸೂತ್ರಗ್ರಥಿತೋ ಹಿ ಲೋಕಃ ॥ ೫ ॥**
**ಸುಹೃನ್ಮಿತ್ರಾರ್ಯುದಾಸೀನದ್ವೇಷ್ಯಮಧ್ಯಸ್ಥಬಾಂಧವಾಃ ।**
**ಸ್ವಯಮೇವಾಚರನ್ ಕರ್ಮ ತಥಾ ತತ್ರ ವಿಭಾವ್ಯತೇ ॥ ೬ ॥**
**ಸುಖಂ ವಾ ಯದಿ ವಾ ದುಃಖಂ ಸ್ವಕರ್ಮವಶಗೋ ನರಃ ।**
**ಯದ್ಯದ್ ಯಥಾಗತಂ ತತ್ತದ್ ಭುಕ್ತ್ವಾ ಸ್ವಸ್ಥಮನಾ ಭವೇತ್ ॥ ೭ ॥**
**ನ ಮೇ ಭೋಗಾಗಮೇ ವಾಂಛಾ ನ ಮೇ ಭೋಗವಿವರ್ಜನೇ ।**
**ಅಗಚ್ಛತ್ವಥ ಮಾ ಗಚ್ಛತ್ವಭೋಗವಶಗೋ ಭವೇತ್ ॥ ೮ ॥**

೫-೮. ಸುಖವನ್ನಾಗಲಿ ದುಃಖವನ್ನಾಗಲಿ, ಯಾರೂ (ಒಬ್ಬರಿಗೊಬ್ಬರು) ಕೊಡುವದಿಲ್ಲ. ಮತ್ತೊಬ್ಬನಿಂದ (ಇವುಗಳು) ಉಂಟಾದವು-ಎಂಬಿದು ಸರಿಯಾದ ಬುದ್ಧಿಯಲ್ಲ. ಹಾಗೆಯೇ 'ನಾನು ಮಾಡುತ್ತೇನೆ' ಎಂಬಿದೂ ವ್ಯರ್ಥವಾದ ಅಭಿಮಾನವೇ

ಸರಿ. ಏಕೆಂದರೆ ಲೋಕವೆಲ್ಲವೂ ತನ್ನ ತನ್ನ ಕರ್ಮಬಂಧದಿಂದ ಹೆಣೆಯಲ್ಪಟ್ಟಿರುತ್ತದೆ. ತಾನೇ ಮಾಡತಕ್ಕ ಕರ್ಮಗಳ ಫಲವಾಗಿ ಸ್ನೇಹಿತ, ಆಪ್ತ, ಶತ್ರು, ಉದಾಸೀನ, ಬೇಡದವನು, ಮಧ್ಯಸ್ಥ, ಬಂಧು-ಎಂಬುದಾಗಿ ಲೋಕದಲ್ಲಿ ಕಂಡುಬರುತ್ತಿದೆ. ಆದ್ದರಿಂದ ಮನುಷ್ಯನು ತನ್ನ ಕರ್ಮಾನುಸಾರ ಸುಖವನ್ನೋ ದುಃಖವನ್ನೋ - ಯಾವದು ಹೇಗೆ ಬರುತ್ತದೋ ಹಾಗೆ ಹಾಗೆಯೇ ಅನುಭವಿಸಿಕೊಂಡು ಶಾಂತಚಿತ್ತನಾಗಿದ್ದುಕೊಂಡುಬಿಡಬೇಕು. ಭೋಗಗಳು ಬರಲಿ ಎಂದಾಗಲಿ, ಭೋಗಗಳನ್ನು ಬೇಡವೆನ್ನುತ್ತೇನೆ-ಎಂದಾಗಲಿ ಪ್ರಯತ್ನಿಸದೆ ಅವು ಬಂದರೆ ಬರಲಿ, ಹೋದರೆ ಹೋಗಲಿ - ಎಂದು ಉದಾಸೀನತೆಯಿಂದ ಭೋಗಗಳ ಹಿಡಿತಕ್ಕೆ ಸಿಗದಂತೆ ಇದ್ದುಕೊಂಡಿರಬೇಕು.

**ಯಸ್ಮಿನ್ ದೇಶೇ ಚ ಕಾಲೇ ಚ ಯಸ್ಮಾದ್ವಾ ಯೇನ ಕೇನ ವಾ ।**
**ಕೃತಂ ಶುಭಾಶುಭಂ ಕರ್ಮ ಭೋಜ್ಯಂ ತತ್ತತ್ರ ನಾನ್ಯಥಾ ॥ ೯ ॥**
**ಅಲಂ ಹರ್ಷವಿಷಾದಾಭ್ಯಾಂ ಶುಭಾಶುಭಫಲೋದಯೇ ।**
**ವಿಧಾತ್ರಾ ವಿಹಿತಂ ಯದ್ಯದ್ ತದಲಂಘ್ಯಂ ಸುರಾಸುರೈಃ ॥ ೧೦ ॥**
**ಸರ್ವದಾ ಸುಖದುಃಖಾಭ್ಯಾಂ ನರಃ ಪ್ರತ್ಯವರುಧ್ಯತೇ ।**
**ಶರೀರಂ ಪುಣ್ಯಪಾಪಾಭ್ಯಾಮುತ್ಪನ್ನಂ ಸುಖದುಃಖವತ್ ॥ ೧೧ ॥**
**ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।**
**ದ್ವಯಮೇತದ್ಧಿ ಜಂತೂನಾಮಲಂಘ್ಯಂ ದಿನರಾತ್ರಿವತ್ ॥ ೧೨ ॥**

೯-೧೨. ಯಾವ ಜಾಗದಲ್ಲಿ ಯಾವ ಕಾಲದಲ್ಲಿ ಯಾವನಿಂದ ಯಾವ ಕಾರಣಕ್ಕಾಗಿ ಏನೇನು ಪಾಪಪುಣ್ಯಗಳು ಮಾಡಲ್ಪಟ್ಟವೋ ಅವುಗಳನ್ನು ಹಾಗೆಯೇ ಅನುಭವಿಸಬೇಕು, ಬೇರೆ ಉಪಾಯವಿರುವದಿಲ್ಲ. ಬ್ರಹ್ಮನಿಂದ ಗೊತ್ತುಮಾಡಲ್ಪಟ್ಟ ಒಳ್ಳೆಯ ಹಾಗೂ ಕೆಟ್ಟಫಲಗಳ ವಿಷಯಕ್ಕೆ ಸಂತೋಷ-ದುಃಖಗಳನ್ನು ತಂದುಕೊಂಡದ್ದು ಇನ್ನು ಸಾಕು. ಏಕೆಂದರೆ ಯಾವ ದೇವಾಸುರರಿಂದಲೂ ಅದನ್ನು ಮೀರಲಾಗುವದಿಲ್ಲ. ಮನುಷ್ಯನು ಯಾವಾಗಲೂ ಸುಖದುಃಖಗಳಿಂದ ಪೀಡಿಸಲ್ಪಡುತ್ತಿರುವನು. ಸುಖದುಃಖಗಳುಳ್ಳ ಶರೀರವು ಪಾಪಪುಣ್ಯಗಳ (ನಿಮಿತ್ತ)ವಾಗಿಯೇ ಹುಟ್ಟಿರುತ್ತದೆ. ಪ್ರಾಣಿಗಳಿಗೆ - ಹಗಲುರಾತ್ರಿಗಳು ಹೇಗೋ ಹಾಗೆ-ಸುಖವಾದ ಮೇಲೆ ದುಃಖವೂ ದುಃಖವಾದ ಮೇಲೆ ಸುಖವೂ (ಬರುತ್ತಿರುವವು.)

**ಸುಖಮಧ್ಯೇ ಸ್ಥಿತಂ ದುಃಖಂ ದುಃಖಮಧ್ಯೇ ಸ್ಥಿತಂ ಸುಖಮ್ ।**
**ದ್ವಯಮನ್ಯೋನ್ಯಸಂಯುಕ್ತಂ ಪ್ರೋಚ್ಯತೇ ಜಲಪಂಕವತ್ ॥ ೧೩ ॥**
**ತಸ್ಮಾದ್ ಧೈರ್ಯೇಣ ವಿದ್ವಾಂಸ ಇಷ್ಟಾನಿಷ್ಟೋಪಪತ್ತಿಷು ।**
**ನ ಹೃಷ್ಯಂತಿ ನ ಮುಹ್ಯಂತಿ ಸರ್ವಂ ಮಾಯೇತಿ ಭಾವನಾತ್ ॥ ೧೪ ॥**

**ಗುಹಲಕ್ಷ್ಮಣಯೋರೇವಂ ಭಾಷತೋರ್ವಿಮಲಂ ನಭಃ ।**
**ಬಭೂವ ರಾಮಃ ಸಲಿಲಂ ಸ್ಪೃಷ್ಟ್ವಾ ಪ್ರಾತಃ ಸಮಾಹಿತಃ ॥ ೧೫ ॥**
**ಉವಾಚ ಶೀಘ್ರಂ ಸುದೃಢಾಂ ನಾವಮಾನಯ ಮೇ ಸಖೇ ।**

೧೩-೧೫. ಸುಖದ ನಡುವೆ ದುಃಖವೂ ದುಃಖದ ನಡುವೆ ಸುಖವೂ ಇದ್ದು ಕೊಂಡು ಎರಡೂ ಒಂದಕ್ಕೊಂದು ನೀರುಕೆಸರುಗಳಂತೆ ಕೂಡಿಕೊಂಡಿರುವವು. ಆದ್ದರಿಂದ ವಿವೇಕಿಗಳು ಧೈರ್ಯದಿಂದ ಇಷ್ಟವಾಗಲಿ ಅನಿಷ್ಟವಾಗಲಿ ಬಂದೊದಗಿದಾಗ - ಇವೆಲ್ಲವೂ ಮಾಯೆ - ಎಂಬ ಭಾವನೆಯಿಂದ ಹಿಗ್ಗುವದೂ ಇಲ್ಲ, ಕುಗ್ಗುವದೂ ಇಲ್ಲ. ಈ ರೀತಿಯಾಗಿ ಗುಹಲಕ್ಷ್ಮಣರು ಮಾತನಾಡುತ್ತಿರುವಂತೆಯೇ ಆಕಾಶವು ಸ್ವಚ್ಛವಾಯಿತು (ಬೆಳಕು ಹರಿಯಿತು). ರಾಮನು ಸ್ನಾನಮಾಡಿ ಪ್ರಾತಃಕಾಲದ ಜಪಾದಿಗಳನ್ನು ಪೂರೈಸಿ ದವನಾದನು. ಅನಂತರ 'ಎಲೈ ಸ್ನೇಹಿತನೆ, ದೃಢವಾದ ಒಳ್ಳೆಯ ಹರಿಗೋಲನ್ನು ತೆಗೆದು ಕೊಂಡು ಬಾ' ಎಂದು ಗುಹನಿಗೆ ಹೇಳಿದನು.

**ಶ್ರುತ್ವಾ ರಾಮಸ್ಯ ವಚನಂ ನಿಷಾದಾಧಿಪತಿರ್ಗುಹಃ ।**
**ಸ್ವಯಮೇವ ದೃಢಾಂ ನಾವಮಾನಿನಾಯ ಸುಲಕ್ಷಣಾಮ್ ॥ ೧೬ ॥**
**ಸ್ವಾಮಿನ್ ಆರುಹ್ಯತಾಂ ನೌಕಾ ಸೀತಯಾ ಲಕ್ಷ್ಮಣೇನ ಚ ।**
**ವಾಹಯೇ ಜ್ಞಾತಿಭಿಃ ಸಾರ್ಧಮಹಮೇವ ಸಮಾಹಿತಃ ॥ ೧೭ ॥**
**ತಥೇತಿ ರಾಘವಃ ಸೀತಾಮಾರೋಪ್ಯ ಶುಭಲಕ್ಷಣಾಮ್ ।**
**ಗುಹಸ್ಯ ಹಸ್ತಾವಾಲಂಬ್ಯ ಸ್ವಯಂ ಚಾರೋಹದಚ್ಯುತಃ ॥ ೧೮ ॥**
**ಆಯುಧಾದೀನ್ ಸಮಾರೋಪ್ಯ ಲಕ್ಷ್ಮಣೋಽಪ್ಯಾರುರೋಹ ಚ ।**

೧೬-೧೮. ನಿಷಾದರಾಜನಾದ ಗುಹನು ರಾಮನ ಮಾತನ್ನು ಕೇಳಿ ಲಕ್ಷಣಯುಕ್ತವಾದ ಭದ್ರವಾದ ಹರಿಗೋಲನ್ನು ತಾನೇ ಸ್ವತಃ ತಂದನು. 'ಪ್ರಭುವೆ, ಸೀತಾಲಕ್ಷ್ಮಣರೊಡಗೂಡಿ ನೌಕೆಯನ್ನು ಏರೋಣವಾಗಲಿ ; ಜ್ಞಾತಿಗಳೊಡಗೂಡಿ ನಾನೇ ಎಚ್ಚರಿಕೆಯಿಂದ (ನೌಕೆಯನ್ನು) ಒಯ್ಯುತ್ತೇನೆ' ಎಂದನು. ಹಾಗೆಯೇ ಆಗಲಿ - ಎಂದು ಅಚ್ಯುತನಾದ ರಾಮನು ಶುಭಲಕ್ಷಣಳಾದ ಸೀತೆಯನ್ನು ಹತ್ತಿಸಿ ತಾನು ಗುಹನ ಕೈಯನ್ನು ಹಿಡಿದುಕೊಂಡು ನಾವೆಯನ್ನೇರಿದನು. ಆಯುಧಗಳನ್ನೆಲ್ಲ ಏರಿಸಿ ಲಕ್ಷ್ಮಣನು ತಾನೂ ಹತ್ತಿದನು.

**ಗುಹಸ್ತಾನ್ ವಾಹಯಾಮಾಸ ಜ್ಞಾತಿಭಿಃ ಸಹಿತಃ ಸ್ವಯಮ್ ।**
**ಗಂಗಾಮಧ್ಯೇ ಗತಾ ಗಂಗಾಂ ಪ್ರಾರ್ಥಯಾಮಾಸ ಜಾನಕೀ ॥ ೧೯ ॥**

**ದೇವಿ ಗಂಗೇ ನಮಸ್ತುಭ್ಯಂ ನಿವೃತ್ತಾ ವನವಾಸತಃ ।**
**ರಾಮೇಣ ಸಹಿತಾಹಂ ತ್ವಾಂ ಲಕ್ಷ್ಮಣೇನ ಚ ಪೂಜಯೇ ॥ ೨೦ ॥**
**ಇತ್ಯುಕ್ತ್ವಾ ಪರಕೂಲಂ ತೌ ಶನೈರುತ್ತೀರ್ಯ ಜಗ್ಮತುಃ ॥**

೧೯-೨೦. ಅವರುಗಳನ್ನು ಗುಹನು ಜ್ಞಾತಿಗಳೊಡಗೂಡಿ ತಾನೇ ಒಯ್ದನು. ನಡುವೆ ಗಂಗೆಯನ್ನು ದಾಟುವಾಗ ಸೀತೆಯು 'ದೇವಿ ಗಂಗೆಯೆ, ನಿನಗೆ ನಮಸ್ಕಾರ ; ವನವಾಸದಿಂದ ನಾನು ರಾಮಲಕ್ಷ್ಮಣರೊಡನೆ (ಸುಖವಾಗಿ) ಹಿಂತಿರುಗಿದ ಅನಂತರ ನಿನ್ನನ್ನು ಪೂಜಿಸುತ್ತೇನೆ' ಎಂದು ಪ್ರಾರ್ಥಿಸಿದಳು. ಹೀಗೆ ಅವರುಗಳು ಮೆಲ್ಲನೆ ಆಚೆಯ ದಡವನ್ನು ಮುಟ್ಟಿದವರಾಗಿ ಮುಂದಕ್ಕೆ ಹೊರಟರು.

**ಗುಹೋಽಪಿ ರಾಘವಂ ಪ್ರಾಹ ಗಮಿಷ್ಯಾಮಿ ತ್ವಯಾ ಸಹ ।**
**ಅನುಜ್ಞಾಂ ದೇಹಿ ರಾಜೇಂದ್ರ ನೋ ಚೇತ್ ಪ್ರಾಣಾಂಸ್ತ್ಯಜಾಮ್ಯಹಮ್ ॥ ೨೧ ॥**
**ಶ್ರುತ್ವಾ ನೈಷಾದಿವಚನಂ ಶ್ರೀರಾಮಸ್ತಮಥಾಬ್ರವೀತ್ ।**
**ಚತುರ್ದಶ ಸಮಾಃ ಸ್ಥಿತ್ವಾ ದಂಡಕೇ ಪುನರಪ್ಯಹಮ್ ॥ ೨೨ ॥**
**ಆಯಾಸ್ಯಾಮ್ಯುದಿತಂ ಸತ್ಯಂ ನಾಸತ್ಯಂ ರಾಮಭಾಷಿತಮ್ ।**
**ಇತ್ಯುಕ್ತ್ವಾಲಿಂಗ್ಯ ತಂ ಭಕ್ತಂ ಸಮಾಶ್ವಾಸ್ಯ ಪುನಃ ಪುನಃ ॥ ೨೩ ॥**
**ನಿವರ್ತಯಾಮಾಸ ಗುಹಂ ಸೋಽಪಿ ಕೃಚ್ಛ್ರಾದ್ಯಯೌ ಗೃಹಮ್ ।**

೨೧-೨೩. ಗುಹನೂ ರಾಮನನ್ನು ಕುರಿತು 'ಎಲೈ ರಾಜಶ್ರೇಷ್ಠನೆ, ನನಗೂ ಅಪ್ಪಣೆಯನ್ನು ಕೊಡು. ನಿನ್ನೊಡನೆ ಬರುವೆನು ; ಹಾಗಿಲ್ಲದಿದ್ದರೆ ಇಲ್ಲಿಯೇ ಪ್ರಾಣತ್ಯಾಗ ವನ್ನು ಮಾಡಿಬಿಡುವೆನು' ಎಂದನು. ನಿಷಾದನ ಆ ಮಾತನ್ನು ಕೇಳಿ ಶ್ರೀರಾಮನು ಅವನನ್ನು ಕುರಿತು ಹೀಗೆಂದನು : 'ಅಯ್ಯಾ, ನಾನು ಕೂಡ ಹದಿನಾಲ್ಕು ವರ್ಷಗಳು (ಮಾತ್ರ) ದಂಡಕಾರಣ್ಯದಲ್ಲಿ ವಾಸಮಾಡಿ ಅನಂತರ ಮತ್ತೆ ಹಿಂದಿರುಗಿ ಬರುವೆನು. ನಾನು ಹೇಳುತ್ತಿರುವದು ಸತ್ಯವು. ರಾಮನ ಮಾತು ಎಂದಿಗೂ ಸುಳ್ಳಾಗಲಾರದು' - ಎಂದು ಹೇಳಿ ಭಕ್ತನಾದ (ಆ ಗುಹನನ್ನು) ಆಲಂಗಿಸಿಕೊಂಡು ಮತ್ತೆ ಮತ್ತೆ ಸಮಾಧಾನ ಮಾಡಿ ಹಿಂದಕ್ಕೆ ಕಳುಹಿಸಿದನು. ಅವನಾದರೊ, ಬಹಳ ಕಷ್ಟದಿಂದ ಮನೆಗೆ ಹಿಂದಿರುಗಿದನು.

**ತತೋ ರಾಮಸ್ತು ವೈದೇಹ್ಯಾ ಲಕ್ಷ್ಮಣೇನ ಸಮನ್ವಿತಃ ।**
**ಭರದ್ವಾಜಾಶ್ರಮಪದಂ ಗತ್ವಾ ಬಹಿರುಪಸ್ಥಿತಃ ॥ ೨೪ ॥**
**ತತ್ರೈಕಂ ಬಟುಕಂ ದೃಷ್ಟ್ವಾ ರಾಮಃ ಪ್ರಾಹ ಚ ಹೇ ಬಟೋ ।**
**ರಾಮೋ ದಾಶರಥಿಃ ಸೀತಾಲಕ್ಷ್ಮಣಾಭ್ಯಾಂ ಸಮನ್ವಿತಃ ॥ ೨೫ ॥**
**ಆಸ್ತೇ ಬಹಿರ್ವನಸ್ಯೇತಿ ಹ್ಯುಚ್ಯತಾಂ ಮುನಿಸನ್ನಿಧೌ ।**

೨೪-೨೫. ಅನಂತರ ರಾಮನು ಸೀತಾಲಕ್ಷ್ಮಣರೊಡಗೂಡಿ ಭರದ್ವಾಜರ ಆಶ್ರಮಸ್ಥಾನಕ್ಕೆ ಹೋಗಿ ತಪೋವನದ ಹೊರಗಡೆಯೇ ನಿಂತುಕೊಂಡನು. ಅಲ್ಲೊಬ್ಬ ಬ್ರಹ್ಮಚಾರಿಯನ್ನು ಕಂಡು ರಾಮನು 'ಎಲೌ ವಟುವೆ, ಸೀತಾಲಕ್ಷ್ಮಣರೊಡನೆ ರಾಮನು ಬಂದು ವನದ ಹೊರಗಡೆ ನಿಂತಿರುತ್ತಾನೆ - ಎಂದು ಋಷಿಗಳ ಸನ್ನಿಧಿಗೆ ತಿಳಿಸುವವನಾಗು' ಎಂದನು.

**ತಚ್ಛ್ರುತ್ವಾ ಸಹಸಾ ಗತ್ವಾ ಪಾದಯೋಃ ಪತಿತೋ ಮುನೇಃ ।**
**ಸ್ವಾಮಿನ್ ರಾಮಃ ಸಮಾಗತ್ಯ ವನಾದ್ ಬಹಿರವಸ್ಥಿತಃ ॥ ೨೬ ॥**
**ಸಭಾರ್ಯಃ ಸಾನುಜಃ ಶ್ರೀಮಾನಾಹ ಮಾಂ ದೇವಸನ್ನಿಭಃ ।**
**ಭರದ್ವಾಜಾಯ ಮುನಯೇ ಜ್ಞಾಪಯಸ್ವ ಯಥೋಚಿತಮ್ ॥ ೨೭ ॥**
**ತಚ್ಛ್ರುತ್ವಾ ಸಹಸೋತ್ಥಾಯ ಭರದ್ವಾಜೋ ಮುನೀಶ್ವರಃ ।**
**ಗೃಹೀತ್ವಾರ್ಘ್ಯಂ ಚ ಪಾದ್ಯಂ ಚ ರಾಮಸಾಮೀಪ್ಯಮಾಯಯೌ ॥ ೨೮ ॥**

೨೬-೨೮. ಅದನ್ನು ಕೇಳಿ (ವಟುವು) ಕೂಡಲೆ ಹೊರಟು ಋಷಿಯನ್ನು ಕಂಡು ಪಾದಗಳಿಗೆ ನಮಸ್ಕರಿಸಿ 'ಪೂಜ್ಯನೆ, ರಾಮನು ಬಂದು ಈ ವನದ ಹೊರಗಡೆ ನಿಂತಿರುವನು. ಪತ್ನಿ ಮತ್ತು ಸೋದರನೊಡಗೂಡಿದ ದೇವಸಮಾನನಾದ ಆ ಶ್ರೀಮಂತನು, ನನ್ನನ್ನು ಕುರಿತು ಸಮಯೋಚಿತವಾಗಿ ಭರದ್ವಾಜಮುನಿಗೆ ತಿಳಿಸುವವನಾಗು ಎಂದನು' -ಎಂದು ವಿಜ್ಞಾಪಿಸಲು ಅದನ್ನು ಕೇಳಿ ಮುನೀಶ್ವರನಾದ ಭರದ್ವಾಜನು ತಟ್ಟನೆದ್ದು ಅರ್ಘ್ಯಪಾದ್ಯಾದಿಗಳನ್ನು ತೆಗೆದುಕೊಂಡು ರಾಮನ ಸಮೀಪಕ್ಕೆ ಬಂದನು.

**ದೃಷ್ಟ್ವಾ ರಾಮಂ ಯಥಾನ್ಯಾಯಂ ಪೂಜಯಿತ್ವಾ ಸಲಕ್ಷ್ಮಣಮ್ ।**
**ಆಹ ಮೇ ಪರ್ಣಶಾಲಾಂ ಭೋ ರಾಮ ರಾಜೀವಲೋಚನ ॥ ೨೯ ॥**
**ಆಗಚ್ಛ ಪಾದರಜಸಾ ಪುನೀಹಿ ರಘುನಂದನ ।**
**ಇತ್ಯುಕ್ತ್ವೋಟಜಮಾನೀಯ ಸೀತಯಾ ಸಹ ರಾಘವೌ ॥ ೩೦ ॥**
**ಭಕ್ತ್ಯಾ ಪುನಃ ಪೂಜಯಿತ್ವಾ ಚಕಾರಾತಿಥ್ಯಮುತ್ತಮಮ್ ।**

೨೯-೩೦. ರಾಮನನ್ನು ಕಂಡು ಯೋಗ್ಯವಾದ ರೀತಿಯಿಂದ ಲಕ್ಷ್ಮಣ ಸಹಿತನಾದ ಅವನನ್ನು ಗೌರವಿಸಿ ಹೀಗೆಂದನು. 'ಎಲೈ ರಾಜೀವಲೋಚನನಾದ ರಾಮನೆ, ನನ್ನ ಪರ್ಣಶಾಲೆಗೆ ಬಂದು ನಿನ್ನ ಪಾದಧೂಳಿಯಿಂದ ಅದನ್ನು ಪವಿತ್ರಗೊಳಿಸುವವನಾಗು' ; ಹೀಗೆಂದು ಹೇಳಿ ಪರ್ಣಶಾಲೆಗೆ ಕರೆದೊಯ್ದು ಸೀತೆಯೊಡನೆ ರಾಮಲಕ್ಷ್ಮಣರಿಬ್ಬರಿಗೂ ಮತ್ತೆ ಭಕ್ತಿಯಿಂದ ಪೂಜಿಸಿ ಉತ್ತಮವಾದ ಆತಿಥ್ಯವನ್ನು ಮಾಡಿದನು.

ಅದ್ಯಾಹಂ ತಪಸಃ ಪಾರಂ ಗತೋಽಸ್ಮಿ ತವ ಸಂಗಮಾತ್ ।
ಜ್ಞಾತಂ ರಾಮ ತವೋದಂತಂ ಭೂತಂ ಚಾಗಾಮಿಕಂ ಚ ಯತ್ ॥ ೩೧ ॥
ಜಾನಾಮಿ ತ್ವಾಂ ಪರಾತ್ಮಾನಂ ಮಾಯಯಾ ಕಾರ್ಯಮಾನುಷಮ್ ।
ಯದರ್ಥಮವತೀರ್ಣೋಽಸಿ ಪ್ರಾರ್ಥಿತೋ ಬ್ರಹ್ಮಣಾ ಪುರಾ ॥ ೩೨ ॥
ಯದರ್ಥಂ ವನವಾಸಸ್ತೇ ಯತ್ಕರಿಷ್ಯಸಿ ವೈ ಪುರಃ ।
ಜಾನಾಮಿ ಜ್ಞಾನದೃಷ್ಟ್ಯಾಹಂ ಜಾತಯಾ ತ್ವದುಪಾಸನಾತ್ ॥ ೩೩ ॥
ಇತಃ ಪರಂ ತ್ವಾಂ ಕಿಂ ವಕ್ಷ್ಯೇ ಕೃತಾರ್ಥೋಽಹಂ ರಘೂತ್ತಮ ।
ಯಸ್ತ್ವಾಂ ಪಶ್ಯಾಮಿ ಕಾಕುತ್ಸ್ಥಂ ಪುರುಷಂ ಪ್ರಕೃತೇಃ ಪರಮ್ ॥ ೩೪ ॥

೩೧-೩೪. (ಭರದ್ವಾಜನು ಹೀಗೆಂದನು :) ಎಲೈ ರಾಮನೆ, ಈಗ ನಾನು ನಿನ್ನನ್ನು ಸಂಧಿಸಿದ್ದರಿಂದ ತಪಸ್ಸಿನ ದಡವನ್ನು ಸೇರಿದವನಾದೆನು. ನಿನ್ನ ಹಿಂದಿನ ಮತ್ತು ಮುಂದಿನ ಎಲ್ಲಾ ವೃತ್ತಾಂತವೂ ನನಗೆ ತಿಳಿದಿದೆ. ನೀನು ಪರಮಾತ್ಮನೇ ಆಗಿದ್ದು (ದೇವ) ಕಾರ್ಯಸಿದ್ಧಿಗಾಗಿ ಮನುಷ್ಯರೂಪವನ್ನು ಧರಿಸಿರುವದನ್ನು ನಾನು ಬಲ್ಲೆನು. ಹಿಂದೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ನೀನು ಏತಕ್ಕಾಗಿ ಅವತಾರವನ್ನು ಮಾಡಿದ್ದೀಯೆ, ವನವಾಸ ವನ್ನೇಕೆ ಮಾಡುವೆ, ಮುಂದೇನನ್ನು ನೀನು ಕೈಗೊಳ್ಳುವೆ- ಈ ಎಲ್ಲಾ ವಿಷಯಗಳನ್ನೂ ನಿನ್ನ ಉಪಾಸನೆಯಿಂದಲೇ ಉಂಟಾಗಿರುವ ಜ್ಞಾನದೃಷ್ಟಿಯಿಂದ ನಾನು ಅರಿತಿರುವೆನು. ಇದ ಕ್ಕಿಂತ ಇನ್ನೇನು ಹೇಳಲಿ ? ರಘುವರನೆ, ನಾನು ಕೃತಾರ್ಥನಾದೆನು. ಏಕೆಂದರೆ ಪ್ರಕೃತಿ ಯನ್ನು ಮೀರಿದ ಪರಮಪುರುಷನಾದ ನಿನ್ನನ್ನು ಕಾಣುತ್ತಿದ್ದೇನಲ್ಲವೆ ?

ರಾಮಸ್ತಮಭಿವಾದ್ಯಾಹ ಸೀತಾಲಕ್ಷ್ಮಣಸಂಯುತಃ ।
ಅನುಗ್ರಾಹ್ಯಸ್ತ್ವಯಾ ಬ್ರಹ್ಮನ್ ವಯಂ ಕ್ಷತ್ರಿಯಬಾಂಧವಾಃ ॥ ೩೫ ॥
ಇತಿ ಸಂಭಾಷ್ಯ ತೇಽನ್ಯೋನ್ಯಮುಷಿತ್ವಾ ಮುನಿಸಂನಿಧೌ ।
ಪ್ರಾತರುತ್ಥಾಯ ಯಮುನಾಮುತ್ತೀರ್ಯ ಮುನಿದಾರಕೈಃ ॥ ೩೬ ॥
ಕೃತಾಪ್ಲವೇನ ಮುನಿನಾ ದೃಷ್ಟಮಾರ್ಗೇಣ ರಾಘವಃ ।
ಪ್ರಯಯೌ ಚಿತ್ರಕೂಟಾದ್ರಿಂ ವಾಲ್ಮೀಕೇರ್ಯತ್ರ ಚಾಶ್ರಮಃ ॥ ೩೭ ॥

೩೫-೩೭. ಸೀತಾಲಕ್ಷ್ಮಣರೊಡನೆ ರಾಮನು ಆ(ಮುನಿಗೆ) ನಮಸ್ಕರಿಸಿ 'ಎಲೈ ಬ್ರಹ್ಮನಿಷ್ಠನೆ, ನೀನು ಕ್ಷತ್ರಿಯಬಂಧುಗಳಾದ ನಮ್ಮನ್ನು ಅನುಗ್ರಹಿಸ ಬೇಕು'-ಎಂದನು. ಈ ರೀತಿಯಾಗಿ ಅವರುಗಳು ಪರಸ್ಪರವಾಗಿ ಸಂಭಾಷಿಸಿದ ಅನಂತರ ರಾಮನು ಋಷಿಗಳೊಡನೆ ಅಲ್ಲಿಯೇ ತಂಗಿದ್ದು ಬೆಳಗ್ಗೆ ಎದ್ದು ಋಷಿಕುಮಾರರೊಡನೆ ಮುನಿಯ ಸಹಾಯದಿಂದ ಯಮುನಾನದಿಯನ್ನು ದಾಟಿ ಋಷಿಗಳು ತೋರಿಸಿದ

ಮಾರ್ಗವನ್ನು ಹಿಡಿದು ವಾಲ್ಮೀಕಿಋಷಿಗಳ ಆಶ್ರಮವಿರುವ ಚಿತ್ರಕೂಟಪರ್ವತಕ್ಕೆ ಪ್ರಯಾಣಮಾಡಿದನು.

**ಗತ್ವಾ ರಾಮೋಽಥ ವಾಲ್ಮೀಕೇರಾಶ್ರಮಂ ಋಷಿಸಂಕುಲಮ್ ।**
**ನಾನಾಮೃಗದ್ವಿಜಾಕೀರ್ಣಂ ನಿತ್ಯಪುಷ್ಪಫಲಾಕುಲಮ್ ॥ ೩೮ ॥**
**ತತ್ರ ದೃಷ್ಟ್ವಾ ಸಮಾಸೀನಂ ವಾಲ್ಮೀಕಿಂ ಮುನಿಸತ್ತಮಮ್ ।**
**ನನಾಮ ಶಿರಸಾ ರಾಮೋ ಲಕ್ಷ್ಮಣೇನ ಚ ಸೀತಯಾ ॥ ೩೯ ॥**

೩೮-೩೯. ಅನಂತರ ರಾಮನು ಋಷಿಗಳಿಂದ ತುಂಬಿದ, ಅನೇಕಜಾತಿಯ ಪ್ರಾಣಿಗಳು ಹಾಗೂ ಹಕ್ಕಿಗಳಿಂದ ಕೂಡಿದ, ಯಾವಾಗಲೂ ಹೂಹಣ್ಣುಗಳಿಂದ ಶೋಭಾಯಮಾನವಾದ ವಾಲ್ಮೀಕಿಗಳ ಆಶ್ರಮಕ್ಕೆ ಹೋಗಿ ಅಲ್ಲಿ ಕುಳಿತಿದ್ದ ಮುನಿಶ್ರೇಷ್ಠನಾದ ವಾಲ್ಮೀಕಿಯನ್ನು ಕಂಡು ಸೀತಾಲಕ್ಷ್ಮಣರೊಡನೆ ತಲೆಬಾಗಿ ನಮಸ್ಕರಿಸಿದನು.

**ದೃಷ್ಟ್ವಾ ರಾಮಂ ರಮಾನಾಥಂ ವಾಲ್ಮೀಕಿರ್ಲೋಕಸುಂದರಮ್ ।**
**ಜಾನಕೀಲಕ್ಷ್ಮಣೋಪೇತಂ ಜಟಾಮುಕುಟಮಂಡಿತಮ್ ॥ ೪೦ ॥**
**ಕಂದರ್ಪಸದೃಶಾಕಾರಂ ಕಮನೀಯಾಂಬುಜೇಕ್ಷಣಮ್ ।**
**ದೃಷ್ಟ್ವೈವ ಸಹಸೋತ್ತಸ್ಥೌ ವಿಸ್ಮಯಾನಿಮಿಷೇಕ್ಷಣಃ ॥ ೪೧ ॥**
**ಆಲಿಂಗ್ಯ ಪರಮಾನಂದಂ ರಾಮಂ ಹರ್ಷಾಶ್ರುಲೋಚನಃ ।**
**ಪೂಜಯಿತ್ವಾ ಜಗತ್ಪೂಜ್ಯಂ ಭಕ್ತ್ಯಾರ್ಘ್ಯಾದಿಭಿರಾದೃತಃ ॥ ೪೨ ॥**
**ಫಲಮೂಲೈಃ ಸ ಮಧುರೈರ್ಭೋಜಯಿತ್ವಾಥ ಲಾಲಿತಃ ॥**

೪೦-೪೨. ಲಕ್ಷ್ಮೀಪತಿಯಾದ ಹಾಗೂ ಲೋಕಸುಂದರನೂ ಸೀತಾಲಕ್ಷ್ಮಣಸಮೇತನೂ ಜಟೆಯೆಂಬ ಕಿರೀಟದಿಂದಲಂಕೃತನೂ ಮನ್ಮಥನಂತೆ ಆಕಾರವುಳ್ಳವನೂ ರಮಣೀಯವಾದ ಕಮಲದಂತೆ ಕಣ್ಣುಗಳುಳ್ಳವನೂ ಆದ ರಾಮನನ್ನು ಕಂಡು ವಾಲ್ಮೀಕಿಯು ಕೂಡಲೆ ಮೇಲೆದ್ದು ಆಶ್ಚರ್ಯದಿಂದ ಎವೆಯಿಕ್ಕದೆ ನೋಡುತ್ತಾ ಹರ್ಷಜಲದಿಂದ ತುಂಬಿದ ಕಣ್ಣುಗಳಿಂದ ಪರಮಾನಂದರೂಪನಾದ ರಾಮನನ್ನು ಕಂಡು ಆಲಂಗಿಸಿಕೊಂಡನು. ಅನಂತರ ಭಕ್ತ್ಯಾದರಗಳಿಂದ ಕೂಡಿ ಜಗತ್ಪೂಜ್ಯನಾದ ರಾಮನನ್ನು ಪೂಜಿಸಿ ರುಚಿಯಾದ ಹಣ್ಣುಗಳಿಂದ ಭೋಜನಮಾಡಿಸಿ ಆನಂದಪಡಿಸಿದನು.

**ರಾಘವಃ ಪ್ರಾಂಜಲಿಃ ಪ್ರಾಹ ವಾಲ್ಮೀಕಿಂ ವಿನಯಾನ್ವಿತಃ ।**
**ಪಿತುರಾಜ್ಞಾಂ ಪುರಸ್ಕೃತ್ಯ ದಂಡಕಾನಾಗತಾ ವಯಮ್ ॥ ೪೩ ॥**
**ಭವಂತೋ ಯದಿ ಜಾನಂತಿ ಕಿಂ ವಕ್ಷ್ಯಾಮೋಽತ್ರ ಕಾರಣಮ್ ।**
**ಯತ್ರ ಮೇ ಸುಖವಾಸಾಯ ಭವೇತ್ ಸ್ಥಾನಂ ವದಸ್ವ ತತ್ ॥ ೪೪ ॥**

**ಸೀತಯಾ ಸಹಿತಃ ಕಾಲಂ ಕಿಂಚಿತ್ತತ್ರ ನಯಾಮ್ಯಹಮ್ ।**
**ಇತ್ಯುಕ್ತೋ ರಾಘವೇಣಾಸೌ ಮುನಿಃ ಸಸ್ಮಿತಮಬ್ರವೀತ್ ॥ ೪೫ ॥**

೪೩-೪೫. ರಾಮನು ವಿನಯದಿಂದ ಕೂಡಿ ಅಂಜಲಿಬದ್ಧನಾಗಿ ವಾಲ್ಮೀಕಿಯನ್ನು ಕುರಿತು ಇಂತೆಂದನು : 'ನಾವು ತಂದೆಯ ಅಪ್ಪಣೆಯನ್ನು ಗೌರವಿಸಿ ದಂಡಕಾವನಕ್ಕೆ ಬಂದಿರುತ್ತೇವೆ. ತಮಗೆ ಇದು ತಿಳಿದಿದ್ದರೆ ನಾವು ಕಾರಣವೇನೆಂಬುದನ್ನು ಹೇಳಬೇಕಾಗಿಲ್ಲ. ಸೀತಾಸಮೇತನಾದ ನಾನು ಸ್ವಲ್ಪಕಾಲ ಸುಖವಾಗಿ ವಾಸಿಸಲು ಎಲ್ಲಿ ಸ್ಥಳವಿದೆಯೋ ಅದನ್ನು ಹೇಳೋಣವಾಗಲಿ' ; ಹೀಗೆ ರಾಮನಿಂದ ಹೇಳಲ್ಪಟ್ಟ ಮುನಿಯು ಮುಗುಳುನಗೆಯಿಂದ ಹೀಗೆಂದನು :

**ತ್ವಮೇವ ಸರ್ವಲೋಕಾನಾಂ ನಿವಾಸಸ್ಥಾನಮುತ್ತಮಮ್ ।**
**ತವಾಪಿ ಸರ್ವಭೂತಾನಿ ನಿವಾಸಸದನಾನಿ ಹಿ ॥ ೪೬ ॥**
**ಏವಂ ಸಾಧಾರಣಂ ಸ್ಥಾನಮುಕ್ತಂ ತೇ ರಘುನಂದನ ।**
**ಸೀತಯಾ ಸಹಿತಸ್ಯೇತಿ ವಿಶೇಷಂ ಪೃಚ್ಛತಸ್ತವ ॥ ೪೭ ॥**
**ತದ್ವಕ್ಷ್ಯಾಮಿ ರಘುಶ್ರೇಷ್ಠ ಯತ್ತೇ ನಿಯತಮಂದಿರಮ್ ।**
**ಶಾಂತಾನಾಂ ಸಮದೃಷ್ಟೀನಾಮದ್ವೇಷ್ಟೄಣಾಂ ಚ ಜಂತುಷು ॥ ೪೮ ॥**
**ತ್ವಾಮೇವ ಭಜತಾಂ ನಿತ್ಯಂ ಹೃದಯಂ ತೇಽಧಿಮಂದಿರಮ್ ।**

೪೬-೪೮. (ರಾಮನೆ,) ಎಲ್ಲಾ ಲೋಕಗಳಿಗೂ ನೀನೇ ಶ್ರೇಷ್ಠನಾದ ನಿವಾಸಸ್ಥಾನನಾಗಿರುವೆ. ಎಲ್ಲಾ ಭೂತಗಳೂ ನಿನಗೆ ನಿವಾಸಸ್ಥಾನವೇ ಆಗಿರುವವು. ಎಲೈ ರಘುನಂದನನೆ, ಹೀಗೆ ಸಾಧಾರಣವಾದ ವಾಸಸ್ಥಾನವನ್ನು ತಿಳಿಸಿದ್ದೇನೆ. ಇನ್ನು ಸೀತಾಸಮೇತನಾದ ನಿನಗೆ ವಿಶೇಷವಾದ ವಾಸಸ್ಥಾನವನ್ನು ಕೇಳುತ್ತಿರುವೆಯಾಗಿ ಇದೊ, ನಿನ್ನ ಶಾಶ್ವತವಾದ ವಾಸಮಂದಿರವು ಯಾವದೆಂಬುದನ್ನು ಹೇಳುವೆನು : ರಘೂತ್ತಮನೆ, ಶಾಂತರೂ ಸಮದೃಷ್ಟಿಯುಳ್ಳವರೂ ಯಾವ ಪ್ರಾಣಿಗಳನ್ನೂ ದ್ವೇಷಿಸದೆ ಇರುವವರೂ ಆಗಿದ್ದುಕೊಂಡು ಸದಾಕಾಲವೂ ನಿನ್ನನ್ನೇ ಚಿಂತಿಸುತ್ತಿರುವವರ ಹೃದಯವೇ ನಿನ್ನ ವಾಸಮಂದಿರವು.

**ಧರ್ಮಾಧರ್ಮಾನ್ ಪರಿತ್ಯಜ್ಯ ತ್ವಾಮೇವ ಭಜತೋಽನಿಶಮ್ ।**
**ಸೀತಯಾ ಸಹ ತೇ ರಾಮ ತಸ್ಯ ಹೃತ್ಸುಖಮಂದಿರಮ್ ॥ ೪೯ ॥**
**ತ್ವನ್ಮಂತ್ರಜಾಪಕೋ ಯಸ್ತು ತ್ವಾಮೇವ ಶರಣಂ ಗತಃ ।**
**ನಿರ್ದ್ವಂದ್ವೋ ನಿಃಸ್ಪೃಹಸ್ತಸ್ಯ ಹೃದಯಂ ತೇ ಸುಮಂದಿರಮ್ ॥ ೫೦ ॥**
**ನಿರಹಂಕಾರಿಣಃ ಶಾಂತಾ ಯೇ ರಾಗದ್ವೇಷವರ್ಜಿತಾಃ ।**
**ಸಮಲೋಷ್ಟಾಶ್ಮಕನಕಾಸ್ತೇಷಾಂ ತೇ ಹೃದಯಂ ಗೃಹಮ್ ॥ ೫೧ ॥**

**ತ್ವಯಿ ದತ್ತಮನೋಬುದ್ಧಿರ್ಯಃ ಸಂತುಷ್ಟಃ ಸದಾ ಭವೇತ್ ।**
**ತ್ವಯಿ ಸಂತ್ಯಕ್ತಕರ್ಮಾ ಯಸ್ತನ್ಮನಸ್ತೇ ಶುಭಂ ಗೃಹಮ್ ॥ ೫೨ ॥**
**ಯೋ ನ ದ್ವೇಷ್ಟ್ಯಪ್ರಿಯಂ ಪ್ರಾಪ್ಯ ಪ್ರಿಯಂ ಪ್ರಾಪ್ಯ ನ ಹೃಷ್ಯತಿ ।**
**ಸರ್ವಂ ಮಾಯೇತಿ ನಿಶ್ಚಿತ್ಯ ತ್ವಾಂ ಭಜೇತ್ ತನ್ಮನೋ ಗೃಹಮ್ ॥ ೫೩ ॥**
**ಷಡ್ ಭಾವಾದಿವಿಕಾರಾನ್ ಯೋ ದೇಹೇ ಪಶ್ಯತಿ ನಾತ್ಮನಿ ।**
**ಕ್ಷುತ್ ತೃಟ್ ಸುಖಂ ಭಯಂ ದುಃಖಂ ಪ್ರಾಣಬುದ್ಧ್ಯೋರ್ನಿರೀಕ್ಷತೇ ।**
**ಸಂಸಾರಧರ್ಮೈರ್ನಿರ್ಮುಕ್ತಸ್ತಸ್ಯ ತೇ ಮಾನಸಂ ಗೃಹಮ್ ॥ ೫೪ ॥**

೪೯-೫೪. (ಮತ್ತು) ಧರ್ಮಾಧರ್ಮಗಳನ್ನು ಕೈಬಿಟ್ಟು ಯಾವಾಗಲೂ ನಿನ್ನನ್ನೇ ಭಜಿಸುತ್ತಿರುವವರಾದ, ನಿನ್ನ ಮಂತ್ರವನ್ನೇ ಜಪಿಸುತ್ತಾ ಯಾವನು ನಿನ್ನನ್ನೇ ಶರಣುಹೊಂದಿರುವನೋ, ಶೀತೋಷ್ಣಾದಿದ್ವಂದ್ವಗಳಿಲ್ಲದವನೂ ಆಸೆಯಿಲ್ಲದವನೂ ಆಗಿರುವನೋ ಅವನ ಹೃದಯವು ಸೀತಾಸಮೇತನಾದ ನಿನಗೆ ವಾಸಸ್ಥಾನವು. ಇನ್ನು ಯಾರು ಅಹಂಕಾರವಿಲ್ಲದವರಾಗಿ ರಾಗದ್ವೇಷಗಳನ್ನು ದೂರಮಾಡಿದವರಾಗಿ ಮಣ್ಣು ಹೆಂಟೆಯನ್ನೂ ಚಿನ್ನವನ್ನೂ ಸಮಾನವಾಗಿ ಕಾಣುವವರಾಗಿರುವರೋ ಅವರ ಹೃದಯವು ನಿನಗೆ ಮನೆಯು. ಯಾವನು ಸದಾ ತೃಪ್ತನಾಗಿ ಮನೋಬುದ್ಧಿಗಳನ್ನು ನಿನಗೆ ಅರ್ಪಿಸಿ ನಿನ್ನಲ್ಲಿಯೇ ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡಿರುವನೋ ಅವನ ಮನಸ್ಸೇ ನಿನಗೆ ಶುಭವಾದ ಗೃಹವು. ಯಾವನು ಕೆಟ್ಟದ್ದು ಒದಗಿದರೆ ದ್ವೇಷಿಸದೆ, ಒಳ್ಳೆಯದು ಬಂದರೆ ಹಿಗ್ಗದೆ, ಇವೆಲ್ಲವೂ ಮಾಯೆ ಎಂದು ನಿಶ್ಚಯಿಸಿಕೊಂಡು ನಿನ್ನನ್ನೇ ಭಜಿಸುವನೋ ಅವನ ಮನಸ್ಸೇ ನಿನಗೆ ಮನೆಯು. ಯಾವನು ಆರು ಭಾವವಿಕಾರಗಳನ್ನು ದೇಹದಲ್ಲಿ ಕಂಡುಕೊಂಡವನಾಗಿ ಮತ್ತು ಹಸಿವು, ಬಾಯಾರಿಕೆ, ಸುಖ, ದುಃಖ, ಭಯ - ಮುಂತಾದವುಗಳು ಪ್ರಾಣ ಮತ್ತು ಬುದ್ಧಿಧರ್ಮಗಳೆಂದು ಕಂಡುಕೊಂಡು ಆತ್ಮನಿಗೆ (ಅವುಗಳ ಅಂಟಿಲ್ಲವೆಂದು) ತಿಳಿದಿರುವವನಾಗಿ ಸಂಸಾರಧರ್ಮಗಳಿಗೆ ಅಂಟದೆ ಮುಕ್ತನಾಗಿರುವನೋ ಅವನ ಮನಸ್ಸೇ ನಿನಗೆ ವಾಸಸ್ಥಾನವು.

**ಪಶ್ಯಂತಿ ಯೇ ಸರ್ವಗುಹಾಶಯಸ್ಥಂ**
**ತ್ವಾಂ ಚಿದ್ಘನಂ ಸತ್ಯಮನಂತಮೇಕಮ್ ।**
**ಅಲೇಪಕಂ ಸರ್ವಗತಂ ವರೇಣ್ಯಂ**
**ತೇಷಾಂ ಹೃದಬ್ಜೇ ಸಹ ಸೀತಯಾ ವಸ ॥ ೫೫ ॥**
**ನಿರಂತರಾಭ್ಯಾಸದೃಢೀಕೃತಾತ್ಮನಾಂ**
**ತ್ವತ್ಪಾದಸೇವಾಪರಿನಿಷ್ಠಿತಾನಾಮ್ ।**
**ತ್ವನ್ನಾಮಕೀರ್ತ್ಯಾ ಹತಕಲ್ಮಷಾಣಾಂ ।**
**ಸೀತಾಸಮೇತಸ್ಯ ಗೃಹಂ ಹೃದಬ್ಜೇ ॥ ೫೬ ॥**

೫೫-೫೬. ಯಾರು ಎಲ್ಲಾ ಪ್ರಾಣಿಗಳ ಹೃದಯಗುಹೆಯಲ್ಲಿರುವ ಚಿತ್ತಿನ ಘಟ್ಟಿಯಾದ, ಸತ್ಯನೂ ಅನಂತನೂ ಏಕನೂ ಲೇಪವಿಲ್ಲದವನೂ ಸರ್ವಗತನೂ ಶ್ರೇಷ್ಠನೂ ಆದ ನಿನ್ನನ್ನು ಕಂಡುಕೊಳ್ಳುವರೋ ಅವರ ಹೃದಯಕಮಲದಲ್ಲಿ ಸೀತಾ ಸಮೇತನಾಗಿ ವಾಸಮಾಡುವವನಾಗು. ಎಡೆಬಿಡದ ಅಭ್ಯಾಸದಿಂದ ದೃಢಗೊಳಿಸಲ್ಪಟ್ಟ ಮನಸ್ಸುಳ್ಳ ಮತ್ತು ನಿನ್ನ ಪಾದಸೇವೆಯಲ್ಲಿಯೇ ನೆಲೆಗೊಂಡಿರುವವರಾದ ಹಾಗೂ ನಿನ್ನ ನಾಮಕೀರ್ತನೆಯಿಂದ ಪಾಪಗಳನ್ನು ಕಳೆದುಕೊಂಡಿರುವವರ ಹೃದಯವೇ ಸೀತಾ ಸಮೇತನಾದ ನಿನಗೆ ಗೃಹವು.

**ರಾಮ ತ್ವನ್ನಾಮಮಹಿಮಾ ವರ್ಣ್ಯತೇ ಕೇನ ವಾ ಕಥಮ್ ।**
**ಯತ್ಪ್ರಭಾವಾದಹಂ ರಾಮ ಬ್ರಹ್ಮರ್ಷಿತ್ವಮವಾಪ್ತವಾನ್ ॥ ೫೭ ॥**
**ಅಹಂ ಪುರಾ ಕಿರಾತೇಷು ಕಿರಾತೈಃ ಸಹ ವರ್ಧಿತಃ ।**
**ಜನ್ಮಮಾತ್ರದ್ವಿಜತ್ವಂ ಮೇ ಶೂದ್ರಾಚಾರರತಃ ಸದಾ ॥ ೫೮ ॥**
**ಶೂದ್ರಾಯಾಂ ಬಹವಃ ಪುತ್ರಾ ಉತ್ಪನ್ನಾ ಮೇಽಜಿತಾತ್ಮನಃ ।**
**ತತಶ್ಚೌರೈಶ್ಚ ಸಂಗಮ್ಯ ಚೌರೋಽಹಮಭವಂ ಪುರಾ ॥ ೫೯ ॥**
**ಧನುರ್ಬಾಣಧರೋ ನಿತ್ಯಂ ಜೀವಾನಾಮಂತಕೋಪಮಃ ।**

೫೭-೫೯. ಎಲೈ ರಾಮನೆ, ನಿನ್ನ ನಾಮಮಹಿಮೆಯು ಯಾವನಿಂದ ಹೇಗೆ ತಾನೆ ವರ್ಣಿಸಲಾದೀತು ? ಯಾವ ನಾಮದ ಪ್ರಭಾವದಿಂದ ನಾನು ಬ್ರಹ್ಮರ್ಷಿತ್ವವನ್ನು ಪಡೆದುಕೊಂಡೆನೋ (ಅದರ ಮಹಿಮೆಯನ್ನು ತಿಳಿಸುವೆನು). ಹಿಂದೆ ನಾನು ಕಿರಾತಕರುಗಳ ಗುಂಪಿನಲ್ಲಿ ಸೇರಿ ಅವರಿಂದ ಬೆಳೆಯಿಸಲ್ಪಟ್ಟವನಾಗಿ ಹುಟ್ಟಿನಿಂದ ಮಾತ್ರ ಬ್ರಾಹ್ಮಣನಾಗಿದ್ದು ಶೂದ್ರಾಚಾರದಲ್ಲಿಯೇ ಯಾವಾಗಲೂ ತೊಡಗಿದ್ದೆನು. ಜಿತೇಂದ್ರಿಯನಲ್ಲದ ನನಗೆ ಶೂದ್ರಸ್ತ್ರೀಯರಲ್ಲಿ ಅನೇಕ ಮಕ್ಕಳು ಹುಟ್ಟಿದರು. ಅನಂತರ ಕಳ್ಳರೊಡನೆ ಸೇರಿ ನಾನೂ ಕಳ್ಳನಾಗಿ ಧನುರ್ಬಾಣಗಳನ್ನು ಧರಿಸಿಕೊಂಡು ಪ್ರಾಣಿಗಳಿಗೆ ಯಮನಂತೆ (ಭಯಂಕರವಾಗಿ) ಇದ್ದುಕೊಂಡಿದ್ದೆನು.

**ಏಕದಾ ಮುನಯಃ ಸಪ್ತ ದೃಷ್ಟಾ ಮಹತಿ ಕಾನನೇ ।**
**ಸಾಕ್ಷಾನ್ಮಯಾ ಪ್ರಕಾಶನ್ತೋ ಜ್ವಲನಾರ್ಕಸಮಪ್ರಭಾಃ ॥ ೬೦ ॥**
**ತಾನನ್ವಧಾವಂ ಲೋಭೇನ ತೇಷಾಂ ಸರ್ವಪರಿಚ್ಛದಾನ್ ।**
**ಗ್ರಹೀತುಕಾಮಸ್ತತ್ರಾಹಂ ತಿಷ್ಠ ತಿಷ್ಠೇತಿ ಚಾಬ್ರವಮ್ ॥ ೬೧ ॥**
**ದೃಷ್ಟ್ವಾ ಮಾಂ ಮುನಯೋಽಪೃಚ್ಛನ್ ಕಿಮಾಯಾಸಿ ದ್ವಿಜಾಧಮ ।**
**ಅಹಂ ತಾನಬ್ರವಂ ಕಿಂಚಿದಾದಾತುಂ ಮುನಿಸತ್ತಮಾಃ ॥ ೬೨ ॥**

**ಪುತ್ರದಾರಾದಯಃ ಸಂತಿ ಬಹವೋ ಮೇ ಬುಭುಕ್ಷಿತಾಃ ।**
**ತೇಷಾಂ ಸಂರಕ್ಷಣಾರ್ಥಾಯ ಚರಾಮಿ ಗಿರಿಕಾನನೇ ॥ ೬೩ ॥**

೬೦-೬೩. ಒಮ್ಮೆ ದಟ್ಟವಾದ ಕಾಡಿನಲ್ಲಿ ತೇಜಸ್ಸಿನಿಂದ ಸೂರ್ಯನಂತೆ ಹೊಳೆಯುತ್ತಿರುವ ಕಾಂತಿಯುಳ್ಳ ಏಳು ಜನ ಋಷಿಗಳು ನನಗೆ ಕಣ್ಣಿಗೆ ಗೋಚರರಾದರು. ಅವರ ಎಲ್ಲಾ ಪದಾರ್ಥಗಳನ್ನೂ ಅಪಹರಿಸಲು ಆಸೆಯಿಂದ ಅವರ ಹಿಂದೆ ಓಡಿದೆನು. ನಿಲ್ಲು, ನಿಲ್ಲು - ಎಂದು ಕೂಗಿದೆನು. ನನ್ನನ್ನು ನೋಡಿ ಋಷಿಗಳು 'ಎಲೈ ದ್ವಿಜಾಧಮನೆ, ಏತಕ್ಕೆ ಬರುತ್ತಿದ್ದೀಯೆ ?' ಎಂದು ಕೇಳಿದರು. ನಾನು ಅವರನ್ನು ಕುರಿತು 'ಎಲೈ ಮುನಿಶ್ರೇಷ್ಠರೆ, ನನಗೆ ಹಸಿದಿರುವ ಅನೇಕಮಂದಿ ಮಕ್ಕಳು ಮತ್ತು ಹೆಂಡತಿ - ಎಲ್ಲರೂ ಇದ್ದಾರೆ. ಅವರಿಗಾಗಿ ಏನನ್ನಾದರೂ ತೆಗೆದುಕೊಳ್ಳಲು ಮತ್ತು ಅವರನ್ನು ಕಾಪಾಡುವದಕ್ಕಾಗಿ ಈ ಬೆಟ್ಟ, ಕಾಡುಗಳಲ್ಲಿ ಸಂಚರಿಸುತ್ತಿರುವೆನು'' ಎಂದೆನು.

**ತತೋ ಮಾಮೂಚುರವ್ಯಗ್ರಾಃ ಪೃಚ್ಛ ಗತ್ವಾ ಕುಟುಂಬಕಮ್ ।**
**ಯೋ ಯೋ ಮಯಾ ಪ್ರತಿದಿನಂ ಕ್ರಿಯತೇ ಪಾಪಸಂಚಯಃ ॥ ೬೪ ॥**
**ಯೂಯಂ ತದ್ಭಾಗಿನಃ ಕಿಂ ವಾ ನೇತಿ ನೇತಿ ಪೃಥಕ್ ಪೃಥಕ್ ।**
**ವಯಂ ಸ್ಥಾಸ್ಯಾಮಹೇ ತಾವದಾಗಮಿಷ್ಯಸಿ ನಿಶ್ಚಯಃ ॥ ೬೫ ॥**
**ತಥೇತ್ಯುಕ್ತ್ವಾ ಗೃಹಂ ಗತ್ವಾ ಮುನಿಭಿರ್ಯದುದೀರಿತಮ್ ।**
**ಅಪೃಚ್ಛಂ ಪುತ್ರದಾರಾದೀನ್ ತೈರುಕ್ತೋಽಹಂ ರಘೂತ್ತಮ ॥ ೬೬ ॥**
**ಪಾಪಂ ತವೈವ ತತ್ಸರ್ವಂ ವಯಂ ತು ಫಲಭಾಗಿನಃ ॥**

೬೪-೬೬. ಎಲೈ ರಘುಶ್ರೇಷ್ಠನೆ, ಅನಂತರ ಅವರು ನಿರ್ಭಯರಾಗಿ ಹೀಗೆಂದರು: (ಎಲೈ ಕಿರಾತನೆ,) ನೀನು ಮನೆಗೆ ಹೋಗಿ ಕುಟುಂಬದವರನ್ನು ಬಿಡಿಬಿಡಿಯಾಗಿ (ಒಬ್ಬೊಬ್ಬರನ್ನೇ) ಹೀಗೆ ಕೇಳು : 'ಪ್ರತಿದಿನವೂ ನಾನು ಏನೇನು ಪಾಪಗಳನ್ನು ಕೂಡಿಹಾಕುವೆನೋ ಅದಕ್ಕೆ ನೀವುಗಳೂ ಪಾಲುದಾರರಾಗುತ್ತೀರಾ ? ಇಲ್ಲವೆ ?' ನಾವು ನೀನು ಬರುವವರೆಗೂ ಇಲ್ಲಿಯೇ ಇರುವೆವು. ಇದು ನಿಶ್ಚಯವು'. ಹಾಗೆಯೇ ಆಗಲೆಂದು ಹೇಳಿ ನಾನು ಮನೆಗೆ ಹೋಗಿ ಋಷಿಗಳು ಹೇಳಿದಂತೆಯೇ ಹೆಂಡತಿಮಕ್ಕಳನ್ನು ಕೇಳಿದೆನು. ಅವರುಗಳು ''ಹಾಗಿಲ್ಲ ; ಪಾಪಕ್ಕೆಲ್ಲ ನೀನೇ ಹೊಣೆಗಾರನು. ನಾವಾದರೋ ನಿನ್ನ ಸಂಪಾದನೆಗೆ ಮಾತ್ರ ಪಾಲುದಾರರು'' - ಎಂದರು.

**ತಚ್ಛ್ರುತ್ವಾ ಜಾತನಿರ್ವೇದೋ ವಿಚಾರ್ಯ ಪುನರಾಗಮಮ್ ।**
**ಮುನಯೋ ಯತ್ರ ತಿಷ್ಠಂತಿ ಕರುಣಾಪೂರ್ಣಮಾನಸಾಃ ॥ ೬೭ ॥**
**ಮುನೀನಾಂ ದರ್ಶನಾದೇವ ಶುದ್ಧಾಂತಃಕರಣೋಽಭವಮ್ ।**
**ಧನುರಾದೀನ್ ಪರಿತ್ಯಜ್ಯ ದಂಡವತ್ ಪತಿತೋಽಸ್ಮ್ಯಹಮ್ ॥ ೬೮ ॥**

**ರಕ್ಷಧ್ವಂ ಮಾಂ ಮುನಿಶ್ರೇಷ್ಠಾ ಗಚ್ಛಂತಂ ನಿರಯಾರ್ಣವಮ್ ।**
**ಇತ್ಯಗ್ರೇ ಪತಿತಂ ದೃಷ್ಟ್ವಾ ಮಾಮೂಚುರ್ಮುನಿಸತ್ತಮಾಃ ॥ ೬೯ ॥**

೬೭-೬೯. ಅದನ್ನು ಕೇಳಿ ವೈರಾಗ್ಯವುಂಟಾದವನಾಗಿ ವಿಚಾರಮಾಡಿ ನೋಡಿ ಮತ್ತೆ ಕರುಣಾಪೂರ್ಣರಾದ ಋಷಿಗಳಿರುವಲ್ಲಿಗೆ ಬಂದೆನು. ಮುನಿಗಳನ್ನು ಕಂಡದ್ದರಿಂದಲೇ ನಾನು ಅಂತಃಕರಣಶುದ್ಧಿಯನ್ನು ಹೊಂದಿದೆನು. ಧನುರ್ಬಾಣಗಳನ್ನು ಎಸೆದು ದಂಡವತ್ ಪ್ರಣಾಮವನ್ನು ಮಾಡಿದೆನು. 'ಎಲೈ ಮುನಿಶ್ರೇಷ್ಠರೆ, ನರಕಕ್ಕೆ ಬೀಳುತ್ತಿರುವ ನನ್ನನ್ನು ಕಾಪಾಡಿರಿ.' ಹೀಗೆಂದು ಹೇಳುತ್ತಾ ಎದುರಿಗೆ ನಮಸ್ಕರಿಸಿದ ನನ್ನನ್ನು ಕುರಿತು ಆ ಮುನಿಶ್ರೇಷ್ಠರು ಹೀಗೆಂದರು.

**ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಸಫಲಃ ಸತ್ಸಮಾಗಮಃ ।**
**ಉಪದೇಕ್ಷ್ಯಾಮಹೇ ತುಭ್ಯಂ ಕಿಂಚಿತ್ತೇನೈವ ಮೋಕ್ಷಸೇ ॥ ೭೦ ॥**
**ಪರಸ್ಪರಂ ಸಮಾಲೋಚ್ಯ ದುರ್ವೃತ್ತೋಽಯಂ ದ್ವಿಜಾಧಮಃ ।**
**ಉಪೇಕ್ಷ್ಯ ಏವ ಸದ್ವೃತ್ತೈಸ್ತಥಾಪಿ ಶರಣಂ ಗತಃ ॥ ೭೧ ॥**
**ರಕ್ಷಣೀಯಃ ಪ್ರಯತ್ನೇನ ಮೋಕ್ಷಮಾರ್ಗೋಪದೇಶತಃ ।**

೭೦-೭೧. ಮೇಲಕ್ಕೆ ಎದ್ದೇಳು. ನಿನಗೆ ಒಳ್ಳೆಯದಾಗಲಿ ! ಸಾಧುಗಳ ಸಮಾಗಮವು ಸಫಲವಾಯಿತು. ನಿನಗೆ ಏನಾದರೂ ಉಪದೇಶಮಾಡುತ್ತೇವೆ. ಅದರಿಂದಲೇ ನೀನು ಪಾಪಗಳಿಂದ ಬಿಡುಗಡೆಹೊಂದುವೆ - ಎಂದುಕೊಂಡು ಒಬ್ಬರಿಗೊಬ್ಬರು ಮಾತನಾಡಿಕೊಂಡು 'ಈ ಪಾಪಿಯು ಭ್ರಷ್ಟನಾದ ಬ್ರಾಹ್ಮಣನು ; ಸತ್ಪುರುಷರು ಇಂಥವನನ್ನು ತಿರಸ್ಕರಿಸತಕ್ಕದ್ದೇ ಸರಿ ; ಆದರೂ ಶರಣಾಗತನಾಗಿರುತ್ತಾನೆ. ಆದ್ದರಿಂದ ಮೋಕ್ಷಮಾರ್ಗವನ್ನುಪದೇಶಿಸಿ ಪ್ರಯತ್ನಪೂರ್ವಕವಾಗಿ ಇವನನ್ನು ಕಾಪಾಡಬೇಕು' - (ಎಂದು ನಿಶ್ಚಯಿಸಿದರು).

**ಇತ್ಯುಕ್ತ್ವಾ ರಾಮ ತೇ ನಾಮ ವ್ಯತ್ಯಸ್ತಾಕ್ಷರಪೂರ್ವಕಮ್ ।**
**ಏಕಾಗ್ರಮನಸಾಽತ್ರೈವ ಮರೇತಿ ಜಪ ಸರ್ವದಾ ॥ ೭೨ ॥**
**ಆಗಚ್ಛಾಮಃ ಪುನರ್ಯಾವದ್ ತಾವದುಕ್ತಂ ಸದಾ ಜಪ ।**
**ಇತ್ಯುಕ್ತ್ವಾ ಪ್ರಯಯುಃ ಸರ್ವೇ ಮುನಯೋ ದಿವ್ಯದರ್ಶನಾಃ ॥ ೭೩ ॥**

೭೨-೭೩. ಹೀಗೆಂದುಕೊಂಡು ಎಲೈ ರಾಮನೆ, ನಿನ್ನ ಹೆಸರನ್ನು ಅಕ್ಷರಗಳನ್ನು ಅದಲುಬದಲುಮಾಡಿ 'ಮರಾ' ಎಂದು ಯಾವಾಗಲೂ ಒಂದೇಮನಸ್ಸಿನಿಂದ ಜಪಿಸುತ್ತಿರು. ನಾವು ಮತ್ತೊಮ್ಮೆ ಇಲ್ಲಿಗೆ ಬರುತ್ತೇವೆ. ಅಲ್ಲಿಯವರೆಗೂ ನಾವು ಹೇಳಿದ್ದನ್ನು ಜಪಿಸುತ್ತಿರು' - ಎಂದು ಹೇಳಿ ದಿವ್ಯಜ್ಞಾನಿಗಳಾದ ಮುನಿಗಳು ಎಲ್ಲರೂ ಹೊರಟುಹೋದರು.

**ಅಹಂ ಯಥೋಪದಿಷ್ಟಂ ತೈಸ್ತಥಾಕರವಮಂಜಸಾ ।**
**ಜಪನ್ನೇಕಾಗ್ರಮನಸಾ ಬಾಹ್ಯಂ ವಿಸ್ಮೃತವಾನಹಮ್ ॥ ೭೪ ॥**
**ಏವಂ ಬಹುತಿಥೇ ಕಾಲೇ ಗತೇ ನಿಶ್ಚಲರೂಪಿಣಃ ।**
**ಸರ್ವಸಂಗವಿಹೀನಸ್ಯ ವಲ್ಮೀಕೋಽಭೂನ್ಮಮೋಪರಿ ॥ ೭೫ ॥**
**ತತೋ ಯುಗಸಹಸ್ರಾಂತೇ ಋಷಯಃ ಪುನರಾಗಮನ್ ।**
**ಮಾಮೂಚುರ್ನಿಷ್ಕ್ರಮಸ್ವೇತಿ ತಚ್ಛ್ರುತ್ವಾ ತೂರ್ಣಮುತ್ಥಿತಃ ॥ ೭೬ ॥**

೭೪-೭೬. ನಾನು ಅವರು ಉಪದೇಶಮಾಡಿದ್ದಂತೆಯೇ ಯಾವಾಗಲೂ ಜಪಿಸುತ್ತಾ ಏಕಾಗ್ರಮನಸ್ಸಿನಿಂದ ಇದ್ದುಕೊಂಡು ಹೊರಗಿನ ಪ್ರಪಂಚವನ್ನು ಮರೆತು ಬಿಟ್ಟೆನು. ಹೀಗೆ ಬಹಳಕಾಲವು ಕಳೆಯಲಾಗಿ ಅಳ್ಳಾಡದೆ ಕುಳಿತಿದ್ದ ಹಾಗೂ ಎಲ್ಲಾ ವಿಧವಾದ ವಿಷಯಸಂಗಗಳಿಂದಲೂ ದೂರನಾದ ನನ್ನಮೇಲೆ ಹುತ್ತವು ಬೆಳೆಯಿತು. ಅನಂತರ ಸಾವಿರಯುಗಗಳ ಕೊನೆಯಲ್ಲಿ ಋಷಿಗಳು ಮತ್ತೆ ಬಂದವರಾಗಿ 'ಹೊರಕ್ಕೆ ಬಾ' ಎಂದು ನನ್ನನ್ನು ಕರೆದರು. ಅದನ್ನು ಕೇಳಿ ಕೂಡಲೆ ಎದ್ದುಬಂದೆನು.

**ವಲ್ಮೀಕಾನ್ನಿರ್ಗತಶ್ಚಾಹಂ ನೀಹಾರಾದಿವ ಭಾಸ್ಕರಃ ।**
**ಮಾಮಪ್ಯಾಹುರ್ಮುನಿಗಣಾ ವಾಲ್ಮೀಕಿಸ್ತ್ವಂ ಮುನೀಶ್ವರ ॥ ೭೭॥**
**ವಲ್ಮೀಕಾತ್ ಸಂಭವೋ ಯಸ್ಮಾದ್ ದ್ವಿತೀಯಂ ಜನ್ಮ ತೇಽಭವತ್ ।**
**ಇತ್ಯುಕ್ತ್ವಾ ತೇ ಯಯುರ್ದಿವ್ಯಗತಿಂ ರಘುಕುಲೋತ್ತಮ ।**
**ಅಹಂ ತೇ ರಾಮ ನಾಮ್ನಶ್ಚ ಪ್ರಭಾವಾದೀದೃಶೋಽಭವಮ್ ॥ ೭೮ ॥**

೭೭-೭೮. ನಾನು ಹುತ್ತದಿಂದ-ಮಂಜಿನಿಂದ ಸೂರ್ಯನು ಬರುವಂತೆ - ಹೊರಬಂದೆನು. ಋಷಿಗಣರು 'ಮುನಿಶ್ರೇಷ್ಠನೆ, ನಿನಗೆ ಹುತ್ತದಿಂದ ಹೊರಬರುವದರ ಮೂಲಕ ಎರಡನೆಯ ಹುಟ್ಟು ಸಂಭವಿಸಿದೆಯಾದ್ದರಿಂದ ನೀನು ವಾಲ್ಮೀಕಿ -ಎಂದು ಪ್ರಸಿದ್ಧನಾಗು' ಎಂದು ಹೇಳಿದರು. ಹೀಗೆ ಹೇಳಿ ಎಲೈ ರಘುಕುಲಶ್ರೇಷ್ಠನೆ, ಅವರು ದಿವ್ಯಗತಿಯಿಂದ ಹೊರಟುಹೋದರು. ಎಲೈ ರಾಮನೆ, ನಿನ್ನ ನಾಮದ ಮಹಿಮೆಯಿಂದ ನಾನು ಹೀಗೆ ಆದೆನು.

**ಅದ್ಯ ಸಾಕ್ಷಾತ್ ಪ್ರಪಶ್ಯಾಮಿ ಸಸೀತಂ ಲಕ್ಷ್ಮಣೇನ ಚ ।**
**ರಾಮಂ ರಾಜೀವಪತ್ರಾಕ್ಷಂ ತ್ವಾಂ ಮುಕ್ತೋ ನಾತ್ರ ಸಂಶಯಃ ॥ ೭೯ ॥**
**ಆಗಚ್ಛ ರಾಮ ಭದ್ರಂ ತೇ ಸ್ಥಲಂ ವೈ ದರ್ಶಯಾಮ್ಯಹಮ್ ।**
**ಏವಮುಕ್ತ್ವಾ ಮುನಿಃ ಶ್ರೀಮಾನ್ ಲಕ್ಷ್ಮಣೇನ ಸಮನ್ವಿತಃ ॥ ೮೦ ॥**

**ಶಿಷ್ಯೈಃ ಪರಿವೃತೋ ಗತ್ವಾ ಮಧ್ಯೇ ಪರ್ವತಗಂಗಯೋಃ ।**
**ತತ್ರ ಶಾಲಾಂ ಸುವಿಸ್ತೀರ್ಣಾಂ ಕಾರಯಾಮಾಸ ವಾಸಭೂಃ ।**
**ಪ್ರಾಕ್‌ಪಶ್ಚಿಮಂ ದಕ್ಷಿಣೋದಕ್ ಶೋಭನಂ ಮಂದಿರದ್ವಯಮ್ ॥ ೮೧ ॥**

೭೯-೮೧. 'ಈಗ ಕಮಲನೇತ್ರನಾದ ಸೀತಾಲಕ್ಷ್ಮಣಸಹಿತನಾದ ನಿನ್ನನ್ನು ಸಾಕ್ಷಾತ್ತಾಗಿ ನೋಡುತ್ತಿದ್ದೇನೆ. ಈಗ ನಾನು ನಿಸ್ಸಂದೇಹವಾಗಿ ಮುಕ್ತನಾದೆನು. ರಾಮನೆ, ನಿನಗೆ ಮಂಗಳವಾಗಲಿ ; ನಿನಗೆ ಸ್ಥಲವನ್ನು ತೋರಿಸುತ್ತೇನೆ ; ಬಾ' ಎಂದು ಮುನಿಯು ಹೇಳಿದವನಾಗಿ ಲಕ್ಷ್ಮಣನೊಡಗೂಡಿ ಶಿಷ್ಯರಿಂದ ಕೂಡಿಕೊಂಡು ಗಂಗಾನದಿ ಮತ್ತು ಪರ್ವತದ ನಡುವಣ ಭಾಗಕ್ಕೆ ಹೋಗಿ ಅಲ್ಲಿ ಪೂರ್ವಪಶ್ಚಿಮವಾಗಿ ಒಂದು , ದಕ್ಷಿಣೋತ್ತರವಾಗಿ ಮತ್ತೊಂದು ಹೀಗೆ ಎರಡು ವಿಸ್ತಾರವಾದ ಕೋಣೆಗಳುಳ್ಳ ಪರ್ಣ ಶಾಲೆಯನ್ನು ಕಟ್ಟಿಸಿದನು.

**ಜಾನಕ್ಯಾ ಸಹಿತೋ ರಾಮೋ ಲಕ್ಷ್ಮಣೇನ ಸಮನ್ವಿತಃ ।**
**ತತ್ರ ತೇ ದೇವಸದೃಶಾ ಹ್ಯವಸನ್ ಭವನೋತ್ತಮೇ ॥ ೮೨ ॥**
**ವಾಲ್ಮೀಕಿನಾ ತತ್ರ ಸುಪೂಜಿತೋಽಯಂ**
**ರಾಮಃ ಸಸೀತಃ ಸಹ ಲಕ್ಷ್ಮಣೇನ ।**
**ದೇವೈರ್ಮುನೀಂದ್ರೈಃ ಸಹಿತೋ ಮುದಾಽಽಸ್ತೇ**
**ಸ್ವರ್ಗೇ ಯಥಾ ದೇವಪತಿಃ ಸಶಚ್ಯಾ ॥ ೮೩ ॥**

೮೨-೮೩. ಜಾನಕಿ ಮತ್ತು ಲಕ್ಷ್ಮಣರೊಡಗೂಡಿದ ರಾಮನು ಆ ಶ್ರೇಷ್ಠವಾದ ಪರ್ಣಶಾಲೆಯಲ್ಲಿ ವಾಲ್ಮೀಕಿಯಿಂದ ಪೂಜಿತನಾಗಿ - ಹೇಗೆ ಸ್ವರ್ಗದಲ್ಲಿ ದೇವೇಂದ್ರನು ಶಚೀದೇವಿಯೊಡನೆ ಕೂಡಿ ದೇವತೆಗಳಿಂದಲೂ ಮುನಿಗಳಿಂದಲೂ ಪರಿವೃತನಾಗಿ ಸಂತೋಷದಿಂದಿರುವನೋ ಹಾಗೆ-ಸಂತೋಷದಿಂದ ವಾಸಮಾಡಿಕೊಂಡಿದ್ದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಷಷ್ಠಃ ಸರ್ಗಃ**

ஃஃஃஃஃஃஃஃஃ

## ಏಳನೆಯ ಸರ್ಗ

**ಶ್ರೀಮಹಾದೇವ ಉವಾಚ-**
**ಸುಮಂತ್ರೋऽಪಿ ತದಾಯೋಧ್ಯಾಂ ದಿನಾಂತೇ ಪ್ರವಿವೇಶ ಹ ।**
**ವಸ್ತ್ರೇಣ ಮುಖಮಾಚ್ಛಾದ್ಯ ಬಾಷ್ಪಾಕುಲಿತಲೋಚನಃ ॥ ೧ ॥**
**ಬಹಿರೇವ ರಥಂ ಸ್ಥಾಪ್ಯ ರಾಜಾನಂ ದ್ರಷ್ಟುಮಾಯಯೌ ।**
**ಜಯಶಬ್ದೇನ ರಾಜಾನಂ ಸ್ತುತ್ವಾ ತಂ ಪ್ರಣನಾಮ ಹ ॥ ೨ ॥**

೧-೨. ಶ್ರೀಮಹಾದೇವನಿಂತೆಂದನು : ಆಗ ಸುಮಂತ್ರನೂ ಸಂಜೆಯ ವೇಳೆಗೆ ಅಯೋಧ್ಯೆಯನ್ನು ಪ್ರವೇಶಿಸಿ ಕಣ್ಣೀರುತುಂಬಿದ ನೇತ್ರಗಳಿಂದ ಕೂಡಿ ಬಟ್ಟೆಯಿಂದ ಮುಖವನ್ನು ಮರೆಮಾಡಿಕೊಂಡು ರಥವನ್ನು ಹೊರಭಾಗದಲ್ಲಿಯೇ ನಿಲ್ಲಿಸಿ ರಾಜನನ್ನು ನೋಡಲು ಬಂದನು. ಜಯಕಾರದಿಂದ ರಾಜನನ್ನು ಹೊಗಳಿ ನಮಸ್ಕಾರಮಾಡಿದನು.

**ತತೋ ರಾಜಾ ನಮಂತಂ ತಂ ಸುಮಂತ್ರಂ ವಿಹ್ವಲೋऽಬ್ರವೀತ್ ।**
**ಸುಮಂತ್ರ ರಾಮ ಕುತ್ರಾಸ್ತೇ ಸೀತಯಾ ಲಕ್ಷ್ಮಣೇನ ಚ ॥ ೩ ॥**
**ಕುತ್ರ ತ್ಯಕ್ತಸ್ತ್ವಯಾ ರಾಮಃ ಕಿಂ ಮಾಂ ಪಾಪಿನಮಬ್ರವೀತ್ ।**
**ಸೀತಾ ವಾ ಲಕ್ಷ್ಮಣೋ ವಾಪಿ ನಿರ್ದಯಂ ಮಾಂ ಕಿಮಬ್ರವೀತ್ ॥ ೪ ॥**
**ಹಾ ರಾಮ ಹಾ ಗುಣನಿಧೇ ಹಾ ಸೀತೇ ಪ್ರಿಯವಾದಿನಿ ।**
**ದುಃಖಾರ್ಣವೇ ನಿಮಗ್ನಂ ಮಾಂ ಮ್ರಿಯಮಾಣಂ ನ ಪಶ್ಯಸಿ ॥ ೫ ॥**
**ವಿಲಪ್ಯೈವಂ ಚಿರಂ ರಾಜಾ ನಿಮಗ್ನೋ ದುಃಖಸಾಗರೇ ।**
**ಏವಂ ಮಂತ್ರೀ ರುದಂತಂ ತಂ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೬ ॥**

೩-೬. ಅನಂತರ ನಮಸ್ಕರಿಸುತ್ತಿರುವ ಸುಮಂತ್ರನನ್ನು ಕುರಿತು ದುಃಖಿತನಾದ ರಾಜನು ಹೀಗೆಂದನು : ಎಲೈ ಸುಮಂತ್ರನೆ, ಸೀತಾಲಕ್ಷ್ಮಣಸಮೇತನಾದ ರಾಮನು ಈಗ ಎಲ್ಲಿರುವನು ? ನೀನು ರಾಮನನ್ನು ಎಲ್ಲಿ ಬಿಟ್ಟುಬಂದೆ ? ಪಾಪಿಯಾದ ನನ್ನನ್ನು ಕುರಿತು ರಾಮನು ಏನು ಹೇಳಿದನು ? ನಿರ್ದಯನಾದ ನನ್ನ ವಿಷಯಕ್ಕೆ ಸೀತೆಯಾಗಲಿ ಲಕ್ಷ್ಮಣನಾಗಲಿ ಏನಂದುಕೊಂಡರು ? ಹಾ, ಗುಣನಿಧಿಯಾದ ರಾಮನೆ, ಎಲೌ ಪ್ರಿಯವಾದಿನಿಯಾದ ಸೀತೆಯೆ, ಶೋಕಸಮುದ್ರದಲ್ಲಿ ಮುಳುಗಿ ಸಾಯುತ್ತಿರುವ ನನ್ನನ್ನೇಕೆ ನೋಡುತ್ತಿಲ್ಲ ? ಎಂಬುದಾಗಿ ಬಹಳಕಾಲ ರಾಜನು ಅತ್ತವನಾಗಿ ದುಃಖಸಾಗರದಲ್ಲಿ ಮುಳುಗಿದನು. ಹೀಗೆ ಅಳುತ್ತಿರುವ ರಾಜನನ್ನು ಕುರಿತು ಮಂತ್ರಿಯು ಹೀಗೆಂದನು.

**ರಾಮಃ ಸೀತಾ ಚ ಸೌಮಿತ್ರಿರ್ಮಯಾ ನೀತಾ ರಥೇನ ತೇ ।**
**ಶೃಂಗವೇರಪುರಾಭ್ಯಾಶೇ ಗಂಗಾಕೂಲೇ ವ್ಯವಸ್ಥಿತಾಃ ॥ ೭ ॥**

**ಗುಹೇನ ಕಿಂಚಿದಾನೀತಂ ಫಲಮೂಲಾದಿಕಂ ಚ ಯತ್ ।**
**ಸ್ಪೃಷ್ಟ್ವಾ ಹಸ್ತೇನ ಸಂಪ್ರೀತ್ಯಾ ನಾಗ್ರಹೀತ್ ವಿಸಸರ್ಜ ತತ್ ॥ ೮ ॥**
**ವಟಕ್ಷೀರಂ ಸಮಾನಾಯ್ಯ ಗುಹೇನ ರಘುನಂದನಃ ।**
**ಜಟಾಮುಕುಟಮಾಬಧ್ಯ ಮಾಮಾಹ ನೃಪತೇ ಸ್ವಯಮ್ ॥ ೯ ॥**
**ಸುಮಂತ್ರ ಬ್ರೂಹಿ ರಾಜಾನಂ ಶೋಕಸ್ತೇಽಸ್ತು ನ ಮತ್ಕೃತೇ ।**
**ಸಾಕೇತಾದಧಿಕಂ ಸೌಖ್ಯಂ ವಿಪಿನೇ ನೋ ಭವಿಷ್ಯತಿ ॥ ೧೦ ॥**
**ಮಾತುರ್ಮೇ ವಂದನಂ ಬ್ರೂಹಿ ಶೋಕಂ ತ್ಯಜತು ಮತ್ಕೃತೇ ।**
**ಆಶ್ವಾಸಯತು ರಾಜಾನಂ ವೃದ್ಧಂ ಶೋಕಪರಿಪ್ಲುತಮ್ ॥ ೧೧ ॥**

೭-೧೧. ರಾಮನು, ಸೀತೆಯು ಮತ್ತು ಲಕ್ಷ್ಮಣನು - ನಿನ್ನ ರಥದಲ್ಲಿ ನನ್ನಿಂದ ಒಯ್ಯಲ್ಪಟ್ಟವರಾಗಿ ಶೃಂಗವೇರಪುರದ ಸಮೀಪದಲ್ಲಿ ಗಂಗಾನದಿಯ ತೀರದಲ್ಲಿ ಬಿಡಾರಮಾಡಿದರು. ಗುಹನು ಸಮರ್ಪಿಸಿದ ಕೆಲವು ಕಂದಮೂಲಫಲಗಳನ್ನು (ರಾಮನು) ಪ್ರೀತಿಯಿಂದ ಕೈಯಲ್ಲಿ ಮಾತ್ರ ಮುಟ್ಟಿದವನಾಗಿ ಹಿಂತಿರುಗಿಸಿದನು. ಸ್ವೀಕರಿಸಲಿಲ್ಲ. ರಘುನಂದನನು ಆಲದಮರದ ಹಾಲನ್ನು ಗುಹನಿಂದ ತರಿಸಿ ಜಟೆಗಳನ್ನು ಬಿಗಿದವನಾಗಿ ತಾನೇ ನನ್ನನ್ನು ಕುರಿತು ಹೀಗೆಂದನು : 'ಎಲೈ ಸುಮಂತ್ರನೆ, ರಾಜನನ್ನು ಕುರಿತು ಹೀಗೆ ಹೇಳುವವನಾಗು. ನನಗಾಗಿ (ರಾಮನಿಗಾಗಿ) ಅವನು ಶೋಕಪಡ ಬೇಕಾಗಿಲ್ಲ. ಅಯೋಧ್ಯೆಗಿಂತ ಹೆಚ್ಚಿನ ಸುಖವು ನಮಗೆ ಕಾಡಿನಲ್ಲಿ ದೊರೆಯಲಿದೆ. ತಾಯಿಗೆ ನನ್ನ ನಮಸ್ಕಾರವನ್ನು ಹೇಳು. ಆಕೆಯು ನನಗಾಗಿ ದುಃಖಪಡುವದನ್ನು ಬಿಡಲಿ. ಮತ್ತು ಸಂಕಟದಲ್ಲಿ ಮುಳುಗಿರುವ ರಾಜನನ್ನು ಸಮಾಧಾನಗೊಳಿಸಲಿ.

**ಸೀತಾ ಚಾಶ್ರುಪರೀತಾಕ್ಷೀ ಮಾಮಾಹ ನೃಪಸತ್ತಮ ।**
**ದುಃಖಗದ್ಗದಯಾ ವಾಚಾ ರಾಮಂ ಕಿಂಚಿದವೇಕ್ಷತೀ ॥ ೧೨ ॥**
**ಸಾಷ್ಟಾಂಗಂ ಪ್ರಣಿಪಾತಂ ಮೇ ಬ್ರೂಹಿ ಶ್ವಶ್ರ್ವೋಃ ಪದಾಂಬುಜೇ ।**
**ಇತಿ ಪ್ರರುದತೀ ಸೀತಾ ಗತಾ ಕಿಂಚಿದವಾಙ್ಮುಖೀ ॥ ೧೩ ॥**
**ತತಸ್ತೇಽಶ್ರುಪರೀತಾಕ್ಷಾ ನಾವಮಾರುರುಹುಃ ತದಾ ।**
**ಯಾವದ್ಗಂಗಾಂ ಸಮುತ್ತೀರ್ಯ ಗತಾಸ್ತಾವದಹಂ ಸ್ಥಿತಃ ॥ ೧೪ ॥**
**ತತೋ ದುಃಖೇನ ಮಹತಾ ಪುನರೇವಾಹಮಾಗತಃ ॥**

೧೨-೧೪. ಎಲೈ ನೃಪಶ್ರೇಷ್ಠನೆ, ದುಃಖದಿಂದ ತೊದಲುತ್ತಿರುವ ಮಾತುಗಳಿಂದ ಕಣ್ಣೀರುತುಂಬಿದ ಮುಖದ ಸೀತೆಯು ಸ್ವಲ್ಪಮಟ್ಟಿಗೆ ರಾಮನನ್ನು ನೋಡುತ್ತಾ ನನ್ನನ್ನು ಕುರಿತು ಹೀಗೆಂದಳು : 'ಅತ್ತೆಯವರ ಪಾದಾರವಿಂದಗಳಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಹೇಳು' - ಹೀಗೆನ್ನುತ್ತಾ ಮುಖವನ್ನು ತಗ್ಗಿಸಿಕೊಂಡು ಅಳುತ್ತಾ

ಆಕೆಯು ಹೊರಟುಹೋದಳು. ಅನಂತರ ಅವರುಗಳು ಕಣ್ಣೀರುತುಂಬಿದವರಾಗಿ ಹರಿಗೋಲನ್ನು ಏರಿದರು. ಗಂಗೆಯನ್ನು ದಾಟಿ ಮುಂದೆ ಹೋಗುವವರೆಗೂ ನಾನು ಅಲ್ಲಿದ್ದೆನು. ಅನಂತರ ದುಃಖಗೊಂಡವನಾಗಿ ಹಿಂತಿರುಗಿ ಬಂದೆನು.

**ತತೋ ರುದಂತೀ ಕೌಸಲ್ಯಾ ರಾಜಾನಮಿದಮಬ್ರವೀತ್ ।**
**ಕೈಕೇಯ್ಯೈ ಪ್ರಿಯಭಾರ್ಯಾಯೈ ಪ್ರಸನ್ನೋ ದತ್ತವಾನ್ ವರಮ್ ॥ ೧೫ ॥**
**ತ್ವಂ ರಾಜ್ಯಂ ದೇಹಿ ತಸ್ಯೈವ ಮತ್ಪುತ್ರಃ ಕಿಂ ವಿವಾಸಿತಃ ।**
**ಕೃತ್ವಾ ತ್ವಮೇವ ತತ್ಸರ್ವಮಿದಾನೀಂ ಕಿಂ ನು ರೋದಿಷಿ ॥ ೧೬ ॥**
**ಕೌಸಲ್ಯಾವಚನಂ ಶ್ರುತ್ವಾ ಕ್ಷತೇ ಸ್ಪೃಷ್ಟ ಇವಾಗ್ನಿನಾ ।**
**ಪುನಃ ಶೋಕಾಶ್ರುಪೂರ್ಣಾಕ್ಷಃ ಕೌಸಲ್ಯಾಮಿದಮಬ್ರವೀತ್ ॥ ೧೭ ॥**

೧೫-೧೭. ಅನಂತರ ಕೌಸಲ್ಯೆಯು ಅಳುತ್ತಾ ರಾಜನನ್ನು ಕುರಿತು ಹೀಗೆಂದಳು : ಪ್ರಿಯಳಾದ ಹೆಂಡತಿಯಾದ ಕೈಕೇಯಿಗೆ ನೀನು ಒಲಿದು ವರವನ್ನು ಕೊಟ್ಟಿರುವೆ. ಆಕೆಗೇ ರಾಜ್ಯವನ್ನೂ ಕೊಡುವವನಾಗು. ಆದರೆ ನನ್ನ ಮಗನನ್ನೇಕೆ (ಕಾಡಿಗೆ) ಓಡಿಸಬೇಕಾಗಿತ್ತು ? ನೀನೇ ಇದೆಲ್ಲವನ್ನೂ ಸ್ವತಃ ಮಾಡಿದವನಾಗಿ ಈಗ ಅಳುವದಾದರೂ ಏಕೆ ? (ಈ ರೀತಿಯ) ಕೌಸಲ್ಯೆಯ ಮಾತನ್ನು ಕೇಳಿ ಗಾಯಕ್ಕೆ ಬೆಂಕಿತಗುಲಿದವನಂತೆ ಮತ್ತೂ ಶೋಕಪರವಶನಾಗಿ ಕೌಸಲ್ಯೆಯನ್ನು ಕುರಿತು ಹೀಗೆಂದನು :

**ದುಃಖೇನ ಮ್ರಿಯಮಾಣಂ ಮಾಂ ಕಿಂ ಪುನರ್ದುಃಖಯಸ್ಯಲಮ್ ।**
**ಇದಾನೀಮೇವ ಮೇ ಪ್ರಾಣಾ ಉತ್ಕ್ರಮಿಷ್ಯನ್ತಿ ನಿಶ್ಚಯಃ ॥ ೧೮ ॥**
**ಶಪ್ತೋಽಹಂ ಬಾಲ್ಯಭಾವೇನ ಕೇನಚಿನ್ಮುನಿನಾ ಪುರಾ ।**
**ಪುರಾಹಂ ಯೌವನೇ ದೃಪ್ತಶ್ಚಾಪಬಾಣಧರೋ ನಿಶಿ ।**
**ಅಚರಂ ಮೃಗಯಾಸಕ್ತೋ ನದ್ಯಾಸ್ತೀರೇ ಮಹಾವನೇ ॥ ೧೯ ॥**

೧೮-೧೯. ದುಃಖದಿಂದ ಈಗಾಗಲೆ ಸಾಯುತ್ತಿರುವ ನನ್ನನ್ನು ಮತ್ತೇಕೆ ದುಃಖಗೊಳಿಸುತ್ತೀಯೆ ? ಈಗಲೇ ನನ್ನ ಪ್ರಾಣಗಳು (ದೇಹವನ್ನು ಬಿಟ್ಟು) ಮೇಲಕ್ಕೇರುವದು ನಿಶ್ಚಯವು. ಹುಡುಗಾಟಿಕೆಯ ಕಾರಣದಿಂದ ನಾನು ಹಿಂದೆ ಯಾವನೋ ಒಬ್ಬ ಋಷಿಯಿಂದ ಶಪಿಸಲ್ಪಟ್ಟೆನು. (ಹೇಗೆಂದರೆ) ಹಿಂದೆ ನಾನು ಯುವಕನಾಗಿದ್ದಾಗ ಕೊಬ್ಬಿದವನಾಗಿ ಅರ್ಧರಾತ್ರಿಯಲ್ಲಿ ಧನುರ್ಬಾಣಗಳನ್ನು ಹಿಡಿದು ಬೇಟೆಯಲ್ಲಿ ಆಸಕ್ತನಾಗಿ ನದೀತೀರದಲ್ಲಿರುವ ದೊಡ್ಡ ಕಾಡಿನಲ್ಲಿ ಸಂಚರಿಸುತ್ತಿದ್ದೆನು.

**ತತ್ರಾರ್ಧರಾತ್ರಸಮಯೇ ಮುನಿಃ ಕಶ್ಚಿತ್ ತೃಷಾರ್ದಿತಃ ।**
**ಪಿಪಾಸಾರ್ದಿತಯೋಃ ಪಿತ್ರೋಃ ಜಲಮಾನೇತುಮುದ್ಯತಃ ॥ ೨೦ ॥**

**ಅಪೂರಯನ್ ಜಲೇ ಕುಂಭಂ ತದಾ ಶಬ್ದೋಽಭವನ್ಮಹಾನ್ ।**
**ಗಜಃ ಪಿಬತಿ ಪಾನೀಯಮಿತಿ ಮತ್ವಾ ಮಹಾನಿಶಿ ।**
**ಬಾಣಂ ಧನುಷಿ ಸಂಧಾಯ ಶಬ್ದವೇಧಿನಮಕ್ಷಿಪಮ್ ॥ ೨೧ ॥**

೨೦-೨೧. ಅಲ್ಲಿ ಅರ್ಧರಾತ್ರಿಯ ಹೊತ್ತಿನಲ್ಲಿ ಹಸಿದವನಾಗಿದ್ದ ಒಬ್ಬ ಋಷಿಯು ಬಾಯಾರಿದ್ದ ತನ್ನ ತಂದೆತಾಯಿಗಳಿಗಾಗಿ ನೀರನ್ನು ಒಯ್ಯಲು ಉದ್ಯುಕ್ತನಾಗಿ ನೀರಿನಲ್ಲಿ ಪಾತ್ರೆಯನ್ನು ಅದ್ದಿದನು. ಆಗ ಸ್ಪಷ್ಟವಾದ ಧ್ವನಿಯಾಯಿತು. ನಾನು ಈ ಅರ್ಧರಾತ್ರಿಯಲ್ಲಿ ಆನೆಯು ನೀರುಕುಡಿಯುತ್ತಿರಬೇಕೆಂದು ಭಾವಿಸಿ ಶಬ್ದವೇಧಿ ಎಂಬ ಬಾಣವೊಂದನ್ನು ಬಿಲ್ಲಿನಲ್ಲಿ ಹೂಡಿ ಎಸೆದೆನು.

**ಹಾ ಹತೋಽಸ್ಮೀತಿ ತತ್ರಾಭೂತ್ ಶಬ್ದೋ ಮಾನುಷಸೂಚಕಃ ।**
**ಕಸ್ಯಾಪಿ ನ ಕೃತೋ ದೋಷೋ ಮಯಾ ಕೇನ ಹತೋ ವಿಧೇ ॥ ೨೨ ॥**
**ಪ್ರತೀಕ್ಷತೇ ಮಾಂ ಮಾತಾ ಚ ಪಿತಾ ಚ ಜಲಕಾಂಕ್ಷಯಾ ।**
**ತಚ್ಛ್ರುತ್ವಾ ಭಯಸಂತ್ರಸ್ತಸ್ತತೋಽಹಂ ಪೌರುಷಂ ವಚಃ ॥ ೨೩ ॥**
**ಶನೈರ್ಗತ್ವಾಽಥ ತತ್ಪಾರ್ಶ್ವಂ ಸ್ವಾಮಿನ್ ದಶರಥೋಽಸ್ಮ್ಯಹಮ್ ।**
**ಅಜಾನತಾ ಮಯಾ ವಿದ್ಧಸ್ತ್ರಾತುಮರ್ಹಸಿ ಮಾಂ ಮುನೇ ॥ ೨೪ ॥**
**ಇತ್ಯುಕ್ತ್ವಾ ಪಾದಯೋಸ್ತಸ್ಯ ಪತಿತೋ ಗದ್ಗದಾಕ್ಷರಃ ॥**

೨೨-೨೪. 'ಅಯ್ಯೋ, ಸತ್ತೆನು' ಎಂಬಿದಾಗಿ ಮನುಷ್ಯನೆಂದು ಸೂಚಿಸುವ ಶಬ್ದವು ಕೇಳಬಂದಿತು. 'ನಾನು ಯಾರಿಗೂ ಅಪರಾಧವನ್ನು ಮಾಡಿಲ್ಲ ; ವಿಧಿಯೆ, ನನ್ನನ್ನು ಯಾರು ಹೊಡೆದರು ? ನೀರಿಗಾಗಿ ಬಾಯಿಬಿಡುತ್ತಾ ನನ್ನ ತಂದೆತಾಯಿಗಳು ನನ್ನನ್ನು ನಿರೀಕ್ಷಿಸುತ್ತಿರುವರು' - ಎಂಬ ಮಾತು ಕೇಳಬಂದಿತು. ಆ ಮನುಷ್ಯವಾಕ್ಕನ್ನು ಕೇಳಿ ಹೆದರಿದ ನಾನು ಮೆಲ್ಲ ಮೆಲ್ಲನೆ ಅವನ ಸಮೀಪಕ್ಕೆ ಹೋಗಿ 'ಸ್ವಾಮಿ, ನಾನು ದಶರಥನು. ಅರಿಯದೆ ನಿಮ್ಮ ಮೇಲೆ ಬಾಣಪ್ರಯೋಗಮಾಡಿಬಿಟ್ಟೆನು. ಮುನಿಯೆ, ನನ್ನನ್ನು ಕಾಪಾಡು' ಎಂದು ತೊದಲುನುಡಿಯಿಂದ ಹೇಳುತ್ತಾ ಅವನ ಪಾದಗಳಿಗೆ ಬಿದ್ದೆನು.

**ತದಾ ಮಾಮಾಹ ಸ ಮುನಿರ್ಮಾ ಭೈಷೀರ್ನೃಪಸತ್ತಮ ।**
**ಬ್ರಹ್ಮಹತ್ಯಾ ಸ್ಪೃಶೇನ್ನ ತ್ವಾಂ ವೈಶ್ಯೋಽಹಂ ತಪಸಿ ಸ್ಥಿತಃ ॥ ೨೫ ॥**
**ಪಿತರೌ ಮಾಂ ಪ್ರತೀಕ್ಷೇತೇ ಕ್ಷುತ್‌ತೃಡ್ಭ್ಯಾಂ ಪರಿಪೀಡಿತೌ ।**
**ತಯೋಸ್ತ್ವಮುದಕಂ ದೇಹಿ ಶೀಘ್ರಮೇವಾವಿಚಾರಯನ್ ॥ ೨೬ ॥**
**ನ ಚೇತ್ ತ್ವಾಂ ಭಸ್ಮಸಾತ್ ಕುರ್ಯಾತ್ ಪಿತಾ ಮೇ ಯದಿ ಕುಪ್ಯತಿ ।**
**ಜಲಂ ದತ್ವಾ ತು ತೌ ನತ್ವಾ ಕೃತಂ ಸರ್ವಂ ನಿವೇದಯ ॥ ೨೭ ॥**

**ಶಲ್ಯಮುದ್ಧರ ಮೇ ದೇಹಾತ್ ಪ್ರಾಣಾಂಸ್ತ್ಯಕ್ಷ್ಯಾಮಿ ಪೀಡಿತಃ ।**
**ಇತ್ಯುಕ್ತೋ ಮುನಿನಾ ಶೀಘ್ರಂ ಬಾಣಮುತ್ಪಾಟ್ಯ ದೇಹತಃ ।**
**ಸಜಲಂ ಕಲಶಂ ಧೃತ್ವಾ ಗತೋಽಹಂ ಯತ್ರ ದಂಪತೀ ॥ ೨೮ ॥**

೨೫-೨೮. ಆಗ ಆ ಮುನಿಯು 'ಎಲೈ ರಾಜನೆ, ಹೆದರಬೇಡ ; ನಿನ್ನನ್ನು ಬ್ರಹ್ಮಹತ್ಯಾದೋಷವು ಮುಟ್ಟಲಾರದು. ಏಕೆಂದರೆ ನಾನೊಬ್ಬ ತಪಸ್ವಿಯಾದ ವೈಶ್ಯನು. ಹಸಿವುಬಾಯಾರಿಕೆಗಳಿಂದ ಪೀಡಿತರಾದ ನನ್ನ ತಂದೆತಾಯಿಗಳು ನಿರೀಕ್ಷಿಸುತ್ತಿರುವರು. ನೀನು ಮತ್ತೇನೂ ಯೋಚಿಸದೆ ಕೂಡಲೆ ಅವರಿಗೆ ನೀರನ್ನು ಕೊಡುವವನಾಗು. ಹಾಗಿಲ್ಲದಿದ್ದರೆ ನನ್ನ ತಂದೆಯು ಕೋಪಗೊಂಡರೆ ನಿನ್ನನ್ನು ಬೂದಿಮಾಡಿಬಿಡುವನು. (ಆದ್ದರಿಂದ) ಮೊದಲು ನೀರನ್ನು ಕೊಟ್ಟು ಅನಂತರ ನೀನು ಮಾಡಿದ್ದೆಲ್ಲವನ್ನೂ ವಿಜ್ಞಾಪಿಸಿಕೊ. ಈಗ ನನ್ನ ಶರೀರದಿಂದ ಬಾಣವನ್ನು ಕಿತ್ತು ಹೊರತೆಗೆಯುವವನಾಗು. ನಾನು ಬಾಣದಿಂದ ಪೀಡಿತನಾಗಿದ್ದು ಪ್ರಾಣಗಳನ್ನು ಬಿಡುವೆನು' - ಎಂದನು. ಹೀಗೆ ನಾನು ಹೇಳಲ್ಪಟ್ಟವನಾಗಿ ಅವನ ದೇಹದಿಂದ ಬೇಗನೆ ಬಾಣವನ್ನು ಕಿತ್ತೊಗೆದೆನು. ಅನಂತರ ನೀರುತುಂಬಿದ ಪಾತ್ರೆಯನ್ನು ತೆಗೆದುಕೊಂಡು ಆ ದಂಪತಿಗಳಿದ್ದಲ್ಲಿಗೆ ಹೋದೆನು.

**ಅತಿವೃದ್ಧಾವಂಧದೃಶೌ ಕ್ಷುತ್ಪಿಪಾಸಾರ್ದಿತೌ ನಿಶಿ ।**
**ನಾಯಾತಿ ಸಲಿಲಂ ಗೃಹ್ಯ ಪುತ್ರಃ ಕಿಂ ವಾತ್ರ ಕಾರಣಮ್ ॥ ೨೯ ॥**
**ಅನನ್ಯಗತಿಕೌ ವೃದ್ಧೌ ಶೋಚ್ಯೌ ತೃಟ್ಪರಿಪೀಡಿತೌ ।**
**ಆವಾಮುಪೇಕ್ಷತೇ ಕಿಂ ವಾ ಭಕ್ತಿಮಾನಾವಯೋಃ ಸುತಃ ॥ ೩೦ ॥**
**ಇತಿ ಚಿಂತಾವ್ಯಾಕುಲೌ ತೌ ಮತ್ಪಾದನ್ಯಾಸಜಂ ಧ್ವನಿಮ್ ।**
**ಶ್ರುತ್ವಾ ಪ್ರಾಹ ಪಿತಾ ಪುತ್ರ ಕಿಂ ವಿಲಂಬಸ್ತ್ವಯಾ ಕೃತಃ ॥ ೩೧ ॥**
**ದೇಹ್ಯಾವಯೋಃ ಸುಪಾನೀಯಂ ಪಿಬ ತ್ವಮಪಿ ಪುತ್ರಕ ।**
**ಇತ್ಯೇವಂ ಲಪತೋರ್ಭೀತ್ಯಾ ಸಕಾಶಮಗಮಂ ಶನೈಃ ॥ ೩೨ ॥**

೨೯-೩೨. ತೀರ ಮುದುಕರೂ ಕುರುಡರೂ ಹಸಿವುಬಾಯಾರಿಕೆಗಳಿಂದ ಬಳಲಿದವರೂ ಆದ ಅವರು ರಾತ್ರಿಯಲ್ಲಿ 'ಮಗನೇಕೆ ನೀರು ತೆಗೆದುಕೊಂಡು ಬರಲಿಲ್ಲ? ಕಾರಣವೇನಿರಬಹುದು ? ಬೇರೆಗತಿಯಿಲ್ಲದ ಮುದುಕರಾದ, ಹಸಿವಿನಿಂದ ಬಳಲಿರುವ ದಯನೀಯರಾದ ನಮ್ಮನ್ನು ಅವನು ತಿರಸ್ಕರಿಸಿದನೆ ? ಹಾಗಿರಲಾರದು. ನಮ್ಮ ಮಗನು ನಮ್ಮಲ್ಲಿ ತುಂಬ ಭಕ್ತಿಯುಳ್ಳವನು' ಹೀಗೆಂದು ಚಿಂತೆಯಿಂದ ವ್ಯಾಕುಲರಾಗಿದ್ದ ಅವರು ನನ್ನ ಹೆಜ್ಜೆಯ ಸಪ್ಪಳದ ಧ್ವನಿಯನ್ನು ಕೇಳಿ ತಂದೆಯು 'ಮಗನೆ, ಏಕೆ ತಡಮಾಡಿದೆಯಪ್ಪ, ನಮ್ಮಿಬ್ಬರಿಗೂ ಒಳ್ಳೆಯ ನೀರನ್ನು ಕುಡಿಯಲು ಕೊಡು. ನೀನೂ

ಕುಡಿಯುವವನಾಗು'- ಹೀಗೆಂದು ಮಾತನಾಡಿಕೊಳ್ಳುತ್ತಿದ್ದ ಅವರ ಬಳಿಗೆ ಮೆಲ್ಲನೆ ಹೋದೆನು.

**ಪಾದಯೋಃ ಪ್ರಣಿಪತ್ಯಾಹಮಬ್ರವಂ ವಿನಯಾನ್ವಿತಃ ।**
**ನಾಹಂ ಪುತ್ರಸ್ತ್ವಯೋಧ್ಯಾಯಾ ರಾಜಾ ದಶರಥೋಽಸ್ಮ್ಯಹಮ್ ॥ ೩೩ ॥**
**ಪಾಪೋಽಹಂ ಮೃಗಯಾಸಕ್ತೋ ರಾತ್ರೌ ಮೃಗವಿಹಿಂಸಕಃ ।**
**ಜಲಾವತಾರಾದ್ ದೂರೇಽಹಂ ಸ್ಥಿತ್ವಾ ಜಲಗತಂ ಧ್ವನಿಮ್ ॥ ೩೪ ॥**
**ಶ್ರುತ್ವಾಹಂ ಶಬ್ದವೇಧಿತ್ವಾದೇಕಂ ಬಾಣಮಥಾತ್ಯಜಮ್ ।**
**ಹತೋಽಸ್ಮೀತಿ ಧ್ವನಿಂ ಶ್ರುತ್ವಾ ಭಯಾತ್ತತ್ರಾಹಮಾಗತಃ ॥ ೩೫ ॥**
**ಜಟಾಂ ವಿಕೀರ್ಯ ಪತಿತಂ ದೃಷ್ಟ್ವಾಹಂ ಮುನಿದಾರಕಮ್ ।**
**ಭೀತೋ ಗೃಹೀತ್ವಾ ತತ್ಪಾದೌ ರಕ್ಷ ರಕ್ಷೇತಿ ಚಾಬ್ರವಮ್ ॥ ೩೬ ॥**

೩೩-೩೬. ವಿನಯದಿಂದ ಕೂಡಿದವನಾಗಿ ಅವರ ಪಾದಗಳಿಗೆ ನಮಸ್ಕರಿಸಿ ಹೀಗೆಂದೆನು ; 'ಸ್ವಾಮಿ, ನಾನು ನಿಮ್ಮ ಮಗನಲ್ಲ ; ಆಯೋಧ್ಯೆಯ ರಾಜನಾದ ದಶರಥನು ; ಪಾಪಿಯಾದ ನಾನು ಬೇಟೆಯಲ್ಲಿ ಆಸಕ್ತನಾದವನಾಗಿ ರಾತ್ರಿಯಲ್ಲಿ ಮೃಗಗಳನ್ನು ಕೊಲ್ಲುವವನಾಗಿದ್ದೇನೆ. ದೂರದಲ್ಲಿಯೇ ನಿಂತ ನಾನು ನೀರಿಗೆ ಇಳಿಯುವದರಿಂದ ನೀರಿನಲ್ಲಿ ಉಂಟಾದ ಶಬ್ದವನ್ನು ಕೇಳಿ ಧ್ವನಿಯನ್ನು ಕುರಿತು ಹೊಡೆಯುವ ಕೌಶಲವುಳ್ಳವನಾದ್ದರಿಂದ ಒಂದು ಬಾಣವನ್ನು ಬಿಟ್ಟೆನು. 'ಅಯ್ಯೋ, ಸತ್ತೆನು' ಎಂಬ ಕೂಗನ್ನು ಕೇಳಿ ಭಯದಿಂದ ಅಲ್ಲಿಗೆ ಬಂದೆನು. ಜಟೆಯನ್ನು ಬಿಚ್ಚಿ ಹರಡಿಕೊಂಡು ಬಿದ್ದಿದ್ದ ಋಷಿಕುಮಾರನನ್ನು ನೋಡಿ ಹೆದರಿದವನಾಗಿ ಅವನ ಕಾಲುಗಳನ್ನು ಹಿಡಿದುಕೊಂಡು ಕಾಪಾಡು, ಕಾಪಾಡು, ಎಂದು ಕೇಳಿಕೊಂಡೆನು.

**ಮಾ ಭೈಷೀರಿತಿ ಮಾಂ ಪ್ರಾಹ ಬ್ರಹ್ಮಹತ್ಯಾಭಯಂ ನ ತೇ ।**
**ಮತ್ಪಿತ್ರೋಃ ಸಲಿಲಂ ದತ್ವಾ ನತ್ವಾ ಪ್ರಾರ್ಥಯ ಜೀವಿತಮ್ ॥ ೩೭ ॥**
**ಇತ್ಯುಕ್ತೋ ಮುನಿನಾ ತೇನ ಹ್ಯಾಗತೋ ಮುನಿಹಿಂಸಕಃ ।**
**ರಕ್ಷೇತಾಂ ಮಾಂ ದಯಾಯುಕ್ತೌ ಯುವಾಂ ಹಿ ಶರಣಾಗತಮ್ ॥ ೩೮ ॥**
**ಇತಿ ಶ್ರುತ್ವಾ ತು ದುಃಖಾರ್ತೌ ವಿಲಪ್ಯ ಬಹು ಶೋಚ್ಯ ತಮ್ ।**
**ಪತಿತೌ ನೌ ಸುತೋ ಯತ್ರ ನಯ ತತ್ರಾವಿಲಂಬಯನ್ ॥ ೩೯ ॥**
**ತತೋ ನೀತೌ ಸುತೋ ಯತ್ರ ಮಯಾ ತೌ ವೃದ್ಧದಂಪತೀ ।**
**ಸ್ಪೃಷ್ಟ್ವಾ ಸುತಂ ತೌ ಹಸ್ತಾಭ್ಯಾಂ ಬಹುಶೋಽಥ ವಿಲೇಪತುಃ ॥ ೪೦ ॥**

೩೭-೪೦. ''ಹೆದರಬೇಡ, ನಿನಗೆ ಬ್ರಹ್ಮಹತ್ಯೆಯ ಪಾಪಭಯವೇನೂ ಇಲ್ಲ; ನನ್ನ ತಂದೆತಾಯಿಗಳಿಗೆ ನೀರನ್ನು ಕೊಟ್ಟು ನಮಸ್ಕರಿಸಿ ಬದುಕಲು ಪ್ರಾರ್ಥಿಸಿಕೊ''.

ಹೀಗೆಂದು ಹೇಳಲ್ಪಟ್ಟ ನಾನು 'ಮುನಿಹಿಂಸಕನಾದ ನನ್ನನ್ನು ದಯಾಪೂರ್ಣರಾದ ನೀವುಗಳು ಕಾಪಾಡಿರಿ. ಶರಣಾಗತನಾಗಿರುವೆನು' - ಎಂದು ನಾನು ಹೇಳಿದ್ದನ್ನು ಕೇಳಿ ದುಃಖದಿಂದ ಬಳಲಿದವರಾದ ಅವರು ಮಗನಿಗಾಗಿ ಬಹಳ ಅತ್ತು ಚಿಂತಿಸಿದವರಾಗಿ 'ಅಯ್ಯಾ, ತಡಮಾಡದೆ ನಮ್ಮ ಮಗನಿರುವ ಬಳಿಗೆ ಕರೆದೊಯ್ಯುವವನಾಗು' - ಎಂದರು. ಅನಂತರ ಮಗನಿರುವ ಬಳಿಗೆ ನನ್ನಿಂದ ಕರೆದೊಯ್ಯಲ್ಪಟ್ಟ ಆ ವೃದ್ಧದಂಪತಿಗಳು ಮಗನನ್ನು ಕೈಗಳಿಂದ ತಡವರಿಸಿ ಬಹಳವಾಗಿ ಶೋಕಪಡುವವರಾದರು.

**ಹಾ ಹೇತಿ ಕ್ರಂದಮಾನೌ ತೌ ಪುತ್ರ ಪುತ್ರೇತ್ಯವೋಚತಾಮ್ ।**
**ಜಲಂ ದೇಹೀತಿ ಪುತ್ರೇತಿ ಕಿಮರ್ಥಂ ನ ದದಾಸ್ಯಲಮ್ ॥ ೪೧ ॥**
**ತತೋ ಮಾಮೂಚತುಃ ಶೀಘ್ರಂ ಚಿತಿಂ ರಚಯ ಭೂಪತೇ ।**
**ಮಯಾ ತದೈವ ರಚಿತಾ ಚಿತಿಸ್ತತ್ರ ನಿವೇಶಿತಾಃ ॥ ೪೨ ॥**
**ತ್ರಯಸ್ತತ್ರಾಗ್ನಿರುತ್ಸೃಷ್ಟೋ ದಗ್ಧಾಸ್ತೇ ತ್ರಿದಿವಂ ಯಯುಃ ।**
**ತತ್ರ ವೃದ್ಧಪಿತಾ ಪ್ರಾಹ ತ್ವಮಪ್ಯೇವಂ ಭವಿಷ್ಯಸಿ ॥ ೪೩ ॥**
**ಪುತ್ರಶೋಕೇನ ಮರಣಂ ಪ್ರಾಪ್ಸ್ಯಸೇ ವಚನಾನ್ಮಮ ।**
**ಸ ಇದಾನೀಂ ಮಮ ಪ್ರಾಪ್ತಃ ಶಾಪಕಾಲೋಽನಿವಾರಿತಃ ॥ ೪೪ ॥**

೪೧-೪೪. ಅಯ್ಯೋ, ಎಂದು ಅಳುತ್ತಿರುವ ಅವರು ಮಗನೆ, ಎಂದು ಕೂಗಿದರು. ಮತ್ತು 'ಅಪ್ಪಾ, ಮಗು, ನೀರನ್ನು ಕೊಡು-ಎಂದು ಕೇಳಿದರೆ ಏಕೆ ಕೊಡುವದಿಲ್ಲ?' ಎಂದು ಹೇಳುತ್ತಾ ನನ್ನನ್ನು ಕುರಿತು 'ಎಲೈ ರಾಜನೆ, ಬೇಗನೆ ಚಿತಿಯನ್ನು ನಿರ್ಮಾಣಮಾಡು' ಎಂದರು. ಆಗ ಕೂಡಲೆ ನಾನು ಚಿತೆಯನ್ನು ಸಿದ್ಧಮಾಡಿದೆನು. ಮೂವರೂ ಅದರ ಮೇಲೆ ಕುಳಿತರು. ಆಗ ಬೆಂಕಿಯನ್ನು ಹಾಕಲಾಗಿ ಸುಡಲ್ಪಟ್ಟವರಾಗಿ ಸ್ವರ್ಗಲೋಕವನ್ನು ಸೇರಿದರು. ಅವರಲ್ಲಿ ಮುದುಕನಾದ ಆ ತಂದೆಯು 'ಎಲೈ ನೀನೂ ಹೀಗೆಯೇ ಆಗುವೆ, ನನ್ನ ಮಾತಿನಂತೆ ಪುತ್ರಶೋಕದಿಂದ ಮರಣವನ್ನು ಹೊಂದುವೆ' ಎಂದನು. ಆ ಶಾಪಕಾಲವು ಈಗ ನನಗೆ ಉಂಟಾಗಿದೆ. ಇದು ಮೀರಲಸಾಧ್ಯವಾದುದು - (ಎಂದು ಕೊರಗುತ್ತಿದ್ದನು.)

**ಇತ್ಯುಕ್ತ್ವಾ ವಿಲಲಾಪಾಥ ರಾಜಾ ಶೋಕಸಮಾಕುಲಃ ।**
**ಹಾ ರಾಮ ಪುತ್ರ ಹಾ ಸೀತೇ ಹಾ ಲಕ್ಷ್ಮಣ ಗುಣಾಕರ ॥ ೪೫ ॥**
**ತ್ವದ್ವಿಯೋಗಾದಹಂ ಪ್ರಾಪ್ತೋ ಮೃತ್ಯುಂ ಕೈಕಯಿಸಂಭವಮ್ ।**
**ವದನ್ನೇವಂ ದಶರಥಃ ಪ್ರಾಣಾಂಸ್ತ್ಯಕ್ತ್ವಾ ದಿವಂಗತಃ ॥ ೪೬ ॥**
**ಕೌಸಲ್ಯಾ ಚ ಸುಮಿತ್ರಾ ಚ ತಥಾನ್ಯಾ ರಾಜಯೋಷಿತಃ ।**
**ಚುಕ್ರುಶುಶ್ಚ ವಿಲೇಪುಶ್ಚ ಉರಸ್ತಾಡನಪೂರ್ವಕಮ್ ॥ ೪೭ ॥**

೪೫-೪೭. ಹೀಗೆ ಹೇಳಿದವನಾಗಿ ಶೋಕದಿಂದ ಮುಳುಗಿದ ರಾಜನು ಅಳುತ್ತಾ 'ಎಲೈ ರಾಮನೆ, ಸೀತೆಯೆ, ಗುಣವಂತನಾದ ಲಕ್ಷ್ಮಣನೆ ? ನಾನು ಕೈಕೇಯಿಯ ಮೂಲಕ ಸಂಭವಿಸಿದ ನಿಮ್ಮಗಳ ವಿಯೋಗದಿಂದ ಮರಣವನ್ನು ಹೊಂದುತ್ತಿರುವೆನು' - ಹೀಗೆಂದು ಹೇಳುತ್ತಲೇ ದಶರಥನು ಪ್ರಾಣತ್ಯಾಗಮಾಡಿ ಸ್ವರ್ಗವನ್ನು ಸೇರಿದನು. ಕೌಸಲ್ಯೆ, ಸುಮಿತ್ರೆ ಹಾಗೂ ರಾಜಪತ್ನಿಯರು ಎದೆಯನ್ನು ಬಡಿದುಕೊಂಡು ಕಿರುಚಿಕೊಂಡರು ;ಮತ್ತು ಅತ್ತರು.

**ವಸಿಷ್ಠಃ ಪ್ರಯಯೌ ತತ್ರ ಪ್ರಾತರ್ಮಂತ್ರಿಭಿರಾವೃತಃ ।**
**ತೈಲದ್ರೋಣ್ಯಾಂ ದಶರಥಂ ಕ್ಷಿಪ್ತ್ವಾ ದೂತಾನಥಾಬ್ರವೀತ್ ॥ ೪೮॥**
**ಗಚ್ಛತ ತ್ವರಿತಂ ಸಾಶ್ವಾ ಯುಧಾಜಿನ್ನಗರಂ ಪ್ರತಿ ।**
**ತತ್ರಾಸ್ತೇ ಭರತಃ ಶ್ರೀಮಾನ್ ಶತ್ರುಘ್ನಸಹಿತಃ ಪ್ರಭುಃ ॥ ೪೯॥**

**ಉಚ್ಯತಾಂ ಭರತಃ ಶೀಘ್ರಮಾಗಚ್ಛೇತಿ ಮಮಾಜ್ಞಯಾ ।**
**ಅಯೋಧ್ಯಾಂ ಪ್ರತಿ ರಾಜಾನಂ ಕೈಕೇಯಿಂ ಚಾಪಿ ಪಶ್ಯತು ॥ ೫೦॥**

೪೮-೫೦. ಪ್ರಾತಃಕಾಲದಲ್ಲಿ ಮಂತ್ರಿಗಳೊಡಗೂಡಿ ವಸಿಷ್ಠನು ಅಲ್ಲಿಗೆ ಬಂದನು. ದಶರಥನ ಶರೀರವನ್ನು ಎಣ್ಣೆಯ ದೋಣಿಯಲ್ಲಿಟ್ಟು ದೂತರನ್ನು ಕುರಿತು ಹೀಗೆಂದನು : ಯುಧಾಜಿತ್ತಿನ ರಾಜಧಾನಿಯನ್ನು ಕುರಿತು ಕುದುರೆಗಳನ್ನೇರಿದ ನೀವು ಜಾಗ್ರತೆಯಾಗಿ ನಡೆಯಿರಿ. ಶ್ರೀಮಂತನಾದ, ಶತ್ರುಘ್ನನೊಡಗೂಡಿದ ಪ್ರಭುವಾದ ಭರತನು ಅಲ್ಲಿರುತ್ತಾನೆ. ನನ್ನ ಅಪ್ಪಣೆಯಂತೆ ಭರತನಿಗೆ ಅಯೋಧ್ಯೆಗೆ ಬೇಗನೆ ಬರುವಂತೆ ಹೇಳಿರಿ. ಬಂದು ರಾಜನನ್ನೂ ಕೈಕೇಯಿಯನ್ನೂ ಕಾಣುವವನಾಗಲಿ.

**ಇತ್ಯುಕ್ತಾಸ್ತ್ವರಿತಂ ದೂತಾ ಗತ್ವಾ ಭರತಮಾತುಲಮ್ ।**
**ಯುಧಾಜಿತಂ ಪ್ರಣಮ್ಯೋಚುರ್ಭರತಂ ಸಾನುಜಂ ಪ್ರತಿ ॥ ೫೧ ॥**
**ವಸಿಷ್ಠಸ್ತ್ವಬ್ರವೀದ್ ರಾಜನ್ ಭರತಃ ಸಾನುಜಃ ಪ್ರಭುಃ ।**
**ಶೀಘ್ರಮಾಗಚ್ಛತು ಪುರೀಮಯೋಧ್ಯಾಮವಿಚಾರಯನ್ ॥ ೫೨॥**
**ಇತ್ಯಾಜ್ಞಪ್ತೋಽಥ ಭರತಃ ತ್ವರಿತಂ ಭಯವಿಹ್ವಲಃ ।**
**ಅಯಯೌ ಗುರುಣಾದಿಷ್ಟಃ ಸಹ ದೂತೈಸ್ತು ಸಾನುಜಃ ॥ ೫೩॥**

೫೧-೫೩. ಈ ರೀತಿ ಹೇಳಲ್ಪಟ್ಟ ದೂತರು ಜಾಗ್ರತೆಯಾಗಿ ಭರತನ ಸೋದರ ಮಾವನಾದ ಯುಧಾಜಿತ್ತಿನ ಬಳಿಗೆ ಬಂದು ಸೋದರಸಹಿತನಾದ ಭರತನನ್ನು (ಕಂಡು) ನಮಸ್ಕರಿಸಿ ಹೀಗೆಂದರು : ''ಎಲೈ,ರಾಜನೆ, ತಮ್ಮನೊಡಗೂಡಿದ ಪ್ರಭುವಾದ ಭರತನು ಶೀಘ್ರವಾಗಿ ಮತ್ತೇನೂ ವಿಚಾರಮಾಡದೆ ಅಯೋಧ್ಯಾನಗರಿಗೆ ಬರಬೇಕು - ಎಂದು ವಸಿಷ್ಠನು ಹೇಳಿರುತ್ತಾನೆ.' ಹೀಗೆ ಗುರುವಿನಿಂದ ಆಜ್ಞೆಮಾಡಲ್ಪಟ್ಟ ಭರತನು

ಹೆದರಿದವನಾಗಿ ಜಾಗ್ರತೆಯಾಗಿ ದೂತರೊಡನೆಯೂ ತಮ್ಮನೊಡನೆಯೂ ಕೂಡಿದವನಾಗಿ ಬಂದನು.

**ರಾಜ್ಞೋ ವಾ ರಾಘವಸ್ಯಾಪಿ ದುಃಖಂ ಕಿಂಚಿದುಪಸ್ಥಿತಮ್ ।**
**ಇತಿ ಚಿಂತಾಪರೋ ಮಾರ್ಗೇ ಚಿಂತಯನ್ನಗರಂ ಯಯೌ ॥ ೫೪ ॥**
**ನಗರಂ ಭ್ರಷ್ಟಲಕ್ಷ್ಮೀಕಂ ಜನಸಂಬಾಧವರ್ಜಿತಮ್ ।**
**ಉತ್ಸವೈಶ್ಚ ಪರಿತ್ಯಕ್ತಂ ದೃಷ್ಟ್ವಾ ಚಿಂತಾಪರೋಽಭವತ್ ॥ ೫೫ ॥**
**ಪ್ರವಿಶ್ಯ ರಾಜಭವನಂ ರಾಜಲಕ್ಷ್ಮೀವಿವರ್ಜಿತಮ್ ।**
**ಅಪಶ್ಯತ್ ಕೈಕಯೀಂ ತತ್ರ ಏಕಾಮೇವಾಸನೇ ಸ್ಥಿತಾಮ್ ॥ ೫೬ ॥**
**ನನಾಮ ಶಿರಸಾ ಪಾದೌ ಮಾತುರ್ಭಕ್ತಿಸಮನ್ವಿತಃ ॥**

೫೪-೫೬. ದಾರಿಯಲ್ಲಿ 'ರಾಜನಿಗೋ ರಾಮನಿಗೋ ಏನೋ ಸಂಕಟವು ಒದಗಿರಬೇಕು' - ಎಂದು ಯೋಚಿಸುತ್ತಾ ಚಿಂತಾಕ್ರಾಂತನಾಗಿಯೇ ಊರಿಗೆ ಬಂದನು. ಪಟ್ಟಣವು ಕಾಂತಿಹೀನವಾಗಿಯೂ ಜನಜಂಗುಳಿಯಿಲ್ಲದ್ದೂ, ಉತ್ಸವಗಳಿಲ್ಲದ್ದೂ ಆಗಿರುವದನ್ನು ಕಂಡು ಯೋಚಿಸಲಾರಂಭಿಸಿದನು. ರಾಜಲಕ್ಷ್ಮಿಯಿಲ್ಲದ ರಾಜಭವನವನ್ನು ಪ್ರವೇಶಿಸಿ ಅಲ್ಲಿ ಆಸನದಲ್ಲಿ ಒಬ್ಬಳೇ ಕುಳಿತಿದ್ದ ಕೈಕೇಯಿಯನ್ನು ಕಂಡನು. ಭಕ್ತಿಯಿಂದ ಕೂಡಿದವನಾಗಿ ತಾಯಿಯ ಪಾದಗಳಿಗೆ ತಲೆಬಾಗಿ ನಮಸ್ಕರಿಸಿದನು.

**ಆಗತಂ ಭರತಂ ದೃಷ್ಟ್ವಾ ಕೈಕೇಯೀ ಪ್ರೇಮಸಂಭ್ರಮಾತ್ ।**
**ಉತ್ಥಾಯಾಲಿಂಗ್ಯ ರಭಸಾ ಸ್ವಾಂಕಮಾರೋಪ್ಯ ಸಂಸ್ಥಿತಾ ॥ ೫೭ ॥**
**ಮೂರ್ಧ್ನ್ಯವಘ್ರಾಯ ಪಪ್ರಚ್ಛ ಕುಶಲಂ ಸ್ವಕುಲಸ್ಯ ಸಾ ।**
**ಪಿತಾ ಮೇ ಕುಶಲೀ ಭ್ರಾತಾ ಮಾತಾ ಚ ಶುಭಲಕ್ಷಣಾ ॥ ೫೮ ॥**
**ದಿಷ್ಟ್ಯಾ ತ್ವಮದ್ಯ ಕುಶಲೀ ಮಯಾ ದೃಷ್ಟೋಽಸಿ ಪುತ್ರಕ ।**
**ಇತಿ ಪೃಷ್ಟಃ ಸ ಭರತೋ ಮಾತ್ರಾ ಚಿಂತಾಕುಲೇಂದ್ರಿಯಃ ॥ ೫೯ ॥**
**ದೂಯಮಾನೇನ ಮನಸಾ ಮಾತರಂ ಸಮಪೃಚ್ಛತ ।**

೫೭-೫೯. ಬಂದಂಥ ಭರತನನ್ನು ನೋಡಿ ಕೈಕೇಯಿಯು ಪ್ರೀತಿಸಂಭ್ರಮಗಳಿಂದ ವೇಗದಿಂದ ಮೇಲೆದ್ದು ಆಲಿಂಗಿಸಿಕೊಂಡು ತನ್ನ ತೊಡೆಯಮೇಲೆಯೇ ಕುಳ್ಳಿರಿಸಿಕೊಂಡಳು. ನೆತ್ತಿಯಲ್ಲಿ ಮೂಸಿನೋಡಿ ತನ್ನ (ಬಾಂಧವರ)ಕುಶಲವನ್ನು ಕೇಳಿದಳು. 'ಅಪ್ಪಾ ಮಗುವೆ, ನೀನು ಚೆನ್ನಾಗಿದ್ದೀಯಾ ? ನನ್ನ ಪುಣ್ಯದಿಂದ ನಿನ್ನನ್ನು ಈಗ ಕಂಡೆನು. ನನ್ನ ತಂದೆಯೂ, ಸೋದರನೂ ಶುಭಲಕ್ಷಣಳಾದ ತಾಯಿಯೂ ಕ್ಷೇಮವೆ ?' ಹೀಗೆಂದು ತಾಯಿಯಿಂದ ಕೇಳಲ್ಪಟ್ಟ ಆ ಭರತನು ಚಿಂತಾಕ್ರಾಂತನಾಗಿ ದುಗುಡದಿಂದ ಕೂಡಿದ ಮನಸ್ಸಿನಿಂದ ತಾಯಿಯನ್ನು ಕುರಿತು ಹೀಗೆಂದು ಕೇಳಿದನು.

**ಮಾತಃ ಪಿತಾ ಮೇ ಕುತ್ರಾಸ್ತೇ ಏಕಾ ತ್ವಮಿಹ ಸಂಸ್ಥಿತಾ ।**
**ತ್ವಯಾ ವಿನಾ ನ ಮೇ ತಾತಃ ಕದಾಚಿತ್ ರಹಸಿ ಸ್ಥಿತಃ ॥ ೬೦॥**
**ಇದಾನೀಂ ದೃಶ್ಯತೇ ನೈವ ಕುತ್ರ ತಿಷ್ಠತಿ ಮೇ ವದ ।**
**ಅದೃಷ್ಟ್ವಾ ಪಿತರಂ ಮೇಽದ್ಯ ಭಯಂ ದುಃಖಂ ಚ ಜಾಯತೇ ॥ ೬೧ ॥**

೬೦-೬೧. ತಾಯೆ, ನನ್ನ ತಂದೆಯು ಈಗ ಎಲ್ಲಿರುವನು ? ನೀನೊಬ್ಬಳೇ ಈಗ ಇಲ್ಲಿರುವೆಯಲ್ಲ ? ನನ್ನ ತಂದೆಯು ಯಾವಾಗಲೂ ನಿನ್ನ ಹೊರತು ತಾನೊಬ್ಬನೇ ಇದ್ದುದನ್ನು (ನಾನು ಕಂಡಿಲ್ಲ). ಈಗಲಾದರೊ, ಅವನು ಕಾಣಿಸುವದೇ ಇಲ್ಲ. ಅವನೆಲ್ಲಿರುವನು ? ನನಗೆ ಹೇಳು. ತಂದೆಯನ್ನು ಕಾಣದೆ ನನಗೆ ಭಯವೂ ದುಃಖವೂ ಉಂಟಾಗುತ್ತಿದೆ.

**ಅಥಾಹ ಕೈಕಯಿ ಪುತ್ರಂ ಕಿಂ ದುಃಖೇನ ತವಾನಘ ।**
**ಯಾ ಗತಿರ್ಧರ್ಮಶೀಲಾನಾಮಶ್ವಮೇಧಾದಿಯಾಜಿನಾಮ್ ॥ ೬೨ ॥**
**ತಾಂ ಗತಿಂ ಗತವಾನದ್ಯ ಪಿತಾ ತೇ ಪಿತೃವತ್ಸಲ ।**
**ತಚ್ಛ್ರುತ್ವಾ ನಿಪಪಾತೋರ್ವ್ಯಾಂ ಭರತಃ ಶೋಕವಿಹ್ವಲಃ ॥ ೬೩ ॥**
**ಹಾ ತಾತ ಕ್ವ ಗತೋಽಸಿ ತ್ವಂ ತ್ಯಕ್ತ್ವಾ ಮಾಂ ವೃಜಿನಾರ್ಣವೇ ।**
**ಅಸಮರ್ಪ್ಯೈವ ರಾಮಾಯ ರಾಜ್ಞೇ ಮಾಂ ಕ್ವ ಗತೋಽಸಿ ಭೋಃ ॥ ೬೪ ॥**
**ವಿಲಪಂತಂ ಪುತ್ರಮೇವಂ ಪತಿತಂ ಮುಕ್ತಮೂರ್ಧಜಮ್ ।**
**ಉತ್ಥಾಪ್ಯಾಮೃಜ್ಯ ನಯನೇ ಕೈಕೇಯೀ ಪುತ್ರಮಬ್ರವೀತ್ ॥ ೬೫ ॥**

೬೨-೬೫. ಅನಂತರ ಕೈಕೇಯಿಯು ಮಗನನ್ನು ಕುರಿತು "ಎಲೈ ಪಾಪರಹಿತನೆ, ಪಿತೃಭಕ್ತನೆ, ನಿನಗೆ ದುಃಖವಾದರೂ ಏಕೆ ? ಧರ್ಮಶೀಲರಾದ, ಅಶ್ವಮೇಧವೇ ಮುಂತಾದ ಯಜ್ಞಗಳನ್ನು ಮಾಡಿದವರಿಗೆ ದೊರಕುವ ಗತಿಯನ್ನೇ ನಿನ್ನ ತಂದೆಯು ಪಡೆದಿರುತ್ತಾನೆ - ಎಂದಳು. ಈ ಮಾತನ್ನು ಕೇಳಿ ಶೋಕದಿಂದ ದಿಕ್ಕುಗಾಣದ ಭರತನು ನೆಲದ ಮೇಲೆ ಬಿದ್ದವನಾಗಿ 'ಅಯ್ಯೋ. ತಂದೆಯೆ, ಪಾಪಸಮುದ್ರದಲ್ಲಿ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋದೆ ? ಪೂಜ್ಯನೆ, ನನ್ನನ್ನು ರಾಮನಿಗೆ ಒಪ್ಪಿಸದೆ ಎಲ್ಲಿಗೆ ಹೋಗಿರುವೆ ?'' ಹೀಗೆ ಅಳುತ್ತಿರುವ ತಲೆಕೆದರಿಕೊಂಡಿರುವ ಮಗನನ್ನು ಮೇಲಕ್ಕೆತ್ತಿ ಕಣ್ಣುಗಳನ್ನು ಒರೆಸಿ ಕೈಕೇಯಿಯು ಹೀಗೆಂದಳು :

**ಸಮಾಶ್ವಸಿಹಿ ಭದ್ರಂ ತೇ ಸರ್ವಂ ಸಂಪಾದಿತಂ ಮಯಾ ।**
**ತಾಮಾಹ ಭರತಸ್ತಾತೋ ಮ್ರಿಯಮಾಣಃ ಕಿಮಬ್ರವೀತ್ ॥ ೬೬ ॥**
**ತಮಾಹ ಕೈಕಯೀ ದೇವೀ ಭರತಂ ಭಯವರ್ಜಿತಾ ।**
**ಹಾ ರಾಮ ರಾಮ ಸೀತೇತಿ ಲಕ್ಷ್ಮಣೇತಿ ಪುನಃ ಪುನಃ ॥ ೬೭ ॥**

**ವಿಲಪನ್ನೇವ ಸುಚಿರಂ ದೇಹಂ ತ್ಯಕ್ತ್ವಾ ದಿವಂ ಯಯೌ ।**
**ತಾಮಾಹ ಭರತೋ ಹೇಽಮ್ಬ ರಾಮಃ ಸನ್ನಿಹಿತೋ ನ ಕಿಮ್ ॥ ೬೮ ॥**
**ತದಾನೀಂ ಲಕ್ಷ್ಮಣೋ ವಾಪಿ ಸೀತಾ ವಾ ಕುತ್ರ ತೇ ಗತಾಃ ।**

೬೬-೬೮. 'ನಿನಗೆ ಮಂಗಳವಾಗಲಿ ! ಸಮಾಧಾನದಿಂದಿರು. ನಾನು ಎಲ್ಲವನ್ನೂ ಸಂಪಾದಿಸಿಟ್ಟಿರುವೆನು' - ಹೀಗೆನ್ನಲು ಭರತನು ತಂದೆಯು ಸಾಯುವಾಗ ಏನೆಂದು ಹೇಳಿದನು? ಎಂದು ಕೇಳಿದನು. ಭಯವಿಲ್ಲದ ಕೈಕೇಯಿಯು ಭರತನನ್ನು ಕುರಿತು 'ಅಯ್ಯೊ, ರಾಮ, ರಾಮ, ಸೀತೆ, ಲಕ್ಷ್ಮಣ - ಹೀಗೆಂದು ಮತ್ತೆ ಮತ್ತೆ ಬಹಳ ಹೊತ್ತು ದುಃಖಿಸುತ್ತಾ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋದನು. ಆಗ ಭರತನು 'ತಾಯೆ, ರಾಮನು ಹತ್ತಿರವಿರಲಿಲ್ಲವೆ? ಆಗ ಲಕ್ಷ್ಮಣನಾಗಲಿ, ಸೀತೆಯಾಗಲಿ ಎಲ್ಲಿಗೆ ಹೋಗಿದ್ದರು? ಎಂದನು.

**ರಾಮಸ್ಯ ಯೌವರಾಜ್ಯಾರ್ಥಂ ಪಿತ್ರಾ ತೇ ಸಂಭ್ರಮಃ ಕೃತಃ ।**
**ತವ ರಾಜ್ಯಪ್ರದಾನಾಯ ತದಾಹಂ ವಿಘ್ನಮಾಚರಮ್ ॥ ೬೯ ॥**
**ರಾಜ್ಞಾ ದತ್ತಂ ಹಿ ಮೇ ಪೂರ್ವಂ ವರದೇನ ವರದ್ವಯಮ್ ।**
**ಯಾಚಿತಂ ತದಿದಾನೀಂ ಮೇ ತಯೋರೇಕೇನ ತೇಽಖಿಲಮ್ ॥ ೭೦ ॥**
**ರಾಜ್ಯಂ ರಾಮಸ್ಯ ಚೈಕೇನ ವನವಾಸೋ ಮುನಿವ್ರತಮ್ ।**
**ತತಃ ಸತ್ಯಪರೋ ರಾಜಾ ರಾಜ್ಯಂ ದತ್ವಾ ತವೈವ ಹಿ ॥ ೭೧ ॥**
**ರಾಮಂ ಸಂಪ್ರೇಷಯಾಮಾಸ ವನಮೇವ ಪಿತಾ ತವ।**

೬೯-೭೧. ಕೈಕೇಯಿಯು ಇಂತೆಂದಳು : 'ಶ್ರೀರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡುವದಕ್ಕಾಗಿ ನಿನ್ನ ತಂದೆಯು ಪ್ರಯತ್ನಮಾಡಿದನು. ಆಗ ನಾನು ನಿನಗೆ ರಾಜ್ಯವನ್ನು ಕೊಡಬೇಕೆಂಬ (ಕಾರಣದಿಂದ) ಅಡ್ಡಿಯುಂಟುಮಾಡಿದೆನು. ವರಪ್ರದನಾದ ರಾಜನು ಹಿಂದೆ ನನಗೆ ಎರಡು ವರಗಳನ್ನು ಕೊಟ್ಟಿದ್ದನು. ಈಗ ನಾನು ಅವೆರಡರಲ್ಲಿ ಒಂದರಿಂದ ನಿನಗೆ ಎಲ್ಲ ರಾಜ್ಯವೂ ಬರಬೇಕೆಂದೂ ರಾಮನು ಮುನಿವ್ರತನಾಗಿ ವನವಾಸಮಾಡುವಂತೆಯೂ ಬೇಡಿಕೊಂಡೆನು. ಸತ್ಯನಿಷ್ಠನಾದ ನಿನ್ನ ತಂದೆಯಾದ ರಾಜನು ನಿನಗೇ ರಾಜ್ಯವನ್ನು ಕೊಟ್ಟು ರಾಮನನ್ನು ಕಾಡಿಗೆ ಕಳುಹಿಸಿದನು.

**ಸೀತಾಪ್ಯನುಗತಾ ರಾಮಂ ಪಾತಿವ್ರತ್ಯಮುಪಾಶ್ರಿತಾ ।**
**ಸೌಭ್ರಾತ್ರಂ ದರ್ಶಯನ್ ರಾಮಮನುಯಾತೋಽಪಿ ಲಕ್ಷ್ಮಣಃ ॥ ೭೨ ॥**
**ವನಂ ಗತೇಷು ಸರ್ವೇಷು ರಾಜಾ ತಾನೇವ ಚಿಂತಯನ್ ।**
**ಪ್ರಲಪನ್ ರಾಮ ರಾಮೇತಿ ಮಮಾರ ನೃಪಸತ್ತಮಃ ॥ ೭೩ ॥**
**ಇತಿ ಮಾತುರ್ವಚಃ ಶ್ರುತ್ವಾ ವಜ್ರಾಹತ ಇವ ದ್ರುಮಃ ।**

**ಪಪಾತ ಭೂಮೌ ನಿಃಸಂಜ್ಞಸ್ತಂ ದೃಷ್ಟ್ವಾ ದುಃಖಿತಾ ತದಾ ॥ ೭೪ ॥**
**ಕೈಕೇಯೀ ಪುನರಪ್ಯಾಹ ವತ್ಸ ಶೋಕೇನ ಕಿಂ ತವ ।**

೭೨-೭೪. 'ಪಾತಿವ್ರತ್ಯಧರ್ಮವನ್ನಾಶ್ರಯಿಸಿ ಸೀತೆಯು ರಾಮನನ್ನು ಅನುಸರಿಸಿದಳು. ಭ್ರಾತೃಸ್ನೇಹಕ್ಕೆ ತಕ್ಕಂತೆ ಲಕ್ಷ್ಮಣನೂ ರಾಮನನ್ನು ಹಿಂಬಾಲಿಸಿದನು. ಅವರೆಲ್ಲರೂ ಕಾಡಿಗೆ ಹೋಗಲಾಗಿ ರಾಜನು ಅವರುಗಳನ್ನೇ ಕುರಿತು ಚಿಂತಿಸುತ್ತಾ ರಾಮ, ರಾಮ- ಎಂದು ಅಳುತ್ತಾ ಆ ನೃಪಶ್ರೇಷ್ಠನು ಸತ್ತುಹೋದನು.' ಹೀಗೆಂಬ ತಾಯಿಯ ಮಾತನ್ನು ಕೇಳಿ ಸಿಡಿಲು ಬಡಿದ ಮರದಂತೆ ಜ್ಞಾನತಪ್ಪಿದವನಾಗಿ (ಭರತನು) ನೆಲದಮೇಲೆ ಬಿದ್ದನು. ಅವನನ್ನು ಕಂಡು ದುಃಖಪೀಡಿತಳಾದ ಕೈಕೇಯಿಯು ಮತ್ತೊಮ್ಮೆ ಹೀಗೆಂದಳು : 'ಮಗು ನೀನು ದುಃಖಿಸುವದರಿಂದೇನು ಪ್ರಯೋಜನ ?'

**ರಾಜ್ಯೇ ಮಹತಿ ಸಂಪ್ರಾಪ್ತೇ ದುಃಖಸ್ಯಾವಸರಃ ಕುತಃ ।**
**ಇತಿ ಬ್ರುವಂತೀಮಾಲೋಕ್ಯ ಮಾತರಂ ಪ್ರದಹನ್ನಿವ ॥ ೭೫ ॥**
**ಅಸಂಭಾಷ್ಯಾಸಿ ಪಾಪೇ ಮೇ ಘೋರೇ ತ್ವಂ ಭರ್ತೃಘಾತಿನಿ ।**
**ಪಾಪೇ ತ್ವದ್ಗರ್ಭಜಾತೋಽಹಂ ಪಾಪವಾನಸ್ಮಿ ಸಾಂಪ್ರತಮ್ ॥ ೭೬ ॥**
**ಅಹಮಗ್ನಿಂ ಪ್ರವೇಕ್ಷ್ಯಾಮಿ ವಿಷಂ ವಾ ಭಕ್ಷಯಾಮ್ಯಹಮ್ ।**
**ಖಡ್ಗೇನ ವಾಽಥ ಚಾತ್ಮಾನಂ ಹತ್ವಾ ಯಾಮಿ ಯಮಕ್ಷಯಮ್ ॥ ೭೭ ॥**
**ಭರ್ತೃಘಾತಿನಿ ದುಷ್ಟೇ ತ್ವಂ ಕುಂಭೀಪಾಕಂ ಗಮಿಷ್ಯಸಿ ।**
**ಇತಿ ನಿರ್ಭರ್ತ್ಸ್ಯ ಕೈಕೇಯೀಂ ಕೌಸಲ್ಯಾಸದನಂ ಯಯೌ ॥ ೭೮ ॥**

೭೫-೭೮. 'ದೊಡ್ಡದಾದ ರಾಜ್ಯವು ಕೈವಶವಾಗಿರಲು ದುಃಖಪಡಲು ಕಾರಣವಾದರೂ ಏನಿದ್ದೀತು' ? ಹೀಗೆಂದು ಹೇಳುತ್ತಿರುವ ತಾಯಿಯನ್ನು ಸುಡುವವನಂತೆ ನೋಡುತ್ತಾ ''ಎಲೈ ಪಾಪಿಷ್ಠಳೆ, ಕ್ರೂರಳೆ, ಗಂಡನನ್ನು ಕೊಂದವಳೆ, ನೀನು ಮಾತನಾಡಿಸಲು ಯೋಗ್ಯಳಲ್ಲ. ನಿನ್ನ ಗರ್ಭದಲ್ಲಿ ಜನಿಸಿದ ನಾನೂ ಈಗ ಪಾಪಿಯಾಗಿಬಿಟ್ಟಿರುವೆನು. ನಾನಾದರೊ ಈಗ ಬೆಂಕಿಯನ್ನು ಪ್ರವೇಶಿಸುವೆನು ; ಅಥವಾ ವಿಷವನ್ನಾದರೂ ತಿಂದು ಬಿಡುವೆನು. ಅಥವಾ ಕತ್ತಿಯಿಂದ ನನ್ನನ್ನು ಕೊಂದುಕೊಂಡು ಯಮನ ಮನೆಗೆ ಹೋಗುವೆನು. ದುಷ್ಟಳೆ, ಗಂಡನನ್ನು ನಾಶಮಾಡಿದವಳೆ, ನೀನು ಕುಂಭೀಪಾಕನರಕಕ್ಕೆ ಹೋಗುವೆ.'' ಹೀಗೆ ಕೈಕೇಯಿಯನ್ನು ಗದರಿಸಿ ಕೌಸಲ್ಯೆಯ ಮನೆಗೆ ಹೋದನು.

**ಸಾಪಿ ತಂ ಭರತಂ ದೃಷ್ಟ್ವಾ ಮುಕ್ತಕಂಠಾ ರುರೋದ ಹ ।**
**ಪಾದಯೋಃ ಪತಿತಃ ತಸ್ಯಾಃ ಭರತೋಽಪಿ ತದಾಽರುದತ್ ॥ ೭೯ ॥**
**ಆಲಿಂಗ್ಯ ಭರತಂ ಸಾಧ್ವೀ ರಾಮಮಾತಾ ಯಶಸ್ವಿನೀ ।**
**ಕೃಶಾತಿದೀನವದನಾ ಸಾಶ್ರುನೇತ್ರೇದಮಬ್ರವೀತ್ ॥ ೮೦ ॥**

**ಪುತ್ರ ತ್ವಯಿ ಗತೇ ದೂರಮೇವಂ ಸರ್ವಮಭೂದಿದಮ್ ।**
**ಉಕ್ತಂ ಮಾತ್ರಾ ಶ್ರುತಂ ಸರ್ವಂ ತ್ವಯಾ ತೇ ಮಾತೃಚೇಷ್ಟಿತಮ್ ॥ ೮೧ ॥**

೭೯-೮೧. ಆಕೆಯೂ ಭರತನನ್ನು ಕಂಡು ಗಂಟಲುಬಿಟ್ಟು ಗಟ್ಟಿಯಾಗಿ ಅತ್ತುಬಿಟ್ಟಳು. ಭರತನಾದರೊ, ಆಕೆಯ ಕಾಲುಗಳಿಗೂ ಬಿದ್ದವನಾಗಿ ತಾನೂ ಅತ್ತನು. ರಾಮನ ತಾಯಿಯಾದ ಯಶೋವಂತಳಾದ ಕೃಶಳಾದ ಆ ಸಾಧ್ವಿಯು ಭರತನನ್ನು ತಬ್ಬಿಕೊಂಡು ಬಾಡಿದ ಮುಖವುಳ್ಳವಳೂ, ನೀರಿನಿಂದ ಕೂಡಿದ ಕಣ್ಣುಳ್ಳವಳೂ ಆಗಿ ಹೀಗೆಂದಳು : 'ಮಗು, ನೀನು ದೂರದೇಶಕ್ಕೆ ಹೊರಟುಹೋಗಲಾಗಿ ಇದೆಲ್ಲವೂ ನಡೆದುಹೋಯಿತು. ತಾಯಿಯಿಂದ ಹೇಳಲ್ಪಟ್ಟದ್ದೆಲ್ಲವನ್ನೂ ಕೇಳಿದೆಯಷ್ಟೆ ! ಇದೆಲ್ಲ ನಿನ್ನ ಅಮ್ಮನ ಕೆಲಸವು.''

**ಪುತ್ರಃ ಸಭಾರ್ಯೋ ವನಮೇವ ಯಾತಃ**
**ಸಲಕ್ಷ್ಮಣೋ ಮೇ ರಘುರಾಮಚಂದ್ರಃ ।**
**ಚೀರಾಂಬರೋ ಬದ್ಧಜಟಾಕಲಾಪಃ**
**ಸಂತ್ಯಜ್ಯ ಮಾಂ ದುಃಖಸಮುದ್ರಮಗ್ನಾಮ್ ॥ ೮೨ ॥**
**ಹಾ ರಾಮ ಹಾ ಮೇ ರಘುವಂಶನಾಥ**
**ಜಾತೋಽಸಿ ಮೇ ತ್ವಂ ಪರತಃ ಪರಾತ್ಮಾ ।**
**ತಥಾಪಿ ದುಃಖಂ ನ ಜಹಾತಿ ಮಾಂ ವೈ**
**ವಿಧಿರ್ಬಲೀಯಾನಿತಿ ಮೇ ಮನೀಷಾ ॥ ೮೩ ॥**

೮೨-೮೩. ನನ್ನ ಮಗನಾದ ಶ್ರೀರಾಮನು ನಾರುಮಡಿಯನ್ನುಟ್ಟು ಜಟೆಗಳನ್ನು ಕಟ್ಟಿಕೊಂಡವನಾಗಿ ಹೆಂಡತಿಯೊಡನೆ ಹಾಗೂ ಲಕ್ಷ್ಮಣನ ಸಮೇತವಾಗಿ ಕಾಡಿಗೇ ಹೊರಟುಹೋದನು. ದುಃಖಸಮುದ್ರದಲ್ಲಿ ಮುಳುಗಿರುವ ನನ್ನನ್ನು ಇಲ್ಲಿಯೇ ಕೈಬಿಟ್ಟನು. ಎಲೈ ರಘುವಂಶದೊಡೆಯನಾದ ರಾಮನೆ, ನೀನೂ ಪರಾತ್ಪರನಾದ ಭಗವಂತನೇ ಆಗಿದ್ದು ನನ್ನ ಹೊಟ್ಟೆಯಲ್ಲಿ ಹುಟ್ಟಿರುವೆ. ಹೀಗಿದ್ದರೂ ನನ್ನನ್ನು ದುಃಖವು ಬಿಡಲಾರದು-ಎಂದಮೇಲೆ ಹಣೆಯಬರಹವೇ ಎಲ್ಲಕ್ಕಿಂತ ದೊಡ್ಡದು ಎಂದು ನಾನು ತಿಳಿದಿರುವೆನು.

**ಸ ಏವಂ ಭರತೋ ವೀಕ್ಷ್ಯ ವಿಲಪಂತೀಂ ಭೃಶಂ ಶುಚಾ ।**
**ಪಾದೌ ಗೃಹೀತ್ವಾ ಪ್ರಾಹೇದಂ ಶೃಣು ಮಾತರ್ವಚೋ ಮಮ ॥ ೮೪ ॥**
**ಕೈಕೇಯ್ಯಾ ಯತ್ಕೃತಂ ಕರ್ಮ ರಾಮರಾಜ್ಯಾಭಿಷೇಚನೇ ।**
**ಅನ್ಯದ್ವಾ ಯದಿ ಜಾನಾಮಿ ಸಾ ಮಯಾ ನೋದಿತಾ ಯದಿ ॥ ೮೫ ॥**

**ಪಾಪಂ ಮೇಽಸ್ತು ಸದಾ ಮಾತಃ ಬ್ರಹ್ಮಹತ್ಯಾಶತೋದ್ಭವಮ್ ।**
**ಹತ್ವಾ ವಸಿಷ್ಠಂ ಖಡ್ಗೇನ ಅರುಂಧತ್ಯಾ ಸಮನ್ವಿತಮ್ ॥ ೮೬ ॥**
**ಭೂಯಾತ್ ತತ್ಪಾಪಮಖಿಲಂ ಮಮ ಜಾನಾಮಿ ಯದ್ಯಹಮ್ ।**
**ಇತ್ಯೇವಂ ಶಪಥಂ ಕೃತ್ವಾ ರುರೋದ ಭರತಸ್ತದಾ ॥ ೮೭ ॥**

೮೪-೮೭. ಈ ರೀತಿಯಾಗಿ ಬಹಳವಾದ ದುಃಖದಿಂದ ಅಳುತ್ತಿರುವ ಆಕೆಯನ್ನು ಭರತನು ನೋಡಿದವನಾಗಿ ಅವಳ ಕಾಲುಗಳನ್ನು ಹಿಡಿದುಕೊಂಡು ಹೀಗೆಂದನು. 'ತಾಯೆ, ನನ್ನ ಮಾತನ್ನು ಕೇಳು. ರಾಮನ ರಾಜ್ಯಾಭಿಷೇಕದ ವಿಷಯದಲ್ಲಿ (ಅಡ್ಡಿಯುಂಟುಮಾಡಿದ) ಕೈಕೇಯಿಯ ಯಾವ ಕೆಲಸವುಂಟೋ ಮತ್ತು ನನಗೆ ಈವರೆಗೆ ಆಕೆಯ ದುರ್ವರ್ತನೆಗಳ ವಿಷಯದಲ್ಲಿ ಏನೇನು ತಿಳಿದುಬಂದಿದೆಯೋ ಆ ಎಲ್ಲಾ ಕಾರ್ಯಗಳಲ್ಲಿಯೂ ಆಕೆಯೇನಾದರೂ ನನ್ನಿಂದ ಪ್ರೇರಿಸಲ್ಪಟ್ಟವಳಾಗಿದ್ದಲ್ಲಿ ಒಂದು ನೂರು ಬ್ರಹ್ಮಹತ್ಯೆಯನ್ನು ಮಾಡಿದ ಪಾಪವು ನನಗೆ ಉಂಟಾಗಲಿ ! ನಾನು (ಮುಂಚಿತವಾಗಿಯೇ) ಈ ಕಾರ್ಯಗಳ ವಿಷಯಕ್ಕೆ ತಿಳಿದವನಾಗಿದ್ದುದಾದರೆ ಅರುಂಧತೀ ಸಮೇತನಾದ ವಸಿಷ್ಠಗುರುವನ್ನು ಖಡ್ಗದಿಂದ ಕತ್ತರಿಸಿದ ಸಮಸ್ತಪಾಪವೂ ನನಗೆ ಉಂಟಾಗಲಿ! ಹೀಗೆಂದು ಆಣೆಯಿಟ್ಟುಕೊಂಡವನಾದ ಭರತನು ಆಗ ಅತ್ತನು.

**ಕೌಸಲ್ಯಾ ತಮಥಾಲಿಂಗ್ಯ ಪುತ್ರ ಜಾನಾಮಿ ಮಾ ಶುಚಃ ।**
**ಏತಸ್ಮಿನ್ನಂತರೇ ಶ್ರುತ್ವಾ ಭರತಸ್ಯ ಸಮಾಗಮಮ್ ॥ ೮೮ ॥**
**ವಸಿಷ್ಠೋ ಮಂತ್ರಿಭಿಸ್ಸಾರ್ಧಂ ಪ್ರಯಯೌ ರಾಜಮಂದಿರಮ್ ।**
**ರುದಂತಂ ಭರತಂ ದೃಷ್ಟ್ವಾ ವಸಿಷ್ಠಃ ಪ್ರಾಹ ಸಾದರಮ್ ॥ ೮೯ ॥**

೮೮-೮೯. ಅನಂತರ ಅವನನ್ನು ಕೌಸಲ್ಯೆಯು ತಬ್ಬಿಕೊಂಡವಳಾಗಿ 'ಮಗು, ನನಗೆಲ್ಲ ತಿಳಿದಿದೆ, ಅಳಬೇಡ' ಎಂದಳು. ಅಷ್ಟರೊಳಗಾಗಿ ಭರತನು ಬಂದಿದ್ದಾನೆಂಬ ವೃತ್ತಾಂತವನ್ನು ಕೇಳಿ ವಸಿಷ್ಠನು ಮಂತ್ರಿಗಳೊಡಗೂಡಿ ರಾಜಮಂದಿರಕ್ಕೆ ಬಂದನು. ಅಳುತ್ತಿರುವ ಭರತನನ್ನು ಕಂಡು ಆದರದಿಂದ ಹೀಗೆಂದನು.

**ವೃದ್ಧೋ ರಾಜಾ ದಶರಥೋ ಜ್ಞಾನೀ ಸತ್ಯಪರಾಕ್ರಮಃ ।**
**ಭುಕ್ತ್ವಾ ಮರ್ತ್ಯಸುಖಂ ಸರ್ವಮಿಷ್ಟ್ವಾ ವಿಪುಲದಕ್ಷಿಣೈಃ ॥ ೯೦ ॥**
**ಅಶ್ವಮೇಧಾದಿಭಿರ್ಯಜ್ಞೈಃ ಲಬ್ಧ್ವಾ ರಾಮಂ ಸುತಂ ಹರಿಮ್ ।**
**ಅಂತೇ ಜಗಾಮ ತ್ರಿದಿವಂ ದೇವೇಂದ್ರಾರ್ಧಾಸನಂ ಪ್ರಭುಃ ॥ ೯೧ ॥**
**ತಂ ಶೋಚಸಿ ವೃಥೈವ ತ್ವಮಶೋಚ್ಯಂ ಮೋಕ್ಷಭಾಜನಮ್ ।**

೯೦-೯೧. 'ವಯಸ್ಕನೂ ಜ್ಞಾನಿಯೂ ಸತ್ಯಪರಾಕ್ರಮನೂ ಆದ ದಶರಥರಾಜನು ಮನುಷ್ಯಸುಖಗಳನ್ನು ಅನುಭವಿಸಿ ಧಾರಾಳವಾದ ಹೆಚ್ಚಿನ ದಕ್ಷಿಣೆ

ಗಳಿಂದ ಅಶ್ವಮೇಧಾದಿಯಜ್ಞಗಳನ್ನು ಮಾಡಿದವನಾಗಿ ಶ್ರೀಹರಿಯಾದ ರಾಮನನ್ನೇ ಮಗನಾಗಿ ಪಡೆದು ಕೊನೆಯಲ್ಲಿ ದೇವೇಂದ್ರನ ಅರ್ಧಾಸನವನ್ನೇ ಹೊಂದಿದವನಾದನು. ಹೀಗೆ ಮೋಕ್ಷಕ್ಕೆ ತಕ್ಕವನಾದ ಅಶೋಚ್ಯನಾದ ಅವನನ್ನು ಕುರಿತು ನೀನು ಸುಮ್ಮನೆ ವ್ಯರ್ಥವಾಗಿ ಚಿಂತಿಸುತ್ತಿರುವೆ.

**ಆತ್ಮಾ ನಿತ್ಯೋऽವ್ಯಯಃ ಶುದ್ಧೋ ಜನ್ಮನಾಶಾದಿವರ್ಜಿತಃ ।**
**ಶರೀರಂ ಜಡಮತ್ಯರ್ಥಮಪವಿತ್ರಂ ವಿನಶ್ವರಮ್ ॥ ೯೨ ॥**
**ವಿಚಾರ್ಯಮಾಣೇ ಶೋಕಸ್ಯ ನಾವಕಾಶಃ ಕಥಂಚನ ।**
**ಪಿತಾ ವಾ ತನಯೋ ವಾಪಿ ಯದಿ ಮೃತ್ಯುವಶಂ ಗತಃ ॥ ೯೩ ॥**
**ಮೂಢಾಸ್ತಮನುಶೋಚಂತಿ ಸ್ವಾತ್ಮತಾಡನಪೂರ್ವಕಮ್ ।**
**ನಿಃಸಾರೇ ಖಲು ಸಂಸಾರೇ ವಿಯೋಗೋ ಜ್ಞಾನಿನಾಂ ಯದಾ ॥ ೯೪ ॥**
**ಭವೇದ್ವೈರಾಗ್ಯಹೇತುಃ ಸ ಶಾಂತಿಸೌಖ್ಯಂ ತನೋತಿ ಚ ।**

೯೨-೯೪. ಆತ್ಮನು ನಿತ್ಯನೂ ನಾಶರಹಿತನೂ ಶುದ್ಧನೂ ಹುಟ್ಟುಸಾವುಗಳಿಲ್ಲದವನೂ ಆಗಿರುವನು. ಶರೀರವು ಅಚೇತನವೂ ಅಪವಿತ್ರವೂ ಸಂಪೂರ್ಣವಾಗಿ ನಾಶವಾಗತಕ್ಕದ್ದೂ ಆಗಿರುತ್ತದೆ. ವಿಚಾರಮಾಡಿದರೆ ಹೇಗೂ ದುಃಖಕ್ಕೆ ಕಾರಣವಿರುವದಿಲ್ಲ. ತಂದೆಯಾಗಲಿ ಮಗನಾಗಲಿ ಒಂದುವೇಳೆ ಕಾಲವಶನಾದರೆ ತಮ್ಮ (ಎದೆಯ)ನ್ನು ತಾವೇ ಬಡಿದುಕೊಳ್ಳುತ್ತಾ ಮೂಢರಾದವರು ದುಃಖಿಸುತ್ತಾರೆ. ಆದರೆ ಅಸಾರವಾಗಿರುವ ಈ ಸಂಸಾರದಲ್ಲಿ ಜ್ಞಾನಿಗಳಿಗೆ ಒಂದುವೇಳೆ (ಬಂಧು)ವಿಯೋಗವು ಸಂಭವಿಸಿದರೆ ಅದು ವೈರಾಗ್ಯಕ್ಕೇ ಕಾರಣವಾಗಿರುವದು ; ಮತ್ತು ಮನಸ್ಸಿಗೆ ಸುಖಶಾಂತಿಗಳನ್ನೀಯುವದು.

**ಜನ್ಮವಾನ್ ಯದಿ ಲೋಕೇऽಸ್ಮಿನ್ ತರ್ಹಿ ತಂ ಮೃತ್ಯುರನ್ವಗಾತ್ ।**
**ತಸ್ಮಾದಪರಿಹಾರ್ಯೋऽಯಂ ಮೃತ್ಯುರ್ಜನ್ಮವತಾಂ ಸದಾ ॥ ೯೫ ॥**
**ಸ್ವಕರ್ಮವಶತಃ ಸರ್ವಜಂತೂನಾಂ ಪ್ರಭವಾಪ್ಯಯೌ ।**
**ವಿಜಾನನ್ನಪ್ಯವಿದ್ವಾನ್ ಯಃ ಕಥಂ ಶೋಚತಿ ಬಾಂಧವಾನ್ ॥ ೯೬ ॥**
**ಬ್ರಹ್ಮಾಂಡಕೋಟಯೋ ನಷ್ಟಾಃ ಸೃಷ್ಟಯೋ ಬಹುಶೋ ಗತಾಃ ।**
**ಶುಷ್ಯಂತಿ ಸಾಗರಾಃ ಸರ್ವೇ ಕೈವಾಸ್ಥಾ ಕ್ಷಣಜೀವಿತೇ ॥ ೯೭ ॥**

೯೫-೯೭. ಈ ಲೋಕದಲ್ಲಿ ಹುಟ್ಟಿದವನಿಗೆ ಸಾವು ಹಿಂಬಾಲಿಸಿಕೊಂಡೇ ಇರುವದು. ಆದ್ದರಿಂದ ಸಾವು -ಹುಟ್ಟುಗಳುಳ್ಳ (ಜೀವರನ್ನು) ಯಾರೊಬ್ಬರೂ ಬಿಡಿಸಲಾರರು. ಎಲ್ಲಾ ಪ್ರಾಣಿಗಳಿಗೂ ಅವರವರ ಕರ್ಮಾನುಗುಣವಾಗಿ ಜನ್ಮಮರಣಗಳು ಸಂಭವಿಸುತ್ತವೆ. ಇದನ್ನು ತಿಳಿದೂ ತಿಳಿಯದವನಂತೆ ಬಂಧುಗಳಿಗಾಗಿ ದುಃಖಿಸುವವನು ದಡ್ಡನೇ ಸರಿ. ಈವರೆಗೆ ಕೋಟಿಬ್ರಹ್ಮಾಂಡಗಳು (ಹುಟ್ಟಿ) ಕಣ್ಮರೆಯಾಗಿವೆ. ಎಷ್ಟೋ

ಸೃಷ್ಟಿಗಳಾಗಿ ಹೋಗಿರುತ್ತವೆ. ಎಲ್ಲಾ ಸಮುದ್ರಗಳೂ ಭವಿಷ್ಯತ್‌ಕಾಲದಲ್ಲಿ ಒಣಗಿ ಹೋಗಲಿವೆ. ಹೀಗಿರುವಲ್ಲಿ ಕ್ಷಣಕಾಲ ಬದುಕಿರುವ ಈ ಜೀವನದಲ್ಲಿ ವಿಶ್ವಾಸ ವೇನಿದ್ದೀತು?

**ಚಲಪತ್ರಾಂತಲಗ್ನಾಂಬುಬಿಂದುವತ್ ಕ್ಷಣಭಂಗುರಮ್ ।**
**ಆಯುಸ್ತ್ಯಜತ್ಯವೇಲಾಯಾಂ ಕಸ್ತತ್ರ ಪ್ರತ್ಯಯಸ್ತವ ॥ ೯೮ ॥**
**ದೇಹೀ ಪ್ರಾಕ್ತನದೇಹೋತ್ಥಕರ್ಮಣಾ ದೇಹವಾನ್ ಪುನಃ ।**
**ತದ್ದೇಹೋತ್ಥೇನ ಚ ಪುನಃ ಏವಂ ದೇಹಃ ಸದಾತ್ಮನಃ ॥ ೯೯ ॥**
**ಯಥಾ ತ್ಯಜತಿ ವೈ ಜೀರ್ಣಂ ವಾಸೋ ಗೃಹ್ಣಾತಿ ನೂತನಮ್ ।**
**ತಥಾ ಜೀರ್ಣಂ ಪರಿತ್ಯಜ್ಯ ದೇಹೀ ದೇಹಂ ಪುನರ್ನವಮ್ ॥ ೧೦೦ ॥**
**ಭಜತ್ಯೇವ ಸದಾ ತತ್ರ ಶೋಕಸ್ಯಾವಸರಃ ಕುತಃ ।**

೯೮-೧೦೦. ಅಳ್ಳಾಡುತ್ತಿರುವ (ಗಿಡದ) ಎಲೆಯ ತುದಿಯಲ್ಲಿ ಅಂಟಿಕೊಂಡಿರುವ ನೀರಿನ ಹನಿಯಂತೆ ಆಯುಷ್ಯವು ಕ್ಷಣಮಾತ್ರದಲ್ಲಿ ಮುಗಿಯಲಿದ್ದು ಅಕಾಲದಲ್ಲಿ ಬಿಟ್ಟಗಲುವದು. ನಿನಗೆ ಇದರಲ್ಲಿ ನಂಬಿಕೆಯಾದರೂ ಏನಿದ್ದೀತು ? ಶರೀರಿಯು ತನ್ನ ಹಿಂದಿನ ಶರೀರದಲ್ಲಿ ಮಾಡಿದ್ದ ಕರ್ಮ(ಫಲ)ದಿಂದ ಮತ್ತೆ ದೇಹವನ್ನು ಧರಿಸುತ್ತಾನೆ. ಆ ದೇಹದಿಂದ ಮಾಡಿದ ಕರ್ಮಗಳಿಂದ ಮತ್ತೆ ಇನ್ನೊಂದು ದೇಹವನ್ನು ಪಡೆಯುವನು. ಹೀಗೆ ಯಾವಾಗಲೂ ಆತ್ಮನಿಗೆ (ಜ್ಞಾನವುಂಟಾಗುವವರೆಗೆ) ದೇಹ ಸಂಬಂಧವಿದ್ದುಕೊಂಡೇ ಇರುವದು. ಹೇಗೆ (ಮನುಷ್ಯನು) ಹರಿದುಹೋದ ಬಟ್ಟೆಯನ್ನು ಬಿಸಾಡಿ ಹೊಸಬಟ್ಟೆಯನ್ನು ತೆಗೆದುಕೊಳ್ಳುವನೋ ಹಾಗೆ ಯಾವಾಗಲೂ ಆತ್ಮನು ಮುಪ್ಪಾದ ಶರೀರವನ್ನು ಎಸೆದು ಹೊಸದನ್ನು ಸ್ವೀಕರಿಸುವನು. ಹೀಗಿರುವದ ರಿಂದ ಅಳುವದಕ್ಕೆ ಕಾರಣವಾದರೂ ಏನಿದ್ದೀತು?

**ಆತ್ಮಾ ನ ಮ್ರಿಯತೇ ಜಾತು ಜಾಯತೇ ನ ಚ ವರ್ಧತೇ ।**
**ಷಡ್ಭಾವರಹಿತೋಽನನ್ತಃ ಸತ್ಯಪ್ರಜ್ಞಾನವಿಗ್ರಹಃ ॥ ೧೦೧ ॥**
**ಆನಂದರೂಪೋ ಬುದ್ಧ್ಯಾದಿಸಾಕ್ಷೀ ಲಯವಿವರ್ಜಿತಃ**
**ಏಕ ಏವ ಪರೋ ಹ್ಯಾತ್ಮಾ ಹ್ಯದ್ವಿತೀಯಃ ಸಮಃ ಸ್ಥಿತಃ ॥ ೧೦೨ ॥**
**ಇತ್ಯಾತ್ಮಾನಂ ದೃಢಂ ಜ್ಞಾತ್ವಾ ತ್ಯಕ್ತ್ವಾ ಶೋಕಂ ಕುರು ಕ್ರಿಯಾಮ್ ।**
**ತೈಲದ್ರೋಣ್ಯಾಃ ಪಿತುರ್ದೇಹಮುದ್ಧೃತ್ಯ ಸಚಿವೈಃ ಸಹ ।**
**ಕೃತ್ಯಂ ಕುರು ಯಥಾ ನ್ಯಾಯಮಸ್ಮಾಭಿಃ ಕುಲನಂದನ ॥ ೧೦೩ ॥**

೧೦೧-೧೦೩. ಆತ್ಮನಾದರೊ, ಯಾವಾಗಲೂ ಸಾಯುವದಿಲ್ಲ ; ಹುಟ್ಟು ವದಿಲ್ಲ; ಬೆಳೆಯುವದಿಲ್ಲ ; ಸತ್ಯ-ಜ್ಞಾನಸ್ವರೂಪನಾದ ಅನಂತನಾದ ಆತ್ಮನು (ಹುಟ್ಟೀ

ಮುಂತಾದ) ಆರು ವಿಕಾರಗಳಿಲ್ಲದವನು. ಆನಂದಸ್ವರೂಪನು ; ಬುದ್ಧಿಯೇ ಮುಂತಾದವುಗಳಿಗೆ ಸಾಕ್ಷಿಯು; ವಿನಾಶವಿಲ್ಲದವನು. ತಾನೊಬ್ಬನೇ ಆಗಿರುವ, ಹೆಚ್ಚಿನ ಅದ್ವಿತೀಯನಾದ, ಸಮನಾದ, ಸದಾ ಇದ್ದುಕೊಂಡೇ ಇರುವ ಸ್ವರೂಪದವನು. ಹೀಗೆಂದು ನಿಶ್ಚಯವಾದ ಆತ್ಮಜ್ಞಾನವನ್ನು ಸಂಪಾದಿಸಿಕೊಂಡು ಶೋಕವನ್ನು ಕೈಬಿಟ್ಟು ಕರ್ಮವನ್ನು ಮಾಡಿ. ಎಣ್ಣೆಯ ದೋಣಿಯಿಂದ ತಂದೆಯ ದೇಹವನ್ನು ಮೇಲೆತ್ತಿ ಮಂತ್ರಿಗಳೊಡಗೂಡಿ ನಾವು ತಿಳಿಸಿದಂತೆ ಸೂಕ್ತರೀತಿಯಿಂದ ಎಲೈ ವಂಶಪಾವನನೆ, ಪಿತೃಕಾರ್ಯವನ್ನು ನೆರವೇರಿಸುವವನಾಗು.

**ಇತಿ ಸಂಬೋಧಿತಃ ಸಾಕ್ಷಾದ್ಗುರುಣಾ ಭರತಸ್ತದಾ ।**
**ವಿಸೃಜ್ಯಾಜ್ಞಾನಜಂ ಶೋಕಂ ಚಕ್ರೇ ಸ ವಿಧಿವತ್ ಕ್ರಿಯಾಮ್ ॥ ೧೦೪ ॥**
**ಗುರುಣೋಕ್ತಪ್ರಕಾರೇಣ ಆಹಿತಾಗ್ನೇರ್ಯಥಾವಿಧಿ ।**
**ಸಂಸ್ಕೃತ್ಯ ಸ ಪಿತುರ್ದೇಹಂ ವಿಧಿದೃಷ್ಟೇನ ಕರ್ಮಣಾ ॥ ೧೦೫ ॥**
**ಏಕಾದಶೇऽಹನಿ ಪ್ರಾಪ್ತೇ ಬ್ರಾಹ್ಮಣಾನ್ ವೇದಪಾರಗಾನ್ ।**
**ಭೋಜಯಾಮಾಸ ವಿಧಿವತ್ ಶತಶೋऽಥ ಸಹಸ್ರಶಃ ॥ ೧೦೬ ॥**
**ಉದ್ದಿಶ್ಯ ಪಿತರಂ ತತ್ರ ಬ್ರಾಹ್ಮಣೇಭ್ಯೋ ಧನಂ ಬಹು ।**
**ದದೌ ಗವಾಂ ಸಹಸ್ರಾಣಿ ಗ್ರಾಮಾನ್ ರತ್ನಾಂಬರಾಣಿ ಚ ॥ ೧೦೭ ॥**
**ಅವಸತ್ ಸ್ವಗೃಹೇ ತತ್ರ ರಾಮಮೇವಾನುಚಿಂತಯನ್ ।**

೧೦೪-೧೦೭. ಪ್ರತ್ಯಕ್ಷಗುರುವಾದ (ವಸಿಷ್ಠರಿಂದ) ಹೀಗೆ ಎಚ್ಚರಿಸಲ್ಪಟ್ಟ ಭರತನು ಆಗ ಅಜ್ಞಾನದಿಂದಾಗಿದ್ದ ಶೋಕವನ್ನು ಬಿಟ್ಟು ವಿಧಿಪೂರ್ವಕವಾಗಿ ಪಿತೃಕರ್ಮವನ್ನು ನೆರವೇರಿಸಿದನು ; ಎಂದರೆ : ಗುರುಗಳು ತಿಳಿಸಿದ ಪ್ರಕಾರ ಆಹಿತಾಗ್ನಿ (ಅಗ್ನಿಹೋತ್ರವನ್ನು ಇಟ್ಟಿದ್ದ) ಯಾಗಿದ್ದ ದಶರಥನ ಶರೀರವನ್ನು ಶಾಸ್ತ್ರವಿಧಿಗನುಸಾರವಾಗಿ ಸಂಸ್ಕಾರಮಾಡಿ ವಿಧಿಪ್ರಕಾರವಾಗಿ (ಪ್ರೇತ)ಕರ್ಮಗಳನ್ನು ಮಾಡಿದನು. ಹನ್ನೊಂದನೆಯ ದಿನವು ಬರಲಾಗಿ ವೇದನಿಷ್ಣಾತರಾದ ಬ್ರಾಹ್ಮಣರುಗಳು ಸಾವಿರಾರು ಜನರಿಗೆ ಕ್ರಮಬದ್ಧವಾಗಿ ಭೋಜನಮಾಡಿಸಿದನು. ಆಗ ತಂದೆಯ ಸದ್ಗತಿಗಾಗಿ ಸಂಕಲ್ಪಿಸಿ ಬ್ರಾಹ್ಮಣರಿಗೆ ಹೆಚ್ಚಿನ ದಕ್ಷಿಣೆಯನ್ನೂ ಸಾವಿರಾರು ಗೋವುಗಳನ್ನೂ ಗ್ರಾಮಗಳನ್ನೂ ರತ್ನಾದಿಗಳನ್ನೂ ಬಟ್ಟೆಗಳನ್ನೂ ದಾನಮಾಡಿದನು. ಅನಂತರ ರಾಮನನ್ನೇ ಧ್ಯಾನಿಸುತ್ತಾ ವಸಿಷ್ಠರು, ಹಾಗೂ ಮಂತ್ರಿಗಳು, ತಮ್ಮನಾದ (ಶತ್ರುಘ್ನ) ನೊಡಗೂಡಿ ತನ್ನ ಮನೆಯಲ್ಲಿದ್ದುಕೊಂಡಿದ್ದನು.

**ರಾಮೇऽರಣ್ಯಂ ಪ್ರಯಾತೇ ಸಹ ಜನಕಸುತಾಲಕ್ಷ್ಮಣಾಭ್ಯಾಂ ಸುಘೋರಂ**
**ಮಾತಾ ಮೇ ರಾಕ್ಷಸೀವ ಪ್ರದಹತಿ ಹೃದಯಂ ದರ್ಶನಾದೇವ ಸದ್ಯಃ ।**

**ಗಚ್ಛಾಮ್ಯಾರಣ್ಯಮದ್ಯ ಸ್ಥಿರಮತಿರಖಿಲಂ ದೂರತೋಽಪಾಸ್ಯ ರಾಜ್ಯಂ**
**ರಾಮಂ ಸೀತಾಸಮೇತಂ ಸ್ಮಿತರುಚಿರಮುಖಂ ನಿತ್ಯಮೇವಾನುಸೇವೇ ॥ ೧೦೮ ॥**

೧೦೮. ''ಸೀತಾಲಕ್ಷ್ಮಣರೊಡನೆ ಶ್ರೀರಾಮನು ಭಯಂಕರವಾದ ಅರಣ್ಯವನ್ನು ಪ್ರವೇಶಿಸಲಾಗಿ ಇತ್ತಕಡೆ ನನ್ನ ತಾಯಿಯಾದರೊ, ರಾಕ್ಷಸಿಯಂತೆ (ಮುಖವನ್ನು) ನೋಡಿದೊಡನೆಯೇ ಹೃದಯವನ್ನು ಸುಡುತ್ತಿರುವಳು. (ಆದ್ದರಿಂದ)ಈಗ ನಾನು ದೃಢಬುದ್ಧಿಯುಳ್ಳವನಾಗಿ ಎಲ್ಲಾ ರಾಜ್ಯಕೋಶಗಳನ್ನೂ ದೂರೀಕರಿಸಿ ಅರಣ್ಯಕ್ಕೇ ಹೋಗುವೆನು. ಅಲ್ಲಿ ಸೀತಾಸಮೇತನಾದ, ಮುಗುಳುನಗೆಯಿಂದ ಸುಂದರವಾಗಿ ಕಾಣುವ ಮುಖವುಳ್ಳ ಆತನನ್ನೇ ಯಾವಾಗಲೂ ಸೇವಿಸುತ್ತಾ ಇದ್ದುಕೊಂಡು ಬಿಡುವೆನು.''

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಸಪ್ತಮಃ ಸರ್ಗಃ**

ಃಃಃಃಃಃಃಃಃಃಃ

## ಎಂಟನೆಯ ಸರ್ಗ

**ಶ್ರೀ ಮಹಾದೇವ ಉವಾಚ-**
**ವಸಿಷ್ಠೋ ಮುನಿಭಿಃ ಸಾರ್ಧಂ ಮಂತ್ರಿಭಿಃ ಪರಿವಾರಿತಃ**
**ರಾಜ್ಞಃ ಸಭಾಂ ದೇವಸಭಾಸನ್ನಿಭಾಮಾವಿಶತ್ ವಿಭುಃ ॥ ೧ ॥**
**ತತ್ರಾಸನೇ ಸಮಾಸೀನಶ್ಚತುರ್ಮುಖ ಇವಾಪರಃ ।**
**ಆನೀಯ ಭರತಂ ತತ್ರ ಉಪವೇಶ್ಯ ಸಹಾನುಜಮ್ ॥ ೨ ॥**
**ಅಬ್ರವೀದ್ವಚನಂ ದೇಶಕಾಲೋಚಿತಮರಿಂದಮಮ್ ।**

೧-೨. ಶ್ರೀಮಹಾದೇವನಿಂತೆಂದನು : ವಸಿಷ್ಠಋಷಿಯು ಉಳಿದ ಮುನಿಗಳು ಮತ್ತು ಮಂತ್ರಿಗಳೊಡಗೂಡಿ ದೇವತೆಗಳ ಸಭೆಗೆ ಸಮಾನವಾದ ರಾಜಸಭೆಯನ್ನು ಪ್ರವೇಶಿಸಿದನು. ಅಲ್ಲಿ ಚತುರ್ಮುಖನಾದ ಬ್ರಹ್ಮನಂತೆ ಕುಳಿತವನಾಗಿ ಸೋದರಸಮೇತನಾದ ಭರತನನ್ನು ಕರೆತಂದು ಕುಳ್ಳಿರಿಸಿ ಶತ್ರುನಾಶಕನಾದ ಆತನಿಗೆ ಕಾಲೋಚಿತವಾದ ಹಾಗೂ ಆ ಜಾಗಕ್ಕೆ ತಕ್ಕ ಗೌರವವು ಬರುವ ರೀತಿಯ ಮಾತುಗಳಿಂದ ಹೀಗೆಂದನು.

**ವತ್ಸ ರಾಜ್ಯೇಽಭಿಷೇಕ್ಷ್ಯಾಮಸ್ತ್ವಾಮದ್ಯ ಪಿತೃಶಾಸನಾತ್ ।**
**ಕೈಕೇಯ್ಯಾ ಯಾಚಿತಂ ರಾಜ್ಯಂ ತ್ವದರ್ಥೇ ಪುರುಷರ್ಷಭ ॥ ೩ ॥**
**ಸತ್ಯಸಂಧೋ ದಶರಥಃ ಪ್ರತಿಜ್ಞಾಯ ದದೌ ಕಿಲ ।**
**ಅಭಿಷೇಕೋ ಭವತ್ವದ್ಯ ಮುನಿಭಿರ್ಮಂತ್ರಪೂರ್ವಕಮ್ ॥ ೪ ॥**

೩-೪. ''ಅಪ್ಪ ಮಗು, ಪುರುಷಶ್ರೇಷ್ಠನೆ, ಈಗ ನಿನ್ನನ್ನು ತಂದೆಯ ಅಪ್ಪಣೆಯ ಪ್ರಕಾರ ಪಟ್ಟಾಭಿಷೇಕಮಾಡಲಿದ್ದೇವೆ. ನಿನಗಾಗಿ ಕೈಕೇಯಿಯು ರಾಜ್ಯವನ್ನು ಬೇಡಿದಳು. ಸತ್ಯಸಂಧನಾದ ದಶರಥನಾದರೋ ಪ್ರತಿಜ್ಞೆಮಾಡಿಕೊಟ್ಟನು. ಆದ್ದರಿಂದ ಈಗ ಮುನಿಗಳಿಂದ ಮಂತ್ರಪೂರ್ವಕವಾಗಿ ನಿನಗೆ ಪಟ್ಟಾಭಿಷೇಕವು ನಡೆಯಲಿ''

**ತಚ್ಛ್ರುತ್ವಾ ಭರತೋಽಪ್ಯಾಹ ಮಮ ರಾಜ್ಯೇನ ಕಿಂ ಮುನೇ ।**
**ರಾಮೋ ರಾಜಾಧಿರಾಜಶ್ಚ ವಯಂ ತಸ್ಯೈವ ಕಿಂಕರಾಃ ॥ ೫ ॥**
**ಶ್ವಃ ಪ್ರಭಾತೇ ಗಮಿಷ್ಯಾಮೋ ರಾಮಮಾನೇತುಮಂಜಸಾ ।**
**ಅಹಂ ಯೂಯಂ ಮಾತರಶ್ಚ ಕೈಕೇಯೀಂ ರಾಕ್ಷಸೀಂ ವಿನಾ ॥ ೬ ॥**
**ಹನಿಷ್ಯಾಮ್ಯಧುನೈವಾಹಂ ಕೈಕೇಯೀಂ ಮಾತೃಗಂಧಿನೀಮ್ ।**
**ಕಿಂ ತು ಮಾಂ ನೋ ರಘುಶ್ರೇಷ್ಠಃ ಸ್ತ್ರೀಹಂತಾರಂ ಸಹಿಷ್ಯತೇ ॥ ೭॥**

೫-೭. ಅದನ್ನು ಕೇಳಿ ಭರತನು ಹೀಗೆಂದನು : 'ಋಷಿಗಳೆ, ನನಗೆ ರಾಜ್ಯದಿಂದಾಗಬೇಕಾದದ್ದೇನು ? ರಾಮನೇ ರಾಜಾಧಿರಾಜನು. ನಾವು ಅವನ ಸೇವಕರು ಮಾತ್ರವೇ. ಆದ್ದರಿಂದ ಜಾಗ್ರತೆಯಾಗಿ ರಾಮನನ್ನು ಕರೆತರಲು ನಾನು, ನೀವು ತಾಯಂದಿರು ಎಂದರೆ ರಾಕ್ಷಸಿಯಾದ ಕೈಕೇಯಿಯ ಹೊರತು ಎಲ್ಲರೂ ನಾಳೆ ಬೆಳಗ್ಗೆ ಹೊರಡೋಣ. ಹೆಸರಿಗೆ ಮಾತ್ರ ತಾಯಿಯಾಗಿರುವ ಈ ಕೈಕೇಯಿಯನ್ನು ಈಗಲೇ ಕೊಂದುಬಿಡಲಿರುವೆನು. ಆದರೆ ರಘುಶ್ರೇಷ್ಠನಾದ ರಾಮನು ಸ್ತ್ರೀಹತ್ಯೆಮಾಡಿದ (ಪಾಪಿಯನ್ನು) ಸಹಿಸುತ್ತಾನೋ ಹೇಗೋ ಎಂದು ಯೋಚಿಸುತ್ತಾ ಸುಮ್ಮನಾಗಿರುವೆನು.

**ತತ್ ಶ್ವೋಭೂತೇ ಗಮಿಷ್ಯಾಮಿ ಪಾದಚಾರೇಣ ದಂಡಕಾನ್ ।**
**ಶತ್ರುಘ್ನಸಹಿತಸ್ತೂರ್ಣಂ ಯೂಯಮಾಯಾತ ವಾ ನ ವಾ ॥ ೮ ॥**
**ರಾಮೋ ಯಥಾ ವನೇ ಯಾತಸ್ತಥಾಹಂ ವಲ್ಕಲಾಂಬರಃ ।**
**ಫಲಮೂಲಕೃತಾಹಾರಃ ಶತ್ರುಘ್ನಸಹಿತೋ ಮುನೇ ॥ ೯ ॥**
**ಭೂಮಿಶಾಯೀ ಜಟಾಧಾರೀ ಯಾವದ್ರಾಮೋ ನಿವರ್ತತೇ ।**
**ಇತಿ ನಿಶ್ಚಿತ್ಯ ಭರತಃ ತೂಷ್ಣೀಮೇವಾವತಸ್ಥಿವಾನ್ ॥ ೧೦ ॥**

೮-೧೦. ಆದ್ದರಿಂದ ಶತ್ರುಘ್ನನೊಡನೆ ಪಾದಚಾರಿಯಾಗಿ ನಾಳೆ ಬೆಳಗ್ಗೆ ಶೀಘ್ರವಾಗಿ ದಂಡಕಾರಣ್ಯಕ್ಕೆ ಹೊರಡುವೆನು. ನೀವು ಬೇಕಾದರೆ ಬನ್ನಿರಿ ; ಬೇಡವಾದರೆ ಬಿಡಿರಿ; ಎಲೈ ಮುನಿಯೆ, ಶ್ರೀರಾಮನು ಹೇಗೆ ಕಾಡಿಗೆ ಹೊರಟನೋ ಹಾಗೆಯೇ ನಾನು ಕೂಡ ನಾರುಮಡಿಯನ್ನುಟ್ಟವನಾಗಿ ಕಂದಮೂಲಫಲಗಳನ್ನು ತಿಂದು ಜೀವಿಸುತ್ತಾ ಶತ್ರುಘ್ನನೊಡಗೂಡಿ (ಹೋಗುವೆನು). ರಾಮನು ಹಿಂದಿರುಗುವವರೆಗೂ ನೆಲದಮೇಲೆ ಮಲಗುವವನಾಗಿ ಜಟಾಧಾರಿಯಾಗಿದ್ದುಕೊಂಡಿರುವೆನು. ಹೀಗೆಂದು ಭರತನು ನಿಶ್ಚಯಿಸಿ ಸುಮ್ಮನೆ ಕುಳಿತುಬಿಟ್ಟನು.

**ಸಾಧು ಸಾಧ್ವಿತಿ ತಂ ಸರ್ವೇ ಪ್ರಶಶಂಸುರ್ಮುದಾನ್ವಿತಾಃ ।**
**ತತಃ ಪ್ರಭಾತೇ ಭರತಂ ಗಚ್ಛಂತಂ ಸರ್ವಸೈನಿಕಾಃ ॥ ೧೧ ॥**
**ಅನುಜಗ್ಮುಃ ಸುಮಂತ್ರೇಣ ನೋದಿತಾಃ ಸಾಶ್ವಕುಂಜರಾಃ ।**
**ಕೌಸಲ್ಯಾದ್ಯಾ ರಾಜದಾರಾಃ ವಸಿಷ್ಠಪ್ರಮುಖಾ ದ್ವಿಜಾಃ ॥ ೧೨ ॥**
**ಛಾದಯಂತೋ ಭುವಂ ಸರ್ವೇ ಪೃಷ್ಠತಃ ಪಾರ್ಶ್ವತೋಽಗ್ರತಃ ।**

೧೧-೧೨. ಅವನನ್ನು ಎಲ್ಲರೂ ಭಲೆ, ಭಲೆ - ಎಂದು ಸಂತೋಷದಿಂದ ಹೊಗಳಿದರು. ಅನಂತರ ಬೆಳಗ್ಗೆ ಹೊರಡುತ್ತಿರುವ ಭರತನನ್ನು - ಸುಮಂತ್ರನಿಂದ ಪ್ರೇರಿಸಲ್ಪಟ್ಟ ಎಲ್ಲಾ ಸೈನಿಕರೂ ಆನೆ-ಕುದುರೆಗಳೊಡನೆ ಹಿಂಬಾಲಿಸಿದರು. ಕೌಸಲ್ಯೆಯೇ ಮುಂತಾದ ರಾಜಮಹಿಷಿಯರು, ವಸಿಷ್ಠರೇ ಮುಂತಾದ ದ್ವಿಜರು ಎಲ್ಲರೂ ಹಿಂದೆ, ಮುಂದೆ ಎಡಬಲಗಳಲ್ಲಿ ಭೂಮಿಯನ್ನು ಆಕ್ರಮಿಸಿದವರಾಗಿ ಹೊರಟರು.

**ಶೃಂಗವೇರಪುರಂ ಗತ್ವಾ ಗಂಗಾಕೂಲೇ ಸಮಂತತಃ ।**
**ಉವಾಸ ಮಹತೀ ಸೇನಾ ಶತ್ರುಘ್ನಪರಿಚೋದಿತಾ ॥ ೧೩॥**
**ಆಗತಂ ಭರತಂ ಶ್ರುತ್ವಾ ಗುಹಃ ಶಂಕಿತಮಾನಸಃ ।**
**ಮಹತ್ಯಾ ಸೇನಯಾ ಸಾರ್ಧಮಾಗತೋ ಭರತಃ ಕಿಲ ॥ ೧೪ ॥**
**ಪಾಪಂ ಕರ್ತುಂ ನ ವಾ ಯಾತಿ ರಾಮಸ್ಯಾವಿದಿತಾತ್ಮನಃ ।**
**ಗತ್ವಾ ತದ್ಧೃದಯಂ ಜ್ಞೇಯಂ ಯದಿ ಶುದ್ಧಸ್ತರಿಷ್ಯತಿ ॥ ೧೫ ॥**
**ಗಂಗಾಂ ನೋ ಚೇತ್ ಸಮಾಕೃಷ್ಯ ನಾವಸ್ತಿಷ್ಠಂತು ಸಾಯುಧಾಃ ।**
**ಜ್ಞಾತಯೋ ಮೇ ಸಮಾಯುತ್ತಾಃ ಪಶ್ಯಂತಃ ಸರ್ವತೋ ದಿಶಮ್ ॥ ೧೬ ॥**

೧೩-೧೬. ಶೃಂಗವೇರಪುರಕ್ಕೆ ಹೋಗಿ ಮುಂದೆ ಗಂಗೆಯ ದಡದಲ್ಲಿ ದೊಡ್ಡದಾದ ಸೈನ್ಯವು ಶತ್ರುಘ್ನದಿಂದ ಪ್ರೇರಿಸಲ್ಪಟ್ಟುದಾಗಿ ಬೀಡುಬಿಟ್ಟಿತ್ತು. ಭರತನು ಬಂದಿದ್ದಾನೆಂಬುದನ್ನು ತಿಳಿದು ಸಂಶಯಗೊಂಡ ಗುಹನು 'ಓಹೋ, ಭರತನು ದೊಡ್ಡ ಸೈನ್ಯದೊಡನೆ ಬಂದಿರುವನು. ಏನೂ ಅರಿಯದ ರಾಮನಿಗೆ ಕೆಟ್ಟದ್ದನ್ನು ಮಾಡುವದಕ್ಕಾಗಿಯೊ? ಹೇಗೊ ? ತಿಳಿಯದು. ನೀವುಗಳು ಹೋಗಿ ಅವನ ಅಭಿಪ್ರಾಯವನ್ನು ತಿಳಿಯಬೇಕು, ಒಂದು ವೇಳೆ ಶುದ್ಧಮನಸ್ಸಿನವನಾಗಿ ಗಂಗೆಯನ್ನು ದಾಟಿದರೆ ಸರಿ. ಇಲ್ಲವಾದ್ದರೆ ಆಯುಧಗಳನ್ನು ಎಳೆದು ಸಿದ್ಧಗೊಳಿಸಿಕೊಂಡು ನನ್ನ ಜ್ಞಾತಿಗಳೆಲ್ಲರೂ ಒಂದುಗೂಡಿ ಹಡಗುಗಳನ್ನು ಸಜ್ಜುಗೊಳಿಸಿ ಎಲ್ಲಾ ಕಡೆಗೂ ಕಣ್ಣುಹಾಯಿಸುತ್ತಾ ಸನ್ನದ್ಧರಾಗಿರಿ.'

**ಇತಿ ಸರ್ವಾನ್ ಸಮಾದಿಶ್ಯ ಗುಹೋ ಭರತಮಾಗತಃ ।**
**ಉಪಾಯನಾನಿ ಸಂಗೃಹ್ಯ ವಿವಿಧಾನಿ ಬಹೂನ್ಯಪಿ ॥ ೧೭ ॥**

**ಪ್ರಯಯೌ ಜ್ಞಾತಿಭಿಃ ಸಾರ್ಧಂ ಬಹುಭಿರ್ವಿವಿಧಾಯುಧೈಃ ।**
**ನಿವೇದ್ಯೋಪಾಯನಾನ್ಯಗ್ರೇ ಭರತಸ್ಯ ಸಮನ್ತತಃ ॥ ೧೮ ॥**

೧೭-೧೮. ಹೀಗೆಂದು ಎಲ್ಲರಿಗೂ ಅಪ್ಪಣೆಮಾಡಿ ನಾನಾವಿಧವಾದ ಕಾಣಿಕೆಗಳನ್ನು ಕೂಡಿಸಿ ತೆಗೆದುಕೊಂಡು ಗುಹನು ಭರತನ ಬಳಿಗೆ ಬಂದನು. ಅನೇಕ ರೀತಿಯ ಆಯುಧಪಾಣಿಗಳಾದ ಬಂಧುಜನರೊಡಗೂಡಿ ಭರತನಿದ್ದಲ್ಲಿಗೆ ಬಂದು ಸುತ್ತಲೂ ಕಾಣಿಕೆಗಳನ್ನು ಇಟ್ಟು ಒಪ್ಪಿಸಿದನು.

**ದೃಷ್ಟ್ವಾ ಭರತಮಾಸೀನಂ ಸಾನುಜಂ ಸಹ ಮಂತ್ರಿಭಿಃ ।**
**ಚೀರಾಂಬರಂ ಘನಶ್ಯಾಮಂ ಜಟಾಮಕುಟಧಾರಿಣಮ್ ॥ ೧೯ ॥**
**ರಾಮಮೇವಾನುಶೋಚಂತಂ ರಾಮರಾಮೇತಿ ವಾದಿನಮ್ ।**
**ನನಾಮ ಶಿರಸಾ ಭೂಮೌ ಗುಹೋಽಹಮಿತಿ ಚಾಬ್ರವೀತ್ ॥ ೨೦ ॥**

೧೯-೨೦. ನಾರುಮಡಿಯನ್ನುಟ್ಟು ನೀಲಮೇಘದಂತೆ ಬಣ್ಣವುಳ್ಳವನಾಗಿ ಜಟೆಯೆಂಬ ಕಿರೀಟವನ್ನು ಧರಿಸಿರುವ ಹಾಗೂ (ಮನಸ್ಸಿನಲ್ಲಿ) ರಾಮನನ್ನು ಕುರಿತು ಕಳವಳಪಡುತ್ತಾ ಬಾಯಲ್ಲಿ ರಾಮ, ರಾಮ- ಎನ್ನುತ್ತಾ ಸೋದರ ಹಾಗೂ ಮಂತ್ರಿಗಳೊಡನೆ ಕುಳಿತಿರುವ ಭರತನನ್ನು ಕಂಡು ತಲೆಬಾಗಿ ನೆಲಮುಟ್ಟಿ ನಮಸ್ಕರಿಸಿ 'ನಾನು ಗುಹನು' ಎಂದನು.

**ಶೀಘ್ರಮುತ್ಥಾಪ್ಯ ಭರತೋ ಗಾಢಮಾಲಿಂಗ್ಯ ಸಾದರಮ್ ।**
**ಪೃಷ್ಟ್ವಾನಾಮಯಮವ್ಯಗ್ರಃ ಸಖಾಯಮಿದಮಬ್ರವೀತ್ ॥ ೨೧ ॥**
**ಭ್ರಾತಸ್ತ್ವಂ ರಾಘವೇಣಾತ್ರ ಸಮೇತಃ ಸಮವಸ್ಥಿತಃ ।**
**ರಾಮೇಣಾಲಿಂಗಿತಃ ಸಾರ್ದ್ರನಯನೇನಾಮಲಾತ್ಮನಾ ॥ ೨೨ ॥**
**ಧನ್ಯೋಽಸಿ ಕೃತಕೃತ್ಯೋಽಸಿ ಯತ್ತ್ವಯಾ ಪರಿಭಾಷಿತಃ ।**
**ರಾಮೋ ರಾಜೀವಪತ್ರಾಕ್ಷೋ ಲಕ್ಷ್ಮಣೇನ ಚ ಸೀತಯಾ ॥ ೨೩ ॥**
**ಯತ್ರ ರಾಮಸ್ತ್ವಯಾ ದೃಷ್ಟಸ್ತತ್ರ ಮಾಂ ನಯ ಸುವ್ರತ ।**
**ಸೀತಯಾ ಸಹಿತೋ ಯತ್ರ ಸುಪ್ತಸ್ತದ್ದರ್ಶಯಸ್ವ ಮೇ ॥ ೨೪ ॥**

೨೧-೨೪. ಭರತನು (ಗುಹನನ್ನು) ಬೇಗನೆ ಮೇಲಕ್ಕೆಬ್ಬಿಸಿ ಗಾಢವಾಗಿ ತಬ್ಬಿಕೊಂಡು ಪ್ರೇಮದಿಂದ ಕುಶಲಪ್ರಶ್ನೆಮಾಡಿ ಏಕಾಗ್ರತೆಯಿಂದ ಸ್ನೇಹಿತನೊಡನೆ ಹೀಗೆಂದನು: 'ಸೋದರ, ನೀನು ರಾಮನೊಡಗೂಡಿ ಧನ್ಯನಾಗಿರುವೆ. ಪರಿಶುದ್ಧಮನಸ್ಕನಾದ ಹಾಗೂ ಸ್ನೇಹದಿಂದ ನೆನೆದ ಕಣ್ಣುತುದಿಗಳುಳ್ಳ ರಾಮನಿಂದ ನೀನು ಆಲಿಂಗಿತನಾಗಿರುವೆ. ರಾಮನು ನಿನ್ನನ್ನು ಮಾತನಾಡಿಸಿದ್ದರಿಂದ ಕೃತಾರ್ಥನಾಗಿರುವೆ.

ಕಮಲನಯನನೂ ಸೀತಾಲಕ್ಷ್ಮಣರೊಡಗೂಡಿದವನೂ ಆದ ರಾಮನನ್ನು ಎಲ್ಲಿ ಕಂಡೆಯೋ ಅಲ್ಲಿಗೆ ಎಲೈ ಒಳ್ಳೆಯ ನಡತೆಯುಳ್ಳವನೆ, ನನ್ನನ್ನು ಕರೆದುಕೊಂಡುಹೋಗು. ಎಲ್ಲಿ(ರಾಮನು) ಸೀತೆಯೊಡನೆ ಮಲಗಿದ್ದನೋ ಆ ಜಾಗವನ್ನು ತೋರಿಸು.''

**ತ್ವಂ ರಾಮಸ್ಯ ಪ್ರಿಯತಮೋ ಭಕ್ತಿಮಾನಸಿ ಭಾಗ್ಯವಾನ್ ।**
**ಇತಿ ಸಂಸ್ಮೃತ್ಯ ಸಂಸ್ಮೃತ್ಯ ರಾಮಂ ಸಾಶ್ರುವಿಲೋಚನಃ ॥ ೨೫ ॥**
**ಗುಹೇನ ಸಹಿತಸ್ತತ್ರ ಯತ್ರ ರಾಮಃ ಸ್ಥಿತೋ ನಿಶಿ ।**
**ಯಯೌ ದದರ್ಶ ಶಯನಸ್ಥಲಂ ಕುಶಸಮಾಸ್ತೃತಮ್ ॥ ೨೬ ॥**

೨೫-೨೬. ''ನೀನಾದರೋ ರಾಮನಿಗೆ ಪ್ರೀತಿಪಾತ್ರನೂ ಭಕ್ತಿವಂತನೂ ಭಾಗ್ಯಶಾಲಿಯೂ ಆಗಿರುವೆ.'' ಹೀಗೆಂದು ರಾಮನನ್ನು ನೆನೆ-ನೆನೆದು ಕಣ್ಣೀರುಸುರಿಸುತ್ತಾ ಗುಹನೊಡಗೂಡಿ (ಭರತನು) ಎಲ್ಲಿ ರಾಮನು ರಾತ್ರೆ ತಂಗಿದ್ದನೋ ಅಲ್ಲಿಗೆ ಹೋದನು. ರಾಮನು ಮಲಗಿದ್ದ, ದರ್ಭೆಗಳನ್ನು ಹರಡಿದ್ದ ಜಾಗವನ್ನು ಕಂಡನು.

**ಸೀತಾಭರಣಸಂಲಗ್ನಸ್ವರ್ಣಬಿಂದುಭಿರರ್ಚಿತಮ್ ।**
**ದುಃಖಸಂತಪ್ತಹೃದಯೋ ಭರತಃ ಪರ್ಯದೇವಯತ್ ॥ ೨೭ ॥**
**ಅಹೋಽತಿಸುಕುಮಾರೀ ಯಾ ಸೀತಾ ಜನಕನಂದಿನೀ ।**
**ಪ್ರಾಸಾದೇ ರತ್ನಪರ್ಯಂಕೇ ಕೋಮಲಾಸ್ತರಣೇ ಶುಭೇ ॥ ೨೮ ॥**
**ರಾಮೇಣ ಸಹಿತಾ ಶೇತೇ ಸಾ ಕಥಂ ಕುಶವಿಷ್ಟರೇ ।**
**ಸೀತಾ ರಾಮೇಣ ಸಹಿತಾ ದುಃಖೇನ ಮಮ ದೋಷತಃ ॥ ೨೯ ॥**
**ಧಿಜ್ ಮಾಂ ಜಾತೋಽಸ್ಮಿ ಕೈಕೇಯ್ಯಾಂ ಪಾಪರಾಶಿಸಮಾನತಃ ।**

೨೭-೨೯. ಸೀತಾದೇವಿಯ ಒಡವೆಗಳ ಸ್ಪರ್ಶದಿಂದ ಅಂಟಿಕೊಂಡ ಚಿನ್ನದ ಕಣಗಳಿಂದ ಅಲಂಕೃತವಾಗಿದ್ದ ಆ ಜಾಗವನ್ನು ಭರತನು ಕಂಡು ದುಃಖದಿಂದ ಬಳಲಿದವನಾಗಿ ಅತ್ತುಬಿಟ್ಟನು. 'ಅಯ್ಯೋ, ಅತಿಸುಕುಮಾರಿಯೂ, ಜನಕನ ಪುತ್ರಿಯೂ ಆದ ಸೀತೆಯು ಉಪ್ಪರಿಗೆಯ ಮೇಲೆ ರತ್ನದ ಮಂಚದಲ್ಲಿ ಶುಭವಾದ ಮೃದುವಾದ ಹಾಸಿಗೆಯ ಮೇಲೆ ರಾಮನೊಡನೆ ಮಲಗುತ್ತಿದ್ದಳು. ಅಂಥವಳು ದರ್ಭೆಯ ಹಾಸಿಗೆಯಲ್ಲಿ ಬಹಳ ಕಷ್ಟದಿಂದ ಹೇಗೆ ಮಲಗಿದ್ದಳೊ ? ಇದಕ್ಕೆಲ್ಲ ನನ್ನ ತಪ್ಪೇ ಕಾರಣವಾಗಿದೆ. ಪಾಪಗಳ ರಾಶಿಯಂತಿರುವ ಕೈಕೇಯಿಯಲ್ಲಿ ಹುಟ್ಟಿದ ನನಗೆ ಧಿಕ್ಕಾರವಿರಲಿ!'

**ಮನ್ನಿಮಿತ್ತಮಿದಂ ಕ್ಲೇಶಂ ರಾಮಸ್ಯ ಪರಮಾತ್ಮನಃ ।**
**ಅಹೋಽತಿಸಫಲಂ ಜನ್ಮ ಲಕ್ಷ್ಮಣಸ್ಯ ಮಹಾತ್ಮನಃ ॥ ೩೦ ॥**
**ರಾಮಮೇವ ಸದಾನ್ವೇತಿ ವನಸ್ಥಮಪಿ ಹೃಷ್ಟಧೀಃ ।**
**ಅಹಂ ರಾಮಸ್ಯ ದಾಸಾ ಯೇ ತೇಷಾಂ ದಾಸಸ್ಯ ಕಿಂಕರಃ ॥ ೩೧ ॥**

**ಯದಿ ಸ್ಯಾಂ ಸಫಲಂ ಜನ್ಮ ಮಮ ಭೂಯಾನ್ನ ಸಂಶಯಃ ।**
**ಭ್ರಾತರ್ಜಾನಾಸಿ ಯದಿ ತತ್ ಕಥಯಸ್ವ ಮಮಾಖಿಲಮ್ ॥ ೩೨ ॥**
**ಯತ್ರ ತಿಷ್ಠತಿ ತತ್ರಾಹಂ ಗಚ್ಛಾಮ್ಯಾನೇತುಮಂಜಸಾ ।**

೩೦-೩೨. 'ಪರಮಾತ್ಮನಾದ ರಾಮನಿಗೆ ನನ್ನ ನಿಮಿತ್ತವಾಗಿ ಈ ದುಃಖವುಂಟಾಯಿತು. ಲಕ್ಷ್ಮಣನ ಹುಟ್ಟಾದರೊ, ಆಹಾ ! ಹೆಚ್ಚಿನ ಸಾರ್ಥಕ್ಯವನ್ನು ಹೊಂದಿತು. ಏಕೆಂದರೆ ಕಾಡಿನಲ್ಲಿರುವಾಗಲೂ ಆತನು ರಾಮನನ್ನು ಸಂತೋಷವಾದ ಮನಸ್ಸಿನಿಂದ ಹಿಂಬಾಲಿಸಿರುತ್ತಾನೆ. ನಾನು ರಾಮನ ಯಾವ ಸೇವಕರಿರುವರೋ ಆ ಸೇವಕರ ಸೇವಕನಿಗೆ ಕಿಂಕರನಾಗಿ ಹುಟ್ಟಿದರೂ ಸಾರ್ಥಕವಾದ ಜನ್ಮವುಳ್ಳವನಾಗುತ್ತಿದ್ದೆನು. ಅಂಥ ಅವಕಾಶವು ನಿಶ್ಚಯವಾಗಿಯೂ ನನಗೆ ಒದಗಲಿ ! ಸೋದರನೆ, ರಾಮನು ಎಲ್ಲಿದ್ದಾನೆ ? ಎಂಬುದನ್ನು ನೀನು ಬಲ್ಲೆಯಾದರೆ ಪೂರ್ಣವಾಗಿ ನನಗೆ ಎಲ್ಲವನ್ನೂ ಹೇಳು. ಕೂಡಲೆ ಅವನನ್ನು ಕರೆತರಲು ನಾನು ಹೋಗುವೆನು.'

**ಗುಹಸ್ತಂ ಶುದ್ಧಹೃದಯಂ ಸಸ್ನೇಹಮಿದಮಬ್ರವೀತ್ ।**
**ದೇವ ತ್ವಮೇವ ಧನ್ಯೋಽಸಿ ಯಸ್ಯ ತೇ ಭಕ್ತಿರೀದೃಶೀ ॥ ೩೩ ॥**
**ರಾಮೇ ರಾಜೀವಪತ್ರಾಕ್ಷೇ ಸೀತಾಯಾಂ ಲಕ್ಷ್ಮಣೇ ತಥಾ ।**
**ಚಿತ್ರಕೂಟಾದ್ರಿನಿಕಟೇ ಮಂದಾಕಿನ್ಯವಿದೂರತಃ ॥ ೩೪ ॥**
**ಮುನೀನಾಮಾಶ್ರಮಪದೇ ರಾಮಸ್ತಿಷ್ಠತಿ ಸಾನುಜಃ ।**
**ಜಾನಕ್ಯಾ ಸಹಿತೋ ನಂದಾತ್ ಸುಖಮಾಸ್ತೇ ಕಿಲ ಪ್ರಭುಃ ॥ ೩೫ ॥**

೩೩-೩೫. ಪರಿಶುದ್ಧಮನಸ್ಸಿನವನಾದ ಅವನನ್ನು ಕುರಿತು ಆಗ ಗುಹನು ಪ್ರೀತಿಯಿಂದ ಹೀಗೆಂದನು : 'ಸ್ವಾಮಿ, ನೀನೇ ಧನ್ಯನು. ಏಕೆಂದರೆ ಕಮಲನೇತ್ರನಾದ ರಾಮನಲ್ಲಿ, ಸೀತೆಯಲ್ಲಿ, ಹಾಗೂ ಲಕ್ಷ್ಮಣನಲ್ಲಿ ನಿನ್ನ ಭಕ್ತಿಯು ಅಪಾರವಾದುದಾಗಿದೆ. ಪ್ರಭುವಾದ ರಾಮನು ತಮ್ಮನೊಡನೆ ಚಿತ್ರಕೂಟಪರ್ವತದ ಸಮಿಾಪದಲ್ಲಿ ಗಂಗಾನದಿಗೆ ಹತ್ತಿರವಾಗಿಯೇ ಇರುವ ಋಷಿಗಳ ಆಶ್ರಮಗಳುಳ್ಳ ಸ್ಥಳದಲ್ಲಿ ಸೀತಾಸಮೇತನಾಗಿ ಆನಂದದಿಂದ ಇದ್ದುಕೊಂಡಿರುವನಲ್ಲವೆ ?'

**ತತ್ರ ಗಚ್ಛಾಮಹೇ ಶೀಘ್ರಂ ಗಂಗಾಂ ತರ್ತುಮಿಹಾರ್ಹಸಿ ।**
**ಇತ್ಯುಕ್ತ್ವಾ ತ್ವರಿತಂ ಗತ್ವಾ ನಾವಃ ಪಂಚಶತಾನಿ ಹ ॥ ೩೬ ॥**
**ಸಮಾನಯತ್ ಸ್ವಸೈನ್ಯಸ್ಯ ತರ್ತುಂ ಗಂಗಾಂ ಮಹಾನದೀಮ್ ।**
**ಸ್ವಯಮೇವಾನಿನಾಯೈಕಾಂ ರಾಜನಾವಂ ಗುಹಸ್ತದಾ ॥ ೩೭ ॥**
**ಆರೋಪ್ಯ ಭರತಂ ತತ್ರ, ಶತ್ರುಘ್ನಂ ರಾಮಮಾತರಮ್।**
**ವಸಿಷ್ಠಂ ಚ ತಥಾಽನ್ಯತ್ರ ಕೈಕೇಯೀಂ ಚಾನ್ಯಯೋಷಿತಃ ॥ ೩೮ ॥**

**ತೀರ್ತ್ವಾ ಗಂಗಾಂ ಯಯೌ ಶೀಘ್ರಂ ಭರದ್ವಾಜಾಶ್ರಮಂ ಪ್ರತಿ ।**
**ದೂರೇ ಸ್ಥಾಪ್ಯ ಮಹಾಸೈನ್ಯಂ ಭರತಃ ಸಾನುಜೋ ಯಯೌ ॥ ೩೯ ॥**

೩೬-೩೯. ''ಜಾಗ್ರತೆಯಾಗಿ ನಾವು ಅಲ್ಲಿಗೆ ಹೋಗೋಣ. ಗಂಗೆಯನ್ನು ಈಗ ನೀನು ದಾಟುವೆಯಂತೆ'' ಎಂದು ಹೇಳಿ ಬೇಗನೆ ಹೋಗಿ ಗುಹನು ತನ್ನ ಸೈನ್ಯಕ್ಕೆ ಸೇರಿದ ಐದುನೂರು ನಾವೆಗಳನ್ನು ಮಹಾನದಿಯಾದ ಗಂಗೆಯನ್ನು ದಾಟುವ ಸಲುವಾಗಿ ತಂದನು. ಮತ್ತು ರಾಜರುಗಳು ಉಪಯೋಗಿಸುವಂಥ ವಿಶೇಷನಾವೆಯೊಂದನ್ನು ಗುಹನು ತಾನೇ ಸ್ವತಃ ತೆಗೆದುಕೊಂಡು ಬಂದನು. ಅದರಲ್ಲಿ ಭರತ-ಶತ್ರುಘ್ನರನ್ನೂ ರಾಮನ ತಾಯಿಯಾದ ಕೌಸಲ್ಯೆಯನ್ನೂ ವಸಿಷ್ಠರನ್ನೂ ಹತ್ತಿಸಿದನು. ಕೈಕೇಯಿಯನ್ನೂ ಉಳಿದ ರಾಜಸ್ತ್ರೀಯರನ್ನೂ ಬೇರೊಂದರಲ್ಲಿ ಕುಳ್ಳಿರಿಸಿದನು. ಹೀಗೆ (ಗುಹನ ಸಹಾಯದಿಂದ) ಭರತನು ಜಾಗ್ರತೆಯಾಗಿ ಗಂಗಾನದಿಯನ್ನು ದಾಟಿ ಭರದ್ವಾಜಾಶ್ರಮಕ್ಕೆ ಬಂದನು. ಆದರೆ ಸೈನ್ಯವನ್ನೆಲ್ಲ ದೂರದಲ್ಲಿಯೇ ಇರಿಸಿ ಸಹೋದರನೊಡನೆ ಆಶ್ರಮವನ್ನು ಹೊಕ್ಕನು.

**ಆಶ್ರಮೇ ಮುನಿಮಾಸೀನಂ ಜ್ವಲಂತಮಿವ ಪಾವಕಮ್ ।**
**ದೃಷ್ಟ್ವಾ ನನಾಮ ಭರತಃ ಸಾಷ್ಟಾಂಗಮತಿಭಕ್ತಿತಃ ॥ ೪೦ ॥**
**ಜ್ಞಾತ್ವಾ ದಾಶರಥಿಂ ಪ್ರೀತ್ಯಾ ಪೂಜಯಾಮಾಸ ಮೌನಿರಾಟ್ ।**
**ಪಪ್ರಚ್ಛ ಕುಶಲಂ ದೃಷ್ಟ್ವಾ ಜಟಾವಲ್ಕಲಧಾರಿಣಮ್ ॥ ೪೧ ॥**

೪೦-೪೧. ಉರಿಯುತ್ತಿರುವ ಬೆಂಕಿಯಂತೆ ತೇಜೋಮಯನಾಗಿರುವ ಭರದ್ವಾಜಮುನಿಯನ್ನು ಆಶ್ರಮದಲ್ಲಿ ಕಂಡ ಭರತನು ಅತ್ಯಂತ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಮಾಡಿದನು. ಮುನಿಶ್ರೇಷ್ಠನಾದರೊ, ದಶರಥಪುತ್ರನಾದ ಭರತನು ಈತನೆಂದು ಅರಿತು ಜಟಾವಲ್ಕಲಗಳನ್ನು ಧರಿಸಿರುವದನ್ನು ಕಂಡು ಕುಶಲಪ್ರಶ್ನೆಯನ್ನು ಮಾಡಿದನು.

**ರಾಜ್ಯಂ ಪ್ರಶಾಸತಸ್ತೇಽದ್ಯ ಕಿಮೇತದ್ ವಲ್ಕಲಾದಿಕಮ್ ।**
**ಆಗತೋಽಸಿ ಕಿಮರ್ಥಂ ತ್ವಂ ವಿಪಿನಂ ಮುನಿಸೇವಿತಮ್ ॥ ೪೨ ॥**
**ಭರದ್ವಾಜವಚಃ ಶ್ರುತ್ವಾ ಭರತಃ ಸಾಶ್ರುಲೋಚನಃ ।**
**ಸರ್ವಂ ಜಾನಾಸಿ ಭಗವನ್ ಸರ್ವಭೂತಾಶಯಸ್ಥಿತಃ ॥ ೪೩ ॥**
**ತಥಾಪಿ ಪೃಚ್ಛಸೇ ಕಿಂಚಿತ್ ತದನುಗ್ರಹ ಏವ ಮೇ ॥**

೪೨-೪೩. 'ರಾಜ್ಯವನ್ನಾಳುತ್ತಿರುವ ನಿನಗೆ ಈಗ ನಾರುಮಡಿ- ಮುಂತಾದದ್ದೇಕೆ ಬೇಕಾಯಿತು ? ಋಷಿಗಳಿಗೆ ವಾಸಸ್ಥಾನವಾಗಿರುವ ಕಾಡಿಗೆ ಏತಕ್ಕಾಗಿ ಬಂದಿರುವೆ?' ಭರದ್ವಾಜರ ಈ ಮಾತನ್ನು ಕೇಳಿ ಕಣ್ಣೀರಿನಿಂದ ಕೂಡಿದ ಭರತನು

'ಪೂಜ್ಯನೆ, ಎಲ್ಲರ ಹೃದಯದಲ್ಲಿರುವ ನೀನು ಎಲ್ಲವನ್ನೂ ಬಲ್ಲೆ. ಆದರೂ ಏನೆಂದು ಕೇಳುತ್ತಿದ್ದೀಯೆ. ಇದು ನನಗೆ ಅನುಗ್ರಹವೇ ಆಗಿದೆ.'

**ಕೈಕೇಯ್ಯಾ ಯತ್ಕೃತಂ ಕರ್ಮ ರಾಮರಾಜ್ಯವಿಘಾತನಮ್ ।**
**ವನವಾಸಾದಿಕಂ ವಾಪಿ ನ ಹಿ ಜಾನಾಮಿ ಕಿಂಚನ ॥ ೪೪ ॥**
**ಭವತ್ಪಾದಯುಗಂ ಮೇಽದ್ಯ ಪ್ರಮಾಣಂ ಮುನಿಸತ್ತಮ ।**
**ಇತ್ಯುಕ್ತ್ವಾ ಪಾದಯುಗಲಂ ಮುನೇಃ ಸ್ಪೃಷ್ಟ್ವಾಽಽರ್ತಮಾನಸಃ ॥ ೪೫ ॥**
**ಜ್ಞಾತುಮರ್ಹಸಿ ಮಾಂ ದೇವ ಶುದ್ಧೋ ವಾಽಶುದ್ಧ ಏವ ವಾ ।**

೪೪-೪೫. ''ರಾಮನು ರಾಜ್ಯವನ್ನಾಳುವದನ್ನು ಹಾಳುಮಾಡಿದ ಕೈಕೇಯಿಯ ಕೆಲಸವೇನಿದೆಯೋ ಹಾಗೂ ಆತನ ವನವಾಸದ ವಿಚಾರವುಂಟೋ ಇದೊಂದನ್ನೂ ಸ್ವಲ್ಪವೂ ನಾನು ಅರಿಯೆನು. ಮುನಿಶ್ರೇಷ್ಠನೆ, ಇದೊ, ನಿಮ್ಮ ಪಾದದ್ವಯಗಳೇ ನನಗೆ ಸಾಕ್ಷಿ'' - ಹೀಗೆಂದು ದುಃಖದಿಂದ ಕೂಡಿದ ಮನಸ್ಸಿನವನಾಗಿ ಋಷಿಯ ಪಾದಗಳನ್ನು ಮುಟ್ಟಿ ''ಸ್ವಾಮಿ, ನಾನು ಅಪರಾಧಿಯೊ, ನಿರಪರಾಧಿಯೊ, ನೀವೇ ಅರಿತುಕೊಳ್ಳಿರಿ'' - ಎಂದನು.

**ಮಮ ರಾಜ್ಯೇನ ಕಿಂ ಸ್ವಾಮಿನ್ ರಾಮೇ ತಿಷ್ಠತಿ ರಾಜನಿ ।**
**ಕಿಂಕರೋಽಹಂ ಮುನಿಶ್ರೇಷ್ಠ ರಾಮಚಂದ್ರಸ್ಯ ಧೀಮತಃ ॥ ೪೬ ॥**
**ಅತೋ ಗತ್ವಾ ಮುನಿಶ್ರೇಷ್ಠ ರಾಮಸ್ಯ ಚರಣಾಂತಿಕೇ ।**
**ಪತಿತ್ವಾ ರಾಜ್ಯಸಂಭಾರಾನ್ ಸಮರ್ಪ್ಯಾತ್ರೈವ ರಾಘವಮ್ ॥ ೪೭ ॥**
**ಅಭಿಷೇಕ್ಷ್ಯೇ ವಸಿಷ್ಠಾದ್ಯೈಃ ಪೌರಜಾನಪದೈಃ ಸಹ ।**
**ನೇಷ್ಯೇಽಯೋಧ್ಯಾಂ ರಮಾನಾಥಂ ದಾಸಃ ಸೇವೇಽತಿನೀಚವತ್ ॥ ೪೮ ॥**

೪೬-೪೮. (ಮುಂದುವರೆದು) ''ಸ್ವಾಮಿ, ಋಷಿಶ್ರೇಷ್ಠರೆ, ನನಗೆ ರಾಜ್ಯವನ್ನು ಕಟ್ಟಿಕೊಂಡೇನಾಗಬೇಕು ? ಮಹಾತ್ಮನಾದ ಶ್ರೀರಾಮನಿರುವಲ್ಲಿ ನಾನು ಆತನ ಸೇವಕನು. ಆದ್ದರಿಂದ ರಾಮನ ಪಾದದ ಬಳಿಗೆ ಹೋಗಿ ರಾಜ್ಯ ಸಂಭಾರಗಳನ್ನೆಲ್ಲ ಅರ್ಪಿಸಿ ನಮಸ್ಕರಿಸಿ ಇಲ್ಲಿಯೇ ಪೌರಜನರಿಂದಲೂ ವಸಿಷ್ಠರಿಂದಲೂ ಕೂಡಿ ರಾಮನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿಬಿಡುವೆನು. ಅನಂತರ ಅಯೋಧ್ಯೆಗೆ ಆ ರಮಾನಾಥನನ್ನು ಕರೆದೊಯ್ಯುವೆನು. ತೀರ ಕೆಳಮಟ್ಟದ ಸೇವಕನಂತೆ ಆತನನ್ನು ಸೇವೆಗೈಯ್ಯುವೆನು.''

**ಇತ್ಯುದೀರಿತಮಾಕರ್ಣ್ಯ ಭರತಸ್ಯ ವಚೋ ಮುನಿಃ ।**
**ಆಲಿಂಗ್ಯ ಮೂರ್ಧ್ನ್ಯವಘ್ರಾಯ ಪ್ರಶಶಂಸ ಸವಿಸ್ಮಯಃ ॥ ೪೯ ॥**
**ವತ್ಸ ಜ್ಞಾತಂ ಪುರೈವೈತತ್ ಭವಿಷ್ಯಂ ಜ್ಞಾನಚಕ್ಷುಷಾ ।**
**ಮಾ ಶುಚಸ್ತ್ವಂ ಪರೋ ಭಕ್ತಃ ಶ್ರೀರಾಮೇ ಲಕ್ಷ್ಮಣಾದಪಿ ॥ ೫೦ ॥**

**ಆತಿಥ್ಯಂ ಕರ್ತುಮಿಚ್ಛಾಮಿ ಸಸೈನ್ಯಸ್ಯ ತವಾನಘ ।**
**ಅದ್ಯ ಭುಕ್ತ್ವಾ ಸಸೈನ್ಯಸ್ತ್ವಂ ಶ್ವೋ ಗಂತಾ ರಾಮಸನ್ನಿಧಿಮ್ ॥ ೫೧ ॥**
**ಯಥಾಜ್ಞಾಪಯತಿ ಭವಾನ್ ತಥೇತಿ ಭರತೋಽಬ್ರವೀತ್ ।**

೪೯-೫೧. ಹೀಗೆಂದು ಹೇಳಿದ ಭರತನ ಮಾತನ್ನು ಕೇಳಿ ಋಷಿಯು ಆತನನ್ನು ಆಲಿಂಗಿಸಿಕೊಂಡು ನೆತ್ತಿಯಲ್ಲಿ ಮೂಸಿನೋಡಿ ಆಶ್ಚರ್ಯದಿಂದ ಹೊಗಳಿದನು. ಅನಂತರ- 'ಮಗು, ಜ್ಞಾನದೃಷ್ಟಿಯಿಂದ ಈ ಭವಿಷ್ಯವೆಲ್ಲವನ್ನೂ ನಾನು ಮುಂಚೆಯೇ ಅರಿತಿದ್ದೆನು. ನೀನು ಅಳಬೇಡ, ಲಕ್ಷ್ಮಣನಿಗಿಂತ ನೀನು ಶ್ರೀರಾಮನಲ್ಲಿ ಭಕ್ತನು. ಎಲೈ ಪಾಪರಹಿತನೆ, ಸೇನಾಸಮೇತನಾದ ನಿನಗೆ ಆತಿಥ್ಯವನ್ನು ಮಾಡಲಿಚ್ಛಿಸುತ್ತೇನೆ. ಈ ದಿನ ಭೋಜನಮಾಡಿಕೊಂಡು ನಾಳೆಯ ದಿನ ರಾಮನ ಸನ್ನಿಧಿಗೆ ಸೇನಾಸಮೇತನಾಗಿ ಹೋಗುವೆಯಂತೆ' - ಎಂದನು. ಭರತನಾದರೊ, ಪೂಜ್ಯರಾದ ತಾವು ಹೇಳಿದಂತಾಗಲಿ - ಎಂದನು.

**ಭರದ್ವಾಜಸ್ತ್ವಪಃ ಸ್ಪೃಷ್ಟ್ವಾ ಮೌನೀ ಹೋಮಗೃಹೇ ಸ್ಥಿತಃ ।**
**ದಧ್ಯೌ ಕಾಮದುಘಾಂ ಕಾಮವರ್ಷಿಣೀಂ ಕಾಮದೋ ಮುನಿಃ ॥ ೫೨ ॥**
**ಅಸೃಜತ್ ಕಾಮಧುಕ್ ಸರ್ವಂ ಯಥಾಕಾಮಮಲೌಕಿಕಮ್ ।**
**ಭರತಸ್ಯ ಸಸೈನ್ಯಸ್ಯ ಯಥೇಷ್ಟಂ ಚ ಮನೋರಥಮ್ ॥ ೫೩ ॥**
**ಯಥಾ ವವರ್ಷ ಸಕಲಂ ತೃಪ್ತಾಸ್ತೇ ಸರ್ವಸೈನಿಕಾಃ ।**

೫೨-೫೩. ಇಷ್ಟಾರ್ಥಗಳನ್ನು ಕೊಡುವ ಆ ಮುನಿಯಾದ ಭರದ್ವಾಜನಾದರೊ, ಆಚಮನಮಾಡಿ ಹೋಮಶಾಲೆಯಲ್ಲಿ ಮೌನವಾಗಿ ಕುಳಿತು ಕಾಮಗಳನ್ನು ಕರೆಯುವ ಕಾಮಧೇನುವನ್ನು ಚಿಂತಿಸಿದನು. ಅನಂತರ ಮನುಷ್ಯರಿಗೆ ಅಪರೂಪವಾದಂಥ ಎಲ್ಲಾ ಭೋಗಸಾಮಗ್ರಿಗಳನ್ನೂ ಕಾಮಧೇನುವು ಸೃಷ್ಟಿಸಿತು. ಸೇನಾಸಮೇತನಾದ ಭರತನ ಬಯಕೆಗಳಿಗೆ ತಕ್ಕಂತೆ ಎಲ್ಲಾ ಆಶೋತ್ತರಗಳನ್ನೂ ಮಳೆಗರೆಯಿತು. ಇದರಿಂದ ಸೈನಿಕರೆಲ್ಲರೂ ತೃಪ್ತರಾದರು.

**ವಸಿಷ್ಠಂ ಪೂಜಯಿತ್ವಾಗ್ರೇ ಶಾಸ್ತ್ರದೃಷ್ಟೇನ ಕರ್ಮಣಾ ।**
**ಪಶ್ಚಾತ್ ಸಸೈನ್ಯಂ ಭರತಂ ತರ್ಪಯಾಮಾಸ ಯೋಗಿರಾಟ್ ॥ ೫೪ ॥**
**ಉಷಿತ್ವಾ ದಿನಮೇಕಂ ತು ಆಶ್ರಮೇ ಸ್ವರ್ಗಸನ್ನಿಭೇ ।**
**ಅಭಿವಾದ್ಯ ಪುನಃ ಪ್ರಾತಃ ಭರದ್ವಾಜಂ ಸಹಾನುಜಃ ॥ ೫೫ ॥**
**ಭರತಸ್ತು ಕೃತಾನುಜ್ಞಃ ಪ್ರಯಯೌ ರಾಮಸಂನಿಧಿಮ್ ।**

೫೪-೫೫. ಶಾಸ್ತ್ರಸಂಮತವಾದ ರೀತಿಯಿಂದ ಮೊದಲು ವಸಿಷ್ಠರನ್ನು ಪೂಜಿಸಿ ಅನಂತರ ಸೇನಾಸಮೇತನಾದ ಭರತನನ್ನು ಯೋಗಿಶ್ರೇಷ್ಠನಾದ (ಭರ-

ದ್ವಾಜನು) ಸಂತೋಷಗೊಳಿಸಿದನು. ಸ್ವರ್ಗಸಮಾನವಾದ ಆಶ್ರಮದಲ್ಲಿ ಒಂದು ದಿನ ಉಳಿದುಕೊಂಡವನಾಗಿ ಮತ್ತೆ ಬೆಳಗ್ಗೆ ಸೋದರನಡಗೂಡಿ ಭರದ್ವಾಜನನ್ನು ನಮಸ್ಕರಿಸಿ ಭರತನು (ಋಷಿಗಳ) ಅಪ್ಪಣೆಯನ್ನುಪಡೆದು ರಾಮನಿದ್ದಲ್ಲಿಗೆ ಪ್ರಯಾಣಮಾಡಿದನು.

**ಚಿತ್ರಕೂಟಮನುಪ್ರಾಪ್ಯ ದೂರೇ ಸಂಸ್ಥಾಪ್ಯ ಸೈನಿಕಾನ್ ।**
**ರಾಮಸಂದರ್ಶನಾಕಾಂಕ್ಷೀ ಪ್ರಯಯೌ ಭರತಃ ಸ್ವಯಮ್ ॥ ೫೬ ॥**
**ಶತ್ರುಘ್ನೇನ ಸುಮಂತ್ರೇಣ ಗುಹೇನ ಚ ಪರಂತಪಃ ।**
**ತಪಸ್ವಿಮಂಡಲಂ ಸರ್ವಂ ವಿಚಿನ್ವಾನೋ ನ್ಯವರ್ತತ ॥ ೫೭ ॥**

೫೬-೫೭. ಚಿತ್ರಕೂಟವನ್ನು ತಲುಪಿ ಸೈನಿಕರನ್ನೆಲ್ಲ ದೂರದಲ್ಲಿರಿಸಿ ರಾಮನನ್ನು ನೋಡುವ ಕುತೂಹಲದಿಂದ ಭರತನು ತಾನೇ ಶತ್ರುಘ್ನ, ಸುಮಂತ್ರ, ಗುಹರೊಡಗೂಡಿ ಹೊರಟನು. ಋಷಿಗಳ ಗುಂಪುಗಳುಳ್ಳ ಜಾಗವನ್ನೆಲ್ಲ ಪೂರ್ಣವಾಗಿ ಹುಡುಕುತ್ತಾ ಹಿಂದಿರುಗಿದನು.

**ಅದೃಷ್ಟ್ವಾ ರಾಮಭವನಮಪೃಚ್ಛದೃಷಿಮಂಡಲಮ್ ।**
**ಕುತ್ರಾಸ್ತೇ ಸೀತಯಾ ಸಾರ್ಧಂ ಲಕ್ಷ್ಮಣೇನ ರಘೂತ್ತಮಃ ॥ ೫೮ ॥**
**ಊಚುರಗ್ರೇ ಗಿರೇಃ ಪಶ್ಚಾತ್ ಗಂಗಾಯಾ ಉತ್ತರೇ ತಟೇ ।**
**ವಿವಿಕ್ತಂ ರಾಮಸದನಂ ರಮ್ಯಂ ಕಾನನಮಂಡಿತಮ್ ॥ ೫೯ ॥**
**ಸಫಲೈರಾಮ್ರಪನಸೈಃ ಕದಲೀಖಂಡಸಂವೃತಮ್ ।**
**ಚಂಪಕೈಃ ಕೋವಿದಾರೈಶ್ಚ ಪುನ್ನಾಗೈರ್ವಿಪುಲೈಸ್ತಥಾ ॥ ೬೦ ॥**

೫೮-೬೦. ರಾಮನ ಕುಟೀರವನ್ನು ಕಾಣದೆ ಋಷಿಗಳ ಗುಂಪನ್ನು ಕುರಿತು 'ರಘೂತ್ತಮನಾದ ರಾಮನು ಸೀತೆಯೊಡನೆ ಹಾಗೂ ಲಕ್ಷ್ಮಣನ ಜೊತೆಗೂಡಿ ಎಲ್ಲಿರುವನು'? ಎಂದು ಕೇಳಿದನು. (ಅವರುಗಳು) 'ಗಂಗಾನದಿಯ ಉತ್ತರದ ದಡದಲ್ಲಿ ಬೆಟ್ಟದ ಹಿಂಭಾಗಕ್ಕೆ ಒಂದೇ ಬಿಡಿಯಾಗಿ ರಾಮನ ಕುಟೀರವಿದೆ. ಅದು ರಮ್ಯವಾದ ಕಾಡಿನಿಂದ ಅಲಂಕೃತವಾಗಿದ್ದು ಹಣ್ಣುಗಳಿಂದ ಜಗ್ಗಿರುವ ಹಾಗೂ ಹರಡಿರುವ ಮಾವು, ಹಲಸು, ಬಾಳೆ, ಹಾಗೂ ಸಂಪಿಗೆ, ಕಂಚಿವಾಳ ಮುಂತಾದ ಮರಗಳಿಂದ ಸುತ್ತವರೆಯಲ್ಪಟ್ಟಿದೆ' - ಎಂದರು.

**ಏವಂ ದರ್ಶಿತಮಾಲೋಕ್ಯ ಮುನಿಭಿರ್ಭರತೋಽಗ್ರತಃ ।**
**ಹರ್ಷಾದ್ಯಯೌ ರಘುಶ್ರೇಷ್ಠಭವನಂ ಮಂತ್ರಿಣಾ ಸಹ ॥ ೬೧ ॥**
**ದದರ್ಶ ದೂರಾದತಿಭಾಸುರಂ ಶುಭಂ**
**ರಾಮಸ್ಯ ಗೇಹಂ ಮುನಿವೃಂದಸೇವಿತಮ್ ।**

**ವೃಕ್ಷಾಗ್ರಸಂಲಗ್ನಸುವಲ್ಕಲಾಜಿನಂ**
**ರಾಮಾಭಿರಾಮಂ ಭರತಃ ಸಹಾನುಜಃ ॥ ೬೨॥**

೬೧-೬೨. ಋಷಿಗಳಿಂದ ಈ ರೀತಿ ತೋರಿಸಲ್ಪಟ್ಟ ದಾರಿಯಿಂದ ಭರತನು ತಾನೇ ಮುಂದಾಗಿ ಮಂತ್ರಿಯೊಡಗೂಡಿ ಸಂತೋಷದಿಂದ ಶ್ರೀರಾಮನ ಕುಟೀರಕ್ಕೆ ಹೊರಟನು. ದೂರದಿಂದಲೇ ಬಹಳ ಪ್ರಕಾಶಮಾನವಾಗಿಯೂ, ಶುಭಕರವಾಗಿಯೂ ಋಷಿಗಳ ಸಮೂಹದಿಂದ ಸೇವಿಸಲ್ಪಟ್ಟುದಾಗಿಯೂ ಸಮೀಪದಲ್ಲಿರುವ ಮರಗಳ ತುದಿಯಲ್ಲಿ ನೇತಾಡುತ್ತಿರುವ ಚರ್ಮಗಳುಳ್ಳದ್ದಾಗಿರುವದರಿಂದ ರಮಣೀಯವಾಗಿಯೂ ಇರುವ ಆಶ್ರಮವನ್ನು ಕಂಡನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ಅಷ್ಟಮಃ ಸರ್ಗಃ**

ঃঃঃঃঃঃঃঃঃ

## ಒಂಭತ್ತನೆಯ ಸರ್ಗ

**ಶ್ರೀ ಮಹಾದೇವ ಉವಾಚ-**
**ಅಥ ಗತ್ವಾಶ್ರಮಪದಸಮೀಪಂ ಭರತೋ ಮುದಾ ।**
**ಸೀತಾರಾಮಪದೈರ್ಯುಕ್ತಂ ಪವಿತ್ರಮತಿಶೋಭನಮ್ ॥ ೧ ॥**
**ಸ ತತ್ರ ವಜ್ರಾಂಕುಶವಾರಿಜಾಂಚಿತ-**
**ಧ್ವಜಾದಿಚಿಹ್ನಾನಿ ಪದಾನಿ ಸರ್ವತಃ ।**
**ದದರ್ಶ ರಾಮಸ್ಯ ಭುವೋಽತಿಮಂಗಲಾ-**
**ನ್ಯಚೇಷ್ಟಯತ್ ಪಾದರಜಸ್ಸು ಸಾನುಜಃ ॥ ೨ ॥**

೧-೨. ಶ್ರೀಮಹಾದೇವನಿಂತೆಂದನು: ಭರತನಾದರೊ, ಪವಿತ್ರವೂ ಅತ್ಯಂತ ಮಂಗಳಕರವೂ ಆದ, ಹಾಗೂ ಶ್ರೀ ಸೀತಾರಾಮರುಗಳ ಕಾಲಿನ ಗುರುತುಗಳಿಂದ ಕೂಡಿದ ಆಶ್ರಮದ ಸಮೀಪಕ್ಕೆ ಬಂದವನಾಗಿ ಸಂತೋಷದಿಂದ ಅಲ್ಲಿ ವಜ್ರ, ಅಂಕುಶ, ಪದ್ಮ, ಧ್ವಜ- ಮುಂತಾದ ಚಿಹ್ನೆಗಳಿಂದ ಅಲಂಕೃತವಾದ, ಎಲ್ಲೆಲ್ಲೂ ಹರಡಿರುವ ಮತ್ತು ಜಗತ್ತಿಗೆ ಮಂಗಳವನ್ನುಂಟುಮಾಡುವ ರಾಮನ ಹೆಜ್ಜೆಗಳನ್ನು ಕಂಡವನಾಗಿ ತಮ್ಮನೊಡನೆ ಆ ಪಾದಧೂಳಿಯಲ್ಲಿಯೇ ಹೊರಳಾಡಿದನು.

**ಅಹೋ ಸುಧನ್ಯೋಽಹಮಮೂನಿ ರಾಮ-**
**ಪಾದಾರವಿಂದಾಂಕಿತಭೂತಲಾನಿ ।**

**ಪಶ್ಯಾಮಿ ಯತ್ಪಾದರಜೋ ವಿಮೃಗ್ಯಂ**
**ಬ್ರಹ್ಮಾದಿದೇವೈಃ ಶ್ರುತಿಭಿಶ್ಚ ನಿತ್ಯಮ್ ॥ ೩ ॥**
**ಇತ್ಯುದ್ಗತಪ್ರೇಮರಸಾಶಯಾಪ್ಲುತೋ**
**ವಿಗಾಢಚೇತಾ ರಘುನಾಥಭಾವನೇ ।**
**ಆನಂದಜಾಶ್ರುಸ್ನಪಿತಸ್ತನಾಂತರೋ**
**ಶನೈರವಾಪಾಶ್ರಮಸಂನಿಧಿಂ ಹರೇಃ ॥ ೪ ॥**

೩-೪. "ಆಹಾ, ನಾನು ಧನ್ಯನು. ಏಕೆಂದರೆ ಶ್ರೀರಾಮನ ಪಾದಾರವಿಂದದ ಗುರುತುಗಳಿಂದ ಕೂಡಿದ ಭೂಮಿಯನ್ನು ಕಾಣುತ್ತಿದ್ದೇನೆ. ಬ್ರಹ್ಮನೇ ಮುಂತಾದ ದೇವತೆಗಳೂ ವೇದಗಳೂ ಸದಾಕಾಲವೂ ಯಾವ ಪಾದಧೂಳಿಯನ್ನು ಹುಡುಕುತ್ತಿರುವರೋ ಅದನ್ನು ನೋಡುತ್ತಿರುವೆನು." ಹೀಗೆಂದು ಅದ್ಭುತವಾದ ಪ್ರೇಮರಸದಿಂದ ತುಂಬಿದ ಹೃದಯವುಳ್ಳವನಾಗಿ ಹಾಗೂ ರಾಮನನ್ನು ನೆನೆಯುವದರಲ್ಲಿಯೇ ಮನಸ್ಸು ಮುಳುಗಿದವನಾಗಿ ಆನಂದದಿಂದ ಹೊರಹೊಮ್ಮಿ ಸುರಿದ ಕಣ್ಣೀರಿನಿಂದ ಎದೆಯ ಭಾಗವೆಲ್ಲ ನೆನೆದವನಾಗಿ ಮೆಲ್ಲನೆ ಶ್ರೀಹರಿಯಾದ ರಾಮನ ಆಶ್ರಮದ ಸಮೀಪಕ್ಕೆ ಬಂದನು.

**ಸ ತತ್ರ ದೃಷ್ಟ್ವಾ ರಘುನಾಥಮಾಸ್ಥಿತಂ**
**ದೂರ್ವಾದಲಶ್ಯಾಮಲಮಾಯತೇಕ್ಷಣಮ್ ।**
**ಜಟಾಕಿರೀಟಂ ನವವಲ್ಕಲಾಂಬರಂ**
**ಪ್ರಸನ್ನವಕ್ತ್ರಂ ತರುಣಾರುಣದ್ಯುತಿಮ್ ॥ ೫ ॥**
**ವಿಲೋಕಯಂತಂ ಜನಕಾತ್ಮಜಾಂ ಶುಭಾಂ**
**ಸೌಮಿತ್ರಿಣಾ ಸೇವಿತಪಾದಪಂಕಜಮ್ ।**
**ತದಾಭಿದುದ್ರಾವ ರಘೂತ್ತಮಂ ಶುಚಾ**
**ಹರ್ಷಾಚ್ಚ ತತ್ಪಾದಯುಗಂ ತ್ವರಾಗ್ರಹೀತ್ ॥ ೬ ॥**

೫-೬. ಅವನಾದರೊ, ಅಲ್ಲಿ ಕುಳಿತಿದ್ದ, ಗರಿಕೆಯಂತೆ ನೀಲವರ್ಣದವನಾದ, ವಿಶಾಲವಾದ ಕಣ್ಣುಗಳುಳ್ಳ, ಜಟೆಯೆಂಬ ಕಿರೀಟವನ್ನು ಧರಿಸಿರುವ, ಹೊಸದಾದ ನಾರುಮಡಿಯನ್ನುಟ್ಟಿರುವ, ಪ್ರಸನ್ನವಾದ ಮುಖವುಳ್ಳ ಬಾಲಸೂರ್ಯನಂತೆ ಕಾಂತಿಯುಕ್ತವಾದ ಮತ್ತು ಆಗಾಗ್ಗೆ ಶುಭಳಾದ ಸೀತೆಯ ಕಡೆಗೆ ನೋಡುತ್ತಿರುವನಾದ ಹಾಗೂ ಲಕ್ಷ್ಮಣನಿಂದ ಉಪಚರಿಸಲ್ಪಡುತ್ತಿರುವ ಪಾದಕಮಲವುಳ್ಳ ರಘುಶ್ರೇಷ್ಠನಾದ ರಾಮನನ್ನು ಕಂಡು ದುಃಖದಿಂದಲೂ ಸಂತೋಷದಿಂದಲೂ ಕೂಡಿದವನಾಗಿ ಓಡಿ ಬಂದು ಬೇಗನೆ ಪಾದಗಳನ್ನು ಹಿಡಿದುಕೊಂಡನು.

**ರಾಮಸ್ತಮಾಕೃಷ್ಯ ಸುದೀರ್ಘಬಾಹು**
**ದೋರ್ಭ್ಯಾಂ ಪರಿಷ್ವಜ್ಯ ಸಿಷಿಂಚ ನೇತ್ರಜೈಃ ।**
**ಜಲೈರಥಾಂಕೋಪರಿ ಸಂನ್ಯವೇಶಯತ್**
**ಪುನಃ ಪುನಃ ಸಂಪರಿಷಸ್ವಜೇ ವಿಭುಃ ॥ ೭ ॥**

೭. ಉದ್ದವಾದ ತೋಳುಳ್ಳ ವಿಭುವಾದ ಶ್ರೀರಾಮನು ಅವನನ್ನು ಬರಸೆಳೆದು ಎರಡು ಕೈಗಳಿಂದಲೂ ಅಪ್ಪಿಕೊಂಡು ತನ್ನ ಕಣ್ಣೀರಿನಿಂದ ತೋಯಿಸಿದನು. ಅನಂತರ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮತ್ತೆ ಮತ್ತೆ ಆಲಿಂಗಿಸಿಕೊಂಡನು.

**ಅಥ ತಾ ಮಾತರಃ ಸರ್ವಾಃ ಸಮಾಜಗ್ಮುಸ್ತ್ವರಾನ್ವಿತಾಃ**
**ರಾಘವಂ ದ್ರಷ್ಟುಕಾಮಾಸ್ತಾಸ್ತೃಷಾರ್ತಾ ಗಾವೋ ಯಥಾ ಜಲಮ್ ॥ ೮ ॥**
**ರಾಮಃ ಸ್ವಮಾತರಂ ವೀಕ್ಷ್ಯ ದ್ರುತಮುತ್ಥಾಯ ಪಾದಯೋಃ ।**
**ವವಂದೇ ಸಾಶ್ರು, ಸಾ ಪುತ್ರಮಾಲಿಂಗ್ಯಾತೀವ ದುಃಖಿತಾ ॥ ೯ ॥**
**ಇತರಾಶ್ಚ ತಥಾ ನತ್ವಾ ಜನನೀ ರಘುನಂದನಃ ।**

೮-೯. ಅನಂತರ ಆ ತಾಯಂದಿರುಗಳೆಲ್ಲರೂ ಬೇಗನೆ ರಾಮನನ್ನು ನೋಡುವ ಆತುರದಿಂದ-ಹೇಗೆ ಬಾಯಾರಿದ ಹಸುವು ನೀರಿನ ಸಮೀಪಕ್ಕೆ ಓಡುತ್ತದೆಯೋ ಹಾಗೆ-ಅಲ್ಲಿಗೆ ಬಂದವರಾದರು. ರಾಮನು ತನ್ನ ತಾಯಿಯನ್ನು ಕಂಡವನಾಗಿ ಜಾಗ್ರತೆ ಮೇಲೆದ್ದು ಪಾದಗಳಿಗೆ ನಮಸ್ಕರಿಸಿದನು. ಆಕೆಯು ಕಣ್ಣೀರಿನಿಂದ ಕೂಡಿದವಳಾಗಿ ಬಹಳ ಸಂಕಟದಿಂದ ಮಗನನ್ನು ತಬ್ಬಿಕೊಂಡು ಅತ್ತುಬಿಟ್ಟಳು. ಉಳಿದ ತಾಯಂದಿರಿಗೂ ರಾಮನು ನಮಸ್ಕರಿಸಿದನು.

**ತತಃ ಸಮಾಗತಂ ದೃಷ್ಟ್ವಾ ವಸಿಷ್ಠಂ ಮುನಿಪುಂಗವಮ್ ।**
**ಸಾಷ್ಟಾಂಗಂ ಪ್ರಣಿಪತ್ಯಾಹ ಧನ್ಯೋಽಸ್ಮೀತಿ ಪುನಃ ಪುನಃ ॥ ೧೦ ॥**
**ಯಥಾರ್ಹಮುಪವೇಶ್ಯಾಹ ಸರ್ವಾನೇವ ರಘೂದ್ವಹಃ ।**
**ಪಿತಾ ಮೇ ಕುಶಲೀ ಕಿಂ ವಾ ಮಾಂ ಕಿಮಾಹಾತಿದುಃಖಿತಃ ॥ ೧೧ ॥**
**ವಸಿಷ್ಠಸ್ತಮುವಾಚೇದಂ ಪಿತಾ ತೇ ರಘುನಂದನ ।**
**ತ್ವದ್ವಿಯೋಗಾಭಿತಪ್ತಾತ್ಮಾ ತ್ವಾಮೇವ ಪರಿಚಿಂತಯನ್ ॥ ೧೨ ॥**
**ರಾಮರಾಮೇತಿ ಸೀತೇತಿ ಲಕ್ಷ್ಮಣೇತಿ ಮಮಾರ ಹ ॥**

೧೦-೧೨. ಅನಂತರ ಬಂದ ಮುನಿಶ್ರೇಷ್ಠನಾದ ವಸಿಷ್ಠನನ್ನು ಕಂಡು ಸಾಷ್ಟಾಂಗನಮಸ್ಕಾರವನ್ನು ಮಾಡಿ ಧನ್ಯನಾದೆನು - ಎಂದು ಮತ್ತೆ ಮತ್ತೆ ರಾಮನು ನುಡಿದನು. ಗೌರವಕ್ಕೆ ತಕ್ಕಂತೆ ಎಲ್ಲರನ್ನೂ ಕುಳ್ಳಿರಿಸಿ ರಾಮನು "ನಮ್ಮ ತಂದೆಯು ಕ್ಷೇಮವೆ ? ಅವನು ನನ್ನನ್ನು ಕುರಿತು ದುಃಖದಿಂದ ಏನು ಹೇಳಿದನು ?" ಎಂದನು.

ವಸಿಷ್ಠನು ಅವನನ್ನು ಕುರಿತು ''ಎಲೈ ರಘುನಂದನನೆ, ನಿನ್ನ ತಂದೆಯು ನಿನ್ನ ಅಗಲುವಿಕೆಯಿಂದ ಬಹಳ ಸಂಕಟಗೊಂಡವನಾಗಿ ನಿನ್ನನ್ನೇ ಚಿಂತಿಸುತ್ತಾ ರಾಮ, ಸೀತೆ - ಎಂದುಕೊಂಡು ಪ್ರಾಣತ್ಯಾಗಮಾಡಿದನು.''

**ಶ್ರುತ್ವಾ ತತ್ಕರ್ಣಶೂಲಾಭಂ ಗುರೋರ್ವಚನಮಂಜಸಾ ।**
**ಹಾ ಹತೋಽಸ್ಮೀತಿ ಪತಿತೋ ರುದನ್ ರಾಮಃ ಸಲಕ್ಷ್ಮಣಃ ॥ ೧೩ ॥**
**ತತೋಽನುರುರುದುಃ ಸರ್ವಾ ಮಾತರಶ್ಚ ತಥಾಽಪರೇ ।**
**ಹಾ ತಾತ ಮಾಂ ಪರಿತ್ಯಜ್ಯ ಕ್ವ ಗತೋಽಸಿ ಘೃಣಾಕರ ॥ ೧೪॥**
**ಅನಾಥೋಽಸ್ಮಿ ಮಹಾಬಾಹೋ ಮಾಂ ಕೋ ವಾ ಲಾಲಯೇದಿತಃ ।**
**ಸೀತಾ ಚ ಲಕ್ಷ್ಮಣಶ್ಚೈವ ವಿಲೇಪತುರತೋ ಭೃಶಮ್ ॥ ೧೫ ॥**

೧೩-೧೫. ಕಿವಿಯನ್ನು ಚುಚ್ಚುವ ಆ ಮಾತನ್ನು ಗುರುವಿನಿಂದ ಕೇಳಿದ ಕೂಡಲೆ 'ಅಯ್ಯೊ, ಕೆಟ್ಟೆನು' ಎಂದು ಲಕ್ಷ್ಮಣಸಹಿತನಾದ ರಾಮನು ಅಳುತ್ತಾ ಬಿದ್ದುಬಿಟ್ಟನು. ಅನಂತರ ಉಳಿದವರೂ ಹಾಗೂ ಎಲ್ಲಾ ತಾಯಂದಿರೂ ಅಳಲಾರಂಭಿಸಿದರು. ''ಅಪ್ಪಾ, ದಯಾಮಯ, ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋದೆ? ಮಹಾಬಾಹುವೆ, ನಾನು ಅನಾಥನಾದೆನು ;ಇನ್ನು ನನ್ನನ್ನು ಕಾಪಾಡುವವರು ಯಾರು ?'' ಹೀಗೆಂದು ಸೀತೆಯೂ ಲಕ್ಷ್ಮಣನೂ ಹೆಚ್ಚು ಹೆಚ್ಚಾಗಿ ಅತ್ತರು.

**ವಸಿಷ್ಠಃ ಶಾಂತವಚನೈಃ ಶಮಯಾಮಾಸ ತಾಂ ಶುಚಮ್ ।**
**ತತೋ ಮಂದಾಕಿನೀಂ ಗತ್ವಾ ಸ್ನಾತ್ವಾ ತೇ ವೀತಕಲ್ಮಷಾಃ ॥ ೧೬ ॥**
**ರಾಜ್ಞೇ ದದುರ್ಜಲಂ ತತ್ರ, ಸರ್ವೇ ತೇ ಜಲಕಾಂಕ್ಷಿಣೇ ।**
**ಪಿಂಡಾನ್ ನಿರ್ವಾಪಯಾಮಾಸ ರಾಮೋ ಲಕ್ಷ್ಮಣಸಂಯುತಃ ॥ ೧೭ ॥**

೧೬-೧೭. ವಸಿಷ್ಠರು ಸಮಾಧಾನದ ಮಾತುಗಳಿಂದ ಆ ದುಃಖವನ್ನು ತಣ್ಣಗಾಗಿಸಿದರು. ಅನಂತರ ಗಂಗಾನದಿಗೆ ಹೋಗಿ ಆ ದೋಷರಹಿತರಾದ ಅವರುಗಳು ತರ್ಪಣವನ್ನು ಬಯಸುತ್ತಿದ್ದ ರಾಜನಿಗೆ ಜಲದಿಂದ (ತರ್ಪಣವನ್ನು) ಕೊಟ್ಟರು. ಲಕ್ಷ್ಮಣಸಹಿತನಾದ ರಾಮನು ಪಿಂಡಗಳನ್ನೂ ಅರ್ಪಿಸಿದನು.

**ಇಂಗುದೀಫಲಪಿಣ್ಯಾಕರಚಿತಾನ್ ಮಧುಸಂಪ್ಲುತಾನ್ ।**
**ವಯಂ ಯದನ್ನಾಃ ಪಿತರಃ ತದನ್ನಾಃ ಸ್ಮೃತಿನೋದಿತಾಃ ॥ ೧೮ ॥**
**ಇತಿ ದುಃಖಾಶ್ರುಪೂರ್ಣಾಕ್ಷಃ ಪುನಃ ಸ್ನಾತ್ವಾ ಗೃಹಂ ಯಯೌ ॥**

೧೮. ಇಂಗಳದ ಕಾಯಿ, ಗೆಡ್ಡೆಗೆಣಸುಗಳಿಂದ ತಯಾರಿಸಿದ, ಜೇನುತುಪ್ಪದಿಂದ ಕೂಡಿದ (ಪಿಂಡಗಳನ್ನು) ''ನಾವು ಯಾವ ಅನ್ನವನ್ನು ತಿನ್ನುವೆವೋ ಅದನ್ನೇ ಪಿತೃಗಳಿಗೆ

ಕೊಡಬೇಕು''- ಎಂಬ ಸ್ಮೃತಿಗೆ ತಲೆಬಾಗಿ ಈ ಅನ್ನವನ್ನು ಅರ್ಪಿಸಿರುವೆವು-ಎಂದು ಕಣ್ಣೀರಿಡುತ್ತಾ (ಪಿಂಡಪ್ರದಾನಮಾಡಿದನು). ಮತ್ತೆ ಸ್ನಾನಮಾಡಿ ಮನೆಗೆ ಬಂದನು.

**ಸರ್ವೇ ರುದಿತ್ವಾ ಸುಚಿರಂ ಸ್ನಾತ್ವಾ ಜಗ್ಮುಸ್ತದಾಶ್ರಮಮ್ ।**
**ತಸ್ಮಿಂಸ್ತು ದಿವಸೇ ಸರ್ವೇ ಉಪವಾಸಂ ಪ್ರಚಕ್ರಿರೇ ॥ ೧೯ ॥**
**ತತಃ ಪರೇದ್ಯುರ್ವಿಮಲೇ ಸ್ನಾತ್ವಾ ಮಂದಾಕಿನೀಜಲೇ ।**
**ಉಪವಿಷ್ಟಂ ಸಮಾಗಮ್ಯ ಭರತೋ ರಾಮಮಬ್ರವೀತ್ ॥ ೨೦ ॥**

೧೯-೨೦. ಎಲ್ಲರೂ ಬಹಳಕಾಲ ಅತ್ತು ಅನಂತರ ಸ್ನಾನಮಾಡಿ ಆಶ್ರಮಕ್ಕೆ ಬಂದರು. ಆ ದಿನ ಎಲ್ಲರೂ ಉಪವಾಸಮಾಡಿದರು. ಅನಂತರ ಮಾರನೆಯ ದಿನ ಪವಿತ್ರವಾದ ಗಂಗೆಯಲ್ಲಿ ಸ್ನಾನಮಾಡಿ ಕುಳಿತಿದ್ದ ರಾಮನ ಬಳಿಗೆ ಭರತನು ಬಂದು ಹೀಗೆಂದನು.

**ರಾಮ ರಾಮ ಮಹಾಭಾಗ ಸ್ವಾತ್ಮಾನಮಭಿಷೇಚಯ ।**
**ರಾಜ್ಯಂ ಪಾಲಯ ಪಿತ್ರ್ಯಂ ತೇ ಜ್ಯೇಷ್ಠಸ್ತ್ವಂ ಮೇ ಪಿತಾ ತಥಾ ॥ ೨೧ ॥**
**ಕ್ಷತ್ರಿಯಾಣಾಮಯಂ ಧರ್ಮೋ ಯತ್ಪ್ರಜಾಪರಿಪಾಲನಮ್ ।**
**ಇಷ್ಟ್ವಾ ಯಜ್ಞೈರ್ಬಹುವಿಧೈಃ ಪುತ್ರಾನುತ್ಪಾದ್ಯ ತಂತವೇ ॥ ೨೨ ॥**
**ರಾಜ್ಯೇ ಪುತ್ರಂ ಸಮಾರೋಪ್ಯ ಗಮಿಷ್ಯಸಿ ತತೋ ವನಮ್ ।**
**ಇದಾನೀಂ ವನವಾಸಸ್ಯ ಕಾಲೋ ನೈವ ಪ್ರಸೀದ ಮೇ ॥ ೨೩ ॥**
**ಮಾತುರ್ಮೇ ದುಷ್ಕೃತಂ ಕಿಂಚಿತ್ ಸ್ಮರ್ತುಂ ನಾರ್ಹಸಿ ಪಾಹಿ ನಃ॥**

೨೧-೨೩. ''ಮಹಾಭಾಗನಾದ ರಾಮನೆ, ನೀನು ಪಟ್ಟಾಭಿಷಿಕ್ತನಾಗು. ನನ್ನ ತಂದೆಗೆ ಜ್ಯೇಷ್ಠಪುತ್ರನೂ ನನಗೂ ಹಿರಿಯನೂ ಆದವನು ನೀನು. ಪಿತ್ರಾರ್ಜಿತವಾದ ರಾಜ್ಯವನ್ನು ನೀನು ಕಾಪಾಡುವವನಾಗು. ಪ್ರಜೆಗಳನ್ನು ಕಾಪಾಡುವದೆಂಬುದಿದೆಯಲ್ಲ, ಇದೇ ಕ್ಷತ್ರಿಯರಿಗೆ ಪರಮಧರ್ಮವು. ನಾನಾ ವಿಧವಾದ ಯಜ್ಞಗಳನ್ನು ಮಾಡಿ, ಪ್ರಜಾಸಂತತಿಯನ್ನು ಕಾಪಾಡಲು ಪುತ್ರರನ್ನು ಪಡೆದು ಅವನು ದೊಡ್ಡವನಾದಾಗ ರಾಜ್ಯಕ್ಕೆ ಒಡೆಯನನ್ನಾಗಿ ಮಾಡಿ ಆತನಿಗೆ ವಹಿಸಿ ಅನಂತರ ವಾನಪ್ರಸ್ಥಾಶ್ರಮದ ನಿಮಿತ್ತ ಕಾಡಿಗೆ ಹೋಗುವೆಯಂತೆ. ಈಗ ವನವಾಸವನ್ನು ಮಾಡಲು ಸಮಯವಲ್ಲ. ದಯವಿಟ್ಟು ಗಮನಿಸು. ನನ್ನ ತಾಯಿಯು ಮಾಡಿರಬಹುದಾದ ಕೆಟ್ಟ ಕೆಲಸವನ್ನು ನೀನು ನೆನೆಯಬಾರದು. ನಮ್ಮನ್ನು ಕಾಪಾಡು.'' ಎಂದನು.

**ಇತ್ಯುಕ್ತ್ವಾ ಚರಣೌ ಭ್ರಾತುಃ ಶಿರಸ್ಯಾಧಾಯ ಭಕ್ತಿತಃ ।**
**ರಾಮಸ್ಯ ಪುರತಃ ಸಾಕ್ಷಾತ್ ದಂಡವತ್ ಪತಿತೋ ಭುವಿ ॥ ೨೪ ॥**

**ಉತ್ಥಾಪ್ಯ ರಾಘವಃ ಶೀಘ್ರಮಾರೋಪ್ಯಾಂಕೇऽತಿಭಕ್ತಿತಃ ।**
**ಉವಾಚ ಭರತಂ ರಾಮಃ ಸ್ನೇಹಾರ್ದ್ರನಯನಃ ಶನೈಃ ॥ ೨೫ ॥**

೨೪-೨೫. ಹೀಗೆಂದು ಹೇಳಿ ಅಣ್ಣನ ಪಾದಗಳಲ್ಲಿ ಭಕ್ತಿಯಿಂದ ತಲೆಯೂರಿದವನಾಗಿ ರಾಮನ ಮುಂದೆ ನೇರಾಗಿ ದಂಡವತ್‌ಪ್ರಣಾಮಮಾಡಿ ಮಲಗಿಬಿಟ್ಟನು. ರಾಮನು ಬೇಗನೆ ಭರತನನ್ನು ಮೇಲಕ್ಕೆಬ್ಬಿಸಿ ಪ್ರೀತಿಯಿಂದ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸ್ನೇಹದಿಂದ ಕಣ್ಣೀರಿಡುತ್ತಾ ಮೆಲ್ಲನೆ ಹೀಗೆಂದನು :

**ಶೃಣು ವತ್ಸ ಪ್ರವಕ್ಷ್ಯಾಮಿ ತ್ವಯೋಕ್ತಂ ಯತ್ತಥೈವ ತತ್ ।**
**ಕಿಂ ತು ಮಾಮಬ್ರವೀತ್ತಾತೋ ನವ ವರ್ಷಾಣಿ ಪಂಚ ಚ ॥ ೨೬ ॥**
**ಉಷಿತ್ವಾ ದಂಡಕಾರಣ್ಯೇ ಪುರಂ ಪಶ್ಚಾತ್ ಸಮಾವಿಶ ।**
**ಇದಾನೀಂ ಭರತಾಯೇದಂ ರಾಜ್ಯಂ ದತ್ತಂ ಮಯಾऽಖಿಲಮ್ ॥ ೨೭ ॥**
**ತತಃ ಪಿತ್ರೈವ ಸುವ್ಯಕ್ತಂ ರಾಜ್ಯಂ ದತ್ತಂ ತವೈವ ಚ ।**
**ದಂಡಕಾರಣ್ಯರಾಜ್ಯಂ ಮೇ ಪಿತ್ರಾ ದತ್ತಂ ತಥೈವ ಚ ॥ ೨೮ ॥**
**ಅತಃ ಪಿತುರ್ವಚಃ ಕಾರ್ಯಮಾವಾಭ್ಯಾಮತಿಯತ್ನತಃ ।**
**ಪಿತುರ್ವಚನಮುಲ್ಲಂಘ್ಯ ಸ್ವತಂತ್ರೋ ಯಸ್ತು ವರ್ತತೇ ॥ ೨೯ ॥**
**ಸ ಜೀವನ್ನೇವ ಮೃತಕೋ ದೇಹಾಂತೇ ನಿರಯಂ ವ್ರಜೇತ್ ।**
**ತಸ್ಮಾದ್ರಾಜ್ಯಂ ಪ್ರಶಾಧಿ ತ್ವಂ ವಯಂ ದಂಡಕಪಾಲಕಾಃ ॥ ೩೦ ॥**

೨೬-೩೦. ''ಮಗು, ಹೇಳುವೆನು, ಕೇಳು. ನೀನು ಹೇಳಿದ್ದು ಹಾಗೆಯೇ ಸರಿ. ಆದರೆ ತಂದೆಯು ನನ್ನನ್ನು ಕುರಿತು 'ಹದಿನಾಲ್ಕು ವರ್ಷಗಳು ದಂಡಕಾರಣ್ಯದಲ್ಲಿ ವಾಸಮಾಡಿ ಅನಂತರ ಊರಿಗೆ ಬಾ, ಈಗ ಭರತನಿಗೇ ಎಲ್ಲಾ ರಾಜ್ಯವನ್ನೂ ನಾನು ಕೊಟ್ಟಿದ್ದೇನೆ'-ಎಂದು ಹೇಳಿದ್ದನು. ಆದ್ದರಿಂದ ನಿನಗೆ ರಾಜ್ಯವು ಕೊಡಲ್ಪಟ್ಟಿದೆಯೆಂಬುದು ತಂದೆಯಕಡೆಯಿಂದಲೇ ಸ್ಪಷ್ಟವಾಗಿದೆ. ಹಾಗೆಯೇ ನನಗೆ ದಂಡಕಾರಣ್ಯರಾಜ್ಯವು ತಂದೆಯಿಂದ ಕೊಡಲ್ಪಟ್ಟಿದೆ. ಆದ್ದರಿಂದ ನಾವಿಬ್ಬರೂ ತಂದೆಯ ಮಾತನ್ನು ಪ್ರಯತ್ನಪೂರ್ವಕವಾಗಿ ನಡೆಯಿಸಬೇಕು. ತಂದೆಯ ಮಾತನ್ನು ಮೀರಿ ಸ್ವೇಚ್ಛೆಯಿಂದ ಯಾವನು ನಡೆಯುವನೋ ಅವನು ಬದುಕಿದ್ದರೂ ಸತ್ತಂತೆಯೇ ಸರಿ ; ಕಡೆಯಲ್ಲಿ ನರಕಕ್ಕೂ ಹೋಗುವನು. ಆದ್ದರಿಂದ ನೀನು ರಾಜ್ಯಭಾರಮಾಡುವವನಾಗು. ನಾವು ದಂಡಕಾರಣ್ಯವನ್ನು ಕಾಯುತ್ತೇವೆ.''

**ಭರತಸ್ತ್ವಬ್ರವೀದ್ರಾಮಂ ಕಾಮುಕೋ ಮೂಢಧೀಃ ಪಿತಾ ।**
**ಸ್ತ್ರೀಜಿತೋ ಭ್ರಾಂತಹೃದಯ ಉನ್ಮತ್ತೋ ಯದಿ ವಕ್ಷ್ಯತಿ ॥ ೩೧ ॥**
**ತತ್ಸತ್ಯಮಿತಿ ನ ಗ್ರಾಹ್ಯಂ ಭ್ರಾಂತವಾಕ್ಯಂ ಯಥಾ ಸುಧೀಃ ।**

೩೧. ಭರತನು ರಾಮನನ್ನು ಕುರಿತು ಹೀಗೆಂದನು : ''ಕಾಮವಶನಾಗಿಯೂ ಮೂಢಬುದ್ಧಿಯವನಾಗಿಯೂ ಹೆಂಗಸಿಗೆ ಸೋತವನೂ ಅರಳುಮರಳು ಮನಸ್ಸಿನವನೂ ಹುಚ್ಚನೂ ಆದ ತಂದೆಯು ಏನನ್ನಾದರೂ ಹೇಳಿದ್ದಲ್ಲಿ ನೀನು ಅದನ್ನು ನಿಜವೆಂದೆಣಿಸಬೇಡ. ವಿದ್ವಾಂಸನಾದವನು ಹೇಗೆ ಭ್ರಾಂತನ ಮಾತನ್ನು ತಳ್ಳಿಹಾಕುವನೋ ಹಾಗೆ ತಳ್ಳಿಹಾಕು:''

**ಶ್ರೀರಾಮ ಉವಾಚ-**

**ನ ಸ್ತ್ರೀಜಿತಃ ಪಿತಾ ಬ್ರೂಯಾನ್ನ ಕಾಮೀ ನೈವ ಮೂಢಧೀಃ ।**
**ಪೂರ್ವಂ ಪ್ರತಿಶ್ರುತಂ ತಸ್ಯೈ ಸತ್ಯವಾದೀ ದದೌ ಭಯಾತ್ ॥ ೩೨ ॥**
**ಅಸತ್ಯಾದ್ ಭೀತಿರಧಿಕಾ ಮಹತಾಂ ನರಕಾದಪಿ ।**
**ಕರೋಮೀತ್ಯಹಮಪ್ಯೇತತ್ ಸತ್ಯಂ ತಸ್ಯೈ ಪ್ರತಿಶ್ರುತಮ್ ॥ ೩೩ ॥**
**ಕಥಂ ವಾಕ್ಯಮಹಂ ಕುರ್ಯಾಮಸತ್ಯಂ ರಾಘವೋ ಹಿ ಸನ್ ।**

೩೨-೩೩. ಶ್ರೀರಾಮನು ಇಂತೆಂದನು : 'ತಂದೆಯು ಹೆಂಗಸಿಗೆ ಸೋತಾಗಲಿ, ಕಾಮಪರವಶನಾಗಿಯಾಗಲಿ, ಮೂಢತನದಿಂದಲಾಗಲಿ ಎಂದಿಗೂ ಹಾಗೆ ಹೇಳಿರುವದಿಲ್ಲ. ಮತ್ತೇನೆಂದರೆ : ಈ ಹಿಂದೆಯೇ ಆಕೆಗೆ (ಕೈಕೇಯಿಗೆ) ವರವನ್ನು ಕೊಟ್ಟುಬಿಟ್ಟಿದ್ದನು. ಸತ್ಯವಾದಿಯಾದ ಆತನು ಸುಳ್ಳಿಗೆ ಹೆದರಿ ಈಗ ವರಗಳನ್ನು ನೆರವೇರಿಸಿಕೊಟ್ಟಿರುತ್ತಾನೆ. ಮಹಾತ್ಮರಿಗೆ ನರಕಕ್ಕಿಂತಲೂ ಸುಳ್ಳಿನ ವಿಷಯದಲ್ಲಿ ಹೆಚ್ಚಿನ ಭಯವಿರುವದು. ನಾನು ಕೂಡ ಆಕೆಗೆ ನಡೆಯಿಸಿಕೊಡುತ್ತೇನೆಂದು ಮಾತುಕೊಟ್ಟಿದ್ದೇನೆ. ನಾನು ರಘುವಂಶದಲ್ಲಿ ಹುಟ್ಟಿದವನಾಗಿದ್ದು ಆಡಿದ ಮಾತನ್ನು ಸುಳ್ಳಾಗಿ ಹೇಗೆ ಮಾಡಲಿ?

**ಇತ್ಯುದೀರಿತಮಾಕರ್ಣ್ಯ ರಾಮಸ್ಯ ಭರತೋಽಬ್ರವೀತ್ ।**
**ತಥೈವ ಚೀರವಸನೋ ವನೇ ವತ್ಸ್ಯಾಮಿ ಸುವ್ರತ ॥ ೩೪ ॥**
**ಚತುರ್ದಶ ಸಮಾಸ್ತ್ವಂ ತು ರಾಜ್ಯಂ ಕುರು ಯಥಾಸುಖಮ್ ।**

೩೪. ಈ ರೀತಿಯಾಗಿ ಹೇಳಿದ ರಾಮನ ಮಾತಿಗೆ (ಉತ್ತರವಾಗಿ) ಭರತನು ಹೀಗೆಂದನು : ''ಎಲೈ ವ್ರತನಿಷ್ಠನೆ, ಹಾಗೇ ಸರಿ ; ತಂದೆಯ ಮಾತನ್ನು ಸತ್ಯವಾಗಿ ಮಾಡಲು (ನಿನಗಾಗಿಯೇ) ನಾನು ಹದಿನಾಲ್ಕು ವರ್ಷ ಕಾಲ ನಾರುಮಡಿಯನ್ನುಟ್ಟು ಕಾಡಿನಲ್ಲಿ ವಾಸಮಾಡುವೆನು. ನೀನಾದರೊ, ಸುಖವಾಗಿ ರಾಜ್ಯಭಾರಮಾಡುವವನಾಗು.''

**ಶ್ರೀರಾಮ ಉವಾಚ-**

**ಪಿತ್ರಾ ದತ್ತಂ ತವೈವೈತದ್ರಾಜ್ಯಂ ಮಹ್ಯಂ ವನಂ ದದೌ ।**
**ವ್ಯತ್ಯಯಂ ಯದ್ಯಹಂ ಕುರ್ಯಾಮಸತ್ಯಂ ಪೂರ್ವವತ್ ಸ್ಥಿತಮ್ ॥ ೩೫ ॥**

೩೫. ಶ್ರೀರಾಮನಿಂತೆಂದನು : 'ಈ ರಾಜ್ಯವು ತಂದೆಯಿಂದಲೇ ನಿನಗೇ ಕೊಡಲ್ಪಟ್ಟಿದೆ. ನನಗೆ (ತಂದೆಯು) ಕಾಡನ್ನು ಕೊಟ್ಟಿರುತ್ತಾನೆ. ನಾನೇನಾದರೂ ಈ ಪ್ರತಿಜ್ಞೆಯನ್ನು ಬದಲಾಯಿಸಿದರೆ ಪುನಃ ಸುಳ್ಳನ್ನೇ ಆಡಿದವನಾಗುವೆನು'.

**ಭರತ ಉವಾಚ-**

**ಅಹಮಪ್ಯಾಗಮಿಷ್ಯಾಮಿ ಸೇವೇ ತ್ವಾಂ ಲಕ್ಷ್ಮಣೋ ಯಥಾ ।**
**ನೋ ಚೇತ್ ಪ್ರಾಯೋಪವೇಶೇನ ತ್ಯಜಾಮ್ಯೇತತ್ ಕಲೇವರಮ್ ॥ ೩೬ ॥**
**ಇತ್ಯೇವಂ ನಿಶ್ಚಯಂ ಕೃತ್ವಾ ದರ್ಭಾನಾಸ್ತೀರ್ಯ ಚಾತಪೇ ।**
**ಮನಸಾಪಿ ವಿನಿಶ್ಚಿತ್ಯ ಪ್ರಾಙ್ಮುಖೋಪವಿವೇಶ ಸಃ ॥ ೩೭ ॥**

೩೬-೩೭. ಭರತನಿಂತೆಂದನು : ''ಲಕ್ಷ್ಮಣನಂತೆಯೇ ನಾನೂ ನಿನ್ನ ಸೇವೆಯನ್ನು ಮಾಡಿಕೊಂಡು ನಿನ್ನೊಡನೆಯೇ ಬರುವೆನು. ಹಾಗಿಲ್ಲವಾದರೆ ಉಪವಾಸ ದಿಂದ ಈ ಶರೀರವನ್ನು ಇಲ್ಲಿಯೇ ಬಿಟ್ಟುಬಿಡುವೆನು''-ಹೀಗೆಂದು ನಿರ್ಣಯಿಸಿ ಬಿಸಿಲಿನಲ್ಲಿ ದರ್ಭೆಗಳನ್ನು ಹರಡಿ (ಅವುಗಳ ಮೇಲೆ) ಪೂರ್ವಾಭಿಮುಖವಾಗಿ ಕುಳಿತವನಾದನು. ಮನಸ್ಸಿನಲ್ಲಿಯೂ ಹಾಗೇ ನಿಶ್ಚಯಿಸಿಕೊಂಡನು.

**ಭರತಸ್ಯಾಪಿ ನಿರ್ಬಂಧಂ ದೃಷ್ಟ್ವಾ ರಾಮೋಽತಿವಿಸ್ಮಿತಃ ।**
**ನೇತ್ರಾಂತಸಂಜ್ಞಾಂ ಗುರವೇ ಚಕಾರ ರಘುನಂದನಃ ॥ ೩೮ ॥**

೩೮. ರಾಮನು ಕೂಡ ಭರತನ ಈ ಒತ್ತಾಯವನ್ನು ಕಂಡು ಆಶ್ಚರ್ಯ ಗೊಂಡವನಾಗಿ ಆ ರಘುನಂದನನು ಗುರುವಾದ (ವಸಿಷ್ಠ)ನಿಗೆ ಕಣ್ಣಿನ ತುದಿಯಿಂದ ಸಂಜ್ಞೆಮಾಡಿ (ತತ್ತ್ವೋಪದೇಶಮಾಡುವಂತೆ) ಸೂಚಿಸಿದನು.

**ಏಕಾಂತೇ ಭರತಂ ಪ್ರಾಹ ವಸಿಷ್ಠೋ ಜ್ಞಾನಿನಾಂ ವರಃ ।**
**ವತ್ಸ ಗುಹ್ಯಂ ಶೃಣುಷ್ವೇದಂ ಮಮ ವಾಕ್ಯಾತ್ ಸುನಿಶ್ಚಿತಮ್ ॥ ೩೯ ॥**
**ರಾಮೋ ನಾರಾಯಣಃ ಸಾಕ್ಷಾದ್ ಬ್ರಹ್ಮಣಾ ಯಾಚಿತಃ ಪುರಾ ।**
**ರಾವಣಸ್ಯ ವಧಾರ್ಥಾಯ ಜಾತೋ ದಶರಥಾತ್ಮಜಃ ॥ ೪೦ ॥**
**ಯೋಗಮಾಯಾಪಿ ಸೀತೇತಿ ಜಾತಾ ಜನಕನಂದಿನೀ ।**
**ಶೇಷೋಽಪಿ ಲಕ್ಷ್ಮಣೋ ಜಾತಃ ರಾಮಮನ್ವೇತಿ ಸರ್ವದಾ ॥ ೪೧ ॥**
**ರಾವಣಂ ಹಂತುಕಾಮಾಸ್ತೇ ಗಮಿಷ್ಯನ್ತಿ ನ ಸಂಶಯಃ ।**

೩೯-೪೧. ರಹಸ್ಯದಲ್ಲಿ ಭರತನನ್ನು ಕುರಿತು ಜ್ಞಾನಿಗಳಲ್ಲಿ ಶ್ರೇಷ್ಠನಾದ ವಸಿಷ್ಠನು ಹೀಗೆಂದನು : ''ಮಗು, ಈ ಗುಟ್ಟನ್ನು ಕೇಳು. ನನ್ನ ಮಾತು ನಿಶ್ಚಯವೆಂದು ತಿಳಿ. ರಾಮನು ಸಾಕ್ಷಾತ್ ನಾರಾಯಣನು. ಬ್ರಹ್ಮನಿಂದ ಹಿಂದೆ ಪ್ರಾರ್ಥಿಸಲ್ಪಟ್ಟವನಾಗಿ

ರಾವಣನ ವಿನಾಶಕ್ಕಾಗಿ ದಶರಥನ ಮಗನಾಗಿ ಹುಟ್ಟಿರುತ್ತಾನೆ. ಯೋಗಮಾಯೆಯು ಜನಕನಿಗೆ ಮಗಳಾಗಿ ಸೀತೆಯಾಗಿ ಹುಟ್ಟಿದ್ದಾಳೆ. ಆದಿಶೇಷನು ಲಕ್ಷ್ಮಣನಾಗಿ ಅವತರಿಸಿದ್ದಾನೆ. ಆದ್ದರಿಂದ ಯಾವಾಗಲೂ ಅವನು ರಾಮನನ್ನು ಅನುಸರಿಸುತ್ತಿರುವನು. ಇವರೆಲ್ಲರೂ ರಾವಣನನ್ನು ಕೊಲ್ಲಲು ಇಷ್ಟವುಳ್ಳವರಾಗಿ (ಕಾಡಿಗೆ) ಹೋಗಲಿದ್ದಾರೆ. ಇದರಲ್ಲಿ ಸಂಶಯವೇನೂ ಇರುವದಿಲ್ಲ.

**ಕೈಕೇಯ್ಯಾ ವರದಾನಾದಿ ಯದ್ಯನ್ನಿಷ್ಠುರಭಾಷಣಮ್ ।**
**ಸರ್ವಂ ದೇವಕೃತಂ ನೋ ಚೇದೇವಂ ಸಾ ಭಾಷಯೇತ್ ಕಥಮ್ ॥ ೪೨ ॥**
**ತಸ್ಮಾತ್ ತ್ಯಜಾಗ್ರಹಂ ತಾತ ರಾಮಸ್ಯ ವಿನಿವರ್ತನೇ ।**
**ನಿವರ್ತಸ್ವ ಮಹಾಸೈನ್ಯೈಃ ಮಾತೃಭಿಃ ಸಹಿತಃ ಪುರಮ್ ॥ ೪೩ ॥**
**ರಾವಣಂ ಸಕುಲಂ ಹತ್ವಾ ಶೀಘ್ರಮೇವಾಗಮಿಷ್ಯತಿ ।**
**ಇತಿ ಶ್ರುತ್ವಾ ಗುರೋರ್ವಾಕ್ಯಂ ಭರತೋ ವಿಸ್ಮಯಾನ್ವಿತಃ ॥ ೪೪ ॥**

೪೨-೪೪. ''ಕೈಕೇಯಿಗೆ ವರವನ್ನು ಕೊಟ್ಟದ್ದು, ಆಕೆಯು ಕಠಿನವಾಗಿ ಮಾತನಾಡಿದ್ದು - ಇದೆಲ್ಲವೂ ದೇವತೆಗಳು ಮಾಡಿದ ಕೆಲಸವೇ. ಹಾಗಿಲ್ಲದಿದ್ದರೆ ಆ ಕೈಕೇಯಿಯಾದರೂ ತಾನೇ ಹೇಗೆ (ಕೆಟ್ಟ ಮಾತುಗಳನ್ನು) ಆಡಿಯಾಳು? ಆದ್ದರಿಂದ ರಾಮನನ್ನು ಹಿಂದಿರುಗಿಸುವ ವಿಚಾರದಲ್ಲಿ ನೀನು ಹಟವನ್ನು ಬಿಡು. ತಾಯಂದಿರೊಡನೆಯೂ ದೊಡ್ಡಸೈನ್ಯದ ಜೊತೆಗೂ ಕೂಡಿ ಊರಿಗೆ ಹಿಂದಿರುಗುವನಾಗು. (ರಾಮನು) ರಾವಣನನ್ನು ಕುಲಸಮೇತವಾಗಿ ನಾಶಮಾಡಿ ಜಾಗ್ರತೆಯಾಗಿ ಹಿಂದಿರುಗಲಿದ್ದಾನೆ.'' ಹೀಗೆಂದು ಗುರುಗಳು ನುಡಿದ ಮಾತನ್ನು ಕೇಳಿ ಭರತನು ಆಶ್ಚರ್ಯಗೊಂಡನು.

**ಗತ್ವಾ ಸಮೀಪಂ ರಾಮಸ್ಯ ವಿಸ್ಮಯೋತ್ಫುಲ್ಲಲೋಚನಃ ।**
**ಪಾದುಕೇ ದೇಹಿ ರಾಜೇಂದ್ರ ರಾಜ್ಯಾಯ ತವ ಪೂಜಿತೇ ॥ ೪೫ ॥**
**ತಯೋಃ ಸೇವಾಂ ಕರೋಮ್ಯೇವ ಯಾವದಾಗಮನಂ ತವ ।**
**ಇತ್ಯುಕ್ತ್ವಾ ಪಾದುಕೇ ದಿವ್ಯೇ ಯೋಜಯಾಮಾಸ ಪಾದಯೋಃ ॥ ೪೬ ॥**
**ರಾಮಸ್ಯ ತೇ ದದೌ ರಾಮೋ ಭರತಾಯಾತಿಭಕ್ತಿತಃ ।**

೪೫-೪೬. ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ರಾಮನ ಹತ್ತಿರಕ್ಕೆ ಬಂದು ''ಎಲೈ ರಾಜೇಂದ್ರನೆ, ರಾಜ್ಯದ (ಕ್ಷೇಮ)ಕ್ಕಾಗಿ ನಿನ್ನ ಎರಡು ಪಾದುಕೆಗಳನ್ನು ಕೊಡು. ನೀನು ಬರುವವರೆಗೂ ಅವುಗಳ ಸೇವೆಯನ್ನೇ ಮಾಡಿಕೊಂಡಿರುವೆನು'' ಹೀಗೆಂದು ಹೇಳಿ ಅನರ್ಘ್ಯವಾದ ಎರಡು ಪಾದುಕೆಗಳನ್ನು ರಾಮನ ಕಾಲುಗಳಿಗೆ ತೊಡಿಸಿದನು. ರಾಮನು ಭರತನ ಭಕ್ತಿಗೆ ಮೆಚ್ಚಿ ಅವುಗಳನ್ನು ಅವನಿಗೆ ಕೊಟ್ಟನು.

**ಗೃಹೀತ್ವಾ ಪಾದುಕೇ ದಿವ್ಯೇ ಭರತೋ ರತ್ನಭೂಷಿತೇ ।**
**ರಾಮಂ ಪುನಃ ಪರಿಕ್ರಮ್ಯ ಪ್ರಣನಾಮ ಪುನಃ ಪುನಃ ॥ ೪೭ ॥**
**ಭರತಃ ಪುನರಾಹೇದಂ ಭಕ್ತ್ಯಾ ಗದ್ಗದಯಾ ಗಿರಾ ।**
**ನವ ಪಂಚ ಸಮಾಂತೇ ತು ಪ್ರಥಮೇ ದಿವಸೇ ಯದಿ ॥ ೪೮ ॥**
**ನಾಗಮಿಷ್ಯಸಿ ಚೇದ್ರಾಮ ಪ್ರವಿಶಾಮಿ ಮಹಾನಲಮ್ ।**
**ಬಾಢಮಿತ್ಯೇವ ತಂ ರಾಮೋ ಭರತಂ ಸಂನ್ಯವರ್ತಯತ್ ॥ ೪೯ ॥**

೪೭-೪೯. ರತ್ನಾಲಂಕೃತವಾದ ದಿವ್ಯವಾದ ಎರಡು ಪಾದುಕೆಗಳನ್ನು ಭರತನು ಸ್ವೀಕರಿಸಿ ಮತ್ತೊಮ್ಮೆ ರಾಮನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿದನು. ಭಕ್ತಿಯಿಂದ ಗದ್ಗದಗೊಂಡ ಕಂಠವುಳ್ಳ ಭರತನು ಮತ್ತೊಮ್ಮೆ ಹೀಗೆಂದನು : ''ಎಲೈ ರಾಮನೆ, ಹದಿನಾಲ್ಕು ವರ್ಷಗಳು ಕಳೆದ ಅನಂತರ (ಹದಿನೈದನೆಯ ವರ್ಷದ) ಮೊದಲನೆಯ ದಿನ ನೀನು ಬರಲಿಲ್ಲವಾದರೆ ನಾನು ದೊಡ್ಡಬೆಂಕಿಯನ್ನು ಪ್ರವೇಶಿಸಿಬಿಡುವೆನು.'' ರಾಮನಾದರೊ, 'ಹಾಗೇ ಆಗಲಿ, (ಬಂದೇ ಬರುವೆನು)' ಎಂದು ಭರತನನ್ನು ಹಿಂದಿರುಗಿಸಿದನು.

**ಸಸೈನ್ಯಃ ಸವಸಿಷ್ಠಶ್ಚ ಶತ್ರುಘ್ನಸಹಿತಃ ಸುಧೀಃ ।**
**ಮಾತೃಭಿರ್ಮಂತ್ರಿಭಿಃ ಸಾರ್ಧಂ ಗಮನಾಯೋಪಚಕ್ರಮೇ ॥ ೫೦ ॥**

೫೦. ವಸಿಷ್ಠರೊಡನೆ ಸೇನಾಸಮೇತನಾಗಿ ಶತ್ರುಘ್ನನೊಡಗೂಡಿ ಜಾಣನಾದ ಭರತನು ತಾಯಂದಿರು, ಮಂತ್ರಿಗಳನ್ನೂ ಕರೆದುಕೊಂಡು ಹೊರಡಲನುವಾದನು.

**ಕೈಕೇಯಿ ರಾಮೇಕಾಂತೇ ಸ್ರವನ್ನೇತ್ರಜಲಾಕುಲಾ ।**
**ಪ್ರಾಂಜಲಿಃ ಪ್ರಾಹ ಹೇ ರಾಮ ತವ ರಾಜ್ಯವಿಘಾತನಮ್ ॥ ೫೧ ॥**
**ಕೃತಂ ಮಯಾ ದುಷ್ಟಧಿಯಾ ಮಾಯಾಮೋಹಿತಚೇತಸಾ ।**
**ಕ್ಷಮಸ್ವ ಮಮ ದೌರಾತ್ಮ್ಯಂ ಕ್ಷಮಾಸಾರಾ ಹಿ ಸಾಧವಃ ॥ ೫೨ ॥**
**ತ್ವಂ ಸಾಕ್ಷಾದ್ ವಿಷ್ಣುರವ್ಯಕ್ತಃ ಪರಮಾತ್ಮಾ ಸನಾತನಃ ।**
**ಮಾಯಾಮಾನುಷರೂಪೇಣ ಮೋಹಯಸ್ಯಖಿಲಂ ಜಗತ್ ॥ ೫೩ ॥**

೫೧-೫೩. ಕೈಕೇಯಿಯು ರಾಮನನ್ನು ಏಕಾಂತದಲ್ಲಿ ಕಂಡು ಕಣ್ಣೀರು ಸುರಿಸುತ್ತಾ ಕೈಮುಗಿದುಕೊಂಡು ಹೀಗೆಂದಳು : ''ಎಲೈ ರಾಮನೆ, ನಿನ್ನ ರಾಜ್ಯಭಾರವನ್ನು ಕೆಡಿಸಿ ನಾನು ಅಪರಾಧಿಯಾಗಿದ್ದೇನೆ. ದುಷ್ಟಚಿತ್ತಳೂ ಮಾಯಾಮೋಹಿತಳೂ ಆದ ನನ್ನಿಂದ ಉಂಟಾಗಿರುವ ಈ ಕೆಟ್ಟಕೆಲಸವನ್ನು ನೀನು ಕ್ಷಮಿಸುವವನಾಗು. ಸಾಧುಗಳಿಗೆ ಕ್ಷಮೆಯೇ ಭೂಷಣವು. ನೀನಾದರೋ ಸಾಕ್ಷಾದ್ ವಿಷ್ಣುಸ್ವರೂಪನು. ಅವ್ಯಕ್ತನೂ

ಸನಾತನನೂ ಆದ ಪರಮಾತ್ಮನು; ಮಾಯಾಮನುಷ್ಯನಾಗಿ ಅವತರಿಸಿ ಎಲ್ಲಾ ಪ್ರಪಂಚವನ್ನೂ ಮೋಹಗೊಳಿಸುತ್ತಿರುವೆ.

**ತ್ವಯೈವ ಪ್ರೇರಿತೋ ಲೋಕಃ ಕುರುತೇ ಸಾಧ್ವಸಾಧು ವಾ ।**
**ತ್ವದಧೀನಮಿದಂ ವಿಶ್ವಮಸ್ವತಂತ್ರಂ ಕರೋತಿ ಕಿಮ್ ॥ ೫೪ ॥**
**ಯಥಾ ಕೃತ್ರಿಮನರ್ತಕ್ಯೋ ನೃತ್ಯಂತಿ ಕುಹಕೇಚ್ಛಯಾ ।**
**ತ್ವದಧೀನಾ ತಥಾ ಮಾಯಾ ನರ್ತಕೀ ಬಹುರೂಪಿಣೀ ॥ ೫೫ ॥**
**ತ್ವಯೈವ ಪ್ರೇರಿತಾऽಹಂ ಚ ದೇವಕಾರ್ಯಂ ಕರಿಷ್ಯತಾ ।**
**ಪಾಪಿಷ್ಠಂ ಪಾಪಮನಸಾ ಕರ್ಮಾಚರಮರಿಂದಮ ॥ ೫೬ ॥**

೫೪-೫೬. ನಿನ್ನಿಂದ ಪ್ರೇರಿಸಲ್ಪಟ್ಟ ಜೀವರುಗಳೇ ಒಳ್ಳೆಯದೊ, ಕೆಟ್ಟದ್ದೊ, ಮಾಡುವರು. ಪ್ರಪಂಚವೆಲ್ಲವೂ ನಿನಗೆ ಅಧೀನವಾಗಿದೆ. ಅಸ್ವತಂತ್ರವಾದ ಅದು ತಾನಾಗಿಯೇ ಏನು ಮಾಡೀತು ? ಕುಣಿಯುವ ಬೊಂಬೆಗಳು ಹೇಗೆ ಸೂತ್ರಧಾರನ ಇಚ್ಛೆಯಂತೆ ನರ್ತನಮಾಡುವವೋ ಹಾಗೆ ನಿನ್ನ ವಶವಾಗಿರುವ ಮಾಯೆಯು ಬಹುರೂಪಿಣಿಯಾಗಿದ್ದು ಕುಣಿಯುತ್ತಿರುವಳು. ಎಲೈ ಶತ್ರುನಾಶಕನೆ, ದೇವಕಾರ್ಯವನ್ನು ಸಾಧಿಸಲಿರುವ ನಿನ್ನಿಂದಲೇ ಪ್ರೇರಿತಳಾದ ನಾನು ಕೆಟ್ಟಮನಸ್ಸಿನಿಂದ ಈ ಪಾಪಕರ್ಮವನ್ನು ಮಾಡಿಬಿಟ್ಟೆನು.

**ಅದ್ಯ ಪ್ರತೀತೋऽಸಿ ಮಮ ದೇವಾನಾಮಪ್ಯಗೋಚರಃ ।**
**ಪಾಹಿ ವಿಶ್ವೇಶ್ವರಾನಂತ ಜಗನ್ನಾಥ ನಮೋऽಸ್ತು ತೇ ॥ ೫೭ ॥**
**ಛಿಂಧಿ ಸ್ನೇಹಮಯಂ ಪಾಶಂ ಪುತ್ರವಿತ್ತಾದಿಗೋಚರಮ್ ।**
**ತ್ವಜ್ಜ್ಞಾನಾನಲಖಡ್ಗೇಣ ತ್ವಾಮಹಂ ಶರಣಂ ಗತಾ ॥ ೫೮ ॥**

೫೭-೫೮. ದೇವತೆಗಳಿಗೂ ಅದೃಶ್ಯನಾಗಿರುವ ನೀನು ಈಗ ನನಗೆ ತೋರಿಕೊಂಡಿರುವೆ. ಎಲೈ ವಿಶ್ವೇಶ್ವರನೆ, ಅನಂತನೆ, ಜಗನ್ನಾಥನೆ, ಕಾಪಾಡು. ನಿನಗೆ ನಮಸ್ಕಾರವಿರಲಿ ! ಮೋಹರೂಪವಾದ ಮಗ, ಐಶ್ವರ್ಯ -ಮುಂತಾದ ರೀತಿಯ ಈ (ಸ್ನೇಹ) ಪಾಶವನ್ನು ನಿನ್ನ ಜ್ಞಾನವೆಂಬ ಪ್ರಕಾಶಮಾನವಾದ ಕತ್ತಿಯಿಂದ ಕತ್ತರಿಸುವವನಾಗು. ನಾನು ನಿನಗೆ ಶರಣುಬಂದಿರುವೆನು.

**ಕೈಕೇಯ್ಯಾ ವಚನಂ ಶ್ರುತ್ವಾ ರಾಮಃ ಸಸ್ಮಿತಮಬ್ರವೀತ್ ।**
**ಯದಾಹ ಮಾಂ ಮಹಾಭಾಗೇ ನಾನೃತಂ ಸತ್ಯಮೇವ ತತ್ ॥ ೫೯ ॥**
**ಮಯೈವ ಪ್ರೇರಿತಾ ವಾಣೀ ತವ ವಕ್ತ್ರಾದ್ ವಿನಿರ್ಗತಾ ।**
**ದೇವಕಾರ್ಯಾರ್ಥಸಿದ್ಧ್ಯರ್ಥಮತ್ರ ದೋಷಃ ಕುತಸ್ತವ ॥ ೬೦ ॥**

**ಗಚ್ಛ ತ್ವಂ ಹೃದಿ ಮಾಂ ನಿತ್ಯಂ ಭಾವಯಂತೀ ದಿವಾನಿಶಮ್ ।**
**ಸರ್ವತ್ರ ವಿಗತಸ್ನೇಹಾ ಮದ್ಭಕ್ತ್ಯಾ ಮೋಕ್ಷ್ಯಸೇಽಚಿರಾದ್ ॥ ೬೧ ॥**

೫೯-೬೧. ಕೈಕೇಯಿಯ ಮಾತನ್ನು ಕೇಳಿ ಮುಗುಳುನಗುತ್ತಾ ರಾಮ ನಿಂತೆಂದನು. "ಎಲೈ ಪೂಜ್ಯಳೆ, ನನ್ನನ್ನು ಕುರಿತು ನೀನು ಹೇಳಿದ್ದೆಲ್ಲವೂ ಸುಳ್ಳಲ್ಲ; ನಿಜವೇ ಆಗಿದೆ. ನನ್ನಿಂದ ಪ್ರೇರಿಸಲ್ಪಟ್ಟ ಮಾತೇ ನಿನ್ನ ಮುಖದಿಂದ ಹೊರಬಂದಿದೆ. ಇದು ದೇವತೆಗಳ ಕೆಲಸವನ್ನು ಸಾಧಿಸುವದಕ್ಕಾಗಿಯೇ ಆಗಿದೆ. ಇದರಲ್ಲಿ ನಿನ್ನ ತಪ್ಪಾದರೂ ಏನಿದ್ದೀತು ? ನೀನಾದರೋ, ಹಗಲಿರುಳೂ ನನ್ನನ್ನೇ ಹೃದಯದಲ್ಲಿ ಚಿಂತಿಸುತ್ತಾ ಯಾವದರಲ್ಲಿಯೂ ಆಶೆಯಿಲ್ಲದವಳಾಗಿ ನನ್ನ ಭಕ್ತಿಯಿಂದ ಇದ್ದುಕೊಂಡಿರು. ಬೇಗ ಮುಕ್ತಿಯನ್ನು ಪಡೆಯುವೆ. ಇನ್ನು ನೀನು ಹೊರಡು."

**ಅಹಂ ಸರ್ವತ್ರ ಸಮದೃಗ್ ದ್ವೇಷ್ಯೋ ವಾ ಪ್ರಿಯ ಏವ ವಾ ।**
**ನಾಸ್ತಿ ಮೇ ಕಲ್ಪಕಸ್ಯೇವ ಭಜತೋಽನುಭಜಾಮ್ಯಹಮ್ ॥ ೬೨ ॥**
**ಮನ್ಮಾಯಾಮೋಹಿತಧಿಯೋ ಮಾಮಂಬ ಮನುಜಾಕೃತಿಮ್ ।**
**ಸುಖದುಃಖಾದ್ಯನುಗತಂ ಜಾನನ್ತಿ ನ ತು ತತ್ತ್ವತಃ ॥ ೬೩ ॥**
**ದಿಷ್ಟ್ಯಾ ಮದ್ಗೋಚರಂ ಜ್ಞಾನಮುತ್ಪನ್ನಂ ತೇ ಭವಾಪಹಮ್ ।**
**ಸ್ಮರಂತೀ ತಿಷ್ಠ ಭವನೇ ಲಿಪ್ಯಸೇ ನ ಚ ಕರ್ಮಭಿಃ ॥ ೬೪ ॥**

೬೨-೬೪. ನಾನು ಎಲ್ಲೆಲ್ಲಿಯೂ ಸಮದೃಷ್ಟಿಯುಳ್ಳವನು. ನನಗೆ ಬೇಡದವನಾಗಲಿ, ಬೇಕಾದವನಾಗಲಿ ಯಾರೂ ಇಲ್ಲ. ಮಾಯೆಯಿಂದ ವಸ್ತುಗಳನ್ನು ಸೃಷ್ಟಿಸುವ ಐಂದ್ರಜಾಲಿಕನಿಗೆ ಹೇಗೆ ಆ ವಸ್ತುಗಳಲ್ಲಿ ಬೇಕುಬೇಡಗಳೆಂಬ ಭಾವನೆಗಳಿರುವದಿಲ್ಲವೋ ಹಾಗೆ- ಎಂದು ತಿಳಿ. ಆದರೆ ಯಾರು ನನ್ನನ್ನು ಭಜಿಸುವರೋ ಅವರನ್ನು ನಾನು ಅನುಗ್ರಹಿಸುವೆನು. ಎಲೌ ತಾಯೆ, ನನ್ನ ಮಾಯೆಯಿಂದ ಮೋಹಿತವಾದ ಬುದ್ಧಿಯುಳ್ಳವರು ಮನುಷ್ಯಾಕಾರನಾದ ನನ್ನನ್ನು ಸುಖದುಃಖಗಳಿಂದ ಕೂಡಿರುವನೆಂದು ಭಾವಿಸಿರುವರು. ಇದು ನಿಜವಲ್ಲ. ನಿನಗಾದರೊ, ಅದೃಷ್ಟವಿಶೇಷದಿಂದ ನನ್ನ ವಿಷಯಕವಾದ ನಿಜವಾದ ಜ್ಞಾನವು ಉಂಟಾಗಿದೆ. ಇದು ಸಂಸಾರಭಯವನ್ನು ನೀಗುವದಾಗಿದೆ. ನೀನು ನನ್ನನ್ನೇ ನೆನೆಯುತ್ತಾ ಮನೆಯಲ್ಲಿಯೇ ಇದ್ದುಕೊಂಡಿರು. ನಿನಗೆ ಯಾವ ಕರ್ಮಗಳ ಲೇಪವೂ ಆಗುವದಿಲ್ಲ."

**ಇತ್ಯುಕ್ತಾ ಸಾ ಪರಿಕ್ರಮ್ಯ ರಾಮಂ ಸಾನಂದವಿಸ್ಮಯಾ ।**
**ಪ್ರಣಮ್ಯ ಶತಶೋ ಭೂಮೌ ಯಯೌ ಗೇಹಂ ಮುದಾನ್ವಿತಾ ॥ ೬೫ ॥**

೬೫. ಈ ರೀತಿಯಾಗಿ ಹೇಳಲ್ಪಟ್ಟ ಆಕೆಯು ರಾಮನನ್ನು ಆನಂದದಿಂದಲೂ ಆಶ್ಚರ್ಯದಿಂದಲೂ ಕೂಡಿ ಪ್ರದಕ್ಷಿಣೆಮಾಡಿ ನೂರಾರು ಬಾರಿ ನೆಲದಮೇಲೆ ನಮಸ್ಕರಿಸಿ ಸಂತೋಷದಿಂದ ಮನೆಗೆ ಹೊರಟಳು.

**ಭರತಸ್ತು ಸಹಾಮಾತ್ಯೈಃ ಮಾತೃಭಿರ್ಗುರುಣಾ ಸಹ ।**
**ಅಯೋಧ್ಯಾಮಗಮತ್ ಶೀಘ್ರಂ ರಾಮಮೇವಾನುಚಿಂತಯನ್ ॥ ೬೬ ॥**
**ಪೌರಜಾನಪದಾನ್ ಸರ್ವಾನಯೋಧ್ಯಾಯಾಮುದಾರಧೀಃ ।**
**ಸ್ಥಾಪಯಿತ್ವಾ ಯಥಾ ನ್ಯಾಯಂ ನಂದಿಗ್ರಾಮಂ ಯಯೌ ಸ್ವಯಮ್ ॥ ೬೭ ॥**

೬೬-೬೭. ಭರತನಾದರೊ, ಮಂತ್ರಿಗಳು, ತಾಯಂದಿರು, ಗುರುವಾದ ವಸಿಷ್ಠರೊಡಗೂಡಿ ರಾಮನನ್ನೇ ಧ್ಯಾನಿಸುತ್ತಾ ಜಾಗ್ರತೆಯಾಗಿ ಅಯೋಧ್ಯಾನಗರಿಗೆ ಬಂದನು. ಪಟ್ಟಣಿಗರನ್ನೆಲ್ಲರನ್ನೂ ಅಯೋಧ್ಯೆಯಲ್ಲಿ ಯೋಗ್ಯರೀತಿಯಲ್ಲಿ ನೆಲೆಗೊಳಿಸಿ ಉದಾರ ಬುದ್ಧಿಯಾದ ಆತನು ತಾನು ನಂದಿಗ್ರಾಮಕ್ಕೆ ಬಂದನು.

**ತತ್ರ ಸಿಂಹಾಸನೇ ನಿತ್ಯಂ ಪಾದುಕೇ ಸ್ಥಾಪ್ಯ ಭಕ್ತಿತಃ ।**
**ಪೂಜಯಿತ್ವಾ ಯಥಾ ರಾಮಂ ಗಂಧಪುಷ್ಪಾಕ್ಷತಾದಿಭಿಃ ॥ ೬೮ ॥**
**ರಾಜೋಪಚಾರೈರಖಿಲೈಃ ಪ್ರತ್ಯಹಂ ನಿಯಮವ್ರತಃ ।**
**ಫಲಮೂಲಾಶನೋ ದಾಂತೋ ಜಟಾವಲ್ಕಲಧಾರಕಃ ॥ ೬೯ ॥**
**ಅಧಃಶಾಯೀ ಬ್ರಹ್ಮಚಾರೀ ಶತ್ರುಘ್ನಸಹಿತಸ್ತದಾ ।**
**ರಾಜಕಾರ್ಯಾಣಿ ಸರ್ವಾಣಿ ಯಾವಂತಿ ಪೃಥಿವೀತಲೇ ॥ ೭೦ ॥**
**ತಾನಿ ಪಾದುಕಯೋಃ ಸಮ್ಯಕ್ ನಿವೇದಯತಿ ರಾಘವಃ ।**
**ಗಣಯನ್ ದಿವಸಾನೇವ ರಾಮಾಗಮನಕಾಂಕ್ಷಯಾ ॥ ೭೧ ॥**
**ಸ್ಥಿತೋ ರಾಮಾರ್ಪಿತಮನಾಃ ಸಾಕ್ಷಾದ್ ಬ್ರಹ್ಮಮುನಿರ್ಯಥಾ ॥**

೬೮-೭೧. ಅಲ್ಲಿ ಸಿಂಹಾಸನದಮೇಲೆ ಪಾದುಕೆಗಳನ್ನು ಭಕ್ತಿಯಿಂದ ಸ್ಥಾಪಿಸಿ ಗಂಧ, ಹೂವು, ಅಕ್ಷತೆ- ಮುಂತಾದವುಗಳಿಂದ ರಾಮನನ್ನು ಹೇಗೋ ಹಾಗೆಯೇ ಪೂಜಿಸಿ ಪ್ರತಿದಿನವೂ ನಿಯಮದಿಂದ ರಾಜೋಪಚಾರಗಳನ್ನು ಅರ್ಪಿಸಿ, ತಾನು ಮಾತ್ರ ಕಂದಮೂಲಫಲಗಳನ್ನು ತಿಂದು ಜೀವಿಸುತ್ತಾ ಜಟಾವಲ್ಕಲಗಳನ್ನುಟ್ಟು ಇಂದ್ರಿಯ ನಿಗ್ರಹ, ಬ್ರಹ್ಮಚರ್ಯಗಳಿಂದ ಕೂಡಿ ನೆಲದಮೇಲೆ ಮಲಗುತ್ತಾ ಶತ್ರುಘ್ನನೊಡನೆ ಇದ್ದುಕೊಂಡಿದ್ದನು. ಭೂಮಿಯ ಪಾಲನೆಗೆ ಅಗತ್ಯವಾದ ರಾಜನ ಯಾವ ಕೆಲಸಗಳುಂಟೋ ಅವೆಲ್ಲವನ್ನೂ ಭರತನು ಪಾದುಕೆಗಳಿಗೆ ಒಪ್ಪಿಸುತ್ತಿದ್ದನು. ರಾಮನು ಬರಲಿರುವನೆಂಬ ಆಶೆಯಿಂದ ದಿನಗಳನ್ನು ಲೆಕ್ಕಹಾಕುತ್ತಾ ಬ್ರಹ್ಮನಿಷ್ಠನಾದ ಋಷಿಯಂತೆ ರಾಮನಲ್ಲಿಯೇ ಅರ್ಪಿತವಾದ ಮನಸ್ಸುಳ್ಳವನಾಗಿ ಇದ್ದುಕೊಂಡಿದ್ದನು.

**ರಾಮಸ್ತು ಚಿತ್ರಕೂಟಾದ್ರೌ ವಸನ್ ಮುನಿಭಿರಾವೃತಃ ।**
**ಸೀತಯಾ ಲಕ್ಷ್ಮಣೇನಾಪಿ ಕಿಂಚಿತ್ ಕಾಲಮುಪಾವಸತ್ ॥ ೭೨ ॥**

**ನಾಗರಾಶ್ಚ ಸದಾ ಯಾಂತಿ ರಾಮದರ್ಶನಲಾಲಸಾಃ ।**
**ಚಿತ್ರಕೂಟಸ್ಥಿತಂ ಜ್ಞಾತ್ವಾ ಸೀತಯಾ ಲಕ್ಷ್ಮಣೇನ ಚ ॥ ೭೩ ॥**
**ದೃಷ್ಟ್ವಾ ತಜ್ಜನಸಂಬಾಧಂ ರಾಮಸ್ತತ್ಯಾಜ ತಂ ಗಿರಿಮ್ ॥**

೭೨-೭೩. ರಾಮನಾದರೊ, ಋಷಿಗಳಿಂದ ಸುತ್ತುವರೆಯಲ್ಪಟ್ಟವನಾಗಿ ಸೀತಾಲಕ್ಷ್ಮಣರೊಡನೆ ಸ್ವಲ್ಪಕಾಲ ಚಿತ್ರಕೂಟಪರ್ವತದಲ್ಲಿಯೇ ವಾಸವಾಗಿದ್ದನು. ಹೀಗೆ ಚಿತ್ರಕೂಟದಲ್ಲಿ ಸೀತಾಲಕ್ಷ್ಮಣರೊಡಗೂಡಿ ಇದ್ದುಕೊಂಡಿರುವ ರಾಮನನ್ನು ತಿಳಿದವರಾದ ನಾಗರಿಕರು ಅವನನ್ನು ದರ್ಶನಮಾಡುವ ಇಚ್ಛೆಯಿಂದ ಯಾವಾಗಲೂ ಬರಲಾರಂಭಿಸಿದರು. ರಾಮನು ಆ ಜನಗಳ ಗುಂಪನ್ನು ನೋಡಿ (ಅದರಿಂದ ಬಿಡುಗಡೆ ಹೊಂದಲು) ಆ ಬೆಟ್ಟವನ್ನು ಬಿಟ್ಟು ಹೊರಟುಬಿಟ್ಟನು.

**ದಂಡಕಾರಣ್ಯಗಮನೇ ಕಾರ್ಯಮಪ್ಯನುಚಿಂತಯನ್ ।**
**ಅನ್ವಗಾತ್ ಸೀತಯಾ ಭ್ರಾತ್ರಾ ಹ್ಯತ್ರೇರಾಶ್ರಮಮುತ್ತಮಮ್ ॥ ೭೪ ॥**
**ಸರ್ವತ್ರ ಸುಖಸಂವಾಸಂ ಜನಸಂಬಾಧವರ್ಜಿತಮ್ ।**
**ಗತ್ವಾ ಮುನಿಮುಪಾಸೀನಂ ಭಾಸಯಂತಂ ತಪೋವನಮ್ ॥ ೭೫ ॥**
**ದಂಡವತ್ ಪ್ರಣಿಪತ್ಯಾಹ ರಾಮೋಽಹಮಭಿವಾದಯೇ ॥**

೭೪-೭೫. ದಂಡಕಾರಣ್ಯಕ್ಕೆ ಹೋಗುವದರಿಂದ ಲಭಿಸುವ ಕಾರ್ಯಸಾಧನೆಯ ವಿಷಯಕ್ಕೂ ಚಿಂತಿಸುತ್ತಾ ಸೋದರನೊಡಗೂಡಿ ಸೀತೆಯೊಡನೆ ಅತ್ರಿಮಹರ್ಷಿಗಳ ಶ್ರೇಷ್ಠವಾದ ಆಶ್ರಮಕ್ಕೆ ಬಂದನು. ಅದು ಎಲ್ಲೆಲ್ಲೂ ಸುಖಕರವಾದ ವಾಸಪ್ರದೇಶವುಳ್ಳದ್ದಾಗಿ ಜನಜಂಗುಳಿಯಿಂದ ದೂರವಾಗಿತ್ತು. ಅಲ್ಲಿಗೆ ಹೋಗಿ ಬ್ರಹ್ಮಚಿಂತನೆಮಾಡುತ್ತಾ ಕುಳಿತಿದ್ದ ಹಾಗೂ ತಪೋವನವನ್ನೆಲ್ಲ ಬೆಳಗುತ್ತಿದ್ದ ಮುನಿಗೆ 'ದಂಡವತ್ ನಮಸ್ಕಾರಮಾಡುತ್ತಾ 'ನಾನು ರಾಮನು ; ವಂದಿಸುವೆನು' ಎಂದನು.

**ಪಿತುರಾಜ್ಞಾಂ ಪುರಸ್ಕೃತ್ಯ ದಂಡಕಾವನಮಾಗತಃ ।**
**ವನವಾಸಮಿಷೇಣಾಪಿ ಧನ್ಯೋಽಹಂ ದರ್ಶನಾತ್ತವ ॥ ೭೬ ॥**

೭೬. ''ತಂದೆಯ ಅಪ್ಪಣೆಯನ್ನು ಗೌರವಿಸಿ ಕಾಡಿನಲ್ಲಿ ವಾಸಮಾಡುವ ನಿಮಿತ್ತವಾಗಿ ದಂಡಕಾವನಕ್ಕೆ ಬಂದಿರುವೆನು. ತಮ್ಮ ದರ್ಶನದಿಂದ ಧನ್ಯನಾದೆನು'' ಎಂದನು.

**ಶ್ರುತ್ವಾ ರಾಮಸ್ಯ ವಚನಂ ರಾಮಂ ಜ್ಞಾತ್ವಾ ಹರಿಂ ಪರಮ್ ।**
**ಪೂಜಯಾಮಾಸ ವಿಧಿವದ್ ಭಕ್ತ್ಯಾ ಪರಮಯಾ ಮುನಿಃ ॥ ೭೭ ॥**
**ವನ್ಯೈಃ ಫಲೈಃ ಕೃತಾತಿಥ್ಯಮುಪವಿಷ್ಟಂ ರಘೂತ್ತಮಮ್ ।**
**ಸೀತಾಂ ಚ ಲಕ್ಷ್ಮಣಂ ಚೈವ ಸಂತುಷ್ಟೋ ವಾಕ್ಯಮಬ್ರವೀತ್ ॥ ೭೮ ॥**

೭೭-೭೮. ರಾಮನ ಮಾತನ್ನು ಕೇಳಿ ರಾಮನೆಂದರೆ ಪರಮನಾದ ಶ್ರೀ ಹರಿಯೇ ಎಂದು ತಿಳಿದ ಮುನಿಯು ವಿಧಿಪೂರ್ವಕವಾಗಿ ಪರಮಭಕ್ತಿಯಿಂದ ಪೂಜಿಸಿದನು. ಕಾಡಿನಲ್ಲಿ ದೊರಕುವ ಹಣ್ಣುಗಳಿಂದ ಆತಿಥ್ಯಮಾಡಲ್ಪಟ್ಟು ಕುಳಿತಿರುವ ರಾಮ, ಸೀತೆ, ಲಕ್ಷ್ಮಣರನ್ನು ಕುರಿತು ಸಂತುಷ್ಟನಾದ ಋಷಿಯು ಈ ಮಾತನ್ನು ಹೇಳಿದನು:

**ಭಾರ್ಯಾ ಮೇಽತೀವ ಸಂವೃದ್ಧಾ ಹ್ಯನಸೂಯೇತಿ ವಿಶ್ರುತಾ ।**
**ತಪಶ್ಚರಂತೀ ಸುಚಿರಂ ಧರ್ಮಜ್ಞಾ ಧರ್ಮವತ್ಸಲಾ ॥ ೭೯ ॥**
**ಅಂತಸ್ತಿಷ್ಠತಿ ತಾಂ ಸೀತಾ ಪಶ್ಯತ್ವರಿನಿಷೂದನ ।**
**ತಥೇತಿ ಜಾನಕೀಂ ಪ್ರಾಹ ರಾಮೋ ರಾಜೀವಲೋಚನಃ ॥ ೮೦ ॥**
**ಗಚ್ಛ ದೇವೀಂ ನಮಸ್ಕೃತ್ಯ ಶೀಘ್ರಮೇಹಿ ಪುನಃ ಶುಭೇ ।**
**ತಥೇತಿ ರಾಮವಚನಂ ಸೀತಾ ಚಾಪಿ ತಥಾಽಕರೋತ್ ॥ ೮೧ ॥**

೭೯-೮೧. ''ನನ್ನ ಹೆಂಡತಿಯಾದ ಅನಸೂಯೆಯೆಂಬವಳು ಬಹಳ ಮುದುಕಿಯಾಗಿದ್ದು ಧರ್ಮವನ್ನು ಬಲ್ಲವಳೂ ಧರ್ಮತತ್ಪರಳೂ ಆಗಿದ್ದು ಬಹಳ ಕಾಲ ತಪಸ್ಸುಮಾಡಿದವಳಾಗಿರುತ್ತಾಳೆ. ಆಕೆಯು ಒಳಗಿರುತ್ತಾಳೆ. ಎಲೈ ಶತ್ರುನಾಶನನೆ, ಸೀತೆಯು ಅವಳನ್ನು ಕಾಣಲಿ' - ಹೀಗೆನ್ನಲು ಕಮಲನೇತ್ರನಾದ ರಾಮನು ಸೀತೆಯನ್ನು ಕುರಿತು ಹೀಗೆಂದನು : ''ಒಳಕ್ಕೆ ಹೋಗು ; ತಾಯಿಯಾದ ಅನಸೂಯೆಯನ್ನು ನಮಸ್ಕರಿಸಿ ಮತ್ತೆ ಬೇಗನೆ ಬಾ''. ಹೀಗೆಂದು ಹೇಳಲು ರಾಮನ ಮಾತಿನಂತೆ ಸೀತೆಯು ಹಾಗೆಯೇ ಮಾಡಿದಳು.

**ದಂಡವತ್ ಪತಿತಾಮಗ್ರೇ ಸೀತಾಂ ದೃಷ್ಟ್ವಾತಿಹೃಷ್ಟಧೀಃ ।**
**ಅನಸೂಯಾ ಸಮಾಲಿಂಗ್ಯ ವತ್ಸೇ ಸೀತೇತಿ ಸಾದರಮ್ ॥ ೮೨ ॥**
**ದಿವ್ಯೇ ದದೌ ಕುಂಡಲೇ ದ್ವೇ ನಿರ್ಮಿತೇ ವಿಶ್ವಕರ್ಮಣಾ ।**
**ದುಕೂಲೇ ದ್ವೇ ದದೌ ತಸ್ಯೈ ನಿರ್ಮಲೇ ಭಕ್ತಿಸಂಯುತಾ ॥ ೮೩ ॥**

೮೨-೮೩. ದಂಡದಂತೆ ನಮಸ್ಕರಿಸಿದ ಸೀತೆಯನ್ನು ಕಂಡು ಬಹಳ ಸಂತೋಷಗೊಂಡವಳಾದ ಅನಸೂಯೆಯು ಮಗಳೆ, ಸೀತೆ, ಬಾ-ಎಂದು ಪ್ರೀತಿಯಿಂದ ಆಲಂಗಿಸಿಕೊಂಡಳು. ಆಕೆಗೆ ವಿಶ್ವಕರ್ಮನಿಂದ ತಯಾರಿಸಲ್ಪಟ್ಟಿದ್ದ ದೇವಲೋಕದ ಒಂದು ಜೊತೆ ಬೆಂಡೋಲೆಗಳನ್ನೂ ಶುಭ್ರವಾದ ಒಂದು ಜೊತೆ ರೇಷ್ಮೆಯ ಸೀರೆಗಳನ್ನೂ ಭಕ್ತಿಯಿಂದ ಕೊಟ್ಟಳು.

**ಅಂಗರಾಗಂ ಚ ಸೀತಾಯೈ ದದೌ ದಿವ್ಯಂ ಶುಭಾನನಾ ।**
**ನ ತ್ಯಕ್ಷ್ಯತೇಽಂಗರಾಗೇಣ ಶೋಭಾ ತ್ವಾಂ ಕಮಲಾನನೇ ॥ ೮೪ ॥**

**ಪಾತಿವ್ರತ್ಯಂ ಪುರಸ್ಕೃತ್ಯ ರಾಮಮನ್ವೇಹಿ ಜಾನಕಿ ।**
**ಕುಶಲೀ ರಾಘವೋ ಯಾತು ತ್ವಯಾ ಸಹ ಪುನರ್ಗೃಹಮ್ ॥ ೮೫ ॥**

೮೪-೮೫. ಮಂಗಳಮುಖಿಯಾದ (ಅನಸೂಯೆಯು) ಸೀತೆಗೆ ದಿವ್ಯವಾದ ಅಂಗರಾಗ (ಕೆನ್ನೆಗೆ ಸವರುವ ಅರಿಸಿನರೂಪವಾದ ಮಂಗಳದ್ರವ್ಯ)ವನ್ನೂ ಕೊಟ್ಟಳು. ಹಾಗೂ ಎಲೈ ಕಮಲಮುಖಿಯೆ, ಈ ಹರಿದ್ರಾಕಾಂತಿಯು ಎಂದಿಗೂ ನಿನ್ನನ್ನು ಅಗಲದೆ ಇರಲಿ ! ಜಾನಕಿಯೆ, ಪಾತಿವ್ರತ್ಯಧರ್ಮವನ್ನು ಗೌರವಿಸಿ ನೀನು ರಾಮನನ್ನು ಹಿಂಬಾಲಿಸು. ರಾಘವನು ನಿನ್ನೊಡಗೂಡಿ ಸುಖವಾಗಿ ಮತ್ತೆ ಮನೆಗೆ ಹಿಂದಿರುಗಲಿ ! ಎಂದಳು.

**ಭೋಜಯಿತ್ವಾ ಯಥಾನ್ಯಾಯಂ ರಾಮಂ ಸೀತಾಸಮನ್ವಿತಮ್ ।**
**ಲಕ್ಷ್ಮಣಂ ಚ ತದಾ ರಾಮಂ ಪುನಃ ಪ್ರಾಹ ಕೃತಾಂಜಲಿಃ ॥ ೮೬ ॥**

೮೬. (ಅತ್ರಿ ಮಹರ್ಷಿಯಾದರೋ) ಲಕ್ಷ್ಮಣ, ಸೀತಾಸಮೇತನಾದ ರಾಮನಿಗೆ ಭೋಜನವನ್ನು ಮಾಡಿಸಿ ಮತ್ತೆ ಕೈಮುಗಿದುಕೊಂಡು ಇಂತೆಂದನು:

**ರಾಮ ತ್ವಮೇವ ಭುವನಾನಿ ವಿಧಾಯ ತೇಷಾಂ**
**ಸಂರಕ್ಷಣಾಯ ಸುರಮಾನುಷತಿರ್ಯಗಾದೀನ್ ।**
**ದೇಹಾನ್ ಬಿಭರ್ಷಿ ನ ಚ ದೇಹಗುಣೈರ್ವಿಲಿಪ್ತ-**
**ಸ್ತ್ವತ್ತೋ ಬಿಭೇತ್ಯಖಿಲಮೋಹಕರೀ ಚ ಮಾಯಾ ॥ ೮೭ ॥**

೮೭. ''ಎಲೈ ರಾಮನೆ, ನೀನೇ ಎಲ್ಲಾ ಲೋಕಗಳನ್ನೂ ಸೃಷ್ಟಿಮಾಡಿದವನಾಗಿ ಅವುಗಳನ್ನು ಕಾಪಾಡುವದಕ್ಕಾಗಿ ದೇವತೆ, ಮನುಷ್ಯ, ಮೂಕಪ್ರಾಣಿಗಳ ದೇಹಗಳನ್ನೂ ಧರಿಸಿಕೊಂಡಿದ್ದೀಯೆ. ಆದರೆ ಆಯಾ ದೇಹಗುಣಗಳಿಂದ ಎಂದೂ ನೀನು ಅಂಟಲ್ಪಟ್ಟವನಾಗಿರುವದಿಲ್ಲ. ಎಲ್ಲರನ್ನೂ ಮೋಹಗೊಳಿಸುವ ಮಾಯೆಯೂ ಕೂಡ ನಿನಗೆ ಹೆದರುತ್ತಿದೆ'' (ಹೀಗೆಂದು ಹೇಳಿ ಸುಮ್ಮನಾದನು.)

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅಯೋಧ್ಯಾಕಾಂಡೇ**

**ನವಮಃ ಸರ್ಗಃ**

**॥ ಸಮಾಪ್ತಮಿದಂ ಅಯೋಧ್ಯಾಕಾಂಡಮ್ ॥**

# ಅರಣ್ಯಕಾಂಡ

## ಒಂದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**
**ಅಥ ತತ್ರ ದಿನಂ ಸ್ಥಿತ್ವಾ ಪ್ರಭಾತೇ ರಘುನಂದನಃ ।**
**ಸ್ನಾತ್ವಾ ಮುನಿಂ ಸಮಾಮಂತ್ರ್ಯ ಪ್ರಯಾಣಾಯೋಪಚಕ್ರಮೇ ॥ ೧ ॥**
**ಮುನೇ ಗಚ್ಛಾಮಹೇ ಸರ್ವೇ ಮುನಿಮಂಡಲಮಂಡಿತಮ್ ।**
**ವಿಪಿನಂ ದಂಡಕಂ ಯತ್ರ ತ್ವಮಾಜ್ಞಾತುಮಿಹಾರ್ಹಸಿ ॥ ೨ ॥**
**ಮಾರ್ಗಪ್ರದರ್ಶನಾರ್ಥಾಯ ಶಿಷ್ಯಾನಾಜ್ಞಪ್ತುಮರ್ಹಸಿ ।**

೧-೨. ಶ್ರೀ ಮಹಾದೇವನಿಂತೆಂದನು : ಶ್ರೀರಾಮನು ಅಲ್ಲಿ ಒಂದು ದಿನ ಉಳಿದಿದ್ದು ಅನಂತರ ಬೆಳಗ್ಗೆ ಸ್ನಾನಮಾಡಿ ಋಷಿಗಳಿಗೆ ತಿಳಿಸಿ ಪ್ರಯಾಣಸನ್ನದ್ಧನಾದನು. ''ಮಹರ್ಷಿಯೆ, ನಾವೆಲ್ಲರೂ ಋಷಿಗಳ ಗುಂಪಿನಿಂದ ಕೂಡಿರುವ ದಂಡಕಾರಣ್ಯ ವೆಂಬುದು ಯಾವದುಂಟೋ ಅಲ್ಲಿಗೆ ಹೋಗುತ್ತೇವೆ. ನೀನು ಅನುಜ್ಞೆಯನ್ನು ಕೊಡ ಬೇಕು. ನಮಗೆ ದಾರಿಯನ್ನು ತೋರಿಸುವದಕ್ಕಾಗಿ ಶಿಷ್ಯರಿಗೆ ಅಪ್ಪಣೆಮಾಡಬೇಕು.'' (ಎಂದನು.)

**ಶ್ರುತ್ವಾ ರಾಮಸ್ಯ ವಚನಂ ಪ್ರಹಸ್ಯಾತ್ರಿರ್ಮಹಾಯಶಾಃ ।**
**ಪ್ರಾಹ ತತ್ರ ರಘುಶ್ರೇಷ್ಠಂ ರಾಮ ರಾಮ ಸುರಾಶ್ರಯ ॥ ೩ ॥**
**ಸರ್ವಸ್ಯ ಮಾರ್ಗದ್ರಷ್ಟಾ ತ್ವಂ ತವ ಕೋ ಮಾರ್ಗದರ್ಶಕಃ ।**
**ತಥಾಪಿ ದರ್ಶಯಿಷ್ಯಂತಿ ತವ ಲೋಕಾನುಸಾರಿಣಃ ॥ ೪ ॥**
**ಇತಿ ಶಿಷ್ಯಾನ್ ಸಮಾದಿಶ್ಯ ಸ್ವಯಂ ಕಿಂಚಿತ್ತಮನ್ವಗಾತ್ ।**
**ರಾಮೇಣ ವಾರಿತಃ ಪ್ರೀತ್ಯಾ ಅತ್ರಿಃ ಸ್ವಭವನಂ ಯಯೌ ॥ ೫ ॥**

೩-೫. ರಾಮನ ಮಾತನ್ನು ಕೇಳಿ ಮಹಾಮಹಿಮನಾದ ಅತ್ರಿಯು ನಕ್ಕವನಾಗಿ ರಘುಶ್ರೇಷ್ಠನನ್ನು ಕುರಿತು ಹೀಗೆಂದನು : ''ಎಲೈ ರಾಮನೆ, ದೇವತೆಗಳಿಗೆ ಆಶ್ರಯನೆ, ನೀನು ಎಲ್ಲರಿಗೂ ದಾರಿತೋರುವವನಾಗಿದ್ದೀಯೆ. ನಿನಗೆ ಹಾದಿತೋರುವವರಾರು ? ಹೀಗಿದ್ದರೂ ಲೋಕವ್ಯವಹಾರವನ್ನು ಅನುಸರಿಸುವ ನಿನಗೆ (ಹಾದಿಯನ್ನು ತೋರಿಸೋಣ) - ಎಂದುಕೊಂಡು ಶಿಷ್ಯರಿಗೆ ಅಪ್ಪಣೆಮಾಡಿ ತಾನೂ ಸ್ವಲ್ಪದೂರ ರಾಮ ನನ್ನು ಅನುಸರಿಸಿ ಬಂದನು. ಆಗ ರಾಮನು ಪ್ರೀತಿಯಿಂದಲೇ 'ಬೇಡ'ವೆಂದು ತಡೆಯ ಲಾಗಿ ಅತ್ರಿಯು ತನ್ನ ಮನೆಗೆ ಹೋದನು.

**ಕ್ರೋಶಮಾತ್ರಂ ತತೋ ಗತ್ವಾ ದದರ್ಶ ಮಹತೀಂ ನದೀಮ್ ।**
**ಅತ್ರೇಃ ಶಿಷ್ಯಾನುವಾಚೇದಂ ರಾಮೋ ರಾಜೀವಲೋಚನಃ ॥ ೬ ॥**
**ನದ್ಯಾಃ ಸಂತರಣೇ ಕಶ್ಚಿದುಪಾಯೋ ವಿದ್ಯತೇ ನ ವಾ ।**
**ಊಚುಸ್ತೇ ವಿದ್ಯತೇ ನೌಕಾ ಸುದೃಢಾ ರಘುನಂದನ ॥ ೭ ॥**
**ತಾರಯಿಷ್ಯಾಮಹೇ ಯುಷ್ಮಾನ್ ವಯಮೇವ ಕ್ಷಣಾದಿಹ ।**
**ತತೋ ನಾವಿ ಸಮಾರೋಪ್ಯ ಸೀತಾಂ ರಾಘವಲಕ್ಷ್ಮಣೌ ॥ ೮ ॥**
**ಕ್ಷಣಾತ್ ಸಂತಾರಯಾಮಾಸುರ್ನದೀಂ ಮುನಿಕುಮಾರಕಾಃ ।**
**ರಾಮಾಭಿನಂದಿತಾಃ ಸರ್ವೇ ಜಗ್ಮುರತ್ರೇರಥಾಶ್ರಮಮ್ ॥ ೯ ॥**

೬-೯. ಕ್ರೋಶದಷ್ಟು ದೂರ (ಸುಮಾರು ಅಂತರದಷ್ಟು) ಸಾಗಿದಮೇಲೆ (ರಾಮನು) ಒಂದು ದೊಡ್ಡ ನದಿಯನ್ನು ಕಂಡನು. ರಾಜೀವನೇತ್ರನಾದ ರಾಮನು ಅತ್ರಿಋಷಿಯ ಶಿಷ್ಯರನ್ನು ಕುರಿತು ಹೀಗೆಂದನು : '' ಈ ನದಿಯನ್ನು ದಾಟಲು ಸಾಧನ ವೇನಾದರೂ ಇದ್ದೀತೊ, ಇಲ್ಲವೊ'' ? ಹೀಗೆನ್ನಲು ಅವರು ''ಎಲೈ ರಾಮನೆ, ಭದ್ರವಾದ ಒಳ್ಳೆಯ ದೋಣಿಯಿದೆ. ನಾವುಗಳೇ ಕ್ಷಣಮಾತ್ರದಲ್ಲಿ ನಿಮ್ಮನ್ನು ದಾಟಿಸುತ್ತೇವೆ'' ಎಂದರು. ಅನಂತರ ಆ ದೋಣಿಯಲ್ಲಿ ಸೀತೆಯನ್ನೂ ರಾಮಲಕ್ಷ್ಮಣರನ್ನೂ ಹತ್ತಿಸಿ ಮುನಿಕುಮಾರರು ಕ್ಷಣಕಾಲದಲ್ಲಿ ನದಿಯನ್ನು ದಾಟಿಸಿದರು. ರಾಮನಿಂದ ಪ್ರಶಂಸಿಸ ಲ್ಪಟ್ಟವರಾಗಿ ಎಲ್ಲರೂ ಅನಂತರ ಅತ್ರಿಯ ಆಶ್ರಮಕ್ಕೆ ಬಂದರು.

**ತಾವೇತ್ಯ ವಿಪಿನಂ ಘೋರಂ ಝಿಲ್ಲೀಝಂಕಾರನಾದಿತಮ್ ।**
**ನಾನಾಮೃಗಗಣಾಕೀರ್ಣಂ ಸಿಂಹವ್ಯಾಘ್ರಾದಿಭೀಷಣಮ್ ॥ ೧೦ ॥**
**ರಾಕ್ಷಸೈರ್ಘೋರರೂಪೈಶ್ಚ ಸೇವಿತಂ ರೋಮಹರ್ಷಣಮ್ ।**
**ಪ್ರವಿಶ್ಯ ವಿಪಿನಂ ಘೋರಂ ರಾಮೋ ಲಕ್ಷ್ಮಣಮಬ್ರವೀತ್ ॥ ೧೧ ॥**

೧೦-೧೧. ಅವರಿಬ್ಬರೂ ಭಯಂಕರವಾದ ಕಾಡುಕೋಣಗಳ ಝೇಂಕಾರ ದಿಂದ ಶಬ್ದಾಯಮಾನವಾದ, ಹುಲಿ, ಕರಡಿ, ಮುಂತಾದ ಭಯವುಂಟುಮಾಡುವ ಅನೇಕಮೃಗಗಳ ಗುಂಪಿನಿಂದ ತುಂಬಿದ್ದ, ಹಾಗೂ ಘೋರವಾದ ಮತ್ತು ರೋಮಾಂಚ ವುಂಟುಮಾಡುವ ರೂಪವುಳ್ಳ ರಾಕ್ಷಸರುಗಳಿಂದ ಕೂಡಿದ ಕಾಡನ್ನು ಪ್ರವೇಶಿಸಿದವ ರಾದರು. ಆಗ ರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದು ಹೇಳಿದನು.

**ಇತಃ ಪರಂ ಪ್ರಯತ್ನೇನ ಗಂತವ್ಯಂ ಸಹಿತೇನ ಮೇ ।**
**ಧನುರ್ಗುಣೇನ ಸಂಯೋಜ್ಯ ಶರಾನಪಿ ಕರೇ ದಧತ್ ॥ ೧೨ ॥**
**ಅಗ್ರೇ ಯಾಸ್ಯಾಮ್ಯಹಂ ಪಶ್ಚಾತ್ ತ್ವಮನ್ವೇಹಿ ಧನುರ್ಧರಃ ।**
**ಆವಯೋರ್ಮಧ್ಯಗಾ ಸೀತಾ ಮಾಯೇವಾತ್ಮಪರಾತ್ಮನೋಃ ॥ ೧೩ ॥**

**ಚಕ್ಷುಶ್ಚಾರಯ ಸರ್ವತ್ರ ದೃಷ್ಟಂ ರಕ್ಷೋಭಯಂ ಮಹತ್ ।**
**ವಿದ್ಯತೇ ದಂಡಕಾರಣ್ಯೇ ಶ್ರುತಪೂರ್ವಮರಿಂದಮ ॥ ೧೪ ॥**
**ಇತ್ಯೇವಂ ಭಾಷಮಾಣೌ ತೌ ಜಗ್ಮತುಃ ಸಾರ್ಧಯೋಜನಮ್ ॥**

೧೨-೧೪. ''ಇಲ್ಲಿಂದ ಮುಂದಕ್ಕೆ ನನ್ನೊಡನೆ ನೀನು ಸಹ ಎಚ್ಚರಿಕೆಯಿಂದ ಬಿಲ್ಲಿನಲ್ಲಿ ಹೆದೆಯನ್ನೇರಿಸಿ ಕೈಯಲ್ಲಿ ಬಾಣಗಳನ್ನು ಹಿಡಿದು ಹೋಗಬೇಕು. ನಾನು ಮುಂದೆ ಹೋಗುವೆನು. ಹಿಂದುಗಡೆ ನೀನು ನನ್ನನ್ನು ಅನುಸರಿಸಿ ಬಾ. ನಮ್ಮಿಬ್ಬರ ನಡುವೆ-ಜೀವ, ಪರಮಾತ್ಮರ ನಡುವೆ ಮಾಯೆಯಿರುವಂತೆ-ಸೀತೆಯು ಬರುವಳಾಗಲಿ. ಎಲ್ಲಾ ಕಡೆಗೂ ದೃಷ್ಟಿಯನ್ನು ಹೊರಳಿಸು. ರಾಕ್ಷಸರ ಕಾಟವು ಇಲ್ಲಿ ಹೆಚ್ಚಾಗಿರುತ್ತದೆ. ಎಲೈ ಶತ್ರುನಾಶಕನೆ, ದಂಡಕಾರಣ್ಯದಲ್ಲಿ ಹೀಗೆಯೇ -ಎಂದು ಹಿಂದೆ ನಾನು ಕೇಳಿದ್ದೆನು.'' ಹೀಗೆಂದು ಮಾತನಾಡುತ್ತಾ ಅವರಿಬ್ಬರೂ ಅರ್ಧಯೋಜನದಷ್ಟು ದೂರ ಹೋದರು.

**ತತ್ರೈಕಾ ಪುಷ್ಕರಿಣ್ಯಾಸ್ತೇ ಕಲ್ಹಾರಕುಮುದೋತ್ಪಲೈಃ ।**
**ಅಂಬುಜೈಃ ಶೀತಲೋದೇನ ಶೋಭಮಾನಾ ವ್ಯದೃಶ್ಯತ ॥ ೧೫ ॥**
**ತತ್ಸಮೀಪಮಥೋ ಗತ್ವಾ ಪೀತ್ವಾ ತತ್ಸಲಿಲಂ ಶುಭಮ್ ।**
**ಊಷುಸ್ತೇ ಸಲಿಲಾಭ್ಯಾಶೇ ಕ್ಷಣಂ ಛಾಯಾಮುಪಾಶ್ರಿತಾಃ ॥ ೧೬ ॥**

೧೫-೧೬. ಅಲ್ಲಿ ಒಂದು ಕೊಳವಿತ್ತು. ಅದು ಕಲ್ಹಾರ, ಕುಮುದ, ನೈದಿಲೆ, ಕಮಲ- ಮುಂತಾದ ಹೂಗಳಿಂದ ಕೂಡಿದ್ದು ತಂಪಾದ ನೀರುಳ್ಳದ್ದಾಗಿ ಶೋಭಾಯಮಾನವಾಗಿ ಕಂಡಿತು. ಅವರುಗಳು ಅದರ ಸಮೀಪಕ್ಕೆ ಹೋಗಿ ಆ ನೀರನ್ನು ಕುಡಿದು ಕ್ಷಣಕಾಲ ನೆರಳನ್ನು ಆಶ್ರಯಿಸಿ ಆ ನೀರಿನ ಹತ್ತಿರವೇ ಕುಳಿತುಕೊಂಡಿದ್ದರು.

**ತತೋ ದದೃಶುರಾಯಾಂತಂ ಮಹಾಸತ್ತ್ವಂ ಭಯಾನಕಮ್ ।**
**ಕರಾಲದಂಷ್ಟ್ರವದನಂ ಭೀಷಯಂತಂ ಸ್ವಗರ್ಜಿತೈಃ ॥ ೧೭ ॥**
**ವಾಮಾಂಸೇ ನ್ಯಸ್ತಶೂಲಾಗ್ರಗ್ರಥಿತಾನೇಕಮಾನುಷಮ್ ।**
**ಭಕ್ಷಯಂತಂ ಗಜವ್ಯಾಘ್ರಮಹಿಷಂ ವನಗೋಚರಮ್ ॥ ೧೮ ॥**
**ಜ್ಯಾರೋಪಿತಂ ಧನುರ್ಧೃತ್ವಾ ರಾಮೋ ಲಕ್ಷ್ಮಣಮಬ್ರವೀತ್ ।**
**ಪಶ್ಯ ಭ್ರಾತರ್ಮಹಾಕಾಯೋ ರಾಕ್ಷಸೋಽಯಮುಪಾಗತಃ ॥ ೧೯ ॥**
**ಆಯಾತ್ಯಭಿಮುಖಂ ನೋಽಗ್ರೇ ಭೀರೂಣಾಂ ಭಯಮಾವಹನ್ ।**
**ಸಜ್ಜೀಕೃತಧನುಸ್ತಿಷ್ಠ ಮಾ ಭೈರ್ಜನಕನಂದಿನಿ ॥ ೨೦ ॥**
**ಇತ್ಯುಕ್ತ್ವಾ ಬಾಣಮಾದಾಯ ಸ್ಥಿತೋ ರಾಮ ಇವಾಚಲಃ ॥**

೧೭-೨೦. ಅನಂತರ ದೊಡ್ಡ ದೇಹದ, ಭಯವುಂಟುಮಾಡುವ ಆಕಾರವುಳ್ಳ, ಕೋರೆದಾಡೆಗಳನ್ನು ಚಾಚಿದ ಮುಖವುಳ್ಳ, ಗರ್ಜನೆಯಿಂದ ಎಲ್ಲರನ್ನೂ ಹೆದರಿ

ಸುತ್ತಿರುವ, ಹಾಗೂ ಎಡಭುಜದ ಮೇಲೆ ಅನೇಕಮನುಷ್ಯರ ದೇಹಗಳನ್ನು ಚುಚ್ಚಿರುವ ಶೂಲವನ್ನು ಏರಿಸಿಕೊಂಡಂಥ, ಮತ್ತು ಕಾಡಿನಲ್ಲಿ ಕಂಡುಬಂದ ಆನೆ, ಹುಲಿ, ಕಾಡೆಮ್ಮೆಗಳನ್ನು ತಿನ್ನುತ್ತಾ ಬರುತ್ತಿರುವ ಒಬ್ಬ ರಾಕ್ಷಸನನ್ನು ಅವರೆಲ್ಲರೂ ನೋಡಿದರು. ಹೆದೆಯೇರಿದ ಬಿಲ್ಲನ್ನು ಹಿಡಿದ ರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು : 'ಸೋದರನೆ, ದೊಡ್ಡ ಶರೀರದ ರಾಕ್ಷಸನು ಬರುತ್ತಿದಾನೆ; ನೋಡು. ಅಂಜುಬುರುಕರಿಗೆ ಹೆದರಿಕೆಯನ್ನುಂಟುಮಾಡುತ್ತಾ ನಮ್ಮೆದುರಿಗೇ ಬರುತ್ತಿರುವನು. ನೀನು ಬಿಲ್ಲನ್ನು ಸಿದ್ಧಗೊಳಿಸಿಟ್ಟುಕೊ. ಎಲೈ ಜನಕಪುತ್ರಿಯೆ, ಹೆದರಬೇಡ.'' ಹೀಗೆಂದು ಹೇಳುತ್ತಾ ಬಾಣವನ್ನು ಕೈಗೆ ತೆಗೆದುಕೊಂಡು ಬೆಟ್ಟದಂತೆ ರಾಮನು ನಿಂತುಬಿಟ್ಟನು.

**ಸ ತು ದೃಷ್ಟ್ವಾ ರಮಾನಾಥಂ ಲಕ್ಷ್ಮಣಂ ಜಾನಕೀಂ ತದಾ ।**
**ಅಟ್ಟಹಾಸಂ ತತಃ ಕೃತ್ವಾ ಭೀಷಯನ್ನಿದಮಬ್ರವೀತ್ ॥ ೨೧ ॥**
**ಕೌ ಯುವಾಂ ಬಾಣತೂಣೀರಜಟಾವಲ್ಕಲಧಾರಿಣೌ ।**
**ಮುನಿವೇಷಧರೌ ಬಾಲೌ ಸ್ತ್ರೀಸಹಾಯೌ ಸುದುರ್ಮದೌ ॥ ೨೨ ॥**
**ಸುಂದರೌ ಬತ ಮೇ ವಕ್ತ್ರಪ್ರವಿಷ್ಟಕವಲೋಪಮೌ ।**
**ಕಿಮರ್ಥಮಾಗತೌ ಘೋರಂ ವನಂ ವ್ಯಾಲನಿಷೇವಿತಮ್ ॥ ೨೩ ॥**
**ಶ್ರುತ್ವಾ ರಕ್ಷೋವಚೋ ರಾಮಃ ಸ್ಮಯಮಾನ ಉವಾಚ ತಮ್ ॥**

೨೧-೨೩. ಅವನಾದರೊ, ಲಕ್ಷ್ಮಣ, ಸೀತೆ, ಹಾಗೂ ರಾಮನನ್ನು ನೋಡಿ ಅಟ್ಟಹಾಸದಿಂದ ನಕ್ಕು ಹೆದರಿಸುತ್ತಾ ಹೀಗೆಂದನು : 'ಬಾಣ, ಬತ್ತಳಿಕೆ, ಜಟೆ, ನಾರುಮಡಿಗಳನ್ನು ಧರಿಸಿ ಋಷಿಗಳ ವೇಷಧಾರಿಗಳಾಗಿ ಇನ್ನೂ ಪ್ರಾಯದವರಾಗಿರುವ ಹಾಗೂ ಹೆಂಗಸಿನ ಸಹಾಯ (ಜೊತೆ)ಯುಳ್ಳ ಪರಾಕ್ರಮಶಾಲಿಗಳಾದ ನೀವಿಬ್ಬರು ಯಾರು ? ಅಯ್ಯೊ, ಸುಂದರರಾದ ನೀವು ನನ್ನ ಬಾಯನ್ನು ಹೊಕ್ಕ ಆಹಾರದ ತುತ್ತಿನಂತೆ ಇರುವಿರಲ್ಲ ? ಕ್ರೂರಪ್ರಾಣಿಗಳಿಂದ ಕೂಡಿದ ಭಯಂಕರವಾದ ಕಾಡಿಗೇಕೆ ಬಂದಿರುವಿರಿ ?'' ಎಂದನು. ರಾಕ್ಷಸನ ಮಾತನ್ನು ಕೇಳಿ ರಾಮನು ಮುಗುಳುನಗೆಯಿಂದ ಹೀಗೆಂದನು :

**ಅಹಂ ರಾಮಸ್ತ್ವಯಂ ಭ್ರಾತಾ ಲಕ್ಷ್ಮಣೋ ಮಮ ಸಂಮತಃ ।**
**ಏಷಾ ಸೀತಾ ಮಮ ಪ್ರಾಣವಲ್ಲಭಾ ವಯಮಾಗತಾಃ ॥ ೨೪ ॥**
**ಪಿತೃವಾಕ್ಯಂ ಪುರಸ್ಕೃತ್ಯ ಶಿಕ್ಷಣಾರ್ಥಂ ಭವಾದೃಶಾಮ್ ।**
**ಶ್ರುತ್ವಾ ತದ್ರಾಮವಚನಮಟ್ಟಹಾಸಮಥಾಕರೋತ್ ॥ ೨೫ ॥**
**ವ್ಯಾದಾಯ ವಕ್ತ್ರಂ ಬಾಹುಭ್ಯಾಂ ಶೂಲಮಾದಾಯ ಸತ್ವರಃ ।**

೨೪-೨೫. ''ನಾನು ರಾಮನು, ಇವನು ನನಗೆ ಪ್ರೀತಿಪಾತ್ರನಾದ ಸೋದರನಾದ ಲಕ್ಷ್ಮಣನು. ಈಕೆಯು ನನಗೆ ಪ್ರಿಯಳಾದ ಹೆಂಡತಿಯಾದ ಸೀತೆಯು. ತಂದೆಯ

ಮಾತನ್ನು ಗೌರವಿಸಿ ನಾವು ನಿನ್ನಂಥವರನ್ನು ತಿದ್ದುವದಕ್ಕಾಗಿ ಇಲ್ಲಿಗೆ ಬಂದಿರುತ್ತೇವೆ.'' ಹೀಗೆನ್ನಲು ರಾಮನ ಮಾತನ್ನು ಕೇಳಿದ ಆ ರಾಕ್ಷಸನು ಘಟ್ಟಿಯಾಗಿ ನಗುತ್ತಾ ಬಾಯನ್ನು ತೆರೆದವನಾಗಿ ಎರಡು ಕೈಗಳಿಂದಲೂ ಶೂಲವನ್ನು ತೆಗೆದುಕೊಂಡು ಹೀಗೆಂದನು :

**ನ ಮಾಂ ಜಾನಾಸಿ ರಾಮ ತ್ವಂ ವಿರಾಧಂ ಲೋಕವಿಶ್ರುತಮ್ ।**
**ಮದ್ಭಯಾನ್ಮುನಯಃ ಸರ್ವೇ ತ್ಯಕ್ತ್ವಾ ವನಮಿತೋ ಗತಾಃ ॥ ೨೬ ॥**
**ಯದಿ ಜೀವಿತುಮಿಚ್ಛಾಸ್ತಿ ತ್ಯಕ್ತ್ವಾ ಸೀತಾಂ ನಿರಾಯುಧೌ ।**
**ಪಲಾಯತಂ ನ ಚೇತ್ ಶೀಘ್ರಂ ಭಕ್ಷಯಾಮಿ ಯುವಾಮಹಮ್ ॥ ೨೭ ॥**
**ಇತ್ಯುಕ್ತ್ವಾ ರಾಕ್ಷಸಃ ಸೀತಾಮಾದಾತುಮಭಿದುದ್ರುವೇ ।**

೨೬-೨೭. ''ಎಲೈ ರಾಮನೆ, ಲೋಕಪ್ರಸಿದ್ಧನಾದ ವಿರಾಧನೆಂಬುವನೇ ನಾನು-ಎಂಬುದನ್ನು ತಿಳಿಯೆಯಾ ? ನನ್ನ ಭಯದಿಂದಲೇ ಋಷಿಗಳೆಲ್ಲರೂ ಈ ಕಾಡನ್ನು ಬಿಟ್ಟು ಹೋಗಿದ್ದಾರೆ. ನಿಮ್ಮಿಬ್ಬರಿಗೂ ಬದುಕುವ ಆಶೆಯೇನಾದರೂ ಇದ್ದರೆ ಆಯುಧಗಳನ್ನು ಬಿಸುಟು, ಸೀತೆಯನ್ನು ಇಲ್ಲಿಯೇ ಬಿಟ್ಟು ಓಡಿಹೋಗಿರಿ. ಹಾಗಿಲ್ಲವಾದರೆ ನಿಮ್ಮಿಬ್ಬರನ್ನೂ ತಿಂದುಬಿಡುವೆನು.'' ಹೀಗೆಂದು ಹೇಳುತ್ತಾ ರಾಕ್ಷಸನು ಸೀತೆಯನ್ನು ಒಯ್ಯಲು ನುಗ್ಗಿಬಂದನು.

**ರಾಮಶ್ಚಿಚ್ಛೇದ ತದ್ಬಾಹೂ ಶರೇಣ ಪ್ರಹಸನ್ನಿವ ।**
**ತತಃ ಕ್ರೋಧಪರೀತಾತ್ಮಾ ವ್ಯಾದಾಯ ವಿಕಟಂ ಮುಖಮ್ ॥ ೨೮ ॥**
**ರಾಮಮಭ್ಯದ್ರವದ್ ರಾಮಶ್ಚಿಚ್ಛೇದ ಪರಿಧಾವತಃ ।**
**ಪದದ್ವಯಂ ವಿರಾಧಸ್ಯ ತದದ್ಭುತಮಿವಾಭವತ್ ॥ ೨೯ ॥**
**ತತಃ ಸರ್ಪ ಇವಾಸ್ಯೇನ ಗ್ರಸಿತುಂ ರಾಮಮಾಪತತ್ ।**
**ತತೋಽರ್ಧಚಂದ್ರಾಕಾರೇಣ ಬಾಣೇನಾಸ್ಯ ಮಹಚ್ಛಿರಃ ॥ ೩೦ ॥**
**ಚಿಚ್ಛೇದ ರುಧಿರೌಘೇಣ ಪಪಾತ ಧರಣೀತಲೇ॥**

೨೮-೩೦. ನಗುತ್ತಲೇ ಇರುವಂತೆ ರಾಮನು ಬಾಣದಿಂದ ತೋಳುಗಳನ್ನು ಕತ್ತರಿಸಿಬಿಟ್ಟನು. ಅನಂತರ ಕೋಪದಿಂದ ಕೆರಳಿದವನಾಗಿ ಆ ರಾಕ್ಷಸನು ವಿಕಾರವಾದ ತನ್ನ ಬಾಯನ್ನು ತೆರೆದು ರಾಮನ ಎದುರಿಗೆ ಬಂದನು. ರಾಮನು ಓಡಿಬರುತ್ತಿರುವ ಆ ವಿರಾಧನ ಎರಡು ಕಾಲುಗಳನ್ನೂ ಕತ್ತರಿಸಿಯೇ ಬಿಟ್ಟನು. ಅದೊಂದು ಚಮತ್ಕಾರವಾಗಿ ಕಂಡುಬಂದಿತು. ಅನಂತರ ರಾಮನನ್ನು ಹಾವಿನಂತೆ ನುಂಗಲು ಅವನು ಮೇಲೆಬಿದ್ದನು. ಕೂಡಲೇ ಅರ್ಧಚಂದ್ರಾಕಾರವಾದ ಬಾಣದಿಂದ ಇವನ ದೊಡ್ಡ ತಲೆಯನ್ನು ರಾಮನು ಕತ್ತರಿಸಿದನು. ಅದು ರಕ್ತದ ಪ್ರವಾಹದೊಡನೆ ನೆಲದಮೇಲೆ ಬಿದ್ದಿತು.

**ತತಃ ಸೀತಾ ಸಮಾಲಿಂಗ್ಯ ಪ್ರಶಶಂಸ ರಘೂತ್ತಮಮ್ ।**
**ತತೋ ದುಂದುಭಯೋ ನೇದುರ್ದಿವಿ ದೇವಗಣೇರಿತಾಃ ॥ ೩೧ ॥**
**ನನೃತುಶ್ಚಾಪ್ಸರಾ ಹೃಷ್ಟಾಃ ಜಗುರ್ಗಂಧರ್ವಕಿನ್ನರಾಃ ।**
**ವಿರಾಧಕಾಯಾದತಿಸುಂದರಾಕೃತಿಃ**
**ವಿಭ್ರಾಜಮಾನೋ ವಿಮಲಾಂಬರಾವೃತಃ ।**
**ಪ್ರತಪ್ತಚಾಮೀಕರಚಾರುಭೂಷಣೋ**
**ವ್ಯದೃಶ್ಯತಾಗ್ರೇ ಗಗನೇ ರವಿರ್ಯಥಾ ॥ ೩೨ ॥**
**ಪ್ರಣಮ್ಯ ರಾಮಂ ಪ್ರಣತಾರ್ತಿಹಾರಿಣಂ**
**ಭವಪ್ರವಾಹೋಪರಮಂ ಘೃಣಾಕರಮ್ ।**
**ಪ್ರಣಮ್ಯ ಭೂಯಃ ಪ್ರಣನಾಮ ದಂಡವತ್**
**ಪ್ರಪನ್ನಸರ್ವಾರ್ತಿಹರಂ ಪ್ರಸನ್ನಧೀಃ ॥ ೩೩ ॥**

೩೧-೩೩. ಅನಂತರ ಸೀತೆಯು ರಾಮನನ್ನು ಆಲಂಗಿಸಿಕೊಂಡು ಹೊಗಳಿದಳು. ಮತ್ತು ದೇವತೆಗಳ ಗುಂಪಿನಿಂದ ಪ್ರೇರಿಸಲ್ಪಟ್ಟಂತೆ ಆಕಾಶದಲ್ಲಿ ನಗಾರಿಗಳು ಬಾರಿಸಲ್ಪಟ್ಟವು. ಅಪ್ಸರಸ್ತ್ರೀಯರು ಕುಣಿದಾಡಿದರು. ಕಿನ್ನರರೂ ಗಂಧರ್ವರೂ ಹಾಡಿ ಹೊಗಳಿದರು. ವಿರಾಧನ ಶರೀರದಿಂದ ಅತ್ಯಂತ ಸುಂದರವಾದ ಆಕಾರವುಳ್ಳ ಶುಭ್ರವಾದ ಬಟ್ಟೆಗಳನ್ನುಟ್ಟ, ಪುಟವಿಟ್ಟ, ಚಿನ್ನದಿಂದ ಮಾಡಿದ ಒಡವೆಗಳನ್ನು ತೊಟ್ಟ, ಒಬ್ಬ ಪುರುಷನು ಆಕಾಶದಲ್ಲಿ ಸೂರ್ಯನಂತೆ ಎದುರಿಗೆ ಕಾಣಿಸಿಕೊಂಡನು. ನಮಸ್ಕರಿಸಿದವರ ಕಷ್ಟವನ್ನು ಪರಿಹರಿಸುವ ಹಾಗೂ ಸಂಸಾರಪ್ರವಾಹವನ್ನು ಶಾಂತಗೊಳಿಸುವ ದಯಾಮಯನಾದ ರಾಮನನ್ನು ವಂದಿಸಿ ಮತ್ತೆ ತಲೆಬಾಗಿ ನಮಸ್ಕರಿಸಿ ಪ್ರಸನ್ನಬುದ್ಧಿಯವನಾಗಿ ಆತನು ನಿಂತುಕೊಂಡನು.

**ವಿರಾಧ ಉವಾಚ-**

**ಶ್ರೀರಾಮ ರಾಜೀವದಲಾಯತಾಕ್ಷ**
**ವಿದ್ಯಾಧರೋಽಹಂ ವಿಮಲಪ್ರಕಾಶಃ ।**
**ದುರ್ವಾಸಸಾಽಕಾರಣಕೋಪಮೂರ್ತಿನಾ**
**ಶಪ್ತಃ ಪುರಾ ಸೋಽದ್ಯ ವಿಮೋಚಿತಸ್ತ್ವಯಾ ॥ ೩೪ ॥**
**ಇತಃ ಪರಂ ತ್ವಚ್ಚರಣಾರವಿಂದಯೋಃ**
**ಸ್ಮೃತಿಃ ಸದಾ ಮೇಽಸ್ತು ಭವೋಪಶಾಂತಯೇ ।**
**ತ್ವನ್ನಾಮಸಂಕೀರ್ತನಮೇವ ವಾಣೀ**
**ಕರೋತು ಮೇ ಕರ್ಣಪುಟಂ ತ್ವದೀಯಮ್ ॥ ೩೫ ॥**

**ಕಥಾಮೃತಂ ಪಾತು ಕರದ್ವಯಂ ತೇ**
**ಪಾದಾರವಿಂದಾರ್ಚನಮೇವ ಕುರ್ಯಾತ್ ।**
**ಶಿರಶ್ಚ ತೇ ಪಾದಯುಗಪ್ರಣಾಮಂ**
**ಕರೋತು ನಿತ್ಯಂ ಭವದೀಯಮೇವಮ್ ॥ ೩೬ ॥**

೩೪-೩೬. ವಿರಾಧನಿಂತೆಂದನು : ಎಲೈ ರಾಮನೆ, ಕಮಲನೇತ್ರನೆ, ನಾನೊಬ್ಬ ಶುದ್ಧಪ್ರಕಾಶರೂಪನಾದ ವಿದ್ಯಾಧರನು. ಕಾರಣವಿಲ್ಲದೆ ಕೋಪಗೊಳ್ಳುವ ಸ್ವಭಾವದವನಾದ ದುರ್ವಾಸನಿಂದ ಹಿಂದೆ ಶಾಪವನ್ನು ಹೊಂದಿದ್ದೆನು. ಈಗ ನಿನ್ನಿಂದ ಬಿಡಿಸಲ್ಪಟ್ಟೆನು. ಇನ್ನು ಮುಂದೆ ನಿನ್ನ ಪಾದಾರವಿಂದಗಳಲ್ಲಿಯೇ ನನಗೆ ಯಾವಾಗಲೂ ಸಂಸಾರತಾಪನಾಶಕ್ಕಾಗಿ ನೆನಪು ಉಳಿದುಕೊಳ್ಳಲಿ. ನಿನ್ನ ನಾಮಸಂಕೀರ್ತನೆಯನ್ನೇ ನನ್ನ ನಾಲಗೆಯು ಮಾಡುತ್ತಿರಲಿ, ನಿನ್ನ ಕಥಾಮೃತವನ್ನೇ ನನ್ನ ಕಿವಿಗಳು ಕುಡಿಯುತ್ತಿರಲಿ. ನನ್ನ ಎರಡು ಕೈಗಳೂ ನಿನ್ನ ಪಾದಕಮಲಗಳ ಪೂಜೆಯನ್ನೇ ಮಾಡುತ್ತಿರಲಿ. ಮತ್ತು ನನ್ನ ತಲೆಯು ಕೂಡ ನಿನ್ನ ಎರಡು ಕಾಲುಗಳನ್ನು ನಮಸ್ಕರಿಸುತ್ತಿರಲಿ.

**ನಮಸ್ತುಭ್ಯಂ ಭಗವತೇ ವಿಶುದ್ಧಜ್ಞಾನಮೂರ್ತಯೇ ।**
**ಆತ್ಮಾರಾಮಾಯ ರಾಮಾಯ ಸೀತಾರಾಮಾಯ ವೇಧಸೇ ॥ ೩೭ ॥**
**ಪ್ರಪನ್ನಂ ಪಾಹಿ ಮಾಂ ರಾಮ ಯಾಸ್ಯಾಮಿ ತ್ವದನುಜ್ಞಯಾ ।**
**ದೇವಲೋಕಂ ರಘುಶ್ರೇಷ್ಠ ಮಾಯಾ ಮಾಂ ಮಾವೃಣೋತು ತೇ ॥**
**ಇತಿ ವಿಜ್ಞಾಪಿತಸ್ತೇನ ಪ್ರಸನ್ನೋ ರಘುನಂದನಃ ।**
**ವರಂ ದದೌ ತದಾ ಪ್ರೀತೋ ವಿರಾಧಾಯ ಮಹಾಮತಿಃ ॥ ೩೯ ॥**

೩೭-೩೯. ''ಪರಿಶುದ್ಧಜ್ಞಾನಸ್ವರೂಪನಾದ ಆತ್ಮಾರಾಮನಾದ, ಸೀತಾರಾಮನಾದ ಬ್ರಹ್ಮನೇ ಆಗಿರುವ ರಾಮನಿಗೆ ನಮಸ್ಕಾರವು. ಎಲೈ ರಾಮನೆ, ಶರಣಾಗತನಾದ ನನ್ನನ್ನು ಕಾಪಾಡು. ನಿನ್ನ ಅಪ್ಪಣೆಯಂತೆ ಎಲೈ ರಘುಶ್ರೇಷ್ಠನೆ, ದೇವಲೋಕಕ್ಕೆ ಹೋಗುವೆನು. ಮಾಯೆಯು ನನ್ನನ್ನು ಸುತ್ತುವರೆಯದೆ ಇರಲಿ.'' ಹೀಗೆ ಪ್ರಾರ್ಥಿಸಲಾಗಿ ಮಹಾಮತಿಯಾದ ರಾಮನು ಪ್ರಸನ್ನನಾಗಿ ಸಂತೋಷದಿಂದ ವಿರಾಧನಿಗೆ ವರವನ್ನು ಕೊಟ್ಟನು.

**ಗಚ್ಛ ವಿದ್ಯಾಧರಾಶೇಷಮಾಯಾದೋಷಗುಣಾ ಜಿತಾಃ ।**
**ತ್ವಯಾ ಮದ್ದರ್ಶನಾತ್ ಸದ್ಯೋ ಮುಕ್ತೋ ಜ್ಞಾನವತಾಂ ವರಃ ॥ ೪೦ ॥**
**ಮದ್ಭಕ್ತಿರ್ದುರ್ಲಭಾ ಲೋಕೇ ಜಾತಾ ಚೇನ್ಮುಕ್ತಿದಾ ಯತಃ ।**
**ಅತಸ್ತ್ವಂ ಭಕ್ತಿಮಾಪನ್ನಃ ಪರಂ ಯಾಹಿ ಮಮಾಜ್ಞಯಾ ॥ ೪೧ ॥**

**ರಾಮೇಣ ರಕ್ಷೋ ನಿಧನಂ ಸುಘೋರಂ**
**ಶಾಪಾದ್ವಿಮುಕ್ತಿರ್ವರದಾನಮೇವಮ್ ।**
**ವಿದ್ಯಾಧರತ್ವಂ ಪುನರೇವ ಲಬ್ಧಂ**
**ರಾಮಂ ಗೃಣನ್ನೇತಿ ನರೋಽಖಿಲಾರ್ಥಾನ್ ॥ ೪೨ ॥**

೪೦-೪೨. "ಎಲೈ ವಿದ್ಯಾಧರನೆ, ನೀನು ಹೊರಡು. ಮಾಯಾನಿಮಿತ್ತವಾದ ಗುಣದೋಷಗಳನ್ನೆಲ್ಲ ನೀನು ಗೆದ್ದಿರುವೆ. ನೀನು ನನ್ನನ್ನು ದರ್ಶನಮಾಡಿದ್ದರಿಂದ ಕೂಡಲೆ ಮುಕ್ತನಾಗಿ ಜ್ಞಾನಿಗಳಲ್ಲಿ ಶ್ರೇಷ್ಠನಾಗಿರುವೆ. ನನ್ನ ಭಕ್ತಿಯು ಲೋಕದ ಜನರಿಗೆ ದುರ್ಲಭವು. ಆದರೆ ಅದು ಉಂಟಾದದ್ದೇ ಆದರೆ ಮುಕ್ತಿಯನ್ನು ಕೊಟ್ಟೇಕೊಡುವದು. ಆದ್ದರಿಂದ ಭಕ್ತಿಯನ್ನು ಪಡೆದಿರುವ ನೀನು ನನ್ನ ಅಪ್ಪಣೆಯಂತೆ ಪರಮವಾದ ಮೋಕ್ಷವನ್ನು ಹೊಂದು."- ಎಂದು ಅನುಗ್ರಹಿಸಿದನು. ರಾಮನು ಭಯಂಕರನಾದ ರಾಕ್ಷಸನನ್ನು ಸಂಹರಿಸಿದ್ದು, ಶಾಪದಿಂದ ಅವನು ಬಿಡುಗಡೆ ಹೊಂದಿದ್ದು, ರಾಮನು ವಿದ್ಯಾಧರನಿಗೆ ವರವನ್ನು ಕೊಟ್ಟದ್ದು, ಅವನು ಮತ್ತೆ ವಿದ್ಯಾಧರತ್ವವನ್ನು ಪಡೆದುಕೊಂಡದ್ದು - ಹೀಗೆ(ಂಬ ಕಥೆಯಿಂದ) ರಾಮನನ್ನು ಸ್ತುತಿಸುವ ಮನುಷ್ಯನು ಸಕಲ ಇಷ್ಟಾರ್ಥಗಳನ್ನೂ ಪಡೆದುಕೊಳ್ಳುವನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ಪ್ರಥಮಃ ಸರ್ಗಃ**

## ಎರಡನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ವಿರಾಧೇ ಸ್ವರ್ಗತೇ ರಾಮೋ ಲಕ್ಷ್ಮಣೇನ ಚ ಸೀತಯಾ ।**
**ಜಗಾಮ ಶರಭಂಗಸ್ಯ ವನಂ ಸರ್ವಸುಖಾವಹಮ್ ॥ ೧ ॥**
**ಶರಭಂಗಸ್ತತೋ ದೃಷ್ಟ್ವಾ ರಾಮಂ ಸೌಮಿತ್ರಿಣಾ ಸಹ ।**
**ಆಯಾಂತಂ ಸೀತಯಾ ಸಾರ್ಧಂ ಸಂಭ್ರಮಾದುತ್ಥಿತಃ ಸುಧೀಃ ॥ ೨ ॥**
**ಅಭಿಗಮ್ಯ ಸುಸಂಪೂಜ್ಯ ವಿಷ್ಟರೇಷೂಪವೇಶಯತ್ ।**
**ಆತಿಥ್ಯಮಕರೋತ್ತೇಷಾಂ ಕಂದಮೂಲಫಲಾದಿಭಿಃ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ವಿರಾಧನು ಸ್ವರ್ಗಕ್ಕೆ ಹೊರಟು ಹೋಗಲಾಗಿ ರಾಮನು ಸೀತಾಲಕ್ಷ್ಮಣರೊಡನೆ ಎಲ್ಲರಿಗೂ ಸುಖಕರವಾಗಿರುವ ಶರಭಂಗನ ವನಕ್ಕೆ ಬಂದನು. ಅನಂತರ ಸೀತೆ ಹಾಗೂ ಲಕ್ಷ್ಮಣನೊಡನೆ ಬರುತ್ತಿರುವ ರಾಮನನ್ನು ಜ್ಞಾನಿಯಾದ ಶರಭಂಗಋಷಿಯು ನೋಡಿದವನಾಗಿ ಸಂಭ್ರಮದಿಂದ ಮೇಲಕ್ಕೆದ್ದನು. ಎದುರುಗೊಂಡವನಾಗಿ ಗೌರವಿಸಿ ದರ್ಭಾಸನದಲ್ಲಿ ಕುಳ್ಳಿರಿಸಿದನು. ಕಂದಮೂಲಫಲಗಳಿಂದ ಅವರುಗಳಿಗೆ ಆತಿಥ್ಯವನ್ನೂ ಮಾಡಿದನು.

**ಪ್ರೀತ್ಯಾಹ ಶರಭಂಗೋಽಪಿ ರಾಮಂ ಭಕ್ತಪರಾಯಣಮ್ ।**
**ಬಹುಕಾಲಮಿಹೈವಾಸಂ ತಪಸೇ ಕೃತನಿಶ್ಚಯಃ ॥ ೪ ॥**
**ತವ ಸಂದರ್ಶನಾಕಾಂಕ್ಷೀ ರಾಮ ತ್ವಂ ಪರಮೇಶ್ವರಃ ।**
**ಅದ್ಯ ಮತ್ತಪಸಾ ಸಿದ್ಧಂ ಯತ್ಪುಣ್ಯಂ ಬಹು ವಿದ್ಯತೇ ॥ ೫ ॥**
**ತತ್ಸರ್ವಂ ತವ ದಾಸ್ಯಾಮಿ ತತೋ ಮುಕ್ತಿಂ ವ್ರಜಾಮ್ಯಹಮ್ ॥**

೪-೫. ಭಕ್ತಪರಾಯಣನಾದ ರಾಮನನ್ನು ಕುರಿತು ಶರಭಂಗನೂ ಪ್ರೀತಿಯಿಂದ ಹೀಗೆಂದನು : 'ಎಲೈ ರಾಮನೆ, ನಿನ್ನನ್ನು ದರ್ಶನಮಾಡಬೇಕೆಂದೇ ನಾನು ತಪಸ್ಸು ಮಾಡಲು ನಿಶ್ಚಯಿಸಿ ಬಹಳ ಕಾಲದಿಂದ ಇಲ್ಲಿಯೇ ವಾಸಮಾಡಿಕೊಂಡಿದ್ದೆನು. ನೀನಾದರೋ ಪರಮೇಶ್ವರನು. ಈಗ ನನ್ನ ತಪಸ್ಸಿನಿಂದ ಸಿದ್ಧವಾಗಿರುವ ಯಾವ ಪುಣ್ಯವುಂಟೋ ಅದೆಲ್ಲವನ್ನೂ ನಿನಗೆ ಒಪ್ಪಿಸಿಬಿಡುವೆನು. ಅನಂತರ ಮುಕ್ತಿಯನ್ನು ಹೊಂದುವೆನು.

**ಸಮರ್ಪ್ಯ ರಾಮಸ್ಯ ಮಹತ್ ಸುಪುಣ್ಯ-**
**ಫಲಂ ವಿರಕ್ತಃ ಶರಭಂಗಯೋಗೀ ।**
**ಚಿತಿಂ ಸಮಾರೋಹಯದಪ್ರಮೇಯಂ**
**ರಾಮಂ ಸಸೀತಂ ಸಹಸಾ ಪ್ರಣಮ್ಯ ॥ ೬ ॥**
**ಧ್ಯಾಯಂಶ್ಚಿರಂ ರಾಮಮಶೇಷಹೃತ್ಸ್ಥಂ**
**ದೂರ್ವಾದಲಶ್ಯಾಮಲಮಂಬುಜಾಕ್ಷಮ್ ।**
**ಚೀರಾಂಬರಂ ಸ್ನಿಗ್ಧಜಟಾಕಲಾಪಂ**
**ಸೀತಾಸಹಾಯಂ ಸಹಲಕ್ಷ್ಮಣಂ ತಮ್ ॥ ೭ ॥**
**ಕೋ ವಾ ದಯಾಲುಃ ಸ್ಮೃತಕಾಮಧೇನು-**
**ರನ್ಯೋ ಜಗತ್ಯಾಂ ರಘುನಾಯಕಾದಹೋ ।**
**ಸ್ಮೃತೋ ಮಯಾ ನಿತ್ಯಮನನ್ಯಭಾಜಾ**
**ಜ್ಞಾತ್ವಾ ಸ್ಮೃತಿಂ ಮೇ ಸ್ವಯಮೇವ ಯಾತಃ ॥ ೮ ॥**

**ಪಶ್ಯತ್ವಿದಾನೀಂ ದೇವೇಶೋ ರಾಮೋ ದಾಶರಥಿಃ ಪ್ರಭುಃ ।**
**ದಗ್ಧ್ವಾ ಸ್ವದೇಹಂ ಗಚ್ಛಾಮಿ ಬ್ರಹ್ಮಲೋಕಮಕಲ್ಮಷಃ ॥ ೯ ॥**
**ಅಯೋಧ್ಯಾಧಿಪತಿರ್ಮೇಽಸ್ತು ಹೃದಯೇ ರಾಘವಃ ಸದಾ ।**
**ಯದ್ವಾಮಾಂಕೇ ಸ್ಥಿತಾ ಸೀತಾ ಮೇಘಸ್ಯೇವ ತಡಿಲ್ಲತಾ ॥ ೧೦ ॥**
**ಇತಿ ರಾಮಂ ಚಿರಂ ಧ್ಯಾತ್ವಾ ದೃಷ್ಟ್ವಾ ಚ ಪುರತಃ ಸ್ಥಿತಮ್ ।**
**ಪ್ರಜ್ವಾಲ್ಯ ಸಹಸಾ ವಹ್ನಿಂ ದಗ್ಧ್ವಾ ಪಂಚಾತ್ಮಕಂ ವಪುಃ ।**
**ದಿವ್ಯದೇಹಧರಃ ಸಾಕ್ಷಾದ್ಯಯೌ ಲೋಕಪತೇಃ ಪದಮ್ ॥ ೧೧ ॥**

೬-೧೧. ವಿರಕ್ತನಾದ ಶರಭಂಗಮಹರ್ಷಿಯು ಶ್ರೀರಾಮನಿಗೆ ಹೆಚ್ಚಿನ ತಪಃಪುಣ್ಯವನ್ನು ಸಮರ್ಪಿಸಿ ವೈರಾಗ್ಯವಂತನಾಗಿ ಅಪ್ರಮೇಯನಾದ ಸೀತಾಸಹಿತನಾದ ರಾಮನನ್ನು ನಮಸ್ಕರಿಸಿ ತಟಕ್ಕನೆ ಚಿತಿಯನ್ನೇರಿದನು. ಮತ್ತು ಹೃದಯದಲ್ಲಿ ಜಟಾಧಾರಿಯೂ ಮನೋಹರವಾದ ಮುಂಗುರುಳುಳ್ಳವನೂ ಎಲ್ಲರ ಹೃದಯನಿನಾಸಿಯೂ ದೂರ್ವೆಯಂತೆ ಹಸಿರುಮಿಶ್ರವಾದ ನೀಲಿಬಣ್ಣದವನೂ ಸೀತಾಲಕ್ಷ್ಮಣಸಹಿತನೂ ಕಮಲದಂತೆ ಕಣ್ಣುಗಳುಳ್ಳವನೂ ಆದ ರಾಮನನ್ನು ಧ್ಯಾನಿಸುತ್ತಿದ್ದನು. ''ಶ್ರೀರಾಮನನ್ನು ಹೊರತು ಬೇರೆ ಯಾವ ಕೃಪಾಳುವು ತಾನೆ ನೆನೆದವರಿಗೆ ಇಷ್ಟಾರ್ಥಪ್ರದನಾಗಿ ಈ ಜಗತ್ತಿನಲ್ಲಿದ್ದಾನು ? ಏಕೆಂದರೆ ಅನನ್ಯಭಕ್ತಿಯಿಂದ ನನ್ನಿಂದ ಸ್ಮರಿಸಲ್ಪಟ್ಟವನಾಗಿ ನನ್ನ ಸ್ಮರಣೆಗೆ ಮೆಚ್ಚಿ ತಾನೇ ಪ್ರತ್ಯಕ್ಷನಾಗಿ ಬಂದಿರುತ್ತಾನೆ. ದಾಶರಥಿಯಾದ ಪ್ರಭುವಾದ ರಾಮನು ಈಗ ನೋಡಲಿ ! ನಾನು ನನ್ನ ಶರೀರವನ್ನು ಸುಟ್ಟುಕೊಂಡು ಪಾಪರಹಿತನಾಗಿ ಬ್ರಹ್ಮಲೋಕಕ್ಕೆ ಹೋಗುವೆನು ; ಸದಾಕಾಲವೂ ಅಯೋಧ್ಯಾಧಿಪತಿಯಾದ ರಾಮನು ನನ್ನ ಹೃದಯದಲ್ಲಿ ನೆಲೆಗೊಳ್ಳಲಿ ! ಯಾವನ ಎಡಭಾಗದಲ್ಲಿ -ಮೋಡಗಳ ನಡುವಿನ ಮಿಂಚಿನಂತೆ - ಸೀತೆಯು ಇದ್ದುಕೊಂಡಿರುವಳೋ ಅಂಥ ರಾಮನು ನನ್ನಲ್ಲಿರಲಿ ! '' ಹೀಗೆಂದು ಬಹಳಕಾಲ ರಾಮನನ್ನು ಧ್ಯಾನಿಸುತ್ತಾ ಹಾಗೂ ಎದುರಿಗೇ ನಿಂತಿರುವ ಅವನನ್ನು ನೋಡುತ್ತಾ ಬೆಂಕಿಯನ್ನು ಚೆನ್ನಾಗಿ ಹೊತ್ತಿಸಿ ತಟಕ್ಕನೆ ಅದರೊಳಗೆ ಪ್ರವೇಶಿಸಿ ಪಾಂಚಭೌತಿಕಶರೀರವನ್ನು ಸುಟ್ಟುಕೊಂಡವನಾಗಿ ದಿವ್ಯದೇಹ (ತೇಜೋರೂಪವಾದ ಶರೀರ)ವನ್ನು ಧರಿಸಿ (ಪುಣ್ಯ) ಲೋಕಗಳ ಪತಿಯಾದ ಸಾಕ್ಷಾಚ್ಚತುರ್ಮುಖನ ಲೋಕವನ್ನೇ ಸೇರಿದನು.

**ತತೋ ಮುನಿಗಣಾಃ ಸರ್ವೇ ದಂಡಕಾರಣ್ಯವಾಸಿನಃ ।**
**ಆಜಗ್ಮೂ ರಾಘವಂ ದ್ರಷ್ಟುಂ ಶರಭಂಗನಿವೇಶನಮ್ ॥ ೧೨ ॥**
**ದೃಷ್ಟ್ವಾ ಮುನಿಸಮೂಹಂ ತಂ ಜಾನಕೀರಾಮಲಕ್ಷ್ಮಣಾಃ ।**
**ಪ್ರಣೇಮುಃ ಸಹಸಾ ಭೂಮೌ ಮಾಯಾಮಾನುಷರೂಪಿಣಃ ॥ ೧೩॥**

**ಆಶೀರ್ಭಿರಭಿನಂದ್ಯಾಥ ರಾಮಂ ಸರ್ವಹೃದಿ ಸ್ಥಿತಮ್ ।**
**ಊಚುಃ ಪ್ರಾಂಜಲಯಃ ಸರ್ವೇ ಧನುರ್ಬಾಣಧರಂ ಹರಿಮ್ ॥ ೧೪ ॥**

೧೨-೧೪. ಅನಂತರ ದಂಡಕಾರಣ್ಯವಾಸಿಗಳಾದ ಋಷಿಗಳೆಲ್ಲರೂ ರಾಮನನ್ನು ನೋಡುವದಕ್ಕಾಗಿ ಶರಭಂಗನ ಆಶ್ರಮಕ್ಕೆ ಬಂದರು. ಮಾಯಾಮನುಷ್ಯರಾದ ಆ ಜಾನಕೀರಾಮಲಕ್ಷ್ಮಣರು ಆ ಮುನಿಗಳ ಗುಂಪನ್ನು ಕಂಡು ಕೂಡಲೆ ನಮಸ್ಕಾರ ಮಾಡಿದರು. ಅನಂತರ ಆ ಋಷಿಗಳು ಸರ್ವರ ಹೃದಯದಲ್ಲಿಯೂ ಇರುವ ಮತ್ತು ಧನುರ್ಬಾಣಗಳನ್ನು ಹಿಡಿದಿರುವ ಹರಿಯಾದ ರಾಮನನ್ನು ಆಶೀರ್ವಾದಗಳಿಂದ ಹರಸಿ ಎಲ್ಲರೂ ಕೈಮುಗಿದುಕೊಂಡು ಹೀಗೆಂದರು:

**ಭೂಮೇರ್ಭಾರಾವತಾರಾಯ ಜಾತೋಽಸಿ ಬ್ರಹ್ಮಣಾರ್ಥಿತಃ ।**
**ಜಾನೀಮಸ್ತ್ವಾಂ ಹರಿಂ ಲಕ್ಷ್ಮೀಂ ಜಾನಕೀಂ ಲಕ್ಷ್ಮಣಂ ತಥಾ ॥ ೧೫ ॥**
**ಶೇಷಾಂಶಂ ಶಂಖಚಕ್ರೇ ದ್ವೇ ಭರತಂ ಸಾನುಜಂ ತಥಾ ।**
**ಅತಶ್ಚಾದೌ ಋಷೀಣಾಂ ತ್ವಂ ದುಃಖಂ ಮೋಕ್ತುಮಿಹಾರ್ಹಸಿ ॥ ೧೬ ॥**
**ಆಗಚ್ಛ ಯಾಮೋ ಮುನಿಸೇವಿತಾನಿ**
**ವನಾನಿ ಸರ್ವಾಣಿ ರಘೂತ್ತಮ ಕ್ರಮಾತ್ ।**
**ದ್ರಷ್ಟುಂ ಸುಮಿತ್ರಾಸುತಜಾನಕೀಭ್ಯಾಂ**
**ತದಾ ದಯಾಽಸ್ಮಾಸು ದೃಢಾ ಭವಿಷ್ಯತಿ ॥ ೧೭ ॥**
**ಇತಿ ವಿಜ್ಞಾಪಿತೋ ರಾಮಃ ಕೃತಾಂಜಲಿಪುಟೈರ್ವಿಭುಃ ।**
**ಜಗಾಮ ಮುನಿಭಿಃ ಸಾರ್ಧಂ ದ್ರಷ್ಟುಂ ಮುನಿವನಾನಿ ಸಃ ॥ ೧೮ ॥**

೧೫-೧೮. "ಭೂಭಾರವನ್ನು ಕಳೆಯುವದಕ್ಕಾಗಿ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ನೀನು ಅವತರಿಸಿರುತ್ತೀಯೆ. ನಿನ್ನನ್ನು ನಾರಾಯಣನೆಂದೂ ಜಾನಕಿಯನ್ನು ಲಕ್ಷ್ಮಿಯೆಂದೂ ಲಕ್ಷ್ಮಣನನ್ನು ಆದಿಶೇಷನೆಂದೂ ಭರತನನ್ನೂ ಅವನ ಸೋದರನ್ನೂ ಶಂಖಚಕ್ರಗಳ (ಅಂಶ)ಗಳೆಂದೂ ನಾವು ತಿಳಿದಿದ್ದೇವೆ. ಆದ್ದರಿಂದ ಮೊದಲು ನೀನು ಋಷಿಗಳ ದುಃಖವನ್ನು ಕಳೆಯುವವನಾಗಬೇಕು. ಎಲೈ ರಘುಶ್ರೇಷ್ಠನೆ, ಋಷಿಗಳಿಂದ ಸೇವಿಸಲ್ಪಟ್ಟಿರುವ ಎಲ್ಲಾ ತಪೋವನಗಳಿಗೂ ಕ್ರಮವಾಗಿ ಹೋಗೋಣ ; ಬಾ ; ಲಕ್ಷ್ಮಣಜಾನಕಿಯರೊಡಗೂಡಿ ಎಲ್ಲವನ್ನೂ ನೋಡುವೆಯಂತೆ. ಆಗ ನಮ್ಮಲ್ಲಿ ನಿನಗೆ ಕರುಣೆಯು ಖಚಿತವಾಗಿ ಉಂಟಾಗುವದು." ಹೀಗೆಂದು ಕೈಮುಗಿದು ಪ್ರಾರ್ಥಿಸಲ್ಪಟ್ಟ ವಿಭುವಾದ ರಾಮನು ಮುನಿಗಳ ವಾಸಸ್ಥಾನಗಳಾದ ತಪೋವನಗಳನ್ನು ನೋಡಲೋಸುಗ ಋಷಿಗಳೊಡಗೂಡಿ ಹೊರಟನು.

**ದದರ್ಶ ತತ್ರ ಪತಿತಾನ್ಯನೇಕಾನಿ ಶಿರಾಂಸಿ ಸಃ ।**
**ಅಸ್ಥಿಭೂತಾನಿ ಸರ್ವತ್ರ ರಾಮೋ ವಚನಮಬ್ರವೀತ್ ॥ ೧೯ ॥**
**ಅಸ್ಥೀನಿ ಕೇಷಾಮೇತಾನಿ ಕಿಮರ್ಥಂ ಪತಿತಾನಿ ವೈ ।**
**ತಮೂಚುರ್ಮುನಯೋ ರಾಮ ಋಷೀಣಾಂ ಮಸ್ತಕಾನಿ ಹಿ ॥ ೨೦ ॥**
**ರಾಕ್ಷಸೈರ್ಭಕ್ಷಿತಾನೀಶ ಪ್ರಮತ್ತಾನಾಂ ಸಮಾಧಿತಃ ।**
**ಅಂತರಾಯಂ ಮುನೀನಾಂ ತೇ ಪಶ್ಯಂತೋಽನುಚರನ್ತಿ ಹಿ ॥ ೨೧ ॥**

೧೯-೨೧. ರಾಮನು ಅಲ್ಲಿ ಬಿದ್ದಿದ್ದ ಮೂಳೆಗಳು ಮಾತ್ರ ಉಳಿದಿದ್ದಂಥ ಅನೇಕ ತಲೆಗಳನ್ನು ನೋಡಿದನು. ಮತ್ತು ಹೀಗೆಂದನು : ''ಇವು ಯಾರ ಮೂಳೆಗಳು ? ಹೀಗೇಕೆ ಬಿದ್ದಿವೆ ?'' ಆಗ ಋಷಿಗಳು ಅವನನ್ನು ಕುರಿತು ''ಎಲೈ ರಾಮನೆ, ಇವು ಋಷಿಗಳ ತಲೆಗಳು. ಧ್ಯಾನಮಗ್ನರಾಗಿ ಮೈಮರೆತಾಗ ರಾಕ್ಷಸರು ಇಂಥ ಋಷಿಗಳನ್ನು ತಿಂದು ಹಾಕಿದ್ದಾರೆ. ಅವರುಗಳು ಋಷಿಗಳ ಸಮಯವನ್ನು ಕಾದುಕೊಂಡು ಇಲ್ಲೇ ತಿರುಗುತ್ತಿರುವರು.''

**ಶ್ರುತ್ವಾ ವಾಕ್ಯಂ ಮುನೀನಾಂ ಸ ಭಯದೈನ್ಯಸಮನ್ವಿತಮ್ ।**
**ಪ್ರತಿಜ್ಞಾಮಕರೋದ್ರಾಮೋ ವಧಾಯಾಶೇಷರಕ್ಷಸಾಮ್ ॥ ೨೨ ॥**
**ಪೂಜ್ಯಮಾನಃ ಸದಾ ತತ್ರ ಮುನಿಭಿರ್ವನವಾಸಿಭಿಃ ।**
**ಜಾನಕ್ಯಾ ಸಹಿತೋ ರಾಮೋ ಲಕ್ಷ್ಮಣೇನ ಸಮನ್ವಿತಃ ॥ ೨೩ ॥**
**ಉವಾಸ ಕತಿಚಿತ್ತತ್ರ ವರ್ಷಾಣಿ ರಘುನಂದನಃ ।**

೨೨-೨೩. ಭಯ, ದೀನತೆಗಳಿಂದ ಕೂಡಿದ ಆ ಮುನಿಗಳ ಮಾತನ್ನು ಕೇಳಿದ ಶ್ರೀರಾಮನು ಸಮಸ್ತರಾಕ್ಷಸರನ್ನೂ ಸಂಹಾರಮಾಡುವದಾಗಿ ಪ್ರತಿಜ್ಞೆಮಾಡಿದನು. ವನದಲ್ಲಿರುವ ಆ ಮುನಿಗಳಿಂದ ಪೂಜಿತನಾಗಿ ಲಕ್ಷ್ಮಣಸೀತೆಯರೊಡನೆ ಕೆಲವು ವರ್ಷಗಳ ಕಾಲ ಅಲ್ಲಿಯೇ ವಾಸವಾಗಿದ್ದನು.

**ಏವಂ ಕ್ರಮೇಣ ಸಂಪಶ್ಯನ್ ಋಷೀಣಾಮಾಶ್ರಮಾನ್ ವಿಭುಃ ।**
**ಸುತೀಕ್ಷ್ಣಸ್ಯಾಶ್ರಮಂ ಪ್ರಾಗಾತ್ ಪ್ರಖ್ಯಾತಮೃಷಿಸಂಕುಲಮ್ ॥ ೨೪ ॥**
**ಸರ್ವರ್ತುಗುಣಸಂಪನ್ನಂ ಸರ್ವಕಾಲಸುಖಾವಹಮ್ ।**
**ರಾಮಮಾಗತಮಾಕರ್ಣ್ಯ ಸುತೀಕ್ಷ್ಣಃ ಸ್ವಯಮಾಗತಃ ॥ ೨೫ ॥**
**ಅಗಸ್ತ್ಯಶಿಷ್ಯೋ ರಾಮಸ್ಯ ಮಂತ್ರೋಪಾಸನತತ್ಪರಃ ।**
**ವಿಧಿವತ್ ಪೂಜಯಾಮಾಸ ಭಕ್ತ್ಯುತ್ಕಂಠಿತಲೋಚನಃ ॥ ೨೬ ॥**

೨೪-೨೬. ಈ ರೀತಿಯಾಗಿ ಒಂದೊಂದಾಗಿ ಋಷಿಗಳ ಆಶ್ರಮವನ್ನು ಸಂದರ್ಶಿಸುತ್ತಾ ವಿಭುವಾದ ರಾಮನು ಸುಪ್ರಸಿದ್ಧವೂ ಋಷಿಗಳಿಂದ ತುಂಬಿರುವದೂ

ಆಗಿರುವ ಎಲ್ಲಾ ಋತುಧರ್ಮಗಳಿಂದ ಕೂಡಿದ್ದು ಎಲ್ಲಾ ಸಮಯದಲ್ಲಿಯೂ ಹಿತಕರವಾದ ಹವಾಗುಣವುಳ್ಳ ಸುತೀಕ್ಷ್ಣಮಹರ್ಷಿಯ ಆಶ್ರಮಕ್ಕೆ ಬಂದನು. ರಾಮನು ಬಂದದ್ದನ್ನು ಕೇಳಿ ಸುತೀಕ್ಷ್ಣನು ತಾನೇ ಎದ್ದುಬಂದು ಎದುರುಗೊಂಡನು. ರಾಮಮಂತ್ರವನ್ನು ಜಪಿಸುವದರಲ್ಲಿ ನಿರತನಾಗಿದ್ದ, ಅಗಸ್ತ್ಯರ ಶಿಷ್ಯನಾದ ಈತನು ಭಕ್ತಿಯಿಂದ ಉಕ್ಕಿಬಂದ ಕಣ್ಣೀರುಳ್ಳವನಾಗಿ ವಿಧಿಪೂರ್ವಕವಾಗಿ ರಾಮನಿಗೆ ಪೂಜೆಮಾಡಿ ನಮಸ್ಕಾರವನ್ನು ಮಾಡಿದನು.

**ತ್ವನ್ಮಂತ್ರಜಾಪ್ಯಹಮನಂತಗುಣಾಪ್ರಮೇಯ**
**ಸೀತಾಪತೇ ಶಿವವಿರಿಂಚಿಸಮಾಶ್ರಿತಾಂಘ್ರೇ ।**
**ಸಂಸಾರಸಿಂಧುತರಣಾಮಲಪೋತಪಾದ**
**ರಾಮಾಭಿರಾಮ ಸತತಂ ತವ ದಾಸದಾಸಃ ॥ ೨೭ ॥**
**ಮಾಮದ್ಯ ಸರ್ವಜಗತಾಮವಿಗೋಚರಸ್ತ್ವಂ**
**ತ್ವನ್ಮಾಯಯಾ ಸುತಕಲತ್ರಗೃಹಾಂಧಕೂಪೇ ।**
**ಮಗ್ನಂ ನಿರೀಕ್ಷ್ಯ ಮಲಮುದ್ಗಲಪಿಂಡಮೋಹ-**
**ಪಾಶಾನುಬದ್ಧಹೃದಯಂ ಸ್ವಯಮಾಗತೋಽಸಿ ॥ ೨೮ ॥**
**ತ್ವಂ ಸರ್ವಭೂತಹೃದಯೇಷು ಕೃತಾಲಯೋಽಪಿ**
**ತ್ವನ್ಮಂತ್ರಜಾಪ್ಯವಿಮುಖೇಷು ಕರೋಷಿ ಮಾಯಾಮ್ ।**
**ತ್ವನ್ಮಂತ್ರಸಾಧನಪರೇಷ್ವಪಯಾತಿ ಮಾಯಾ**
**ಸೇವಾನುರೂಪಫಲದೋಽಸಿ ಯಥಾ ಮಹೀಪಃ ॥ ೨೯॥**

೨೭-೨೯. ಸುತೀಕ್ಷ್ಣನಿಂತೆಂದನು : ''ಎಲೈ ಅನಂತವಾದ ಕಲ್ಯಾಣಗುಣಸಂಪನ್ನನೂ ಅಪ್ರಮೇಯನೂ ಮನೋಹರನೂ ಆದ ರಾಮನೆ, ನಿನ್ನ ಮಂತ್ರವನ್ನೇ ಜಪಿಸುತ್ತಿರುವ ನಾನು ನಿನ್ನ ದಾಸನ ದಾಸನು. ಎಲೈ ಸೀತಾಪತಿಯೆ, ನೀನು ಬ್ರಹ್ಮ-ಶಿವಾದಿಗಳಿಂದ ಪೂಜಿಸಲ್ಪಟ್ಟ ಚರಣವುಳ್ಳವನೂ ಸಂಸಾರವೆಂಬ ಮಹಾಸಮುದ್ರವನ್ನು ದಾಟುವದಕ್ಕೆ ಹಡಗಿನಂತಿರುವ ವಿಮಲವಾದ ಪಾದಗಳುಳ್ಳವನೂ ಆಗಿರುವೆ. ಸಕಲ ಪ್ರಪಂಚಕ್ಕೂ ಅದೃಶ್ಯನಾಗಿರುವ ನೀನು, ನಿನ್ನ ಮಾಯೆಯಿಂದ ಮಗ, ಹೆಂಡತಿ, ಮನೆ-ಎಂಬ ಕತ್ತಲೆಯ ಭಾವಿಯಲ್ಲಿ ಮುಳುಗಿರುವ, ಹಾಗೂ ಕೊಳಕು - ಹೇಸಿಗೆಗಳ ಉಂಡೆಯಾದ ಶರೀರವೇ ನಾನೆಂಬ ಪಾಶದಿಂದ ಕಟ್ಟಲ್ಪಟ್ಟಿರುವ ನನ್ನನ್ನು ನೋಡಿ (ಉದ್ಧಾರ ಮಾಡಲು) (ನೀನೇ) ಪ್ರತ್ಯಕ್ಷವಾಗಿ ಬಂದಿರುವೆ. ನೀನು ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಮನೆಮಾಡಿಕೊಂಡಿರುವೆಯಾದರೂ ನಿನ್ನ ಮಂತ್ರವನ್ನು ಜಪಿಸದವರ ವಿಷಯಕ್ಕೆ ಮಾಯೆಯನ್ನು ಹರಡುತ್ತೀಯೆ. ಆದರೆ ನಿನ್ನ ನಾಮಚಿಂತನೆಯಲ್ಲಿ

ನಿರತರಾಗಿರುವವರಿಗೆ ಆ ಮಾಯೆಯು ಮೈಗರೆಯುತ್ತದೆ. ರಾಜನು ಸೇವೆಗೆ ತಕ್ಕಂತೆ ಅನುಗ್ರಹಿಸುವನಷ್ಟೆ! ನೀನೂ ಹಾಗೆಯೇ ಅನುಗ್ರಹಿಸುತ್ತಿರುವೆ.

**ವಿಶ್ವಸ್ಯ ಸೃಷ್ಟಿಲಯಸಂಸ್ಥಿತಿಹೇತುರೇಕ-**
**ಸ್ತ್ವಂ ಮಾಯಯಾ ತ್ರಿಗುಣಯಾ ವಿಧಿರೀಶವಿಷ್ಣೂ ।**
**ಭಾಸೀಶ ಮೋಹಿತಧಿಯಾಂ ವಿವಿಧಾಕೃತಿಸ್ತ್ವಂ**
**ಯದ್ವದ್ರವಿಃ ಸಲಿಲಪಾತ್ರಗತೋ ಹ್ಯನೇಕಃ ॥ ೩೦ ॥**
**ಪ್ರತ್ಯಕ್ಷತೋಽದ್ಯ ಭವತಶ್ಚರಣಾರವಿಂದಂ**
**ಪಶ್ಯಾಮಿ ರಾಮ ತಮಸಃ ಪರತಃ ಸ್ಥಿತಸ್ಯ ।**
**ದೃಗ್ರೂಪತಸ್ತ್ವಮಸತಾಮವಿಗೋಚರೋಽಪಿ**
**ತ್ವನ್ಮಂತ್ರಪೂತಹೃದಯೇಷು ಸದಾ ಪ್ರಸನ್ನಃ ॥ ೩೧ ॥**
**ಪಶ್ಯಾಮಿ ರಾಮ ತವ ರೂಪಮರೂಪಿಣೋಽಪಿ**
**ಮಾಯಾವಿಡಂಬನಕೃತಂ ಸುಮನುಷ್ಯವೇಷಮ್ ।**
**ಕಂದರ್ಪಕೋಟಿಸುಭಗಂ ಕಮನೀಯಚಾಪ-**
**ಬಾಣಂ ದಯಾರ್ದ್ರಹೃದಯಂ ಸ್ಮಿತಚಾರುವಕ್ತ್ರಮ್ ॥ ೩೨ ॥**

೩೦-೩೨. ನೀನು ಪ್ರಪಂಚದ ಉತ್ಪತ್ತಿ, ನಾಶ, ಸ್ಥಿತಿ ಇವುಗಳಿಗೆ ಒಬ್ಬನೇ ಕಾರಣನಾಗಿದ್ದು ತ್ರಿಗುಣವಾದ ಮಾಯೆಯ ನಿಮಿತ್ತವಾಗಿ ಬ್ರಹ್ಮ, ವಿಷ್ಣು, ರುದ್ರನೆಂದು ಕಂಡುಬರುತ್ತಿದ್ದೀಯೆ. ಮಾಯಾಮೋಹಿತರಾದವರಿಗಂತೂ ನಾನಾರೂಪವಾಗಿ ಕಂಡು ಬರುತ್ತಾ, ಹೇಗೆ ಸೂರ್ಯನು ತಾನೊಬ್ಬನೇ ಆಗಿದ್ದರೂ ನೀರಿನ ಪಾತ್ರೆಗಳಲ್ಲಿ ಪ್ರತಿಬಿಂಬಿತನಾಗಿ ಅನೇಕರಾಗಿ ತೋರುವನೋ ಹಾಗೆ ಆಶ್ಚರ್ಯಗೊಳಿಸುತ್ತಿರುವೆ. ಕತ್ತಲೆಯ ಆಚೆಗಿರುವ ನಿನ್ನ ದಿವ್ಯಪಾದಾರವಿಂದಗಳನ್ನು ನಾನು ಈಗ ಪ್ರತ್ಯಕ್ಷವಾಗಿ ನೋಡುತ್ತಿರುವೆನು. ಸದಾ ದೃಗ್ರೂಪನೇ ಆಗಿರುವ ನೀನು ಅಜ್ಞರಿಗೆ ಎಂದೆಂದಿಗೂ ಕಂಡುಬರದಿದ್ದರೂ ನಿನ್ನ ಮಂತ್ರಜಪದಿಂದ ಪವಿತ್ರರಾದವರ ಹೃದಯದಲ್ಲಿ ಪ್ರಸನ್ನನಾಗಿಯೇ ಇರುವೆ. ಎಲೈ ರಾಮನೆ, ರೂಪರಹಿತನೇ ಆಗಿರುವ ನಿನ್ನನ್ನು ನಾನು ಈಗ ಮಾಯೆಯಿಂದ ಧರಿಸಿರುವ ಮನುಷ್ಯರೂಪದಿಂದ ಕಾಣುತ್ತಿರುವೆನು. ನಿನ್ನ ಆಕಾರವು ಕೋಟಿಮನ್ಮಥರ ಲಾವಣ್ಯಕ್ಕೆ ಸಮನಾದ ಸೌಂದರ್ಯಯುಕ್ತವಾಗಿಯೂ ರಮಣೀಯವಾದ ಧನುರ್ಬಾಣಗಳನ್ನು ಧರಿಸಿರುವದೂ ದಯೆಯಿಂದ ಕೂಡಿದ ಅಂತಃಕರಣವುಳ್ಳದ್ದೂ ಮುಗುಳುನಗೆಯಿಂದ ಕೂಡಿದ ಸುಂದರಮುಖವುಳ್ಳದ್ದೂ ಆಗಿದೆ.

ಸೀತಾಸಮೇತಮಜಿನಾಂಬರಮಪ್ರಧೃಷ್ಯಂ
ಸೌಮಿತ್ರಿಣಾ ನಿಯತಸೇವಿತಪಾದಪದ್ಮಮ್ ।
ನೀಲೋತ್ಪಲದ್ಯುತಿಮನಂತಗುಣಂ ಪ್ರಶಾಂತಂ
ಮದ್ಭಾಗಧೇಯಮನಿಶಂ ಪ್ರಣಮಾಮಿ ರಾಮಮ್ ॥ ೩೩ ॥
ಜಾನಂತು ರಾಮ ತವ ರೂಪಮಶೇಷದೇಶ-
ಕಾಲಾದ್ಯುಪಾಧಿರಹಿತಂ ಘನಚಿತ್ಪ್ರಕಾಶಮ್ ।
ಪ್ರತ್ಯಕ್ಷತೋಽದ್ಯ ಮಮ ಗೋಚರಮೇತದೇವ
ರೂಪಂ ವಿಭಾತು ಹೃದಯೇ ನ ಪರಂ ವಿಕಾಂಕ್ಷೇ ॥ ೩೪ ॥

೩೩-೩೪. ಸೀತಾಸಮೇತನಾಗಿಯೂ ಜಿಂಕೆಯ ಚರ್ಮವನ್ನು ಧರಿಸಿದವನಾಗಿ ಹಿಮ್ಮೆಟ್ಟಿಸಲಸಾಧ್ಯನಾಗಿರುವ ಹಾಗೂ ಲಕ್ಷ್ಮಣನಿಂದ ಸದಾಕಾಲವೂ ಸೇವಿಸಲ್ಪಟ್ಟ ಪಾದಗಳುಳ್ಳವನಾಗಿರುವ, ಕನ್ನೈದಿಲೆಯಂತೆ ಕಾಂತಿಯುಳ್ಳ ಅನಂತಗುಣಪೂರ್ಣನಾದ ಪ್ರಶಾಂತನಾದ ನನ್ನ ಭಾಗ್ಯದೇವತೆಯಾದ ರಾಮನನ್ನು ಮತ್ತೆ ಮತ್ತೆ ನಮಸ್ಕರಿಸುತ್ತೇನೆ. ಎಲೈ ರಾಮನೆ, ನಿನ್ನ ಸ್ವರೂಪವು ದೇಶ, ಕಾಲ, ಮುಂತಾದ ಉಪಾಧಿಗಳಿಲ್ಲದ್ದಾಗಿಯೂ ಅಖಂಡಚಿತ್ಪ್ರಕಾಶರೂಪವಾಗಿಯೂ ಇರುವದೆಂದು ಜ್ಞಾನಿಗಳು ತಿಳಿದಿರುವರು. ಈಗ ನನಗೆ ಮಾತ್ರ ಎದುರಿಗೆ ಕಾಣಿಸುತ್ತಿರುವ ಈ ಆಕಾರವೇ ನನ್ನ ಹೃದಯದಲ್ಲಿ ಸದಾ ಬೆಳಗುತ್ತಿರಲಿ; ಮತ್ತೇನನ್ನೂ ನಾನು ಬಯಸುವದಿಲ್ಲ.

ಇತ್ಯೇವಂ ಸ್ತುವತಃ ತಸ್ಯ ರಾಮಃ ಸಸ್ಮಿತಮಬ್ರವೀತ್ ।
ಮುನೇ ಜಾನಾಮಿ ತೇ ಚಿತ್ತಂ ನಿರ್ಮಲಂ ಮದುಪಾಸನಾತ್ ॥ ೩೫ ॥
ಅತೋಽಹಮಾಗತೋ ದ್ರಷ್ಟುಂ ಮದೃತೇ ನಾನ್ಯಸಾಧನಮ್ ।
ಮನ್ಮಂತ್ರೋಪಾಸಕಾ ಲೋಕೇ ಮಾಮೇವ ಶರಣಂಗತಾಃ ॥ ೩೬ ॥
ನಿರಪೇಕ್ಷಾ ನಾನ್ಯಗತಾಃ ತೇಷಾಂ ದೃಶ್ಯೋಽಹಮನ್ವಹಮ್ ।
ಸ್ತೋತ್ರಮೇತತ್ ಪಠೇದ್ಯಸ್ತು ತ್ವತ್ಕೃತಂ ಮತ್ಪ್ರಿಯಂ ಸದಾ ॥ ೩೭ ॥
ಸದ್ಭಕ್ತಿರ್ಮೇ ಭವೇತ್ತಸ್ಯ ಜ್ಞಾನಂ ಚ ವಿಮಲಂ ಭವೇತ್ ॥

೩೫-೩೭. ಈ ರೀತಿಯಾಗಿ ಸ್ತೋತ್ರಮಾಡುತ್ತಿರುವ ಆ (ಸುತೀಕ್ಷ್ಣನನ್ನು) ಕುರಿತು ರಾಮನು ಮುಗುಳುನಗೆಯಿಂದ ಇಂತೆಂದನು : ''ಎಲೈ ಮುನಿವರ್ಯನೆ, ನನ್ನ ಚಿಂತನೆಯಿಂದ ನಿನ್ನ ಮನಸ್ಸು ನಿರ್ಮಲವಾಗಿರುವದನ್ನು ನಾನು ಬಲ್ಲೆನು. ನನ್ನನ್ನು ಬಿಟ್ಟರೆ ಚಿತ್ತಶುದ್ಧಿಗೆ ಬೇರೆ ಸಾಧನವಿರುವದಿಲ್ಲ. ಆದ್ದರಿಂದ ನಿನ್ನನ್ನು ನೋಡಲು ನಾನು ಬಂದಿದ್ದೇನೆ. ಲೋಕದಲ್ಲಿ ಯಾರು ನನ್ನ ಮಂತ್ರೋಪಾಸನೆಯನ್ನು ಮಾಡುತ್ತಾ ನನ್ನನ್ನೇ ಶರಣುಹೊಂದಿರುವರೋ ಮತ್ತೂ ಏನೂ ಬಯಕೆಗಳಿಲ್ಲದವರಾಗಿ ಬೇರೆ ಗತಿಯಿಲ್ಲದ

ವರಾಗಿರುವರೋ ಅಂಥವರಿಗೆ ನಾನು ಯಾವಾಗಲೂ ಕಾಣಿಸಿಕೊಳ್ಳುವೆನು. ಯಾವನು ನನಗೆ ಪ್ರಿಯವಾಗಿರುವ ನೀನು ಮಾಡಿರುವ ಈ ಸ್ತೋತ್ರವನ್ನು ಸದಾ ಪಠಿಸುವನೋ ಅವನಿಗೆ ಸದ್ಭಕ್ತಿಯೂ ವಿಮಲವಾದ ಜ್ಞಾನವೂ ಉಂಟಾಗುವದು.''

**ತ್ವಂ ಮಮೋಪಾಸನಾದೇವ ವಿಮುಕ್ತೋಽಸೀಹ ಸರ್ವತಃ ।**
**ದೇಹಾಂತೇ ಮಮ ಸಾಯುಜ್ಯಂ ಲಪ್ಸ್ಯಸೇ ನಾತ್ರ ಸಂಶಯಃ ॥ ೩೮ ॥**
**ಗುರುಂ ತೇ ದ್ರಷ್ಟುಮಿಚ್ಛಾಮಿ ಹ್ಯಗಸ್ತ್ಯಂ ಮುನಿನಾಯಕಮ್ ।**
**ಕಿಂಚಿತ್ಕಾಲಂ ತತ್ರ ವಸ್ತುಂ ಮನೋ ಮೇ ತ್ವರಯತ್ಯಲಮ್ ॥ ೩೯ ॥**
**ಸುತೀಕ್ಷ್ಣೋಽಪಿ ತಥೇತ್ಯಾಹ ಶ್ವೋ ಗಮಿಷ್ಯಸಿ ರಾಘವ ।**
**ಅಹಮಪ್ಯಾಗಮಿಷ್ಯಾಮಿ ಚಿರಾದ್ ದೃಷ್ಟೋ ಮಹಾಮುನಿಃ ॥ ೪೦ ॥**
**ಅಥ ಪ್ರಭಾತೇ ಮುನಿನಾ ಸಮೇತೋ**
**ರಾಮಃ ಸಸೀತಃ ಸಹ ಲಕ್ಷ್ಮಣೇನ ।**
**ಅಗಸ್ತ್ಯಸಂಭಾಷಣಲೋಲಮಾನಸಃ**
**ಶನೈರಗಸ್ತ್ಯಾನುಜಮಂದಿರಂ ಯಯೌ ॥ ೪೧ ॥**

೩೮-೪೧. ''ನೀನು ನನ್ನ ಧ್ಯಾನವನ್ನು ಮಾಡಿರುವದರಿಂದಲೇ ಎಲ್ಲಾ ವಿಧವಾದ ಸಂಸಾರಬಂಧದಿಂದಲೂ ಬಿಡುಗಡೆಯನ್ನು ಹೊಂದಿರುವೆ. ದೇಹವು ಬಿದ್ದ ಬಳಿಕ ನನ್ನ ಸಾಯುಜ್ಯಮುಕ್ತಿಯನ್ನೇ ಪಡೆಯುವೆ. ಇದರಲ್ಲಿ ಸಂಶಯವಿಲ್ಲ. ಮುನಿಗಳೊಡೆಯನೂ ನಿನ್ನ ಗುರುವೂ ಆದ ಅಗಸ್ತ್ಯನನ್ನು ನಾನು ನೋಡಲಿಚ್ಛಿಸುತ್ತೇನೆ. ಕೆಲವು ಕಾಲ ಅಲ್ಲಿ ವಾಸಮಾಡಬೇಕೆಂದು ನನ್ನ ಮನಸ್ಸು ತವಕಪಡುತ್ತಿದೆ'' - ಎಂದನು. ಸುತೀಕ್ಷ್ಣನೂ ಕೂಡ ''ಹಾಗೇ ಆಗಲಿ ; ಎಲೈ ರಾಘವನೆ, ಅಲ್ಲಿಗೆ ನಾಳೆಯ ದಿನ ಹೋಗುವೆಯಂತೆ ; ನಾನೂ ಬರುತ್ತೇನೆ. ಏಕೆಂದರೆ ಆ ಮಹಾಮುನಿಯನ್ನು ಕಂಡು ಬಹಳ ದಿನಗಳಾದವು''- ಎಂದನು. ಅನಂತರ ಬೆಳಗ್ಗೆ ಮುನಿಯೊಡನೆ ಸೀತಾಲಕ್ಷ್ಮಣರೊಡಗೂಡಿದ ರಾಮನು ಅಗಸ್ತ್ಯರೊಡನೆ ಮಾತನಾಡುವದರಲ್ಲಿ ಆಸಕ್ತಿಯುಳ್ಳ ಮನಸ್ಸಿನವನಾಗಿ ಮೆಲ್ಲನೆ ಅಗಸ್ತ್ಯನ ತಮ್ಮನ ಆಶ್ರಮಕ್ಕೆ ಹೊರಟನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ದ್ವಿತೀಯಃ ಸರ್ಗಃ**

ಃಃಃಃಃಃಃಃಃಃಃ

# ಮೂರನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಅಥ ರಾಮಃ ಸುತೀಕ್ಷ್ಣೇನ ಜಾನಕ್ಯಾ ಲಕ್ಷ್ಮಣೇನ ಚ ।**
**ಅಗಸ್ತ್ಯಸ್ಯಾನುಜಸ್ಥಾನಂ ಮಧ್ಯಾಹ್ನೇ ಸಮಪದ್ಯತ ॥ ೧ ॥**
**ತೇನ ಸಂಪೂಜಿತಃ ಸಮ್ಯಗ್ ಭುಕ್ತ್ವಾ ಮೂಲಫಲಾದಿಕಮ್ ।**
**ಪರೇದ್ಯುಃ ಪ್ರಾತರುತ್ಥಾಯ ಜಗ್ಮುಸ್ತೇಽಗಸ್ತ್ಯಮಂಡಲಮ್ ॥ ೨ ॥**
**ಸರ್ವರ್ತುಫಲಪುಷ್ಪಾಢ್ಯಂ ನಾನಾಮೃಗಗಣೈರ್ಯುತಮ್ ।**
**ಪಕ್ಷಿಸಂಘೈಶ್ಚ ವಿವಿಧೈರ್ನಾದಿತಂ ನಂದನೋಪಮಮ್ ॥ ೩ ॥**
**ಬ್ರಹ್ಮರ್ಷಿಭಿಃ ದೇವರ್ಷಿಭಿಃ ಸೇವಿತಂ ಮುನಿಮಂದಿರೈಃ ।**
**ಸರ್ವತೋಽಲಂಕೃತಂ ಸಾಕ್ಷಾದ್ ಬ್ರಹ್ಮಲೋಕಮಿವಾಪರಮ್ ॥ ೪ ॥**

೧-೪. ಶ್ರೀಮಹಾದೇವನಿಂತೆಂದನು : ಅನಂತರ ರಾಮನು ಸೀತಾಲಕ್ಷ್ಮಣರು ಹಾಗೂ ಸುತೀಕ್ಷ್ಣನೊಡಗೂಡಿ ಮಧ್ಯಾಹ್ನದ ವೇಳೆಗೆ ಅಗಸ್ತ್ಯರ ತಮ್ಮನ ಆಶ್ರಮಕ್ಕೆ ಬಂದನು. ಆತನಿಂದ ಚೆನ್ನಾಗಿ ಉಪಚರಿಸಲ್ಪಟ್ಟವನಾಗಿ ಕಂದಮೂಲಫಲಗಳನ್ನು ತಿಂದು ಮಾರನೆಯ ದಿನ ಬೆಳಗ್ಗೆ ಎದ್ದು ಅವರೆಲ್ಲರೂ ಅಗಸ್ತ್ಯರ ಆಶ್ರಮಪ್ರದೇಶಕ್ಕೆ ಹೊರಟರು. ಆ ಸ್ಥಳವು ಎಲ್ಲಾ ಋತುಗಳಲ್ಲಿಯೂ ಹಣ್ಣು ಹೂವುಗಳಿಂದಲೂ ನಾನಾವಿಧವಾದ ಮೃಗಗಳ ಗುಂಪಿನಿಂದಲೂ ಹಕ್ಕಿಗಳ ಕೂಟದಿಂದಲೂ ಧ್ವನಿಯಿಂದಲೂ ಕೂಡಿದ್ದು ನಂದನವನಕ್ಕೆ ಸಮಾನವಾಗಿತ್ತು. ದೇವಋಷಿಗಳು, ಬ್ರಹ್ಮರ್ಷಿಗಳ ಮುನಿಮಂದಿರ ಗಳಿಂದಲೂ ಅಲಂಕೃತವಾಗಿದ್ದು ಮತ್ತೊಂದು ಬ್ರಹ್ಮಲೋಕವೊ, ಎಂಬಂತಿತ್ತು.

**ಬಹೀರೇವಾಶ್ರಮಸ್ಯಾಥ ಸ್ಥಿತ್ವಾ ರಾಮೋಽಬ್ರವೀನ್ಮುನಿಮ್ ।**
**ಸುತೀಕ್ಷ್ಣ ಗಚ್ಛ ತ್ವಂ ಶೀಘ್ರಮಾಗತಂ ಮಾಂ ನಿವೇದಯ ॥ ೫ ॥**
**ಅಗಸ್ತ್ಯಮುನಿವರ್ಯಾಯ ಸೀತಯಾ ಲಕ್ಷ್ಮಣೇನ ಚ ।**
**ಮಹಾಪ್ರಸಾದ ಇತ್ಯುಕ್ತ್ವಾ ಸುತೀಕ್ಷ್ಣಃ ಪ್ರಯಯೌ ಗುರೋಃ ॥ ೬ ॥**
**ಆಶ್ರಮಂ ತ್ವರಯಾ ತತ್ರ ಋಷಿಸಂಘಸಮಾವೃತಮ್ ।**
**ಉಪವಿಷ್ಟಂ ರಾಮಭಕ್ತೈರ್ವಿಶೇಷೇಣ ಸಮಾಯುತಮ್ ॥ ೭ ॥**
**ವ್ಯಾಖ್ಯಾತರಾಮಮಂತ್ರಾರ್ಥಂ ಶಿಷ್ಯೇಭ್ಯಶ್ಚಾತಿಭಕ್ತಿತಃ ।**
**ದೃಷ್ಟ್ವಾಽಗಸ್ತ್ಯಂ ಮುನಿಶ್ರೇಷ್ಠಂ ಸುತೀಕ್ಷ್ಣಃ ಪ್ರಯಯೌ ಮುನೇಃ ॥ ೮ ॥**

೫-೮. ಆಶ್ರಮದ ಹೊರಭಾಗದಲ್ಲಿಯೇ ರಾಮನು ನಿಂತವನಾಗಿ (ಸುತೀಕ್ಷ್ಣ) ಋಷಿಯನ್ನು ಕುರಿತು ಹೀಗೆಂದನು : ''ಪೂಜ್ಯನೆ, ನೀನು ಜಾಗ್ರತೆಯಾಗಿ ಒಳಕ್ಕೆ ಹೋಗು.

ಸೀತಾಲಕ್ಷ್ಮಣರೊಡನೆ ನಾನು ಬಂದಿರುವ ವಿಚಾರವನ್ನು ಮುನಿಶ್ರೇಷ್ಠರಾದ ಅಗಸ್ತ್ಯರಿಗೆ ತಿಳಿಸುವವನಾಗು''. ಮಹಾಪ್ರಸಾದ- ಎಂದು ಸುತೀಕ್ಷ್ಣನು ಹೇಳಿದವನಾಗಿ ತನ್ನ ಗುರುವಿನ ಆಶ್ರಮಕ್ಕೆ ಬೇಗನೆ ಹೋದನು. ಅಲ್ಲಿ ಋಷಿಗಳ ಗುಂಪಿನಿಂದ ಸುತ್ತುವರೆಯಲ್ಪಟ್ಟವನಾಗಿ - ಎಂದರೆ ವಿಶೇಷವಾಗಿ ರಾಮಭಕ್ತರಾದ ಋಷಿಗಳಿಂದಲೇ ಕೂಡಿರುವ ಹಾಗೂ ಶಿಷ್ಯಜನರಿಗೆ ಬಹಳ ಭಕ್ತಿಯಿಂದ ರಾಮಮಂತ್ರದ ಅರ್ಥವನ್ನು ವಿವರಿಸುತ್ತಾ ಕುಳಿತಿದ್ದ ಅಗಸ್ತ್ಯರನ್ನು ಕಂಡು ಅವರ ಬಳಿಗೆ ಬಂದನು.

**ದಂಡವತ್ ಪ್ರಣಿಪತ್ಯಾಹ ವಿನಯಾವನತಃ ಸುಧೀಃ ।**
**ರಾಮೋ ದಾಶರಥಿರ್ಬ್ರಹ್ಮನ್ ಸೀತಯಾ ಲಕ್ಷ್ಮಣೇನ ಚ ॥೯॥**
**ಆಗತೋ ದರ್ಶನಾರ್ಥಂ ತೇ ಬಹಿಸ್ತಿಷ್ಠತಿ ಸಾಂಜಲಿಃ ।**

೯. ದೀರ್ಘದಂಡನಮಸ್ಕಾರಮಾಡಿದವನಾಗಿ ವಿನಯದಿಂದ ಕೂಡಿ ''ಬ್ರಹ್ಮನಿಷ್ಠನೆ, ಸೀತಾಲಕ್ಷ್ಮಣರೊಡನೆ ದಶರಥಪುತ್ರನಾದ ರಾಮನು ನಿನ್ನ ದರ್ಶನಕ್ಕಾಗಿ ಬಂದಿರುವನು. ಹೊರಭಾಗದಲ್ಲಿಯೇ ಕೈಮುಗಿದು ನಿಂತಿರುವನು'' ಎಂದನು.

**ಅಗಸ್ತ್ಯ ಉವಾಚ -**
**ಶ್ರೀಘ್ರಮಾನಯ ಭದ್ರಂ ತೇ ರಾಮಂ ಮಮ ಹೃದಿ ಸ್ಥಿತಿಮ್ ।**
**ತಮೇವ ಧ್ಯಾಯಮಾನೋಽಹಂ ಕಾಂಕ್ಷಮಾಣೋಽತ್ರ ಸಂಸ್ಥಿತಃ ॥೧೦॥**
**ಇತ್ಯುಕ್ತ್ವಾ ಸ್ವಯಮುತ್ಥಾಯ ಮುನಿಭಿಃ ಸಹಿತೋ ದ್ರುತಮ್ ।**
**ಅಭ್ಯಗಾತ್ ಪರಯಾ ಭಕ್ತ್ಯಾ ಗತ್ವಾ ರಾಮಮಥಾಬ್ರವೀತ್ ॥೧೧॥**
**ಆಗಚ್ಛ ರಾಮ ಭದ್ರಂ ತೇ ದಿಷ್ಟ್ಯಾ ತೇಽದ್ಯ ಸಮಾಗಮಃ ।**
**ಪ್ರಿಯಾತಿಥಿರ್ಮಮ ಪ್ರಾಪ್ತೋಽಸಿ ಹ್ಯದ್ಯ ಮೇ ಸಫಲಂ ದಿನಮ್। ।೧೨॥**

೧೦-೧೨. ಅಗಸ್ತ್ಯನಿಂತೆಂದನು : ''ಎಲೈ ನಿನಗೆ ಒಳ್ಳೆಯದಾಗಲಿ ! ನನ್ನ ಹೃದಯದಲ್ಲಿರುವ ರಾಮನನ್ನು ಬೇಗನೆ ಕರೆದುಕೊಂಡು ಬಾ. ಅವನನ್ನೇ ಚಿಂತಿಸುತ್ತಾ ನಾನು ದಾರಿಕಾಯುತ್ತಾ ಕುಳಿತಿರುವೆನು.'' ಹೀಗೆಂದು ಹೇಳಿ ತಾನೇ ಮೇಲೆದ್ದು ಋಷಿಗಳೊಡಗೂಡಿ ಜಾಗ್ರತೆಯಾಗಿ ರಾಮನ ಬಳಿಗೆ ಬಂದನು. ಬಹಳ ಭಕ್ತಿವಂತನಾಗಿ ರಾಮನನ್ನು ಕುರಿತು ಇಂತೆಂದನು. ''ಎಲೈ ರಾಮನೆ, ಇತ್ತ ಬರುವವನಾಗು ; ನಿನಗೆ ಮಂಗಳವಾಗಲಿ ! ಪುಣ್ಯವಿಶೇಷದಿಂದ ನಿನ್ನ ಭೇಟಿಯಾಗಿದೆ. ನನಗೆ ಪ್ರಿಯನಾದ ಅತಿಥಿಯು ನೀನಾಗಿರುವೆ. ನೀನು ಬಂದದ್ದರಿಂದ ನನ್ನ ಈ ದಿನವು ಸಾರ್ಥಕವಾಗಿದೆ''- ಎಂದನು.

**ರಾಮೋಽಪಿ ಮುನಿಮಾಯಾಂತಂ ದೃಷ್ಟ್ವಾ ಹರ್ಷಸಮಾಕುಲಃ ।**
**ಸೀತಯಾ ಲಕ್ಷ್ಮಣೇನಾಪಿ ದಂಡವತ್ ಪತಿತೋ ಭುವಿ ॥ ೧೩ ॥**
**ದ್ರುತಮುತ್ಥಾಪ್ಯ ಮುನಿರಾಟ್ ರಾಮಮಾಲಿಂಗ್ಯ ಭಕ್ತಿತಃ ।**
**ತದ್ಗಾತ್ರಸ್ಪರ್ಶಜಾಹ್ಲಾದಸ್ರವನ್ನೇತ್ರಜಲಾಕುಲಃ ॥ ೧೪ ॥**
**ಗೃಹೀತ್ವಾ ಕರಮೇಕೇನ ಕರೇಣ ರಘುನಂದನಮ್ ।**
**ಜಗಾಮ ಸ್ವಾಶ್ರಮಂ ಹೃಷ್ಟೋ ಮನಸಾ ಮುನಿಪುಂಗವಃ ॥ ೧೫ ॥**

೧೩-೧೫. ರಾಮನೂ ಕೂಡ ಬರುತ್ತಿರುವ ಋಷಿಯನ್ನು ಕಂಡು ಸಂತೋಷಗೊಂಡವನಾಗಿ ಸೀತಾಲಕ್ಷ್ಮಣರೊಡನೆ ದಂಡವತ್ ನಮಸ್ಕಾರಮಾಡಿದನು. ಮುನಿಶ್ರೇಷ್ಠನು ಆ ರಾಮನನ್ನು ಬೇಗನೆ ಮೇಲೆತ್ತಿ ಭಕ್ತಿಯಿಂದ ಆಲಂಗಿಸಿಕೊಂಡವನಾಗಿ ಆ (ರಾಮನ) ಶರೀರಸ್ಪರ್ಶದಿಂದುಂಟಾದ ಸಂತೋಷದಿಂದ ಸುರಿಯುತ್ತಿರುವ ಕಣ್ಣೀರಿನಿಂದ ಕೂಡಿ ತನ್ನ ಕೈಯಿಂದ ರಾಮನ ಕೈಯನ್ನು ಹಿಡಿದು ಕರೆದುಕೊಂಡು ತನ್ನ ಆಶ್ರಮಕ್ಕೆ ಹೊರಟನು. ಮನಸ್ಸಿನಲ್ಲಿ ಬಹಳ ಸಂತೋಷವನ್ನು ಹೊಂದಿದವನಾದನು.

**ಸುಖೋಪವಿಷ್ಟಂ ಸಂಪೂಜ್ಯ ಪೂಜಯಾ ಬಹುವಿಸ್ತರಮ್ ।**
**ಭೋಜಯಿತ್ವಾ ಯಥಾನ್ಯಾಯ್ಯಂ ಭೋಜ್ಯೈರ್ವನ್ಯೈರನೇಕಧಾ ॥ ೧೬ ॥**
**ಸುಖೋಪವಿಷ್ಟಮೇಕಾಂತೇ ರಾಮಂ ಶಶಿನಿಭಾನನಮ್ ।**
**ಕೃತಾಂಜಲಿರುವಾಚೇದಮಗಸ್ತ್ಯೋ ಭಗವಾನೃಷಿಃ ॥ ೧೭ ॥**

೧೬-೧೭. ಬಹಳ ವಿಸ್ತಾರವಾದ ರೀತಿಯಿಂದ ಸುಖವಾಗಿ ಕುಳಿತಿದ್ದ ಶ್ರೀರಾಮನನ್ನು ವಿಶೇಷವಾಗಿ ಪೂಜಿಸಿ ಕಾಡಿನಲ್ಲಿ ದೊರಕುವ ನಾನಾಬಗೆಯ ಫಲಗಳಿಂದ ಯೋಗ್ಯ ರೀತಿಯಲ್ಲಿ ರಾಮನಿಗೆ ಭೋಜನವನ್ನು ಮಾಡಿಸಿ ಚಂದ್ರನಂತೆ ಮುಖವುಳ್ಳ ಸುಖಾಸೀನನಾದ ರಾಮನನ್ನು ರಹಸ್ಯದಲ್ಲಿ ಭಗವಂತನಾದ ಅಗಸ್ತ್ಯಋಷಿಯು ಕೈಮುಗಿದುಕೊಂಡವನಾಗಿ ಹೀಗೆಂದನು.

**ತ್ವದಾಗಮನಮೇವಾಹಂ ಪ್ರತೀಕ್ಷನ್ ಸಮವಸ್ಥಿತಃ ।**
**ಯದಾ ಕ್ಷೀರಸಮುದ್ರಾಂತೇ ಬ್ರಹ್ಮಣಾ ಪ್ರಾರ್ಥಿತಃ ಪುರಾ ॥ ೧೮ ॥**
**ಭೂಮೇರ್ಭಾರಾಪನುತ್ತ್ಯರ್ಥಂ ರಾವಣಸ್ಯ ವಧಾಯ ಚ ।**
**ತದಾದಿ ದರ್ಶನಾಕಾಂಕ್ಷೀ ತವ ರಾಮ ತಪಶ್ಚರನ್ ।**
**ವಸಾಮಿ ಮುನಿಭಿಃ ಸಾರ್ಧಂ ತ್ವಾಮೇವ ಪರಿಚಿಂತಯನ್ ॥ ೧೯ ॥**

೧೮-೧೯. "ಎಲೈ ರಾಮನೆ, ನಿನ್ನ ಬರುವಿಕೆಯನ್ನೇ ನಿರೀಕ್ಷಿಸುತ್ತಾ ನಾನು ಇದ್ದುಕೊಂಡಿರುವೆನು. ಹಿಂದೆ ಯಾವಾಗ ಬ್ರಹ್ಮನಿಂದ ನೀನು ಕ್ಷೀರಸಮುದ್ರದಲ್ಲಿ

ಭೂಭಾರಹರಣಕ್ಕಾಗಿಯೂ ರಾವಣನನ್ನು ಕೊಲ್ಲುವದಕ್ಕಾಗಿಯೂ ಅವತರಿಸುವಂತೆ ಪ್ರಾರ್ಥಿಸಲ್ಪಟ್ಟೆಯೋ ಆ ಕಾಲದಿಂದಲೂ ನಿನ್ನನ್ನು ನೋಡಬೇಕೆಂಬ ಆಸೆಯಿಂದ ಋಷಿಗಳೊಡನೆ ತಪಸ್ಸನ್ನು ಮಾಡಿಕೊಂಡು ನಿನ್ನನ್ನೇ ಚಿಂತಿಸುತ್ತಾ ಇದ್ದುಕೊಂಡಿರುವೆನು.

**ಸೃಷ್ಟೇಃ ಪ್ರಾಗೇಕ ಏವಾಸೀರ್ನಿರ್ವಿಕಲ್ಪೋಽನುಪಾಧಿಕಃ ।**
**ತ್ವದಾಶ್ರಯಾ ತ್ವದ್ವಿಷಯಾ ಮಾಯಾ ತೇ ಶಕ್ತಿರುಚ್ಯತೇ ॥ ೨೦ ॥**
**ತ್ವಾಮೇವ ನಿರ್ಗುಣಂ ಶಕ್ತಿರಾವೃಣೋತಿ ಯದಾ ತದಾ ।**
**ಅವ್ಯಾಕೃತಮಿತಿ ಪ್ರಾಹುರ್ವೇದಾಂತಪರಿನಿಷ್ಠಿತಾಃ ॥ ೨೧ ॥**
**ಮೂಲಪ್ರಕೃತಿರಿತ್ಯೇಕೇ ಪ್ರಾಹುರ್ಮಾಯೇತಿ ಕೇಚನ ।**
**ಅವಿದ್ಯಾ ಸಂಸೃತಿರ್ಬಂಧ ಇತ್ಯಾದಿ ಬಹುಧೋಚ್ಯತೇ ॥ ೨೨ ॥**

೨೦-೨೨. ನಿರ್ವಿಕಲ್ಪನೂ ಉಪಾಧಿರಹಿತನೂ ಆದ ನೀನು ಸೃಷ್ಟಿಗೆ ಮುಂಚೆ ಒಬ್ಬನೇ ಇರುವವನಾಗಿದ್ದೆ. ನಿನ್ನನ್ನೇ ಆಶ್ರಯಿಸಿಕೊಂಡು ನಿನ್ನನ್ನೇ ವಿಷಯವಾಗಿ ಮಾಡಿಕೊಂಡಿರುವ ಮಾಯೆಯು ನಿನ್ನ ಶಕ್ತಿಯೆಂದು ಕರೆಯಲ್ಪಡುತ್ತದೆ. ನಿರ್ಗುಣನಾಗಿರುವ ನಿನ್ನನ್ನೇ ಯಾವಾಗ ಆ ಶಕ್ತಿಯು ಮುಚ್ಚುವದೋ ಆಗ ಅದನ್ನು ವೇದಾಂತವನ್ನು ಬಲ್ಲವರು ಅವ್ಯಾಕೃತವೆಂದು ಕರೆಯುತ್ತಾರೆ. ಮತ್ತೆ ಕೆಲವರು ಇದನ್ನೇ ಮೂಲಪ್ರಕೃತಿಯೆಂದೂ ಮತ್ತೆ ಕೆಲವರು ಮಾಯೆಯೆಂದೂ ಅವಿದ್ಯೆ, ಸಂಸಾರ, ಬಂಧ- ಮುಂತಾಗಿಯೂ ನಾನಾ ಹೆಸರುಗಳಿಂದ ಕರೆಯುತ್ತಾರೆ.

**ತ್ವಯಾ ಸಂಕ್ಷೋಭ್ಯಮಾಣಾ ಸಾ ಮಹತ್ತತ್ತ್ವಂ ಪ್ರಸೂಯತೇ ।**
**ಮಹತ್ತತ್ತ್ವಾದಹಂಕಾರಃ ತ್ವಯಾ ಸಂಚೋದಿತಾದಭೂತ್ ॥ ೨೩॥**
**ಅಹಂಕಾರೋ ಮಹತ್ತತ್ತ್ವ ಸಂವೃತಸ್ತ್ರಿವಿಧೋಽಭವತ್ ।**
**ಸಾತ್ವಿಕೋ ರಾಜಸಶ್ಚೈವ ತಾಮಸಶ್ಚೇತಿ ಭಣ್ಯತೇ ॥ ೨೪॥**
**ತಾಮಸಾತ್ ಸೂಕ್ಷ್ಮತನ್ಮಾತ್ರಾಣ್ಯಾಸನ್ ಭೂತಾನ್ಯತಃ ಪರಮ್ ।**
**ಸ್ಥೂಲಾನಿ ಕ್ರಮಶೋ ರಾಮ ಕ್ರಮೋತ್ತರಗುಣಾನಿ ಹ ॥ ೨೫ ॥**

೨೩-೨೫. ಎಲೈ ರಾಮನೆ, ನಿನ್ನಿಂದ ಚಲಿಸುವಂತೆ ಮಾಡಲ್ಪಟ್ಟ ಆ ಪ್ರಕೃತಿಯು ಮಹತ್ತತ್ತ್ವವನ್ನು ಹಡೆಯುತ್ತದೆ. ಹಾಗೆಯೇ ನಿನ್ನ ಪ್ರೇರಣೆಯಿಂದಲೇ ಮಹತ್ತತ್ತ್ವದಿಂದ ಅಹಂಕಾರವು ಉಂಟಾಯಿತು. ಮಹತ್ತತ್ತ್ವದಿಂದ ಹೆಣೆಯಲ್ಪಟ್ಟ ಅಹಂಕಾರವು ಸಾತ್ವಿಕ, ರಾಜಸ, ತಾಮಸ-ಗಳೆಂದು ಮೂರು ರೀತಿಯಾಗಿ ಆಯಿತು. ಅದರಲ್ಲಿ ತಾಮಸಾಹಂಕಾರದಿಂದ ಐದು ಸೂಕ್ಷ್ಮವಾದ ತನ್ಮಾತ್ರೆಗಳು ಉಂಟಾದವು. ಅನಂತರ ಕ್ರಮವಾಗಿ ಒಂದೊಂದು ಗುಣಗಳ ಹೆಚ್ಚಳವುಳ್ಳ ಸ್ಥೂಲವಾದ ಪಂಚಮಹಾಭೂತಗಳು (ತನ್ಮಾತ್ರೆಗಳಿಂದ) ಆದವು.

**ರಾಜಸಾನೀಂದ್ರಿಯಾಣ್ಯೇವ ಸಾತ್ವಿಕಾ ದೇವತಾ ಮನಃ ।**
**ತೇಭ್ಯೋಽಭವತ್ ಸೂತ್ರರೂಪಂ ಲಿಂಗಂ ಸರ್ವಗತಂ ಮಹತ್ ॥ ೨೬॥**
**ತತೋ ವಿರಾಟ್ ಸಮುತ್ಪನ್ನಃ ಸ್ಥೂಲಾದ್ ಭೂತಕದಂಬಕಾತ್ ।**
**ವಿರಾಜಃ ಪುರುಷಾತ್ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೨೭॥**
**ದೇವತಿರ್ಯಙ್ ಮನುಷ್ಯಾಶ್ಚ ಕಾಲಕರ್ಮಕ್ರಮೇಣ ತು ।**

೨೬-೨೭. ರಾಜಸಾಹಂಕಾರದಿಂದ ಇಂದ್ರಿಯಗಳೂ ಸ್ವಾತ್ತ್ವಿಕಾಹಂಕಾರದಿಂದ ದೇವತೆಗಳೂ ಮನಸ್ಸೂ ಆದವು. ಇವೆಲ್ಲದರ ಒಟ್ಟಿನಿಂದ ಸರ್ವಗತನಾದ ಸೂತ್ರರೂಪನಾದ ಮಹತ್ತೆಂಬ (ಹಿರಣ್ಯಗರ್ಭ)ನುಂಟಾದನು. ಅನಂತರ ಸ್ಥೂಲವಾದ ಪಂಚಭೂತಗಳ ಸಮೂಹದಿಂದ ವಿರಾಟ್ ಪುರುಷನು ಹುಟ್ಟಿದನು. ಆ ವಿರಾಟ್‌ಪುರುಷನಿಂದ ಈ ಎಲ್ಲಾ ಸ್ಥಾವರಜಂಗಮರೂಪವಾದ ಪ್ರಪಂಚವೂ ಹುಟ್ಟಿರುವದು. ಮುಂದೆ ಕಾಲಕರ್ಮಾನುಗುಣವಾಗಿ ದೇವತೆಗಳು, ಮೂಕಪ್ರಾಣಿಗಳು, ಮನುಷ್ಯರೇ ಮುಂತಾದವರೆಲ್ಲರೂ ಹುಟ್ಟಿದರು.

**ತ್ವಂ ರಜೋಗುಣತೋ ಬ್ರಹ್ಮಾ ಜಗತಃ ಸರ್ವಕಾರಣಮ್ ।**
**ಸತ್ವಾದ್ ವಿಷ್ಣುಃ ತ್ವಮೇವಾಸ್ಯ ಪಾಲಕಃ ಸದ್ಭಿರುಚ್ಯತೇ ॥ ೨೮॥**
**ಲಯೇ ರುದ್ರಸ್ತ್ವಮೇವಾಸ್ಯ ತ್ವನ್ಮಾಯಾಗುಣಭೇದತಃ ।**
**ಜಾಗ್ರತ್‌ಸ್ವಪ್ನಸುಷುಪ್ತ್ಯಾಖ್ಯಾ ವೃತ್ತಯೋ ಬುದ್ಧಿಜೈರ್ಗುಣೈಃ ॥**
**ತಾಸಾಂ ವಿಲಕ್ಷಣೋ ರಾಮ ತ್ವಂ ಸಾಕ್ಷೀ ಚಿನ್ಮಯೋಽವ್ಯಯಃ ।**
**ಸೃಷ್ಟಿಲೀಲಾಂ ಯದಾ ಕರ್ತುಮೀಹಸೇ ರಘುನಂದನ ॥ ೩೦॥**
**ಅಂಗೀಕರೋಷಿ ಮಾಯಾಂ ತ್ವಂ ತದಾ ವೈ ಗುಣವಾನಿವ ।**

೨೮-೩೦. ನೀನು ರಜೋಗುಣಸಂಬಂಧದಿಂದ ಜಗತ್ತಿಗೆಲ್ಲಕ್ಕೂ ಕಾರಣನಾದ ಬ್ರಹ್ಮನಾಗಿಯೂ ಸತ್ತ್ವಗುಣನಿಮಿತ್ತದಿಂದ ಜಗತ್ತಿನ ರಕ್ಷಕನಾಗಿಯೂ ಇರುತ್ತೀಯೆಂದು ಬಲ್ಲವರು ಹೇಳುತ್ತಾರೆ. ನಿನ್ನ ಮಾಯಾಗುಣಗಳ ಭೇದದಿಂದಲೇ ಪ್ರಲಯಕಾಲದಲ್ಲಿ ರುದ್ರನಾಗಿಯೂ ನೀನೇ ತೋರಿಕೊಳ್ಳುತ್ತೀಯೆ. ಎಚ್ಚರ, ಕನಸು, ತನಿನಿದ್ರೆ-ಎಂಬ ಮೂರು ವಿಧವಾದ ಬದ್ಧಿಯ ಗುಣಗಳಿಂದಾದ ವೃತ್ತಿಗಳೇನುಂಟೋ ಅವುಗಳಿಗಿಂತ ವಿಲಕ್ಷಣನೂ ಚಿನ್ಮಯನೂ ಅವ್ಯಯನೂ ಆದ ಸಾಕ್ಷಿಯು ನೀನಾಗಿರುವೆ. ಸೃಷ್ಟಿಯೆಂಬ ಲೀಲೆಯನ್ನು ನೀನು ಮಾಡಲು ಬಯಸಿದೆಯಾದರೆ ಆಗ ಗುಣವುಳ್ಳವನಂತೆ ತೋರುತ್ತಾ ಮಾಯೆಯನ್ನು ಸ್ವೀಕರಿಸುತ್ತೀಯೆ.

**ರಾಮ ಮಾಯಾ ದ್ವಿಧಾ ಭಾತಿ ವಿದ್ಯಾವಿದ್ಯೇತಿ ತೇ ಸದಾ ।**
**ಪ್ರವೃತ್ತಿಮಾರ್ಗನಿರತಾ ಅವಿದ್ಯಾವಶವರ್ತಿನಃ ॥ ೩೧॥**

**ನಿವೃತ್ತಿಮಾರ್ಗನಿರತಾ ವೇದಾಂತಾರ್ಥವಿಚಾರಕಾಃ ।**
**ತ್ವದ್ಭಕ್ತಿನಿರತಾ ಯೇ ಚ ತೇ ವೈ ವಿದ್ಯಾಮಯಾಃ ಸ್ಮೃತಾಃ ॥ ೩೨॥**
**ಅವಿದ್ಯಾವಶಗಾ ಯೇ ತು ನಿತ್ಯಂ ಸಂಸಾರಿಣಶ್ಚ ತೇ ।**
**ವಿದ್ಯಾಭ್ಯಾಸರತಾ ಯೇ ತು ನಿತ್ಯಮುಕ್ತಾಸ್ತ ಏವ ಹಿ ॥ ೩೩ ॥**

೩೧-೩೩. ಎಲೈ ರಾಮನೆ, ನಿನ್ನ ಮಾಯೆಯು ವಿದ್ಯೆ, ಅವಿದ್ಯೆ - ಎಂದು ಎರಡು ವಿಧವಾಗಿ ಯಾವಾಗಲೂ ತೋರಿಕೊಳ್ಳುತ್ತದೆ. ಯಾರು ಪ್ರವೃತ್ತಿಮಾರ್ಗ (ಸಂಸಾರದ ಹಾದಿ)ದ ಕಡೆಗೆ ಮನಸ್ಸುಳ್ಳವರಾಗುವರೋ ಅವರು ಅವಿದ್ಯಾವಶರಾಗಿ ಅದರ ಅಧೀನರಾಗಿರುವರು. ಆದರೆ ಯಾರು ನಿವೃತ್ತಿಮಾರ್ಗದಲ್ಲಿ ತೊಡಗಿದವರಾಗಿ ವೇದಾಂತಾರ್ಥವನ್ನು ವಿಚಾರಮಾಡುವರೋ ಹಾಗೂ ನಿನ್ನ ಭಕ್ತಿಯನ್ನು ಆಶ್ರಯಿಸಿರುವರೋ ಅವರು ವಿದ್ಯಾರೂಪವಾದ ಮಾಯೆಯನ್ನು ಹೊಂದಿದವರಾಗುವರು. ಇವರುಗಳಲ್ಲಿ ಅವಿದ್ಯಾವಶರಾದವರು ಯಾವಾಗಲೂ ಸಂಸಾರಿಗಳಾಗಿಯೂ, ವಿದ್ಯಾವೃತ್ತ್ಯಭ್ಯಾಸ ನಿರತರು ನಿತ್ಯಮುಕ್ತರಾಗಿಯೂ ಇರುವರು.

**ಲೋಕೇ ತ್ವದ್ಭಕ್ತಿನಿರತಾ ತ್ವನ್ಮಂತ್ರೋಪಾಸಕಾಶ್ಚ ಯೇ ।**
**ವಿದ್ಯಾ ಪ್ರಾದುರ್ಭವೇತ್ತೇಷಾಂ ನೇತರೇಷಾಂ ಕದಾಚನ ॥ ೩೪ ॥**
**ಅತಸ್ತ್ವದ್ಭಕ್ತಿಸಂಪನ್ನಾ ಮುಕ್ತಾ ಏವ ನ ಸಂಶಯಃ ।**
**ತ್ವದ್ಭಕ್ತ್ಯಮೃತಹೀನಾನಾಂ ಮೋಕ್ಷಃ ಸ್ವಪ್ನೇಽಪಿ ನೋ ಭವೇತ್ ॥ ೩೫ ॥**
**ಕಿಂ ರಾಮ ಬಹುನೋಕ್ತೇನ ಸಾರಂ ಕಿಂಚಿದ್ ಬ್ರವೀಮಿ ತೇ ।**
**ಸಾಧುಸಂಗತಿರೇವಾತ್ರ ಮೋಕ್ಷಹೇತುರುದಾಹೃತಾ ॥ ೩೬ ॥**

೩೪-೩೬. ಲೋಕದಲ್ಲಿ ನಿನ್ನ ಭಕ್ತಿಯಲ್ಲಿಯೇ ನಿರತರಾಗಿದ್ದು ನಿನ್ನ ಮಂತ್ರವನ್ನೇ ಚಿಂತನೆಮಾಡುತ್ತಿರುವವರು ಯಾರೋ ಅಂಥವರಿಗೇ ವಿದ್ಯೆಯು ಹುಟ್ಟುವದು. ಬೇರೆಯವರಿಗೆ ಅಲ್ಲ. ಆದ್ದರಿಂದ ನಿನ್ನ ಭಕ್ತಿಯಿಂದ ಕೂಡಿರುವವರು ಮುಕ್ತರೇ - ಎಂಬಿದರಲ್ಲಿ ಸಂಶಯವಿಲ್ಲ. ಆದರೆ ನಿನ್ನ ಭಕ್ತಿಯೆಂಬ ಅಮೃತವಿಲ್ಲದವರಿಗೆ ಕನಸಿನಲ್ಲಿಯೂ ಮೋಕ್ಷವು ಸಿಗಲಾರದು. ಎಲೈ ರಾಮನೆ, ಹೆಚ್ಚಾಗಿ ಹೇಳಿದ್ದರಿಂದೇನು ? ಸಾರಭೂತವಾದ ವಿಚಾರವನ್ನು ಒಂದಿಷ್ಟು ನಿನಗೆ ಹೇಳುವೆನು. ಸಾಧುಗಳ ಸಂಗವೇ ಮುಕ್ತಿಗೆ ಕಾರಣವೆಂದು ಪ್ರಸಿದ್ಧವಾಗಿದೆ.

**ಸಾಧವಃ ಸಮಚಿತ್ತಾ ಯೇ ನಿಃಸ್ಪೃಹಾ ವಿಗತೈಷಿಣಃ ।**
**ದಾಂತಾಃ ಪ್ರಶಾಂತಾಸ್ತ್ವದ್ಭಕ್ತಾ ನಿವೃತ್ತಾಖಿಲಕಾಮನಾಃ ॥ ೩೭ ॥**
**ಇಷ್ಟಪ್ರಾಪ್ತಿವಿಪತ್ತ್ಯೋಶ್ಚ ಸಮಾಃ ಸಂಗವಿವರ್ಜಿತಾಃ ।**

**ಸಂನ್ಯಸ್ತಾಖಿಲಕರ್ಮಾಣಃ ಸರ್ವದಾ ಬ್ರಹ್ಮತತ್ಪರಾಃ ॥ ೩೮ ॥**
**ಯಮಾದಿಗುಣಸಂಪನ್ನಾಃ ಸಂತುಷ್ಟಾ ಯೇನಕೇನಚಿತ್ ।**

೩೭-೩೮. ಸಾಧುಗಳೆಂದರೆ ಯಾವಾಗಲೂ ಸಮಚಿತ್ತರಾಗಿರುವರು. ಆಶೆಯಿಲ್ಲದವರೂ ಕಾಮುಗಳನ್ನು ಬಿಟ್ಟವರೂ ಆಗಿದ್ದುಕೊಂಡು ಹೊರಗಿನ ಮತ್ತು ಒಳಗಿನ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವರಾಗಿರುವರು. ಅವರಿಗೆ ಬಯಕೆಗಳು ಇರುವದಿಲ್ಲ. ಬೇಕಾದದ್ದು ಬರಲಿ, ಅಗಲಿ ಹೋಗಲಿ, ಒಂದೇ ರೀತಿಯಾಗಿದ್ದುಕೊಂಡು ವಿಷಯಗಳಲ್ಲಿ ಆಸಕ್ತಿಯಿಲ್ಲದವರಾಗಿರುವರು. ಎಲ್ಲಾ ಕರ್ಮಗಳನ್ನೂ ಬಿಟ್ಟವರಾಗಿ ಯಾವಾಗಲೂ ಬ್ರಹ್ಮತತ್ಪರರಾಗಿ ಯಮನಿಯಮಾದಿಗುಣಗಳಿಂದ ಕೂಡಿದವರಾಗಿ ಏನು ದೊರೆತರೆ ಅಷ್ಟರಿಂದಲೇ ತೃಪ್ತರಾಗಿರುವರು.

**ಸತ್ಸಂಗಮೋ ಭವೇದ್ಯರ್ಹಿ ತ್ವತ್ಕಥಾಶ್ರವಣೇ ರತಿಃ ।**
**ಸಮುದೇತಿ ತತೋ ಭಕ್ತಿಃ ತ್ವಯಿ ರಾಮ ಸನಾತನೇ ॥ ೩೯ ॥**
**ತ್ವದ್ಭಕ್ತಾವುಪಪನ್ನಾಯಾಂ ವಿಜ್ಞಾನಂ ವಿಪುಲಂ ಸ್ಫುಟಮ್ ।**
**ಉದೇತಿ ಮುಕ್ತಿಮಾರ್ಗೋಽಯಮಾದ್ಯಶ್ಚತುರಸೇವಿತಃ ॥ ೪೦ ॥**
**ತಸ್ಮಾದ್ರಾಘವ ಸದ್ಭಕ್ತಿಸ್ತ್ವಯಿ ಮೇ ಪ್ರೇಮಲಕ್ಷಣಾ ।**
**ಸದಾ ಭೂಯಾದ್ ಹರೇ ಸಂಗಸ್ತ್ವದ್ಭಕ್ತೇಷು ವಿಶೇಷತಃ ॥ ೪೧ ॥**

೩೯-೪೧. ಯಾವಾಗ ಸತ್ಸಂಗವುಂಟಾಗುವದೋ ಆಗ ನಿನ್ನ ಕಥೆಯನ್ನು ಕೇಳುವದರಲ್ಲಿ ಆಸಕ್ತಿಯುಂಟಾಗಿ ಅನಂತರ ಸನಾತನನಾದ ನಿನ್ನಲ್ಲಿ ಭಕ್ತಿಯುಂಟಾಗುವದು. ನಿನ್ನ ಭಕ್ತಿಯು ಚೆನ್ನಾಗಿ ಉಂಟಾದಲ್ಲಿ ವಿಜ್ಞಾನವು (ಆತ್ಮಾನುಭವವು) ಉಂಟಾಗುವದು. ಜಾಣರಿಂದ ಸೇವಿಸಲ್ಪಡುವ ಈ ಮುಕ್ತಿಮಾರ್ಗವು ಎಲ್ಲಕ್ಕಿಂತ ಹಿರಿದಾಗಿರುವದು. ಆದ್ದರಿಂದ ಎಲೈ ರಾಮನೆ, ಹರಿಯೆ, ಪ್ರೇಮರೂಪವಾದ ನಿನ್ನ ಭಕ್ತಿಯು ನಿನ್ನಲ್ಲಿ ಸದಾ ಕಾಲವೂ ನನಗೆ ಉಂಟಾಗಲಿ ! ಇನ್ನೂ ಹೆಚ್ಚಾಗಿ ನಿನ್ನ ಭಕ್ತರಲ್ಲಿಯೂ ನನಗೆ ಪ್ರೇಮವು ಬೆಳೆಯಲಿ !!

**ಅದ್ಯ ಮೇ ಸಫಲಂ ಜನ್ಮ ಭವತ್ಸಂದರ್ಶನಾದಭೂತ್ ।**
**ಅದ್ಯ ಮೇ ಕ್ರತವಃ ಸರ್ವೇ ಬಭೂವುಃ ಸಫಲಾಃ ಪ್ರಭೋ ॥ ೪೨ ॥**
**ದೀರ್ಘಕಾಲಂ ಮಯಾ ತಪ್ತಮನನ್ಯಮತಿನಾ ತಪಃ ।**
**ತಸ್ಯೇಹ ತಪಸೋ ರಾಮ ಫಲಂ ತವ ಯದರ್ಚನಮ್ ॥ ೪೩ ॥**
**ಸದಾ ಮೇ ಸೀತಯಾ ಸಾರ್ಧಂ ಹೃದಯೇ ವಸ ರಾಘವ ।**
**ಗಚ್ಛತಸ್ತಿಷ್ಠತೋ ವಾಪಿ ಸ್ಮೃತಿಃ ಸ್ಯಾನ್ಮೇ ಸದಾ ತ್ವಯಿ ॥ ೪೪ ॥**

೪೨-೪೪. ಈಗ ನನ್ನ ಜನ್ಮವು ಸಾರ್ಥಕವಾಯಿತು. ನಿನ್ನ ದರ್ಶನದಿಂದ ಈಗ ನಾನು ಮಾಡಿದ ಯಜ್ಞಗಳೆಲ್ಲವೂ ಪರಿಪೂರ್ಣವಾದವು. ಎಲೈ ಪ್ರಭುವೆ, ಬಹಳಕಾಲದಿಂದ ನಾನು ಏಕಾಗ್ರಚಿತ್ತನಾಗಿ ತಪಸ್ಸುಮಾಡಿದೆನು. ಆ ತಪಸ್ಸಿನ ಫಲವೊ, ಎಂಬಂತೆ ಎಲೈ ರಾಮನೆ, ಈಗ ನಿನ್ನನ್ನು ಪೂಜಿಸುವ ಭಾಗ್ಯವು ಒದಗಿದೆ. ಎಲೈ ರಾಘವನೆ, ನೀನು ಸೀತಾಸಮೇತನಾಗಿ ಯಾವಾಗಲೂ ನನ್ನ ಹೃದಯದಲ್ಲಿ ವಾಸಮಾಡುವವನಾಗು. ನಾನು ನಿಂತಿರಲಿ, ಓಡಾಡುತ್ತಿರಲಿ, ನಿನ್ನ ಸ್ಮೃತಿಯು ಎಂದೆಂದಿಗೂ ನನಗೆ ಇರಲಿ!

**ಇತಿ ಸ್ತುತ್ವಾ ರಮಾನಾಥಮಗಸ್ತ್ಯೋ ಮುನಿಸತ್ತಮಃ ।**
**ದದೌ ಚಾಪಂ ಮಹೇಂದ್ರೇಣ ರಾಮಾರ್ಥೇ ಸ್ಥಾಪಿತಂ ಪುರಾ ॥ ೪೫ ॥**
**ಅಕ್ಷಯೌ ಬಾಣತೂಣೀರೌ ಖಡ್ಗೋ ರತ್ನವಿಭೂಷಿತಃ ।**
**ಜಹಿ ರಾಘವ ಭೂಭಾರಭೂತಂ ರಾಕ್ಷಸಮಂಡಲಮ್ ॥ ೪೬ ॥**
**ಯದರ್ಥಮವತೀರ್ಣೋಽಸಿ ಮಾಯಯಾ ಮನುಜಾಕೃತಿಃ ।**

೪೫-೪೬. ಈ ರೀತಿಯಾಗಿ ರಮಾಪತಿಯಾದ ರಾಮನನ್ನು ಹೊಗಳಿ ಮುನಿಶ್ರೇಷ್ಠನಾದ ಅಗಸ್ತ್ಯನು ರಾಮನಿಗಾಗಿ ಮಹೇಂದ್ರನು ಇಟ್ಟಿದ್ದ ಬಿಲ್ಲನ್ನೂ ಅಕ್ಷಯವಾದ ಬಾಣಬತ್ತಳಿಕೆಗಳನ್ನೂ ರತ್ನಾಲಂಕೃತವಾದ ಕತ್ತಿಯನ್ನೂ ಕೊಟ್ಟನು. ಹಾಗೂ ''ಎಲೈ ರಾಮನೆ, ಭೂಮಿಗೆ ಭಾರವಾಗಿರುವ ರಾಕ್ಷಸರ ಗುಂಪನ್ನೆಲ್ಲ ನಾಶಗೊಳಿಸುವನಾಗು. ಮಾಯಾಮನುಷ್ಯನಾಗಿ ಏತಕ್ಕಾಗಿ ಅವತರಿಸಿರುವೆಯೋ ಆ ಕಾರ್ಯವನ್ನು ಸಾಧಿಸುವವನಾಗು.

**ಇತೋ ಯೋಜನಯುಗ್ಮೇ ತು ಪುಣ್ಯಕಾನನಮಂಡಿತಃ ।**
**ಅಸ್ತಿ ಪಂಚವಟೀ ನಾಮ್ನಾ ಆಶ್ರಮೋ ಗೌತಮೀತಟೇ ॥ ೪೭ ॥**
**ನೇತವ್ಯಸ್ತತ್ರ ತೇ ಕಾಲಃ ಶೇಷೋ ರಘುಕುಲೋದ್ವಹ ।**
**ತತ್ರೈವ ಬಹುಕಾರ್ಯಾಣಿ ದೇವಾನಾಂ ಕುರು ಸತ್ಪತೇ ॥ ೪೮ ॥**

೪೭-೪೮. ಇಲ್ಲಿಂದ ಎರಡು ಯೋಜನಗಳ ದೂರದಲ್ಲಿ ಪುಣ್ಯತಮವಾದ ಕಾಡುಗಳಿಂದ ಅಲಂಕೃತವಾದ, ಗೌತಮೀನದಿಯ ದಡದಲ್ಲಿರುವ ಪಂಚವಟೀ ಎಂಬ ಆಶ್ರಮವಿದೆ. ನೀನು ಅಲ್ಲಿ ಉಳಿದ ಕಾಲವನ್ನು ಕಳೆಯುವವನಾಗು. ಎಲೈ ರಘುಕುಲಶ್ರೇಷ್ಠನೆ, ಸತ್ಪತಿಯೆ, ಅಲ್ಲಿಯೇ ಇದ್ದುಕೊಂಡು ದೇವತೆಗಳ ಅನೇಕಕಾರ್ಯಗಳನ್ನು ಮಾಡುವವನಾಗು.''

**ಶ್ರುತ್ವಾ ತದಾಗಸ್ತ್ಯಸುಭಾಷಿತಂ ವಚಃ**
**ಸ್ತೋತ್ರಂ ಚ ತತ್ತ್ವಾರ್ಥಸಮನ್ವಿತಂ ವಿಭುಃ ।**

**ಮುನಿಂ ಸಮಾಭಾಷ್ಯ ಮುದಾನ್ವಿತೋ ಯಯೌ**
**ಪ್ರದರ್ಶಿತಂ ಮಾರ್ಗಮಶೇಷವಿದ್ಧರಿಃ ॥ ೪೯ ॥**

೪೯. ವಿಭುವಾದ ಶ್ರೀಹರಿಯಾದ ರಾಮನು ಆಗ ಅಗಸ್ತ್ಯರ ಹಿತವಚನವನ್ನೂ ಹಾಗೂ ತತ್ವಾರ್ಥಯುಕ್ತವಾದ ಸ್ತೋತ್ರವನ್ನೂ ಕೇಳಿದವನಾಗಿ ಸಂತೋಷದಿಂದ ಮುನಿಯನ್ನು ಮಾತನಾಡಿಸಿ ಅವನು ತಿಳಿಸಿದ ಹಾದಿಯಿಂದ ಮುಂದಕ್ಕೆ ಪ್ರಯಾಣಮಾಡಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ತೃತೀಯಃ ಸರ್ಗಃ**

::::::::::

# ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಮಾರ್ಗೇ ವ್ರಜನ್ ದದರ್ಶಾಥ ಶೈಲಶೃಂಗಮಿವ ಸ್ಥಿತಮ್ ।**
**ವೃದ್ಧಂ ಜಟಾಯುಷಂ ರಾಮಃ ಕಿಮೇತದಿತಿ ವಿಸ್ಮಿತಃ ॥ ೧ ॥**
**ಧನುರಾದಾಯ ಸೌಮಿತ್ರೇ ರಾಕ್ಷಸೋಽಯಂ ಪುರಃ ಸ್ಥಿತಃ ।**
**ಇತ್ಯಾಹ ಲಕ್ಷ್ಮಣಂ ರಾಮೋ ಹನಿಷ್ಯಾಮ್ಯೃಷಿಭಕ್ಷಕಮ್ ॥ ೨ ॥**
**ತಚ್ಛ್ರುತ್ವಾ ರಾಮವಚನಂ ಗೃಧ್ರರಾಡ್ ಭಯಪೀಡಿತಃ ।**
**ವಧಾರ್ಹೋಽಹಂ ನ ತೇ ರಾಮ ಪಿತುಸ್ತೇಽಹಂ ಪ್ರಿಯಃ ಸಖಾ ॥ ೩ ॥**
**ಜಟಾಯುರ್ನಾಮ ಭದ್ರಂ ತೇ ಗೃಧ್ರೋಽಹಂ ಪ್ರಿಯಕೃತ್ತವ ।**
**ಪಂಚವಟ್ಯಾಮಹಂ ವತ್ಸ್ಯೇ ತವೈವ ಪ್ರಿಯಕಾಮ್ಯಯಾ ॥ ೪ ॥**
**ಮೃಗಯಾಯಾಂ ಕದಾಚಿತ್ತು ಪ್ರಯಾತೇ ಲಕ್ಷ್ಮಣೇಽಪಿ ಚ ।**
**ಸೀತಾ ಜನಕಕನ್ಯಾ ಮೇ ರಕ್ಷಿತವ್ಯಾ ಪ್ರಯತ್ನತಃ ॥ ೫ ॥**

೧-೫. ಶ್ರೀ ಮಹಾದೇವನಿಂತೆಂದನು : ದಾರಿಯಲ್ಲಿ ಹೋಗುತ್ತಾ ರಾಮನು ಬೆಟ್ಟದಂತೆ ಇರುವ ಆಕಾರವುಳ್ಳ ಮುದುಕನಾದ ಜಟಾಯುವನ್ನು ಕಂಡು ಇದೇನಿರಬಹುದು ? ಎಂದು ಆಶ್ಚರ್ಯಗೊಂಡವನಾಗಿ ಕೈಯಲ್ಲಿ ಬಿಲ್ಲನ್ನು ತೆಗೆದುಕೊಂಡು ''ಲಕ್ಷ್ಮಣ, ಇದೊ, ಎದುರಿಗೆ ಒಬ್ಬ ರಾಕ್ಷಸನು ಇದ್ದಾನೆ ; ಋಷಿಗಳನ್ನು ತಿಂದುಹಾಕುವ ಇವನನ್ನು ಈಗ ಕೊಲ್ಲುವೆನು'' ಎಂದನು. ರಾಮನ ಆ ಮಾತನ್ನು ಕೇಳಿ ಗೃಧ್ರರಾಜನು ಹೆದರಿದವನಾಗಿ 'ಎಲೈ, ರಾಮನೆ, ನಾನು ಕೊಲ್ಲಲ್ಪಡಲು ಯೋಗ್ಯನಲ್ಲ ; ನಿನಗೆ

ಬೇಕಾದವನೇ ; ನಿನ್ನ ತಂದೆಗೆ ನಾನು ಆಪ್ತಸ್ನೇಹಿತನು. ನನ್ನ ಹೆಸರು ಜಟಾಯು-ಎಂದಿದೆ. ನಿನಗೆ ಮಂಗಳವಾಗಲಿ ; ನಿನ್ನ ವಿಷಯಕ್ಕೆ ನಾನು ಒಳ್ಳೆಯದನ್ನುಂಟು ಮಾಡುವವನು ; ನಿನ್ನ ಹಿತಕ್ಕಾಗಿಯೇ ನಾನು ಪಂಚವಟಿಯಲ್ಲಿ ವಾಸಮಾಡುತ್ತಿರುವೆನು. ಯಾವಾಗಲಾದರೊಮ್ಮೆ ನೀನೂ ಲಕ್ಷ್ಮಣನೂ ಬೇಟೆಗಾಗಿ ಹೋದಾಗ ಜನಕನ ಮಗಳಾದ ಸೀತೆಯನ್ನು ನಾನು ಎಚ್ಚರಿಕೆಯಿಂದ ಕಾಪಾಡುವೆನು'' ಎಂದಿತು.

**ಶ್ರುತ್ವಾ ತದ್ ಗೃಧ್ರವಚನಂ ರಾಮಃ ಸಸ್ನೇಹಮಬ್ರವೀತ್ ।**
**ಸಾಧು ಗೃಧ್ರ ಮಹಾರಾಜ ತಥೈವ ಕುರು ಮೇ ಪ್ರಿಯಮ್** ॥ ೬ ॥
**ಅತ್ರೈವ ಮೇ ಸಮೀಪಸ್ಥೋ ನಾತಿದೂರೇ ವನೇ ವಸನ್ ।**
**ಇತ್ಯಾಮಂತ್ರ್ಯ ತಮಾಲಿಂಗ್ಯ ಯಯೌ ಪಂಚವಟೀಂ ವಿಭುಃ** ॥ ೭ ॥
**ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ರಘುನಂದನಃ ।**

೬-೭. ಗೃಧ್ರರಾಜನ ಆ ಮಾತನ್ನು ಕೇಳಿ ರಾಮನು ಪ್ರೀತಿಯಿಂದ ಹೀಗೆಂದನು : 'ಗೃಧ್ರಮಹಾರಾಜ, ಬಹಳ ಒಳ್ಳೆಯದು ; ನೀನು ನನಗೆ ಇಷ್ಟವಾದ ಕೆಲಸವನ್ನು ಹಾಗೇ ಮಾಡುವನಾಗು. ಇಲ್ಲಿಯೇ ನನಗೆ ಹತ್ತಿರವಾಗಿ ಬಹಳ ದೂರವಿಲ್ಲದ ಕಾಡಿನಲ್ಲಿದ್ದು ಕೊಂಡು (ಉಪಕಾರಮಾಡುವವನಾಗು') ಹೀಗೆಂದು ಹೇಳಿ ಆಲಿಂಗಿಸಿಕೊಂಡು ವಿಭು ವಾದ ರಾಮನು ಸೋದರನಾದ ಲಕ್ಷ್ಮಣ ಹಾಗೂ ಸೀತೆಯೊಡಗೂಡಿ ಪಂಚವಟಿಗೆ ಹೊರಟನು.

**ಗತ್ವಾ ತೇ ಗೌತಮೀತೀರಂ ಪಂಚವಟ್ಯಾಂ ಸುವಿಸ್ತರಮ್ ।**
**ಮಂದಿರಂ ಕಾರಯಾಮಾಸ ಲಕ್ಷ್ಮಣೇನ ಸುಬುದ್ಧಿನಾ** ॥ ೮ ॥
**ತತ್ರ ತೇ ನ್ಯವಸನ್ ಸರ್ವೇ ಗಂಗಾಯಾ ಉತ್ತರೇ ತಟೇ ।**
**ಕದಂಬಪನಸಾಮ್ರಾದಿಫಲವೃಕ್ಷಸಮಾಕುಲೇ** ॥ ೯ ॥
**ವಿವಿಕ್ತೇ ಜನಸಂಬಾಧವರ್ಜಿತೇ ನೀರುಜಸ್ಥಲೇ ।**
**ವಿನೋದಯನ್ ಜನಕಜಾಂ ಲಕ್ಷ್ಮಣೇನ ವಿಪಶ್ಚಿತಾ** ॥ ೧೦ ॥
**ಅಧ್ಯುವಾಸ ಸುಖಂ ರಾಮೋ ದೇವಲೋಕ ಇವಾಪರಃ ॥**

೮-೧೦. ಅವರುಗಳು ಗೌತಮೀನದಿಯ ತೀರಕ್ಕೆ ಬಂದವರಾದರು. ಜಾಣನಾದ ಲಕ್ಷ್ಮಣನಿಂದ ಪಂಚವಟಿಯಲ್ಲಿ ಒಂದು ಪರ್ಣಶಾಲೆಯನ್ನು ಮಾಡಿಸಿದನು. (ಗೌತಮೀ ಎಂಬ) ಗಂಗಾಸಮಾನವಾದ ನದಿಯ ಉತ್ತರದದಡದಲ್ಲಿ ಕದಂಬ, ಹಲಸು, ಮಾವು - ಮುಂತಾದ ಹಣ್ಣಿನ ಮರಗಳಿಂದ ನಿಬಿಡವಾದ ಏಕಾಂತವಾದ, ಜನರ ಗದ್ದಲವಿಲ್ಲದ ರೋಗರಹಿತವಾದ ಸ್ಥಳದಲ್ಲಿ ಬುದ್ಧಿವಂತನಾದ ಲಕ್ಷ್ಮಣನೊಡಗೂಡಿ

ಸೀತೆಯನ್ನು ಸಂತೋಷಗೊಳಿಸುತ್ತಾ ಸುಖವಾಗಿ ರಾಮನು ದೇವಲೋಕದಲ್ಲಿದ್ದಂತೆ ವಾಸವಾಗಿದ್ದನು.

**ಕಂದಮೂಲಫಲಾದೀನಿ ಲಕ್ಷ್ಮಣೋಽನುದಿನಂ ತಯೋಃ ।**
**ಆನೀಯ ಪ್ರದದೌ ರಾಮಸೇವಾತತ್ಪರಮಾನಸಃ ॥ ೧೧ ॥**
**ಧನುರ್ಬಾಣಧರೋ ನಿತ್ಯಂ ರಾತ್ರೌ ಜಾಗರ್ತಿ ಸರ್ವತಃ ।**
**ಸ್ನಾನಂ ಕುರ್ವಂತ್ಯನುದಿನಂ ತ್ರಯಸ್ತೇ ಗೌತಮೀಜಲೇ ॥ ೧೨ ॥**
**ಉಭಯೋರ್ಮಧ್ಯಗಾ ಸೀತಾ ಕುರುತೇ ಚ ಗಮಾಗಮೌ ।**
**ಆನೀಯ ಸಲಿಲಂ ನಿತ್ಯಂ ಲಕ್ಷ್ಮಣಃ ಪ್ರೀತಮಾನಸಃ ॥ ೧೩ ॥**
**ಸೇವತೇಽಹರಹಃ ಪ್ರೀತ್ಯಾ ಏವಮಾಸನ್ ಸುಖಂ ತ್ರಯಃ ।**

೧೧-೧೩. ಪ್ರತಿದಿನವೂ ಲಕ್ಷ್ಮಣನು ಅವರಿಗೆ ಕಂದಮೂಲಫಲಗಳೇ ಮೊದಲಾದವನ್ನು ತಂದು ಶ್ರೀರಾಮನ ಸೇವಾದೃಷ್ಟಿಯಿಂದ ತತ್ಪರನಾಗಿ ಅರ್ಪಿಸುತ್ತಿದ್ದನು. ರಾತ್ರಿಯಲ್ಲಿ ಧನುರ್ಬಾಣಗಳನ್ನು ಧರಿಸಿಕೊಂಡು ಜಾಗರಣೆಯಿಂದ ಕಾಯುತ್ತಿದ್ದನು ಮೂವರೂ ಪ್ರತಿದಿನವೂ ಗೌತಮೀನದಿಯ ನೀರಿನಲ್ಲಿ ಸ್ನಾನಮಾಡುತ್ತಿದ್ದರು. ಸೀತೆಯು ಹೊರಗೆ ಹೋಗುವಾಗ, ಬರುವಾಗ - ರಾಮಲಕ್ಷ್ಮಣರ ನಡುವೆಯೇ ಚಲಿಸುತ್ತಿದ್ದಳು. ಲಕ್ಷ್ಮಣನು ಭಕ್ತಿಯಿಂದ ನೀರನ್ನು ತಂದುಕೊಡುತ್ತಿದ್ದನು. ಹೀಗೆ ಮೂವರೂ ಸುಖವಾಗಿದ್ದರು.

**ಏಕದಾ ಲಕ್ಷ್ಮಣೋ ರಾಮಮೇಕಾಂತೇ ಸಮುಪಸ್ಥಿತಮ್ ।**
**ವಿನಯಾವನತೋ ಭೂತ್ವಾ ಪಪ್ರಚ್ಛ ಪರಮೇಶ್ವರಮ್ ॥ ೧೪ ॥**
**ಭಗವನ್ ಶ್ರೋತುಮಿಚ್ಛಾಮಿ ಮೋಕ್ಷಸ್ಯೈಕಾಂತಿಕೀಂ ಗತಿಮ್ ।**
**ತ್ವತ್ತಃ ಕಮಲಪತ್ರಾಕ್ಷ ಸಂಕ್ಷೇಪಾದ್ವಕ್ತುಮರ್ಹಸಿ ॥ ೧೫ ॥**
**ಜ್ಞಾನಂ ವಿಜ್ಞಾನಸಹಿತಂ ಭಕ್ತಿವೈರಾಗ್ಯಬೃಂಹಿತಮ್ ।**
**ಆಚಕ್ಷ್ವ ಮೇ ರಘುಶ್ರೇಷ್ಠ ವಕ್ತಾ ನಾನ್ಯೋಽಸ್ತಿ ಭೂತಲೇ ॥ ೧೬ ॥**

೧೪-೧೬. ಒಮ್ಮೆ ಲಕ್ಷ್ಮಣನು ಏಕಾಂತದಲ್ಲಿ ಕುಳಿತಿರುವ ರಾಮನನ್ನು ಕಂಡು ವಿನಯದಿಂದ ತಲೆಬಾಗಿದವನಾಗಿ ಪರಮೇಶ್ವರನಾದ ರಾಮನನ್ನು ಕುರಿತು ಹೀಗೆ ಕೇಳಿದನು. ''ಪೂಜ್ಯನೆ, ಮೋಕ್ಷಕ್ಕೆ ಖಚಿತವಾಗಿ ಗೊತ್ತಾದ ಸಾಧನವು ಯಾವದೆಂಬುದನ್ನು ನಿನ್ನಿಂದ ಕೇಳಲಿಚ್ಛಿಸುತ್ತೇನೆ. ಎಲೈ ಕಮಲನೇತ್ರನೆ, ಸಂಕ್ಷೇಪವಾಗಿ ಈ ವಿಚಾರವನ್ನು ಹೇಳಬೇಕು. ವಿಜ್ಞಾನಸಹಿತವಾದ ಜ್ಞಾನವನ್ನು ಭಕ್ತಿವೈರಾಗ್ಯಗಳೊಡನೆ ವಿಸ್ತರಿಸಿ ಎಲೈ ರಘುಶ್ರೇಷ್ಠನೆ, ನನಗೆ ಹೇಳು. ಭೂಲೋಕದಲ್ಲಿ ನಿನ್ನಂಥ ಉಪದೇಶಕನು ಬೇರೊಬ್ಬನಿರುವದಿಲ್ಲ.''

**ಶ್ರೀರಾಮ ಉವಾಚ-**

**ಶೃಣು ವಕ್ಷ್ಯಾಮಿ ತೇ ವತ್ಸ ಗುಹ್ಯಾದ್ಗುಹ್ಯತರಂ ಪರಮ್ ।**
**ಯದ್ವಿಜ್ಞಾಯ ನರೋ ಜಹ್ಯಾತ್ ಸದ್ಯೋ ವೈಕಲ್ಪಿಕಂ ಭ್ರಮಮ್ ॥ ೧೭ ॥**
**ಆದೌ ಮಾಯಾಸ್ವರೂಪಂ ತೇ ವಕ್ಷ್ಯಾಮಿ ತದನಂತರಮ್ ।**
**ಜ್ಞಾನಸ್ಯ ಸಾಧನಂ ಪಶ್ಚಾತ್ ಜ್ಞಾನಂ ವಿಜ್ಞಾನಸಂಯುತಮ್ ॥ ೧೮ ॥**
**ಜ್ಞೇಯಂ ಚ ಪರಮಾತ್ಮಾನಂ ಯಜ್ಞಾತ್ವಾ ಮುಚ್ಯತೇ ಭಯಾತ್ ।**
**ಅನಾತ್ಮನಿ ಶರೀರಾದೌ ಆತ್ಮಬುದ್ಧಿಸ್ತು ಯಾ ಭವೇತ್ ॥ ೧೯ ॥**
**ಸೈವ ಮಾಯಾ ತಯೈವಾಸೌ ಸಂಸಾರಃ ಪರಿಕಲ್ಪ್ಯತೇ ॥**

೧೭-೧೯. ಶ್ರೀರಾಮನಿಂತೆಂದನು : ‘‘ಅಪ್ಪ, ಮಗು, ಹೇಳುವೆನು ; ಕೇಳು. ಅತ್ಯಂತಗುಟ್ಟಿನಲ್ಲಿ ಗುಟ್ಟಾದ, ಹೆಚ್ಚಿನದಾದ ಈ ವಿಚಾರವನ್ನು ತಿಳಿಸುವೆನು. ಯಾವ ಈ ವಿಷಯದ ತಿಳಿವಳಿಕೆಯುಂಟಾದರೆ ಮನುಷ್ಯನು ಕೂಡಲೆ ಮನೋವಿಕಲ್ಪದಿಂದಾದ ಭ್ರಮೆಯನ್ನು ಮೀರುವನೋ ಅಂಥದ್ದನ್ನು ಹೇಳುವೆನು. ಮೊದಲು ನಿನಗೆ ಮಾಯೆಯ ಸ್ವರೂಪವನ್ನೂ ಅನಂತರ ಜ್ಞಾನಕ್ಕೆ ಸಾಧನವನ್ನೂ ಮುಂದೆ ಅನುಭವದಿಂದೊಡಗೂಡಿದ ಜ್ಞಾನವನ್ನೂ ಅನಂತರ ಜ್ಞೇಯನಾದ ಪರಮಾತ್ಮನ ತತ್ತ್ವವನ್ನೂ ಹೇಳುವೆನು. ಅದನ್ನರಿಯುವದರಿಂದ ಭಯದಿಂದ ಬಿಡುಗಡೆಯಾಗುವದು. ಆತ್ಮನಲ್ಲದ ಶರೀರಾದಿಗಳಲ್ಲಿ ತಾನೆಂಬ ಬುದ್ಧಿಯೇನಿರುವದೋ ಅದನ್ನೇ ಮಾಯೆಯೆನ್ನುವರು. ಅದರಿಂದಲೇ ಸಂಸಾರವು ಕಲ್ಪಿತವಾಗಿರುವದು.

**ರೂಪೇ ದ್ವೇ ನಿಶ್ಚಿತೇ ಪೂರ್ವಂ ಮಾಯಾಯಾಃ ಕುಲನಂದನ ।**
**ವಿಕ್ಷೇಪಾವರಣೇ ತತ್ರ ಪ್ರಥಮಂ ಕಲ್ಪಯೇಜ್ಜಗತ್ ॥ ೨೦ ॥**
**ಲಿಂಗಾದ್ಯಬ್ರಹ್ಮಪರ್ಯಂತಂ ಸ್ಥೂಲಸೂಕ್ಷ್ಮವಿಭೇದತಃ ।**
**ಅಪರಂ ತ್ವಖಿಲಂ ಜ್ಞಾನರೂಪಮಾವೃತ್ಯ ತಿಷ್ಠತಿ ॥ ೨೧ ॥**
**ಮಾಯಯಾ ಕಲ್ಪಿತಂ ವಿಶ್ವಂ ಪರಮಾತ್ಮನಿ ಕೇವಲೇ ।**
**ರಜ್ಜೌ ಭುಜಂಗವದ್ ಭ್ರಾಂತ್ಯಾ ವಿಚಾರೇ ನಾಸ್ತಿ ಕಿಂಚನ ॥ ೨೨ ॥**
**ಶ್ರೂಯತೇ ದೃಶ್ಯತೇ ಯದ್ಯತ್ ಸ್ಮರ್ಯತೇ ವಾ ನರೈಃ ಸದಾ ।**
**ಅಸದೇವ ಹಿ ತತ್ಸರ್ವಂ ಯಥಾ ಸ್ವಪ್ನಮನೋರಥೌ ॥ ೨೩ ॥**

೨೦-೨೩. ಎಲೈ ಕುಲನಂದನನೆ, ಮಾಯೆಗೆ ಎರಡುರೂಪಗಳು ಗೊತ್ತಾಗಿರುತ್ತವೆ. ವಿಕ್ಷೇಪ, ಆವರಣ-ಎಂಬಿವೇ ಅವೆರಡು. ಇವುಗಳಲ್ಲಿ ಮೊದಲನೆಯದು ಸೂಕ್ಷ್ಮಶರೀರದಿಂದಾರಂಭಿಸಿ ಬ್ರಹ್ಮನವರೆಗಿನ ಎಲ್ಲಾ ಪ್ರಪಂಚವನ್ನೂ ಸ್ಥೂಲಸೂಕ್ಷ್ಮಗಳೆಂಬ ವಿಭಾಗಗಳಾಗಿ ಕಲ್ಪಿಸುತ್ತದೆ. ಮತ್ತೊಂದು ಎಲ್ಲಾ ಜ್ಞಾನರೂಪ

ಗಳನ್ನೂ ಆವರಿಸಿಕೊಂಡಿರುತ್ತದೆ. ಹೀಗೆ ಮಾಯೆಯಿಂದ ಕಲ್ಪಿತವಾದ ಬ್ರಹ್ಮಾಂಡವು ಕೇವಲನಾದ ಪರಮಾತ್ಮನಲ್ಲಿ ಹಗ್ಗದಲ್ಲಿ ಹಾವು ತೋರಿಕೊಂಡಂತೆ ತೋರಿಕೊಳ್ಳುತ್ತದೆ. ವಿಚಾರಮಾಡಿದರೆ ಏನೂ ಇರುವದೇ ಇಲ್ಲ. ಮನುಷ್ಯರು ಏನೇನು ಕೇಳುತ್ತಾರೋ, ನೋಡುತ್ತಾರೋ, ನೆನೆಯಿಸಿಕೊಳ್ಳುತ್ತಾರೋ, ಅದೆಲ್ಲವೂ ಸ್ವಪ್ನದಂತೆಯೂ ಮನಸ್ಸಿನಲ್ಲಿ ಕಲ್ಪಿಸಿಕೊಂಡ ಇಷ್ಟಾರ್ಥದಂತೆಯೂ ಸುಳ್ಳೇ ಆಗಿರುತ್ತದೆ.

**ದೇಹ ಏವ ಹಿ ಸಂಸಾರವೃಕ್ಷಮೂಲಂ ದೃಢಂ ಸ್ಮೃತಮ್ ।**
**ತನ್ಮೂಲಃ ಪುತ್ರದಾರಾದಿ ಬಂಧಃ ಕಿಂ ತೇಽನ್ಯಥಾತ್ಮನಃ ॥ ೨೪ ॥**
**ದೇಹಸ್ತು ಸ್ಥೂಲಭೂತಾನಾಂ ಪಂಚ ತನ್ಮಾತ್ರಪಂಚಕಮ್ ।**
**ಅಹಂಕಾರಶ್ಚ ಬುದ್ಧಿಶ್ಚ ಇಂದ್ರಿಯಾಣಿ ತಥಾ ದಶ ॥ ೨೫ ॥**
**ಚಿದಾಭಾಸೋ ಮನಶ್ಚೈವ ಮೂಲಪ್ರಕೃತಿರೇವ ಚ ।**
**ಏತತ್ ಕ್ಷೇತ್ರಮಿತಿ ಜ್ಞೇಯಂ ದೇಹ ಇತ್ಯಭಿಧೀಯತೇ ॥ ೨೬ ॥**

೨೪-೨೬. ದೇಹವೇ ಸಂಸಾರವೆಂಬ ಮರಕ್ಕೆ ಭದ್ರವಾದ ಬೇರಾಗಿರುವದು. ಮಗ, ಹೆಂಡತಿ - ಮುಂತಾದ ಸಂಬಂಧಗಳು ಆ ದೇಹಾಭಿಮಾನದಿಂದಾಗಿರುವವು. ಅದನ್ನು ಬಿಟ್ಟರೆ ಆತ್ಮನಿಗೆ ಸಂಬಂಧವಾದರೂ ಇನ್ನೇನಿದ್ದೀತು ? ದೇಹವಾದರೊ, ಸ್ಥೂಲ ವಾದ ಪಂಚಭೂತಗಳ ಅಂಶದಿಂದಾಗಿದೆ. ಐದು ಮಹಾಭೂತಗಳು, ಹಾಗೂ ತನ್ಮಾತ್ರೆ ಗಳು, ಅಹಂಕಾರ, ಬುದ್ಧಿ, ಹತ್ತು ಇಂದ್ರಿಯಗಳು, ಚಿದಾಭಾಸನೆಂಬ ಜೀವನು, ಮನಸ್ಸು ಮೂಲಪ್ರಕೃತಿ - ಇವೆಲ್ಲವೂ ಕ್ಷೇತ್ರವೆಂದು ತಿಳಿ. ದೇಹವೆಂದೂ ಇದನ್ನು ಕರೆಯುವರು.

**ಏತೈರ್ವಿಲಕ್ಷಣೋ ಜೀವಃ ಪರಮಾತ್ಮಾ ನಿರಾಮಯಃ ।**
**ತಸ್ಯ ಜೀವಸ್ಯ ವಿಜ್ಞಾನೇ ಸಾಧನಾನ್ಯಪಿ ಮೇ ಶೃಣು ॥ ೨೭ ॥**
**ಜೀವಶ್ಚ ಪರಮಾತ್ಮಾ ಚ ಪರ್ಯಾಯೋ ನಾತ್ರ ಭೇದಧೀಃ ।**
**ಮಾನಾಭಾವಸ್ತಥಾ ದಂಭಹಿಂಸಾದಿಪರಿವರ್ಜನಮ್ ॥ ೨೮ ॥**
**ಪರಾಕ್ಷೇಪಾದಿಸಹನಂ ಸರ್ವತ್ರಾವಕ್ರತಾ ತಥಾ।**
**ಮನೋವಾಕ್ಕಾಯಸದ್ಭಕ್ತ್ಯಾ ಸದ್ಗುರೋಃ ಪರಿಸೇವನಮ್ ॥ ೨೯ ॥**
**ಬಾಹ್ಯಾಭ್ಯಂತರಸಂಶುದ್ಧಿಃ ಸ್ಥಿರತಾ ಸತ್ಕ್ರಿಯಾದಿಷು।**
**ಮನೋವಾಕ್ಕಾಯದಂಡಶ್ಚ ವಿಷಯೇಷು ನಿರೀಹತಾ ॥ ೩೦ ॥**

೨೭-೩೦. ಇವುಗಳಿಗಿಂತ ವಿಲಕ್ಷಣನಾದ ಪರಮಾತ್ಮನಾದ ದೋಷರಹಿತ ನಾದವನೇ ಜೀವನು. ಆ ಜೀವನ ವಿಜ್ಞಾನವನ್ನು ಪಡೆಯಲು ಸಾಧನಗಳನ್ನು ಹೇಳು ವೆನು. ಕೇಳು. ಜೀವ-ಪರಮಾತ್ಮ ಇಬ್ಬರೂ ಒಂದೇ. ಇವೆರಡೂ ಪರ್ಯಾಯ ಶಬ್ದಗಳೇ. ಆದ್ದರಿಂದ ಜೀವಬ್ರಹ್ಮರುಗಳಲ್ಲಿ ನಿಜವಾಗಿ ಭೇದವಿರುವದಿಲ್ಲ. ಇದನ್ನು ತಿಳಿಯಲು

ಸಾಧನಗಳನ್ನು ಮಾಡಬೇಕು. ಹೇಗೆಂದರೆ : ನಿರಹಂಕಾರಿಯಾಗಿರುವದು, ಜಂಭ, ಹಿಂಸೆ- ಮುಂತಾದವುಗಳನ್ನು ಬಿಟ್ಟಿರುವದು, ಮತ್ತೊಬ್ಬರು ಬೈದರೆ ತಡೆದುಕೊಳ್ಳುವದು, ಎಲ್ಲರಲ್ಲಿಯೂ ಸರಳವಾಗಿರುವದು, ಮನಸ್ಸು, ಮಾತು, ಶರೀರಗಳಿಂದ ಭಕ್ತಿಯನ್ನು ಮಾಡುತ್ತಾ ಸದ್ಗುರುವನ್ನು ಆಶ್ರಯಿಸುವದು, ಒಳಗೂ ಹೊರಗೂ ಶುಚಿಯಾಗಿರುವದು, ಒಳ್ಳೆಯ ಕೆಲಸಗಳಲ್ಲಿ ಗಟ್ಟಿಮನಸ್ಸುಳ್ಳವನಾಗಿರುವದು, ಮನಸ್ಸು, ಮಾತು, ಶರೀರವನ್ನು ಉತ್ತಮಕಾರ್ಯಗಳಲ್ಲಿ ಸವೆಯಿಸುವದು, ವಿಷಯಗಳಲ್ಲಿ ಆಸಕ್ತಿಯಿಲ್ಲದೆ ಇರುವದು - (ಮುಂದುವರೆದಿದೆ).

**ನಿರಹಂಕಾರತಾ ಜನ್ಮಜರಾದ್ಯಾಲೋಚನಂ ತಥಾ ।**
**ಅಸಕ್ತಿಃ ಸ್ನೇಹಶೂನ್ಯತ್ವಂ ಪುತ್ರದಾರಧನಾದಿಷು ॥ ೩೧ ॥**
**ಇಷ್ಟಾನಿಷ್ಟಾಗಮೇ ನಿತ್ಯಂ ಚಿತ್ತಸ್ಯ ಸಮತಾ ತಥಾ ।**
**ಮಯಿ ಸರ್ವಾತ್ಮಕೇ ರಾಮೇ ಹ್ಯನನ್ಯವಿಷಯಾಮತಿಃ ॥ ೩೨ ॥**
**ಜನಸಂಬಾಧರಹಿತಶುದ್ಧದೇಶನಿಷೇವಣಮ್ ।**
**ಪ್ರಾಕೃತೈರ್ಜನಸಂಘೈಶ್ಚ ಹ್ಯರತಿಃ ಸರ್ವದಾ ಭವೇತ್ ॥ ೩೩ ॥**
**ಆತ್ಮಜ್ಞಾನೇ ಸದೋದ್ಯೋಗೋ ವೇದಾಂತಾರ್ಥಾವಲೋಕನಮ್ ।**
**ಉಕ್ತೈರೇತೈರ್ಭವೇಜ್ಜ್ಞಾನಂ ವಿಪರೀತೈರ್ವಿಪರ್ಯಯಃ ॥ ೩೪ ॥**

೩೧-೩೪. ಅಹಂಕಾರವಿಲ್ಲದಿರುವಿಕೆ, ಹುಟ್ಟು, ಮುಪ್ಪು, ಮುಂತಾದವುಗಳನ್ನು ಕುರಿತು ಚಿಂತಿಸುವದು, ವಿರಕ್ತಿ, ಮಗ, ಹೆಂಡತಿ, ಹಣ ಮುಂತಾದ ಪದಾರ್ಥಗಳಲ್ಲಿ ಸ್ನೇಹವಿಲ್ಲದಿರುವಿಕೆ, ಒಳ್ಳೆಯದಾಗಲಿ, ಕೆಟ್ಟದ್ದಾಗಲಿ - ಬಂದೊದಗಿದಾಗ ಅಂತಃಕರಣ ವನ್ನು ಅಳ್ಳಾಡದಂತೆ ಇಟ್ಟುಕೊಳ್ಳುವದು, ಸರ್ವಾತ್ಮಕನಾದ ರಾಮನಾದ ನನ್ನಲ್ಲಿ ಚಂಚಲವಿಲ್ಲದ ಮನಸ್ಸುಳ್ಳವನಾಗಿರುವದು, ಜನಜಂಗುಳಿಯಿಲ್ಲದ ಪರಿಶುದ್ಧವಾದ ಜಾಗವನ್ನು ಸೇವಿಸುವದು (ಏಕಾಂತವಾಗಿರುವದು), ಪ್ರಾಪಂಚಿಕರಾದ ಜನರ ಗುಂಪಿ ನಲ್ಲಿ ಬೆರೆಯುವದರಲ್ಲಿ ಆಸಕ್ತನಾಗದೆ ಇರುವದು, ಆತ್ಮಜ್ಞಾನವನ್ನು ಸಂಪಾದಿಸುವದ ರಲ್ಲಿಯೇ ಕ್ರಿಯಾಶೀಲನಾಗಿರುವದು, ಉಪನಿಷತ್ತುಗಳ ಅರ್ಥವನ್ನು ಮನನಮಾಡು ತ್ತಿರುವದು, ಇವೇ ಮೊದಲಾದ ಇಲ್ಲಿ ಹೇಳಿರುವ ಅಧ್ಯಾತ್ಮಸಾಧನಗಳಿಂದ ಜ್ಞಾನ ವುಂಟಾಗುವದು. ಇವುಗಳಿಗೆ ವಿರುದ್ಧವಾದ ಗುಣಗಳನ್ನೇ ಸೇವಿಸಿದಲ್ಲಿ ಸಂಸಾರವೇ ಗತಿಯಾಗುವದು.

**ಬುದ್ಧಿಪ್ರಾಣಮನೋದೇಹಾಹಂಕೃತಿಭ್ಯೋ ವಿಲಕ್ಷಣಃ ।**
**ಚಿದಾತ್ಮಾಹಂ ನಿತ್ಯಶುದ್ಧೋ ಬುದ್ಧ ಏವೇತಿ ನಿಶ್ಚಯಮ್ ॥ ೩೫ ॥**

**ಯೇನ ಜ್ಞಾನೇನ ಸಂವಿತ್ತೇ ತಜ್ಜ್ಞಾನಂ ನಿಶ್ಚಿತಂ ಚ ಮೇ ।**
**ವಿಜ್ಞಾನಂ ಚ ತದೈವೈತತ್ ಸಾಕ್ಷಾದನುಭವೇದ್ಯಥಾ ॥ ೩೬ ॥**
**ಆತ್ಮಾ ಸರ್ವತ್ರ ಪೂರ್ಣಃ ಸ್ಯಾಚ್ಚಿದಾನಂದಾತ್ಮಕೋಽವ್ಯಯಃ**
**ಬುದ್ಧ್ಯಾದ್ಯುಪಾಧಿರಹಿತಃ ಪರಿಣಾಮಾದಿವರ್ಜಿತಃ । ॥ ೩೭ ॥**
**ಸ್ವಪ್ರಕಾಶೇನ ದೇಹಾದೀನ್ ಭಾಸಯನ್ನನಪಾವೃತಃ**
**ಏಕ ಏವಾದ್ವಿತೀಯಶ್ಚ ಸತ್ಯಜ್ಞಾನಾದಿಲಕ್ಷಣಃ ॥ ೩೮ ॥**
**ಅಸಂಗಃ ಸ್ವಪ್ರಭೋ ದ್ರಷ್ಟಾ ವಿಜ್ಞಾನೇನಾವಗಮ್ಯತೇ ।**

೩೫-೩೮. ಬುದ್ಧಿ, ಪ್ರಾಣ, ಮನಸ್ಸು, ದೇಹ, ಅಹಂಕಾರ - ಇವುಗಳಿಗಿಂತ ವಿಲಕ್ಷಣನಾದ ನಿತ್ಯಶುದ್ಧಬುದ್ಧನಾದ ಚಿದಾತ್ಮನೇ ನಾನು - ಎಂಬಿದೇ ತೀರ್ಮಾನವು. ಯಾವ ತಿಳಿವಳಿಕೆಯಿಂದ ಆತ್ಮನನ್ನು ಅರಿಯುವೆವೋ ಅದೇ ಸರಿಯಾದ ಜ್ಞಾನವೆಂದು ನನ್ನ ನಿಶ್ಚಯವು. ಆ ಜ್ಞಾನವು ನೇರಾಗಿ ಅನುಭವದಲ್ಲಿ ಕಂಡುಬಂದರೆ ವಿಜ್ಞಾನವೆನಿಸುವದು. ಆತ್ಮನು ಎಲ್ಲೆಲ್ಲಿಯೂ ತುಂಬಿರುವನು ; ಚಿದಾನಂದಸ್ವರೂಪನು, ಸವೆಯದೆ ಇರುವನು. ಬುದ್ಧಿಯೇ ಮುಂತಾದ ಉಪಾಧಿಗಳಿಲ್ಲದವನು ; ಪರಿಣಾಮಗಳಿಲ್ಲದವನು. ತನ್ನ ಬೆಳಕಿನಿಂದ ದೇಹಾದಿಗಳನ್ನು ಬೆಳಗುತ್ತಾ ಆವರಣವಿಲ್ಲದವನಾಗಿರುವನು. ಏಕನೂ ಅದ್ವಿತೀಯನೂ ಸತ್ಯಜ್ಞಾನಾದಿಸ್ವರೂಪನೂ, ಸಂಗವಿಲ್ಲದವನೂ ಸ್ವಯಂಪ್ರಕಾಶನೂ ಎಲ್ಲವನ್ನೂ ನೋಡುವವನೂ ಆಗಿರುವನು. ಈತನು ಅನುಭವದಿಂದ ತಿಳಿದುಬರುತ್ತಿರುವನು.

**ಆಚಾರ್ಯಶಾಸ್ತ್ರೋಪದೇಶಾತ್ ಐಕ್ಯಜ್ಞಾನಂ ಯದಾ ಭವೇತ್ ।**
**ಆತ್ಮನೋರ್ಜೀವಪರಯೋರ್ಮೂಲಾವಿದ್ಯಾ ತದೈವ ಹಿ ॥ ೩೯ ॥**
**ಲೀಯತೇ ಕಾರ್ಯಕರಣೈಃ ಸಹೈವ ಪರಮಾತ್ಮನಿ ।**
**ಸಾವಸ್ಥಾ ಮುಕ್ತಿರಿತ್ಯುಕ್ತಾ ಹ್ಯುಪಚಾರೋಽಯಮಾತ್ಮನಿ ॥ ೪೦ ॥**
**ಇದಂ ಮೋಕ್ಷಸ್ವರೂಪಂ ತೇ ಕಥಿತಂ ರಘುನಂದನ ।**
**ಜ್ಞಾನವಿಜ್ಞಾನವೈರಾಗ್ಯಸಹಿತಂ ಮೇ ಪರಾತ್ಮನಃ ॥ ೪೧ ॥**

೩೯-೪೧. ಶಾಸ್ತ್ರ ಮತ್ತು ಆಚಾರ್ಯರ ಉಪದೇಶಗಳಿಂದ ಐಕ್ಯಜ್ಞಾನವು ಯಾವಾಗ ಉಂಟಾಗುವದೋ ಆಗಲೇ ಜೀವಾತ್ಮಪರಮಾತ್ಮರ ಭೇದಕ್ಕೆ ಕಾರಣವಾಗಿರುವ ಅನಾದ್ಯವಿದ್ಯೆಯು ಕಾರ್ಯಕರಣಗಳೊಡನೆ ಪರಮಾತ್ಮನಲ್ಲಿಯೇ ಲಯವಾಗಿಬಿಡುವದು. ಆ ಸ್ಥಿತಿಯನ್ನೇ ಮುಕ್ತಿ ಎನ್ನುವರು. ಇದು ಆತ್ಮನ ವಿಷಯದಲ್ಲಿ ಕೇವಲ ಉಪಚಾರ (ಕಲ್ಪಿಸಿ ಹೇಳಿದ್ದು)ವಾಗಿರುವದು. ಪರಮಾತ್ಮನ ಈ ಮುಕ್ತಿಯ ಸ್ವರೂಪವನ್ನು ಜ್ಞಾನವಿಜ್ಞಾನವೈರಾಗ್ಯಗಳೊಡನೆ ನಿನಗೆ ಹೇಳಿರುತ್ತೇನೆ.

**ಕಿಂ ತ್ವೇತದ್ದುರ್ಲಭಂ ಮನ್ಯೇ ಮದ್ಭಕ್ತಿವಿಮುಖಾತ್ಮನಾಮ್ ।**
**ಚಕ್ಷುಷ್ಮತಾಮಪಿ ತಥಾ ರಾತ್ರೌ ಸಮ್ಯಜ್ ನ ದೃಶ್ಯತೇ ॥ ೪೨ ॥**
**ಪದಂ ದೀಪಸಮೇತಾನಾಂ ದೃಶ್ಯತೇ ಸಮ್ಯಗೇವ ಹಿ ।**
**ಏವಂ ಮದ್ಭಕ್ತಿಯುಕ್ತಾನಾಮಾತ್ಮಾ ಸಮ್ಯಕ್ ಪ್ರಕಾಶತೇ ॥ ೪೩ ॥**

೪೨-೪೩. ಆದರೆ ಈ ಜ್ಞಾನವು ನನ್ನ ಭಕ್ತಿಯಿಲ್ಲದವರಿಗೆ ದೊರಕುವದು ಕಷ್ಟವೇ ಸರಿ. ಏಕೆಂದರೆ ಕಣ್ಣಿದ್ದರೂ ರಾತ್ರೆಯಲ್ಲಿ ಹಾದಿಯು ಕಾಣುವದಿಲ್ಲ. ಆದರೆ ದೀಪವುಳ್ಳವರಿಗೆ ಚೆನ್ನಾಗಿಯೇ ಕಾಣುವದು. ಹಾಗೆಯೇ ನನ್ನಲ್ಲಿ ಭಕ್ತಿಯುಳ್ಳವರಿಗೆ ಆತ್ಮನು ಚೆನ್ನಾಗಿ ತೋರಿಬರುತ್ತಾನೆ.

**ಮದ್ಭಕ್ತೇಃ ಕಾರಣಂ ಕಿಂಚಿದ್ ವಕ್ಷ್ಯಾಮಿ ಶೃಣು ತತ್ತ್ವತಃ ।**
**ಮದ್ಭಕ್ತಸಂಗೋ ಮತ್ಸೇವಾ ಮದ್ಭಕ್ತಾನಾಂ ನಿರಂತರಮ್ ॥ ೪೪ ॥**
**ಏಕಾದಶ್ಯುಪವಾಸಾದಿ ಮಮ ಪರ್ವಾನುಮೋದನಮ್ ।**
**ಮತ್ಕಥಾಶ್ರವಣೇ ಪಾಠೇ ವ್ಯಾಖ್ಯಾನೇ ಸರ್ವದಾ ರತಿಃ ॥ ೪೫ ॥**
**ಮತ್ಪೂಜಾಪರಿನಿಷ್ಠಾ ಚ ಮಮ ನಾಮಾನುಕೀರ್ತನಮ್ ।**
**ಏವಂ ಸತತಯುಕ್ತಾನಾಂ ಭಕ್ತಿರವ್ಯಭಿಚಾರಿಣೀ ॥ ೪೬ ॥**
**ಮಯಿ ಸಂಜಾಯತೇ ನಿತ್ಯಂ ತತಃ ಕಿಮವಶಿಷ್ಯತೇ ।**
**ಅತೋ ಮದ್ಭಕ್ತಿಯುಕ್ತಸ್ಯ ಜ್ಞಾನಂ ವಿಜ್ಞಾನಮೇವ ಚ ॥ ೪೭ ॥**
**ವೈರಾಗ್ಯಂ ಚ ಭವೇತ್ ಶೀಘ್ರಂ ತತೋ ಮುಕ್ತಿಮವಾಪ್ನುಯಾತ್ ॥**

೪೪-೪೭. ನನ್ನ ಭಕ್ತಿಗೆ ಕಾರಣವಾಗಿರುವ ಕೆಲವು ಉಪಾಯಗಳನ್ನು ಹೇಳುವೆನು. ಕೇಳು. ನಿಜವೇನೆಂದರೆ : ನನ್ನ ಭಕ್ತನ ಸಹವಾಸವನ್ನು ಮಾಡುವದು, ಹಾಗೂ ಯಾವಾಗಲೂ ನನ್ನನ್ನೂ ನನ್ನ ಭಕ್ತರನ್ನೂ ಸೇವೆಮಾಡುವದು, ಏಕಾದಶೀ ಮುಂತಾದ ಹರಿದಿನಗಳಲ್ಲಿ ನಿರಾಹಾರನಾಗಿರುವದು, ನನ್ನ ನೆನಪಿಗಾಗಿ ಕುರಿತದಿನಗಳಲ್ಲಿ ಹಬ್ಬಮಾಡುವದು, ನನ್ನ ಕಥೆಯನ್ನು ಕೇಳುವದರಲ್ಲಿಯೂ ಹೇಳುವದರಲ್ಲಿಯೂ ಯಾವಾಗಲೂ ಆಸಕ್ತಿಯನ್ನು ಹೊಂದಿರುವದು, ನನ್ನ ಪೂಜೆಯಲ್ಲಿಯೇ ನಿಷ್ಠನಾಗಿರುವದು, ನನ್ನ ಹೆಸರುಗಳನ್ನೇ ಕೀರ್ತನಮಾಡುತ್ತಿರುವದು - ಹೀಗೆ ಯಾವಾಗಲೂ ತೊಡಗಿರುವವರಿಗೆ ನನ್ನಲ್ಲಿ ಶಾಶ್ವತವಾದ ಅಲ್ಲಾಡದ ಧೃಢಭಕ್ತಿಯುಂಟಾಗುವದು. ಇದಕ್ಕಿಂತ ಇನ್ನೇನಿದ್ದೀತು ? ಆದ್ದರಿಂದ ನನ್ನ ಭಕ್ತಿಯಿಂದ ಕೂಡಿರುವವನಿಗೆ ಜ್ಞಾನವೂ ವಿಜ್ಞಾನವೂ ವೈರಾಗ್ಯವೂ ಬೇಗನೆ ಉಂಟಾಗಿಬಿಡುವದು. ಅನಂತರ ಮೋಕ್ಷವನ್ನು ಪಡೆಯುವನು.

**ಕಥಿತಂ ಸರ್ವಮೇತತ್ತೇ ತವ ಪ್ರಶ್ನಾನುಸಾರತಃ ।**
**ಅಸ್ಮಿನ್ ಮನಃ ಸಮಾಧಾಯ ಯಸ್ತಿಷ್ಠೇತ್ ಸ ತು ಮುಕ್ತಿಭಾಕ್ ॥ ೪೮ ॥**
**ನ ವಕ್ತವ್ಯಮಿದಂ ಯತ್ನಾತ್ ಮದ್ಭಕ್ತಿವಿಮುಖಾಯ ಹಿ ।**
**ಮದ್ಭಕ್ತಾಯ ಪ್ರದಾತವ್ಯಮಾಹೂಯಾಪಿ ಪ್ರಯತ್ನತಃ ॥ ೪೯ ॥**
**ಯ ಇದಂ ತು ಪಠೇನ್ನಿತ್ಯಂ ಶ್ರದ್ಧಾಭಕ್ತಿಸಮನ್ವಿತಃ ।**
**ಅಜ್ಞಾನಪಟಲಧ್ವಾಂತಂ ವಿಧೂಯ ಪರಿಮುಚ್ಯತೇ ॥ ೫೦ ॥**

೪೮-೫೦. ನಿನ್ನ ಪ್ರಶ್ನೆಗನುಗುಣವಾಗಿ ಎಲ್ಲವನ್ನೂ ನಿನಗೆ ಹೇಳಿರುತ್ತೇನೆ. ಇದರಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ಯಾವನು ಇರುವನೋ ಅವನು ಮುಕ್ತಿಗೆ ಅರ್ಹನಾಗುವನು. ನನ್ನ ಭಕ್ತಿಯಿಲ್ಲದವನಿಗೆ ಇದನ್ನು ಖಂಡಿತ ಹೇಳಬಾರದು. ಆದರೆ ಭಕ್ತನಾದವನಿಗೆ ಮಾತ್ರ ಕರೆದು ಹುಡುಕಿಯಾದರೂ ಹೇಳಬೇಕು. ಯಾವನು ಈ ಸಂವಾದವನ್ನು ಶ್ರದ್ಧಾಭಕ್ತಿಯಿಂದೊಡಗೂಡಿ ನಿತ್ಯವೂ ಪಠಿಸುವನೋ ಅವನು ಅಜ್ಞಾನದ ಪೊರೆಯನ್ನು ಕಳಚಿಕೊಂಡು ಮುಕ್ತಿಯನ್ನು ಹೊಂದುವನು.

**ಭಕ್ತಾನಾಂ ಮಮ ಯೋಗಿನಾಂ ಸುವಿಮಲಸ್ವಾಂತಾತಿಶಾಂತಾತ್ಮನಾಂ**
**ಮತ್ಸೇವಾಭಿರತಾತ್ಮನಾಂ ಚ ವಿಮಲಜ್ಞಾನಾತ್ಮನಾಂ ಸರ್ವದಾ ।**
**ಸಂಗಂ ಯಃ ಕುರುತೇ ಸದೋದ್ಯತಮತಿಃ ತತ್ಸೇವನಾನನ್ಯಧೀಃ ।**
**ಮೋಕ್ಷಸ್ತಸ್ಯ ಕರೇ ಸ್ಥಿತೋಽಹಮನಿಶಂ ದೃಶ್ಯೋ ಭವೇ ನಾನ್ಯಥಾ ॥ ೫೧ ॥**

೫೧. ಯೋಗಿಗಳಾದ ಹಾಗೂ ವಿಮಲವೂ ಶಾಂತವೂ ಆದ ಅಂತಃಕರಣವುಳ್ಳವರಾದ, ನನ್ನ ಸೇವೆಯಲ್ಲಿಯೇ ತೊಡಗಿದ ಕಾರ್ಯಕರಣಗಳುಳ್ಳ ನಿರ್ಮಲ ಜ್ಞಾನಾತ್ಮರಾದ ನನ್ನ ಭಕ್ತರ ಸಂಗವನ್ನು ಯಾವನು ಯಾವಾಗಲೂ ಮಾಡುವನೋ ಮತ್ತು ಸದಾಕಾಲವೂ ಪ್ರಯತ್ನಶೀಲನಾಗಿ ಭಕ್ತರ ಸೇವೆಯಲ್ಲಿಯೇ ನೆಟ್ಟ ಮನಸ್ಸಿನವನಾಗಿರುವನೋ ಅಂಥವನ ಕೈಯಲ್ಲಿಯೇ ಮೋಕ್ಷವು ಇದ್ದುಕೊಂಡಿರುವದು. ಅಂಥವನಿಗೆ ನಾನು ಯಾವಾಗಲೂ ಕಾಣಿಸಿಕೊಳ್ಳುವೆನು. ಹಾಗಿಲ್ಲದವರಿಗೆ ನಾನು ದೊರಕಲಾರೆನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ಚತುರ್ಥಃ ಸರ್ಗಃ**

ಃಃಃಃಃಃಃಃಃಃ

## ಐದನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ತಸ್ಮಿನ್ ಕಾಲೇ ಮಹಾರಣ್ಯೇ ರಾಕ್ಷಸೀ ಕಾಮರೂಪಿಣೀ ।**
**ವಿಚಚಾರ ಮಹಾಸತ್ತ್ವಾ ಜನಸ್ಥಾನನಿವಾಸಿನೀ ॥ ೧ ॥**
**ಏಕದಾ ಗೌತಮೀತೀರೇ ಪಂಚವಟ್ಯಾಃ ಸಮೀಪತಃ ।**
**ಪದ್ಮವಜ್ರಾಂಕುಶಾಂಕಾನಿ ಪದಾನಿ ಜಗತೀಪತೇಃ ॥ ೨ ॥**
**ದೃಷ್ಟ್ವಾ ಕಾಮಪರೀತಾತ್ಮಾ ಪಾದಸೌಂದರ್ಯಮೋಹಿತಾ ।**
**ಪಶ್ಯಂತೀ ಸಾ ಶನೈರಾಯಾದ್ ರಾಘವಸ್ಯ ನಿವೇಶನಮ್ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಆ ಸಮಯದಲ್ಲಿ ಮಹಾಕಾಡಿನಲ್ಲಿ ಇಚ್ಛಾರೂಪವನ್ನು ಧರಿಸುವ ಶಕ್ತಿಯುಳ್ಳ, ಜನಸ್ಥಾನದಲ್ಲಿ ವಾಸವಾಗಿದ್ದ ಬಹಳ ಬಲಿಷ್ಠಳಾದ ರಾಕ್ಷಸಿಯೊಬ್ಬಳು ಒಮ್ಮೆ ಪಂಚವಟಿಯ ಸಮೀಪದಲ್ಲಿ ಗೌತಮೀನದಿಯ ತೀರದಲ್ಲಿ ಜಗತ್‌ಪತಿಯಾದ ರಾಮನ, ಪದ್ಮ, ವಜ್ರ, ಅಂಕುಶಗಳ ಚಿಹ್ನೆಯುಳ್ಳ ಹೆಜ್ಜೆಯ ಗುರುತುಗಳನ್ನು ಕಂಡಳು. ಆಗ ಕಾಮಪೀಡಿತಳಾಗಿ (ರಾಮನ)ಕಾಲಿನ ಸೌಂದರ್ಯಕ್ಕೆ ಮರುಳಾಗಿ ಅವುಗಳನ್ನು ನೋಡುತ್ತಾ ಮೆಲ್ಲನೆ ಆಕೆಯು ರಾಮನ ಕುಟೀರದ ಕಡೆಗೆ ಬಂದಳು.

**ತತ್ರ ಸಾ ತಂ ರಮಾನಾಥಂ ಸೀತಯಾ ಸಹ ಸಂಸ್ಥಿತಮ್ ।**
**ಕಂದರ್ಪಸದೃಶಂ ರಾಮಂ ದೃಷ್ಟ್ವಾ ಕಾಮವಿಮೋಹಿತಾ ॥ ೪ ॥**
**ರಾಕ್ಷಸೀ ರಾಘವಂ ಪ್ರಾಹ ಕಸ್ಯ ತ್ವಂ ಕಃ ಕಿಮಾಶ್ರಮೇ ।**
**ಯುಕ್ತೋ ಜಟಾವಲ್ಕಲಾದ್ಯೈಃ ಸಾಧ್ಯಂ ಕಿಂ ತೇಽತ್ರ ಮೇ ವದ ॥ ೫ ॥**
**ಅಹಂ ಶೂರ್ಪಣಖಾ ನಾಮ ರಾಕ್ಷಸೀ ಕಾಮರೂಪಿಣೀ ।**
**ಭಗಿನೀ ರಾಕ್ಷಸೇಂದ್ರಸ್ಯ ರಾವಣಸ್ಯ ಮಹಾತ್ಮನಃ ॥ ೬ ॥**
**ಖರೇಣ ಸಹಿತಾ ಭ್ರಾತ್ರಾ ವಸಾಮ್ಯತ್ರೈವ ಕಾನನೇ ।**
**ರಾಜ್ಞಾ ದತ್ತಂ ಚ ಮೇ ಸರ್ವಂ ಮುನಿಭಕ್ಷಾ ವಸಾಮ್ಯಹಮ್ ॥ ೭ ॥**
**ತ್ವಾಂ ತು ವೇದಿತುಮಿಚ್ಛಾಮಿ ವದ ಮೇ ವದತಾಂ ವರ।**

೪-೭. ಆಕೆಯಾದರೊ, ಅಲ್ಲಿ ಸೀತೆಯೊಡನಿದ್ದ, ಮನ್ಮಥಸಮಾನವಾದ ಸೌಂದರ್ಯವುಳ್ಳ ರಾಮನನ್ನು ಕಂಡು ಕಾಮಪರವಶಳಾಗಿ ಆ ರಾಕ್ಷಸಿಯು ರಾಮನನ್ನು ಕುರಿತು ಇಂತೆಂದಳು : ''ನೀನು ಯಾರ ಕಡೆಯವನು ? ಈ ಆಶ್ರಮದಲ್ಲಿ ಜಟಾವಲ್ಕಗಳನ್ನು ಧರಿಸಿಕೊಂಡು ಏನು ಮಾಡುವೆ ? ಇಲ್ಲಿ ನಿನಗೆ ಬೇಕಾದದ್ದೇನಿದೆ ?

ಹೇಳು.ನಾನಾದರೊ, ಮಹಾತ್ಮನಾದ ರಾಕ್ಷಸೇಂದ್ರನಾದ ರಾವಣನ ಸೋದರಿಯಾದ ಹಾಗೂ ಇಚ್ಛಾರೂಪವನ್ನು ಧರಿಸಬಲ್ಲ ಶೂರ್ಪನಖೀ ಎಂಬ ರಾಕ್ಷಸಿಯಾಗಿರುವೆನು. ಇಲ್ಲಿಯೇ ಕಾಡಿನಲ್ಲಿ ಸೋದರನಾದ ಖರನೊಡನೆ ವಾಸಿಸುತ್ತಿರುವೆನು. ರಾಕ್ಷಸರಾಜನಿಂದ ಇದೆಲ್ಲವೂ ನನಗೆ ಕೊಡಲ್ಪಟ್ಟಿದೆ. ಋಷಿಗಳನ್ನು ತಿಂದುಹಾಕುತ್ತಾ ನಾನು ಕಾಲಕಳೆಯುತ್ತಿರುವೆನು. ನೀನು ಯಾರೆಂಬುದನ್ನು ತಿಳಿಯಲಿಚ್ಛಿಸುವೆನು. ಮಾತಿನಲ್ಲಿ ಜಾಣನೆ, ನನಗೆ ನಿನ್ನ ಪರಿಚಯವನ್ನು ಹೇಳು.''

**ತಾಮಾಹ ರಾಮನಾಮಾಹಮಯೋಧ್ಯಾಧಿಪತೇಃ ಸುತಃ ।**
**ಏಷಾ ಮೇ ಸುಂದರೀ ಭಾರ್ಯಾ ಸೀತಾ ಜನಕನಂದಿನೀ ॥ ೮ ॥**
**ಸ ತು ಭ್ರಾತಾ ಕನೀಯಾನ್ ಮೇ ಲಕ್ಷ್ಮಣೋಽತೀವ ಸುಂದರಃ ।**
**ಕಿಂ ಕೃತ್ಯಂ ತೇ ಮಯಾ ಬ್ರೂಹಿ ಕಾರ್ಯಂ ಭುವನಸುಂದರಿ ॥ ೯ ॥**
**ಇತಿ ರಾಮವಚಃ ಶ್ರುತ್ವಾ ಕಾಮಾರ್ತಾ ಸಾಽಬ್ರವೀದಿದಮ್ ।**

೮-೯. ಆಗ ಆಕೆಯನ್ನು ಕುರಿತು ''ನಾನು ರಾಮನೆಂಬವನು. ಅಯೋಧ್ಯಾನಗರಿಯ ರಾಜನ ಮಗನು. ಜನಕನ ಮಗಳಾದ ಸುಂದರಿಯಾದ ಈಕೆಯು ನನ್ನ ಹೆಂಡತಿಯು. ಅವನಾದರೋ ಅತ್ಯಂತಸುಂದರನಾದ ಲಕ್ಷ್ಮಣನೆಂಬ ಹೆಸರಿನ ನನ್ನ ತಮ್ಮನು. ಎಲೈ ಲೋಕಸುಂದರಿಯೆ, ನಿನಗೆ ನನ್ನಿಂದೇನಾಗಬೇಕು ? ಹೇಳು'' ಹೀಗೆಂಬ ರಾಮನ ಮಾತನ್ನು ಕೇಳಿ ಕಾಮಾರ್ತಳಾದ ಆಕೆಯು ಹೀಗೆಂದಳು.

**ಏಹಿ ರಾಮ ಮಯಾ ಸಾರ್ಧಂ ರಮಸ್ವ ಗಿರಿಕಾನನೇ ।**
**ಕಾಮಾರ್ತಾಽಹಂ ನ ಶಕ್ನೋಮಿ ತ್ಯಕ್ತುಂ ತ್ವಾಂ ಕಮಲೇಕ್ಷಣಮ್ ॥ ೧೦ ॥**
**ರಾಮಃ ಸೀತಾಂ ಕಟಾಕ್ಷೇಣ ಪಶ್ಯನ್ ಸಸ್ಮಿತಮಬ್ರವೀತ್ ।**
**ಭಾರ್ಯಾ ಮಮೈಷಾ ಕಲ್ಯಾಣೀ ವಿದ್ಯತೇ ಹ್ಯನಪಾಯಿನೀ ॥ ೧೧ ॥**
**ತ್ವಂ ತು ಸಾಪತ್ನ್ಯದುಃಖೇನ ಕಥಂ ಸ್ಥಾಸ್ಯಸಿ ಸುಂದರಿ ।**
**ಬಹಿರಾಸ್ತೇ ಮಮ ಭ್ರಾತಾ ಲಕ್ಷ್ಮಣೋಽತೀವ ಸುಂದರಃ ॥ ೧೨ ॥**
**ತವಾನುರೂಪೋ ಭವಿತಾ ಪತಿಸ್ತೇನೈವ ಸಂಚರ ।**

೧೦-೧೨. ''ಎಲೈ ರಾಮನೆ, ನನ್ನೊಡನೆ ಬಾ ; ಕಾಮಪೀಡಿತಳಾದ ನಾನು ಕಮಲನೇತ್ರನಾದ ನಿನ್ನನ್ನು ಬಿಡಲಾರೆನು. ನನ್ನೊಡಗೂಡಿ ಕಾಡು ಮೇಡುಗಳಲ್ಲಿ ವಿಹಾರಮಾಡುವವನಾಗು.'' ಹೀಗೆಂದ ಕೂಡಲೆ ರಾಮನು ಸೀತೆಯನ್ನು ಕುಡಿನೋಟದಿಂದ ನೋಡುತ್ತಾ ಮುಗುಳುನಗೆಯಿಂದ ಕೂಡಿ ಹೀಗೆಂದನು : ''ನನ್ನ ಹೆಂಡತಿಯಾದ ಮಂಗಳೆಯಾದ ಈಕೆಯು ಯಾವಾಗಲೂ ನನ್ನೊಡನೆಯೇ ಇರುವಳು. ಎಲೈ ಸುಂದರಿ, ಸವತಿಯ ಕಷ್ಟದಿಂದ ಹೇಗೆ ಬದುಕಬಲ್ಲೆ ? ನನ್ನ ಸೋದರನಾದ ಅತ್ಯಂತ ಸುಂದರನಾದ

ಲಕ್ಷ್ಮಣನು ಹೊರಗಡೆ ಇದ್ದಾನೆ. ಅವನು ನಿನಗೆ ಸರಿಯಾದ ಜೋಡಿಯಾಗಬಲ್ಲನು. ಅವನೊಡನೆಯೇ ವಿಹರಿಸುವಳಾಗು.''

**ಇತ್ಯುಕ್ತಾ ಲಕ್ಷ್ಮಣಂ ಪ್ರಾಹ ಪತಿರ್ಮೇ ಭವ ಸುಂದರ ।**
**ಭ್ರಾತುರಾಜ್ಞಾಂ ಪುರಸ್ಕೃತ್ಯ ಸಂಗಚ್ಛಾವೋಽದ್ಯ ಮಾ ಚಿರಮ್ ॥ ೧೩ ॥**
**ಇತ್ಯಾಹ ರಾಕ್ಷಸೀ ಘೋರಾ ಲಕ್ಷ್ಮಣಂ ಕಾಮಮೋಹಿತಾ।**
**ತಾಮಾಹ ಲಕ್ಷ್ಮಣಃ ಸಾಧ್ವಿ ದಾಸೋಽಹಂ ತಸ್ಯ ಧೀಮತಃ ॥ ೧೪ ॥**
**ದಾಸೀ ಭವಿಷ್ಯಸಿ ತ್ವಂ ತು ತತೋ ದುಃಖತರಂ ನು ಕಿಮ್ ।**
**ತಮೇವ ಗಚ್ಛ ಭದ್ರಂ ತೇ ಸ ತು ರಾಜಾಖಿಲೇಶ್ವರಃ ॥ ೧೫ ॥**

೧೩-೧೫. ಈ ರೀತಿಯಾಗಿ ಹೇಳಲ್ಪಟ್ಟ ಆಕೆಯು ಲಕ್ಷ್ಮಣನನ್ನು ಕುರಿತು : ''ಎಲೈ ಸುಂದರನೆ, ನೀನು ನನ್ನ ಗಂಡನಾಗು ; ಸಹೋದರನ ಆಜ್ಞೆಯಂತೆ ಅದನ್ನು ಗೌರವಿಸಿ ನಾವಿಬ್ಬರೂ ಒಂದುಗೂಡೋಣ. ತಡಮಾಡುವದು ಬೇಡ.'' ಎಂದು ಆ ಘೋರಳಾದ ಕಾಮವಶಳಾದ ರಾಕ್ಷಸಿಯು ಹೀಗೆ ನುಡಿದಳು. ಆಕೆಯನ್ನು ಕುರಿತು ಲಕ್ಷ್ಮಣನು : ''ಪತಿವ್ರತೆ, ಬುದ್ಧಿಶಾಲಿಯಾದ ಆತನ (ರಾಮನ) ದಾಸನು ನಾನು. ನೀನು ಕೂಡ ನನ್ನ ಕೈಹಿಡಿದರೆ ದಾಸಿಯಾಗಿಬಿಡುವೆ. ಇದಕ್ಕಿಂತ ದುಃಖಕರವಾದದ್ದು ಏನಿದ್ದೀತು? ನಿನಗೆ ಒಳ್ಳೆಯದಾಗಲಿ ! ಆತನನ್ನೇ ಹೋಗಿ ಸೇರುವವಳಾಗು; ಅವನಾದರೊ, ಎಲ್ಲಕ್ಕೂ ಒಡೆಯನಾದ ರಾಜನು '- ಎಂದನು.

**ತಚ್ಛ್ರುತ್ವಾ ಪುನರಪ್ಯಾಗಾದ್ ರಾಘವಂ ದುಷ್ಟಮಾನಸಾ ।**
**ಕ್ರೋಧಾದ್ ರಾಮ ಕಿಮರ್ಥಂ ಮಾಂ ಭ್ರಾಮಯಸ್ಯನವಸ್ಥಿತಃ ॥ ೧೬ ॥**
**ಇದಾನೀಮೇವ ತಾಂ ಸೀತಾಂ ಭಕ್ಷಯಾಮಿ ತವಾಗ್ರತಃ ।**
**ಇತ್ಯುಕ್ತ್ವಾ ವಿಕಟಾಕಾರಾ ಜಾನಕೀಮನುಧಾವತಿ ॥ ೧೭ ॥**
**ತತೋ ರಾಮಾಜ್ಞಯಾ ಖಡ್ಗಮಾದಾಯ ಪರಿಗೃಹ್ಯ ತಾಮ್ ।**
**ಚಿಚ್ಛೇದ ನಾಸಾಂ ಕರ್ಣೌ ಚ ಲಕ್ಷ್ಮಣೋ ಲಘುವಿಕ್ರಮಃ ॥ ೧೮ ॥**

೧೬-೧೮. ಅದನ್ನು ಕೇಳಿ ಕೆಟ್ಟಮನಸ್ಸಿನ ಆಕೆಯು ಮತ್ತೆ ರಾಮನಬಳಿಗೆ ಬಂದು ಕೋಪದಿಂದ ''ಎಲೈ ರಾಮನೆ, ಏತಕ್ಕಾಗಿ ನನ್ನನ್ನು ಅಲೆಯಿಸುತ್ತಿರುವೆ ? ನೀನು ಸ್ಥಿರಬುದ್ಧಿಯಿಲ್ಲದವನು. ನಿನ್ನೆದುರಿಗೇ ಈಗಲೇ ಆ ಸೀತೆಯನ್ನು ತಿಂದುಹಾಕಿ ಬಿಡುವೆನು'' ಎಂದು ಹೇಳುತ್ತಾ ಭಯಂಕರರೂಪವುಳ್ಳವಳಾಗಿ ಸೀತೆಯ ಕಡೆಗೆ ನುಗ್ಗಿ ಬಂದಳು. ಅನಂತರ ಚುರುಕಾದ ಪರಾಕ್ರಮವುಳ್ಳ ಲಕ್ಷ್ಮಣನು ರಾಮನ ಅಪ್ಪಣೆಯಂತೆ ಕತ್ತಿಯನ್ನು ತೆಗೆದುಕೊಂಡು ಆಕೆಯನ್ನು ಹಿಡಿದು ಅವಳ ಎರಡು ಕಿವಿಗಳು ಹಾಗೂ ಮೂಗನ್ನು ಕತ್ತರಿಸಿಬಿಟ್ಟನು.

**ತತೋ ಘೋರಧ್ವನಿಂ ಕೃತ್ವಾ ರುಧಿರಾಕ್ತವಪುರ್ದ್ರುತಮ್ ।**
**ಕ್ರಂದಮಾನಾ ಪಪಾತಾಗ್ರೇ ಖರಸ್ಯ ಪರುಷಾಕ್ಷರಾ ॥ ೧೯ ॥**
**ಕಿಮೇತದಿತಿ ತಾಮಾಹ ಖರಃ ಖರತರಾಕ್ಷರಃ ।**
**ಕೇನೈವಂ ಕಾರಿತಾಸಿ ತ್ವಂ ಮೃತ್ಯೋರ್ವಕ್ತ್ರಾನುವರ್ತಿನಾ ॥ ೨೦ ॥**
**ವದ ಮೇ ತಂ ವಧಿಷ್ಯಾಮಿ ಕಾಲಕಲ್ಪಮಪಿ ಕ್ಷಣಾತ್ ।**

೧೯-೨೦. ಅನಂತರ ಗಟ್ಟಿಯಾದ ಕೆಟ್ಟ ಧ್ವನಿಯನ್ನು ಮಾಡುತ್ತಾ ರಕ್ತದಿಂದ ತೋಯ್ದ ಶರೀರವುಳ್ಳವಳಾಗಿ ಕಿರುಚುತ್ತಾ ಕಠಿನವಾದ ಮಾತುಳ್ಳ ಆಕೆಯು ಖರನೆಂಬ ರಾಕ್ಷಸನ ಎದುರಿಗೆ ಹೋಗಿ ಬಿದ್ದಳು. ಕರ್ಕಶವಾದ ಶಬ್ದವುಳ್ಳ ಖರನು ಆಕೆಯನ್ನು 'ಇದೇನು ?' ಎಂದು ಕೇಳಿದನು. ಮತ್ತು ''ಮೃತ್ಯುವಿನ ದವಡೆಗೆ ತುತ್ತಾಗಿರುವ, ಯಾರಿಂದ ನೀನು ಈ ಸ್ಥಿತಿಯನ್ನು ಹೊಂದಿದವಳಾದೆ ? ಹೇಳು, ಅವನನ್ನು - ಯಮನಿಗೆ ಸಮನಾಗಿದ್ದವನಾದರೂ - ಕ್ಷಣಮಾತ್ರದಲ್ಲಿ ಕೊಂದುಹಾಕುವೆನು'' ಎಂದನು.

**ತಮಾಹ ರಾಕ್ಷಸೀ ರಾಮಃ ಸೀತಾಲಕ್ಷ್ಮಣಸಂಯುತಃ ।**
**ದಂಡಕಂ ನಿರ್ಭಯಂ ಕುರ್ವನ್ನಾಸ್ತೇ ಗೋದಾವರೀ ತಟೇ ॥ ೨೧ ॥**
**ಮಾಮೇವಂ ಕೃತವಾನ್ ತಸ್ಯ ಭ್ರಾತಾ ತೇನೈವ ಚೋದಿತಃ ।**
**ಯದಿ ತ್ವಂ ಕುಲಜಾತೋಽಸಿ ವೀರೋಽಸಿ ಜಹಿ ತೌ ರಿಪೂ ॥ ೨೨ ॥**
**ತಯೋಸ್ತು ರುಧಿರಂ ಪಾಸ್ಯೇ ಭಕ್ಷಯೈತೌ ಸುದುರ್ಮದೌ ।**
**ನೋ ಚೇತ್ ಪ್ರಾಣಾನ್ ಪರಿತ್ಯಜ್ಯ ಯಾಸ್ಯಾಮಿ ಯಮಸಾದನಮ್ ॥ ೨೩ ॥**

೨೧-೨೩. ರಾಕ್ಷಸಿಯಾದ (ಶೂರ್ಪನಖಿಯು) ಅವನನ್ನು ಕುರಿತು ಹೀಗೆಂದಳು: ಸೀತಾಲಕ್ಷ್ಮಣರೊಡಗೂಡಿದ ರಾಮನು ಗೋದಾವರೀನದಿಯ ದಡದಲ್ಲಿ ದಂಡಕಾವನವನ್ನು ಭಯವಿಲ್ಲದ್ದನ್ನಾಗಿ ಮಾಡುತ್ತಾ ಇದ್ದುಕೊಂಡಿರುವನು. ಅವನಿಂದಲೇ ಪ್ರೇರಿತನಾದ ಆತನ ಸಹೋದರನು ನನ್ನನ್ನು ಹೀಗೆ ಮಾಡಿದನು. ನೀನು ರಾಕ್ಷಸವಂಶದಲ್ಲಿ ಹುಟ್ಟಿದವನೇ ಆಗಿದ್ದು ವೀರನೇ ಆಗಿದ್ದರೆ ಆ ಇಬ್ಬರು ಶತ್ರುಗಳನ್ನು ನಾಶಮಾಡುವವನಾಗು. ಕೊಬ್ಬಿರುವ ಇವರಿಬ್ಬರನ್ನೂ ತಿಂದುಹಾಕು. ನಾನು ಅವರ ರಕ್ತವನ್ನು ಕುಡಿಯುವೆನು. ಹಾಗಿಲ್ಲವಾದರೆ ಪ್ರಾಣವನ್ನು ಕಳೆದುಕೊಂಡು ಯಮನ ಪಟ್ಟಣಕ್ಕೆ ಹೋಗಿಬಿಡುವೆನು.

**ತಚ್ಛ್ರುತ್ವಾ ತ್ವರಿತಂ ಪ್ರಾಗಾತ್ ಖರಃ ಕ್ರೋಧೇನ ಮೂರ್ಛಿತಃ ।**
**ಚತುರ್ದಶಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಮ್ ॥ ೨೪ ॥**
**ಚೋದಯಾಮಾಸ ರಾಮಸ್ಯ ಸಮೀಪಂ ವಧಕಾಂಕ್ಷಯಾ ।**

**ಖರಶ್ಚ ತ್ರಿಶಿರಾಶ್ಚೈವ ದೂಷಣಶ್ಚೈವ ರಾಕ್ಷಸಃ ॥ ೨೫ ॥**
**ಸರ್ವೇ ರಾಮಂ ಯಯುಃ ಶೀಘ್ರಂ ನಾನಾಪ್ರಹರಣೋದ್ಯತಾಃ ॥**

೨೪-೨೫. ಈ ಮಾತನ್ನು ಕೇಳಿ ಕೋಪದಿಂದ ಕೆರಳಿದ ಖರನು ಯುದ್ಧಕ್ಕೆ ಹೊರಟನು. ಮುಂದಾಗಿ ಹದಿನಾಲ್ಕುಸಾವಿರ ಸಂಖ್ಯೆಯ, ಭಯಂಕರವಾದ ಕೆಲಸಗಳನ್ನು ಮಾಡುವ ರಾಕ್ಷಸರನ್ನು - ರಾಮನನ್ನು ಕೊಲ್ಲುವ ಉದ್ದೇಶದಿಂದ - ಸಮೀಪಕ್ಕೆ ಕಳುಹಿಸಿದನು. ಖರನು, ತ್ರಿಶಿರಸ್ಸು, ದೂಷಣನು - ಮುಂತಾಗಿ ಎಲ್ಲರೂ ವೇಗದಿಂದ ಅನೇಕ ರೀತಿಯ ಆಯುಧಗಳನ್ನು ಹಿಡಿದು ಹೊರಟರು.

**ಶ್ರುತ್ವಾ ಕೋಲಾಹಲಂ ತೇಷಾಂ ರಾಮಃ ಸೌಮಿತ್ರಿಮಬ್ರವೀತ್ ।**
**ಶ್ರೂಯತೇ ವಿಪುಲಃ ಶಬ್ದೋ ನೂನಮಾಯಾಂತಿ ರಾಕ್ಷಸಾಃ ॥ ೨೬ ॥**
**ಭವಿಷ್ಯತಿ ಮಹದ್‌ಯುದ್ಧಂ ನೂನಮದ್ಯ ಮಯಾ ಸಹ ।**
**ಸೀತಾಂ ನೀತ್ವಾ ಗುಹಾಂ ಗತ್ವಾ ತತ್ರ ತಿಷ್ಠ ಮಹಾಬಲ ॥ ೨೭ ॥**
**ಹಂತುಮಿಚ್ಛಾಮ್ಯಹಂ ಸರ್ವಾನ್ ರಾಕ್ಷಸಾನ್ ಘೋರರೂಪಿಣಃ ।**
**ಅತ್ರ ಕಿಂಚಿನ್ನ ವಕ್ತವ್ಯಂ ಶಾಪಿತೋಽಸಿ ಮಮೋಪರಿ ॥ ೨೮ ॥**
**ತಥೇತಿ ಸೀತಾಮಾದಾಯ ಲಕ್ಷ್ಮಣೋ ಗಹ್ವರಂ ಯಯೌ ।**

೨೬-೨೮. ಅವರುಗಳ ಕೂಗಾಟವನ್ನು ಕೇಳಿ ರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು : ''ಬಹಳವಾದ ಸದ್ದು ಕೇಳಬರುತ್ತಿದೆ. ಖಂಡಿತವಾಗಿಯೂ ರಾಕ್ಷಸರು ಬರುತ್ತಿದ್ದಾರೆ. ಇಷ್ಟರಲ್ಲೇ ದೊಡ್ಡಯುದ್ಧವು ನನ್ನೊಡನೆ ನಡೆಯಲಿದೆ. ಎಲೈ ಮಹಾಬಲಶಾಲಿಯೆ, ನೀನು ಸೀತಾದೇವಿಯನ್ನು ಕರೆದೊಯ್ದು ಗುಹೆಯಲ್ಲಿ ಕುಳ್ಳಿರಿಸಿ ಅಲ್ಲಿಯೇ ನಿಂತಿರುವನಾಗು ; ಭಯಂಕರವಾದ ಆಕಾರವುಳ್ಳ ಈ ಎಲ್ಲಾ ರಾಕ್ಷಸರನ್ನೂ ನಾನು ಕೊಲ್ಲಲು ಬಯಸಿದ್ದೇನೆ. ಈ ವಿಷಯದಲ್ಲಿ ನೀನು ಪ್ರತಿಯಾಗಿ ಏನೂ ಹೇಳ ಕೂಡದು. ನನ್ನ ಆಣೆಯಾಗಿಟ್ಟು ಹೇಳಿರುವೆನು '' - ಎಂದನು. ಹಾಗೇ ಆಗಲೆಂದು ಲಕ್ಷ್ಮಣನು ಸೀತೆಯನ್ನು ಕರೆದುಕೊಂಡು ಗುಹೆಗೆ ಹೋದನು.

**ರಾಮಃ ಪರಿಕರಂ ಬದ್ಧ್ವಾ ಧನುರಾದಾಯ ನಿಷ್ಠುರಮ್ ।**
**ತೂಣೀರಾವಕ್ಷಯಶರೌ ಬದ್ಧ್ವಾ ಯತ್ತೋಽಭವತ್ ಪ್ರಭುಃ ॥ ೨೯ ॥**
**ತತ್ರ ಆಗತ್ಯ ರಕ್ಷಾಂಸಿ ರಾಮಸ್ಯೋಪರಿ ಚಿಕ್ಷಿಪುಃ ।**
**ಆಯುಧಾನಿ ವಿಚಿತ್ರಾಣಿ ಪಾಷಾಣಾನ್ ಪಾದಪಾನಪಿ ॥ ೩೦ ॥**
**ತಾನಿ ಚಿಚ್ಛೇದ ರಾಮೋಽಪಿ ಲೀಲಯಾ ತಿಲಶಃ ಕ್ಷಣಾತ್ ।**
**ತತೋ ಬಾಣಸಹಸ್ರೇಣ ಹತ್ವಾ ತಾನ್ ಸರ್ವರಾಕ್ಷಸಾನ್ ॥ ೩೧ ॥**

**ಖರಂ ತ್ರಿಶಿರಸಂ ಚೈವ ದೂಷಣಂ ಚೈವ ರಾಕ್ಷಸಮ್ ।**
**ಜಘಾನ ಪ್ರಹರಾರ್ಧೇನ ಸರ್ವಾನೇವ ರಘೂತ್ತಮಃ ॥ ೩೨ ॥**

೨೯-೩೨. ರಾಮನು ಸೊಂಟವನ್ನು ಬಿಗಿದವನಾಗಿ ದೃಢವಾದ ಬಿಲ್ಲನ್ನು ತೆಗೆದುಕೊಂಡು ಅಕ್ಷಯವಾದ ಬಾಣಗಳುಳ್ಳ ಎರಡುಬತ್ತಳಿಕೆಗಳನ್ನು ಬೆನ್ನಿಗೆ ಕಟ್ಟಿಕೊಂಡವನಾಗಿ ಸಿದ್ಧನಾದನು. ಅನಂತರ ರಾಕ್ಷಸರು ಬಂದು ವಿಚಿತ್ರವಾದ ಆಯುಧಗಳನ್ನೂ ಕಲ್ಲುಗಳನ್ನೂ ಮರಗಳನ್ನೂ ರಾಮನ ಮೇಲೆ ಎಸೆದರು. ರಾಮನಾದರೊ, ಅವುಗಳನ್ನು ಲೀಲಾಮಾತ್ರದಿಂದ ಕ್ಷಣಕಾಲದೊಳಗೆ ಚೂರುಚೂರಾಗಿ ಕತ್ತರಿಸಿದನು. ಅನಂತರ ಸಾವಿರಾರು ಬಾಣಗಳನ್ನು ಪ್ರಯೋಗಮಾಡಿ ಆ ಎಲ್ಲಾ ರಾಕ್ಷಸರನ್ನೂ ಕೊಂದನಂತರ ಖರ, ತ್ರಿಶಿರಸ್ಸು, ದೂಷಣನೆಂಬ ರಾಕ್ಷಸ- ಎಲ್ಲರನ್ನೂ ಅರ್ಧಪ್ರಹರದಷ್ಟು ಸಮಯದೊಳಗೇ ನಾಶಮಾಡಿಬಿಟ್ಟನು.

**ಲಕ್ಷ್ಮಣೋಽಪಿ ಗುಹಾಮಧ್ಯಾತ್ ಸೀತಾಮಾದಾಯ ರಾಘವೇ ।**
**ಸಮರ್ಪ್ಯ ರಾಕ್ಷಸಾನ್ ದೃಷ್ಟ್ವಾ ಹತಾನ್ ವಿಸ್ಮಯಮಾಯಯೌ ॥ ೩೩ ॥**
**ಸೀತಾ ರಾಮಂ ಸಮಾಲಿಂಗ್ಯ ಪ್ರಸನ್ನಮುಖಪಂಕಜಾ ।**
**ಶಸ್ತ್ರವ್ರಣಾನಿ ಚಾಂಗೇಷು ಮಮಾರ್ಜ ಜನಕಾತ್ಮಜಾ ॥ ೩೪ ॥**

೩೩-೩೪. ಲಕ್ಷ್ಮಣನೂ ಕೂಡ ಗುಹಾಮಧ್ಯದಿಂದ ಸೀತೆಯನ್ನು ಕರೆತಂದು ರಾಮನಿಗೆ ಅರ್ಪಿಸಿ ಸತ್ತುಬಿದ್ದಿರುವ ರಾಕ್ಷಸರನ್ನು ನೋಡಿ ಆಶ್ಚರ್ಯವನ್ನು ಹೊಂದಿದನು. ಜನಕನ ಮಗಳಾದ ಸೀತೆಯು ರಾಮನನ್ನಾಲಂಗಿಸಿಕೊಂಡು ಪ್ರಸನ್ನವಾದ ಮುಖಕಮಲವುಳ್ಳವಳಾಗಿ ರಾಮನ ಶರೀರದಲ್ಲಿ ಉಂಟಾಗಿದ್ದ ಆಯುಧಗಳ ಗಾಯಗಳನ್ನು ತೊಳೆದು ಉಪಚರಿಸಿದಳು.

**ಸಾಪಿ ದುದ್ರಾವ ದೃಷ್ಟ್ವಾ ತಾನ್ ಹತಾನ್ ರಾಕ್ಷಸಪುಂಗವಾನ್ ।**
**ಲಂಕಾಂ ಗತ್ವಾ ಸಭಾಮಧ್ಯೇ ಕ್ರೋಶಂತೀ ಪಾದಸನ್ನಿಧೌ ॥ ೩೫ ॥**
**ರಾವಣಸ್ಯ ಪಪಾತೋರ್ವ್ಯಾಂ ಭಗಿನೀ ತಸ್ಯ ರಕ್ಷಸಃ ।**
**ದೃಷ್ಟ್ವಾ ತಾಂ ರಾವಣಃ ಪ್ರಾಹ ಭಗಿನೀಂ ಭಯವಿಹ್ವಲಾಮ್ ॥ ೩೬॥**
**ಉತ್ತಿಷ್ಠೋತ್ತಿಷ್ಠ ವತ್ಸೇ ತ್ವಂ ವಿರೂಪಕರಣಂ ತವ ।**
**ಕೃತಂ ಶಕ್ರೇಣ ವಾ ಭದ್ರೇ ಯಮೇನ ವರುಣೇನ ವಾ ॥ ೩೭ ॥**
**ಕುಬೇರೇಣಾಥವಾ ಬ್ರೂಹಿ ಭಸ್ಮೀಕುರ್ಯಾಂ ಕ್ಷಣೇನ ತಮ್ ॥**

೩೫-೩೭. ರಾವಣನ ಸೋದರಿಯಾದ ಆಕೆಯಾದರೊ, ಸತ್ತುಬಿದ್ದ ಆ ರಾಕ್ಷಸಶ್ರೇಷ್ಠರನ್ನೆಲ್ಲ ನೋಡಿ ಅಳುತ್ತಾ ಲಂಕೆಗೆ ಹೋಗಿ ಸಭೆಯ ಮಧ್ಯದಲ್ಲಿ

ನೆಲದಮೇಲೆ ರಾವಣನ ಪಾದಗಳ ಅಡಿಯಲ್ಲಿ ಬಿದ್ದಳು. ಹೆದರಿ ಕಂಗಾಲಾಗಿದ್ದ ಸೋದರಿಯಾದ ಆಕೆಯನ್ನು ರಾವಣನು ನೋಡಿ ಹೀಗೆಂದನು : ಮಗಳೆ, ಮೇಲೇಳು. ನಿನಗೆ ಅಂಗವಿಕಾರವನ್ನು ದೇವೇಂದ್ರನೊ, ಯಮನೊ, ವರುಣನೊ, ಕುಬೇರನೊ-ಯಾರು ಮಾಡಿದರು ? ಹೇಳು. ಅವನನ್ನು ಕ್ಷಣಮಾತ್ರದಲ್ಲಿ ಬೂದಿಮಾಡಿಬಿಡುವೆನು.

**ರಾಕ್ಷಸೀ ತಮುವಾಚೇದಂ ತ್ವಂ ಪ್ರಮತ್ತೋ ವಿಮೂಢಧೀಃ ।**
**ಪಾನಾಸಕ್ತಃ ಸ್ತ್ರೀವಿಜಿತಃ ಷಂಢಃ ಸರ್ವತ್ರ ಲಕ್ಷ್ಯಸೇ ॥ ೩೮ ॥**
**ಚಾರಚಕ್ಷುರ್ವಿಹೀನಸ್ತ್ವಂ ಕಥಂ ರಾಜಾ ಭವಿಷ್ಯಸಿ ।**
**ಖರಶ್ಚ ನಿಹತಃ ಸಂಖ್ಯೇ ದೂಷಣಸ್ತ್ರಿಶಿರಾಸ್ತಥಾ ॥ ೩೯ ॥**
**ಚತುರ್ದಶ ಸಹಸ್ರಾಣಿ ರಾಕ್ಷಸಾನಾಂ ಮಹಾತ್ಮನಾಮ್ ।**
**ನಿಹತಾನಿ ಕ್ಷಣೇನೈವ ರಾಮೇಣಾಸುರಶತ್ರುಣಾ ॥ ೪೦ ॥**
**ಜನಸ್ಥಾನಮಶೇಷೇಣ ಮುನೀನಾಂ ನಿರ್ಭಯಂ ಕೃತಮ್ ।**
**ನ ಜಾನಾಸಿ ವಿಮೂಢಸ್ತ್ವಮತ ಏವ ಮಯೋಚ್ಯತೇ ॥ ೪೧ ॥**

೩೮-೪೧. ರಾಕ್ಷಸಿಯಾದ (ಶೂರ್ಪನಖಿಯು) ಅವನನ್ನು ಕುರಿತು ಹೀಗೆಂದಳು-'' ನೀನು ಮೈಮರೆತು ಮಂದಬುದ್ಧಿಯವನಾಗಿ ಪಾನಮತ್ತನಾಗಿ ಹೆಂಗಸರಿಗೆ ವಶನಾಗಿ ನಪುಂಸಕನಂತೆ ಕಂಡುಬರುತ್ತಿದ್ದೀಯೆ. ಗೂಢಚಾರರೆಂಬ ಕಣ್ಣುಗಳಿಲ್ಲದ ನೀನು ರಾಜನಾಗಲು ಹೇಗೆ ಅರ್ಹನು ? ಏಕೆಂದರೆ ಹದಿನಾಲ್ಕು ಸಾವಿರ ಸಂಖ್ಯೆಯ ಭಾರಿಯ ರಾಕ್ಷಸರು, ಖರ, ದೂಷಣ, ತ್ರಿಶಿರಸ್ಸು - ಎಲ್ಲರೂ ಯುದ್ಧದಲ್ಲಿ ರಾಕ್ಷಸರ ಶತ್ರುವಾದ ರಾಮನಿಂದ ಕೊಲ್ಲಲ್ಪಟ್ಟರು. ಇಡಿಯ ಜನಸ್ಥಾನವೆಲ್ಲವೂ ಖಾಲಿಯಾಗಿ ಋಷಿಗಳಿಗೆ ನಿರ್ಭಯವಾಗಿ ಮಾಡಲ್ಪಟ್ಟಿತು. ಇದೆಲ್ಲವನ್ನೂ ನೀನರಿಯೆ ; ಆದ್ದರಿಂದಲೇ ನೀನು ದಡ್ಡನೆಂದು ನಾನು ಹೇಳಿದ್ದು'' ಎಂದಳು.

**ರಾವಣ ಉವಾಚ-**

**ಕೋ ವಾ ರಾಮಃ ಕಿಮರ್ಥಂ ವಾ ಕಥಂ ತೇನಾಸುರಾ ಹತಾಃ ।**
**ಸಮ್ಯಕ್ಕಥಯ ಮೇ ತೇಷಾಂ ಮೂಲಘಾತಂ ಕರೋಮ್ಯಹಮ್ ॥ ೪೨ ॥**

೪೨. ರಾವಣನಿಂತೆಂದನು : 'ರಾಮನೆಂಬುವನು ಯಾವನು ? ಅವನು ಏತಕ್ಕಾಗಿ (ಕಾಡಿಗೆ) ಬಂದಿರುವನು ? ರಾಕ್ಷಸರು ಅವನಿಂದ ಹೇಗೆ ಕೊಲ್ಲಲ್ಪಟ್ಟರು ? ಇದನ್ನೆಲ್ಲ ನೀನು ಚೆನ್ನಾಗಿ ನನಗೆ ವಿವರಿಸಿ ಹೇಳು. ಅವರುಗಳ ಬುಡವನ್ನೇ ನಾನು ನಾಶಗೊಳಿಸುವೆನು.'

**ಶೂರ್ಪನಖೋವಾಚ-**

**ಜನಸ್ಥಾನಾದಹಂ ಯಾತಾ ಕದಾಚಿದ್ಗೌತಮೀತಟೇ ।**
**ತತ್ರ ಪಂಚವಟೀ ನಾಮ ಪುರಾ ಮುನಿಜನಾಶ್ರಯಾ ॥ ೪೩ ॥**
**ತತ್ರಾಶ್ರಮೇ ಮಯಾ ದೃಷ್ಟೋ ರಾಮೋ ರಾಜೀವಲೋಚನಃ ।**
**ಧನುರ್ಬಾಣಧರಃ ಶ್ರೀಮಾನ್ ಜಟಾವಲ್ಕಲಮಂಡಿತಃ ॥ ೪೪ ॥**
**ಕನೀಯಾನನುಜಸ್ತಸ್ಯ ಲಕ್ಷ್ಮಣೋಽಪಿ ತಥಾವಿಧಃ ।**
**ತಸ್ಯ ಭಾರ್ಯಾ ವಿಶಾಲಾಕ್ಷೀ ರೂಪಿಣೀ ಶ್ರೀರಿವಾಪರಾ ॥ ೪೫ ॥**
**ದೇವಗಂಧರ್ವನಾಗಾನಾಂ ಮನುಷ್ಯಾಣಾಂ ತಥಾ ವಿಧಾ ।**
**ನ ದೃಷ್ಟಾ ನ ಶ್ರುತಾ ರಾಜನ್ ದ್ಯೋತಯಂತೀ ವನಂ ಶುಭಾ ॥ ೪೬ ॥**
**ಆನೇತುಮಹಮುದ್ಯುಕ್ತಾ ತಾಂ ಭಾರ್ಯಾರ್ಥಂ ತವಾನಘ ।**

೪೩-೪೬. ಶೂರ್ಪನಖಿಯಿಂತೆಂದಳು : 'ಒಮ್ಮೆ ನಾನು ಜನಸ್ಥಾನದಿಂದ ಗೌತಮೀನದಿಯ ತೀರಕ್ಕೆ ಹೋಗಿದ್ದೆನು. ಅಲ್ಲಿ ಪಂಚವಟೀ ಎಂಬ ಋಷಿಗಳಿಗೆ ಆಶ್ರಯವಾದ ಜಾಗವು ಇದೆ. ಅಲ್ಲಿ ಕಮಲನೇತ್ರನಾದ ರಾಮನೆಂಬುವನನ್ನು ನಾನು ನೋಡಿದೆನು. ಆತನು ಧನುರ್ಬಾಣಗಳನ್ನು ಧರಿಸಿದ್ದು ಜಟೆ - ವಲ್ಕಲಗಳಿಂದ ಕೂಡಿದವನಾಗಿದ್ದನು. ಅವನ ತಮ್ಮನಾದ ಲಕ್ಷ್ಮಣನೂ ಹಾಗೆಯೇ ಇರುತ್ತಾನೆ. ಶ್ರೀಮಂತನಾದ ಆ ರಾಮನ ಹೆಂಡತಿಯಾದ, ಲಕ್ಷ್ಮಿಯಂತೆ ಇರುವ ರೂಪವತಿಯಾದ, ವಿಶಾಲವಾದ ಕಣ್ಣುಗಳುಳ್ಳ ಸ್ತ್ರೀಯು ವನವನ್ನೆಲ್ಲ ಬೆಳಗುವವಳಾಗಿದ್ದಳು. ಅಂಥ ಹೆಂಗಸನ್ನು ನಾನು ದೇವತೆಗಳು, ಗಂಧರ್ವರು, ನಾಗರುಗಳು, ಮನುಷ್ಯರು - ಯಾರಲ್ಲಿಯೂ ನೋಡಿರುವದಿಲ್ಲ. ಎಲೈ ಶ್ರೇಷ್ಠನೆ, ನಾನು ಆಕೆಯನ್ನು ನಿನಗಾಗಿ ತರಲು ಪ್ರಯತ್ನಮಾಡಿದೆನು.

**ಲಕ್ಷ್ಮಣೋ ನಾಮ ತದ್ಭ್ರಾತಾ ಚಿಚ್ಛೇದ ಮಮ ನಾಸಿಕಾಮ್ ।**
**ಕರ್ಣೌ ಚ ನೋದಿತಸ್ತೇನ ರಾಮೇಣ ಸ ಮಹಾಬಲಃ ॥ ೪೭ ॥**
**ತತೋಽಹಮತಿದುಃಖೇನ ರುದತೀ ಖರಮನ್ವಗಾಮ್ ।**
**ಸೋಽಪಿ ರಾಮಂ ಸಮಾಸಾದ್ಯ ಯುದ್ಧಂ ರಾಕ್ಷಸಯೂಥಪೈಃ ॥ ೪೮ ॥**
**ತತಃ ಕ್ಷಣೇನ ರಾಮೇಣ ತೇನೈವ ಬಲಶಾಲಿನಾ ।**
**ಸರ್ವೇ ತೇನ ವಿನಷ್ಟಾ ವೈ ರಾಕ್ಷಸಾ ಭೀಮವಿಕ್ರಮಾಃ ॥ ೪೯ ॥**

೪೭-೪೯. ಆತನ ಸಹೋದರನಾದ ಮಹಾಬಲಶಾಲಿಯಾದ ಲಕ್ಷ್ಮಣನು ರಾಮನಿಂದ ಪ್ರೇರಿತನಾಗಿ ನನ್ನ ಮೂಗನ್ನೂ ಕಿವಿಗಳನ್ನೂ ಕತ್ತರಿಸಿದನು. ಅನಂತರ ನಾನು ಬಹಳ ಕಷ್ಟದಿಂದ ಅಳುತ್ತಾ ಖರನ ಬಳಿಗೆ ಬಂದೆನು. ಅವನೂ ಕೂಡ ರಾಕ್ಷಸರ ಗುಂಪಿನೊಡನೆ ರಾಮನಿರುವಲ್ಲಿಗೆ ಬಂದು ಯುದ್ಧಮಾಡಿದನು. ಆಗ ಕ್ಷಣಮಾತ್ರದಲ್ಲಿ

ಬಲಶಾಲಿಯಾದ ಆ ರಾಮನಿಂದ ಭಯಂಕರವಾದ ಪರಾಕ್ರಮವುಳ್ಳ ರಾಕ್ಷಸರೆಲ್ಲರೂ ನಾಶಗೊಳಿಸಲ್ಪಟ್ಟರು.

**ಯದಿ ರಾಮೋ ಮನಃ ಕುರ್ಯಾತ್ ತ್ರೈಲೋಕ್ಯಂ ನಿಮಿಷಾರ್ಧತಃ ।**
**ಭಸ್ಮೀಕುರ್ಯಾನ್ನ ಸಂದೇಹ ಇತಿ ಭಾತಿ ಮಮ ಪ್ರಭೋ ॥ ೫೦ ॥**
**ಯದಿ ಸಾ ತವ ಭಾರ್ಯಾ ಸ್ಯಾತ್ ಸಫಲಂ ತವ ಜೀವಿತಮ್ ।**
**ಅತೋ ಯತಸ್ವ ರಾಜೇಂದ್ರ ಯಥಾ ತೇ ವಲ್ಲಬಾ ಭವೇತ್ ॥ ೫೧ ॥**
**ಸೀತಾ ರಾಜೀವಪತ್ರಾಕ್ಷೀ ಸರ್ವಲೋಕೈಕಸುಂದರೀ ।**

೫೦-೫೧. ಎಲೈ ಪ್ರಭುವೆ, ರಾಮನೇನಾದರೂ ಮನಸ್ಸುಮಾಡಿದರೆ ಮೂರು ಲೋಕಗಳನ್ನೂ ಅರ್ಧನಿಮಿಷದೊಳಗೆ ಬೂದಿಮಾಡಿಬಿಡುವನು ; ಈ ವಿಷಯದಲ್ಲಿ ಸಂದೇಹವಿಲ್ಲವೆಂದು ನನಗೆ ತೋರುತ್ತದೆ. ಆದರೆ ಆ (ಸೀತೆಯು) ನಿನ್ನ ಹೆಂಡತಿಯೇನಾದರೂ ಆದಲ್ಲಿ ನಿನ್ನ ಬಾಳು ಸಾರ್ಥಕವಾಯಿತೆಂದೇ ತಿಳಿ. ಆದ್ದರಿಂದ ಎಲೈ ರಾಜಶ್ರೇಷ್ಠನೆ, ಸರ್ವಲೋಕಸುಂದರಿಯೂ ಕಮಲದ ಎಸುಳಿನಂತೆ ಕಣ್ಣುಳ್ಳವಳೂ ಆದ ಆಕೆಯು ನಿನಗೆ ಹೆಂಡತಿಯಾಗಿ ಆಗಲು ಹೇಗೆ ಪ್ರಯತ್ನಿಸಬೇಕೋ ಹಾಗೆ ಕಾರ್ಯಶೀಲನಾಗು.

**ಸಾಕ್ಷಾದ್ರಾಮಸ್ಯ ಪುರತಃ ಸ್ಥಾತುಂ ತ್ವಂ ನ ಕ್ಷಮಃ ಪ್ರಭೋ ।**
**ಮಾಯಯಾ ಮೋಹಯಿತ್ವಾ ತು ಪ್ರಾಪ್ಸ್ಯಸೇ ತಾಂ ರಘೂತ್ತಮಮ್ ॥ ೫೨ ॥**
**ಶ್ರುತ್ವಾ ತತ್ಸೂಕ್ತವಾಕ್ಯೈಶ್ಚ ದಾನಮಾನಾದಿಭಿಸ್ತಥಾ ।**
**ಆಶ್ವಾಸ್ಯ ಭಗಿನೀಂ ರಾಜಾ ಪ್ರವಿವೇಶ ಸ್ವಕಂ ಗೃಹಮ್ ॥ ೫೩ ॥**
**ತತ್ರ ಚಿಂತಾಪರೋ ಭೂತ್ವಾ ರಾತ್ರೌ ನಿದ್ರಾಂ ನ ಲಬ್ಧವಾನ್ ॥**

೫೨-೫೩. ''ಪ್ರಭುವೆ, ನೀನು ರಾಮನ ಎದುರಿಗೇ ನೇರಾಗಿ ನಿಲ್ಲಲು ಸಮರ್ಥನಲ್ಲ. ಆದರೆ ಮೋಸದಿಂದ ಆ ರಾಮನನ್ನು ವಂಚಿಸಿ ಆಕೆಯನ್ನು ಪಡೆಯಬಹುದಾಗಿದೆ'' - ಎಂದಳು. ಆ ಮಾತುಗಳನ್ನು ಕೇಳಿ ರಾಜನಾದ (ರಾವಣನು) ಆಕೆಯನ್ನು ಒಳ್ಳೆಯ ಮಾತುಗಳಿಂದಲೂ ಉಡುಗೊರೆ, ಗೌರವಗಳಿಂದಲೂ ಸಮಾಧಾನ ಗೊಳಿಸಿ ತನ್ನ ಮನೆಯನ್ನು ಪ್ರವೇಶಿಸಿದನು. ಅಲ್ಲಿ ಚಿಂತಾವಶನಾಗಿ ರಾತ್ರೆಯೆಲ್ಲ ನಿದ್ರೆಮಾಡದೆ ಹೋದನು.

**ಏಕೇನ ರಾಮೇಣ ಕಥಂ ಮನುಷ್ಯ -**
**ಮಾತ್ರೇಣ ನಷ್ಟಃ ಸಬಲಃ ಖರೋ ಮೇ ।**
**ಭ್ರಾತಾ ಕಥಂ ಮೇ ಬಲವೀರ್ಯದರ್ಪ-**
**ಯುತೋ ವಿನಷ್ಟೋ ಬತ ರಾಘವೇಣ ॥ ೫೪ ॥**

**ಯದ್ವಾ ನ ರಾಮೋ ಮನುಜಃ ಪರೇಶೋ**
**ಮಾಂ ಹಂತುಕಾಮಃ ಸಬಲಂ ಬಲೌಘೈಃ ।**
**ಸಂಪ್ರಾರ್ಥಿತೋಽಯಂ ದ್ರುಹಿಣೇನ ಪೂರ್ವಂ**
**ಮನುಷ್ಯರೂಪೋಽದ್ಯ ರಘೋಃ ಕುಲೇಽಭೂತ್ ॥ ೫೫ ॥**
**ವಧ್ಯೋ ಯದಿ ಸ್ಯಾಂ ಪರಮಾತ್ಮನಾಹಂ**
**ವೈಕುಂಠರಾಜ್ಯಂ ಪರಿಪಾಲಯೇಽಹಮ್ ।**
**ನೋ ಚೇದಿದಂ ರಾಕ್ಷಸರಾಜ್ಯಮೇವ**
**ಭೋಕ್ಷ್ಯೇ ಚಿರಂ ರಾಮಮತೋ ವ್ರಜಾಮಿ ॥ ೫೬ ॥**

೫೪-೫೬. ''ಮನುಷ್ಯಮಾತ್ರನಾದ ರಾಮನೊಬ್ಬನಿಂದ ನನ್ನ ಸೋದರನೂ ಬಲವೀರ್ಯಗಳಿಂದ ಕೊಬ್ಬಿದವನೂ ಸೇನಾಬಲಯುತನೂ ಆದ ಖರನು ಹೇಗೆ ಕೊಲ್ಲಲ್ಪಟ್ಟನು ? ಹಾಗಲ್ಲದೆ ರಾಮನು ಹಿಂದೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಪರಮಾತ್ಮನಾಗಿದ್ದು ಈಗ ಮನುಷ್ಯರೂಪದಿಂದ ರಘುಕುಲದಲ್ಲಿ ಅವತರಿಸಿದವನಾಗಿ ರಾಕ್ಷಸಬಲ ಸಹಿತನಾದ ನನ್ನನ್ನು ತನ್ನ ಸಂಗಡಿಗರೊಡಗೂಡಿ ಕೊಲ್ಲಲು ಇಚ್ಛಿಸಿರಬಹುದೆ ? ಒಂದು ವೇಳೆ ನಾನು ಪರಮಾತ್ಮನಿಂದ ಕೊಲ್ಲಲ್ಪಡುವೆನಾದರೆ ವೈಕುಂಠರಾಜ್ಯವನ್ನು ಆಳಿಯೇನು. ಹಾಗಿಲ್ಲವಾದರೆ ಈ ರಾಕ್ಷಸರಾಜ್ಯವನ್ನೇ ಬಹಳಕಾಲ ಅನುಭವಿಸಿಕೊಂಡಿರಬೇಕಾಗುವದು. ಆದ್ದರಿಂದ ನಾನು ರಾಮನ ಬಳಿಗೆ ಹೋಗುವೆನು.''

**ಇತ್ಥಂ ವಿಚಿಂತ್ಯಾಖಿಲರಾಕ್ಷಸೇಂದ್ರೋ**
**ರಾಮಂ ವಿದಿತ್ವಾ ಪರಮೇಶ್ವರಂ ಹರಿಮ್ ।**
**ವಿರೋಧಬುದ್ಧ್ಯೈವ ಹರಿಂ ಪ್ರಯಾಮಿ**
**ದ್ರುತಂ ನ ಭಕ್ತ್ಯಾ ಭಗವಾನ್ ಪ್ರಸೀದೇತ್ ॥ ೫೭ ॥**

೫೭. ಹೀಗೆ ರಾಕ್ಷಸನಾದ ರಾವಣನು ಎಲ್ಲವನ್ನೂ ಆಲೋಚಿಸಿ ರಾಮನು ಪರಮೇಶ್ವರನಾದ ಶ್ರೀಹರಿಯೇ - ಎಂದು ಅರಿತುಕೊಂಡು ''ಭಗವಂತನು ಭಕ್ತಿಗೆ ಬೇಗನೆ ಒಲಿಯುವದಿಲ್ಲ. ಆದ್ದರಿಂದಲೇ ದ್ವೇಷಬುದ್ಧಿಯಿಂದಲೇ ಹರಿಯನ್ನು ಬಳಿಸಾರುವೆನು'' ಎಂದುಕೊಂಡು ಸುಮ್ಮನಾದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ಪಂಚಮಃ ಸರ್ಗಃ**

ః:::::::::

# ಆರನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ವಿಚಿಂತ್ಯೈವಂ ನಿಶಾಯಾಂ ಸ ಪ್ರಭಾತೇ ರಥಮಾಸ್ಥಿತಃ ।**
**ರಾವಣೋ ಮನಸಾ ಕಾರ್ಯಮೇಕಂ ನಿಶ್ಚಿತ್ಯ ಬುದ್ಧಿಮಾನ್ ॥ ೧ ॥**
**ಯಯೌ ಮಾರೀಚಸದನಂ ಪರಂ ಪಾರಮುದನ್ವತಃ ।**
**ಮಾರೀಚಸ್ತತ್ರ ಮುನಿವಜ್ಜಟಾವಲ್ಕಲಧಾರಕಃ ॥ ೨ ॥**
**ಧ್ಯಾಯನ್ ಹೃದಿ ಪರಾತ್ಮಾನಂ ನಿರ್ಗುಣಂ ಗುಣಭಾಸಕಮ್ ।**
**ಸಮಾಧಿವಿರಮೇಽಪಶ್ಯದ್ ರಾವಣಂ ಗೃಹಮಾಗತಮ್ ॥ ೩ ॥**
**ದ್ರುತಮುತ್ಥಾಯ ಚಾಲಿಂಗ್ಯ ಪೂಜಯಿತ್ವಾ ಯಥಾವಿಧಿ ।**
**ಕೃತಾತಿಥ್ಯಂ ಸುಖಾಸೀನಂ ಮಾರೀಚೋ ವಾಕ್ಯಮಬ್ರವೀತ್ ॥ ೪ ॥**

೧-೪. ಶ್ರೀಮಹಾದೇವನಿಂತೆಂದನು : ಬುದ್ಧಿವಂತನಾದ ರಾವಣನು ಈ ರೀತಿಯಾಗಿ ರಾತ್ರೆಯೆಲ್ಲ ಆಲೋಚಿಸಿ ಒಂದಾನೊಂದು ಕೆಲಸವನ್ನು ಸಾಧಿಸಲು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಸಮುದ್ರದ ಆಚೆ ದಡದಲ್ಲಿರುವ ಮಾರೀಚನ ಮನೆಗೆ ಹೋದನು. ಅಲ್ಲಿ ಮಾರೀಚನು ಮುನಿವೇಷಧಾರಿಯಾಗಿ ಜಟಾವಲ್ಕಲಗಳನ್ನು ಧರಿಸಿಕೊಂಡು ನಿರ್ಗುಣನೂ ಗುಣಗಳನ್ನು ಬೆಳಗುವವನೂ ಆಗಿರುವ ಪರಮಾತ್ಮನನ್ನು ಹೃದಯದಲ್ಲಿ ಧ್ಯಾನಿಸುತ್ತಿದ್ದನು. ಧ್ಯಾನವು ಪೂರೈಸಿದಾಗ ಮನೆಗೆ ಬಂದಿದ್ದ ರಾವಣನನ್ನು ಕಂಡನು. ಜಾಗ್ರತೆಯಾಗಿ ಮೇಲೆದ್ದು ಆಲಿಂಗಿಸಿಕೊಂಡು ಯಥಾಯೋಗ್ಯವಾಗಿ ಪೂಜಿಸಿದನು. ಆತಿಥ್ಯದಿಂದ ತೃಪ್ತನಾಗಿ ಸುಖಾಸನದಲ್ಲಿ ಕುಳಿತಿರುವ ರಾವಣನನ್ನು ಕುರಿತು ಮಾರೀಚನು ಹೀಗೆಂದನು.

**ಸಮಾಗಮನಸಮೇತತ್ತೇ ರಥೇನೈಕೇನ ರಾವಣ ।**
**ಚಿಂತಾಪರ ಇವಾಭಾಸಿ ಹೃದಿ ಕಾರ್ಯಂ ವಿಚಿಂತಯನ್ ॥ ೫ ॥**
**ಬ್ರೂಹಿ ಮೇ ನ ಹಿ ಗೋಪ್ಯಂ ಚೇತ್ ಕರವಾಣಿ ತವ ಪ್ರಿಯಮ್ ।**
**ನ್ಯಾಯ್ಯಂ ಚೇದ್ ಬ್ರೂಹಿ ರಾಜೇಂದ್ರ ವೃಜಿನಂ ಮಾಂ ಸ್ಪೃಶೇನ್ನ ಹಿ ॥ ೬ ॥**

೫-೬. 'ಎಲೈ ರಾವಣನೆ, ಒಂದೇ ರಥವನ್ನೇರಿ ಏಕಾಕಿಯಾಗಿ ಈ ನಿನ್ನ ಬರುವಿಕೆಯು ಮನಸ್ಸಿನಲ್ಲಿ ಏನೋ ಕೆಲಸವನ್ನು ಆಲೋಚಿಸಿಕೊಂಡು ಮಾಡಿರುವಂತಿದೆ. ಚಿಂತೆಗೆ ವಶನಾಗಿರುವಂತೆಯೂ ಕಂಡುಬರುತ್ತಿದೆ. ಅದು ಗುಟ್ಟೇನೂ ಅಲ್ಲವಾದರೆ ನನಗೆ ಹೇಳು ; ನಿನಗೆ ಪ್ರಿಯವಾದದ್ದನ್ನು ಮಾಡುವೆನು. ಎಲೈ ರಾಜೇಂದ್ರನೆ, ನನಗೆ

ಪಾಪವೇನೂ ಅಂಟಿಕೊಳ್ಳುವದಿಲ್ಲವಾದರೆ ಮತ್ತು ನ್ಯಾಯಸಮ್ಮತವಾಗಿದ್ದರೆ ಅಂಥ ಕಾರ್ಯವನ್ನು ಹೇಳು.

**ರಾವಣ ಉವಾಚ-**

**ಅಸ್ತಿ ರಾಜಾ ದಶರಥಃ ಸಾಕೇತಾಧಿಪತಿಃ ಕಿಲ ।**
**ರಾಮನಾಮಾ ಸುತಸ್ತಸ್ಯ ಜ್ಯೇಷ್ಠಃ ಸತ್ಯಪರಾಕ್ರಮಃ ॥ ೭ ॥**
**ವಿವಾಸಯಾಮಾಸ ಸುತಂ ವನಂ ವನಜನಪ್ರಿಯಮ್ ।**
**ಭಾರ್ಯಯಾ ಸಹಿತಂ ಭ್ರಾತ್ರಾ ಲಕ್ಷ್ಮಣೇನ ಸಮನ್ವಿತಮ್ ॥ ೮ ॥**
**ಸ ಆಸ್ತೇ ವಿಪಿನೇ ಘೋರೇ ಪಂಚವಟ್ಯಾಶ್ರಮೇ ಶುಭೇ ।**

೭-೮. ರಾವಣನಿಂತೆಂದನು : ''ಅಯೋಧ್ಯಾಧಿಪತಿಯಾದ ದಶರಥನೆಂಬ ರಾಜನು ಇದ್ದನಷ್ಟೆ! ಅವನ ಹಿರಿಯ ಮಗನಾದ ಸತ್ಯಪರಾಕ್ರಮನಾದ ರಾಮನೆಂಬುವನು ಇದ್ದಾನೆ. ಸೋದರನಾದ ಲಕ್ಷ್ಮಣನೊಡಗೂಡಿದ ಹಾಗೂ ಹೆಂಡತಿಸಮೇತನಾದ, ಮತ್ತು ವನವಾಸಿಗಳಾದ (ಋಷಿ) ಜನರಿಗೆ ಪ್ರಿಯನಾದ ಆ ಮಗನನ್ನು (ತಂದೆಯು) ಊರಿನಿಂದ ಹೊರಗೆ ಕಳುಹಿಸಿದನು. ಅವನು ಭಯಂಕರವಾದ ಕಾಡಿನಲ್ಲಿರುವ ಪಂಚವಟಿಯ ಆಶ್ರಮದಲ್ಲಿ ಇದ್ದುಕೊಂಡಿರುವನು.

**ತಸ್ಯ ಭಾರ್ಯಾ ವಿಶಾಲಾಕ್ಷೀ ಸೀತಾ ಲೋಕವಿಮೋಹಿನೀ ।**
**ರಾಮೋ ನಿರಪರಾಧಾನ್ಮೇ ರಾಕ್ಷಸಾನ್ ಭೀಮವಿಕ್ರಮಾನ್ ॥ ೯ ॥**
**ಖರಂ ಚ ಹತ್ವಾ ವಿಪಿನೇ ಸುಖಮಾಸ್ತೇಽತಿನಿರ್ಭಯಃ ।**
**ಭಗಿನ್ಯಾಃ ಶೂರ್ಪನಖಾಯಾ ನಿರ್ದೋಷಾಯಾಶ್ಚ ನಾಸಿಕಾಮ್ ॥ ೧೦ ॥**
**ಕರ್ಣೌ ಚಿಚ್ಛೇದ ದುಷ್ಟಾತ್ಮಾ ವನೇ ತಿಷ್ಠತಿ ನಿರ್ಭಯಃ ।**

೯-೧೦. ಲೋಕವನ್ನೇ ಮೋಹನಗೊಳಿಸುವ ಆತನ ಹೆಂಡತಿಯಾದ ವಿಶಾಲವಾದ ಕಣ್ಣುಗಳುಳ್ಳವಳಾದ ಸೀತೆಯೆಂಬುವಳೊಬ್ಬಳಿರುವಳು. ರಾಮನು ಭಯಂಕರವಾದ ಪರಾಕ್ರಮದಿಂದ ಕೂಡಿದ ನನ್ನ ಕಡೆಯ ರಾಕ್ಷಸರನ್ನೂ ಖರನನ್ನೂ ಕೊಂದುಹಾಕಿ ಕಾಡಿನಲ್ಲಿ ನಿರ್ಭಯನಾಗಿ ಸುಖದಿಂದಿರುವನು. ಮತ್ತು ನನ್ನ ಸೋದರಿಯಾದ ಹಾಗೂ ಏನೂ ತಪ್ಪುಮಾಡದ ಶೂರ್ಪನಖಿಯ ಮೂಗನ್ನೂ ಕಿವಿಗಳನ್ನೂ ಆ ದುಷ್ಟನು ಕತ್ತರಿಸಿಬಿಟ್ಟನು. ಈಗ ಹೆದರಿಕೆಯೇ ಇಲ್ಲದೆ ಆ ವನದಲ್ಲಿರುತ್ತಾನೆ.

**ಅತಸ್ತ್ವಯಾ ಸಹಾಯೇನ ಗತ್ವಾ ತತ್ಪ್ರಾಣವಲ್ಲಭಾಮ್ ।**
**ಆನಯಿಷ್ಯಾಮಿ ವಿಪಿನೇ ರಹಿತೇ ರಾಘವೇಣ ತಾಮ್ ॥ ೧೧ ॥**
**ತ್ವಂ ತು ಮಾಯಾಮೃಗೋ ಭೂತ್ವಾ ಹ್ಯಾಶ್ರಮಾದಪನೇಷ್ಯಸಿ ।**

**ರಾಮಂ ಚ ಲಕ್ಷ್ಮಣಂ ಚೈವ ತದಾ ಸೀತಾಂ ಹರಾಮ್ಯಹಮ್ ॥ ೧೨ ॥**
**ತ್ವಂ ತು ತಾವತ್ ಸಹಾಯಂ ಮೇ ಕೃತ್ವಾ ಸ್ಥಾಸ್ಯಸಿ ಪೂರ್ವವತ್ ।**

೧೧-೧೨. ಆದ್ದರಿಂದ ನಿನ್ನ ಸಹಾಯವನ್ನು ಹೊಂದಿ ಅಲ್ಲಿಗೆ ಹೋಗಿ ಆತನ ಪ್ರಿಯಪತ್ನಿಯಾದ (ಸೀತೆಯನ್ನು) ರಾಮನಿಲ್ಲದ (ಸಮಯದಲ್ಲಿ) ಕಾಡಿನಿಂದ ತೆಗೆದುಕೊಂಡು ಬರಲಿದ್ದೇನೆ. ನೀನಾದರೊ, ಮಾಯಮೃಗವಾಗಿ ರಾಮನನ್ನೂ ಲಕ್ಷ್ಮಣನನ್ನೂ ಉಪಾಯವಾಗಿ ಆಶ್ರಮದಿಂದ ದೂರವಾಗಿ ಕರೆದೊಯ್ಯುವನಾಗು. ಆಗ ನಾನು ಸೀತೆಯನ್ನು ಕದಿಯುವೆನು. ಅಷ್ಟರಮಟ್ಟಿಗೆ ನೀನು ಸಹಾಯಮಾಡಿ ಹಿಂದಿನಂತೆಯೇ ಇದ್ದುಕೊಂಡಿರು.''

**ಇತ್ಯೇವಂ ಭಾಷಮಾಣಂ ತಂ ರಾವಣಂ ವೀಕ್ಷ್ಯ ವಿಸ್ಮಿತಃ ।**
**ಕೇನೇದಮುಪದಿಷ್ಟಂ ತೇ ಮೂಲಘಾತಕರಂ ವಚಃ ॥ ೧೩ ॥**
**ಸ ಏವ ಶತ್ರುರ್ವಧ್ಯಶ್ಚ ಯಸ್ತ್ವನ್ನಾಶಂ ಪ್ರತೀಕ್ಷತೇ ।**
**ರಾಮಸ್ಯ ಪೌರುಷಂ ಸ್ಮೃತ್ವಾ ಚಿತ್ತಮದ್ಯಾಪಿ ರಾವಣ ॥ ೧೪ ॥**
**ಬಾಲೋಽಪಿ ಮಾಂ ಕೌಶಿಕಸ್ಯ ಯಜ್ಞಸಂರಕ್ಷಣಾಯ ಸಃ ।**
**ಆಗತಸ್ತ್ವಿಷುಣೈಕೇನ ಪಾತಯಾಮಾಸ ಸಾಗರೇ ॥ ೧೫ ॥**
**ಯೋಜನಾನಾಂ ಶತಂ ರಾಮಸ್ತದಾದಿ ಭಯವಿಹ್ವಲಃ ।**
**ಸ್ಮೃತ್ವಾ ಸ್ಮೃತ್ವಾ ತದೇವಾಹಂ ರಾಮಂ ಪಶ್ಯಾಮಿ ಸರ್ವತಃ ॥ ೧೬ ॥**

೧೩-೧೬. ಈ ರೀತಿಯಾಗಿ ಮಾತನಾಡಿದ ರಾವಣನನ್ನು ಕಂಡು ಆಶ್ಚರ್ಯಗೊಂಡವನಾಗಿ ಮಾರೀಚನು ಹೀಗೆಂದನು : ''ಕುಲವನ್ನೇ ನಾಶಮಾಡುವ ಈ ಮಾತನ್ನು ನಿನಗೆ ಹೇಳಿದವನಾರು ? ನಿನ್ನ ನಾಶವನ್ನು ನಿರೀಕ್ಷಿಸುತ್ತಿರುವ ಆ ಶತ್ರುವು ವಧಾರ್ಹನೇ ಸರಿ. ಎಲೈ ರಾವಣನೆ, ರಾಮನ ಪರಾಕ್ರಮವನ್ನು ನೆನೆಸಿಕೊಂಡರೆ ಈಗಲೂ ನನ್ನ ಮನಸ್ಸು (ಭಯಗೊಳ್ಳುತ್ತದೆ). ವಿಶ್ವಾಮಿತ್ರನ ಯಜ್ಞವನ್ನು ಕಾಪಾಡುವದಕ್ಕಾಗಿ ಇನ್ನೂ ಹುಡುಗನಾಗಿಯೇ ಇದ್ದ ರಾಮನು ಬಂದನು. ಒಂದೇ ಬಾಣದಿಂದ ನೂರು ಯೋಜನಗಳ ದೂರಕ್ಕೆ ಸಮುದ್ರದಲ್ಲಿ ನನ್ನನ್ನು ಕೆಡವಿಬಿಟ್ಟನು. ಆಗಿನಿಂದಲೂ ಹೆದರಿದವನಾಗಿ ನಾನು ರಾಮನನ್ನು ಮತ್ತೆ ಮತ್ತೆ ನೆನೆಸಿಕೊಂಡು ಎಲ್ಲೆಲ್ಲಿಯೂ ಕಾಣುತ್ತಿರುವೆನು.''

**ದಂಡಕೇಽಪಿ ಪುನರಪ್ಯಹಂ ವನೇ**
**ಪೂರ್ವವೈರಮನುಚಿಂತಯನ್ ಹೃದಿ ।**
**ತೀಕ್ಷ್ಣಶೃಂಗಮೃಗರೂಪಮೇಕಧಾ**
**ಮಾದೃಶೈರ್ಬಹುಭಿರಾವೃತೋಽಭ್ಯಯಾಮ್ ॥ ೧೭ ॥**

**ರಾಘವಂ ಜನಕಜಾಸಮನ್ವಿತಂ**
**ಲಕ್ಷ್ಮಣೇನ ಸಹಿತಂ ತ್ವರಾನ್ವಿತಃ ।**
**ಆಗತೋಽಹಮಥ ಹಂತುಮುದ್ಯತೋ**
**ಮಾಂ ವಿಲೋಕ್ಯ ಶರಮೇಕಮಕ್ಷಿಪತ್** ॥ ೧೮ ॥
**ತೇನ ವಿದ್ಧಹೃದಯೋಽಹಮುದ್ಭ್ರಮನ್**
**ರಾಕ್ಷಸೇಂದ್ರ ಪತಿತೋಽಸ್ಮಿ ಸಾಗರೇ ।**
**ತತ್ಪ್ರಭೃತ್ಯಹಮಿದಂ ಸಮಾಶ್ರಿತಃ**
**ಸ್ಥಾನಮೂರ್ಜಿತಮಿದಂ ಭಯಾರ್ದಿತಃ** ॥ ೧೯ ॥

೧೭-೧೯. "ದಂಡಕಾರಣ್ಯದಲ್ಲಿಯೂ ಮತ್ತೆ ನಾನು ಮನಸ್ಸಿನಲ್ಲಿ ಹಿಂದಿನ ದ್ವೇಷವನ್ನೇ ಸಾಧಿಸುತ್ತಾ ಒಮ್ಮೆ ಚೂಪಾದ ಕೋಡುಗಳುಳ್ಳ ಒಂದು ಮೃಗದ ರೂಪವನ್ನು ಧರಿಸಿ ನನ್ನಂತೆಯೇ ವೇಷವುಳ್ಳ ಬಹಳ (ರಾಕ್ಷಸರ) ಗುಂಪಿನೊಡನೆ ಕೂಡಿ, ಲಕ್ಷ್ಮಣನೊಡನೆಯೂ ಸೀತೆಯಿಂದಲೂ ಕೂಡಿದ ರಾಮನನ್ನು ವೇಗವಾಗಿ ಬಳಿಸಾರಿ ಅವನನ್ನು ಕೊಲ್ಲಲು ಪ್ರಯತ್ನಿಸಿದೆನು. ಅವನು ನನ್ನನ್ನು ನೋಡಿ ಒಂದು ಬಾಣವನ್ನು ಬಿಟ್ಟನು. ಅವನಿಂದ ಹೊಡೆಯಲ್ಪಟ್ಟವನಾಗಿ ಗಿರಗಿರನೆ ತಿರುಗುತ್ತಾ ಎಲೈ ರಾಕ್ಷಸಶ್ರೇಷ್ಠನೆ, ಸಮುದ್ರದಲ್ಲಿ ಬಿದ್ದುಬಿಟ್ಟೆನು. ಅಂದಿನಿಂದ ನಾನು ಈ ಜಾಗವನ್ನಾಶ್ರಯಿಸಿ ಶ್ರೇಷ್ಠವಾದ ಈ ತಪೋವನದಲ್ಲಿ ಹೆದರಿಕೆಯಿಂದ ವಾಸಿಸುತ್ತಿರುವೆನು."

**ರಾಮಮೇವ ಸತತಂ ವಿಭಾವಯೇ**
**ಭೀತ ಭೀತ ಇವ ಭೋಗರಾಶಿತಃ ।**
**ರಾಜರತ್ನರಮಣೀರಥಾದಿಕಂ**
**ಶ್ರೋತ್ರಯೋರ್ಯದಿ ಗತಂ ಭಯಂ ಭವೇತ್** ॥ ೨೦ ॥
**ರಾಮ ಆಗತ ಇಹೇತಿ ಶಂಕಯಾ**
**ಬಾಹ್ಯಕಾರ್ಯಮಪಿ ಸರ್ವಮತ್ಯಜಮ್ ।**
**ನಿದ್ರಯಾ ಪರಿವೃತೋ ಯದಾ ಸ್ವಪೇ**
**ರಾಮಮೇವ ಮನಸಾಽನುಚಿಂತಯನ್** ॥ ೨೧ ॥
**ಸ್ವಪ್ನದೃಷ್ಟಿಗತರಾಘವಂ ತದಾ**
**ಬೋಧಿತೋ ವಿಗತನಿದ್ರ ಆಸ್ಥಿತಃ ।**
**ತದ್ಭವಾನಪಿ ವಿಮುಚ್ಯ ಚಾಗ್ರಹಂ**
**ರಾಘವಂ ಪ್ರತಿ ಗೃಹಂ ಪ್ರಯಾಹಿ ಭೋಃ** ॥ ೨೨ ॥

೨೦-೨೨. ''ಭೋಗ್ಯವಾದ ಪದಾರ್ಥಗಳಲ್ಲಿ ಹೆದರಿಕೆಯು ಹುಟ್ಟಿದಂತಾಗಿ ಯಾವಾಗಲೂ ರಾಮನನ್ನೇ ಕುರಿತು ಆಲೋಚಿಸುತ್ತಿರುವೆನು. ರಾಜ-ರತ್ನ-ರಮಣಿ-ರಥ ಎಂಬೀ ರೀತಿಯ (ರ-ಎಂಬಕ್ಷರದಿಂದಾರಂಭವಾಗುವ) ಶಬ್ದವು ಕಿವಿಗೆ ಬಿದ್ದರೂ ಸಾಕು, ಭಯವುಂಟಾಗುತ್ತಿರುವದು. 'ಇಲ್ಲಿಗೆ ರಾಮನು ಬಂದನು'- ಎಂಬ ಸಂಶಯದಿಂದ ನನ್ನ ಹೊರಗಿನ ಚಟುವಟಿಕೆಗಳೆಲ್ಲವನ್ನೂ ಬಿಟ್ಟುಬಿಟ್ಟಿರುತ್ತೇನೆ. ನಿದ್ರೆಯ ಜೊಂಪು ಹತ್ತಿದಾಗ ರಾಮನನ್ನೇ ನೆನೆಯುತ್ತಾ ಮಲಗುವೆನಾದ್ದರಿಂದ ಕನಸಿನಲ್ಲಿಯೂ ರಾಮನನ್ನು ಕಂಡಂತಾಗಿ ಎಚ್ಚರಗೊಂಡುಬಿಡುತ್ತೇನೆ. (ಹೀಗೆ ರಾಮನ ವಿಷಯಕ್ಕೆ ನನಗೆ ಉಂಟಾಗಿರುವ ಭಯಾನಕಸ್ಥಿತಿಯನ್ನು ಅರಿತು) ನೀನು ಕೂಡ ರಾಮನ ವಿಷಯಕ್ಕೆ ಹಟವನ್ನು ಬಿಟ್ಟು ಮನೆಗೆ ಹಿಂದಿರುಗುವವನಾಗು.''

**ರಕ್ಷ ರಾಕ್ಷಸಕುಲಂ ಚಿರಾಗತಂ**
**ತತ್ಸ್ಮೃತೌ ಸಕಲಮೇವ ನಶ್ಯತಿ ।**
**ತವ ಹಿತಂ ವದತೋ ಮಮ ಭಾಷಿತಂ**
**ಪರಿಗೃಹಾಣ ಪರಾತ್ಮನಿ ರಾಘವೇ ॥ ೨೩ ॥**
**ತ್ಯಜ ವಿರೋಧಮತಿಂ ಭಜ ಭಕ್ತಿತಃ**
**ಪರಮಕಾರುಣಿಕೋ ರಘುನಂದನಃ ।**
**ಅಹಮಶೇಷಮಿದಂ ಮುನಿವಾಕ್ಯತೋ**
**(ಅ)ಶೃಣವಮಾದಿಯುಗೇ ಪರಮೇಶ್ವರಃ ॥ ೨೪ ॥**
**ಬ್ರಹ್ಮಣಾರ್ಥಿತ ಉವಾಚ ತಂ ಹರಿಃ**
**ಕಿಂ ತವೇಪ್ಸಿತಮಹಂ ಕರವಾಣಿ ತತ್ ।**
**ಬ್ರಹ್ಮಣೋಕ್ತಮರವಿಂದಲೋಚನ**
**ತ್ವಂ ಪ್ರಯಾಹಿ ಭುವಿ ಮಾನುಷಂ ವಪುಃ ॥ ೨೫ ॥**
**ದಶರಥಾತ್ಮಜಭಾವಮಂಜಸಾ**
**ಜಹಿ ರಿಪುಂ ದಶಕಂಧರಂ ಹರೇ ॥**

೨೩-೨೫. ''ಬಹಳ ಕಾಲದಿಂದ ನಡೆದುಬಂದಿರುವ ರಾಕ್ಷಸವಂಶವನ್ನು ಕಾಪಾಡುವನಾಗು. ಆ ರಾಮನನ್ನು ನೆನೆಯಿಸಿಕೊಂಡಲ್ಲಿ ಎಲ್ಲವೂ ನಾಶವಾಗಿಬಿಡುವದು. ನಿನ್ನ ಹಿತಕ್ಕಾಗಿ ಹೇಳುತ್ತಿರುವ ಮಾತನ್ನು ಸ್ವೀಕರಿಸು. ಪರಮಾತ್ಮನಾದ ರಾಮನಲ್ಲಿ ವೈರಬುದ್ಧಿಯನ್ನು ಬಿಡು. ಭಕ್ತಿಯಿಂದ ಸೇವಿಸುವವನಾಗು. ರಘುನಂದನನು ಪರಮ ದಯಾಮೂರ್ತಿಯು. ನಾನು ಈ ಎಲ್ಲವನ್ನೂ ಋಷಿಗಳ ಮುಖಾಂತರ ಕೇಳಿರುತ್ತೇನೆ. ಆದಿಯುಗದಲ್ಲಿ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ನಾರಾಯಣನು ''ನಿನ್ನ ಕೋರಿಕೆಯೇನು?

ನಾನು ಅದನ್ನು ನಡೆಯಿಸಿ ಕೊಡುವೆನು'' ಎಂದು ಕೇಳಲು ಬ್ರಹ್ಮನು ''ಎಲೈ, ಪದ್ಮನೇತ್ರನಾದ ಹರಿಯೆ, ನೀನು ಭೂಲೋಕದಲ್ಲಿ ಮನುಷ್ಯಶರೀರಧಾರಿಯಾಗಿ ದಶರಥನ ಮಗನಾಗಿ ಅವತಾರಮಾಡಿ(ದೇವ) ಶತ್ರುವಾದ ದಶಕಂಠನನ್ನು ನಾಶಗೊಳಿಸುವವನಾಗು''-ಎಂದನು.''

**ಅತೋ ನ ಮಾನುಷೋ ರಾಮಃ ಸಾಕ್ಷಾನ್ನಾರಾಯಣೋಽವ್ಯಯಃ ।**
**ಮಾಯಾಮಾನುಷವೇಷೇಣ ವನಂ ಯಾತೋಽತಿನಿರ್ಭಯಃ ॥ ೨೬ ॥**
**ಭೂಭಾರಹರಣಾರ್ಥಾಯ ಗಚ್ಛ ತಾತ ಗೃಹಂ ಸುಖಮ್ ।**
**ಶ್ರುತ್ವಾ ಮಾರೀಚವಚನಂ ರಾವಣಃ ಪ್ರತ್ಯಭಾಷತ ॥ ೨೭ ॥**

೨೬-೨೭. ''ಆದ್ದರಿಂದ ರಾಮನು ಮನುಷ್ಯನಲ್ಲ. ನಾಶರಹಿತನಾದ ಸಾಕ್ಷಾನ್ನಾರಾಯಣನೇ ಆಗಿರುತ್ತಾನೆ. ಮಾಯಾಮನುಷ್ಯವೇಷದಿಂದ ಭೂಭಾರವನ್ನು ಕಳೆಯುವದಕ್ಕಾಗಿ ಸ್ವಲ್ಪವೂ ಭಯವಿಲ್ಲದೆ ಕಾಡಿಗೆ ಬಂದಿರುತ್ತಾನೆ. ಆದ್ದರಿಂದ ಅಪ್ಪ, (ರಾವಣ) ನೀನು ಮನೆಗೆ ಸುಖವಾಗಿ ಹಿಂದಿರುಗು'' - ಎಂದನು.

**ಪರಮಾತ್ಮಾ ಯದಾ ರಾಮಃ ಪ್ರಾರ್ಥಿತೋ ಬ್ರಹ್ಮಣಾ ಕಿಲ ।**
**ಮಾಂ ಹಂತುಂ ಮಾನುಷೋ ಭೂತ್ವಾ ಯತ್ನಾದಿಹ ಸಮಾಗತಃ ॥ ೨೮ ॥**
**ಕರಿಷ್ಯತ್ಯಚಿರಾದೇವ ಸತ್ಯಸಂಕಲ್ಪ ಈಶ್ವರಃ ।**
**ಅತೋಽಹಂ ಯತ್ನತಃ ಸೀತಾಮಾನೇಷ್ಯಾಮ್ಯೇವ ರಾಘವಾತ್ ॥ ೨೯ ॥**
**ವಧೇ ಪ್ರಾಪ್ತೇ ರಣೇ ವೀರ ಪ್ರಾಪ್ಸ್ಯಾಮಿ ಪರಮಂ ಪದಮ್ ।**
**ಯದ್ವಾ ರಾಮಂ ರಣೇ ಹತ್ವಾ ಸೀತಾಂ ಪ್ರಾಪ್ಸ್ಯಾಮಿ ನಿರ್ಭಯಃ ॥ ೩೦ ॥**

೨೮-೩೦. ಮಾರೀಚನ ಮಾತನ್ನು ಕೇಳಿ ರಾವಣನಿಂತೆಂದನು : ''ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಶ್ರೀಮನ್ನಾರಾಯಣನೇ ಮನುಷ್ಯನಾದ ರಾಮನಾಗಿ ಉದ್ದೇಶಪೂರ್ವಕವಾಗಿ ಇಲ್ಲಿಗೆ ಬಂದಿರುವನಾದರೆ ಸತ್ಯಸಂಕಲ್ಪನಾದ ಆತನು ಶೀಘ್ರದಲ್ಲಿಯೇ ಆ ನಿಶ್ಚಯವನ್ನು ಕಾರ್ಯಗತಮಾಡುವನು. ಆದ್ದರಿಂದಲೇ ನಾನು ಪ್ರಯತ್ನಪೂರ್ವಕವಾಗಿ ಸೀತೆಯನ್ನು ರಾಮನ ಕಡೆಯಿಂದ (ಅಪಹರಿಸಿ) ತರುವೆನು. ಎಲೈ ವೀರನೆ, ಯುದ್ಧದಲ್ಲಿ ಸಾವು (ನನಗೆ) ಸಂಭವಿಸಿದರೆ ಪರಮಪದವಿಯನ್ನೇ ಹೊಂದುವೆನು. ಹಾಗಿಲ್ಲವಾದರೆ ರಾಮನನ್ನೇ ಯುದ್ಧದಲ್ಲಿ ನಾಶಮಾಡಿ ಸೀತೆಯನ್ನು ನಿರ್ಭಯವಾಗಿ ಪಡೆದುಕೊಳ್ಳುವೆನು.''

**ತದುತ್ತಿಷ್ಠ ಮಹಾಭಾಗ ವಿಚಿತ್ರಮೃಗರೂಪಧೃಕ್ ।**

**ರಾಮಂ ಸಲಕ್ಷ್ಮಣಂ ಶೀಘ್ರಮಾಶ್ರಮಾದತಿದೂರತಃ ॥ ೩೧ ॥**
**ಆಕ್ರಮ್ಯ ಗಚ್ಛ ತ್ವಂ ಶೀಘ್ರಂ ಸುಖಂ ತಿಷ್ಠ ಯಥಾ ಪುರಾ ।**
**ಅತಃ ಪರಂ ಚೇದ್ ಯತ್ಕಿಂಚಿತ್ ಭಾಷಸೇ ಮದ್ವಿಭೀಷಣಮ್ ॥ ೩೨ ॥**
**ಹನಿಷ್ಯಾಮ್ಯಸಿನಾನೇನ ತ್ವಾಮತ್ರೈವ ನ ಸಂಶಯಃ॥**

೩೧-೩೨. ''ಎಲೈ ಮಹಾಭಾಗನೆ, ಆದ್ದರಿಂದ ಎದ್ದೇಳು. ನೀನು ವಿಚಿತ್ರವಾದ (ಮನೋಹರವಾದ) ಜಿಂಕೆಯ ರೂಪವನ್ನು ಧರಿಸಿ ಲಕ್ಷ್ಮಣಸಹಿತನಾದ ರಾಮನನ್ನು ಆಶ್ರಮದಿಂದ ಬಹಳ ದೂರಕ್ಕೆ ಕರೆದೊಯ್ದು ಬೇಗನೆ ಹೊರಟುಹೋಗು. ಹಿಂದಿನಂತೆಯೇ ಸುಖವಾಗಿದ್ದುಕೊ. ಹಾಗಿಲ್ಲದೆ ಇಷ್ಟರ ಮೇಲೂ ನೀನೇನಾದರೂ ನನ್ನನ್ನು ಹೆದರಿಸುವಂಥ ಮಾತನಾಡಿದರೆ ಈಗಲೇ ಇಲ್ಲಿಯೇ ನಿನ್ನನ್ನು ಕತ್ತಿಯಿಂದ ಕತ್ತರಿಸಿಬಿಡುವೆನು. ಇದರಲ್ಲಿ ಸಂಶಯವಿಲ್ಲ''- ಎಂದನು.

**ಮಾರೀಚಸ್ತದ್ವಚಃ ಶ್ರುತ್ವಾ ಸ್ವಾತ್ಮನ್ಯೇವಾನ್ವಚಿಂತಯತ್ ।**
**ಯದಿ ಮಾಂ ರಾಘವೋ ಹನ್ಯಾತ್ ತದಾ ಮುಕ್ತೋ ಭವಾರ್ಣವಾತ್ ॥ ೩೩ ॥**
**ಮಾ ಹನ್ಯಾದ್ಯದಿ ಚೇದ್ದುಷ್ಟಃ ತದಾ ಮೇ ನಿರಯೋ ಧ್ರುವಮ್ ।**
**ಇತಿ ನಿಶ್ಚಿತ್ಯ ಮರಣಂ ರಾಮಾದುತ್ಥಾಯ ವೇಗತಃ ॥ ೩೪ ॥**
**ಅಬ್ರವೀದ್ ರಾವಣಂ ರಾಜನ್ ಕರೋಮ್ಯಾಜ್ಞಾಂ ತವ ಪ್ರಭೋ ।**
**ಇತ್ಯುಕ್ತ್ವಾ ರಥಮಾಸ್ಥಾಯ ಗತೋ ರಾಮಾಶ್ರಮಂ ಪ್ರತಿ ॥ ೩೫ ॥**

೩೩-೩೫. ಆ ಮಾತನ್ನು ಕೇಳಿ ಮಾರೀಚನು ತನ್ನಲ್ಲಿಯೇ ಹೀಗೆಂದಾಲೋಚಿಸಿಕೊಂಡನು. ''ಒಂದುವೇಳೆ ರಾಮನು ನನ್ನನ್ನು ಕೊಂದದ್ದೇ ಆದರೆ ಆಗ ಸಂಸಾರದಿಂದ ಬಿಡುಗಡೆಯನ್ನು ಹೊಂದುವೆನು. ಆದರೆ ಈ ದುಷ್ಟನೇನಾದರೂ ಕೊಂದರೆ ನನಗೆ ನರಕವು ಖಂಡಿತ. ಆದ್ದರಿಂದ ರಾಮನಿಂದಲೇ ಮರಣವು ಸರಿ'' - ಎಂದುಕೊಂಡು ಬೇಗನೆ ಎದ್ದು ರಾವಣನನ್ನು ಕುರಿತು ''ಎಲೈ ರಾಜನೆ, ಪ್ರಭುವೆ, ನಿನ್ನ ಅಪ್ಪಣೆಯನ್ನು ಅವಶ್ಯವಾಗಿ ಪಾಲಿಸುವೆನು.'' ಎಂದು ಹೇಳಿ ರಥವನ್ನೇರಿ ರಾಮನ ಆಶ್ರಮವನ್ನು ಕುರಿತು ಹೊರಟನು.

**ಶುದ್ಧಜಾಂಬೂನದಪ್ರಖ್ಯೋ ಮೃಗೋಽಭೂದ್ರೌಪ್ಯಬಿಂದುಕಃ ।**
**ರತ್ನಶೃಂಗೋ ಮಣಿಖುರೋ ನೀಲರತ್ನವಿಲೋಚನಃ ॥ ೩೬ ॥**
**ವಿದ್ಯುತ್ಪ್ರಭೋ ವಿಮುಗ್ಧಾಸ್ಯೋ ವಿಚಚಾರ ವನಾಂತರೇ ।**
**ರಾಮಾಶ್ರಮಪದಸ್ಯಾಂತೇ ಸೀತಾದೃಷ್ಟಿಪಥೇ ಚರನ್ ॥ ೩೭ ॥**
**ಕ್ಷಣಂ ಚ ಧಾವತ್ಯವತಿಷ್ಠತೇ ಕ್ಷಣಂ**

**ಸಮೀಪಮಾಗತ್ಯ ಪುನರ್ಭಯಾವೃತಃ ।**
**ಏವಂ ಸ ಮಾಯಾಮೃಗವೇಷರೂಪಧೃಕ್**
**ಚಚಾರ ಸೀತಾಂ ಪರಿಮೋಹಯನ್ ಖಲಃ ॥ ೩೮ ॥**

೩೬-೩೮. ಪುಟವಿಟ್ಟ ಚಿನ್ನದಂತೆ ಹೊಳೆಯುತ್ತ ಬೆಳ್ಳಿಯ ಮಚ್ಚೆಗಳುಳ್ಳ, ರತ್ನದ ಕೋಡುಗಳು, ವಜ್ರದ ಗೊರಸುಗಳು, ನೀಲಮಣಿಯಂತಿರುವ ಕಣ್ಣುಗಳು, ಮಿಂಚಿನ ಕಾಂತಿ, ಮುದ್ದಾದ ಮುಖ - ಇವುಗಳಿಂದ ಕೂಡಿದ ಜಿಂಕೆಯಾಗಿ ರಾಮನ ಆಶ್ರಮದ ಸಮೀಪದಲ್ಲಿಯೇ ಸೀತೆಯ ಕಣ್ಣುಗಳಿಗೆ ಗೋಚರಿಸುವವನಾಗಿ ಉಪವನದಲ್ಲಿ ಸಂಚರಿಸುತ್ತಿದ್ದನು. ಒಂದು ಕ್ಷಣಕಾಲ ಓಡುವದು ಮತ್ತೆ ನಿಲ್ಲುವದು, ಹತ್ತಿರಕ್ಕೆ ಬರುವದು, ಭಯದಿಂದ ಮತ್ತೆ ಓಡುವದು - ಹೀಗೆ ಮಾಯಾಮೃಗವೇಷಧಾರಿಯಾದ ಆ ದುಷ್ಟನು ಸೀತೆಯನ್ನು ವಂಚಿಸುತ್ತಾ ತಿರುಗುತ್ತಿದ್ದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ಷಷ್ಠಃ ಸರ್ಗಃ**

ঃঃঃঃঃঃঃঃঃ

## ಏಳನೆಯ ಸರ್ಗ

### ಶ್ರೀ ಮಹಾದೇವ ಉವಾಚ-

**ಅಥ ರಾಮೋಽಪಿ ತತ್ಸರ್ವಂ ಜ್ಞಾತ್ವಾ ರಾವಣಚೇಷ್ಟಿತಮ್ ।**
**ಉವಾಚ ಸೀತಾಮೇಕಾಂತೇ ಶೃಣು ಜಾನಕಿ ಮೇ ವಚಃ ॥ ೧ ॥**
**ರಾವಣೋ ಭಿಕ್ಷುರೂಪೇಣ ಆಗಮಿಷ್ಯತಿ ತೇಽನ್ತಿಕಮ್ ।**
**ತ್ವಂ ತು ಛಾಯಾಂ ತ್ವದಾಕಾರಾಂ ಸ್ಥಾಪಯಿತ್ವೋಟಜೇ ವಿಶ ॥ ೨ ॥**
**ಅಗ್ನಾವದೃಶ್ಯರೂಪೇಣ ವರ್ಷಂ ತಿಷ್ಠ ಮಮಾಜ್ಞಯಾ ।**
**ರಾವಣಸ್ಯ ವಧಾಂತೇ ಮಾಂ ಪೂರ್ವವತ್ ಪ್ರಾಪ್ಸ್ಯಸೇ ಶುಭೇ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಅನಂತರ ರಾಮನೂ ರಾವಣನ ಎಲ್ಲ ಕಾರ್ಯವಿಶೇಷಗಳನ್ನೂ ಬಲ್ಲವನಾಗಿ ರಹಸ್ಯದಲ್ಲಿ ಸೀತೆಯನ್ನು ಕಂಡು ಹೀಗೆಂದನು : ''ಎಲೆ ಜಾನಕಿ, ನನ್ನ ಮಾತನ್ನು ಕೇಳು. ರಾವಣನು ಇಷ್ಟರಲ್ಲೇ ಸಂನ್ಯಾಸಿಯ ವೇಷದಿಂದ

ನಿನ್ನ ಬಳಿಗೆ ಬರಲಿದ್ದಾನೆ. ನೀನಾದರೂ, ನಿನ್ನಂತೆಯೇ ಇರುವ ನೆರಳಿನ ರೂಪಳಾದ (ಛಾಯಾ) ಸೀತೆಯನ್ನು ಇಲ್ಲಿ ಬಿಟ್ಟು ನೀನು ಕುಟೀರದೊಳಗೇ ಇರು. ಹಾಗೂ ಅಗ್ನಿದೇವನಲ್ಲಿ ಅದೃಶ್ಯರೂಪದಿಂದ ಒಂದು ವರ್ಷಕಾಲ ನನ್ನ ಅಪ್ಪಣೆಯಂತೆ ಅಡಗಿಕೊಂಡಿರು. ರಾವಣನ ವಧೆಯಾದ ಮೇಲೆ ಹಿಂದಿನಂತೆಯೇ ಮತ್ತೆ ನನ್ನನ್ನು ಎಲ್ಲೆ ಶುಭಾಂಗಿಯೆ, ನೀನು ಪಡೆದುಕೊಳ್ಳುವೆಯಂತೆ.''

**ಶ್ರುತ್ವಾ ರಾಮೋದಿತಂ ವಾಕ್ಯಂ ಸಾಪಿ ತತ್ರ ತಥಾऽಕರೋತ್ ।**
**ಮಾಯಾಸೀತಾಂ ಬಹಿಃ ಸ್ಥಾಪ್ಯ ಸ್ವಯಮಂತರ್ದಧೇಽನಲೇ ॥ ೪ ॥**

೪. ರಾಮನು ಹೇಳಿದ ಮಾತನ್ನು ಕೇಳಿ ಆಕೆಯೂ ಹಾಗೆಯೇ ಮಾಡಿದಳು. ಎಂದರೆ ಮಾಯಾಸೀತೆಯನ್ನು ಹೊರಗೆ ಇಟ್ಟು ತಾನು ಅಗ್ನಿಯಲ್ಲಿ ಅವಿತುಕೊಂಡಳು.

**ಮಾಯಾಸೀತಾ ತದಾऽಪಶ್ಯತ್ ಮೃಗಂ ಮಾಯಾವಿನಿರ್ಮಿತಮ್ ।**
**ಹಸಂತೀ ರಾಮಮಭ್ಯೇತ್ಯ ಪ್ರೋವಾಚ ವಿನಯಾನ್ವಿತಾ ॥ ೫ ॥**
**ಪಶ್ಯ ರಾಮ ಮೃಗಂ ಚಿತ್ರಂ ಕಾನಕಂ ರತ್ನಭೂಷಿತಮ್ ।**
**ವಿಚಿತ್ರಬಿಂದುಭಿರ್ಯುಕ್ತಂ ಚರಂತಮಕುತೋಭಯಮ್ ॥ ೬ ॥**
**ಬದ್ಧ್ವಾ ದೇಹಿ ಮಮ ಕ್ರೀಡಾಮೃಗೋ ಭವತು ಸುಂದರಃ ।**

೫-೬. ಆಗ ಮಾಯಾಸೀತೆಯು ಮಾಯೆಯಿಂದ ನಿರ್ಮಿತವಾದ ಮೃಗವನ್ನು ನೋಡಿದಳು. ನಗುತ್ತಾ ರಾಮನ ಬಳಿಗೆ ಬಂದು ವಿನಯದಿಂದ ಕೂಡಿದಳಾಗಿ ''ಎಲ್ಲೆ ರಾಮನೆ, ಚಿತ್ರವಾದ ಈ ಸುವರ್ಣಮಯವಾದ, ರತ್ನಾಲಂಕಾರಗಳಿಂದ ಕೂಡಿದ ಈ ಜಿಂಕೆಯನ್ನು ನೋಡು. ಇದು ವಿಚಿತ್ರವಾದ ಮಚ್ಚೆಗಳಿಂದ ಕೂಡಿದ್ದಾಗಿ ನಿರ್ಭಯವಾಗಿ ಓಡುತ್ತಿದೆ. ನೀನು ಇದನ್ನು ನನಗೆ ಹಿಡಿದುಕೊಡು. ಸುಂದರವಾದ ಇದನ್ನು ಆಟದ ಜಿಂಕೆಯಾಗಿ ನಾನು ಉಪಯೋಗಿಸಿಕೊಳ್ಳುವೆನು.''

**ತಥೇತಿ ಧನುರಾದಾಯ ಗಚ್ಛನ್ ಲಕ್ಷ್ಮಣಮಬ್ರವೀತ್ ।**
**ರಕ್ಷ ತ್ವಮತಿಯತ್ನೇನ ಸೀತಾಂ ಮತ್ಪ್ರಾಣವಲ್ಲಭಾಮ್ ॥ ೭ ॥**
**ಮಾಯಿನಃ ಸಂತಿ ವಿಪಿನೇ ರಾಕ್ಷಸಾಃ ಘೋರದರ್ಶನಾಃ ।**
**ಅತೋಽತ್ರಾವಹಿತಃ ಸಾಧ್ವೀಂ ರಕ್ಷ ಸೀತಾಮನಿಂದಿತಾಮ್ ॥ ೮ ॥**
**ಲಕ್ಷ್ಮಣೋ ರಾಮಮಾಹೇದಂ ದೇವಾಯಂ ಮೃಗರೂಪಧೃಕ್ ।**
**ಮಾರೀಚೋಽತ್ರ, ನ ಸಂದೇಹ ಏವಂಭೂತೋ ಮೃಗಃ ಕುತಃ ॥ ೯ ॥**

೭-೯. ಹಾಗೇ ಆಗಲಿ - ಎಂದು ಬಿಲ್ಲನ್ನು ಹಿಡಿದು ಹೊರಟ (ರಾಮನು)

ಲಕ್ಷ್ಮಣನನ್ನು ಕುರಿತು ಹೀಗೆಂದನು : ''ನೀನು ಬಹಳ ಎಚ್ಚರಿಕೆಯಿಂದ ನನ್ನ ಪ್ರಾಣ ಪ್ರಿಯಳಾದ ಈ ಸೀತೆಯನ್ನು ಕಾಪಾಡಿಕೊಂಡಿರು. ಈ ಕಾಡಿನಲ್ಲಿ ಭಯಂಕರರೂಪವುಳ್ಳ ಮಾಯಾನಿಪುಣರಾದ ರಾಕ್ಷಸರಿದ್ದಾರೆ. ಆದ್ದರಿಂದ ನೀನು ಬಹಳ ನಿಗವಿಟ್ಟವನಾಗಿ ಪವಿತ್ರಳಾದ ಈ ಪತಿವ್ರತೆಯನ್ನು ಕಾಪಾಡು.'' ಆಗ ಲಕ್ಷ್ಮಣನು ರಾಮನನ್ನು ಕುರಿತು ಹೀಗೆಂದನು. : ''ಸ್ವಾಮಿ, ಇವನು ಜಿಂಕೆಯ ವೇಷಧಾರಿಯಾದ ಮಾರೀಚನು. ಇಂಥ ಮೃಗವಾದರೂ ಇರುವದು ಹೇಗೆ ಸಾಧ್ಯ ? ಈ ವಿಷಯದಲ್ಲಿ ಸಂಶಯವಿಲ್ಲ.''

**ಶ್ರೀರಾಮ ಉವಾಚ-**

**ಯದಿ ಮಾರೀಚ ಏವಾಯಂ ತದಾ ಹನ್ಮಿ ನ ಸಂಶಯಃ ।**
**ಮೃಗಶ್ಚೇದಾನಯಿಷ್ಯಾಮಿ ಸೀತಾವಿಶ್ರಾಮಹೇತವೇ ॥ ೧೦ ॥**
**ಗಮಿಷ್ಯಾಮಿ ಮೃಗಂ ಬದ್ಧ್ವಾ ಹ್ಯಾನಯಿಷ್ಯಾಮಿ ಸತ್ವರಃ ।**
**ತ್ವಂ ಪ್ರಯತ್ನೇನ ಸಂತಿಷ್ಠ ಸೀತಾಸಂರಕ್ಷಣೋದ್ಯತಃ ॥ ೧೧ ॥**
**ಇತ್ಯುಕ್ತ್ವಾ ಪ್ರಯಯೌ ರಾಮೋ ಮಾಯಾಮೃಗಮನುದ್ರುತಃ ।**

೧೦-೧೧. ಶ್ರೀರಾಮನಿಂತೆಂದನು : 'ಒಂದು ವೇಳೆ ಇವನು ಮಾರೀಚನೇ ಆಗಿದ್ದರೆ ಆಗ ಕೊಲ್ಲುವೆನು. ಮೃಗವಾಗಿದ್ದಲ್ಲಿ ಸೀತೆಯ ಮನಃಪ್ರೀತಿಗಾಗಿ ತರುತ್ತೇನೆ. ಸಂಶಯವಿಲ್ಲ. ಈಗ ನಾನು ಈ ಮೃಗವನ್ನು ಕಟ್ಟಿ ತರಲು ಬೇಗನೆ ಹೊರಡಲಿದ್ದೇನೆ. ನೀನು ಸೀತೆಯನ್ನು ಕಾಪಾಡಿಕೊಳ್ಳುವದರಲ್ಲಿ ತೊಡಗಿದವನಾಗಿ ಇದ್ದುಕೊಂಡಿರು.'' ಹೀಗೆಂದು ಹೇಳಿ ರಾಮನು ಮಾಯಾಮೃಗವನ್ನು ಓಡಿಸಿಕೊಂಡು ಹಿಂಬಾಲಿಸಿದನು.

**ಮಾಯಾ ಯದಾಶ್ರಯಾ ಲೋಕಮೋಹಿನೀ ಜಗದಾಕೃತಿಃ ।**
**ನಿರ್ವಿಕಾರಶ್ಚಿದಾತ್ಮಾಽಪಿ ಪೂರ್ಣೋಽಪಿ ಮೃಗಮನ್ವಗಾತ್ ॥ ೧೨ ॥**
**ಭಕ್ತಾನುಕಂಪೀ ಭಗವಾನ್ ಇತಿ ಸತ್ಯಂ ವಚೋ ಹರಿಃ ।**
**ಕರ್ತುಂ ಸೀತಾಪ್ರಿಯಾರ್ಥಾಯ ಜಾನನ್ನಪಿ ಮೃಗಂ ಯಯೌ ॥ ೧೩॥**
**ಅನ್ಯಥಾ ಪೂರ್ಣಕಾಮಸ್ಯ ರಾಮಸ್ಯ ವಿದಿತಾತ್ಮನಃ ।**
**ಮೃಗೇಣ ವಾ ಸ್ತ್ರಿಯಾ ವಾಪಿ ಕಿಂ ಕಾರ್ಯಂ ಪರಮಾತ್ಮನಃ ॥ ೧೪ ॥**

೧೨-೧೪. ಲೋಕವನ್ನೇ ಮೋಹನಗೊಳಿಸುವ ಮಾಯೆಯು ಜಗತ್ತಿನ ರೂಪದಿಂದ ಕಂಡುಬರುತ್ತಿದೆಯಲ್ಲವೆ ? ಅದು ಯಾವನಿಗೆ ಅಧೀನವಾಗಿದೆಯೋ ಅಂಥ ಚಿದಾತ್ಮನೂ ನಿರ್ವಿಕಾರನೂ ಪೂರ್ಣನೂ ಆಗಿದ್ದರೂ (ರಾಮನು) 'ಭಗವಂತನು ಭಕ್ತರಲ್ಲಿ ಕರುಣೆಯುಳ್ಳವನು' ಎಂಬ ಮಾತನ್ನು ನಿಜಗೊಳಿಸುವದಕ್ಕಾಗಿ, ಸೀತೆಗೆ

ಸಂತೋಷವನ್ನುಂಟುಮಾಡಲು ಮೃಗವು (ರಾಕ್ಷಸನೇ) ಎಂದು ಬಲ್ಲವನಾಗಿದ್ದರೂ ಅದನ್ನು ಅನುಸರಿಸಿಹೋದನು. ಹಾಗಿಲ್ಲವಾದರೆ ಪೂರ್ಣಕಾಮನೂ ಆತ್ಮಜ್ಞನೂ ಆದ ರಾಮನಿಗೆ ಹೆಂಡತಿಯಿಂದಾಗಲಿ, ಜಿಂಕೆಯಿಂದಾಗಲಿ ಆಗಬೇಕಾದದ್ದೇನಿದ್ದೀತು ?

**ಕದಾಚಿತ್ ದೃಶ್ಯತೇಽಭ್ಯಾಶೇ ಕ್ಷಣಂ ಧಾವತಿ ಲೀಯತೇ ।**
**ದೃಶ್ಯತೇ ಚ ತತೋ ದೂರಾತ್ ಏವಂ ರಾಮಮಪಾಹರತ್ ॥ ೧೫ ॥**
**ತತೋ ರಾಮೋಽಪಿ ವಿಜ್ಞಾಯ ರಾಕ್ಷಸೋಽಯಮಿತಿ ಸ್ಫುಟಮ್ ।**
**ವಿವ್ಯಾಧ ಶರಮಾದಾಯ ರಾಕ್ಷಸಂ ಮೃಗರೂಪಿಣಮ್ ॥ ೧೬ ॥**
**ಪಪಾತ ರುಧಿರಾಕ್ತಾಸ್ಯೋ ಮಾರೀಚಃ ಪೂರ್ವರೂಪಧೃಕ್ ।**
**ಹಾ ಹತೋಽಸ್ಮಿ ಮಹಾಬಾಹೋ ತ್ರಾಹಿ ಮಾಂ ಲಕ್ಷ್ಮಣ ದ್ರುತಮ್ ।**
**ಇತ್ಯುಕ್ತ್ವಾ ರಾಮವದ್ ವಾಚಾ ಪಪಾತ ರುಧಿರಾಶನಃ ॥ ೧೭ ॥**

೧೫-೧೭. ಕೆಲವು ಸಲ ಹತ್ತಿರದಲ್ಲಿಯೇ ತೋರಿಕೊಳ್ಳುವನು ; ಕ್ಷಣಕಾಲ ಓಡುವನು ! ಅಡಗಿಕೊಳ್ಳುವನು. ದೂರದಲ್ಲಿ ಮತ್ತೆ ಕಾಣಿಸಿಕೊಳ್ಳುವನು. ಹೀಗೆ ರಾಮನನ್ನು ಸೆಳೆದೊಯ್ದನು. ಅನಂತರ ರಾಮನೂ ಕೂಡ 'ಇವನು ರಾಕ್ಷಸನೇ' ಎಂದು ಚೆನ್ನಾಗಿ ನಿಶ್ಚಯಿಸಿದವನಾಗಿ ಬಾಣವನ್ನೆಳೆದು ಮೃಗರೂಪನಾಗಿದ್ದ ರಾಕ್ಷಸನನ್ನು ಹೊಡೆದನು. ಮಾರೀಚನು ಕೂಡಲೇ ತನ್ನ ನಿಜರೂಪವನ್ನು ಹೊಂದಿ ರಕ್ತದಿಂದಕೂಡಿದ ಬಾಯುಳ್ಳವನಾಗಿ 'ಅಯ್ಯೊ, ಮಹಾಬಾಹುವಾದ ಲಕ್ಷ್ಮಣನೆ, ನಾನು ಸತ್ತೆನು ; ಬೇಗ ಕಾಪಾಡು'' ಎಂದು ರಾಮನಂತೆಯೇ ಕೂಗಿಕೊಂಡು ( ಆ ರಾಕ್ಷಸನು ನೆಲಕ್ಕೆ) ಬಿದ್ದನು.

**ಯನ್ನಾಮಾಜ್ಞೋಽಪಿ ಮರಣೇ ಸ್ಮೃತ್ವಾ ತತ್ಸಾಮ್ಯಮಾಪ್ನುಯಾತ್ ।**
**ಕಿಮುತಾಗ್ರೇ ಹರಿಂ ಪಶ್ಯನ್ ತೇನೈವ ನಿಹತೋಽಸುರಃ ॥ ೧೮ ॥**
**ತದ್ದೇಹಾದುತ್ಥಿತಂ ತೇಜಃ ಸರ್ವಲೋಕಸ್ಯ ಪಶ್ಯತಃ ।**
**ರಾಮಮೇವಾವಿಶದ್ ದೇವಾ ವಿಸ್ಮಯಂ ಪರಮಂ ಯಯುಃ ॥ ೧೯ ॥**

೧೮-೧೯. ಯಾವ ಭಗವಂತನ ನಾಮವನ್ನು ಅಜ್ಞಾನಿಯೂ ಅರಿಯದೆ ನೆನೆಸಿಕೊಂಡರೂ ಆ ರಾಮನ ಸಾಮ್ಯವನ್ನು ಹೊಂದಲಿರುವನೋ ಅಂಥ ಶ್ರೀಹರಿಯನ್ನು ಎದುರಿಗೇ ನೋಡುತ್ತಾ ರಾಕ್ಷಸನು ಅವನಿಂದಲೇ ಕೊಲ್ಲಲ್ಪಡುವಾಗ ಹೇಳತಕ್ಕದ್ದೇನಿದೆ ? ಅವನ ಶರೀರದಿಂದ ಮೇಲಕ್ಕೆದ್ದುಬಂದ ಬೆಳಕೊಂದು ಎಲ್ಲರೂ ನೋಡುತ್ತಿರುವಂತೆಯೇ ರಾಮನನ್ನೇ ಸೇರಿ ಲೀನವಾಯಿತು. ಇದನ್ನು ಕಂಡ ದೇವತೆಗಳು ಬಹಳವಾಗಿ ಆಶ್ಚರ್ಯವನ್ನು ಹೊಂದಿದರು.

**ಕಿಂ ಕರ್ಮ ಕೃತ್ವಾ ಕಿಂ ಪ್ರಾಪ್ತಃ ಪಾತಕೀ ಮುನಿಹಿಂಸಕಃ ।**
**ಅಥವಾ ರಾಘವಸ್ಯಾಯಂ ಮಹಿಮಾ ನಾತ್ರ ಸಂಶಯಃ ॥ ೨೦ ॥**
**ರಾಮಬಾಣೇನ ಸಂವಿದ್ಧಃ ಪೂರ್ವಂ ರಾಮಮನುಸ್ಮರನ್ ।**
**ಭಯಾತ್ ಸರ್ವಂ ಪರಿತ್ಯಜ್ಯ ಗೃಹವಿತ್ತಾದಿಕಂ ಚ ಯತ್ ॥ ೨೧ ॥**
**ಹೃದಿ ರಾಮಂ ಸದಾ ಧ್ಯಾತ್ವಾ ನಿರ್ಧೂತಾಶೇಷಕಲ್ಮಷಃ ।**
**ಅಂತೇ ರಾಮೇಣ ನಿಹತಃ ಪಶ್ಯನ್ ರಾಮಮವಾಪ ಸಃ ॥ ೨೨ ॥**
**ದ್ವಿಜೋ ವಾ ರಾಕ್ಷಸೋ ವಾಪಿ ಪಾಪೀ ವಾ ಧಾರ್ಮಿಕೋಽಪಿ ವಾ ।**
**ತ್ಯಜನ್ ಕಲೇವರಂ ರಾಮಂ ಸ್ಮೃತ್ವಾ ಯಾತಿ ಪರಂ ಪದಮ್ ॥ ೨೩ ॥**
**ಇತಿ ತೇಽನ್ಯೋನ್ಯಮಾಭಾಷ್ಯ ತತೋ ದೇವಾ ದಿವಂ ಯಯುಃ ॥**

೨೦-೨೩. ಪಾಪಿಯೂ ಋಷಿಗಳಿಗೆ ಪೀಡಾಕರನೂ ಆಗಿದ್ದ ಈ (ರಾಕ್ಷಸನು) ಎಂಥ (ಕೆಟ್ಟ)ಕೆಲಸವನ್ನು ಮಾಡಿ ಎಂಥ (ಒಳ್ಳೆಯ) ಗತಿಯನ್ನು ಹೊಂದಿದ ನಲ್ಲವೆ ? ಹಾಗಿರಲಾರದು. ಇದು ಶ್ರೀರಾಮನ ಮಹಿಮೆಯೇ ಸರಿ. ಈ ಬಗ್ಗೆ ಸಂಶಯ ವಿಲ್ಲ. ಹಿಂದೆ ಇವನು ರಾಮಬಾಣದಿಂದ ಹೊಡೆಯಲ್ಪಟ್ಟಾಗಲೇ ರಾಮನನ್ನು ನೆನೆಯುತ್ತಾ ಹೆದರಿಕೆಯಿಂದ (ಹೆಂಡತಿ), ಮನೆ- ಐಶ್ವರ್ಯಗಳನ್ನೆಲ್ಲ ತ್ಯಾಗಮಾಡಿ, ಯಾವಾಗಲೂ ಹೃದಯದಲ್ಲಿ ರಾಮನನ್ನೇ ಚಿಂತಿಸುತ್ತಾ ಸಮಸ್ತಪಾಪಗಳನ್ನೂ ಪರಿಹರಿಸಿ ಕೊಂಡವನಾಗಿ ಕಡೆಗೆ ರಾಮನಿಂದಲೇ ಕೊಲ್ಲಲ್ಪಟ್ಟು ರಾಮನನ್ನೇ ನೋಡುತ್ತಾ (ದೇಹತ್ಯಾಗವನ್ನೂ ಮಾಡಿ) ರಾಮನನ್ನೇ ಹೊಂದಿದನು. ದ್ವಿಜನಾಗಿರಲಿ, ರಾಕ್ಷಸನಾಗಿ ರಲಿ, ಪಾಪಿಷ್ಠನಾಗಿರಲಿ, ಪುಣ್ಯವಂತನಾಗಿರಲಿ, ರಾಮನನ್ನು ನೆನೆಯುತ್ತಾ ಶರೀರವನ್ನು ಬಿಡುತ್ತಾನಾದರೆ ಪರಮಪದವಿಯನ್ನೇ ಹೊಂದುವನು. ಹೀಗೆಂದು ದೇವತೆಗಳು ಒಬ್ಬರೊಡನೊಬ್ಬರು ಮಾತನಾಡಿಕೊಂಡು ಸ್ವರ್ಗವನ್ನು ಕುರಿತು ತೆರಳಿದರು.

**ರಾಮಸ್ತಚ್ಚಿಂತಯಾಮಾಸ ಮ್ರಿಯಮಾಣೋಽಸುರಾಧಮಃ ।**
**ಹಾ ಲಕ್ಷ್ಮಣೇತಿ ಮದ್ವಾಕ್ಯಮನುಕುರ್ವನ್ ಮಮಾರ ಕಿಮ್ ॥ ೨೪ ॥**
**ಶ್ರುತ್ವಾ ಮದ್ವಾಕ್ಯಸದೃಶಂ ವಾಕ್ಯಂ ಸೀತಾಪಿ ಕಿಂ ಭವೇತ್ ।**
**ಇತಿ ಚಿಂತಾಪರೀತಾತ್ಮಾ ರಾಮೋ ದೂರಾನ್ನ್ಯವರ್ತತ ॥ ೨೫ ॥**

೨೪-೨೫. ರಾಮನಾದರೊ, ''ಎಲಾ, ಈ ರಾಕ್ಷಸಾಧಮನು ಸಾಯುವಾಗ 'ಹಾ ಲಕ್ಷ್ಮಣ' - ಎಂದು ತನ್ನ ಧ್ವನಿಯನ್ನೇ ಅನುಕರಿಸಿ ಕೂಗುತ್ತಾ ಏಕೆ ಪ್ರಾಣತ್ಯಾಗ ಮಾಡಿದನು ? ನನ್ನ ಮಾತಿನಂತೆಯೇ ಇರುವ ಮಾತನ್ನು ಕೇಳಿ ಸೀತೆಯಾದರೂ ಏನಾಗುವಳೊ'' ? ಹೀಗೆಂದು ಯೋಚಿಸುತ್ತಾ ರಾಮನು ದೂರದ (ಕಾಡಿನಿಂದ) ಹಿಂದಿರುಗಿದನು.

**ಸೀತಾ ತದ್ಭಾಷಿತಂ ಶ್ರುತ್ವಾ ಮಾರೀಚಸ್ಯ ದುರಾತ್ಮನಃ ।**
**ಭೀತಾತಿದುಃಖಸಂವಿಗ್ನಾ ಲಕ್ಷ್ಮಣಂ ತ್ವಿದಮಬ್ರವೀತ್ ॥ ೨೬ ॥**
**ಗಚ್ಛ ಲಕ್ಷ್ಮಣ ವೇಗೇನ ಭ್ರಾತಾ ತೇಽಸುರಪೀಡಿತಃ ।**
**ಹಾ ಲಕ್ಷ್ಮಣೇತಿ ವಚನಂ ಭ್ರಾತುಸ್ತೇ ನ ಶೃಣೋಷಿ ಕಿಮ್ ॥ ೨೭ ॥**
**ತಾಮಾಹ ಲಕ್ಷ್ಮಣೋ ದೇವಿ ರಾಮವಾಕ್ಯಂ ನ ತದ್ಭವೇತ್ ।**
**ಯಃ ಕಶ್ಚಿದ್ ರಾಕ್ಷಸೋ ದೇವಿ ಮ್ರಿಯಮಾಣೋಽಬ್ರವೀದ್ವಚಃ ॥ ೨೮ ॥**
**ರಾಮಸ್ತ್ರೈಲೋಕ್ಯಮಪಿ ಯಃ ಕ್ರುದ್ಧೋ ನಾಶಯತಿ ಕ್ಷಣಾತ್ ।**
**ಸ ಕಥಂ ದೀನವಚನಂ ಭಾಷತೇಽಮರಪೂಜಿತಃ ॥ ೨೯ ॥**

೨೬-೨೯. ದುರಾತ್ಮನಾದ ಆ ಮಾರೀಚ (ರಾಕ್ಷಸನ) ಮಾತನ್ನು ಸೀತೆಯು ಕೇಳಿ ಹೆದರಿದವಳಾಗಿ ಹಾಗೂ ದುಃಖದಿಂದ ಕೂಡಿದವಳಾಗಿ ಲಕ್ಷ್ಮಣನನ್ನು ಕುರಿತು ಇಂತೆಂದಳು : ''ಎಲೈ ಲಕ್ಷ್ಮಣ, ನಿನ್ನ ಅಣ್ಣನು ರಾಕ್ಷಸನಿಂದ ಹಿಂಸೆಗೊಳಗಾಗಿರುವಂತಿದೆ. ಬೇಗನೆ ಹೋಗು ; ಅಯ್ಯೊ, ಲಕ್ಷ್ಮಣ' ಎಂಬ ನಿಮ್ಮಣ್ಣನ ಮಾತು ಕೇಳಿಸಲಿಲ್ಲವೆ ?'' ಆಗ ಲಕ್ಷ್ಮಣನು '' ದೇವಿ ಅದು ರಾಮನ ಮಾತಲ್ಲ. ಯಾವನೋ ಕ್ಷುದ್ರರಾಕ್ಷಸನು ಸಾಯುವಾಗ ಹೇಳಿರುವ ಮಾತು ಅದು. ರಾಮನು ಕುಪಿತನಾದರೆ ಮೂರುಲೋಕಗಳನ್ನೂ ಕ್ಷಣಮಾತ್ರದಲ್ಲಿ ನಾಶಮಾಡಬಲ್ಲನು. ದೇವತೆಗಳಿಂದಲೂ ಪೂಜಿಸಲ್ಪಟ್ಟ ಅಂಥವನು ಹೇಗೆ ತಾನೆ ದೈನ್ಯದ ಮಾತನ್ನು ನುಡಿದಾನು ?

**ಕ್ರುದ್ಧಾ ಲಕ್ಷ್ಮಣಮಾಲೋಕ್ಯ ಸೀತಾ ಬಾಷ್ಪವಿಲೋಚನಾ ।**
**ಪ್ರಾಹ ಲಕ್ಷ್ಮಣ ದುರ್ಬುದ್ಧೇ ಭ್ರಾತುರ್ವ್ಯಸನಮಿಚ್ಛಸಿ ॥ ೩೦ ॥**
**ಪ್ರೇಷಿತೋ ಭರತೇನೈವ ರಾಮನಾಶಾಭಿಕಾಂಕ್ಷಿಣಾ ।**
**ಮಾಂ ನೇತುಮಾಗತೋಽಸಿ ತ್ವಂ ರಾಮನಾಶ ಉಪಸ್ಥಿತೇ ॥ ೩೧ ॥**
**ನ ಪ್ರಾಪ್ಸ್ಯಸೇ ತ್ವಂ ಮಾಮದ್ಯ ಪಶ್ಯ ಪ್ರಾಣಾಂಸ್ತ್ಯಜಾಮ್ಯಹಮ್**
**ನ ಜಾನಾತೀದೃಶಂ ರಾಮಸ್ತ್ವಾಂ ಭಾರ್ಯಾಹರಣೋದ್ಯತಮ್ ॥ ೩೨ ॥**
**ರಾಮಾದನ್ಯಂ ನ ಸ್ಪೃಶಾಮಿ ತ್ವಾಂ ವಾ ಭರತಮೇವ ವಾ ।**
**ಇತ್ಯುಕ್ತ್ವಾ ವಧ್ಯಮಾನಾ ಸಾ ಸ್ವಬಾಹುಭ್ಯಾಂ ರುರೋದ ಹ ॥ ೩೩ ॥**

೩೦-೩೩. ಕಣ್ಣೀರು ಸುರಿಸುತ್ತಾ ಕುಪಿತಳಾದ ಸೀತೆಯು ಲಕ್ಷ್ಮಣನನ್ನು ಕಂಡು ಹೀಗೆಂದಳು : ''ಲಕ್ಷ್ಮಣ, ನೀನು ದುರ್ಬುದ್ಧಿಯವನು. ಅಣ್ಣನ ದುಃಖವನ್ನು ಬಯಸಿರುವೆ. ರಾಮನನ್ನು ನಾಶಗೊಳಿಸುವದಕ್ಕಾಗಿಯೇ ಭರತನು ನಿನ್ನನ್ನು ಕಳುಹಿಸಿದಂತಿದೆ. ರಾಮನು ವಿನಾಶಹೊಂದಲಾಗಿ ನನ್ನನ್ನು ಕರೆದೊಯ್ಯುವದಕ್ಕಾಗಿ ನೀನು ಬಂದಿ

ರುವೆ. ಆದರೆ ಈಗ ನೀನು ನನ್ನನ್ನು ಪಡೆಯಲಾರೆ. ನೋಡುತ್ತಿರು. ನಿನ್ನೆದುರಿಗೇ ಪ್ರಾಣವನ್ನು ಕಳೆದುಕೊಳ್ಳುವೆನು. ಹೆಂಡತಿಯನ್ನು ಅಪಹರಿಸುವಂಥ ವಂಚಕನು ನೀನೆಂದು ರಾಮನು ತಿಳಿದಿರಲಾರನು. ನಾನಾದರೊ, ರಾಮನ ಹೊರತು ಭರತನ ನ್ನಾಗಲಿ ನಿನ್ನನ್ನಾಗಲಿ ಕೈಯಲ್ಲಿಯೂ ಮುಟ್ಟುವದಿಲ್ಲ. ಹೀಗೆಂದು ಹೇಳುತ್ತಾ ಆಕೆಯು ತನ್ನ ತೋಳುಗಳಿಂದ ಎದೆಯನ್ನು ಬಡಿದುಕೊಳ್ಳುತ್ತಾ ಅಳಲಾರಂಭಿ ಸಿದಳು.

**ತಚ್ಛ್ರುತ್ವಾ ಲಕ್ಷ್ಮಣಃ ಕರ್ಣೌ ಪಿಧಾಯಾತೀವ ದುಃಖಿತಃ ।**
**ಮಾಮೇವಂ ಭಾಷಸೇ ಚಂಡಿ ಧಿಕ್ ತ್ವಂ ನಾಶಮುಪೈಷ್ಯಸಿ ॥ ೩೪ ॥**
**ಇತ್ಯುಕ್ತ್ವಾ ವನದೇವೀಭ್ಯಃ ಸಮರ್ಪ್ಯ ಜನಕಾತ್ಮಜಾಮ್ ।**
**ಯಯೌ ದುಃಖಾತಿಸಂವಿಗ್ನೋ ರಾಮಮೇವ ಶನೈಃ ಶನೈಃ ॥ ೩೫ ॥**

೩೪-೩೫. ಅದನ್ನು ಕೇಳಿ ಲಕ್ಷ್ಮಣನು ಕಿವಿಗಳನ್ನು ಮುಚ್ಚಿಕೊಂಡು ಬಹಳ ದುಃಖದಿಂದ ''ಎಲೌ ಹಟಮಾರಿಯೆ, ನನ್ನನ್ನು ಕುರಿತು ಹೀಗೆಲ್ಲ ಬಯ್ಯುತ್ತಿರುವೆ ; ನೀನು ಹಾಳಾಗುವೆ ! ನಿನಗೆ ಧಿಕ್ಕಾರವಿರಲಿ'' ಎಂದು ಹೇಳಿ ವನದೇವಿಯರಿಗೆ ಸೀತೆ ಯನ್ನು (ಕಾಪಾಡುವಂತೆ ಪ್ರಾರ್ಥಿಸಿ) ಸಮರ್ಪಿಸಿ ರಾಮನನ್ನೇ ಹುಡುಕಿಕೊಂಡು ಬಹಳ ಬೇಜಾರಿನಿಂದ ವ್ಯಥೆಗೊಂಡವನಾಗಿ ಮೆಲ್ಲಮೆಲ್ಲನೆ ಹೊರಟನು.

**ತತೋಽನ್ತರಂ ಸಮಾಲೋಕ್ಯ ರಾವಣೋ ಭಿಕ್ಷುವೇಷಧೃಕ್ ।**
**ಸೀತಾಸಮೀಪಮಗಮತ್ ಸ್ಫುರದ್ದಂಡಕಮಂಡಲುಃ ॥ ೩೬ ॥**
**ಸೀತಾ ತಮವಲೋಕ್ಯಾಶು ನತ್ವಾ ಸಂಪೂಜ್ಯ ಭಕ್ತಿತಃ ।**
**ಕಂದಮೂಲಫಲಾದೀನಿ ದತ್ವಾ ಸ್ವಾಗತಮಬ್ರವೀತ್ ॥ ೨೭ ॥**
**ಮುನೇ ಭುಂಕ್ಷ್ವ ಫಲಾದೀನಿ ವಿಶ್ರಮಸ್ವ ಯಥಾಸುಖಮ್ ।**
**ಇದಾನೀಮೇವ ಭರ್ತಾ ಮೇ ಹ್ಯಾಗಮಿಷ್ಯತಿ ತೇ ಪ್ರಿಯಮ್ ॥ ೩೮ ॥**
**ಕರಿಷ್ಯತಿ ವಿಶೇಷೇಣ ತಿಷ್ಠ ತ್ವಂ ಯದಿ ರೋಚತೇ ।**

೩೬-೩೮. ಅನಂತರ ಸಮಯವನ್ನು ಸಾಧಿಸಿ ರಾವಣನು ಸಂನ್ಯಾಸಿಯ ವೇಷವನ್ನು ಧರಿಸಿ ದಂಡಕಮಂಡಲುಗಳಿಂದ ಅಲಂಕೃತನಾಗಿ ಸೀತೆಯ ಹತ್ತಿರಕ್ಕೆ ಬಂದನು. ಸೀತೆಯು ಅವನನ್ನು ಕಂಡು ಕೂಡಲೆ ನಮಸ್ಕರಿಸಿ ಭಕ್ತಿಯಿಂದ ಪೂಜಿಸಿ ಕಂದಮೂಲಫಲಗಳನ್ನು ಸಮರ್ಪಿಸಿ ಸ್ವಾಗತವನ್ನು ಬಯಸಿದಳು. ಮತ್ತು ''ಮುನಿಯೆ, ಈ ಹಣ್ಣುಗಳನ್ನು ತಿನ್ನುವವನಾಗು ; ವಿಶ್ರಾಂತಿಯನ್ನು ತೆಗೆದುಕೊ ;ಇಷ್ಟರಲ್ಲೇ ನನ್ನ ಗಂಡನು ಬರಲಿದ್ದಾನೆ. ನಿನಗೆ ಇಷ್ಟವಾದ ಉಪಚಾರಗಳನ್ನು ವಿಶೇಷವಾಗಿ ಮಾಡಲಿದ್ದಾನೆ. ನಿನಗೆ ಇಷ್ಟವಾದರೆ ಇಲ್ಲಿ ಉಳಿಯುವವನಾಗು'' ಎಂದಳು.

ಭಿಕ್ಷುರುವಾಚ-

**ಕಾ ತ್ವಂ ಕಮಲಪತ್ರಾಕ್ಷಿ ಕೋ ವಾ ಭರ್ತಾ ತವಾನಘೇ ।**
**ಕಿಮರ್ಥಮತ್ರ ತೇ ವಾಸೋ ವನೇ ರಾಕ್ಷಸಸೇವಿತೇ ॥ ೩೯ ॥**
**ಬ್ರೂಹಿ ಭದ್ರೇ ತತಃ ಸರ್ವಂ ಸ್ವವೃತ್ತಾಂತಂ ನಿವೇದಯೇ।**

೩೯. ಭಿಕ್ಷುವಿಂತೆಂದನು : 'ಎಲೈ ಕಮಲನೇತ್ರಳೆ, ನೀನು ಯಾರು ? ಪಾಪರಹಿತಳೆ, ನಿನ್ನ ಗಂಡನಾರು ? ರಾಕ್ಷಸರಿಂದ ಆಕ್ರಮಿಸಲ್ಪಟ್ಟ ಈ ಕಾಡಿನಲ್ಲಿ ನೀನು ಏತಕ್ಕಾಗಿ ವಾಸಮಾಡುತ್ತಿದ್ದೀಯೆ ? ಮಂಗಳೆಯೆ, ಎಲ್ಲವನ್ನೂ ತಿಳಿಸುವಳಾಗು. ಅನಂತರ ನನ್ನ ಸುದ್ಧಿಯನ್ನು ಹೇಳುವೆನು.''

ಸೀತೋವಾಚ-

**ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥೋ ಮಹಾನ್ ।**
**ತಸ್ಯ ಜ್ಯೇಷ್ಠಃ ಸುತೋ ರಾಮಃ ಸರ್ವಲಕ್ಷಣಲಕ್ಷಿತಃ ॥ ೪೦ ॥**
**ತಸ್ಯಾಹಂ ಧರ್ಮತಃ ಪತ್ನೀ ಸೀತಾ ಜನಕನಂದಿನೀ ।**
**ತಸ್ಯ ಭ್ರಾತಾ ಕನೀಯಾಂಶ್ಚ ಲಕ್ಷ್ಮಣೋ ಭ್ರಾತೃವತ್ಸಲಃ ॥ ೪೧ ॥**
**ಪಿತುರಾಜ್ಞಾಂ ಪುರಸ್ಕೃತ್ಯ ದಂಡಕೇ ವಸ್ತುಮಾಗತಃ ।**
**ಚತುರ್ದಶ ಸಮಾಸ್ತ್ವಾಂ ತು ಜ್ಞಾತುಮಿಚ್ಛಾಮಿ ಮೇ ವದ ॥ ೪೨ ॥**

೪೦-೪೨. ಸೀತೆಯಿಂತೆಂದಳು : ''ಅಯೋಧ್ಯೆಗೆ ಒಡೆಯನಾದ ಶ್ರೀಮಂತನಾದ ಮಹಾತ್ಮನಾದ ದಶರಥನೆಂಬ ರಾಜನಿದ್ದನು. ಅವನ ಹಿರಿಯ ಮಗನಾದ ಸರ್ವ ಲಕ್ಷಣಗಳಿಂದಲೂ ಕೂಡಿರುವ ರಾಮನೆಂಬವನಿರುವನು. ನಾನು ಜನಕರಾಜನ ಮಗಳಾದ ಸೀತೆಯೆಂಬ ಹೆಸರಿನವಳಾದ ಆತನ ಧರ್ಮಪತ್ನಿಯು. ಆ (ರಾಮನ) ಕಿರಿಯ ತಮ್ಮನಾದ ಹಾಗೂ ಅಣ್ಣನಲ್ಲಿ ವಿಶ್ವಾಸವುಳ್ಳ ಲಕ್ಷ್ಮಣನೆಂಬವನಿದ್ದಾನೆ. (ರಾಮನು) ತಂದೆಯ ಅಪ್ಪಣೆಯನ್ನು ಗೌರವಿಸಿ ಹದಿನಾಲ್ಕುವರ್ಷಗಳ ಕಾಲ ದಂಡಕಾರಣ್ಯದಲ್ಲಿ ವಾಸಮಾಡಲು ಬಂದಿರುತ್ತಾನೆ. ನಿನ್ನನ್ನು ಯಾರೆಂದು ತಿಳಿಯಲಿಚ್ಛಿಸುವೆನು. ನನಗೆ ಹೇಳು.''

ಭಿಕ್ಷುರುವಾಚ-

**ಪೌಲಸ್ತ್ಯತನಯೋಽಹಂ ತು ರಾವಣೋ ರಾಕ್ಷಸಾಧಿಪಃ ।**
**ತ್ವತ್ಕಾಮಪರಿತಪ್ತೋಽಹಂ ತ್ವಾಂ ನೇತುಂ ಪುರಮಾಗತಃ ॥ ೪೩ ॥**
**ಮುನಿವೇಷೇಣ ರಾಮೇಣ ಕಿಂ ಕರಿಷ್ಯಸಿ ಮಾಂ ಭಜ ।**
**ಭುಂಕ್ಷ್ವ ಭೋಗಾನ್ ಮಯಾ ಸಾರ್ಧಂ ತ್ಯಜ ದುಃಖಂ ವನೋದ್ಭವಮ್ ॥ ೪೪ ॥**

೪೩-೪೪. ಭಿಕ್ಷುವಿಂತೆಂದನು : ''ನಾನು ಪೌಲಸ್ತ್ಯನ ಮಗನಾದ ರಾಕ್ಷಸಾಧಿಪತಿಯಾದ ರಾವಣನೆಂಬುವನು. ನಿನ್ನ ವ್ಯಾಮೋಹದಿಂದ ಬಳಲಿದವನಾಗಿ ಪಟ್ಟಣಕ್ಕೆ ನಿನ್ನನ್ನು ಕರೆದೊಯ್ಯಲು ಬಂದಿರುವೆನು. ಮುನಿವೇಷಧಾರಿಯಾದ ರಾಮನೊಡನೆ ನೀನೇನು ಮಾಡುವೆ? ನನ್ನನ್ನು ವರಿಸುವಳಾಗು. ನನ್ನೊಡಗೂಡಿ ಭೋಗಗಳನ್ನು ಅನುಭವಿಸುವಳಾಗು. ಕಾಡಿನ ವಾಸದಿಂದಾಗಿರುವ ಕಷ್ಟವನ್ನು ಕಳೆದುಕೊ.''

**ಶ್ರುತ್ವಾ ತದ್ವಚನಂ ಸೀತಾ ಭೀತಾ ಕಿಂಚಿದುವಾಚ ತಮ್ ।**
**ಯದ್ಯೇವಂ ಭಾಷಸೇ ಮಾಂ ತ್ವಂ ನಾಶಮೇಷ್ಯಸಿ ರಾಘವಾತ್ ॥ ೪೫ ॥**
**ಆಗಮಿಷ್ಯತಿ ರಾಮೋಽಪಿ ಕ್ಷಣಂ ತಿಷ್ಠ ಸಹಾನುಜಃ ।**
**ಮಾಂ ಕೋ ಧರ್ಷಯಿತುಂ ಶಕ್ತೋ ಹರೇರ್ಭಾರ್ಯಾಂ ಶಶೋ ಯಥಾ**
**ರಾಮಬಾಣೈರ್ವಿಭಿನ್ನಸ್ತ್ವಂ ಪತಿಷ್ಯಸಿ ಮಹೀತಲೇ ॥ ೪೬ ॥**

೪೫-೪೬. ಸೀತೆಯು ಆ ಮಾತನ್ನು ಕೇಳಿ ಹೆದರಿದವಳಾಗಿ ಸ್ವಲ್ಪವೇ ಹೀಗೆಂದು ಮಾತನಾಡಿದಳು. 'ನೀನು ಹೀಗೆಲ್ಲ ಹರಟುವದಾದರೆ ರಾಮನಿಂದ ನಾಶವನ್ನು ಹೊಂದುವೆ. ಕ್ಷಣಕಾಲ ನಿಲ್ಲು. ತಮ್ಮನೊಡನೆ ರಾಮನು ಬರಲಿದ್ದಾನೆ. ಸಿಂಹದ ಜೊತೆಗಾತಿಯನ್ನು ಹೇಗೆ ಮೊಲವು ಅಪಹರಿಸಲಾರದೋ ಹಾಗೆ ನನ್ನನ್ನು ಯಾವನು ತಾನೆ ಬಲಾತ್ಕಾರಮಾಡಿಯಾನು ? ನೀನು ರಾಮಬಾಣಗಳಿಂದ ತುಂಡುಮಾಡಲ್ಪಟ್ಟು ಭೂಮಿಯಲ್ಲಿ ಬೀಳುವೆ .''

**ಇತಿ ಸೀತಾವಚಃ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ ।**
**ಸ್ವರೂಪಂ ದರ್ಶಯಾಮಾಸ ಮಹಾಪರ್ವತಸನ್ನಿಭಮ್ ॥ ೪೭ ॥**
**ದಶಾಸ್ಯಂ ವಿಂಶತಿಭುಜಂ ಕಾಲಮೇಘಸಮದ್ಯುತಿಮ್ ।**
**ತದ್ ದೃಷ್ಟ್ವಾ ವನದೇವ್ಯಶ್ಚ ಭೂತಾನಿ ಚ ವಿತತ್ರಸುಃ ॥ ೪೮ ॥**
**ತತೋ ವಿದಾರ್ಯ ಧರಣೀಂ ನಖೈರುದ್ಧೃತ್ಯ ಬಾಹುಭಿಃ ।**
**ತೋಲಯಿತ್ವಾ ರಥೇ ಕ್ಷಿಪ್ತ್ವಾ ಯಯೌ ಕ್ಷಿಪ್ರಂ ವಿಹಾಯಸಾ ॥ ೪೯ ॥**

೪೭-೪೯. ಹೀಗೆಂಬ ಸೀತೆಯ ಮಾತನ್ನು ಕೇಳಿ ರಾವಣನು ಕೋಪದಿಂದ ಕೆರಳಿದವನಾಗಿ ಮಹಾಪರ್ವತದಂತಿರುವ ತನ್ನ ನಿಜರೂಪವನ್ನು ಪ್ರಕಟಿಸಿದನು. ಹತ್ತು ಮುಖಗಳೂ ಇಪ್ಪತ್ತು ತೋಳುಗಳೂ, ಪ್ರಲಯಕಾಲದ ಮೇಘದಂಥ ಕಾಂತಿಯೂ ಉಳ್ಳ ಅವನ ರೂಪವನ್ನು ನೋಡಿ ವನದೇವಿಯರೂ ಎಲ್ಲಾ ಪ್ರಾಣಿಗಳೂ ಭಯ ಗೊಂಡವು. ಅನಂತರ ಭೂಮಿಯನ್ನು ಉಗುರುಗಳಿಂದ ಸೀಳಿಕೊಂಡು ತೋಳುಗಳಿಂದ (ಸೀತೆಯಿದ್ದ) ಆ ಭಾಗವನ್ನು ಮೇಲೆತ್ತಿ ಅಳ್ಳಾಡಿಸಿ ರಥದಲ್ಲಿರಿಸಿಕೊಂಡು ವೇಗವಾಗಿ ಆಕಾಶಮಾರ್ಗದಿಂದ ಹಾರಿಬಿಟ್ಟನು.

**ಹಾ ರಾಮ ಹಾ ಲಕ್ಷ್ಮಣೇತಿ ರುದತೀ ಜನಕಾತ್ಮಜಾ ।**
**ಭಯೋದ್ವಿಗ್ನಮನಾ ದೀನಾ ಪಶ್ಯಂತೀ ಭುವಮೇವ ಸಾ ॥ ೫೦ ॥**
**ಶ್ರುತ್ವಾ ತತ್ಕ್ರಂದಿತಂ ದೀನಂ ಸೀತಾಯಾಃ ಪಕ್ಷಿಸತ್ತಮಃ ।**
**ಜಟಾಯುರುತ್ಥಿತಃ ಶೀಘ್ರಂ ನಗಾಗ್ರಾತ್ತೀಕ್ಷ್ಣತುಂಡಕಃ ॥ ೫೧ ॥**
**ತಿಷ್ಠ ತಿಷ್ಠೇತಿ ತಂ ಪ್ರಾಹ ಕೋ ಗಚ್ಛತಿ ಮಮಾಗ್ರತಃ ।**
**ಮುಷಿತ್ವಾ ಲೋಕನಾಥಸ್ಯ ಭಾರ್ಯಾಂ ಶೂನ್ಯಾದ್ವನಾಲಯಾತ್ ॥ ೫೨ ॥**
**ಶುನಕೋ ಮಂತ್ರಪೂತಂ ತ್ವಂ ಪುರೋಡಾಶಮಿವಾಧ್ವರೇ ॥**

೫೦-೫೨. ''ಅಯ್ಯೋ, ರಾಮ, ಲಕ್ಷ್ಮಣ'' ಎಂದು ಜನಕನ ಮಗಳಾದ ಸೀತೆಯು ಅಳುತ್ತಾ ಹೆದರಿದ ಮನಸ್ಸುಳ್ಳವಳಾಗಿ ದೀನಳಾಗಿ ನೆಲವನ್ನೇ ನೋಡುತ್ತಾ ಇದ್ದಳು.ಆ ಸೀತಾದೇವಿಯ ದೈನ್ಯದ ಕಿರುಚಾಟವನ್ನು ಕೇಳಿ ಪಕ್ಷಿಶ್ರೇಷ್ಠನಾದ ಹಾಗೂ ತೀಕ್ಷ್ಣವಾದ ಕೊಕ್ಕುಳ್ಳ ಜಟಾಯುವು ಕೂಡಲೆ ಬೆಟ್ಟದ ತುದಿಯಲ್ಲಿದ್ದವನು ಮೇಲೆದ್ದನು. ''ಎಲೈ, ನೀನು ನಿಲ್ಲು, ನಿಲ್ಲು'' ಎಂದು ಹೇಳುತ್ತಾ ''ಲೋಕಕ್ಕೆಲ್ಲ ಒಡೆಯನಾದ (ರಾಮನ) ಹೆಂಡತಿಯನ್ನು ಶೂನ್ಯವಾದ ಕಾಡಿನಿಂದ- ಮಂತ್ರದಿಂದ ಪರಿಶುದ್ಧವಾದ ಪುರೋಡಾಶವೆಂಬ ಹವಿಸ್ಸನ್ನು ಯಜ್ಞದಲ್ಲಿ ನಾಯಿಯು ಅಪಹರಿಸಿದಂತೆ - ನನ್ನೆದುರಿಗೆ ಒಯ್ಯುತ್ತಿರುವವನು ಯಾವನವನು? ಎಂದನು.

**ಇತ್ಯುಕ್ತ್ವಾ ತೀಕ್ಷ್ಣತುಂಡೇನ ಚೂರ್ಣಯಾಮಾಸ ತದ್ರಥಮ್ ।**
**ವಾಹಾನ್ ಬಿಭೇದ ಪಾದಾಭ್ಯಾಂ ಚೂರ್ಣಯಾಮಾಸ ತದ್ಧನುಃ ॥ ೫೩ ॥**
**ತತಃ ಸೀತಾಂ ಪರಿತ್ಯಜ್ಯ ರಾವಣಃ ಖಡ್ಗಮಾದದೇ ।**
**ಚಿಚ್ಛೇದ ಪಕ್ಷೌ ಸಾಮರ್ಷಃ ಪಕ್ಷಿರಾಜಸ್ಯ ಧೀಮತಃ ॥ ೫೪ ॥**
**ಪಪಾತ ಕಿಂಚಿತ್ ಶೇಷೇಣ ಪ್ರಾಣೇನ ಭುವಿ ಪಕ್ಷಿರಾಟ್ ।**
**ಪುನರನ್ಯರಥೇನಾಶು ಸೀತಾಮಾದಾಯ ರಾವಣಃ ॥ ೫೫ ॥**

೫೩-೫೫. ಹೀಗೆಂದು ಹೇಳುತ್ತಾ (ಜಟಾಯುವು) ತನ್ನ ಹರಿತವಾದ ಕೊಕ್ಕಿನಿಂದ ಆ (ರಾವಣನ) ರಥವನ್ನು ಪುಡಿಮಾಡಿಬಿಟ್ಟನು. ಕುದುರೆಗಳನ್ನು ಸೀಳಿದನು. ಎರಡೂ ಕಾಲುಗಳಿಂದ ಅವನ ಬಿಲ್ಲನ್ನು ಮುರಿದನು. ಅನಂತರ ರಾವಣನು ಸೀತೆಯನ್ನು ಕೈಬಿಟ್ಟು ಕತ್ತಿಯನ್ನು ತೆಗೆದುಕೊಂಡನು. ಬುದ್ಧಿವಂತನಾದ ಆ ಪಕ್ಷಿಶ್ರೇಷ್ಠನ ಎರಡೂ ರೆಕ್ಕೆಗಳನ್ನು ಕೋಪದಿಂದ ಕತ್ತರಿಸಿದನು. ಅಲ್ಪಸ್ವಲ್ಪ ಉಳಿದ ಪ್ರಾಣದಿಂದ ಆ ಪಕ್ಷಿರಾಜನು ನೆಲದಮೇಲೆ ಬಿದ್ದನು. ರಾವಣನು ಬೇರೊಂದು ರಥವನ್ನು ತೆಗೆದುಕೊಂಡು ಸೀತೆಯನ್ನು ಒಯ್ದನು.

**ಕ್ರೋಶಂತೀ ರಾಮರಾಮೇತಿ ತ್ರಾತಾರಂ ನಾಧಿಗಚ್ಛತೀ ।**
**ಹಾ ರಾಮ ಹಾ ಜಗನ್ನಾಥ ಮಾಂ ನ ಪಶ್ಯಸಿ ದುಃಖಿತಾಮ್ ॥ ೫೬ ॥**
**ರಕ್ಷಸಾ ನೀಯಮಾನಾಂ ಸ್ವಾಂ ಭಾರ್ಯಾಂ ಮೋಚಯ ರಾಘವ ।**
**ಹಾ ಲಕ್ಷ್ಮಣ ಮಹಾಭಾಗ ತ್ರಾಹಿ ಮಾಮಪರಾಧಿನೀಮ್ ॥ ೫೭ ॥**
**ವಾಕ್ ಶರೇಣ ಹತಸ್ತ್ವಂ ಮೇ ಕ್ಷಂತುಮರ್ಹಸಿ ದೇವರ ।**
**ಇತ್ಯೇವಂ ಕ್ರೋಶಮಾನಾಂ ತಾಂ ರಾಮಾಗಮನಶಂಕಯಾ ॥ ೫೮ ॥**
**ಜಗಾಮ ವಾಯುವೇಗೇನ ಸೀತಾಮಾದಾಯ ಸತ್ವರಃ ॥**

೫೬-೫೮. (ಆಕೆಯಾದರೊ,) ರಾಮ, ರಾಮ- ಎಂದು ಕಿರಿಚಿಕೊಳ್ಳುತ್ತಾ ಕಾಪಾಡುವವರನ್ನು ಕಾಣದೆ ''ಎಲೈ ಜಗದೊಡೆಯನೆ, ರಾಘವನೆ, ದುಃಖಿತಳಾದ ನನ್ನನ್ನು ಕಾಣೆಯ? ನಿನ್ನ ಹೆಂಡತಿಯೇ ಆಗಿರುವ, ಹಾಗೂ ರಾಕ್ಷಸನಿಂದ ಎಳೆದೊಯ್ಯಲ್ಪಡುತ್ತಿರುವವಳನ್ನು ಬಿಡಿಸುವವನಾಗು. ಮಹಾಭಾಗನಾದ ಲಕ್ಷ್ಮಣನೆ, ಅಪರಾಧಮಾಡಿರುವ ನನ್ನನ್ನು ಕಾಪಾಡು. ಎಲೈ ಮೈದುನನೆ, ನೀನು ನನ್ನ ವಾಗ್ಬಾಣಗಳಿಂದ ಚುಚ್ಚಲ್ಪಟ್ಟಿದ್ದೀಯೆ. ಅದನ್ನು ಕ್ಷಮಿಸುವನಾಗು'' ಹೀಗೆಂದು ಕಿರಿಚಿಕೊಳ್ಳುತ್ತಾ ಇರುವ ಆಕೆಯನ್ನು- ರಾಮನು ಬಂದುಬಿಡಬಹುದೆಂಬ ಸಂಶಯದಿಂದ- ಗಾಳಿಯಂತೆ ವೇಗದಿಂದ ಜಾಗ್ರತೆಯಾಗಿ ರಾವಣನು ಕರೆದೊಯ್ದನು.

**ವಿಹಾಯಸಾ ನೀಯಮಾನಾ ಸೀತಾಽಪಶ್ಯದಧೋಮುಖೀ ।**
**ಪರ್ವತಾಗ್ರೇ ಸ್ಥಿತಾನ್ ಪಂಚ ವಾನರಾನ್ ವಾರಿಜಾನನಾ ॥ ೫೯ ॥**
**ಉತ್ತರೀಯಾರ್ಧಖಂಡೇನ ವಿಮುಚ್ಯಾಭರಣಾದಿಕಮ್ ।**
**ಬಧ್ವಾ ಚಿಕ್ಷೇಪ ರಾಮಾಯ ಕಥಯಂತ್ವಿತಿ ಪರ್ವತೇ ॥ ೬೦ ॥**

೫೯-೬೦. ಆಕಾಶಮಾರ್ಗದಿಂದ ಒಯ್ಯಲ್ಪಡುತ್ತಿರುವ ಸೀತೆಯು ಕೆಳಗಡೆಗೆ ಬಗ್ಗಿ ನೋಡಿದಳು. ಕಮಲಮುಖಿಯಾದ ಆಕೆಯು ಪರ್ವತದ ತುದಿಯಲ್ಲಿ ಕುಳಿತಿದ್ದ ಐದು ಮಂದಿ ಕಪಿಗಳನ್ನು (ಕಂಡಳು). ಕಳಚಿದ ಕೆಲವು ಒಡವೆಗಳನ್ನು ತನ್ನ ಸೆರಗಿನ ಅರ್ಧಭಾಗದ ಬಟ್ಟೆಯಿಂದ ಕಟ್ಟಿ 'ರಾಮನಿಗೆ ಹೇಳಲಿ' ಎಂಬ ಉದ್ದೇಶದಿಂದ ಪರ್ವತದಮೇಲೆ ಎಸೆದುಬಿಟ್ಟಳು.

**ತತಃ ಸಮುದ್ರಮುಲ್ಲಂಘ್ಯ ಲಂಕಾಂ ಗತ್ವಾ ಸ ರಾವಣಃ ।**
**ಸ್ವಾಂತಃಪುರೇ ರಹಸ್ಯೇ ತಾಮಶೋಕವಿಪಿನೇಽಕ್ಷಿಪತ್ ॥ ೬೧ ॥**
**ರಾಕ್ಷಸೀಭಿಃ ಪರಿವೃತಾಂ ಮಾತೃಬುದ್ಧ್ಯಾಽನ್ವಪಾಲಯತ್ ।**
**ಕೃಶಾತಿದೀನಾ ಪರಿಕರ್ಮವರ್ಜಿತಾ**
**ದುಃಖೇನ ಶುಷ್ಯದ್ವದನಾತಿವಿಹ್ವಲಾ ।**

**ಹಾ ರಾಮ ರಾಮೇತಿ ವಿಲಪ್ಯಮಾನಾ**
**ಸೀತಾ ಸ್ಥಿತಾ ರಾಕ್ಷಸವೃಂದಮಧ್ಯೇ** ॥ ೬೨ ॥

೬೧-೬೨. ಅನಂತರ ರಾವಣನು ಸಮುದ್ರವನ್ನು ದಾಟಿ ಲಂಕೆಯನ್ನು ತಲುಪಿ ಅಲ್ಲಿ ತನ್ನ ಸ್ವಂತವಾದ ಒಳಗಿನ ಆವರಣದ ರಹಸ್ಯವಾದ ಅಶೋಕವನದಲ್ಲಿ (ಸೀತೆ)ಯನ್ನು ಇಟ್ಟು ರಾಕ್ಷಸಿಯರ ಕಾವಲಿನೊಡನೆ ತನ್ನ ತಾಯಿಯೆಂಬ ಭಾವನೆಯಿಂದ ಕಾಪಾಡುತ್ತಿದ್ದನು. ಸೀತೆಯಾದರೊ, ಬಹಳ ಬಡಕಲಾಗಿ ಹೆಚ್ಚಿನ ದುಃಖದಿಂದ ಕೂಡಿದವಳಾಗಿ ಅಲಂಕಾರಗಳನ್ನೂ ಮಾಡಿಕೊಳ್ಳದೆ ಸಂಕಟದಿಂದ ಒಣಗಿದ ಮುಖವುಳ್ಳವಳಾಗಿ ಬಹಳ ಭಯಗೊಂಡು 'ಅಯ್ಯೋ, ರಾಮ, ರಾಮ' ಎಂದು ಕೂಗುತ್ತಾ ರಾಕ್ಷಸರ ಗುಂಪಿನಲ್ಲಿ ಇದ್ದುಕೊಂಡಿದ್ದಳು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಆರಣ್ಯಕಾಂಡೇ ಸಪ್ತಮಃ ಸರ್ಗಃ**

ಃಃಃಃಃಃಃಃಃಃ

## ಎಂಟನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ರಾಮೋ ಮಾಯಾವಿನಂ ಹತ್ವಾ ರಾಕ್ಷಸಂ ಕಾಮರೂಪಿಣಮ್ ।**
**ಪ್ರತಸ್ಥೇ ಸ್ವಾಶ್ರಮಂ ಗಂತುಂ ತತೋ ದೂರಾದ್ದದರ್ಶ ತಮ್** ॥ ೧ ॥
**ಆಯಾಂತಂ ಲಕ್ಷ್ಮಣಂ ದೀನಂ ಮುಖೇನ ಪರಿಶುಷ್ಯತಾ ।**
**ರಾಘವಶ್ಚಿಂತಯಾಮಾಸ ಸ್ವಾತ್ಮನ್ಯೇವ ಮಹಾಮತಿಃ** ॥ ೨ ॥

೧-೨. ಶ್ರೀಮಹಾದೇವನಿಂತೆಂದನು :- ರಾಮನು ಕಾಮರೂಪಿಯೂ ಮಾಯಾವಿಯೂ ಆದ ರಾಕ್ಷಸನನ್ನು ಕೊಂದು ತನ್ನ ಆಶ್ರಮಕ್ಕೆ ಹೋಗಲು ಹೊರಟನು. ಆಗ ದೂರದಲ್ಲಿ ಒಣಗಿದ ಮುಖದಿಂದಕೂಡಿ ದೀನನಾಗಿ ಬರುತ್ತಿದ್ದ ಲಕ್ಷ್ಮಣನನ್ನು ನೋಡಿದನು. ಮಹಾಬುದ್ಧಿಶಾಲಿಯಾದ ರಾಮನು ತನ್ನಲ್ಲಿಯೇ ಹೀಗೆಂದು ಯೋಚಿಸಿಕೊಂಡನು.

**ಲಕ್ಷ್ಮಣಸ್ತನ್ನ ಜಾನಾತಿ ಮಾಯಾಸೀತಾಂ ಮಯಾ ಕೃತಾಮ್ ।**
**ಜ್ಞಾತ್ವಾಪ್ಯೇನಂ ವಂಚಯಿತ್ವಾ ಶೋಚಾಮಿ ಪ್ರಾಕೃತೋ ಯಥಾ** ॥ ೩ ॥
**ಯದ್ಯಹಂ ವಿರತೋ ಭೂತ್ವಾ ತೂಷ್ಣೀಂ ಸ್ಥಾಸ್ಯಾಮಿ ಮಂದಿರೇ ।**
**ತದಾ ರಾಕ್ಷಸಕೋಟೀನಾಂ ವಧೋಪಾಯಃ ಕಥಂ ಭವೇತ್** ॥ ೪ ॥

**ಯದಿ ಶೋಚಾಮಿ ತಾಂ ದುಃಖಸಂತಪ್ತಃ ಕಾಮುಕೋ ಯಥಾ ।**
**ತದಾ ಕ್ರಮೇಣಾನುಚಿನ್ವನ್ ಸೀತಾಂ ಯಾಸ್ಯೇಽಸುರಾಲಯಮ್ ॥ ೫ ॥**
**ರಾವಣಂ ಸಕುಲಂ ಹತ್ವಾ ಸೀತಾಮಗ್ನೌ ಸ್ಥಿತಾಂ ಪುನಃ ।**
**ಮಯ್ಯೈವ ಸ್ಥಾಪಿತಾಂ ನೀತ್ವಾ ಯಾತಾಽಯೋಧ್ಯಾಮತಂದ್ರಿತಃ ॥ ೬ ॥**

೫-೬. ನಾನು ಮಾಡಿರುವ ಮಾಯಾಸೀತೆಯನ್ನು ಲಕ್ಷ್ಮಣನು ಅರಿಯನು. ಇದು ನನಗೆ ಗೊತ್ತಿದ್ದರೂ ಇವನನ್ನು ಮರುಳುಮಾಡಿ ಸಾಮಾನ್ಯಮನುಷ್ಯನಂತೆ ದುಃಖಪಡುವೆನು. ಹಾಗಿಲ್ಲದೆ ನಾನು ವಿರಕ್ತನಾಗಿ ಸುಮ್ಮನೆ ಕುಟೀರದಲ್ಲಿದ್ದು ಬಿಟ್ಟರೆ ಆಗ ಕೋಟಿಗಟ್ಟಲೆ ರಾಕ್ಷಸರ ಕೊಲೆಗೆ ಉಪಾಯವಾದರೂ ಹೇಗೆ ಒದಗೀತು ? ಆದ್ದರಿಂದ ನಾನು ಕಾಮುಕನಂತೆ ದುಃಖದಿಂದ ಪೀಡಿತನಾಗಿ ಅಳುವೆನಾದರೆ, ಆಗ ಸೀತೆಯನ್ನು ಹುಡುಕುತ್ತಾ ಕ್ರಮವಾಗಿ ರಾಕ್ಷಸನ ನಿವಾಸಕ್ಕೆ ಹೋಗಬಹುದಾಗಿದೆ. ಅಲ್ಲಿ ಪರಿವಾರ ಸಮೇತನಾದ ರಾವಣನನ್ನು ಕೊಂದು ಅಗ್ನಿಯಲ್ಲಿ ಅಡಗಿರುವ ಹಾಗೆಯೇ ನಾನೇ ಬಚ್ಚಿಟ್ಟಿರುವ ಸೀತೆಯನ್ನು ಮತ್ತೆ ಪಡೆದು ಬೇಸರವಿಲ್ಲದವನಾಗಿ ಅಯೋಧ್ಯೆಗೆ ಹೋಗಬಹುದಾಗಿದೆ.

**ಅಹಂ ಮನುಷ್ಯಭಾವೇನ ಜಾತೋಽಸ್ಮಿ ಬ್ರಹ್ಮಣಾರ್ಥಿತಃ ।**
**ಮನುಷ್ಯಭಾವಮಾಪನ್ನಃ ಕಿಂಚಿತ್ ಕಾಲಂ ವಸಾಮಿ ಕೌ ॥ ೭ ॥**
**ತತೋ ಮಾಯಾಮನುಷ್ಯಸ್ಯ ಚರಿತಂ ಮೇಽನುಶೃಣ್ವತಾಮ್ ।**
**ಮುಕ್ತಿಃ ಸ್ಯಾದಪ್ರಯಾಸೇನ ಭಕ್ತಿಮಾರ್ಗಾನುವರ್ತಿನಾಮ್ ॥ ೮ ॥**
**ನಿಶ್ಚಿತ್ಯೈವಂ ತದಾ ದೃಷ್ಟ್ವಾ ಲಕ್ಷ್ಮಣಂ ವಾಕ್ಯಮಬ್ರವೀತ್ ॥**

೭-೮. ನಾನು ಬ್ರಹ್ಮನಿಂದ ಪ್ರಾರ್ಥಿತನಾಗಿ ಮನುಷ್ಯಭಾವವನ್ನು ಹೊಂದಿ ಅವತರಿಸಿರುವೆನು. ಈ ಭೂಮಿಯಲ್ಲಿ ಕೆಲವು ಕಾಲ ಮನುಷ್ಯನಾಗಿಯೇ ವಾಸಮಾಡುವೆನು. ಹಾಗಾದರೆ ಮಾಯಾಮನುಷ್ಯನಾಗಿದ್ದ ನನ್ನ ಕಥೆಯನ್ನು ಕೇಳುವ, ಭಕ್ತಿಮಾರ್ಗದಲ್ಲಿ ನಡೆಯುವ (ಸಾಧಕರಿಗೆ)ಶ್ರಮವಿಲ್ಲದೆ ಮೋಕ್ಷವುಂಟಾಗುವದು. ಹೀಗೆಂದು ನಿರ್ಣಯಿಸಿ ಆಗ ಲಕ್ಷ್ಮಣನನ್ನು ಕಂಡು ಹೀಗೆಂದನು :

**ಕಿಮರ್ಥಮಾಗತೋಽಸಿ ತ್ವಂ ಸೀತಾಂ ತ್ಯಕ್ತ್ವಾ ಮಮ ಪ್ರಿಯಾಮ್ ।**
**ಸೀತಾ ವಾ ಭಕ್ಷಿತಾ ವಾಪಿ ರಾಕ್ಷಸೈರ್ಜನಕಾತ್ಮಜಾ ॥ ೯ ॥**
**ಲಕ್ಷ್ಮಣಃ ಪ್ರಾಂಜಲಿಃ ಪ್ರಾಹ ಸೀತಾಯಾ ದುರ್ವಚೋ ರುದನ್ ।**
**ಹಾ ಲಕ್ಷ್ಮಣೇತಿ ವಚನಂ ರಾಕ್ಷಸೋಕ್ತಂ ಶ್ರುತಂ ತಯಾ ॥ ೧೦ ॥**
**ತ್ವದ್ವಾಕ್ಯಸದೃಶಂ ಶ್ರುತ್ವಾ ಮಾಂ ಗಚ್ಛೇತಿ ತ್ವರಾಬ್ರವೀತ್ ।**

೯-೧೦. ''ನನಗೆ ಪ್ರಿಯಳಾದ ಸೀತೆಯನ್ನು ಬಿಟ್ಟು ನೀನೇಕೆ ಬಂದೆ ? ಜನಕನ ಮಗಳಾದ (ಆಕೆಯು ಈ ವೇಳೆಗೆ) ರಾಕ್ಷಸರಿಂದ ಅಪಹರಿಸಲ್ಪಟ್ಟಳೊ, ತಿನ್ನಲ್ಪಟ್ಟಳೊ, (ಕಾಣೆ).'' ಆಗ ಲಕ್ಷ್ಮಣನು ಕೈಮುಗಿದುಕೊಂಡುಹೀಗೆಂದನು ''ಸ್ವಾಮಿ, 'ಅಯ್ಯೊ, ಲಕ್ಷ್ಮಣಾ' - ಎಂದು ರಾಕ್ಷಸನು ಹೇಳಿದ ಮಾತು ಆಕೆಗೆ ಕೇಳಿಸಿತು. ನಿಮ್ಮ ಮಾತಿನಂತೆಯೇ ಇದ್ದ ಆ (ಮಾತನ್ನು)ಕೇಳಿ ಕೂಡಲೆ ನನ್ನನ್ನು ಹೋಗು - ಎಂದು ಹೇಳಿದಳು'' ಹೀಗೆಂದು ಅಳುತ್ತಾ ಸೀತೆಯ ಮಾತನ್ನು ತಿಳಿಸಿದನು.

**ರುದಂತೀ ಸಾ ಮಯಾ ಪ್ರೋಕ್ತಾ ದೇವಿ ರಾಕ್ಷಸಭಾಷಿತಮ್ ।**
**ನೇದಂ ರಾಮಸ್ಯ ವಚನಂ ಸ್ವಸ್ಥಾ ಭವ ಶುಚಿಸ್ಮಿತೇ ॥ ೧೧ ॥**
**ಇತ್ಯೇವಂ ಸಾಂತ್ವಿತಾ ಸಾಧ್ವೀ ಮಯಾ ಪ್ರೋವಾಚ ಮಾಂ ಪುನಃ ।**
**ಯದುಕ್ತಂ ದುರ್ವಚೋ ರಾಮ ನ ವಾಚ್ಯಂ ಪುರತಃ ತವ ॥ ೧೨ ॥**
**ಕರ್ಣೌ ಪಿಧಾಯ ನಿರ್ಗತ್ಯ ಯಾತೋಽಹಂ ತ್ವಾಂ ಸಮೀಕ್ಷಿತುಮ್ ॥**

೧-೧೨. ಅಳುತ್ತಿರುವ ಆಕೆಯನ್ನು ಕುರಿತು ನಾನು 'ತಾಯೆ, ಇದು ರಾಕ್ಷಸನ ಮಾತು ;ರಾಮನ ಮಾತಲ್ಲ. ಎಲೌ ಶುಭ್ರವಾದ ಮುಗುಳುನಗೆಯುಳ್ಳವಳೆ, ನೀನು ಸಮಾಧಾನಚಿತ್ತಳಾಗಿರು'- ಎಂದೆನು. ಹೀಗೆ ನನ್ನಿಂದ ಸಮಾಧಾನಗೊಳಿಸಲ್ಪಟ್ಟ ಆ ಪತಿವ್ರತೆಯು ಮತ್ತೆ ನನ್ನನ್ನು ಕುರಿತು ಏನು ಕೆಟ್ಟ ಮಾತನ್ನು ಹೇಳಿದಳೋ ಆ ಮಾತು ಎಲೈ ರಾಮನೆ, ನಿನ್ನೆದುರಿಗೆ ಹೇಳತಕ್ಕದ್ದಲ್ಲವು. ನಾನು ಎರಡು ಕಿವಿಗಳನ್ನೂ ಮುಚ್ಚಿಕೊಂಡು ನಿನ್ನನ್ನು ಕಾಣುವ ಸಲುವಾಗಿ ಹೊರಟುಬಂದೆನು.

**ರಾಮಸ್ತು ಲಕ್ಷ್ಮಣಂ ಪ್ರಾಹ ತಥಾಪ್ಯನುಚಿತಂ ಕೃತಮ್ ।**
**ತ್ವಯಾ ಸ್ತ್ರೀಭಾಷಿತಂ ಸತ್ಯಂ ಕೃತ್ವಾ ತ್ಯಕ್ತಾ ಶುಭಾನನಾ ॥ ೧೩ ॥**
**ಸೀತಾ ವಾ ಭಕ್ಷಿತಾ ವಾಪಿ ರಾಕ್ಷಸೈರ್ನಾತ್ರ ಸಂಶಯಃ ।**
**ಇತಿ ಚಿಂತಾಪರೋ ರಾಮಃ ಸ್ವಾಶ್ರಮಂ ತ್ವರಿತೋ ಯಯೌ ॥ ೧೪ ॥**

೧೩-೧೪. ರಾಮನಾದರೊ, ಲಕ್ಷ್ಮಣನನ್ನು ಕುರಿತು ಹೀಗೆಂದನು: 'ಹೇಗಾದರೂ ನೀನು ಮಾಡಿದ್ದು ತಪ್ಪೇ. ಶುಭಾನನೆಯಾದ ಆಕೆಯನ್ನು ಬಿಟ್ಟು ನೀನು ಹೆಂಗಸಿನ ಮಾತಿಗೆ ಬೆಲೆಕೊಟ್ಟು ಹೊರಟುಬಂದದ್ದು ಸರಿಯಲ್ಲ. ಆಕೆಯನ್ನು ರಾಕ್ಷಸರು ಒಯ್ದಿದ್ದಾರೊ, ತಿಂದುಹಾಕಿದ್ದಾರೊ, ಕಾಣೆ. ಈ ಘಟನೆಯು ನಡೆದಿರುವದರಲ್ಲಿ ಸಂಶಯವಿಲ್ಲ.' ಹೀಗೆ ಚಿಂತಿಸುತ್ತಾ ರಾಮನು ವೇಗವಾಗಿ ತನ್ನ ಆಶ್ರಮವನ್ನು ಕುರಿತು ಹೊರಟನು.

**ತತ್ರಾದೃಷ್ಟ್ವಾ ಜನಕಜಾಂ ವಿಲಲಾಪಾತಿದುಃಖಿತಃ ।**
**ಹಾ ಪ್ರಿಯೇ ಕ್ವ ಗತಾಸಿ ತ್ವಂ ನಾಸಿ ಪೂರ್ವವದಾಶ್ರಮೇ ॥ ೧೫ ॥**

**ಅಥವಾ ಮದ್ವಿಮೋಹಾರ್ಥಂ ಲೀಲಯಾ ಕ್ವ ವಿಲೀಯಸೇ ।**
**ಇತ್ಯಾಚಿನ್ವನ್ ವನಂ ಸರ್ವಂ ನಾಪಶ್ಯಜ್ಜಾನಕೀಂ ತದಾ ॥ ೧೬ ॥**

೧೫-೧೬. ಅಲ್ಲಿ ಜನಕಪುತ್ರಿಯನ್ನು ಕಾಣದೆ 'ಅಯ್ಯೋ, ಪ್ರಿಯಳೆ, ಎಲ್ಲಿಗೆ ಹೋಗಿರುವೆ ? ಹಿಂದಿನಂತೆ ನೀನು ಆಶ್ರಮದಲ್ಲಿ ಕಾಣುತ್ತಿಲ್ಲವಲ್ಲ ? ಅಥವಾ ನನ್ನನ್ನು ಮೋಸಗೊಳಿಸಲು ಆಟಕ್ಕಾಗಿ ಎಲ್ಲಿ ಅಡಗಿಕೊಂಡಿರುವೆ ?' ಹೀಗೆ ಎಲ್ಲಾ ಕಾಡನ್ನೂ ಹುಡುಕುತ್ತಾ ರಾಮನು ಆಗ ಎಲ್ಲಿಯೂ ಸೀತೆಯನ್ನು ಕಾಣದೆಹೋದನು.

**ವನದೇವ್ಯಃ ಕುತಃ ಸೀತಾ ಬ್ರುವಂತು ಮಮ ವಲ್ಲಭಾಮ್ ।**
**ಮೃಗಾಶ್ಚ ಪಕ್ಷಿಣೋ ವೃದ್ಧಾ ದರ್ಶಯಂತು ಮಮ ಪ್ರಿಯಾಮ್ ॥ ೧೭ ॥**
**ಇತ್ಯೇವಂ ವಿಲಪನ್ನೇವ ರಾಮಃ ಸೀತಾಂ ನ ಕುತ್ರಚಿತ್ ।**
**ಸರ್ವಜ್ಞಃ ಸರ್ವಥಾ ಕ್ವಾಪಿ ನಾಪಶ್ಯದ್ ರಘುನಂದನಃ ॥ ೧೮ ॥**

೧೭-೧೮. ''ಎಲೈ ವನದೇವಿಯರೆ, ಸೀತೆಯು ಎಲ್ಲಿ ? ನನ್ನ ಪ್ರಿಯಳಾದ ಆಕೆಯ ಬಗ್ಗೆ ಹೇಳಿರಿ ; ಮೃಗಗಳು, ವಯಸ್ಸಾದ ಹಕ್ಕಿಗಳು - ಯಾರಾದರೂ ಸರಿ, ನನ್ನ ಪ್ರಿಯಳನ್ನು ತೋರಿಸಿರಿ.'' ಹೀಗೆಂದು ಅಳುತ್ತಲೇ ರಾಮನು ಸೀತೆಯನ್ನು ಎಲ್ಲಿಯೂ ಕಾಣಲಿಲ್ಲ. ಸರ್ವಜ್ಞನಾದ ಆ ರಘುಕುಮಾರನು ಹೇಗೂ ಎಲ್ಲಿಯೂ (ಸೀತೆಯನ್ನು) ನೋಡದೆಹೋದನು.

**ಆನಂದೋಽಪ್ಯನ್ವಶೋಚತ್ತಾಂ ಅಚಲೋಽಪ್ಯನುಧಾವತಿ ।**
**ನಿರ್ಮಮೋ ನಿರಹಂಕಾರೋಽಪ್ಯಖಂಡಾನಂದರೂಪವಾನ್ ॥ ೧೯ ॥**
**ಮಮ ಜಾಯೇತಿ ಸೀತೇತಿ ವಿಲಲಾಪಾತಿದುಃಖಿತಃ ।**
**ಏವಂ ಮಾಯಾಮನುಚರನ್ನಸಕ್ತೋಽಪಿ ರಘೂತ್ತಮಃ ॥ ೨೦॥**
**ಆಸಕ್ತ ಇವ ಮೂಢಾನಾಂ ಭಾತಿ ತತ್ತ್ವವಿದಾಂ ನ ಹಿ ॥**

೧೯-೨೦. (ತಾನು) ಆನಂದಸ್ವರೂಪನಾಗಿದ್ದರೂ ಆಕೆಯನ್ನು ಕುರಿತು ಶೋಕಿಸಿದನು. ಹಾಗೆಯೇ ಚಲನವಿಲ್ಲದವನಾದರೂ ಹಿಂಬಾಲಿಸಿ ಹೋಗುತ್ತಿದ್ದನು. ನಾನುನನ್ನದೆಂಬುದಿಲ್ಲದ ಅಖಂಡವಾದ ಆನಂದಸ್ವರೂಪನಾಗಿದ್ದರೂ 'ನನ್ನ ಹೆಂಡತಿ ಸೀತೆ' ಎಂದು ಬಹಳ ದುಃಖದಿಂದ ಅತ್ತನು. ರಘೂತ್ತಮನಾದ ರಾಮನು ಹೀಗೆ ಮಾಯೆಯನ್ನು ಆಶ್ರಯಿಸಿ ತಾನು ಅಸಂಗನಾದರೂ ಆಸಕ್ತಿಯುಳ್ಳವನಂತೆಯೇ ಮೂಢರಿಗೆ ಕಂಡುಬರುತ್ತಿದ್ದನು. ತತ್ತ್ವವನ್ನು ಬಲ್ಲವರಿಗೆ ಹಾಗೆ ಕಂಡುಬರಲಿಲ್ಲ.

**ಏವಂ ವಿಚಿನ್ವನ್ ಸಕಲಂ ವನಂ ರಾಮಃ ಸ ಲಕ್ಷ್ಮಣಃ ।**
**ಭಗ್ನಂ ರಥಂ ಛತ್ರಚಾಪಂ ಕೂಬರಂ ಪತಿತಂ ಭುವಿ ॥ ೨೧ ॥**

**ದೃಷ್ಟ್ವಾ ಲಕ್ಷ್ಮಣಮಾಹೇದಂ ಪಶ್ಯ ಲಕ್ಷ್ಮಣ ಕೇನಚಿತ್ ।**
**ನೀಯಾಮಾನಾಂ ಜನಕಜಾಂ ತಂ ಜಿತ್ವಾನ್ಯೋ ಜಹಾರ ತಾಮ್ ॥ ೨೨ ॥**

೨೧-೨೨. ಹೀಗೆ ಎಲ್ಲಾ ಕಾಡನ್ನೂ ಲಕ್ಷ್ಮಣಸಹಿತನಾದ ರಾಮನು ಹುಡುಕುತ್ತಾ ಮುರಿದುಬಿದ್ದಿದ್ದ ರಥ, ಛತ್ರಿ, ಬಾಣ, ರಥದ ಗೂಟ- ಇವುಗಳು ಭೂಮಿಯಲ್ಲಿ ಹರಡಿರುವದನ್ನು ಕಂಡು ಲಕ್ಷ್ಮಣನನ್ನು ಕುರಿತು ''ಎಲೈ ಲಕ್ಷ್ಮಣ, ನೋಡು ; ಯಾವನೋ ಒಬ್ಬನು ಸೀತೆಯನ್ನು ಕದ್ದೊಯ್ಯುತ್ತಿರುವಾಗ ಅವನನ್ನು ಗೆದ್ದು ಮತ್ತೊಬ್ಬನು ಆಕೆಯನ್ನು ಅಪಹರಿಸಿದ್ದಾನೆ'' ಎಂದನು.

**ತತಃ ಕಂಚಿದ್ ಭುವೋ ಭಾಗಂ ಗತ್ವಾ ಪರ್ವತಸನ್ನಿಭಮ್ ।**
**ರುಧಿರಾಕ್ತವಪುರ್ದೃಷ್ಟ್ವಾ ರಾಮೋ ವಾಕ್ಯಮಥಾಬ್ರವೀತ್ ॥ ೨೩ ॥**
**ಏಷ ವೈ ಭಕ್ಷಯಿತ್ವಾ ತಾಂ ಜಾನಕೀಂ ಶುಭದರ್ಶನಾಮ್ ।**
**ಶೇತೇ ವಿವಿಕ್ತೇಽತಿತೃಪ್ತಃ ಪಶ್ಯ ಹನ್ಮಿ ನಿಶಾಚರಮ್ ॥ ೨೪ ॥**
**ಚಾಪಮಾನಯ ಶೀಘ್ರಂ ಮೇ ಬಾಣಂ ಚ ರಘುನಂದನ ।**
**ತಚ್ಛ್ರುತ್ವಾ ರಾಮವಚನಂ ಜಟಾಯುಃ ಪ್ರಾಹ ಭೀತವತ್ ॥ ೨೫ ॥**

೨೩-೨೫. ಅನಂತರ ಸ್ವಲ್ಪ ಭೂಭಾಗವನ್ನು ದಾಟಿ ಮುಂದೆ ಹೋದಾಗ ರಾಮನು ರಕ್ತದಿಂದ ತೊಯ್ದ ಬೆಟ್ಟದಂಥ ಶರೀರದ ಒಂದು ಆಕೃತಿಯನ್ನು ಕಂಡು ಹೀಗೆಂದು ಹೇಳಿದನು : ''ಎಲೈ ರಘುನಂದನನೆ, ಆ ಶುಭದರ್ಶನಳಾದ ಜಾನಕಿಯನ್ನು ಇವನೇ ತಿಂದುಹಾಕಿ ಚೆನ್ನಾಗಿ ಕೊಬ್ಬಿ ಒಬ್ಬನೇ ಮಲಗಿರುವನು. ಇವನನ್ನು ಕೊಲ್ಲುವೆನು, ನೋಡುತ್ತಿರು ; ಬೇಗನೆ ನನ್ನ ಬಾಣವನ್ನೂ ಬಿಲ್ಲನ್ನೂ ತೆಗೆದುಕೊಂಡು ಬಾ'' ಎಂದನು. ರಾಮನ ಆ ಮಾತನ್ನು ಕೇಳಿ ಹೆದರಿದವನಂತೆ ಜಟಾಯುವು ಹೀಗೆ ಹೇಳಿದನು.

**ಮಾಂ ನ ಮಾರಯ ಭದ್ರಂ ತೇ ಮ್ರಿಯಮಾಣಂ ಸ್ವಕರ್ಮಣಾ ।**
**ಅಹಂ ಜಟಾಯುಸ್ತೇ ಭಾರ್ಯಾಹಾರಿಣಂ ಸಮನುದ್ರುತಃ ॥ ೨೬ ॥**
**ರಾವಣಂ ತತ್ರ ಯುದ್ಧಂ ಮೇ ಬಭೂವಾರಿವಿಮರ್ದನ ।**
**ತಸ್ಯ ವಾಹಾನ್‌. ರಥಂ ಚಾಪಂ ಛಿತ್ವಾಹಂ ತೇನ ಘಾತಿತಃ ॥ ೨೭ ॥**
**ಪತಿತೋಽಸ್ಮಿ ಜಗನ್ನಾಥ ಪ್ರಾಣಾಂಸ್ತ್ಯಕ್ಷ್ಯಾಮಿ ಪಶ್ಯ ಮಾಮ್ ॥**

೨೬-೨೭. ''ನನ್ನನ್ನು ಕೊಲ್ಲದಿರು ; ನಿನಗೆ ಒಳ್ಳೆಯದಾಗಲಿ ;ನಾನು ಜಟಾಯುವು. ನಿನ್ನ ಹೆಂಡತಿಯನ್ನು ಕದ್ದವನನ್ನು ಹಿಂಬಾಲಿಸಿದಾಗ ನನ್ನ ಕರ್ಮದಿಂದಲೇ ಈ ಸಾಯುವ ಸ್ಥಿತಿಗೆ ಬಂದಿರುವೆನು. ಎಲೈ ಶತ್ರುನಾಶಕನೆ, ಆ ರಾವಣನಿಗೂ ನನಗೂ ಯುದ್ಧವಾಯಿತು. ಅವನ ಕುದುರೆಗಳನ್ನೂ ರಥವನ್ನೂ ಧನುಸ್ಸನ್ನೂ ಕತ್ತರಿಸಿದ ನಾನು

ಅವನಿಂದ ಹೊಡೆಯಲ್ಪಟ್ಟೆನು. ಎಲೈ ಜಗನ್ನಾಥನೆ, ಕೆಳಗೆ ಬಿದ್ದಿರುವ ನನ್ನನ್ನು ನೋಡು. ಪ್ರಾಣಗಳನ್ನು ಬಿಡಲಿರುವೆನು.''

**ತಚ್ಛ್ರುತ್ವಾ ರಾಘವೋ ದೀನಂ ಕಂಠಪ್ರಾಣಂ ದದರ್ಶ ಹ ।**
**ಹಸ್ತಾಭ್ಯಾಂ ಸಂಸ್ಪೃಶನ್ ರಾಮೋ ದುಃಖಾಶ್ರುವೃತಲೋಚನಃ ॥ ೨೮ ॥**
**ಜಟಾಯೋ ಬ್ರೂಹಿ ಮೇ ಭಾರ್ಯಾ ಕೇನ ನೀತಾ ಶುಭಾನನಾ ।**
**ಮತ್ಕಾರ್ಯಾರ್ಥಂ ಹತೋಽಸಿ ತ್ವಂ ಅತೋ ಮೇ ಪ್ರಿಯಬಾಂಧವಃ ॥ ೨೯ ॥**

೨೮-೨೯. ರಾಮನು ದೈನ್ಯದಿಂದ ಕೂಡಿದ ಆ ಮಾತನ್ನು ಕೇಳಿ ಪ್ರಾಣವು ಕುತ್ತಿಗೆಗೆ ಬಂದಿರುವ ಅವನನ್ನು ಕಂಡನು. ಕಣ್ಣೀರಿಡುತ್ತಿರುವವನಾಗಿ ಎರಡು ಕೈಗಳಿಂದಲೂ ರಾಮನು (ಜಟಾಯುವನ್ನು) ತಡವುತ್ತಾ ''ಎಲೈ ಜಟಾಯುವೆ, ಶುಭಾನನೆಯಾದ ನನ್ನ ಹೆಂಡತಿಯು ಯಾರಿಂದ ಒಯ್ಯಲ್ಪಟ್ಟಳು ? ಹೇಳು. ನೀನು ನನ್ನ ಕಾರ್ಯಕ್ಕಾಗಿ ಕೊಲ್ಲಲ್ಪಟ್ಟಿರುವೆ ; ಆದ್ದರಿಂದ ನೀನು ನನಗ ಪ್ರೀತಿಪಾತ್ರನಾದ ಬಂಧುವಾಗಿರುವೆ.''

**ಜಟಾಯುಃ ಸನ್ನಯಾ ವಾಚಾ ವಕ್ತ್ರಾದ್ರಕ್ತಂ ಸಮುದ್ವಮನ್ ।**
**ಉವಾಚ ರಾವಣೋ ನಾಮ ರಾಕ್ಷಸೋ ಭೀಮವಿಕ್ರಮಃ ॥ ೩೦ ॥**
**ಆದಾಯ ಮೈಥಿಲೀಂ ಸೀತಾಂ ದಕ್ಷಿಣಾಭಿಮುಖೋ ಯಯೌ ।**
**ಇತೋ ವಕ್ತುಂ ನ ಮೇ ಶಕ್ತಿಃ ಪ್ರಾಣಾಂಸ್ತ್ಯಕ್ಷ್ಯಾಮಿ ತೇಽಗ್ರತಃ ॥ ೩೧ ॥**
**ದಿಷ್ಟ್ಯಾ ದೃಷ್ಟೋಽಸಿ ರಾಮ ತ್ವಂ ಮ್ರಿಯಮಾಣೇನ ಮೇಽನಘ ॥**

೩೦-೩೧. ಜಟಾಯುವು ಗಟ್ಟಿಯಾದ ಧ್ವನಿಯಿಂದ - ಮುಖದಿಂದ ರಕ್ತವನ್ನು ಕಾರುತ್ತಿರುವಂತೆಯೇ - ಹೀಗೆಂದನು : ''ಭಯಂಕರಪರಾಕ್ರಮವುಳ್ಳ ರಾವಣನೆಂಬ ರಾಕ್ಷಸನು ಸೀತಾದೇವಿಯನ್ನೆತ್ತಿಕೊಂಡು ದಕ್ಷಿಣಾಭಿಮುಖವಾಗಿ ಹೊರಟುಹೋದನು. ಇನ್ನು ಮುಂದಕ್ಕೆ ಮಾತನಾಡಲು ನನಗೆ ಶಕ್ತಿಯಿಲ್ಲ. ನಿನ್ನೆದುರಿಗೇ ಪ್ರಾಣತ್ಯಾಗಮಾಡುವೆನು. ಎಲೈ ರಾಮನೆ, ಸಾಯುತ್ತಿರುವ ನನಗೆ ನನ್ನ ಪುಣ್ಯದಿಂದ ಎಲೈ ಪಾಪರಹಿತನೆ, ನಿನ್ನ ದರ್ಶನವಾಗಿದೆ.''

**ಪರಮಾತ್ಮಾಸಿ ವಿಷ್ಣುಸ್ತ್ವಂ ಮಾಯಾಮನುಜರೂಪಧೃಕ್ ।**
**ಅಂತಕಾಲೇಽಪಿ ದೃಷ್ಟ್ವಾ ತ್ವಾಂ ಮುಕ್ತೋಽಹಂ ರಘುಸತ್ತಮ ॥ ೩೨ ॥**
**ಹಸ್ತಾಭ್ಯಾಂ ಸ್ಪೃಶ ಮಾಂ ರಾಮ ಪುನರ್ಯಾಸ್ಯಾಮಿ ತೇ ಪದಮ್ ।**
**ತಥೇತಿ ರಾಮಃ ಪಸ್ಪರ್ಶ ತದಂಗಂ ಪಾಣಿನಾ ಸ್ಮಯನ್ ॥ ೩೩ ॥**
**ತತಃ ಪ್ರಾಣಾನ್ ಪರಿತ್ಯಜ್ಯ ಜಟಾಯುಃ ಪತಿತೋ ಭುವಿ ।**

೩೨-೩೩. ''ಮಾಯೆಯಿಂದ ಮನುಷ್ಯರೂಪವನ್ನು ಧರಿಸಿರುವ ನೀನು ವಿಷ್ಣುವೆಂಬ ಪರಮಾತ್ಮನಾಗಿರುವೆ. ಕೊನೆಗಾಲದಲ್ಲಿ ನಾನು ನಿನ್ನನ್ನು ಕಂಡು ಎಲೈ ರಘುಶ್ರೇಷ್ಠನೆ, (ನಾನು) ಮುಕ್ತನಾದೆನು. ಎರಡು ಕೈಗಳಿಂದಲೂ ಎಲೈ ರಾಮನೆ, ನೀನು ನನ್ನನ್ನು ಮುಟ್ಟು ;ಮತ್ತೆ ನಿನ್ನ ಬಳಿಗೇ ಬರುವೆನು'' ಎಂದನು. ಹಾಗೇ ಆಗಲೆಂದು ರಾಮನು ಮುಗುಳುನಗುತ್ತಾ ಅದರ ಶರೀರವನ್ನು ಮುಟ್ಟಿದನು. ಅನಂತರ ಜಟಾಯುವು ಪ್ರಾಣಗಳನ್ನು ಬಿಟ್ಟವನಾಗಿ ನೆಲದಮೇಲೆ ಬಿದ್ದನು.

**ರಾಮಸ್ತಮನುಶೋಚಿತ್ವಾ ಬಂಧುವತ್ ಸಾಶ್ರುಲೋಚನಃ ।**
**ಲಕ್ಷ್ಮಣೇನ ಸಮಾನಾಯ್ಯ ಕಾಷ್ಠಾನಿ ಪ್ರದದಾಹ ತಮ್ ॥ ೩೪ ॥**
**ಸ್ನಾತ್ವಾ ದುಃಖೇನ ರಾಮೋಽಪಿ ಲಕ್ಷ್ಮಣೇನ ಸಮನ್ವಿತಃ**
**ಹತ್ವಾ ವನೇ ಮೃಗಂ ತತ್ರ ಮಾಂಸಖಂಡಾನ್ ಸಮಂತತಃ ॥ ೩೫ ॥**
**ಶಾದ್ವಲೇ ಪ್ರಾಕ್ಷಿಪದ್ ರಾಮಃ ಪೃಥಕ್ ಪೃಥಗನೇಕಧಾ ।**
**ಭಕ್ಷಂತು ಪಕ್ಷಿಣಃ ಸರ್ವೇ ತೃಪ್ತೋ ಭವತು ಪಕ್ಷಿರಾಟ್ ॥ ೩೬ ॥**

೩೪-೩೬. ಕಣ್ಣೀರಿನಿಂದ ಕೂಡಿದ ರಾಮನು ತನ್ನ ನೆಂಟನಂತೆ ಆ (ಜಟಾಯುವನ್ನು) ಭಾವಿಸಿ ದುಃಖಪಟ್ಟು ಲಕ್ಷ್ಮಣನ ಮೂಲಕ ಸೌದೆಯನ್ನು ತರಿಸಿ ಅವನನ್ನು ದಹನಮಾಡಿದನು. ಅನಂತರ ಸ್ನಾನಮಾಡಿ ಲಕ್ಷ್ಮಣನೊಡಗೂಡಿ ಕಾಡಿನಲ್ಲಿ ಒಂದು ಮೃಗವನ್ನು ಕೊಂದು ಮಾಂಸಗಳನ್ನು ತುಂಡುಮಾಡಿ ದುಃಖದಿಂದ ಹಸಿರು ಹುಲ್ಲಿನ ಮೈದಾನದಲ್ಲಿ ಬಿಡಿಬಿಡಿಯಾಗಿ ಬಹಳವಾಗಿ ಹರಡಿದನು. ''ಇದೊ, ಹಕ್ಕಿಗಳೆಲ್ಲವೂ ಇದನ್ನು ತಿನ್ನಲಿ ; ಪಕ್ಷಿರಾಜನ(ಆತ್ಮಕ್ಕೆ) ತೃಪ್ತಿಯಾಗಲಿ!'' ( ಎಂದನು).

**ಇತ್ಯುಕ್ತ್ವಾ ರಾಘವಃ ಪ್ರಾಹ ಜಟಾಯೋ ಗಚ್ಛ ಮತ್ಪದಮ್ ।**
**ಮತ್ಸಾರೂಪ್ಯಂ ಭಜಸ್ವಾದ್ಯ ಸರ್ವಲೋಕಸ್ಯ ಪಶ್ಯತಃ ॥ ೩೭ ॥**
**ತತೋಽನನ್ತರಮೇವಾಸೌ ದಿವ್ಯರೂಪಧರಃ ಶುಭಃ ।**
**ವಿಮಾನವರಮಾರುಹ್ಯ ಭಾಸ್ವರಂ ಭಾನುಸನ್ನಿಭಮ್ ॥ ೩೮ ॥**

೩೭-೩೮. ರಾಮನು ಹೀಗೆಂದು ಹೇಳಿ ''ಎಲೈ ಜಟಾಯುವೆ, ನನ್ನ ಸ್ಥಾನವನ್ನು ಹೊಂದುವವನಾಗು. ಪ್ರಪಂಚದವರೆಲ್ಲ ನೋಡುತ್ತಿರುವಂತೆಯೇ ನನಗೆ ಸಮಾನವಾದ ರೂಪವನ್ನು ಪಡೆಯುವವನಾಗು'' ಎಂದನು. ಹಾಗೆ ಹೇಳಿದ ಅನಂತರವೇ ಆತನು ಶುಭವಾದ ದಿವ್ಯವಾದ ರೂಪವನ್ನು ಹೊಂದಿದವನಾಗಿ ಸೂರ್ಯನಂತೆ ತೇಜಸ್ಸುಳ್ಳ ಹೊಳೆಯುತ್ತಿರುವ ಶ್ರೇಷ್ಠವಾದ ವಿಮಾನವನ್ನು ಹತ್ತಿದವನಾಗಿ -

**ಶಂಖಚಕ್ರಗದಾಪದ್ಮಕಿರೀಟವರಭೂಷಣೈಃ ।**
**ದ್ಯೋತಯನ್ ಸ್ವಪ್ರಕಾಶೇನ ಪೀತಾಂಬರಧರೋಽಮಲಃ ॥ ೩೯ ॥**
**ಚತುರ್ಭಿಃ ಪಾರ್ಷದೈರ್ವಿಷ್ಣೋಃ ತಾದೃಶೈರಭಿಪೂಜಿತಃ ।**
**ಸ್ತೂಯಮಾನೋ ಯೋಗಿಗಣೈಃ ರಾಮಮಾಭಾಷ್ಯ ಸತ್ವರಃ ॥ ೪೦ ॥**
**ಕೃತಾಂಜಲಿಪುಟೋ ಭೂತ್ವಾ ತುಷ್ಟಾವ ರಘುನಂದನಮ್ ॥**

೩೯-೪೦. ಶಂಖ -ಚಕ್ರ-ಗದೆ-ಕಮಲ- ಕಿರೀಟ- ಶ್ರೇಷ್ಠವಾದ (ಉಳಿದ) ಒಡವೆಗಳೇ ಮುಂತಾದವುಗಳಿಂದಲಂಕೃತನಾಗಿ ಪೀತಾಂಬರಧಾರಿಯಾಗಿ, ಶುಭ್ರನಾಗಿ ತನ್ನ ಕಾಂತಿಯಿಂದ ಎಲ್ಲವನ್ನೂ ಬೆಳಗುತ್ತಾ ವಿಷ್ಣುವಿನಂತೆಯೇ ಇರುವ ನಾಲ್ಕು ಜನ ಪರಿವಾರದವರಿಂದ ಸೇವಿಸಲ್ಪಟ್ಟವನಾಗಿ ಯೋಗಿಗಳಿಂದ ಸ್ತೋತ್ರಮಾಡಲ್ಪಡುತ್ತಾ ಶ್ರೀರಾಮನನ್ನು ಮಾತನಾಡಿಸಿ, ಕೈಮುಗಿದುಕೊಂಡು ರಘುನಂದನನಾದ (ರಾಮನನ್ನು) ಸ್ತೋತ್ರಮಾಡಿದನು.

**ಜಟಾಯುರುವಾಚ-**

**ಅಗಣಿತಗುಣಮಪ್ರಮೇಯಮಾದ್ಯಂ**
**ಸಕಲಜಗತ್ಸ್ಥಿತಿಸಂಯಮಾದಿಹೇತುಮ್ ।**
**ಉಪರಮಪರಮಂ ಪರಾತ್ಮಭೂತಂ**
**ಸತತಮಹಂ ಪ್ರಣತೋಽಸ್ಮಿ ರಾಮಚಂದ್ರಮ್ ॥ ೪೧ ॥**
**ನಿರವಧಿಸುಖಮಿಂದಿರಾಕಟಾಕ್ಷಂ**
**ಕ್ಷಪಿತಸುರೇಂದ್ರಚತುರ್ಮುಖಾದಿದುಃಖಮ್ ।**
**ನರವರಮನಿಶಂ ನತೋಽಸ್ಮಿ ರಾಮಂ**
**ವರದಮಹಂ ವರಚಾಪಬಾಣಹಸ್ತಮ್ ॥ ೪೨ ॥**

೪೧-೪೨. ಜಟಾಯುವಿಂತೆಂದನು : ಲೆಕ್ಕವಿಲ್ಲದಷ್ಟು ಕಲ್ಯಾಣಗುಣಗಳುಳ್ಳವನೂ ಪ್ರಮಾಣಗಳಿಗೆ ಅಗೋಚರನೂ ಆದ್ಯನೂ ಎಲ್ಲಾ ಪ್ರಪಂಚದ ಇರುವಿಕೆ, ನಾಶಾದಿಗಳಿಗೆ ಕಾರಣನಾದ ಪರಮಶಾಂತಸ್ವರೂಪನೂ ಪರಾತ್ಮನೂ ಆಗಿರುವ ರಾಮಚಂದ್ರನನ್ನು ನಾನು ಯಾವಾಗಲೂ ನಮಸ್ಕರಿಸುತ್ತೇನೆ.

ನಿರತಿಶಯಸುಖರೂಪನೂ ಲಕ್ಷ್ಮೀಕಟಾಕ್ಷಸಂಪನ್ನನೂ, ದೇವೇಂದ್ರ - ಬ್ರಹ್ಮಾದಿ ದೇವತೆಗಳ ದುಃಖವನ್ನು ನಾಶಗೊಳಿಸುವವನೂ ಪುರುಷಶ್ರೇಷ್ಠನೂ, ಉತ್ತಮವಾದ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದಿರುವವನೂ ವರಪ್ರದನೂ ಆದ ರಾಮನನ್ನು ನಾನು ಯಾವಾಗಲೂ ನಮಸ್ಕರಿಸುವೆನು.

**ತ್ರಿಭುವನಕಮನೀಯರೂಪಮೀಡ್ಯಂ**
**ರವಿಶತಭಾಸುರಮೀಹಿತಪ್ರದಾನಮ್ ।**
**ಶರಣದಮನಿಶಂ ಸುರಾಗಮೂಲೇ**
**ಕೃತನಿಲಯಂ ರಘುನಂದನಂ ಪ್ರಪದ್ಯೇ ॥ ೪೩ ॥**
**ಭವವಿಪಿನದವಾಗ್ನಿನಾಮಧೇಯಂ**
**ಭವಮುಖದೈವತದೈವತಂ ದಯಾಳುಮ್ ।**
**ದನುಜಪತಿಸಹಸ್ರಕೋಟಿನಾಶಂ**
**ರವಿತನಯಾಸದೃಶಂ ಹರಿಂ ಪ್ರಪದ್ಯೇ ॥ ೪೪ ॥**

೪೩-೪೪. ತ್ರೈಲೋಕ್ಯಮೋಹನರೂಪವುಳ್ಳವನಾದ, ಸ್ತುತ್ಯನಾದ, ನೂರು ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ, ಇಷ್ಟಾರ್ಥಗಳನ್ನು ಕೊಡುವವನಾದ, ಶರಣಾಗತರಿಗೆ ಗತಿಯಾದ, ಭಕ್ತಿಯುಳ್ಳವರ ಹೃದಯದಲ್ಲಿ ನೆಲೆಸಿರುವ ರಘುನಂದನನನ್ನು ಶರಣುಹೊಕ್ಕಿರುವೆನು.

ಸಂಸಾರವೆಂಬ ಕಾಡಿಗೆ ಕಾಡುಕಿಚ್ಚಿನ ರೂಪವಾಗಿರುವ, ಈಶ್ವರನೇ ಮೊದಲಾದ ದೇವತೆಗಳಿಗೂ ದೇವತೆಯಾದ, ದಯಾಳುವಾದ ಸಾವಿರಕೋಟಿ ರಾಕ್ಷಸರೊಡೆಯರನ್ನು ನಾಶಗೊಳಿಸಿದವನಾದ, ಸೂರ್ಯಪುತ್ರಿಯಾದ ಯಮುನಾದೇವಿಯಂತೆ ನೀಲವರ್ಣನಾದ ಶ್ರೀಹರಿಯನ್ನು ಶರಣುಹೊಂದುವೆನು.

**ಅವಿರತಭವಭಾವನಾತಿದೂರಂ**
**ಭವವಿಮುಖೈರ್ಮುನಿಭಿಃ ಸದೈವ ದೃಶ್ಯಮ್ ।**
**ಭವಜಲಧಿಸುತಾರಣಾಂಘ್ರಿಪೋತಂ**
**ಶರಣಮಹಂ ರಘುನಂದನಂ ಪ್ರಪದ್ಯೇ ॥ ೪೫ ॥**
**ಗಿರಿಶಗಿರಿಸುತಾಮನೋನಿವಾಸಂ**
**ಗಿರಿವರಧಾರಿಣಮೀಹಿತಾಭಿರಾಮಮ್ ।**
**ಸುರವರದನುಜೇಂದ್ರಸೇವಿತಾಂಘ್ರಿಂ**
**ಸುರವರದಂ ರಘುನಾಯಕಂ ಪ್ರಪದ್ಯೇ ॥ ೪೬ ॥**

೪೫-೪೬. ಸದಾಕಾಲವೂ ಪ್ರಾಪಂಚಿಕಚಿಂತೆಯಲ್ಲಿ ಮುಳುಗಿರುವವರಿಗೆ ದೂರನಾದ, ಸಂಸಾರದಿಂದ ಹಿಮ್ಮೆಟ್ಟಿದ ಮುನಿಗಳಿಂದ ಸದಾ ಕಾಣಲ್ಪಡುವ, ಸಂಸಾರಸಮುದ್ರವನ್ನು ದಾಟಲು ಉತ್ತಮವಾದ ತೆಪ್ಪದಂತಿರುವ ಪಾದಗಳುಳ್ಳ, ಮಹಾದೇವ ಹಾಗೂ ಪಾರ್ವತಿಯರ ಮನಸ್ಸಿನಲ್ಲಿ ವಾಸಮಾಡುವ, (ಕೃಷ್ಣಾವತಾರದಲ್ಲಿ) ಬೆಟ್ಟವನ್ನು

ಹಿಡಿದೆತ್ತಿರುವ, ಇಷ್ಟಾರ್ಥಗಳನ್ನು ಕೊಡುವ, ದೇವಶ್ರೇಷ್ಠರಾದ ಇಂದ್ರಾದಿಗಳ ಹಾಗೂ ರಾಕ್ಷಸಶ್ರೇಷ್ಠರಾದ ಪ್ರಹ್ಲಾದಾದಿಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ದೇವತೆಗಳಿಗೆ ವರಪ್ರದನಾದ ರಘುನಾಯಕನನ್ನು ನಾನು ಶರಣುಹೊಂದುವೆನು.

**ಪರಧನಪರದಾರವರ್ಜಿತಾನಾಂ**
**ಪರಗುಣಭೂತಿಷು ತುಷ್ಟಮಾನಸಾನಾಮ್ ।**
**ಪರಹಿತನಿರತಾತ್ಮನಾಂ ಸುಸೇವ್ಯಂ**
**ರಘುವರಮಂಬುಜಲೋಚನಂ ಪ್ರಪದ್ಯೇ** ॥ ೪೭ ॥
**ಸ್ಮಿತರುಚಿರವಿಕಾಸಿತಾನನಾಬ್ಜಂ**
**ಅತಿಸುಲಭಂ ಸುರರಾಜನೀಲನೀಲಮ್ ।**
**ಸಿತಜಲರುಹಚಾರುನೇತ್ರಶೋಭಂ**
**ರಘುಪತಿಮೀಶಗುರೋರ್ಗುರುಂ ಪ್ರಪದ್ಯೇ** ॥ ೪೮ ॥

೪೭-೪೮. ಮತ್ತೊಬ್ಬರ ಹಣ, ಸ್ತ್ರೀ- ಇವುಗಳನ್ನು ತ್ಯಾಗಮಾಡಿರುವ, ಹಾಗೂ ಮತ್ತೊಬ್ಬರ ಗುಣಗಳನ್ನು ಕಂಡು ಮನಸ್ಸಿನಲ್ಲಿ ಆನಂದಿಸುವ, ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವವರಿಂದ ಸೇವಿತನಾದ, ಕಮಲನಯನನಾದ ಶ್ರೀರಾಮನನ್ನು ಸೇವಿಸುತ್ತೇನೆ.

ಮುಗುಳುನಗೆಯಿಂದ ಅರಳಿದ ಮುಖಕಮಲವುಳ್ಳ, (ಭಕ್ತರಿಗೆ) ಅತಿ ಸುಲಭನಾದ, ಇಂದ್ರನೀಲಮಣಿಯಂತೆ ನೀಲವರ್ಣನಾಗಿರುವ, ಬಿಳುಪಾದ ತಾವರೆ ಯಂತೆ ಸುಂದರವಾದ ಕಣ್ಣುಗಳ ಕಾಂತಿಯುಳ್ಳ, ಮಹಾದೇವನಿಗೂ ಗುರುವಾದ ಶ್ರೀರಾಮನನ್ನು ಶರಣು ಹೊಂದುವೆನು.

**ಹರಿಕಮಲಜಶಂಭುರೂಪಭೇದಾತ್**
**ತ್ವಮಿಹ ವಿಭಾಸಿ ಗುಣತ್ರಯಾನುವೃತ್ತಃ ।**
**ರವಿರಿವ ಜಲಪೂರಿತೋದಪಾತ್ರೇ-**
**ಷ್ವಮರಪತಿಸ್ತುತಿಪಾತ್ರಮೀಶಮೀಡೇ** ॥ ೪೯ ॥
**ರತಿಪತಿಶತಕೋಟಿಸುಂದರಾಂಗಂ**
**ಶತಪಥಗೋಚರಭಾವನಾವಿದೂರಮ್ ।**
**ಯತಿಪತಿಹೃದಯೇ ಸದಾ ವಿಭಾತಂ**
**ರಘುಪತಿಮಾರ್ತಿಹರಂ ಪ್ರಭುಂ ಪ್ರಪದ್ಯೇ** ॥ ೫೦ ॥

ಅದದನ್ನು ತಿಂದುಕೊಂಡು ಈತನಿದ್ದಾನೆ. ಈಗ ನಾವುಗಳೂ ಈತನ ಎರಡು ತೋಳುಗಳ ನಡುವೆ ಕೂಡಿಹಾಕಲ್ಪಟ್ಟಿರುವೆವು. ಇದು ನಿಜ.

**ಗಂತುಮನ್ಯತ್ರ ಮಾರ್ಗೋ ನ ದೃಶ್ಯತೇ ರಘುನಂದನ ।**
**ಕಿಂ ಕರ್ತವ್ಯಮಿತೋಽಸ್ಮಾಭಿರಿದಾನೀಂ ಭಕ್ಷಯೇತ್ ಸ ನೌ ॥ ೭ ॥**
**ಲಕ್ಷ್ಮಣಸ್ತಮುವಾಚೇದಂ ಕಿಂ ವಿಚಾರೇಣ ರಾಘವ ।**
**ಆವಾಮೇಕೈಕಮವ್ಯಗ್ರೌ ಛಿಂದ್ಯಾಂ ರಕ್ಷೋಭುಜೌ ಧ್ರುವಮ್ ॥ ೮ ॥**
**ತಥೇತಿ ರಾಮಃ ಖಡ್ಗೇನ ಭುಜಂ ದಕ್ಷಿಣಮಚ್ಛಿನತ್ ।**
**ತಥೈವ ಲಕ್ಷ್ಮಣೋ ವಾಮಂ ಚಿಚ್ಛೇದ ಭುಜಮಂಜಸಾ ॥ ೯ ॥**

೭-೯. ''ಎಲೈ ರಘುನಂದನನೆ, ಬೇರೆಲ್ಲಿಗೂ ಹೋಗಲು ದಾರಿಯಿರುವದಿಲ್ಲ. ಈಗ ನಾವು ಮಾಡಬೇಕಾದದ್ದಾದರೂ ಏನು ? ಅವನು ನಮ್ಮಿಬ್ಬರನ್ನೂ ತಿಂದುಬಿಡುವನಲ್ಲ ! (ಎಂದನು). ಆಗ ಅವನನ್ನು ಕುರಿತು ಲಕ್ಷ್ಮಣನು 'ರಾಮ, ಈಗ ವಿಚಾರ ಮಾಡುವದರಿಂದೇನು ಪ್ರಯೋಜನ ? ನಾವಿಬ್ಬರೂ ಕೂಡಿ ಈ ರಾಕ್ಷಸನ ಎರಡು ತೋಳುಗಳನ್ನೂ ಕತ್ತರಿಸೋಣ' (ಎಂದನು). ಹಾಗೇ ಆಗಲೆಂದು ರಾಮನು ಕತ್ತಿಯಿಂದ ಬಲಭುಜವನ್ನೂ ಲಕ್ಷ್ಮಣನು ಎಡಭುಜವನ್ನೂ ಕೂಡಲೆ ಕತ್ತರಿಸಿದರು.

**ತತೋಽತಿವಿಸ್ಮಿತೋ ದೈತ್ಯಃ ಕೌ ಯುವಾಂ ಸುರಪುಂಗವೌ ।**
**ಮದ್ಬಾಹುಚ್ಛೇದಕೌ ಲೋಕೇ ದಿವಿ ದೇವೇಷು ವಾ ಕುತಃ ॥ ೧೦ ॥**
**ತತೋಽಬ್ರವೀದ್ಧಸನ್ನೇವ ರಾಮೋ ರಾಜೀವಲೋಚನಃ ।**

೧೦. ಅನಂತರ ಬಹಳ ಆಶ್ಚರ್ಯಗೊಂಡ ರಾಕ್ಷಸನು ''ನೀವು ಯಾವ ದೇವತಾಶ್ರೇಷ್ಠರು ? ನನ್ನ ತೋಳುಗಳನ್ನು ಕತ್ತರಿಸಿದ ನೀವು ದೇವಲೋಕದವರೊ, ಈ ಲೋಕದವರೊ ? ಹೇಗೆ ?'' ಎಂದನು. ಕಮಲನೇತ್ರನಾದ ರಾಮನು ಆಗ ನಗುತ್ತಲೇ ಹೀಗೆಂದನು :

**ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥೋ ಮಹಾನ್ ।**
**ರಾಮೋಽಹಂ ತಸ್ಯ ಪುತ್ರೋಽಸೌ ಭ್ರಾತಾ ಮೇ ಲಕ್ಷ್ಮಣಃ ಸುಧೀಃ ॥ ೧೧ ॥**
**ಮಮ ಭಾರ್ಯಾ ಜನಕಜಾ ಸೀತಾ ತ್ರೈಲೋಕ್ಯಸುಂದರೀ ।**
**ಆವಾಂ ಮೃಗಯಯಾ ಯಾತೌ ತದಾ ಕೇನಾಪಿ ರಕ್ಷಸಾ ॥ ೧೨ ॥**
**ನೀತಾಂ ಸೀತಾಂ ವಿಚಿನ್ವಂತೌ ಚಾಗತೌ ಘೋರಕಾನನೇ ।**
**ಬಾಹುಭ್ಯಾಂ ವೇಷ್ಟಿತಾವತ್ರ ತವ ಪ್ರಾಣರಿರಕ್ಷಯಾ ॥ ೧೩ ॥**
**ಛಿನ್ನೌ ತವ ಭುಜೌ ತ್ವಂ ಚ ಕೋ ವಾ ವಿಕಟರೂಪಧೃಕ್ ।**

೧೧-೧೩. ''ಅಯೋಧ್ಯೆಯ ಒಡೆಯನಾದ ಮಹಾತ್ಮನೂ ಶ್ರೀಮಂತನೂ ಆದ ದಶರಥನೆಂಬವನ ಮಗನಾದ ರಾಮನೆಂಬವನು ನಾನು. ಬುದ್ಧಿಶಾಲಿಯಾದ ಈ ಲಕ್ಷ್ಮಣನು ನನ್ನ ಸೋದರನು. ಮೂರು ಲೋಕಕ್ಕೂ ಸುಂದರಿಯೆನಿಸಿದ ಜನಕನ ಮಗಳಾದ ಸೀತೆಯು ನನ್ನ ಹೆಂಡತಿಯು. ನಾವಿಬ್ಬರೂ ಬೇಟೆಗಾಗಿ ಹೋಗಿದ್ದ ಕಾಲದಲ್ಲಿ ಯಾವನೋ ಒಬ್ಬ ರಾಕ್ಷಸನು ಸೀತೆಯನ್ನು ಒಯ್ದನಾದ್ದರಿಂದ ಆಕೆಯನ್ನು ಹುಡುಕುತ್ತಾ ಈ ಭಯಂಕರವಾದ ಅರಣ್ಯಕ್ಕೆ ಬಂದೆವು. ನಿನ್ನ ತೋಳುಗಳಿಂದ ಸುತ್ತುವರೆಯಲ್ಪಟ್ಟೆವು. ಪ್ರಾಣವನ್ನು ಕಾಪಾಡಿಕೊಳ್ಳುವ ಸಲುವಾಗಿ ನಿನ್ನ ತೋಳುಗಳನ್ನು ಕತ್ತರಿಸಲಾಯಿತು. ನೀನಾದರೋ, ವಿಕಾರವಾದ ದೇಹವುಳ್ಳವನಾಗಿರುವೆಯಲ್ಲವೆ? ನೀನು ಯಾರು?

**ಕಬಂಧ ಉವಾಚ-**

**ಧನ್ಯೋಽಹಂ ಯದಿ ರಾಮಸ್ತ್ವಮಾಗತೋಽಸಿ ಮಮಾಂತಿಕಮ್ ।**
**ಪುರಾ ಗಂಧರ್ವರಾಜೋಽಹಂ ರೂಪಯೌವನದರ್ಪಿತಃ ॥ ೧೪ ॥**
**ವಿಚರಲ್ಲೋಕಮಖಿಲಂ ವರನಾರೀಮನೋಹರಃ ।**
**ತಪಸಾ ಬ್ರಹ್ಮಣೋ ಲಬ್ಧಮವಧ್ಯತ್ವಂ ರಘೂತ್ತಮ ॥ ೧೫ ॥**

೧೪-೧೫. ಕಬಂಧನಿಂತೆಂದನು :ನನ್ನ ಸಮೀಪಕ್ಕೆ ಬಂದಿರುವ ನೀನು ರಾಮನಾದರೆ ನಾನು ಧನ್ಯನಾದೆನು. ಹಿಂದೆ ಗಂಧರ್ವರಾಜನಾಗಿದ್ದ ನಾನು ಪ್ರಾಯ ಹಾಗೂ ರೂಪಮದದಿಂದ ಕೊಬ್ಬಿದವನಾಗಿ ಶ್ರೇಷ್ಠರಾದ ಸ್ತ್ರೀಯರಿಗೆಲ್ಲ ಮನೋಹರ ನಾಗಿದ್ದುಕೊಂಡು ಎಲ್ಲಾ ಲೋಕಗಳನ್ನೂ ಸಂಚರಿಸಿದೆನು. ಎಲೈ ರಘುಶ್ರೇಷ್ಠನೆ, ತಪಸ್ಸಿನ ಮಹಿಮೆಯಿಂದ ನನಗೆ ಬ್ರಹ್ಮನಿಂದ ಸಾಯದೆ ಇರುವಂಥ ವರವು ದೊರಕಿತ್ತು.

**ಅಷ್ಟಾವಕ್ರಂ ಮುನಿಂ ದೃಷ್ಟ್ವಾ ಕದಾಚಿದಹಸಂ ಪುರಾ ।**
**ಕ್ರುದ್ಧೋಽಸಾವಾಹ ದುಷ್ಟ ತ್ವಂ ರಾಕ್ಷಸೋ ಭವ ದುರ್ಮತೇ ॥ ೧೬ ॥**
**ಅಷ್ಟಾವಕ್ರಃ ಪುನಃ ಪ್ರಾಹ ವಂದಿತೋ ಮೇ ದಯಾಪರಃ ।**
**ಶಾಪಸ್ಯಾಂತಂ ಚ ಮೇ ಪ್ರಾಹ ತಪಸಾ ದ್ಯೋತಿತಪ್ರಭಃ ॥ ೧೭ ॥**
**ತ್ರೇತಾಯುಗೇ ದಾಶರಥಿರ್ಭೂತ್ವಾ ನಾರಾಯಣಃ ಸ್ವಯಮ್ ।**
**ಆಗಮಿಷ್ಯತಿ ತೇ ಬಾಹೂ ಛಿಂದ್ಯೇತೇ ಯೋಜನಾಯತೌ ॥ ೧೮ ॥**
**ತೇನ ಶಾಪಾದ್ವಿನಿರ್ಮುಕ್ತೋ ಭವಿಷ್ಯಸಿ ಯಥಾ ಪುರಾ ।**
**ಇತಿ ಶಪ್ತೋಽಹಮದ್ರಾಕ್ಷಂ ರಾಕ್ಷಸೀಂ ತನುಮಾತ್ಮನಃ ॥ ೧೯ ॥**

೧೬-೧೯. ಒಮ್ಮೆ ನಾನು ಅಷ್ಟಾವಕ್ರನೆಂಬ ಋಷಿಯನ್ನು ಕಂಡು ನಕ್ಕೆನು. ಕುಪಿತನಾದ ಆತನು ''ಎಲೈ ದುಷ್ಟನೆ, ದುರ್ಬುದ್ಧಿಯವನೆ, ನೀನು ರಾಕ್ಷಸನಾಗು''

ಎಂದನು. ಅನಂತರ ನನ್ನಿಂದ ನಮಸ್ಕರಿಸಲ್ಪಟ್ಟ ಹಾಗೂ ತಪಸ್ಸಿನಿಂದ ಬೆಳಗಿದ ಕಾಂತಿಯುಳ್ಳ ದಯಾಪರನಾದ ಆತನು ನನಗೆ ಈ ಶಾಪದ ಕೊನೆಯನ್ನು ಹೇಳಿದನು. ಏನೆಂದರೆ 'ತ್ರೇತಾಯುಗದಲ್ಲಿ ಶ್ರೀಮನ್ನಾರಾಯಣನು ತಾನೇ ದಶರಥಪುತ್ರನಾಗಿ ಹುಟ್ಟಿ ಬರಲಿದ್ದಾನೆ. ಯೋಜನದಷ್ಟು ಉದ್ದವಾದ ನಿನ್ನ ತೋಳುಗಳೆರಡೂ (ಅವನಿಂದ) ಕತ್ತರಿಸಲ್ಪಡುವವು. ಅದರಿಂದ ನೀನು ಶಾಪದಿಂದ ಬಿಡಲ್ಪಟ್ಟವನಾಗಿ ಹಿಂದಿನಂತೆಯೇ ಆಗಲಿರುವೆ.' ಹೀಗೆಂದು ಶಪಿಸಲ್ಪಟ್ಟ ನಾನು ಆಗ ನನ್ನ ದೇಹವು ರಾಕ್ಷಸದೇಹವಾಗಿ ಬದಲಾವಣೆಯಾದದ್ದನ್ನು ಕಂಡುಕೊಂಡೆನು.

**ಕದಾಚಿದ್ದೇವರಾಜಾನಮಭ್ಯಾದ್ರವಮಹಂ ರುಷಾ ।**
**ಸೋಽಪಿ ವಜ್ರೇಣ ಮಾಂ ರಾಮ ಶಿರೋದೇಶೇಽಭ್ಯತಾಡಯತ್ ॥ ೨೦ ॥**
**ತದಾ ಶಿರೋ ಗತಂ ಕುಕ್ಷಿಂ ಪಾದೌ ಚ ರಘುನಂದನ ।**
**ಬ್ರಹ್ಮದತ್ತವರಾನ್ಮೃತ್ಯುರ್ನಾಭೂನ್ಮೇ ವಜ್ರತಾಡನಾತ್ ॥ ೨೧ ॥**
**ಮುಖಾಭಾವೇ ಕಥಂ ಜೀವೇದಯಮಿತ್ಯಮರಾಧಿಪಮ್ ।**
**ಊಚುಃ ಸರ್ವೇ ದಯಾವಿಷ್ಟಾ ಮಾಂ ವಿಲೋಕ್ಯಾಸ್ಯವರ್ಜಿತಮ್ ॥ ೨೨ ॥**

೨೦-೨೨. ನಾನು ಒಮ್ಮೆ ದೇವರಾಜನಾದ (ಇಂದ್ರನನ್ನು) ಕೋಪದಿಂದ ಎದುರಿಸಹೋದೆನು. ಅವನಾದರೊ, ಎಲೈ ರಾಮನೆ, ತನ್ನ ವಜ್ರಾಯುಧದಿಂದ ನನ್ನ ತಲೆಯ ಮೇಲೆ ಜೋರಾಗಿ ಹೊಡೆದನು. ಆಗ ನನ್ನ ತಲೆಯೂ ಕಾಲುಗಳೂ ಹೊಟ್ಟೆಯೊಳಗೆ ಸೇರಿಕೊಂಡುಬಿಟ್ಟವು. ಬ್ರಹ್ಮನು ಕೊಟ್ಟಿದ್ದ ವರದ ಬಲದಿಂದ ನನಗೆ ವಜ್ರದ ಹೊಡೆತವು ಬಿದ್ದಾಗಲೂ ಸಾವು ಸಂಭವಿಸಲಿಲ್ಲ. ಆಗ ದಯಾಪೂರ್ಣರಾದ ಎಲ್ಲರೂ ಬಾಯಿಲ್ಲದ ನನ್ನನ್ನು ನೋಡಿ ಇಂದ್ರನನ್ನು ಕುರಿತು 'ಬಾಯಿಲ್ಲದ ಈತನು ಬದುಕುವದಾದರೂ ಹೇಗೆ'? ಎಂದರು.

**ತತೋ ಮಾಂ ಪ್ರಾಹ ಮಘವಾ ಜಠರೇ ತೇ ಮುಖಂ ಭವೇತ್ ।**
**ಬಾಹೂ ತೇ ಯೋಜನಾಯಾಮೌ ಭವಿಷ್ಯತ ಇತೋ ವ್ರಜ ॥ ೨೩ ॥**
**ಇತ್ಯುಕ್ತ್ವೋಽತ್ರ ವಸನ್ನಿತ್ಯಂ ಬಾಹುಭ್ಯಾಂ ವನಗೋಚರಾನ್ ।**
**ಭಕ್ಷಯಾಮ್ಯಧುನಾ ಬಾಹೂ ಖಂಡಿತೌ ಮೇ ತ್ವಯಾಽನಘ ॥ ೨೪ ॥**
**ಇತಃ ಪರಂ ಮಾಂ ಶ್ವಭ್ರಾಸ್ಯೇ ನಿಕ್ಷಿಪಾಗ್ನೀಂಧನಾವೃತೇ ।**
**ಅಗ್ನಿನಾ ದಹ್ಯಮಾನೋಽಹಂ ತ್ವಯಾ ರಘುಕುಲೋತ್ತಮ ॥ ೨೫ ॥**
**ಪೂರ್ವರೂಪಮನುಪ್ರಾಪ್ಯ ಭಾರ್ಯಾಮಾರ್ಗಂ ವದಾಮಿ ತೇ ॥**

೨೩-೨೫. ಅನಂತರ ದೇವೇಂದ್ರನು ನನ್ನನ್ನು ಕುರಿತು ಹೀಗೆಂದನು. ''ನಿನಗೆ ಹೊಟ್ಟೆಯಲ್ಲಿಯೇ ಬಾಯಿ ಉಂಟಾಗುವದು. ಯೋಜನದಷ್ಟು ಉದ್ದವಾದ

ತೋಳುಗಳೆರಡು ಸಹ ಉಂಟಾಗುವವು. ಇಲ್ಲಿಂದ ಹೊರಡು'' (ಎಂದನು). ಹೀಗೆ ಹೇಳಲ್ಪಟ್ಟವನಾಗಿ ಇಲ್ಲಿಯೇ ಯಾವಾಗಲೂ ವಾಸಮಾಡುತ್ತಾ ಎರಡು ತೋಳುಗಳಿಂದಲೂ ಕಾಡಿನಲ್ಲಿ ಕಂಡುಬರುವ (ಪ್ರಾಣಿಗಳನ್ನು) ತಿಂದುಕೊಂಡಿರುವೆನು. ''ಈಗ ನನ್ನ ಎರಡು ತೋಳುಗಳೂ ಎಲೈ ಪಾಪರಹಿತನೆ, ನಿನ್ನಿಂದ ಕತ್ತರಿಸಲ್ಪಟ್ಟವು. ಇನ್ನು ಮುಂದೆ ನನ್ನನ್ನು ಕಟ್ಟಿಗೆಗಳಿಂದ ತುಂಬಿದ ಬೆಂಕಿಹೊತ್ತಿರುವ ದೊಡ್ಡ ಗುಂಡಿಯಲ್ಲಿ ಹಾಕಿಬಿಡುವವನಾಗು. ಎಲೈ ರಘುಕುಲಶ್ರೇಷ್ಠನೆ, ನಾನು ಬೆಂಕಿಯಿಂದ ಸುಡಲ್ಪಡುವವನಾಗಿ ಹಿಂದಿನ ನಿಜರೂಪವನ್ನು ಹೊಂದಿ ನಿನ್ನ ಹೆಂಡತಿಯನ್ನು ಹುಡುಕುವ ಉಪಾಯವನ್ನೂ ಹೇಳುವೆನು'' (ಎಂದನು.)

**ಇತ್ಯುಕ್ತೇ ಲಕ್ಷ್ಮಣೇನಾಶು ಶ್ವಭ್ರಂ ನಿರ್ಮಾಯ ತತ್ರ ತಮ್ ।**
**ನಿಕ್ಷಿಪ್ಯ ಪ್ರಾದಹತ್ ಕಾಷ್ಠೈಃ ತತೋ ದೇಹಾತ್ ಸಮುತ್ಥಿತಃ ॥ ೨೬ ॥**
**ಕಂದರ್ಪಸದೃಶಾಕಾರಃ ಸರ್ವಾಭರಣಭೂಷಿತಃ।**
**ರಾಮಂ ಪ್ರದಕ್ಷಿಣಂ ಕೃತ್ವಾ ಸಾಷ್ಟಾಂಗಂ ಪ್ರಣಿಪತ್ಯ ಚ ॥ ೨೭ ॥**
**ಕೃತಾಂಜಲಿರುವಾಚೇದಂ ಭಕ್ತಿಗದ್ಗದಯಾ ಗಿರಾ ।**

೨೬-೨೭. ಹೀಗೆ ಹೇಳಲಾಗಿ ರಾಮನು ಲಕ್ಷ್ಮಣನ ಮೂಲಕ ಗುಂಡಿಯನ್ನು ನಿರ್ಮಿಸಿ ಅಲ್ಲಿ ಆ (ಕಬಂಧನ) ಶರೀರವನ್ನು ಇಟ್ಟು ಕಟ್ಟಿಗೆಗಳಿಂದ ಸುಟ್ಟನು. ಅನಂತರ ಆ ಶರೀರದಿಂದ ಮನ್ಮಥನಿಗೆ ಸಮಾನವಾದ ರೂಪವುಳ್ಳ ಎಲ್ಲಾ ಒಡವೆಗಳಿಂದಲೂ ಅಲಂಕೃತನಾದ ಒಬ್ಬ ವ್ಯಕ್ತಿಯು (ಎದ್ದು) ರಾಮನನ್ನು ಪ್ರದಕ್ಷಿಣೆಮಾಡಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ಭಕ್ತಿಯಿಂದ ಗದ್ಗದವಾದ ಮಾತುಗಳಿಂದ ಹೀಗೆಂದನು.

**ಗಂಧರ್ವ ಉವಾಚ-**

**ಸ್ತೋತುಮುತ್ಸಹತೇ ಮೇಽದ್ಯ ಮನೋ ರಾಮಾತಿಸಂಭ್ರಮಾತ್ ।**
**ತ್ವಾಮನಂತಮನಾದ್ಯಂತಂ ಮನೋವಾಚಾಮಗೋಚರಮ್ ॥ ೨೮ ॥**
**ಸೂಕ್ಷ್ಮಂ ತೇ ರೂಪಮವ್ಯಕ್ತಂ ದೇಹದ್ವಯವಿಲಕ್ಷಣಮ್ ।**
**ದೃಗ್ರೂಪಮಿತರತ್ ಸರ್ವಂ ದೃಶ್ಯಂ ಜಡಮನಾತ್ಮಕಮ್ ॥ ೨೯ ॥**
**ತತ್ಕಥಂ ತ್ವಾಂ ವಿಜಾನೀಯಾದ್ ವ್ಯತಿರಿಕ್ತಂ ಮನಃ ಪ್ರಭೋ ।**

೨೮-೨೯. ''ಎಲೈ ರಾಮನೆ, ನನ್ನ ಮನಸ್ಸು ಬಹಳ ಸಂಭ್ರಮದಿಂದ ಅನಂತನೂ ಮೊದಲುಕೊನೆಗಳಿಲ್ಲದವನೂ ಮನಸ್ಸಿಗೂ ಮಾತುಗಳಿಗೂ ನಿಲುಕದವನೂ ಆದ ನಿನ್ನನ್ನು ಸ್ತೋತ್ರಮಾಡಲು ಉತ್ಸಾಹಪಡುತ್ತಿದೆ. ನಿನ್ನ ದೃಗ್ ರೂಪವು

(ಕಾರ್ಯಕಾರಣಗಳೆಂಬ) ಎರಡು ದೇಹಗಳಿಗಿಂತಲೂ ವಿಲಕ್ಷಣವಾಗಿ ಸೂಕ್ಷ್ಮವಾಗಿ ಇಂದ್ರಿಯಗಳಿಗೆ ಗೋಚರವಾಗದೆ ಇದೆ. ಉಳಿದೆಲ್ಲವೂ ದೃಶ್ಯವೂ ಅನಾತ್ಮವೂ ಜಡವೂ ಆಗಿದೆ. ಹೀಗಿರುವಲ್ಲಿ ಎಲೈ ಪ್ರಭುವೆ, ಮನಸ್ಸಿಗಿಂತ ಬೇರೆಯಾದ ನಿನ್ನನ್ನು ತಿಳಿಯುವದಾದರೂ ಹೇಗೆ?

**ಬುದ್ಧ್ಯಾತ್ಮಾಭಾಸಯೋರೈಕ್ಯಂ ಜೀವ ಇತ್ಯಭಿಧೀಯತೇ ।**
**ಬುದ್ಧ್ಯಾದಿಸಾಕ್ಷೀ ಬ್ರಹ್ಮೈವ ತಸ್ಮಿನ್ ನಿರ್ವಿಷಯೇಽಖಿಲಮ್ ॥ ೩೦ ॥**
**ಆರೋಪ್ಯತೇಽಜ್ಞಾನವಶಾತ್ ನಿರ್ವಿಕಾರೇಽಖಿಲಾತ್ಮನಿ ।**
**ಹಿರಣ್ಯಗರ್ಭಸ್ತೇ ಸೂಕ್ಷ್ಮಂ ದೇಹಂ ಸ್ಥೂಲಂ ವಿರಾಟ್ ಸ್ಮೃತಮ್ ॥ ೩೧ ॥**
**ಭಾವನಾವಿಷಯೋ ರಾಮ ಸೂಕ್ಷ್ಮಂ ತೇ ಧ್ಯಾತೃಮಂಗಲಮ್ ।**
**ಭೂತಂ ಭವ್ಯಂ ಭವಿಷ್ಯಚ್ಚ ಯತ್ರೇದಂ ದೃಶ್ಯತೇ ಜಗತ್ ॥ ೩೨ ॥**

೩೦-೩೨. ಆತ್ಮನ ಆಭಾಸ ಹಾಗೂ ಬುದ್ಧಿಯ ಒಂದಾಗುವಿಕೆಯೇ ಜೀವನೆನಿಸುವದು. ಆದರೆ ಬುದ್ಧ್ಯಾದಿ ಅನಾತ್ಮಗಳೆಲ್ಲಕ್ಕೂ ಬ್ರಹ್ಮವೇ ಸಾಕ್ಷಿಯು. ನಿರ್ವಿಷಯವಾದ ಆ ಸಾಕ್ಷಿಯಲ್ಲಿ ಅಜ್ಞಾನನಿಮಿತ್ತವಾಗಿ ಎಲ್ಲಾ (ದ್ವೈತವೂ) ಆರೋಪಿಸಲ್ಪಟ್ಟಿರುವದು. ಆದರೆ ಅದು ನಿರ್ವಿಕಾರವೂ ಎಲ್ಲರ ಅಂತರಾತ್ಮನೂ ಆಗಿರುವದು. ಎಲೈ ರಾಮನೆ, ಹಿರಣ್ಯಗರ್ಭನು ನಿನ್ನ ಸೂಕ್ಷ್ಮಶರೀರವು. ವಿರಾಟನೇ ಸ್ಥೂಲಶರೀರವು. ಧ್ಯಾನಮಾಡುವವನಿಗೆ ಮಂಗಲಕರವಾಗಿರುವ ನಿನ್ನ ಸೂಕ್ಷ್ಮರೂಪವು ಭಾವನೆಗೆ ವಿಷಯವಾಗಿರುವದು. ಅದರಲ್ಲಿಯೇ ಭೂತಭವಿಷ್ಯದ್ವರ್ತಮಾನಕಾಲಗಳೂ ಈ ಜಗತ್ತೂ ತೋರುತ್ತಿರುವದು.

**ಸ್ಥೂಲೇಂಡಕೋಶೇ ದೇಹೇ ತೇ ಮಹದಾದಿಭಿರಾವೃತೇ ।**
**ಸಪ್ತಭಿರುತ್ತರಗುಣೈರ್ವೈರಾಜೋ ಧಾರಣಾಶ್ರಯಃ ॥ ೩೩ ॥**
**ತ್ವಮೇವ ಸರ್ವಕೈವಲ್ಯಂ ಲೋಕಾಸ್ತೇಽವಯವಾಃ ಸ್ಮೃತಾಃ ।**
**ಪಾತಾಲಂ ತೇ ಪಾದಮೂಲಂ ಪಾರ್ಷ್ಣಿಸ್ತವ ಮಹಾತಲಮ್ ॥ ೩೪ ॥**
**ರಸಾತಲಂ ತೇ ಗುಲ್ಫೌ ತು ತಲಾತಲಮಿತೀರ್ಯತೇ ।**
**ಜಾನುನೀ ಸುತಲಂ ರಾಮ ಊರೂ ತೇ ವಿತಲಂ ತಥಾ ॥ ೩೫ ॥**
**ಅತಲಂ ಚ.... .... .... .... .... .... ....**

೩೩-೩೫. ಸ್ಥೂಲವಾದ ಬ್ರಹ್ಮಾಂಡರೂಪವಾದ ನಿನ್ನ ದೇಹದಲ್ಲಿ ಮಹತ್ತೇ ಮುಂತಾದ ಏಳು ತತ್ತ್ವಗಳು ವ್ಯಾಪಿಸಿಕೊಂಡಿದ್ದು ಹೆಚ್ಚು ಹೆಚ್ಚಾದ ಗುಣಗಳಿಂದ ರಚಿಸಲ್ಪಟ್ಟ ವಿರಾಟನು ಈ ಜಗತ್ತಿನ ಧಾರಣೆಗೆ ಆಶ್ರಯನಾಗಿರುತ್ತಾನೆ. ನೀನೇ ಎಲ್ಲಾ ಶ್ರೇಷ್ಠಗತಿಯೂ ಆಗಿರುತ್ತೀಯೆ. ಭೂರಾದಿಲೋಕಗಳೆಲ್ಲವೂ ನಿನ್ನ ಶರೀರದ ಅವಯವ

ಗಳಾಗಿರುವವು. ನಿನ್ನ ಪಾದಗಳ ಬುಡವೇ ಪಾತಾಲಲೋಕವು. ಮುಂಗಾಲೇ ಮಹಾತಲವು. ಹಿಮ್ಮಡಿ ಗಂಟುಗಳೇ ರಸಾತಲವು. ಎರಡು ಮಂಡಿಗಳೂ ತಲಾತಲ - ಹಾಗೂ ಸುತಲಲೋಕಗಳೆನಿಸುವವು. ಎರಡು ತೊಡೆಗಳು ವಿತಲ ಹಾಗೂ ಅತಲ ಲೋಕಗಳೆನಿಸಿವೆ.

**(ಅತಲಂ ಚ) ಮಹೀ ರಾಮ ಜಘನಂ ನಾಭಿಗಂ ನಭಃ ।**
**ಉರಃಸ್ಥಲಂ ತೇ ಜ್ಯೋತೀಂಷಿ ಗ್ರೀವಾ ತೇ ಮಹ ಉಚ್ಯತೇ ॥ ೩೬ ॥**
**ವದನಂ ಜನಲೋಕಸ್ತೇ ತಪಸ್ತೇ ಶಂಖದೇಶಗಮ್ ।**
**ಸತ್ಯಲೋಕೋ ರಘುಶ್ರೇಷ್ಠ ಶೀರ್ಷಣ್ಯಾಸ್ತೇ ಸದಾ ಪ್ರಭೋ ॥ ೩೭ ॥**
**ಇಂದ್ರಾದಯೋ ಲೋಕಪಾಲಾ ಬಾಹವಸ್ತೇ ದಿಶಃ ಶ್ರುತೀ ।**
**ಅಶ್ವಿನೌ ನಾಸಿಕೇ ರಾಮ ವಕ್ತ್ರಂ ತೇಽಗ್ನಿರುದಾಹೃತಃ ॥ ೩೮ ॥**
**ಚಕ್ಷುಸ್ತೇ ಸವಿತಾ ರಾಮ ಮನಶ್ಚಂದ್ರ ಉದಾಹೃತಃ ।**
**ಭ್ರೂಭಂಗ ಏವ ಕಾಲಸ್ತೇ ಬುದ್ಧಿಸ್ತೇ ವಾಕ್ಪತಿರ್ಭವೇತ್ ॥ ೩೯ ॥**

೩೬-೩೯. ಎಲೈ ರಾಮನೆ, ನಿನ್ನ ಶರೀರದ ಮಧ್ಯಪ್ರದೇಶವೇ ಭೂಲೋಕವು. ಹೊಕ್ಕುಳೇ ಅಂತರಿಕ್ಷಲೋಕವು. ಎದೆಯೇ ಜ್ಯೋತಿರ್ಮಂಡಲವು. ಕುತ್ತಿಗೆಯೇ ಮಹರ್ಲೋಕವು. ಮುಖವೇ ಜನಲೋಕವು. ಶಂಖವನ್ನು ಧರಿಸಿರುವ ಭಾಗವೇ ತಪೋಲೋಕವು. ಎಲೈ ಪ್ರಭುವೆ, ತಲೆಯಲ್ಲಿರುವದೇ ಸತ್ಯಲೋಕವು. ನಿನ್ನ ತೋಳುಗಳೇ ಇಂದ್ರಾದಿಲೋಕಪಾಲಕರುಗಳು. ಕಿವಿಗಳೇ ದಿಕ್ಕುಗಳು. ಮೂಗೇ ಅಶ್ವಿನೀದೇವತೆಗಳು. ಮುಖವೇ ಅಗ್ನಿಯೆನಿಸಿರುವದು. ಕಣ್ಣೇ ಸೂರ್ಯನೆನಿಸಿರುವನು. ಮನಸ್ಸೇ ಚಂದ್ರನೆನಿಸಿರುವನು. ನಿನ್ನ ಹುಬ್ಬುಹಾರಿಸುವಿಕೆಯೇ ಕಾಲವು. ನಿನ್ನ ಬುದ್ಧಿಯೇ ಬೃಹಸ್ಪತಿಯೆನಿಸಿರುವನು.

**ರುದ್ರೋಽಹಂಕಾರರೂಪಸ್ತೇ ವಾಚಶ್ಛಂದಾಂಸಿ ತೇಽವ್ಯಯ ।**
**ಯಮಸ್ತೇ ದಂಷ್ಟ್ರದೇಶಸ್ಥೋ ನಕ್ಷತ್ರಾಣಿ ದ್ವಿಜಾಲಯಃ ॥ ೪೦ ॥**
**ಹಾಸೋ ಮೋಹಕರೀ ಮಾಯಾ ಸೃಷ್ಟಿಸ್ತೇಽಪಾಂಗಮೋಕ್ಷಣಮ್ ।**
**ಧರ್ಮಃ ಪುರಸ್ತೇಽಧರ್ಮಶ್ಚ ಪೃಷ್ಠಭಾಗ ಉದೀರಿತಃ ॥ ೪೧ ॥**
**ನಿಮೇಷೋನ್ಮೇಷಣೇ ರಾತ್ರಿರ್ದಿವಾ ಚೈವ ರಘೂತ್ತಮ ।**
**ಸಮುದ್ರಾಃ ಸಪ್ತ ತೇ ಕುಕ್ಷಿರ್ನಾಡ್ಯೋ ನದ್ಯಸ್ತವ ಪ್ರಭೋ ॥ ೪೨ ॥**
**ರೋಮಾಣಿ ವೃಕ್ಷೌಷಧಯೋ ರೇತೋ ವೃಷ್ಟಿಸ್ತವ ಪ್ರಭೋ ।**
**ಮಹಿಮಾ ಜ್ಞಾನಶಕ್ತಿಸ್ತೇ ಏವಂ ಸ್ಥೂಲಂ ವಪುಸ್ತವ ॥ ೪೩ ॥**

೪೦-೪೩. ಎಲೈ ಅವ್ಯಯನೆ, ನಿನ್ನ ಅಹಂಕಾರರೂಪವೇ ರುದ್ರನು. ಮಾತುಗಳೇ ವೇದಗಳು. ನಿನ್ನ ಕೋರೆದಾಡೆಗಳೇ ಯಮನು. ಹಲ್ಲಿನ ಸಾಲುಗಳೇ ನಕ್ಷತ್ರಗಳು. ನಗೆಯೇ ಮೋಹವನ್ನುಂಟುಮಾಡುವ ಮಾಯೆಯು. ಕುಡಿಗಣ್ಣಿನ ನೋಟವೇ ಜಗತ್ ಸೃಷ್ಟಿಯು. ನಿನ್ನ ಶರೀರದ ಮುಂಭಾಗವೇ ಧರ್ಮವು. ಹಿಂಭಾಗವೇ ಅಧರ್ಮವು. ಎಲೈ ರಘುಶ್ರೇಷ್ಠನೆ, ನಿನ್ನ ರೆಪ್ಪೆಗಳ ಮುಚ್ಚುವಿಕೆ ಬಿಡುವಿಕೆಗಳೇ ರಾತ್ರಿಹಗಲುಗಳು. ನಿನ್ನ ಹೊಟ್ಟೆಯೇ ಏಳು ಸಮುದ್ರಗಳು. ಪ್ರಭುವೆ, ನಿನ್ನ ನಾಡಿಗಳೇ ನದಿಗಳು. ರೋಮಕೂಪಗಳೇ ಮರಗಿಡಗಳು. ರೇತಸ್ಸೇ ಮಳೆಯು. ಜ್ಞಾನಶಕ್ತಿಯೇ ನಿನ್ನ ಮಹಿಮೆಯು. ಹೀಗೆ ನಿನ್ನ ಸ್ಥೂಲಶರೀರವು ಇದ್ದುಕೊಂಡಿರುವದು.

**ಯದಸ್ಮಿನ್ ಸ್ಥೂಲರೂಪೇ ತೇ ಮನಃ ಸಂಧಾರ್ಯತೇ ನರೈಃ ।**
**ಅನಾಯಾಸೇನ ಮುಕ್ತಿಃ ಸ್ಯಾದತೋಽನ್ಯನ್ನ ಹಿ ಕಿಂಚನ ॥ ೪೪ ॥**
**ಅತೋಽಹಂ ರಾಮ ರೂಪಂ ತೇ ಸ್ಥೂಲಮೇವಾನುಭಾವಯೇ ।**
**ಯಸ್ಮಿನ್ ಧ್ಯಾತೇ ಪ್ರೇಮರಸಃ ಸರೋಮಪುಲಕೋ ಭವೇತ್ ॥ ೪೫ ॥**
**ತದೈವ ಮುಕ್ತಿಃ ಸ್ಯಾದ್ರಾಮ ಯದಾ ತೇ ಸ್ಥೂಲಭಾವಕಃ ।**

೪೪-೪೫. ಯಾವ ಈ ನಿನ್ನ ಸ್ಥೂಲರೂಪದಲ್ಲಿ ಮನುಷ್ಯರು ಮನಸ್ಸನ್ನು ಇಡುತ್ತಾರೆಯೋ ಅವರಿಗೆ ಶ್ರಮವಿಲ್ಲದೆ ಮುಕ್ತಿಯಾಗಲಿದೆ. ಅದಕ್ಕಿಂತ ಹೆಚ್ಚಿನದು ಬೇರೇನೂ ಇರಲಾರದು. ಆದ್ದರಿಂದ ಎಲೈ ರಾಮನೆ, ನಾನು ನಿನ್ನ ಸ್ಥೂಲರೂಪವನ್ನೇ ಚಿಂತಿಸುವೆನು. ಏಕೆಂದರೆ ಅದನ್ನು ಧ್ಯಾನಮಾಡಿದ್ದೇ ಆದರೆ ರೋಮಾಂಚವಾಗಿ ಪ್ರೇಮರಸವು ಉಕ್ಕೇರುವದು. ಹೀಗೆ ಸ್ಥೂಲವಾದ ನಿನ್ನ ಶರೀರವನ್ನು ಭಾವಿಸುವವನಿಗೂ ಮುಕ್ತಿಯಾಗುವದು.

**ತದಪ್ಯಾಸ್ತಾಂ ತವೈವಾಹಮೇತದ್ರೂಪಂ ವಿಚಿಂತಯೇ ॥**
**ಧನುರ್ಬಾಣಧರಂ ಶ್ಯಾಮಂ ಜಟಾವಲ್ಕಲಭೂಷಿತಮ್ ॥ ೪೬ ॥**
**ಅಪೀಚ್ಯವಯಸಂ ಸೀತಾಂ ವಿಚಿನ್ವಂತಂ ಸಲಕ್ಷ್ಮಣಮ್ ।**
**ಇದಮೇವ ಸದಾ ಮೇ ಸ್ಯಾನ್ಮಾನಸೇ ರಘುನಂದನ ॥ ೪೭ ॥**
**ಸರ್ವಜ್ಞಃ ಶಂಕರಃ ಸಾಕ್ಷಾತ್ ಪಾರ್ವತ್ಯಾ ಸಹಿತಃ ಸದಾ ।**
**ತ್ವದ್ರೂಪಮೇವಂ ಸತತಂ ಧ್ಯಾಯನ್ನಾಸ್ತೇ ರಘೂತ್ತಮ ॥ ೪೮ ॥**
**ಮುಮೂರ್ಷೂಣಾಂ ತದಾ ಕಾಶ್ಯಾಂ ತಾರಕಂ ಬ್ರಹ್ಮವಾಚಕಮ್ ।**
**ರಾಮ ರಾಮೇತ್ಯುಪದಿಶನ್ ತದಾ ಸಂತುಷ್ಟಮಾನಸಃ ॥ ೪೯ ॥**

೪೬-೪೯. ಅದೂ ಹಾಗಿರಲಿ. ನಾನು ನಿನ್ನ ಈ ಧನುರ್ಬಾಣಗಳನ್ನು ಧರಿಸಿರುವ ನೀಲವರ್ಣನಾದ, ಜಟಾವಲ್ಕಲಗಳಿಂದ ಅಲಂಕೃತವಾದ ಸುಂದರವಾದ (ಯೌವನ)

ವಯಸ್ಸಿನ, ಹಾಗೂ ಲಕ್ಷ್ಮಣಸಹಿತನಾಗಿ ಸೀತೆಯನ್ನು ಹುಡುಕುತ್ತಿರುವ ರೂಪವನ್ನೇ ಚಿಂತಿಸುವೆನು. ಎಲೈ ರಘುನಂದನನೆ, ನನ್ನ ಮನಸ್ಸಿನಲ್ಲಿ ಈ ರೂಪವೇ ಸದಾ ಇದ್ದುಕೊಂಡಿರಲಿ. ಸರ್ವಜ್ಞನಾದ ಪಾರ್ವತೀಸಮೇತನಾದ ಶಂಕರನು ಯಾವಾಗಲೂ ಈ ನಿನ್ನ ರೂಪವನ್ನೇ ನೇರಾಗಿ ಧ್ಯಾನಮಾಡುತ್ತಾ ಇದ್ದುಕೊಂಡಿರುವನು. ಎಲೈ ರಘುಶ್ರೇಷ್ಠನೆ, ಕಾಶಿಯಲ್ಲಿ ಆತನು ಸದಾ ತೃಪ್ತಮನಸ್ಕನಾಗಿ, ಸಂಸಾರಸಾಗರದಿಂದ ದಾಟಿಸುವ, ಬ್ರಹ್ಮವನ್ನೇ ಮುಖ್ಯಾರ್ಥದಲ್ಲಿ ಹೇಳುವ ರಾಮ, ರಾಮ-ಎಂಬ ಮಂತ್ರವನ್ನು ಪ್ರಾಣತ್ಯಾಗಮಾಡುವವರಿಗೆ ಉಪದೇಶಿಸುತ್ತಾ ಇರುವನು.

**ಅತಸ್ತ್ವಂ ಜಾನಕೀನಾಥ ಪರಮಾತ್ಮಾ ಸುನಿಶ್ಚಿತಃ ।**
**ಸರ್ವೇ ತೇ ಮಾಯಯಾ ಮೂಢಾಸ್ತ್ವಾಂ ನ ಜಾನಂತಿ ತತ್ತ್ವತಃ ॥ ೫೦ ॥**
**ನಮಸ್ತೇ ರಾಮಭದ್ರಾಯ ವೇಧಸೇ ಪರಮಾತ್ಮನೇ ।**
**ಅಯೋಧ್ಯಾಧಿಪತೇ ತುಭ್ಯಂ ನಮಃ ಸೌಮಿತ್ರಿಸೇವಿತ**
**ತ್ರಾಹಿ ತ್ರಾಹಿ ಜಗನ್ನಾಥ ಮಾಂ ಮಾಯಾ ನಾವೃಣೋತು ತೇ ॥ ೫೧ ॥**

೫೦-೫೧. ಎಲೈ ಜಾನಕೀಪತಿಯೆ, ಆದ್ದರಿಂದ ನೀನು ಪರಮಾತ್ಮನೇ ನಿಜವು. ಜನರೆಲ್ಲರೂ ಮಾಯಾಮೋಹಿತರಾಗಿ ನಿಜವಾದ ನಿನ್ನ ತತ್ತ್ವವನ್ನು ಅರಿಯದೆ ಇರುವರು. ರಾಮಭದ್ರನಾದ, ಪರಬ್ರಹ್ಮನಾದ, ಪರಮಾತ್ಮನಾದ ನಿನಗೆ ನಮಸ್ಕಾರವು. ಲಕ್ಷ್ಮಣನಿಂದ ಸೇವಿಸಲ್ಪಟ್ಟವನೆ, ಅಯೋಧ್ಯೆಯ ಒಡೆಯನೆ, ನಿನಗೆ ವಂದನೆಗಳು. ಎಲೈ ಜಗನ್ನಾಥನೆ, ನನ್ನನ್ನೂ ಕಾಪಾಡು, ಕಾಪಾಡು ; ನಿನ್ನ ಮಾಯೆಯು ನನ್ನನ್ನು ಮುಸುಕದೆ ಇರಲಿ''

**ಶ್ರೀರಾಮ ಉವಾಚ-**

**ತುಷ್ಟೋಽಹಂ ದೇವಗಂಧರ್ವ ಭಕ್ತ್ಯಾ ಸ್ತುತ್ಯಾ ಚ ತೇಽನಘ ।**
**ಯಾಹಿ ಮೇ ಪರಮಂ ಸ್ಥಾನಂ ಯೋಗಿಗಮ್ಯಂ ಸನಾತನಮ್ ॥ ೫೨ ॥**
**ಜಪಂತಿ ಯೇ ನಿತ್ಯಮನನ್ಯಬುದ್ಧ್ಯಾ**
**ಭಕ್ತ್ಯಾ ತ್ವದುಕ್ತಂ ಸ್ತವಮಾಗಮೋಕ್ತಮ್ ।**
**ತೇಽಜ್ಞಾನಸಂಭೂತಭವಂ ವಿಹಾಯ**
**ಮಾಂ ಯಾಂತಿ ನಿತ್ಯಾನುಭವಾನುಮೇಯಮ್ ॥ ೫೩ ॥**

೫೨-೫೩. ಶ್ರೀರಾಮನಿಂತೆಂದನು : ಎಲೈ ಪಾಪರಹಿತನೆ, ದೇವಗಂಧರ್ವನೆ, ನಾನು ನಿನ್ನ ಭಕ್ತಿ ಹಾಗೂ ಸ್ತೋತ್ರದಿಂದ ತೃಪ್ತನಾಗಿರುವೆನು. ಯೋಗಿಗಳಿಗೆ ಮಾತ್ರ ಗೋಚರವಾಗುವ ಸನಾತನವಾದ ನನ್ನ ಪರಮಸ್ಥಾನಕ್ಕೆ ನೀನು ಹೋಗುವನಾಗು.

ಯಾರು ನಿತ್ಯವೂ ಅನನ್ಯಮನಸ್ಕರಾಗಿ ಭಕ್ತಿಯಿಂದ ನೀನು ಮಾಡಿರುವ ಆಗಮೋಕ್ತವಾದ (ವೇದಸಂಮತವಾದ) ಈ ಸ್ತೋತ್ರವನ್ನು ಜಪಿಸುವರೋ ಅವರು ಅಜ್ಞಾನದಿಂದುಂಟಾದ ಸಂಸಾರವನ್ನು ಮೀರಿ ನಿತ್ಯಾನುಭವದಿಂದ ತಿಳಿಯಲ್ಪಡುವ ನನ್ನನ್ನು ಹೊಂದುವರು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ನವಮಃ ಸರ್ಗಃ**

ಃಃಃಃಃಃಃಃಃಃ

## ಹತ್ತನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಲಬ್ಧ್ವಾ ವರಂ ಸ ಗಂಧರ್ವಃ ಪ್ರಯಾಸ್ಯನ್ ರಾಮಮಬ್ರವೀತ್ ।**
**ಶಬರ್ಯಾಸ್ತೇ ಪುರೋಭಾಗೇ ಆಶ್ರಮೇ ರಘುನಂದನ ॥ ೧॥**
**ಭಕ್ತ್ಯಾ ತ್ವತ್ಪಾದಕಮಲೇ ಭಕ್ತಿಮಾರ್ಗವಿಶಾರದಾ ।**
**ತಾಂ ಪ್ರಯಾಹಿ ಮಹಾಭಾಗ ಸರ್ವಂ ತೇ ಕಥಯಿಷ್ಯತಿ ॥ ೨ ॥**
**ಇತ್ಯುಕ್ತ್ವಾ ಪ್ರಯಯೌ ಸೋಽಪಿ ವಿಮಾನೇನಾರ್ಕವರ್ಚಸಾ ।**
**ವಿಷ್ಣೋಃ ಪದಂ ರಾಮನಾಮಸ್ಮರಣೇ ಫಲಮೀದೃಶಮ್ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಆ ಗಂಧರ್ವನು ವರವನ್ನು ಪಡೆದುಕೊಂಡು ಪ್ರಯಾಣಮಾಡುವಾಗ ರಾಮನನ್ನು ಕುರಿತು ಹೀಗೆಂದನು. 'ಎಲೈ ರಘುನಂದನನೆ ಇದೋ, ಮುಂಭಾಗದ ಆಶ್ರಮದಲ್ಲಿ, ನಿನ್ನ ಪಾದಕಮಲದಲ್ಲಿ ಭಕ್ತಿಯಿಂದಿರುವ ಹಾಗೂ ಭಕ್ತಿಮಾರ್ಗದಲ್ಲಿ ನಿಪುಣಳಾದ ಶಬರಿಯು ಇದ್ದುಕೊಂಡಿರುವಳು. ಎಲೈ ಮಹಾಭಾಗನೆ, ಆಕೆಯಿರುವಲ್ಲಿಗೆ ಹೋಗುವವನಾಗು. ನಿನಗೆ ಅವಳು ಎಲ್ಲವನ್ನೂ ತಿಳಿಸುತ್ತಾಳೆ.' ಹೀಗೆಂದು ಹೇಳಿ ಸೂರ್ಯನಂತೆ ಕಾಂತಿಯುಕ್ತವಾಗಿದ್ದ ವಿಮಾನದಲ್ಲಿ ಕುಳಿತು ಗಂಧರ್ವನು ಪ್ರಯಾಣಮಾಡಿದನು. ರಾಮನಾಮವನ್ನು ನೆನೆಯುವವರಿಗೆ ಇಂಥ ಫಲರೂಪವಾದ ವಿಷ್ಣುಪದವಿಯು ದೊರಕುವದು.

**ತ್ಯಕ್ತ್ವಾ ತದ್ವಿಪಿನಂ ಘೋರಂ ಸಿಂಹವ್ಯಾಘ್ರಾದಿದೂಷಿತಮ್ ।**
**ಶನೈರಥಾಶ್ರಮಪದಂ ಶಬರ್ಯಾ ರಘುನಂದನಃ ॥ ೪ ॥**
**ಶಬರೀ ರಾಮಮಾಲೋಕ್ಯ ಲಕ್ಷ್ಮಣೇನ ಸಮನ್ವಿತಮ್**
**ಆಯಾಂತಮಾರಾದ್ಧರ್ಷೇಣ ಪ್ರತ್ಯುತ್ಥಾಯಾಚಿರೇಣ ಸಾ ॥ ೫ ॥**

**ಪತಿತ್ವಾ ಪಾದಯೋರಗ್ರೇ ಹರ್ಷಪೂರ್ಣಾಶ್ರುಲೋಚನಾ ।**
**ಸ್ವಾಗತೇನಾಭಿನಂದ್ಯಾಥ ಸ್ವಾಸನೇ ಸಂನ್ಯವೇಶಯತ್ ॥ ೬ ॥**

೪-೬. ಹುಲಿ-ಸಿಂಹಗಳಿಂದ ದುಷ್ಟವಾಗಿದ್ದ ಆ ಭಯಂಕರವಾದ ಕಾಡನ್ನು ಬಿಟ್ಟು ರಾಮನು ಮೆಲ್ಲನೆ ಶಬರಿಯ ಆಶ್ರಮದ ಬಳಿಗೆ ಬಂದನು. ಶಬರಿಯು ಲಕ್ಷ್ಮಣಸಹಿತನಾದ ರಾಮನನ್ನು ಕಂಡು, ಬರುತ್ತಾ ಇರುವ ಆತನನ್ನು ಸಂತೋಷದಿಂದ ಮೇಲೆದ್ದು, ಹರ್ಷಜಲದಿಂದ ಕೂಡಿದ ಕಣ್ಣುಳ್ಳವಳಾಗಿ ಮುಂದುಗಡೆ ಅವನ ಪಾದಗಳಿಗೆ ಬಿದ್ದು ಸ್ವಾಗತಿಸಿ ಹೊಗಳಿ ತನ್ನ ಪೀಠದಲ್ಲಿ ಕುಳ್ಳಿರಿಸಿದಳು.

**ರಾಮಲಕ್ಷ್ಮಣಯೋಃ ಸಮ್ಯಕ್ ಪಾದೌ ಪ್ರಕ್ಷಾಲ್ಯ ಭಕ್ತಿತಃ ।**
**ತಜ್ಜಲೇನಾಭಿಷಿಚ್ಯಾಂಗಂ ಅಥಾರ್ಘ್ಯಾದಿಭಿರಾವೃತಾ ॥ ೭ ॥**
**ಸಂಪೂಜ್ಯ ವಿಧಿವದ್ ರಾಮಂ ಸಸೌಮಿತ್ರಿಂ ಸಪರ್ಯಯಾ ।**
**ಸಂಗೃಹೀತಾನಿ ದಿವ್ಯಾನಿ ರಾಮಾರ್ಥಂ ಶಬರೀ ಮುದಾ ॥ ೮ ॥**
**ಫಲಾನ್ಯಮೃತಕಲ್ಪಾನಿ ದದೌ ರಾಮಾಯ ಭಕ್ತಿತಃ ।**
**ಪಾದೌ ಸಂಪೂಜ್ಯ ಕುಸುಮೈಃ ಸುಗಂಧೈಸ್ಸಾನುಲೇಪನೈಃ ॥ ೯ ॥**

೭-೯. ರಾಮಲಕ್ಷ್ಮಣರ ಪಾದಗಳನ್ನು ಚೆನ್ನಾಗಿ ತೊಳೆದು ಭಕ್ತಿಯಿಂದ ಆ ಪಾದೋದಕವನ್ನು ತನ್ನ ಮೇಲೆ ಅಭಿಷೇಕಮಾಡಿಕೊಂಡು ಅನಂತರ ಅರ್ಘ್ಯವೇ ಮುಂತಾದ ಉಪಚಾರಗಳಿಂದ ಕೂಡಿ ವಿಧಿಪೂರ್ವಕವಾಗಿ ಸೌಮಿತ್ರಿಸಹಿತನಾದ ರಾಮನನ್ನು ಪೂಜಿಸಿ, ರಾಮನಿಗಾಗಿಯೇ ಸಂಗ್ರಹಿಸಿಟ್ಟಿದ್ದ ದಿವ್ಯವಾದ ಅಮೃತದಂತೆ ರುಚಿಯಾದ ಹಣ್ಣುಗಳನ್ನು ಭಕ್ತಿಯಿಂದ ರಾಮನಿಗೆ ಸಮರ್ಪಿಸಿದಳು. ಒಳ್ಳೆಯ ಸುವಾಸನೆಯುಳ್ಳ ಹೂವುಗಳು, ಗಂಧಾದಿಗಳಿಂದ ಪಾದಗಳನ್ನು ಪೂಜಿಸಿದಳು.

**ಕೃತಾತಿಥ್ಯಂ ರಘುಶ್ರೇಷ್ಠಮುಪವಿಷ್ಟಂ ಸಹಾನುಜಮ್ ।**
**ಶಬರೀ ಭಕ್ತಿಸಂಪನ್ನಾ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೧೦ ॥**
**ಅತ್ರಾಶ್ರಮೇ ರಘುಶ್ರೇಷ್ಠ ಗುರವೋ ಮೇ ಮಹರ್ಷಯಃ ।**
**ಸ್ಥಿತಾಃ ಶುಶ್ರೂಷಣಂ ತೇಷಾಂ ಕುರ್ವತೀ ಸಮುಪಸ್ಥಿತಾ ॥ ೧೧ ॥**
**ಬಹುವರ್ಷಸಹಸ್ರಾಣಿ ಗತಾಸ್ತೇ ಬ್ರಹ್ಮಣಃ ಪದಮ್ ।**

೧೦-೧೧. ಸೋದರನೊಡನೆ ಆತಿಥ್ಯವನ್ನು ಸ್ವೀಕರಿಸಿ ಕುಳಿತಿರುವ ರಘುಶ್ರೇಷ್ಠನನ್ನು ಭಕ್ತಿಸಂಪನ್ನಳಾದ ಶಬರಿಯು ಕೈಮುಗಿದುಕೊಂಡು ಹೀಗೆಂದಳು : "ಎಲೈ ರಘುಶ್ರೇಷ್ಠನೆ, ಈ ಆಶ್ರಮದಲ್ಲಿ ಮಹರ್ಷಿಗಳಾದ ನನ್ನ ಗುರುಗಳು ಇದ್ದರು. ಅವರ ಸೇವೆಯನ್ನು ಮಾಡಿಕೊಂಡು ಅನೇಕ ಸಹಸ್ರವರ್ಷಗಳವರೆಗೆ ನಾನು ಇದ್ದುಕೊಂಡಿದ್ದೆನು. ಅವರಾದರೊ, ಬ್ರಹ್ಮಪದವಿಯನ್ನು ಸೇರಿದರು.

**ಗಮಿಷ್ಯಂತೋಽಬ್ರುವನ್ ಮಾಂ ತ್ವಂ ವಸಾತ್ರೈವ ಸಮಾಹಿತಾ ।**
**ರಾಮೋ ದಾಶರಥಿರ್ಜಾತಃ ಪರಮಾತ್ಮಾ ಸನಾತನಃ ॥ ೧೨ ॥**
**ರಾಕ್ಷಸಾನಾಂ ವಧಾರ್ಥಾಯ ಋಷೀಣಾಂ ರಕ್ಷಣಾಯ ಚ ।**
**ಆಗಮಿಷ್ಯತಿ ಸ್ವೈಕಾಗ್ರಧ್ಯಾನನಿಷ್ಠಾ ಸ್ಥಿರಾ ಭವ ॥ ೧೩ ॥**
**ಇದಾನೀಂ ಚಿತ್ರಕೂಟಾದ್ರಾವಾಶ್ರಮೇ ವಸತಿ ಪ್ರಭುಃ ।**
**ಯಾವದಾಗಮನಂ ತಸ್ಯ ತಾವದ್ರಕ್ಷ ಕಲೇವರಮ್ ॥ ೧೪ ॥**
**ದೃಷ್ಟ್ವೈವ ರಾಘವಂ ದಗ್ಧ್ವಾ ದೇಹಂ ಯಾಸ್ಯಸಿ ತತ್ಪದಮ್ ।**
**ತಥೈವಾಕರವಂ ರಾಮ ತ್ವದ್ಧ್ಯಾನೈಕಪರಾಯಣಾ ॥ ೧೫ ॥**
**ಪ್ರತೀಕ್ಷ್ಯಾಗಮನಂ ತೇಽದ್ಯ ಸಫಲಂ ಗುರುಭಾಷಿತಮ್ ।**

೧೨-೧೫. ಅವರು ಹೋಗುವಾಗ ನನಗೆ ಹೀಗೆ ಹೇಳಿದರು : ''ನೀನು ಇಲ್ಲಿಯೇ ತಪಸ್ಸುಮಾಡಿಕೊಂಡಿರು. ಸನಾತನನಾದ ಪರಬ್ರಹ್ಮನಾದ ರಾಮನು ದಶರಥಪುತ್ರನಾಗಿ ರಾಕ್ಷಸರನ್ನು ಕೊಲ್ಲುವದಕ್ಕಾಗಿಯೂ ಋಷಿಗಳನ್ನು ಕಾಪಾಡುವದಕ್ಕಾಗಿಯೂ ಹುಟ್ಟಿರುತ್ತಾನೆ. ಆತನು ಈಗ ಚಿತ್ರಕೂಟಪರ್ವತದಲ್ಲಿ ವಾಸಮಾಡುತ್ತಿರುವನು. ಆ ಪ್ರಭುವು ಇಲ್ಲಿಗೆ ಬರಲಿದ್ದಾನೆ. ಆತನು ಬರುವವರೆಗೂ ನೀನು ಏಕಾಗ್ರಮನಸ್ಸಿನಿಂದ ಧ್ಯಾನಿಸುತ್ತಾ ಇದ್ದುಕೊಂಡಿರು. ನಿನ್ನ ಶರೀರವನ್ನು ಕಾಪಾಡಿಕೊ. ರಾಮನನ್ನು ಕಂಡ ಮೇಲೆ ಈ ದೇಹವನ್ನು ಅಗ್ನಿಯಲ್ಲಿ ಅರ್ಪಿಸಿಕೊಂಡು ಆ ಬ್ರಹ್ಮಪದವಿಯನ್ನು ಸೇರುವೆ'' (ಎಂದಿದ್ದರು). ಎಲೈ ರಾಮನೆ, ನಾನು ಹಾಗೆಯೇ ಮಾಡಿದೆನು. ನಿನ್ನನ್ನೇ ಚಿಂತಿಸುವ ದರಲ್ಲಿ ನಿಷ್ಠಳಾಗಿ ನಿನ್ನ ಬರುವಿಕೆಯನ್ನು ನಿರೀಕ್ಷಿಸುತ್ತಾ ಇದ್ದೆನು. ಈಗ ಗುರುಗಳ ವಾಕ್ಯವು ಸಾರ್ಥಕವಾಯಿತು.

**ತವ ಸಂದರ್ಶನಂ ರಾಮ ಗುರೂಣಾಮಪಿ ಮೇ ನ ಹಿ ।**
**ಯೋಷಿನ್ಮೂಢಾಪ್ರಮೇಯಾತ್ಮನ್ ಹೀನಜಾತಿಸಮುದ್ಭವಾ ॥ ೧೬ ॥**
**ತವ ದಾಸಸ್ಯ ದಾಸಾನಾಂ ಶತಸಂಖ್ಯೋತ್ತರಸ್ಯ ವಾ ।**
**ದಾಸೀತ್ವೇ ನಾಧಿಕಾರೋಽಸ್ತಿ ಕುತಃ ಸಾಕ್ಷಾತ್ ತವೈವ ಹಿ ॥ ೧೭ ॥**
**ಕಥಂ ರಾಮಾದ್ಯ ಮೇ ದೃಷ್ಟಃ ತ್ವಂ ಮನೋವಾಗಗೋಚರಃ ।**
**ಸ್ತೋತುಂ ನ ಜಾನೇ ದೇವೇಶ ಕಿಂ ಕರೋಮಿ ಪ್ರಸೀದ ಮೇ ॥ ೧೮ ॥**

೧೬-೧೮. ಎಲೈ - ರಾಮನೆ, ನಿನ್ನ ಸಂದರ್ಶನವು ನನ್ನ ಗುರುಗಳಿಗೂ ದೊರಕಲಿಲ್ಲ. ನಾನಾದರೊ, ದಡ್ಡಹೆಂಗಸು. ಎಲೈ ಅಪ್ರಮೇಯನೆ, ನಾನು ಕೀಳು ಜಾತಿಯಲ್ಲಿ ಹುಟ್ಟಿರುಪವಳು. ನಿನ್ನ ಸೇವಕನ ಸೇವಕರಲ್ಲಿ ನೂರುಮಂದಿಗೂ ಅಥವಾ

ಅದಕ್ಕೂ ಹೆಚ್ಚು ಸೇವಕರ ಸಾಲಿನಲ್ಲಿ ದಾಸಿಯಾಗಿರಲು ಕೂಡ ನಾನು ಅನರ್ಹಳು. ಹೀಗಿರುವಲ್ಲಿ ನೇರಾಗಿ ನಿನ್ನ ದಾಸಿಯಾಗಲು ಹೇಗೆ ಸಾಧ್ಯವಾದೀತು ? ಮಾತು -ಮನಸ್ಸುಗಳಿಗೂ ಕೂಡ ಗೋಚರನಲ್ಲದ ನೀನು ನನಗೆ ಹೇಗೆ ದರ್ಶನಕೊಟ್ಟೆಯಪ್ಪ ! ರಾಮನೆ, ದೇವೇಶನೆ, ನಿನ್ನನ್ನು ಸ್ತೋತ್ರಮಾಡಲೂ ನಾನು ಅರಿಯೆನು. ನಾನು ಈಗೇನು ಮಾಡಲಿ! ಪ್ರಸನ್ನನಾಗು.

**ಶ್ರೀರಾಮ ಉವಾಚ-**

**ಪುಂಸ್ತ್ವೇ ಸ್ತ್ರೀತ್ವೇ ವಿಶೇಷೋ ವಾ ಜಾತಿನಾಮಾಶ್ರಮಾದಯಃ ।**
**ನ ಕಾರಣಂ ಮದ್ಭಜನೇ ಭಕ್ತಿರೇವ ಹಿ ಕಾರಣಮ್ ॥ ೧೯ ॥**
**ಯಜ್ಞದಾನತಪೋಭಿರ್ವಾ ವೇದಾಧ್ಯಯನಕರ್ಮಭಿಃ ।**
**ನೈವ ದ್ರಷ್ಟುಮಹಂ ಶಕ್ಯೋ ಮದ್ಭಕ್ತಿವಿಮುಖೈಃ ಸದಾ ॥ ೨೦ ॥**
**ತಸ್ಮಾದ್ ಭಾಮಿನಿ ಸಂಕ್ಷೇಪಾದ್ ವಕ್ಷ್ಯೇಽಹಂ ಭಕ್ತಿಸಾಧನಮ್ ।**

೧೯-೨೦. ಶ್ರೀರಾಮನಿಂತೆಂದನು. ''ಗಂಡಸು, ಹೆಂಗಸು - ಎಂಬ ಲಿಂಗ ಭೇದವಾಗಲಿ ಜಾತಿ, ಹೆಸರು, ಬ್ರಹ್ಮಚರ್ಯಾದ್ಯಾಶ್ರಮಗಳಾಗಲಿ ನನ್ನನ್ನು ಪಡೆಯಲು ಮುಖ್ಯವಲ್ಲ. ನನ್ನನ್ನು ಭಜಿಸಲು ಭಕ್ತಿಯೊಂದೇ ಕಾರಣವಾಗಿರುವದು. ಯಜ್ಞದಾನ ತಪಸ್ಸುಗಳಿಂದಾಗಲಿ, ವೇದಾಧ್ಯಯನವೇ ಮುಂತಾದ ಸತ್ಕರ್ಮಗಳಿಂದಾಗಲಿ, ನನ್ನ ಭಕ್ತಿಯಿಲ್ಲದವರು ನನ್ನನ್ನು ಕಾಣಲಾರರು. ಆದ್ದರಿಂದ ಎಲೌ ಮಹಿಳೆಯೆ, ನಿನಗೆ ಸಂಕ್ಷೇಪವಾಗಿ ಈಗ ಭಕ್ತಿಗೆ ಸಾಧನವನ್ನು ಹೇಳುವೆನು.

**ಸತಾಂ ಸಂಗತಿರೇವಾತ್ರ ಸಾಧನಂ ಪ್ರಥಮಂ ಸ್ಮೃತಮ್ ।**
**ದ್ವಿತೀಯಂ ಮತ್ಕಥಾಲಾಪಸ್ತೃತೀಯಂ ಮದ್ಗುಣೇರಣಮ್ ॥ ೨೧ ॥**
**ವ್ಯಾಖ್ಯಾತೃತ್ವಂ ಮದ್ವಚಸಾಂ ಚತುರ್ಥಂ ಸಾಧನಂ ಭವೇತ್ ।**
**ಆಚಾರ್ಯೋಪಾಸನಂ ಭದ್ರೇ ಮದ್ಬುದ್ಧ್ಯಾಽಮಾಯಯಾ ಸದಾ ॥ ೨೨ ॥**
**ಪಂಚಮಂ ಪುಣ್ಯಶೀಲತ್ವಂ ಯಮಾದಿ ನಿಯಮಾದಿ ಚ ।**
**ನಿಷ್ಠಾ ಮತ್ಪೂಜನೇ ನಿತ್ಯಂ ಷಷ್ಠಂ ಸಾಧನಮೀರಿತಮ್ ॥ ೨೩ ॥**
**ಮಮ ಮಂತ್ರೋಪಾಸಕತ್ವಂ ಸಾಂಗಂ ಸಪ್ತಮಮುಚ್ಯತೇ ।**
**ಮದ್ಭಕ್ತೇಷ್ವಧಿಕಾ ಪೂಜಾ ಸರ್ವಭೂತೇಷು ಮನ್ಮತಿಃ ॥ ೨೪ ॥**
**ಬಾಹ್ಯಾರ್ಥೇಷು ವಿರಾಗಿತ್ವಂ ಶಮಾದಿಸಹಿತಂ ತಥಾ ।**
**ಅಷ್ಟಮಂ ನವಮಂ ತತ್ತ್ವವಿಚಾರೋ ಮಮ ಭಾಮಿನಿ ॥ ೨೫ ॥**

**ಏವಂ ನವವಿಧಾ ಭಕ್ತಿಃ ಸಾಧನಂ ಯಸ್ಯ ಕಸ್ಯ ವಾ ।**
**ಸ್ತ್ರಿಯೋ ವಾ ಪುರುಷಸ್ಯಾಪಿ ತಿರ್ಯಗ್‌ಯೋನಿಗತಸ್ಯ ವಾ ॥ ೨೬ ॥**
**ಭಕ್ತಿಃ ಸಂಜಾಯತೇ ಪ್ರೇಮಲಕ್ಷಣಾ ಶುಭಲಕ್ಷಣೇ ।**

೨೧-೨೬. ಸತ್ಪುರುಷರ ಸಹವಾಸವೇ ಮೊದಲನೆಯ ಸಾಧನವು. ನನ್ನ ಕಥೆಯನ್ನು ಕೀರ್ತನೆಮಾಡುವದು ಎರಡನೆಯದು. ನನ್ನ ಗುಣಗಳನ್ನು ಆಡುವದು ಮೂರನೆಯದು. ನನ್ನ ವಾಕ್ಯಗಳೆನಿಸಿರುವ (ಶಾಸ್ತ್ರಗಳನ್ನು) ವಿವರಿಸಿ ಹೇಳುವದು ನಾಲ್ಕನೆಯ ಸಾಧನವು. ಗುರುವನ್ನು ನಾನೆಂದೇ ಭಾವಿಸಿ ವಂಚನೆಯಿಲ್ಲದೆ ಯಾವಾಗಲೂ ಸೇವೆಮಾಡುವದು ಎಲೈ ಮಂಗಳಸ್ವರೂಪಳೆ, ಐದನೆಯದು. ಪುಣ್ಯಕರವಾದ ನಡೆಯುಳ್ಳವನಾಗಿ ಯಮನಿಯಮಗಳನ್ನು ಸಾಧಿಸುತ್ತಾ ನಿಷ್ಠೆಯಿಂದ ನನ್ನನ್ನು ಪೂಜಿಸುವದು ಆರನೆಯ ಸಾಧನವು. ಅಂಗಗಳೊಡನೆ ನನ್ನ ಮಂತ್ರವನ್ನು ಚಿಂತಿಸುವದು ಏಳನೆಯದು. ನನ್ನ ಭಕ್ತರನ್ನು ಹೆಚ್ಚಾಗಿ ಗೌರವಿಸುವದು, ಎಲ್ಲಾ ಪ್ರಾಣಿಗಳಲ್ಲಿಯೂ ನನ್ನ ಬುದ್ಧಿಯನ್ನು ಮಾಡುವದು, ಶಮಾದಿಸಾಧನಗಳೊಡಗೂಡಿ ಹೊರಗಿನ ಪದಾರ್ಥಗಳಲ್ಲಿ ವೈರಾಗ್ಯವನ್ನು ಹೊಂದಿರುವದು ಎಂಟನೆಯದು. ತತ್ತ್ವವಿಚಾರವೇ ಒಂಭತ್ತನೆಯದು. ಎಲೌ ಮಹಿಳೆಯೆ, ಶುಭಲಕ್ಷಣವುಳ್ಳವಳೆ, ಯಾವನಿಗೇ ಆಗಲಿ, ಹೆಂಗಸಾಗಲಿ, ಗಂಡಸಾಗಲಿ, ಮೂಕಪ್ರಾಣಿಯ ಜನ್ಮದಲ್ಲಿರುವವನಾಗಲಿ ಈ ಒಂಭತ್ತು ವಿಧವಾದ ಸಾಧನದಿಂದ ಪ್ರೇಮರೂಪವಾದ ಭಕ್ತಿಯನ್ನು ಪಡೆಯಬಹುದಾಗಿದೆ.

**ಭಕ್ತೌ ಸಂಜಾತಮಾತ್ರಾಯಾಂ ಮತ್ತತ್ತ್ವಾನುಭವಸ್ತದಾ ।**
**ಮಮಾನುಭವಸಿದ್ಧಸ್ಯ ಮುಕ್ತಿಸ್ತತ್ರೈವ ಜನ್ಮನಿ ॥ ೨೭ ॥**
**ಸ್ಯಾತ್ತಸ್ಮಾತ್ ಕಾರಣಂ ಭಕ್ತಿರ್ಮೋಕ್ಷಸ್ಯೇತಿ ಸುನಿಶ್ಚಿತಮ್ ।**
**ಪ್ರಥಮಂ ಸಾಧನಂ ಯಸ್ಯ ಭವೇತ್ ತಸ್ಯ ಕ್ರಮೇಣ ತು ॥ ೨೮ ॥**
**ಭವೇತ್ಸರ್ವಂ ತತೋ ಭಕ್ತಿರ್ಮುಕ್ತಿರೇವ ಸುನಿಶ್ಚಿತಮ್ ॥**

೨೭-೨೮. ಭಕ್ತಿಯು ಉಂಟಾದದ್ದೇ ಆದರೆ ನನ್ನ ತತ್ತ್ವದ ಅನುಭವವುಂಟಾಗುವದು. ಅಂಥ ಅನುಭವದಿಂದ ಸಿದ್ಧನಾದವನಿಗೆ ಅದೇ ಜನ್ಮದಲ್ಲಿಯೇ ಮುಕ್ತಿಯಾಗುವದು. ಆದ್ದರಿಂದಲೇ ಮೋಕ್ಷಕ್ಕೆ ಭಕ್ತಿಯು ಕಾರಣವೆಂದು ನಿಶ್ಚಯವಾಗಿ ಗೊತ್ತಾಗಿರುತ್ತದೆ. ಯಾವನಿಗೆ ಮೊದಲನೆಯ ಸಾಧನವು (ಸತ್ಸಂಗವು) ದೊರಕುವದೋ ಅವನಿಗೆ ಕ್ರಮವಾಗಿ ಎಲ್ಲವೂ ಉಂಟಾಗುವದು. ಆದ್ದರಿಂದ ಭಕ್ತಿಯೆಂದರೆ ಮುಕ್ತಿಯೇ- ಎಂದು (ನನ್ನ) ನಿಶ್ಚಯವು.

**ಯಸ್ಮಾನ್ಮದ್ಭಕ್ತಿಯುಕ್ತಾ ತ್ವಂ ತತೋಽಹಂ ತ್ವಾಮುಪಸ್ಥಿತಃ ।**
**ಇತೋ ಮದ್ದರ್ಶನಾನ್ಮುಕ್ತಿಸ್ತವ ನಾಸ್ತ್ಯತ್ರ ಸಂಶಯಃ ॥ ೨೯ ॥**

**ಯದಿ ಜಾನಾಸಿ ಮೇ ಬ್ರೂಹಿ ಸೀತಾ ಕಮಲಲೋಚನಾ ।**
**ಕುತ್ರಾಸ್ತೇ ಕೇನ ವಾ ನೀತಾ ಪ್ರಿಯಾ ಮೇ ಪ್ರಿಯದರ್ಶನಾ ॥ ೩೦ ॥**

೨೯-೩೦. ನೀನಾದರೊ, ನನ್ನ ಭಕ್ತಿಯಿಂದ ಕೂಡಿದವಳಾಗಿರುವೆಯಾದ್ದರಿಂದ ನಾನು ನಿನ್ನನ್ನು ನೋಡಲು ಬಂದಿರುವೆನು. ಇನ್ನು ಮುಂದೆ ನಿನಗೆ ನನ್ನ ದರ್ಶನದಿಂದ ಸಂಶಯವಿಲ್ಲದೆ ಮುಕ್ತಿಯ ಪ್ರಾಪ್ತಿಯಾಗುವದು. ನನ್ನ ಪ್ರಿಯಳಾದ ಪ್ರಿಯದರ್ಶಿನಿಯಾದ ಕಮಲನೇತ್ರೆಯಾದ ಸೀತೆಯು ಎಲ್ಲಿರುವಳು ? ಯಾರಿಂದ ಒಯ್ಯಲ್ಪಟ್ಟಳು ? ನೀನು ಬಲ್ಲೆಯಾದರೆ ನನಗೆ ಹೇಳು (ಎಂದನು.)

**ಶಬರ್ಯುವಾಚ-**

**ದೇವ ಜಾನಾಸಿ ಸರ್ವಜ್ಞ ಸರ್ವಂ ತ್ವಂ ವಿಶ್ವಭಾವನ ।**
**ತಥಾಪಿ ಪೃಚ್ಛಸೇ ಯನ್ಮಾಂ ಲೋಕಾನನುಸೃತಃ ಪ್ರಭೋ ॥ ೩೧ ॥**
**ತತೋಽಹಮಭಿಧಾಸ್ಯಾಮಿ ಸೀತಾ ಯತ್ರಾಧುನಾ ಸ್ಥಿತಾ ।**
**ರಾವಣೇನ ಹೃತಾ ಸೀತಾ ಲಂಕಾಯಾಂ ವರ್ತತೇಽಧುನಾ ॥ ೩೨ ॥**
**ಇತಃ ಸಮೀಪೇ ರಾಮಾಸ್ತೇ ಪಂಪಾ ನಾಮ ಸರೋವರಮ್ ।**
**ಋಷ್ಯಮೂಕಗಿರಿರ್ನಾಮ ತತ್ಸಮೀಪೇ ಮಹಾನಗಃ ॥ ೩೩ ॥**

೩೧-೩೩. ಶಬರಿಯಿಂತೆಂದಳು : 'ಸ್ವಾಮಿ, ಸರ್ವಜ್ಞನೂ ಜಗತ್ತಿನಲ್ಲೆಲ್ಲ ತುಂಬಿರುವವನೂ ಆದ ನೀನು ಎಲ್ಲವನ್ನೂ ಬಲ್ಲವನಾಗಿರುವೆ. ಹಾಗಾದರೂ ಪ್ರಭುವೆ, ಲೋಕವ್ಯವಹಾರದೃಷ್ಟಿಯಿಂದ ನನ್ನನ್ನು ಕೇಳುತ್ತಿರುವೆಯಾದ್ದರಿಂದ, ಸೀತೆಯು ಈಗ ಎಲ್ಲಿದ್ದಾಳೆಂಬುದನ್ನು ಹೇಳುವೆನು. ರಾವಣನಿಂದ ಅಪಹರಿಸಲ್ಪಟ್ಟ ಸೀತೆಯು ಈಗ ಲಂಕೆಯಲ್ಲಿರುತ್ತಾಳೆ. ಎಲೈ ರಾಮನೆ, ಇಲ್ಲಿಗೆ ಸಮೀಪದಲ್ಲಿಯೇ ಪಂಪಾ ಎಂಬ ಸರೋವರವಿದೆ. ಅದರ ಹತ್ತಿರದಲ್ಲಿಯೇ ಋಷ್ಯಮೂಕವೆಂಬ ದೊಡ್ಡಬೆಟ್ಟವೂ ಇದ್ದುಕೊಂಡಿರುವದು.

**ಚತುರ್ಭಿಃ ಮಂತ್ರಿಭಿಸ್ಸಾರ್ಧಂ ಸುಗ್ರೀವೋ ವಾನರಾಧಿಪಃ ।**
**ಭೀತಭೀತಃ ಸದಾ ಯತ್ರ ತಿಷ್ಠತ್ಯತುಲವಿಕ್ರಮಃ ॥ ೩೪ ॥**
**ವಾಲಿನಶ್ಚ ಭಯಾದ್ ಭ್ರಾತುಃ ತದಗಮ್ಯಮೃಷೇರ್ಭಯಾತ್ ।**
**ವಾಲಿನಸ್ತತ್ರ ಗಚ್ಛ ತ್ವಂ ತೇನ ಸಖ್ಯಂ ಕುರು ಪ್ರಭೋ ॥ ೩೫ ॥**
**ಸುಗ್ರೀವೇಣ ಸ ಸರ್ವಂ ತೇ ಕಾರ್ಯಂ ಸಂಪಾದಯಿಷ್ಯತಿ ।**
**ಅಹಮಗ್ನಿಂ ಪ್ರವೇಕ್ಷ್ಯಾಮಿ ತವಾಗ್ರೇ ರಘುನಂದನ ॥ ೩೬ ॥**

**ಮುಹೂರ್ತಂ ತಿಷ್ಠ ರಾಜೇಂದ್ರ ಯಾವದ್ದಗ್ಧ್ವಾ ಕಲೇವರಮ್ ।**
**ಯಾಸ್ಯಾಮಿ ಭಗವನ್ ರಾಮ ತವ ವಿಷ್ಣೋಃ ಪರಂ ಪದಮ್ ॥ ೩೭ ॥**

೩೪-೩೭. ''ಯಾವ ( ಆ ಬೆಟ್ಟದಲ್ಲಿ)ವಾನರರ ಒಡೆಯನಾದ ಮಹಾಪರಾಕ್ರಮಿಯಾದ ಸುಗ್ರೀವನು ನಾಲ್ಕು ಜನ ಮಂತ್ರಿಗಳೊಡನೆ ಕೂಡಿ ಹೆದರಿ ಹೆದರಿಕೊಂಡು ಯಾವಾಗಲೂ ಇದ್ದುಕೊಂಡಿರುವನು. ಋಷಿಯ ಶಾಪಕ್ಕೆ ಹೆದರಿ ಯಾವ ಜಾಗಕ್ಕೆ ವಾಲಿಯು ಬರಲಾರನೋ ಆ ಬೆಟ್ಟದಲ್ಲಿ ತನ್ನ ಸೋದರನಾದ ವಾಲಿಯ ಹೆದರಿಕೆಯಿಂದ ಇದ್ದುಕೊಂಡಿರುವನು. ನೀನು ಅಲ್ಲಿಗೆ ಹೋಗು. ಪ್ರಭುವೆ, ಆ ಸುಗ್ರೀವನೊಡನೆ ಸ್ನೇಹವನ್ನು ಮಾಡಿಕೊ. ಅವನು ನಿನ್ನ ಎಲ್ಲಾ ಕಾರ್ಯಗಳನ್ನೂ ನೆರವೇರಿಸಿಕೊಡುವನು. ಎಲೈ ರಘುನಂದನನೆ, ನಾನು ನಿನ್ನ ಎದುರಿಗೆ ಅಗ್ನಿಯನ್ನು ಪ್ರವೇಶಿಸುವೆನು. ರಾಜೇಂದ್ರನೆ, ಒಂದು ಮುಹೂರ್ತಕಾಲ ನಿಲ್ಲುವವನಾಗು. ನಾನು ಈ ಶರೀರವನ್ನು ಸುಟ್ಟುಕೊಂಡು ವಿಷ್ಣುವಾದ ನಿನ್ನ ಪರಮಪದವಿಯನ್ನು ಹೊಂದಲಿರುವೆನು. ಪೂಜ್ಯನಾದ ರಾಮನೆ, ಅಷ್ಟರವರೆಗೆ ಇರುವವನಾಗು'' ಎಂದಳು.

**ಇತಿ ರಾಮಂ ಸಮಾಮಂತ್ರ್ಯ ಪ್ರವಿವೇಶ ಹುತಾಶನಮ್ ।**
**ಕ್ಷಣಾನ್ನಿರ್ಧೂಯ ಸಕಲಮವಿದ್ಯಾಕೃತಬಂಧನಮ್ ॥ ೩೮ ॥**
**ರಾಮಪ್ರಸಾದಾತ್ ಶಬರೀ ಮೋಕ್ಷಂ ಪ್ರಾಪಾತಿದುರ್ಲಭಮ್ ।**
**ಕಿಂ ದುರ್ಲಭಂ ಜಗನ್ನಾಥೇ ಶ್ರೀರಾಮೇ ಭಕ್ತವತ್ಸಲೇ ॥ ೩೯ ॥**
**ಪ್ರಸನ್ನೇऽಧಮಜನ್ಮಾಪಿ ಶಬರೀ ಮುಕ್ತಿಮಾಪ ಸಾ ।**
**ಕಿಂ ಪುನರ್ಬ್ರಾಹ್ಮಣಾ ಮುಖ್ಯಾಃ ಪುಣ್ಯಾಃ ಶ್ರೀರಾಮಚಿಂತಕಾಃ ॥ ೪೦ ॥**
**ಮುಕ್ತಿಂ ಯಾಂತೀತಿ ತದ್ಭಕ್ತಿರ್ಮುಕ್ತಿರೇವ ನ ಸಂಶಯಃ ।**

೩೮-೪೦. ಹೀಗೆಂದು ರಾಮನನ್ನು ಬೀಳ್ಕೊಟ್ಟು ಅಗ್ನಿಯನ್ನು ಹೊಕ್ಕಳು. ಕ್ಷಣಮಾತ್ರದಲ್ಲಿ ಅವಿದ್ಯೆಯಿಂದ ಉಂಟಾಗಿದ್ದ ಎಲ್ಲಾ ಕಟ್ಟುಗಳನ್ನೂ ಕಳಚಿಕೊಂಡು ರಾಮನ ಅನುಗ್ರಹದಿಂದ ಶಬರಿಯು ಅತಿದುರ್ಲಭವಾದ ಮೋಕ್ಷವನ್ನು ಪಡೆದುಕೊಂಡಳು. ಜಗತ್ತಿಗೆ ಒಡೆಯನೂ ಭಕ್ತವತ್ಸಲನೂ ಆದ ಶ್ರೀರಾಮನು ಪ್ರಸನ್ನನಾಗಲಾಗಿ ಅಧಮಜನ್ಮದಲ್ಲಿ ಹುಟ್ಟಿದ ಶಬರಿಯೂ ಮುಕ್ತಿಯನ್ನು ಹೊಂದಿದಳು - ಎಂದದ್ದರಿಂದ (ರಾಮನ ದಯೆಯಿದ್ದರೆ) ದುರ್ಲಭವಾದುದೇನಿದ್ದೀತು ? (ಶಬರಿಗೇ ಮುಕ್ತಿಯಾದದ್ದಾದರೆ) ಶ್ರೀರಾಮಚಿಂತಕರಾದ ಪುಣ್ಯವಂತರಾದ ಬ್ರಾಹ್ಮಣರಿಗೆ ಮುಕ್ತಿಯು ಸಿಗುತ್ತದೆ-ಎಂಬುದನ್ನು ಹೇಳತಕ್ಕದ್ದೇನಿದೆ ? ಆದ್ದರಿಂದ ರಾಮಭಕ್ತಿಯೇ ಮುಕ್ತಿಯು. ಇದರಲ್ಲಿ ಸಂಶಯವಿಲ್ಲ.

**ಭಕ್ತಿರ್ಮುಕ್ತಿವಿಧಾಯಿನೀ ಭಗವತಃ ಶ್ರೀರಾಮಚಂದ್ರಸ್ಯ ಹೇ ।**
**ಲೋಕಾಃ ಕಾಮದುಘಾಂಘ್ರಿಪದ್ಮಯುಗಳಂ ಸೇವಧ್ವಮತ್ಯುತ್ಸುಕಾಃ ॥ ೪೧ ॥**
**ನಾನಾಜ್ಞಾನವಿಶೇಷಮಂತ್ರವಿತತಿಂ ತ್ಯಕ್ತ್ವಾ ಸುದೂರೇ ಭೃಶಂ ।**
**ರಾಮಂ ಶ್ಯಾಮತನುಂ ಸ್ಮರಾರಿಹೃದಯೇ ಭಾಂತಂ ಭಜಧ್ವಂ ಬುಧಾಃ ॥ ೪೨ ॥**

೪೧-೪೨. ಎಲೈ ಜನಗಳಿರಾ, ಶ್ರೀರಾಮಚಂದ್ರನ ಭಕ್ತಿಯು ಮುಕ್ತಿಯನ್ನು ಉಂಟುಮಾಡುವ ಸಾಧನವು. ಕಾಮಧೇನುವಿನಂತಿರುವ ಆತನ ಪಾದಪದ್ಮಗಳನ್ನು ಹೆಚ್ಚಿನ ಉತ್ಸಾಹದಿಂದ ಸೇವಿಸಿರಿ. ಅನೇಕವಿಧವಾದ ಜ್ಞಾನಗಳಿಗೆ ಮೂಲವಾದ ಮಂತ್ರ ಸಮೂಹಗಳನ್ನು ದೂರದಲ್ಲಿಯೇ ಪೂರ್ತಿಯಾಗಿ ಬಿಟ್ಟು ನೀಲವರ್ಣಶರೀರನಾದ ಹಾಗೂ ಮನ್ಮಥವೈರಿಯಾದ ಪರಮೇಶ್ವರನ ಹೃದಯದಲ್ಲಿ ವಿರಾಜಮಾನನಾಗಿರುವ ರಾಮನನ್ನು ಎಲೈ ಜಾಣರೆ, ಸೇವಿಸುವವರಾಗಿರಿ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಅರಣ್ಯಕಾಂಡೇ**

**ದಶಮಃ ಸರ್ಗಃ**

ః ః ః ః ః

# ಕಿಷ್ಕಿಂಧಾಕಾಂಡ

## ಒಂದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ತತಃ ಸಲಕ್ಷ್ಮಣೋ ರಾಮಃ ಶನೈಃ ಪಂಪಾಸರಸ್ತಟಮ್ ।**
**ಆಗತ್ಯ ಸರಸಾಂ ಶ್ರೇಷ್ಠಂ ದೃಷ್ಟ್ವಾ ವಿಸ್ಮಯಮಾಯಯೌ ॥ ೧ ॥**
**ಕ್ರೋಶಮಾತ್ರಂ ಸುವಿಸ್ತೀರ್ಣಮಗಾಧಾಮಲಶಂಬರಮ್ ।**
**ಉತ್ಫುಲ್ಲಾಂಬುಜಕಲ್ಹಾರಕುಮುದೋತ್ಪಲಮಂಡಿತಮ್ ॥ ೨ ॥**
**ಹಂಸಕಾರಂಡವಾಕೀರ್ಣಂ ಚಕ್ರವಾಕಾದಿಶೋಭಿತಮ್ ।**
**ಜಲಕುಕ್ಕುಟಕೋಯಷ್ಟಿಕ್ರೌಂಚನಾದೋಪನಾದಿತಮ್ ॥ ೩ ॥**
**ನಾನಾಪುಷ್ಪಲತಾಕೀರ್ಣಂ ನಾನಾಫಲಸಮಾವೃತಮ್ ।**
**ಸತಾಂ ಮನಃ ಸ್ವಚ್ಛಜಲಂ ಪದ್ಮಕಿಂಜಲ್ಕವಾಸಿತಮ್ ॥ ೪ ॥**

೧-೪. ಶ್ರೀ ಮಹಾದೇವನಿಂತೆಂದನು : ಅನಂತರ ಲಕ್ಷ್ಮಣಸಹಿತನಾದ ರಾಮನು ಮೆಲ್ಲನೆ ಸರೋವರಗಳಲ್ಲಿ ಶ್ರೇಷ್ಠವಾದ ಪಂಪಾಸರೋವರದ ದಡಕ್ಕೆ ಬಂದು ಅದನ್ನು ನೋಡಿ ಆಶ್ಚರ್ಯಗೊಂಡನು. ಅದು ಕ್ರೋಶವೆಂಬ ಅಳತೆಯಷ್ಟು ದೊಡ್ಡದಾಗಿತ್ತು. ಬಹಳ ಆಳವಾಗಿದ್ದು ಸ್ವಚ್ಛವಾಗಿತ್ತು. ಅರಳಿದ ತಾವರೆ, ಕಲ್ಹಾರ, ಕುಮುದ, ನೈದಿಲೆಗಳಿಂದ ಮನೋಹರವಾಗಿತ್ತು. ಹಂಸ, ಚಕ್ರವಾಕಪಕ್ಷಿಗಳ ಗುಂಪಿನಿಂದ ಶೋಭಾಯಮಾನವಾಗಿತ್ತು. ನೀರುಕೋಳಿ, ಕ್ರೌಂಚಾದಿಪಕ್ಷಿಗಳ ಧ್ವನಿಯಿಂದ ಕೂಡಿತ್ತು. ಅನೇಕವಿಧವಾದ ಹೂಗಳು, ಗಿಡ-ಬಳ್ಳಿಗಳಿಂದ ತುಂಬಿತ್ತು. ಆ ಗಿಡಗಳು ಅನೇಕ ವಿಧವಾದ ಹಣ್ಣುಗಳಿಂದಲೂ ಕೂಡಿದ್ದವು. ಸರೋವರದ ನೀರು ಸತ್ಪುರುಷರ ಮನಸ್ಸಿನಂತೆ ತಿಳಿಯಾಗಿತ್ತು. ಕಮಲದ ಪರಾಗಗಳಿಂದ ಸುವಾಸಿತವಾಗಿತ್ತು.

**ತತ್ರೋಪಸ್ಪೃಶ್ಯ ಸಲಿಲಂ ಪೀತ್ವಾ ಶ್ರಮಹರಂ ವಿಭುಃ ।**
**ಸಾನುಜಃ ಸರಸಸ್ತೀರೇ ಶೀತಲೇನ ಪಥಾ ಯಯೌ ॥ ೫ ॥**
**ಋಷ್ಯಮೂಕಗಿರೇಃ ಪಾರ್ಶ್ವೇ ಗಚ್ಛಂತೌ ರಾಮಲಕ್ಷ್ಮಣೌ ।**
**ಧನುರ್ಬಾಣಕರೌ ದಾಂತೌ ಜಟಾವಲ್ಕಲಮಂಡಿತೌ ॥ ೬ ॥**
**ಪಶ್ಯಂತೌ ವಿವಿಧಾನ್ ವೃಕ್ಷಾನ್ ಗಿರೇಃ ಶೋಭಾಂ ಸುವಿಕ್ರಮೌ।**

೫-೬. ಅಲ್ಲಿ ವಿಭುವಾದ, ಸೋದರನೊಡಗೂಡಿದ ರಾಮನು ಸ್ನಾನಮಾಡಿ

ಶ್ರಮವನ್ನು ಪರಿಹರಿಸುವ ಅದರ ಜಲವನ್ನು ಕುಡಿದವನಾಗಿ ಸರೋವರದ ದಡದಲ್ಲಿರುವ ತಂಪಾದ (ನೆರಳುಳ್ಳ) ಹಾದಿಯಿಂದ ಮುನ್ನಡೆದನು. ಹೀಗೆ ಋಷ್ಯಮೂಕಪರ್ವತದ ಪಕ್ಕದಲ್ಲಿಯೇ ಹೋಗುತ್ತಿರುವ, ಜಟಾವಲ್ಕಲಧಾರಿಗಳಾಗಿ ಧನುರ್ಬಾಣಗಳನ್ನು ಹಿಡಿದಿರುವ ರಾಮಲಕ್ಷ್ಮಣರು ನಾನಾವಿಧವಾದ ಮರಗಳನ್ನು ನೋಡುತ್ತಾ ಬೆಟ್ಟದ ರಮಣೀಯತೆಯನ್ನು ಕಂಡು (ವಿಸ್ಮಿತರಾಗಿದ್ದರು).

**ಸುಗ್ರೀವಸ್ತು ಗಿರೇರ್ಮೂರ್ಧ್ನಿ ಚತುರ್ಭಿಃ ಸಹ ವಾನರೈಃ ।**
**ಸ್ಥಿತ್ವಾ ದದರ್ಶ ತೌ ಯಾಂತಾವಾರುರೋಹ ಗಿರೇಃ ಶಿರಃ ॥ ೭ ॥**
**ಭಯಾದಾಹ ಹನೂಮಂತಂ ಕೌ ತೌ ವೀರವರೌ ಸಖೇ ।**
**ಗಚ್ಛ ಜಾನೀಹಿ ಭದ್ರಂ ತೇ ಬಟುರ್ಭೂತ್ವಾ ದ್ವಿಜಾಕೃತಿಃ ॥ ೮ ॥**
**ವಾಲಿನಾ ಪ್ರೇಷಿತೌ ಕಿಂ ವಾ ಮಾಂ ಹಂತುಂ ಸಮುಪಾಗತೌ ।**
**ತಾಭ್ಯಾಂ ಸಂಭಾಷಣಂ ಕೃತ್ವಾ ಜಾನೀಹಿ ಹೃದಯಂ ತಯೋಃ ॥ ೯ ॥**
**ಯದಿ ತೌ ದುಷ್ಟಹೃದಯೌ ಸಂಜ್ಞಾಂ ಕುರು ಕರಾಗ್ರತಃ ।**
**ವಿನಯಾವನತೋ ಭೂತ್ವಾ ಏವಂ ಜಾನೀಹಿ ನಿಶ್ಚಯಮ್ ॥ ೧೦ ॥**

೭-೧೦. ಸುಗ್ರೀವನಾದರೊ, ನಾಲ್ಕು ಜನ ವಾನರರೊಡನೆ ಬೆಟ್ಟದ ತುದಿಯಲ್ಲಿರುವವನಾಗಿದ್ದು ಅವರಿಬ್ಬರೂ ಹೋಗುತ್ತಿರುವದನ್ನು ನೋಡಿದನು. ಆಗ ಬೆಟ್ಟದ ಶಿಖರವನ್ನು ಏರಿದನು. ಭಯದಿಂದ ಕೂಡಿದವನಾಗಿ ಹನುಮಂತನನ್ನು ಕುರಿತು ಹೀಗೆಂದನು : 'ಎಲೈ ಮಿತ್ರನೆ, ಆ ವೀರಶ್ರೇಷ್ಠರಿಬ್ಬರೂ ಯಾರು ? ನೀನು ಬ್ರಾಹ್ಮಣವೇಷದ ಬ್ರಹ್ಮಚಾರಿಯಾಗಿ ಅವರ ಬಳಿಗೆ ಹೋಗಿ ತಿಳಿದುಕೊಂಡು ಬಾ. ನಿನಗೆ ಒಳ್ಳೆಯದಾಗಲಿ ! ನನ್ನನ್ನು ಕೊಲ್ಲುವದಕ್ಕಾಗಿ ವಾಲಿಯಿಂದ ಕಳುಹಿಸಲ್ಪಟ್ಟವರಾಗಿ ಇಲ್ಲಿಗೆ ಬಂದಿರಬಹುದೆ ? ಅವರೊಡನೆ ಮಾತನಾಡಿ ಅವರ ಅಭಿಪ್ರಾಯವನ್ನು ತಿಳಿಯುವವನಾಗು. ಅವರೇನಾದರೂ ಒಳ್ಳೆಯವರಾಗಿದ್ದರೆ ನನಗೆ ಸೂಚನೆಯನ್ನು ಕೊಡು. ನೀನು ವಿನಯಸಂಪನ್ನನಾಗಿ ವಿಷಯವನ್ನು ತಿಳಿಯುವವನಾಗು.'

**ತಥೇತಿ ಬಟುರೂಪೇಣ ಹನುಮಾನ್ ಸಮುಪಾಗತಃ ।**
**ವಿನಯಾವನತೋ ಭೂತ್ವಾ ರಾಮಂ ನತ್ವೇದಮಬ್ರವೀತ್ ॥ ೧೧ ॥**
**ಕೌ ಯುವಾಂ ಪುರುಷವ್ಯಾಘ್ರೌ ಯುವಾನೌ ವೀರಸಂಮತೌ ।**
**ದ್ಯೋತಯಂತೌ ದಿಶಃ ಸರ್ವಾಃ ಪ್ರಭಯಾ ಭಾಸ್ಕರಾವಿವ ॥ ೧೨ ॥**
**ಯುವಾಂ ತ್ರೈಲೋಕ್ಯಕರ್ತಾರಾವಿತಿ ಭಾತಿ ಮನೋ ಮಮ ।**
**ಯುವಾಂ ಪ್ರಧಾನಪುರುಷೌ ಜಗದ್ಧೇತೂ ಜಗನ್ಮಯೌ ॥ ೧೩ ॥**
**ಮಾಯಯಾ ಮಾನುಷಾಕಾರೌ ಚರಂತಾವಿವ ಲೀಲಯಾ ।**

**ಮಾಯಯಾ ಮಾನುಷಾಕಾರೌ ಚರಂತಾವಿವ ಲೀಲಯಾ ।**
**ಭೂಭಾರಹರಣಾರ್ಥಾಯ ಭಕ್ತಾನಾಂ ಪಾಲನಾಯ ಚ ॥ ೧೪ ॥**

೧೧-೧೪. ಹಾಗೆಯೇ ಆಗಲೆಂದು ವಟುವಿನ ರೂಪದಿಂದ ಹನುಮಂತನು ಬಂದನು. ವಿನಯದಿಂದ ಕೂಡಿದವನಾಗಿ ರಾಮನನ್ನು ನಮಸ್ಕರಿಸಿ ಹೀಗೆಂದನು : ಪುರುಷಶ್ರೇಷ್ಠರೂ ವೀರ್ಯಶಾಲಿಗಳಲ್ಲಿ ಗಣ್ಯರೂ ಯುವಕರೂ ಆದ,ಹಾಗೂ ಕಾಂತಿಯಿಂದ ಎಲ್ಲಾ ದಿಕ್ಕುಗಳನ್ನೂ ಬೆಳಗುತ್ತಾ ಸೂರ್ಯರಂತಿರುವ ನೀವಿಬ್ಬರು ಯಾರು? ನೀವು ಮೂರು ಲೋಕಗಳನ್ನೂ ಸೃಷ್ಟಿಮಾಡುವ ಶಕ್ತಿಯುಳ್ಳವರೆಂದು ನನಗೆ ಅನಿಸುತ್ತಿದೆ. ನೀವಿಬ್ಬರೂ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುವ ಪ್ರಕೃತಿ- ಪುರುಷರಿರ ಬಹುದೆ? ಭೂಭಾರವನ್ನು ಪರಿಹರಿಸುವದಕ್ಕಾಗಿಯೂ ಭಕ್ತರನ್ನು ಕಾಪಾಡುವದ ಕ್ಕಾಗಿಯೂ ಮಾಯೆಯಿಂದ ಮನುಷ್ಯಾಕಾರರಾಗಿ ಲೀಲೆಯಿಂದ ಸಂಚರಿಸುತ್ತಿರುವಿರಾ ?

**ಅವತೀರ್ಣಾವಿಹ ಪರೌ ಚರಂತೌ ಕ್ಷತ್ರಿಯಾಕೃತೀ ।**
**ಜಗತ್ ಸ್ಥಿತಿಲಯೌ ಸರ್ಗಂ ಲೀಲಯಾ ಕರ್ತುಮುದ್ಯತೌ ॥ ೧೫ ॥**
**ಸ್ವತಂತ್ರೌ ಪ್ರೇರಕೌ ಸರ್ವಹೃದಯಸ್ಥಾವಿಹೇಶ್ವರೌ ।**
**ನರನಾರಾಯಣೌ ಲೋಕೇ ಚರಂತಾವಿತಿ ಮೇ ಮತಿಃ ॥ ೧೬ ॥**

೧೫-೧೬. ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳನ್ನು ಲೀಲೆಯಿಂದ ಮಾಡಲು ಕೈಗೊಂಡಿರುವ ಕ್ಷತ್ರಿಯಾಕಾರರಾದ, ಸ್ವತಂತ್ರರಾದ ಸರ್ವರ ಹೃದಯದಲ್ಲಿಯೂ ಇದ್ದುಕೊಂಡು ಪ್ರೇರಕರಾಗಿರುವ ಈಶ್ವರರಾದ ನರನಾರಾಯಣರೇ ಇಲ್ಲಿ ಓಡಾಡುತ್ತಿರು ವಿರಿ - ಎಂದು ನಾನು ಭಾವಿಸಿದ್ದೇನೆ.

**ಶ್ರೀರಾಮೋ ಲಕ್ಷ್ಮಣಂ ಪ್ರಾಹ ಪಶ್ಯೈನಂ ಬಟುರೂಪಿಣಮ್ ।**
**ಶಬ್ದಶಾಸ್ತ್ರಮಶೇಷೇಣ ಶ್ರುತಂ ನೂನಮನೇಕಧಾ ॥ ೧೭ ॥**
**ಅನೇನ ಭಾಷಿತಂ ಕೃತ್ಸ್ನಂ ನ ಕಿಂಚಿದಪಶಬ್ದಿತಮ್ ।**
**ತತಃ ಪ್ರಾಹ ಹನೂಮಂತಂ ರಾಘವೋ ಜ್ಞಾನವಿಗ್ರಹಃ ॥ ೧೮ ॥**

೧೭-೧೮. ಶ್ರೀರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು. 'ಇದೊ, ಈ ವಟುರೂಪಿಯಾದ (ಕಪಿಯನ್ನು) ನೋಡು. ಇವನು ವ್ಯಾಕರಣಶಾಸ್ತ್ರವನ್ನು ಅನೇಕ ಸಲ ಪೂರ್ತಿಯಾಗಿ ಕೇಳಿರುವವನಾಗಿರುತ್ತಾನೆ. ಇವನು ಆಡಿದ ಮಾತುಗಳಲ್ಲಿ ಕೆಟ್ಟಶಬ್ದಗಳಾ ವುವೂ ಇರುವದಿಲ್ಲ.' ಎನ್ನುತ್ತಾ ಹನುಮಂತನನ್ನು ಕುರಿತು ಜ್ಞಾನಮೂರ್ತಿಯಾದ ರಾಮನು ಹೀಗೆಂದನು.

**ಅಹಂ ದಾಶರಥೀ ರಾಮಸ್ತ್ವಯಂ ಮೇ ಲಕ್ಷ್ಮಣೋಽನುಜಃ**
**ಸೀತಯಾ ಭಾರ್ಯಯಾ ಸಾರ್ಧಂ ಪಿತುರ್ವಚನಗೌರವಾತ್ ॥ ೧೯ ॥**
**ಆಗತಸ್ತತ್ರ ವಿಪಿನೇ ಸ್ಥಿತೋಽಹಂ ದಂಡಕೇ ದ್ವಿಜ ।**
**ತತ್ರ ಭಾರ್ಯಾ ಹೃತಾ ಸೀತಾ ರಕ್ಷಸಾ ಕೇನಚಿನ್ಮಮ ॥ ೨೦ ॥**
**ತಾಮನ್ವೇಷ್ಟುಮಿಹಾಯಾತೌ ತ್ವಂ ಕೋ ವಾ ಕಸ್ಯ ವಾ ವದ ।**

೧೯-೨೦. "ನಾನು ದಶರಥನ ಮಗನಾದ ರಾಮನು. ಈತನು ನನ್ನ ತಮ್ಮನಾದ ಲಕ್ಷ್ಮಣನು. ತಂದೆಯ ಮಾತಿನಲ್ಲಿ ವಿಶ್ವಾಸವಿಟ್ಟು ಹೆಂಡತಿಯಾದ ಸೀತೆಯೊಡನೆ ಕಾಡಿಗೆ ಬಂದೆನು. ಎಲೈ ವಟುವೆ, ಈ ದಂಡಕಾರಣ್ಯದಲ್ಲಿ ಯಾವನೋ ಒಬ್ಬ ರಾಕ್ಷಸನಿಂದ ನನ್ನ ಹೆಂಡತಿಯಾದ ಸೀತೆಯು ಕದಿಯಲ್ಪಟ್ಟಳು. ಆಕೆಯನ್ನು ಹುಡುಕುವದಕ್ಕಾಗಿ ನಾವಿಬ್ಬರೂ ಇಲ್ಲಿಗೆ ಬಂದಿರುತ್ತೇವೆ. ನೀನು ಯಾರು ? ಯಾರ ಕಡೆಯವನು ? ಹೇಳು".

**ಬಟುರುವಾಚ-**

**ಸುಗ್ರೀವೋ ನಾಮ ರಾಜಾ ಯೋ ವಾನರಾಣಾಂ ಮಹಾಮತಿಃ ।**
**ಚತುರ್ಭಿರ್ಮಂತ್ರಿಭಿಃ ಸಾರ್ಧಂ ಗಿರಿ ಮೂರ್ಧನಿ ತಿಷ್ಠತಿ ॥ ೨೧ ॥**
**ಭ್ರಾತಾ ಕನೀಯಾನ್ ಸುಗ್ರೀವೋ ವಾಲಿನಃ ಪಾಪಚೇತಸಃ ।**
**ತೇನ ನಿಷ್ಕಾಸಿತೋ ಭಾರ್ಯಾ ಹೃತಾ ತಸ್ಯೇಹ ವಾಲಿನಾ ॥ ೨೨ ॥**
**ತದ್ಭಯಾದೃಷ್ಯಮೂಕಾಖ್ಯಂ ಗಿರಿಮಾಶ್ರಿತ್ಯ ಸಂಸ್ಥಿತಃ ॥**

೨೧-೨೨. ಬ್ರಹ್ಮಚಾರಿಯು ಹೀಗೆಂದನು :ಕಪಿಗಳಿಗೆಲ್ಲ ಒಡೆಯನಾದ ಬುದ್ಧಿಶಾಲಿಯಾದ ಸುಗ್ರೀವನೆಂಬ ರಾಜನು ನಾಲ್ಕು ಜನ ತನ್ನ ಮಂತ್ರಿಗಳೊಡನೆ ಬೆಟ್ಟದ ತುದಿಯಲ್ಲಿದ್ದಾನೆ. ಪಾಪಿಷ್ಠನಾದ ವಾಲಿಯೆಂಬ ವಾನರನ ತಮ್ಮನಾದ ಈ ಸುಗ್ರೀವನು ಆತನಿಂದ ಓಡಿಸಲ್ಪಟ್ಟನು. ಹಾಗೂ ಈತನ ಹೆಂಡತಿಯು ವಾಲಿಯಿಂದ ಅಪಹರಿಸಲ್ಪಟ್ಟಿದ್ದಾಳೆ. ಆ (ವಾಲಿಯ) ಭಯದಿಂದಲೇ ಋಷ್ಯಮೂಕವೆಂಬ ಬೆಟ್ಟವನ್ನಾಶ್ರಯಿಸಿ ಇವನು ಇದ್ದುಕೊಂಡಿರುವನು.

**ಅಹಂ ಸುಗ್ರೀವಸಚಿವೋ ವಾಯುಪುತ್ರೋ ಮಹಾಮತೇ ।**
**ಹನುಮಾನ್ನಾಮ ವಿಖ್ಯಾತೋ ಹ್ಯಂಜನೀಗರ್ಭಸಂಭವಃ ॥ ೨೩ ॥**
**ತೇನ ಸಖ್ಯಂ ತ್ವಯಾ ಯುಕ್ತಂ ಸುಗ್ರೀವೇಣ ರಘೂತ್ತಮ ।**
**ಭಾರ್ಯಾಪಹಾರಿಣಂ ಹಂತುಂ ಸಹಾಯಸ್ತೇ ಭವಿಷ್ಯತಿ ॥ ೨೪ ॥**
**ಇದಾನೀಮೇವ ಗಚ್ಛಾಮ ಆಗಚ್ಛ ಯದಿ ರೋಚತೇ ।**

೨೩-೨೪. ''ನಾನು ಸುಗ್ರೀವನ ಮಂತ್ರಿಯಾದ, ವಾಯುವಿನ ಮಗನೂ ಅಂಜನಾದೇವಿಯ ಗರ್ಭದಲ್ಲಿ ಹುಟ್ಟಿದವನೂ ಆದ ಹನುಮಂತನೆಂಬ ಹೆಸರಿನವನು. ಎಲೈ ಮಹಾಬುದ್ಧಿಶಾಲಿಯೆ, ರಘೂತ್ತಮನೆ, ಸುಗ್ರೀವನೆಂಬ ಅವನೊಡನೆ ನಿನಗೆ ಸ್ನೇಹವು ಯೋಗ್ಯವಾಗಿದೆ. ನಿನ್ನ ಹೆಂಡತಿಯನ್ನು ಕದ್ದೊಯ್ದಿರುವವನನ್ನು ಕೊಲ್ಲಲು ನಿನಗೆ ಆತನು ಸಹಾಯಕನಾಗುವನು. ನೀನು ಇಷ್ಟಪಡುವದಾದರೆ ಈಗಲೇ ಹೋಗೋಣ, ಬರುವವನಾಗು.''

**ಶ್ರೀರಾಮ ಉವಾಚ-**

**ಅಹಮಪ್ಯಾಗತಸ್ತೇನ ಸಖ್ಯಂ ಕುರ್ತುಂ ಕಪೀಶ್ವರ ।**
**ಸಖ್ಯುಸ್ತಸ್ಯಾಪಿ ಯತ್ಕಾರ್ಯಂ ತತ್ಕರಿಷ್ಯಾಮ್ಯಸಂಶಯಮ್ ॥ ೨೫ ॥**
**ಹನೂಮಾನ್ ಸ್ವಸ್ವರೂಪೇಣ ಸ್ಥಿತೋ ರಾಮಮಥಾಬ್ರವೀತ್ ।**
**ಆರೋಹತಾಂ ಮಮ ಸ್ಕಂಧೌ ಗಚ್ಛಾಮಃ ಪರ್ವತೋಪರಿ ॥ ೨೬ ॥**
**ಯತ್ರ ತಿಷ್ಠತಿ ಸುಗ್ರೀವೋ ಮಂತ್ರಿಭಿರ್ವಾಲಿನೋ ಭಯಾತ್ ।**
**ತಥೇತಿ ತಸ್ಯಾರುರೋಹ ಸ್ಕಂಧಂ ರಾಮೋಽಥ ಲಕ್ಷ್ಮಣಃ ॥ ೨೭ ॥**

೨೫-೨೭. ಶ್ರೀರಾಮನಿಂತೆಂದನು : 'ಎಲೈ ಕಪೀಶ್ವರನೆ, ನಾನು ಕೂಡ ಅವನೊಡನೆ ಸ್ನೇಹವನ್ನು ಬೆಳಸುವದಕ್ಕಾಗಿಯೇ ಬಂದಿರುತ್ತೇನೆ. ಆ ಸ್ನೇಹಿತನ ಕಾರ್ಯ ವೇನಿದೆಯೋ ಅದನ್ನೂ ಮಾಡಿಕೊಡುವೆನು. ಈ ವಿಷಯದಲ್ಲಿ ಸಂಶಯವಿಲ್ಲ'. ಆಗ ಹನುಮಂತನು ತನ್ನ ನಿಜರೂಪದಿಂದ ಕಾಣಿಸಿಕೊಂಡವನಾಗಿ ರಾಮನನ್ನು ಕುರಿತು ಹೀಗೆಂದನು : 'ನನ್ನ ಭುಜಗಳನ್ನು ಏರಿರಿ ; ಪರ್ವತದ ಮೇಲಕ್ಕೆ ಹೋಗೋಣ. ಅಲ್ಲಿಯೇ ವಾಲಿಯ ಭಯದಿಂದ ಕೂಡಿದ ಸುಗ್ರೀವನು ಮಂತ್ರಿಗಳೊಡನೆ ಇದ್ದುಕೊಂಡಿರುವನು.' ಹಾಗೆಯೇ ಆಗಲೆಂದು ರಾಮನು ಹಾಗೂ ಲಕ್ಷ್ಮಣನೂ ಅವನ ಭುಜಗಳನ್ನೇರಿದರು.

**ಉತ್ಪಪಾತ ಗಿರೇರ್ಮೂರ್ಧ್ನಿ ಕ್ಷಣಾದೇವ ಮಹಾಕಪಿಃ ।**
**ವೃಕ್ಷಚ್ಛಾಯಾಂ ಸಮಾಶ್ರಿತ್ಯ ಸ್ಥಿತೌ ತೌ ರಾಮಲಕ್ಷ್ಮಣೌ ॥ ೨೮ ॥**
**ಹನುಮಾನಪಿ ಸುಗ್ರೀವಮುಪಗಮ್ಯ ಕೃತಾಂಜಲಿಃ ।**
**ವ್ಯೇತು ತೇ ಭಯಮಾಯಾತೌ ರಾಜನ್ ಶ್ರೀರಾಮಲಕ್ಷ್ಮಣೌ ॥ ೨೯॥**
**ಶೀಘ್ರಮುತ್ತಿಷ್ಠ ರಾಮೇಣ ಸಖ್ಯಂ ತೇ ಯೋಚಿತಂ ಮಯಾ**
**ಅಗ್ನಿಂ ಸಾಕ್ಷಿಣಮಾರೋಪ್ಯ ತೇನ ಸಖ್ಯಂ ದ್ರುತಂ ಕುರು ॥ ೩೦॥**

೨೮-೩೦. ಕ್ಷಣಮಾತ್ರದಲ್ಲಿ ಆ ಮಹಾಕಪಿಯು ಬೆಟ್ಟದ ಮೇಲೇರಿಬಿಟ್ಟನು. ಆ ರಾಮಲಕ್ಷ್ಮಣರಿಬ್ಬರೂ ಮರದ ನೆರಳನ್ನಾಶ್ರಯಿಸಿ ಕುಳಿತುಕೊಂಡರು. ಹನುಮಂತನಾದರೊ, ಸುಗ್ರೀವನ ಸಮೀಪಕ್ಕೆ ಬಂದು ಕೈಮುಗಿದುಕೊಂಡು 'ಎಲೈ ರಾಜನೆ, ನಿನ್ನ ಭಯವು ನಿವಾರಣೆಯಾಗಲಿ! ಶ್ರೀರಾಮಲಕ್ಷ್ಮಣರು ಬಂದಿರುತ್ತಾರೆ. ಬೇಗನೆ ಎದ್ದೇಳು. ರಾಮನೊಡನೆ ನಿನಗೆ ಸ್ನೇಹವು ದೊರಕುವಂತೆ ಏರ್ಪಡಿಸಿದ್ದೇನೆ ; ಅಗ್ನಿಯನ್ನು ಸಾಕ್ಷಿಯಾಗಿ ಮಾಡಿಕೊಂಡು ಅವನೊಡನೆ ಬೇಗನೆ ಸ್ನೇಹವನ್ನು ಮಾಡಿಕೊ'.

**ತತೋऽತಿಹರ್ಷಾತ್ ಸುಗ್ರೀವಃ ಸಮಾಗಮ್ಯ ರಘೂತ್ತಮಮ್ ।**
**ವೃಕ್ಷಶಾಖಾಂ ಸ್ವಯಂ ಛಿತ್ವಾ ವಿಷ್ಟರಾಯ ದದೌ ಮುದಾ ॥ ೩೧ ॥**
**ಹನೂಮಾನ್ ಲಕ್ಷ್ಮಣಾಯಾದಾತ್ ಸುಗ್ರೀವಾಯ ಚ ಲಕ್ಷ್ಮಣಃ ।**
**ಹರ್ಷೇಣ ಮಹತಾವಿಷ್ಟಾಃ ಸರ್ವ ಏವಾವತಸ್ಥಿರೇ ॥ ೩೨ ॥**

೩೧-೩೨. ಅನಂತರ ಬಹಳ ಆನಂದದಿಂದ ಸುಗ್ರೀವನು ರಾಮನಿದ್ದಲ್ಲಿಗೆ ಎದ್ದುಬಂದು ತಾನೇ ಒಂದು ಮರದ ರೆಂಬೆಯನ್ನು ಮುರಿದು ಆಸನಾರ್ಥವಾಗಿ ಕೊಟ್ಟನು. ಹಾಗೆಯೇ ಹನುಮಂತನು ಲಕ್ಷ್ಮಣನಿಗೂ ಸುಗ್ರೀವನಿಗೆ ಲಕ್ಷ್ಮಣನೂ ಆಸನಗಳನ್ನು ನೀಡಿದರು. ಎಲ್ಲರೂ ಬಹಳ ಸಂತೋಷದಿಂದ ಕೂಡಿದವರಾಗಿ ಕುಳಿತುಕೊಂಡರು.

**ಲಕ್ಷ್ಮಣಸ್ತ್ವಬ್ರವೀತ್ ಸರ್ವಂ ರಾಮವೃತ್ತಾಂತಮಾದಿತಃ ।**
**ವನವಾಸಾಭಿಗಮನಂ ಸೀತಾಹರಣಮೇವ ಚ ॥ ೩೩ ॥**
**ಲಕ್ಷ್ಮಣೋಕ್ತಂ ವಚಃ ಶ್ರುತ್ವಾ ಸುಗ್ರೀವೋ ರಾಮಮಬ್ರವೀತ್ ।**
**ಅಹಂ ಕರಿಷ್ಯೇ ರಾಜೇಂದ್ರ ಸೀತಾಯಾಃ ಪರಿಮಾರ್ಗಣಮ್ ॥ ೩೪ ॥**
**ಸಾಹಾಯ್ಯಮಪಿ ತೇ ರಾಮ ಕರಿಷ್ಯೇ ಶತ್ರುಘಾತಿನಃ ।**
**ಶೃಣು ರಾಮ ಮಯಾ ದೃಷ್ಟಂ ಕಿಂಚಿತ್ ತೇ ಕಥಯಾಮ್ಯಹಮ್ ॥ ೩೫ ॥**

೩೩-೩೫. ಲಕ್ಷ್ಮಣನು ಪ್ರಾರಂಭದಿಂದ ಈವರೆಗಿನ ರಾಮನ ಚರಿತ್ರೆಯನ್ನು- - ಎಂದರೆ ವನವಾಸಕ್ಕೆ ಹೊರಟದ್ದು, ಸೀತೆಯ ಅಪಹರಣ-ಮುಂತಾದದ್ದನ್ನೆಲ್ಲ (ಸುಗ್ರೀವನಿಗೆ) ಹೇಳಿದನು. ಲಕ್ಷ್ಮಣನ ಮಾತನ್ನು ಕೇಳಿ ಸುಗ್ರೀವನು ರಾಮನನ್ನು ಕುರಿತು ಇಂತೆಂದನು. 'ಎಲೈ ರಾಜೇಂದ್ರನೆ, ನಾನು ಸೀತೆಯನ್ನು ಹುಡುಕುವ ಕೆಲಸವನ್ನು ಮಾಡುವೆನು. ಮತ್ತು ಎಲೈ ರಾಮನೆ, ಶತ್ರುಸಂಹಾರಕನಾದ ನಿನಗೆ ಸಹಾಯವನ್ನೂ ಮಾಡುವೆನು. ಎಲೈ ರಾಮನೆ, ನಾನು ಕಂಡದ್ದು ಸ್ವಲ್ಪವಿಚಾರವನ್ನು ನಿನಗೆ ಹೇಳುವೆ, ಕೇಳು.

**ಏಕದಾ ಮಂತ್ರಿಭಿಃ ಸಾರ್ಧಂ ಸ್ಥಿತೋಽಹಂ ಗಿರಿಮೂರ್ಧನಿ ।**
**ವಿಹಾಯಸಾ ನೀಯಮಾನಾಂ ಕೇನಚಿತ್ ಪ್ರಮದೋತ್ತಮಾಮ್ ॥ ೩೬ ॥**
**ಕ್ರೋಶಂತೀಂ ರಾಮರಾಮೇತಿ ದೃಷ್ಟ್ವಾಽಸ್ಮಾನ್ ಪರ್ವತೋಪರಿ ।**
**ಆಮುಚ್ಯಾಭರಣಾನ್ಯಾಶು ಸ್ವೋತ್ತರೀಯೇಣ ಭಾಮಿನೀ ॥ ೩೭ ॥**
**ನಿರೀಕ್ಷ್ಯಾಧಃ ಪರಿತ್ಯಜ್ಯ ಕ್ರೋಶಂತೀ ತೇನ ರಕ್ಷಸಾ ।**
**ನೀತಾಽಹಂ ಭೂಷಣಾನ್ಯಾಶು ಗುಹಾಯಾಮಕ್ಷಿಪಂ ಪ್ರಭೋ ॥ ೩೮ ॥**

೩೬-೩೮. ಒಮ್ಮೆ ನಾನು ಮಂತ್ರಿಗಳೊಡನೆ ಬೆಟ್ಟದ ತುದಿಯಲ್ಲಿ ಕುಳಿತಿದ್ದೆನು. ಯಾವನೋ ಒಬ್ಬನಿಂದ ಆಕಾಶಮಾರ್ಗದಲ್ಲಿ ಒಯ್ಯಲ್ಪಡುತ್ತಾ, ರಾಮ ರಾಮ- ಎಂದು ಕಿರಿಚಿಕೊಳ್ಳುತ್ತಾ ಇರುವ ಒಂದು ಸ್ತ್ರೀರತ್ನವನ್ನು ಕಂಡೆನು. ಪರ್ವತದ ಮೇಲಿದ್ದ ನಮ್ಮಗಳನ್ನು ಕಂಡು ಬೇಗನೆ ಆಭರಣಗಳನ್ನು ಕಳಚಿ ತನ್ನ ಸೆರಗಿನಿಂದ ಕಟ್ಟಿ ಕೆಳಗೆ ನೋಡಿ ಕೂಗುತ್ತಾ ಎಸೆದುಬಿಟ್ಟಳು. ಆ ರಾಕ್ಷಸನಿಂದ ಒಯ್ಯಲ್ಪಟ್ಟಳು. ಪ್ರಭುವೆ, ನಾನು ಬೇಗನೆ ಆ ಒಡವೆಗಳನ್ನು ಗುಹೆಯಲ್ಲಿಟ್ಟೆನು.

**ಇದಾನೀಮಪಿ ಪಶ್ಯ ತ್ವಂ ಜಾನೀಹಿ ತವ ವಾ ನ ವಾ ।**
**ಇತ್ಯುಕ್ತ್ವಾನೀಯ ರಾಮಾಯ ದರ್ಶಯಾಮಾಸ ವಾನರಃ ॥ ೩೯ ॥**
**ವಿಮುಚ್ಯ ರಾಮಸ್ತದ್ದೃಷ್ಟ್ವಾ ಹಾ ಸೀತೇತಿ ಮುಹುರ್ಮುಹುಃ ।**
**ಹೃದಿ ನಿಕ್ಷಿಪ್ಯ ತತ್ಸರ್ವಂ ರುರೋದ ಪ್ರಾಕೃತೋ ಯಥಾ ॥ ೪೦ ॥**

೩೯-೪೦. 'ಈಗಲೂ ನೀನು ನೋಡು. ನಿನ್ನ (ಪತ್ನಿಯದು) ಹೌದೆ, ಅಲ್ಲವೆ - ಎಂಬುದನ್ನು ತಿಳಿಯುವವನಾಗು' ಎಂದು ಹೇಳಿ ಕಪಿಯು ರಾಮನಿಗೆ (ಒಡವೆಗಳ ಗಂಟನ್ನು) ತೋರಿಸಿದನು. ರಾಮನು ಆ ಗಂಟನ್ನು ಬಿಚ್ಚಿ ಅಯ್ಯೊ, ಸೀತೆ - ಎಂದು ಮತ್ತೆ ಮತ್ತೆ ವಿಲಾಪಮಾಡುತ್ತಾ ಅದೆಲ್ಲವನ್ನೂ ಎದೆಗೆ ಒತ್ತಿಕೊಂಡು ಸಾಮಾನ್ಯಮನುಷ್ಯನಂತೆಯೇ ಅತ್ತುಬಿಟ್ಟನು.

**ಆಶ್ವಾಸ್ಯ ರಾಘವಂ ಭ್ರಾತಾ ಲಕ್ಷ್ಮಣೋ ವಾಕ್ಯಮಬ್ರವೀತ್ ।**
**ಅಚಿರೇಣೈವ ತೇ ರಾಮ ಪ್ರಾಪ್ಯತೇ ಜಾನಕೀ ಶುಭಾ ॥ ೪೧ ॥**
**ವಾನರೇಂದ್ರಸಹಾಯೇನ ಹತ್ವಾ ರಾವಣಮಾಹವೇ ।**
**ಸುಗ್ರೀವೋಽಪ್ಯಾಹ ಹೇ ರಾಮ ಪ್ರತಿಜ್ಞಾಂ ಕರವಾಣಿ ತೇ ॥ ೪೨ ॥**
**ಸಮರೇ ರಾವಣಂ ಹತ್ವಾ ತವ ದಾಸ್ಯಾಮಿ ಜಾನಕೀಮ್ ।**

೪೧-೪೨. ಸೋದರನಾದ ಲಕ್ಷ್ಮಣನು ರಾಮನನ್ನು ಸಮಾಧಾನಗೊಳಿಸಿ ಹೀಗೆಂದನು. ''ಎಲೈ ರಾಮನೆ, ಕಪಿಶ್ರೇಷ್ಠನ ಸಹಾಯದಿಂದ ಯುದ್ಧದಲ್ಲಿ ರಾವಣನು

ಹತನಾಗಲು ಕ್ಷಿಪ್ರವಾಗಿ ನಿನಗೆ ಸೀತೆಯು ದೊರಕುತ್ತಾಳೆ. ಎಲೈ ರಾಮನೆ, ಇದೊ, ಪ್ರತಿಜ್ಞೆಮಾಡಿ ಹೇಳುವೆನು. ಯುದ್ಧದಲ್ಲಿ ರಾವಣನನ್ನು ಕೊಂದು ಸೀತೆಯನ್ನು ನಿನಗೆ ತಂದುಕೊಡುವೆನು - ಎಂದು ಸುಗ್ರೀವನು ಹೇಳಿರುತ್ತಾನೆ.''

**ತತೋ ಹನೂಮಾನ್ ಪ್ರಜ್ವಾಲ್ಯ ತಯೋರಗ್ನಿಂ ಸಮೀಪತಃ ।**
**ತಾವುಭೌ ರಾಮಸುಗ್ರೀವಾವಗ್ನೌ ಸಾಕ್ಷಿಣಿ ತಿಷ್ಠತಿ ॥ ೪೩ ॥**
**ಬಾಹೂ ಪ್ರಸಾರ್ಯ ಚಾಲಿಂಗ್ಯ ಪರಸ್ಪರಮಕಲ್ಮಷೌ ।**
**ಸಮೀಪೇ ರಘುನಾಥಸ್ಯ ಸುಗ್ರೀವಃ ಸಮುಪಾವಿಶತ್ ॥ ೪೪ ॥**

೪೩-೪೪. ಹನುಮಂತನು ಅವರಿಬ್ಬರ ಸಮೀಪದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿದ ಅನಂತರ ದೋಷರಹಿತರಾದ ರಾಮಸುಗ್ರೀವರಿಬ್ಬರೂ ಅಗ್ನಿಯು ಸಾಕ್ಷಿಯಾಗಿರಲಾಗಿ ಎರಡು ತೋಳುಗಳನ್ನೂ ಚಾಚಿ ಅನ್ಯೋನ್ಯವಾಗಿ ಆಲಿಂಗಿಸಿಕೊಂಡು (ಸ್ನೇಹಿತರಾದರು). ಸುಗ್ರೀವನು ರಾಮನ ಸಮೀಪದಲ್ಲಿ ಕುಳಿತನು.

**ಸ್ವೋದಂತಂ ಕಥಯಾಮಾಸ ಪ್ರಣಯಾದ್ ರಘುನಾಯಕೇ ।**
**ಸಖೇ ಶೃಣು ಮಮೋದಂತಂ ವಾಲಿನಾ ಯತ್ಕೃತಂ ಪುರಾ ॥ ೪೫ ॥**
**ಮಯಪುತ್ರೋಽಥ ಮಾಯಾವೀ ನಾಮ್ನಾ ಪರಮದುರ್ಮದಃ ।**
**ಕಿಷ್ಕಿಂಧಾಂ ಸಮುಪಾಗತ್ಯ ವಾಲಿನಂ ಸಮುಪಾಹ್ವಯತ್ ॥ ೪೬ ॥**
**ಸಿಂಹನಾದೇನ ಮಹತಾ ವಾಲೀ ತು ತದಮರ್ಷಣಃ ।**
**ನಿರ್ಯಯೌ ಕ್ರೋಧತಾಮ್ರಾಕ್ಷೋ ಜಘಾನ ದೃಢಮುಷ್ಟಿನಾ ॥ ೪೭ ॥**
**ದುದ್ರಾವ ತೇನ ಸಂವಿಗ್ನೋ ಜಗಾಮ ಸ್ವಗುಹಾಂ ಪ್ರತಿ ।**
**ಅನುದುದ್ರಾವ ತಂ ವಾಲೀ ಮಾಯಾವಿನಮಹಂ ತಥಾ ॥ ೪೮ ॥**

೪೫-೪೮. ಶ್ರೀರಾಮನಲ್ಲಿ ವಿಶ್ವಾಸದಿಂದ ತನ್ನ ವೃತ್ತಾಂತವನ್ನು ಹೇಳತೊಡಗಿದನು. 'ಎಲೌ ಸ್ನೇಹಿತನೆ, ನನ್ನ ಸುದ್ದಿಯನ್ನು - ಎಂದರೆ ವಾಲಿಯು ಹಿಂದೆ ಏನು ಮಾಡಿದನೆಂಬುದನ್ನು ಕೇಳು. ಮಯನ ಮಗನಾದ ಮಾಯಾವೀ ಎಂಬ ಬಹಳ ಕೊಬ್ಬಿದ ರಾಕ್ಷಸನೊಬ್ಬನು ಕಿಷ್ಕಿಂಧೆಗೆ ಬಂದು ಘಟ್ಟಿಯಾದ ಸಿಂಹನಾದವನ್ನು ಮಾಡಿ ವಾಲಿಯನ್ನು (ಯುದ್ಧಕ್ಕೆ) ಕರೆದನು. ಅದನ್ನು ಕೇಳಿದ ವಾಲಿಯು ಸಹಿಸಲಾಗದೆ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಹೊರಬಂದನು. ಹಾಗೂ ದೃಢವಾದ ಮುಷ್ಟಿಯಿಂದ ಗುದ್ದಿದನು. ಅದರಿಂದ ತತ್ತರಿಸಿಹೋದ ಆತನು ತನ್ನ ಗುಹೆಯ ಕಡೆಗೆ ಓಡಿಬಿಟ್ಟನು. ವಾಲಿಯು ಆ ಮಾಯಾವಿಯನ್ನು ಅಟ್ಟಿಸಿಕೊಂಡು ಹಿಂದೆ ಓಡಿದಾಗ ನಾನೂ ಅನುಸರಿಸಿದೆನು.

**ತತಃ ಪ್ರವಿಷ್ಟಮಾಲೋಕ್ಯ ಗುಹಾಂ ಮಾಯಾವಿನಂ ರುಷಾ ।**
**ವಾಲೀ ಮಾಮಾಹ ತಿಷ್ಠ ತ್ವಂ ಬಹಿರ್ಗಚ್ಛಾಮ್ಯಹಂ ಗುಹಾಮ್ ॥ ೪೯ ॥**
**ಇತ್ಯುಕ್ತ್ವಾವಿಶ್ಯ ಸ ಗುಹಾಂ ಮಾಸಮೇಕಂ ನ ನಿರ್ಯಯೌ ।**
**ಮಾಸಾದೂರ್ಧ್ವಂ ಗುಹಾದ್ವಾರಾತ್ ನಿಃಸೃತಂ ರುಧಿರಂ ಬಹು ॥ ೫೦ ॥**
**ತದ್ ದೃಷ್ಟ್ವಾ ಪರಿತಪ್ತಾಂಗೋ ಮೃತೋ ವಾಲೀತಿ ದುಃಖಿತಃ ।**
**ಗುಹಾದ್ವಾರಿ ಶಿಲಾಮೇಕಾಂ ನಿಧಾಯ ಗೃಹಮಾಗತಃ ॥ ೫೧ ॥**

೪೯-೫೧. ಅನಂತರ ಗುಹೆಯನ್ನು ಹೊಕ್ಕ ಮಾಯಾವಿಯನ್ನು ನೋಡಿ ಕೋಪದಿಂದ ವಾಲಿಯು .ನನ್ನನ್ನು ಕುರಿತು ''ನೀನು ಹೊರಗಡೆಯೇ ಇರು ; ನಾನು ಗುಹೆಯೊಳಗೆ ಹೋಗುವೆನು'' ಎಂದು ಹೇಳಿ ಅವನು ಗುಹೆಯನ್ನು ಹೊಕ್ಕು ಒಂದು ತಿಂಗಳಾದರೂ ಹೊರಗೆ ಬರಲಿಲ್ಲ. ಒಂದು ತಿಂಗಳ ಅನಂತರ ಗುಹೆಯ ದ್ವಾರದಿಂದ ಬಹಳವಾದ ರಕ್ತವು ಹರಿಯಿತು. ಅದನ್ನು ಕಂಡು ವಾಲಿಯು ಸತ್ತುಹೋದನೆಂದು ಬಹಳ ಕಳವಳಗೊಂಡವನಾಗಿ ಗುಹೆಯ ಬಾಯಿಗೆ ಒಂದು ದೊಡ್ಡ ಬಂಡೆಯನ್ನೊರಗಿಸಿ ಮನೆಗೆ ಬಂದೆನು.

**ತತೋಽಬ್ರವಂ ಹತೋ ವಾಲೀ ಗುಹಾಯಾಂ ತೇನ ರಕ್ಷಸಾ ।**
**ತಚ್ಛ್ರುತ್ವಾ ದುಃಖಿತಾಸ್ಸರ್ವೇ ಮಾಮನಿಚ್ಛಂತಮಪ್ಯುತ ॥ ೫೨ ॥**
**ರಾಜ್ಯೇಽಭಿಷೇಚನಂ ಚಕ್ರುಃ ಸರ್ವೇ ವಾನರಮಂತ್ರಿಣಃ ।**
**ಶಿಷ್ಟಂ ತದಾ ಮಯಾ ರಾಜ್ಯಂ ಕಿಂಚಿತ್ ಕಾಲಮರಿಂದಮ ॥ ೫೩ ॥**

೫೨-೫೩. ಅನಂತರ ನಾನು ಆ ರಾಕ್ಷಸನಿಂದ ಗುಹೆಯಲ್ಲಿ ವಾಲಿಯು ಹತನಾದನೆಂದು ಹೇಳಿದೆನು. ಅದನ್ನು ಕೇಳಿ ಎಲ್ಲರೂ ದುಃಖಪಟ್ಟವರಾಗಿ - ಮುಂದೆ ನಾನು ಬಯಸದೆ ಇದ್ದರೂ - ಎಲ್ಲಾ ಕಪಿಮಂತ್ರಿಗಳೂ ಸೇರಿ ನನ್ನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದರು. ಎಲೈ ಶತ್ರುನಾಶಕನೆ, ನಾನು ಆಗ ಕೆಲವು ಕಾಲ ರಾಜ್ಯವನ್ನು ಆಳಿದೆನು.

**ತತಃ ಸಮಾಗತೋ ವಾಲೀ ಮಾಮಾಹ ಪರುಷಂ ರುಷಾ ।**
**ಬಹುಧಾ ಭರ್ತ್ಸಯಿತ್ವಾ ಮಾಂ ನಿಜಘಾನ ಚ ಮುಷ್ಟಿಭಿಃ ॥ ೫೪ ॥**
**ತತೋ ನಿರ್ಗತ್ಯ ನಗರಾದಧಾವಂ ಪರಯಾ ಭಿಯಾ ।**
**ಲೋಕಾನ್ ಸರ್ವಾನ್ ಪರಿಕ್ರಮ್ಯ ಋಷ್ಯಮೂಕಂ ಸಮಾಶ್ರಿತಃ ॥ ೫೫ ॥**
**ಋಷೇಃ ಶಾಪಭಯಾತ್ ಸೋಽಪಿ ನಾಯಾತೀಮಂ ಗಿರಿಂ ಪ್ರಭೋ ।**
**ತದಾದಿ ಮಮ ಭಾರ್ಯಾಂ ಸ ಸ್ವಯಂ ಭುಂಕ್ತೇ ವಿಮೂಢಧೀಃ ॥ ೫೬ ॥**

**ಆರ್ತೋ ದುಃಖೇನ ಸಂತಪ್ತೋ ಹೃತದಾರೋ ಹೃತಾಶ್ರಯಃ ।**
**ವಸಾಮ್ಯದ್ಯ ಭವತ್ಪಾದಸಂಸ್ಪರ್ಶಾತ್ ಸುಖಿತೋಽಸ್ಮ್ಯಹಮ್ ॥ ೫೭ ॥**

೫೪-೫೭. ಅನಂತರ ವಾಲಿಯು ಬಂದವನಾಗಿ ಕೋಪದಿಂದ ನನ್ನನ್ನು ಕುರಿತು ಕಠಿನವಾಗಿ (ಬೈದು) ಬಹಳವಾಗಿ ಹೆದರಿಸಿ, ಮುಷ್ಟಿಗಳಿಂದ ಗುದ್ದಿದನು. ಅನಂತರ ಹೆಚ್ಚಿನ ಭಯದಿಂದ ನಾನು ಊರನ್ನು ಬಿಟ್ಟು ಹೊರಗೆ ಓಡಿದೆನು. ಎಲ್ಲಾ ಲೋಕಗಳನ್ನೂ ಸುತ್ತುಹೊಡೆದು ಈ ಋಷ್ಯಮೂಕವನ್ನು ಆಶ್ರಯಿಸಿದೆನು. ಆತನಾದರೊ, ಋಷಿಗಳ ಶಾಪಕ್ಕೆ ಹೆದರಿ ಎಲೈ ಪ್ರಭುವೆ, ಈ ಬೆಟ್ಟಕ್ಕೆ ಬರುತ್ತಿಲ್ಲ. ಆಗಿನಿಂದಲೂ ನನ್ನ ಹೆಂಡತಿಯನ್ನು ಮೂಢಬುದ್ಧಿಯ ಅವನು ತಾನೇ ಅನುಭವಿಸುತ್ತಿದ್ದಾನೆ. ಅದರಿಂದ ನಾನು ಬಹಳ ದುಃಖಿತನಾಗಿ ಹೆಂಡತಿಯನ್ನೂ ಆಶ್ರಯವನ್ನೂ ಕಳೆದುಕೊಂಡವನಾಗಿ ವಾಸವಾಗಿರುವೆನು. ಈಗ ನಿನ್ನ ಪಾದದಡಿಯಲ್ಲಿ ಅವುಗಳ ಸ್ಪರ್ಶದಿಂದ ಸುಖವನ್ನು ಹೊಂದಿದವನಾಗಿರುವೆನು.

**ಮಿತ್ರದುಃಖೇನ ಸಂತಪ್ತೋ ರಾಮೋ ರಾಜೀವಲೋಚನಃ ।**
**ಹನಿಷ್ಯಾಮಿ ತವ ದ್ವೇಷ್ಯಂ ಶೀಘ್ರಂ ಭಾರ್ಯಾಪಹಾರಿಣಮ್ ॥ ೫೮ ॥**
**ಇತಿ ಪ್ರತಿಜ್ಞಾಮಕರೋತ್ ಸುಗ್ರೀವಸ್ಯ ಪುರಸ್ತದಾ ।**

೫೮. ತನ್ನ ಮಿತ್ರನ ದುಃಖದಿಂದ ಸಂತಾಪಗೊಂಡ ರಾಜೀವಲೋಚನನಾದ ರಾಮನು ''ಎಲೈ ಮಿತ್ರನೆ, ನಿನ್ನ ಶತ್ರುವೂ ಹಾಗೂ ನಿನ್ನ ಹೆಂಡತಿಯನ್ನು ಅಪಹರಿಸಿದವನೂ ಆಗಿರುವವನನ್ನು ನಾನು ಕೊಲ್ಲುವೆನು'' ಎಂದು ಸುಗ್ರೀವನ ಮುಂದೆ (ರಾಮನು) ಪ್ರತಿಜ್ಞೆ ಮಾಡಿದನು.

**ಸುಗ್ರೀವೋಽಪ್ಯಾಹ ರಾಜೇಂದ್ರ, ವಾಲೀ ಬಲವತಾಂ ಬಲೀ ।**
**ಕಥಂ ಹನಿಷ್ಯತಿ ಭವಾನ್ ದೇವೈರಪಿ ದುರಾಸದಮ್ ॥ ೫೯ ॥**
**ಶೃಣು ತೇ ಕಥಯಿಷ್ಯಾಮಿ ತದ್ಬಲಂ ಬಲಿನಾಂ ವರ ।**
**ಕದಾಚಿದ್ದುಂದುಭಿರ್ನಾಮ ಮಹಾಕಾಯೋ ಮಹಾಬಲಃ ॥ ೬೦ ॥**
**ಕಿಷ್ಕಿಂಧಾಮಗಮದ್ರಾಮ ಮಹಾಮಹಿಷರೂಪಧೃಕ್ ।**
**ಯುದ್ಧಾಯ ವಾಲಿನಂ ರಾತ್ರೌ ಸಮಾಹ್ವಯತ ಭೀಷಣಃ ॥ ೬೧ ॥**
**ತಚ್ಛ್ರುತ್ವಾಸಹಮಾನೋಽಸೌ ವಾಲೀ ಪರಮಕೋಪನಃ ।**
**ಮಹಿಷಂ ಶೃಂಗಯೋರ್ಧೃತ್ವಾ ಪಾತಯಾಮಾಸ ಭೂತಲೇ ॥ ೬೨ ॥**

೫೯-೬೨. ಸುಗ್ರೀವನು ಇಂತೆಂದನು :ಎಲೈ ರಾಜೇಂದ್ರನೆ, ವಾಲಿಯು ಬಲಿಷ್ಠರಲ್ಲೆಲ್ಲ ಅತ್ಯಂತ ಬಲಶಾಲಿಯಾದವನು. ದೇವತೆಗಳಿಗೂ ಅಸಾಧ್ಯನಾದ ಅವನನ್ನು

ನೀನು ಹೇಗೆ ಕೊಲ್ಲುವೆ ? ಎಲೈ ಬಲಾಗ್ರಣಿಯೆ, ಆ (ವಾಲಿಯ) ಬಲವನ್ನು ಕುರಿತು ಹೇಳುವೆನು, ಕೇಳು. ಒಮ್ಮೆ ಮಹಾಶರೀರಿಯೂ ಹೆಚ್ಚಿನ ಬಲಶಾಲಿಯೂ ಆದ ದುಂದುಭಿ ಎಂಬ ರಾಕ್ಷಸನು ದೊಡ್ಡ ಕೋಣನ ರೂಪವನ್ನು ಧರಿಸಿ ಕಿಷ್ಕಿಂಧೆಗೆ ಬಂದನು. ಎಲೈ ರಾಮನೆ, ಅವನು ರಾತ್ರಿವೇಳೆಯಲ್ಲಿ ವಾಲಿಯನ್ನು ಯುದ್ಧಕ್ಕೆ ಕರೆದನು. ಅದನ್ನು ಕೇಳಿ ಸಹಿಸಲಾರದೆ ಈ ಕೋಪಿಷ್ಠನಾದ ವಾಲಿಯು ಎರಡು ಕೋಡುಗಳಿಂದ ಆ ಕೋಣನನ್ನು ಮೇಲೆತ್ತಿ ನೆಲಕ್ಕೆ ಎಸೆದುಬಿಟ್ಟನು.

**ಪಾದೇನೈಕೇನ ತತ್ಕಾಯಮಾಕ್ರಮ್ಯಾಸ್ಯ ಶಿರೋ ಮಹತ್ ।**
**ಹಸ್ತಾಭ್ಯಾಂ ಭ್ರಾಮಯನ್ ಛಿತ್ವಾ ತೋಲಯಿತ್ವಾಕ್ಷಿಪದ್ ಭುವಿ ॥ ೬೩ ॥**
**ಪಪಾತ ತಚ್ಛಿರೋ ರಾಮ ಮಾತಂಗಾಶ್ರಮಸನ್ನಿಧೌ ।**
**ಯೋಜನಾತ್ಪರಿತಂ ತಸ್ಮಾನ್ಮುನೇರಾಶ್ರಮಮಂಡಲೇ ॥ ೬೪ ॥**
**ರಕ್ತವೃಷ್ಟಿಃ ಪಪಾತೋಚ್ಚೈಃ ದೃಷ್ಟ್ವಾ ತಾಂ ಕ್ರೋಧಮೂರ್ಛಿತಃ ।**
**ಮಾತಂಗೋ ವಾಲಿನಂ ಪ್ರಾಹ ಯದ್ಯಾಗಂತಾಸಿ ಮೇ ಗಿರಿಮ್ ॥ ೬೫ ॥**
**ಇತಃ ಪರಂ ಭಗ್ನಶಿರಾ ಮರಿಷ್ಯಸಿ ನ ಸಂಶಯಃ ।**
**ಏವಂ ಶಪ್ತಸ್ತದಾರಭ್ಯ ಋಷ್ಯಮೂಕಂ ನ ಯಾತ್ಯಸೌ ॥ ೬೬ ॥**

೬೩-೬೬. ತನ್ನ ಒಂದು ಕಾಲಿನಿಂದ ಅವನ ಶರೀರವನ್ನು ಮೆಟ್ಟಿ ದೊಡ್ಡದಾದ ಆ ರಾಕ್ಷಸನ ತಲೆಯನ್ನು ತುಂಡರಿಸಿ ಎರಡು ಕೈಗಳಿಂದಲೂ ತಿರುಗಿಸಿ ನೆಲದಮೇಲೆ (ದೂರಕ್ಕೆ) ಎಸೆದುಬಿಟ್ಟನು. ಎಲೈ ರಾಮನೆ, ಆ ತಲೆಯು ಮತಂಗ ಋಷಿಗಳ ಆಶ್ರಮದ ಹತ್ತಿರ ಬಿದ್ದಿತು. ಇದರಿಂದ ಒಂದು ಯೋಜನದ ಸುತ್ತಲೂ ಆ ಋಷಿಗಳ ಆಶ್ರಮಭೂಮಿಯಲ್ಲಿ ದೊಡ್ಡದಾದ ರಕ್ತದ ಮಳೆಯೇ ಬಿದ್ದಿತು. ಅದನ್ನು ಕಂಡು ಕೋಪದಿಂದ ಕೆರಳಿದ ಮತಂಗಋಷಿಯು ವಾಲಿಯನ್ನು ಕುರಿತು 'ನೀನೇನಾದರೂ ಇನ್ನು ಮುಂದೆ ನನ್ನ ಬೆಟ್ಟಕ್ಕೆ ಬರುವೆಯಾದರೆ ತಲೆಯೊಡೆದು ಸಾಯುವೆ. ಈ ಬಗ್ಗೆ ಸಂಶಯವಿಲ್ಲ' ಎಂದು (ಶಪಿಸಿದನು). ಹೀಗೆ ಶಾಪಗೊಂಡ ಮೇಲೆ ಅಂದಿನಿಂದ ಅವನು ಋಷ್ಯಮೂಕಕ್ಕೆ ಬರುವದಿಲ್ಲ.

**ಏತದ್ ಜ್ಞಾತ್ವಾಹಮಪ್ಯತ್ರ ವಸಾಮಿ ಭಯವರ್ಜಿತಃ ।**
**ರಾಮ ಪಶ್ಯ ಶಿರಸ್ತಸ್ಯ ದುಂದುಭೇಃ ಪರ್ವತೋಪಮಮ್ ॥ ೬೭ ॥**
**ತತ್ ಕ್ಷೇಪಣೇ ಯದಾ ಶಕ್ತಃ ಶಕ್ತಸ್ತ್ವಂ ವಾಲಿನೋ ವಧೇ ।**
**ಇತ್ಯುಕ್ತ್ವಾ ದರ್ಶಯಾಮಾಸ ಶಿರಸ್ತದ್ಗಿರಿಸಂನಿಭಮ್ ॥ ೬೮ ॥**

೬೭-೬೮. ಇದನ್ನು ತಿಳಿದು ನಾನು ಇಲ್ಲಿ ಭಯವಿಲ್ಲದವನಾಗಿ ವಾಸಮಾಡುತ್ತಿರುವೆನು. ಎಲೈ ರಾಮನೆ, ಆ ಪರ್ವತಸಮಾನವಾದ ದಂದುಭಿಯ

ತಲೆಯನ್ನು ನೋಡು. ಅದನ್ನು ಎಸೆಯುವದರಲ್ಲಿ ನೀನು ಸಮರ್ಥನಾಗುವೆಯಾದರೆ ವಾಲಿಯನ್ನು ಸಂಹರಿಸುವದರಲ್ಲಿಯೂ ಶಕ್ತನೆನಿಸುವೆ. ಹೀಗೆಂದು ಹೇಳಿ ಬೆಟ್ಟದಂತಿರುವ ಆ ತಲೆಯನ್ನು ತೋರಿಸಿದನು.

**ದೃಷ್ಟ್ವಾ ರಾಮಃ ಸ್ಮಿತಂ ಕೃತ್ವಾ ಪಾದಾಂಗುಷ್ಠೇನ ಚಾಕ್ಷಿಪತ್ ।**
**ದಶಯೋಜನಪರ್ಯಂತಂ ತದದ್ಭುತಮಿವಾಭವತ್ ॥ ೧೯ ॥**
**ಸಾಧು ಸಾಧ್ವಿತಿ ಸಂಪ್ರಾಹ ಸುಗ್ರೀವೋ ಮಂತ್ರಿಭಿಃ ಸಹ ।**
**ಪುನರಪ್ಯಾಹ ಸುಗ್ರೀವೋ ರಾಮಂ ಭಕ್ತಪರಾಯಣಮ್ ॥ ೨೦ ॥**

೧೯-೨೦. ರಾಮನು ಅದನ್ನು ನೋಡಿ ಮುಗುಳುನಕ್ಕು ತನ್ನ ಕಾಲಿನ ಅಂಗುಷ್ಠದಿಂದ ಹತ್ತುಯೋಜನಗಳ ದೂರದವರೆಗೆ ಎತ್ತಿ ಎಸೆದನು. ಅದೊಂದು ಆಶ್ಚರ್ಯಕರವಾದ ಘಟನೆಯಾಯಿತು. ಸುಗ್ರೀವನು ಮಂತ್ರಿಗಳೊಡನೆ ಸಾಧು, (ಭಲೇ) ಎಂದು ಕೂಗಿದನು. ಮತ್ತೆ ಭಕ್ತಪರಾಯಣನಾದ ರಾಮನನ್ನು ಕುರಿತು ಹೀಗೆಂದನು :

**ಏತೇ ತಾಲಾ ಮಹಾಸಾರಾಃ ಸಪ್ತ ಪಶ್ಯ ರಘೂತ್ತಮ ।**
**ಏಕೈಕಂ ಚಾಲಯಿತ್ವಾಸೌ ನಿಷ್ಪತ್ರಾನ್ ಕುರುತೇಽಞ್ಜಸಾ ॥ ೨೧ ॥**
**ಯದಿ ತ್ವಮೇಕಬಾಣೇನ ವಿದ್ಧ್ವಾ ಛಿದ್ರಂ ಕರೋಷಿ ಚೇತ್ ।**
**ಹತಸ್ತ್ವಯಾ ತದಾ ವಾಲೀ ವಿಶ್ವಾಸೋ ಮೇ ಪ್ರಜಾಯತೇ ॥ ೨೨॥**
**ತಥೇತಿ ಧನುರಾದಾಯ ಸಾಯಕಂ ತತ್ರ ಸಂದಧೇ ।**
**ಬಿಭೇದ ಚ ತದಾ ರಾಮಃ ಸಪ್ತತಾಲಾನ್ ಮಹಾಬಲಃ ॥ ೨೩ ॥**
**ತಾಲಾನ್ ಸಪ್ತ ವಿನಿರ್ಭಿದ್ಯ ಗಿರಿಂ ಭೂಮಿಂ ಚ ಸಾಯಕಃ ।**
**ಪುನರಾಗತ್ಯ ರಾಮಸ್ಯ ತೂಣೀರೇ ಪೂರ್ವವತ್ ಸ್ಥಿತಃ ॥ ೨೪ ॥**

೨೧-೨೪. ''ಎಲೈ ರಘುಶ್ರೇಷ್ಠನೆ, ಇದೊ, ಈ ಬಹಳ ಗಟ್ಟಿಯಾದ ಏಳು ತಾಳೆಯ ಹೆಮ್ಮರಗಳನ್ನು ನೋಡು. (ಈ ವಾಲಿಯು) ಒಂದೊಂದನ್ನೂ ಅಳ್ಳಾಡಿಸಿ ಒಮ್ಮೆಗೇ ಎಲೆಗಳಿಲ್ಲದಂತೆ ಮಾಡುತ್ತಿದ್ದನು. ನೀನಾದರೊ, ಒಂದು ಬಾಣದಿಂದ ಇವುಗಳನ್ನು ಹೊಡೆದು ತುಂಡುಮಾಡುವೆಯಾದರೆ ಆಗ ನಿನ್ನಿಂದ ವಾಲಿಯು ಹತನಾದನೆಂದೇ ನಾನು ಬಲವಾಗಿ ನಂಬುವೆನು'' - ಎಂದನು. ಹಾಗೆಯೇ ಆಗಲೆಂದು (ರಾಮನು) ಅಲ್ಲಿ ಬಿಲ್ಲಿಗೆ ಬಾಣವನ್ನು ಹೂಡಿದನು. ಮಹಾಬಲಿಷ್ಠನಾದ ಆತನು (ಅವುಗಳನ್ನು) ಕತ್ತರಿಸಿದನು. ಆ(ರಾಮ) ಬಾಣವು ತಾಳೆಮರಗಳನ್ನೂ ಕೆಡವಿ ಬೆಟ್ಟವನ್ನೂ ಭೂಮಿಯನ್ನೂ ಕೊರೆದು ಮತ್ತೆ ರಾಮನ ಬತ್ತಳಿಕೆ ಯಲ್ಲಿಯೇ ಹಿಂದಿನಂತೆ ಸೇರಿಕೊಂಡಿತು.

**ತತೋಽತಿಹರ್ಷಾತ್ ಸುಗ್ರೀವೋ ರಾಮಮಾಹಾತಿವಿಸ್ಮಿತಃ ।**
**ದೇವ ತ್ವಂ ಜಗತಾಂ ನಾಥ ಪರಮಾತ್ಮಾ ನ ಸಂಶಯಃ ॥ ೭೫ ॥**
**ಮತ್ಪೂರ್ವಕೃತಪುಣ್ಯೌಘೈಃ ಸಂಗತೋಽದ್ಯ ಮಯಾ ಸಹ ।**
**ತ್ವಾಂ ಭಜಂತಿ ಮಹಾತ್ಮಾನಃ ಸಂಸಾರವಿನಿವೃತ್ತಯೇ ॥ ೭೬ ॥**
**ತ್ವಾಂ ಪ್ರಾಪ್ಯ ಮೋಕ್ಷಸಚಿವಂ ಪ್ರಾರ್ಥಯೇಽಹಂ ಕಥಂ ಭವಮ್ ।**
**ದಾರಾಃ ಪುತ್ರಾ ಧನಂ ರಾಜ್ಯಂ ಸರ್ವಂ ತ್ವನ್ಮಾಯಯಾ ಕೃತಮ್ ॥ ೭೭ ॥**
**ಅತೋಽಹಂ ದೇವದೇವೇಶ ನಾಕಾಂಕ್ಷೇಽನ್ಯತ್ ಪ್ರಸೀದ ಮೇ ।**

೭೫-೭೭. ಅನಂತರ ಬಹಳ ಸಂತೋಷದಿಂದ ಸುಗ್ರೀವನು ಅತಿಯಾಗಿ ಆಶ್ಚರ್ಯಗೊಂಡವನಾಗಿ ರಾಮನನ್ನು ಕುರಿತು ಹೀಗೆಂದನು : ''ಎಲೈ ದೇವನೆ, ಜಗತ್ಪತಿಯೆ, ನೀನು ಪರಮಾತ್ಮನೇ ; ಇದರಲ್ಲಿ ಸಂಶಯವಿಲ್ಲ. ಈಗ ನನ್ನ ಹಿಂದಿನ (ಜನ್ಮದ) ಪುಣ್ಯಗಳ ರಾಶಿಯ ಫಲವಾಗಿ ನನ್ನೊಡನೆ ಬಂದು ಸೇರಿದ್ದೀಯೆ. ಸಂಸಾರದಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿ ಮಹಾತ್ಮರು ನಿನ್ನನ್ನು ಸೇವಿಸುತ್ತಾರೆ. ಮೋಕ್ಷಕ್ಕೆ ಮಾರ್ಗದರ್ಶಿಯಾದ ನಿನ್ನನ್ನು ಹೊಂದಿ ನಾನು ಈ ಸಂಸಾರ(ಸುಖ)ಗಳನ್ನು ಹೇಗೆ ಬೇಡಲಿ ? ಹೆಂಡತಿ, ಮಕ್ಕಳು, ಹಣ, ರಾಜ್ಯ - ಈ ಎಲ್ಲವೂ ನಿನ್ನ ಮಾಯೆಯಿಂದುಂಟಾದದ್ದಾಗಿದೆ .ಆದ್ದರಿಂದ ಎಲೈ ದೇವದೇವೇಶನೆ, ನಾನು ಬೇರೇನನ್ನೂ ಬಯಸುವದಿಲ್ಲ. ನೀನು ನನಗೆ ಪ್ರಸನ್ನನಾಗು.''

**ಆನಂದಾನುಭವಂ ತ್ವದ್ಯ ಪ್ರಾಪ್ತೋಽಹಂ ಭಾಗ್ಯಗೌರವಾತ್ ।**
**ಮದರ್ಥಂ ಯತಮಾನೇನ ನಿದಾನಮಿವ ಸತ್ಪತೇ ॥ ೭೮ ॥**
**ಅನಾದ್ಯವಿದ್ಯಾಸಂಸಿದ್ಧಂ ಬಂಧನಂ ಛಿನ್ನಮದ್ಯ ನಃ ।**
**ಯಜ್ಞದಾನತಪಃಕರ್ಮಪೂರ್ತೇಷ್ಟಾದಿಭಿರಪ್ಯಸೌ ॥ ೭೯ ॥**
**ನ ಜೀರ್ಯತೇ ಪುನರ್ದಾರ್ಢ್ಯಂ ಭಜತೇ ಸಂಸೃತಿಃ ಪ್ರಭೋ ।**
**ತ್ವತ್ಪಾದದರ್ಶನಾತ್ ಸದ್ಯೋ ನಾಶಮೇತಿ ನ ಸಂಶಯಃ ॥ ೮೦ ॥**

೭೮-೮೦. ನಾನು ಪುಣ್ಯವಿಶೇಷದಿಂದ ಆನಂದಾನುಭವರೂಪನಾದ ನಿನ್ನನ್ನು ಪಡೆದುಕೊಂಡಿದ್ದೇನೆ. ಮಣ್ಣಿಗಾಗಿ ಪ್ರಯತ್ನಪಡುತ್ತಿರುವವನಿಗೆ ನಿಧಿಯೇ ದೊರೆತಂತೆ ಈಗ ನನ್ನ ಸ್ಥಿತಿಯಾಗಿದೆ. ಅನಾದಿಯಾದ ಅವಿದ್ಯೆಯಿಂದುಂಟಾಗಿದ್ದ ಬಂಧನವು ಈಗ ಕಳೆಯಿತು. ಈ(ಸಂಸಾರಬಂಧವು) ಯಜ್ಞ, ದಾನ, ತಪಸ್ಸು, ನಿತ್ಯಕರ್ಮಗಳು, ಇಷ್ಟಾಪೂರ್ತಗಳೇ ಮುಂತಾದ ಪುಣ್ಯಕೆಲಸಗಳು - ಹೀಗೆ ಯಾವದರಿಂದಲೂ ಸಡಿಲವಾಗುವದಿಲ್ಲ. ಸಂಸಾರವು ಮತ್ತೆ (ಇವುಗಳಿಂದ)

ದೃಢವಾಗುತ್ತಲೇ ಇರುವದು. ಆದರೆ ಎಲೈ ಪ್ರಭುವೆ, ನಿನ್ನ ಪಾದದರ್ಶನದಿಂದ ಕೂಡಲೆ ನಾಶವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಕ್ಷಣಾರ್ಧಮಪಿ ಯಚ್ಚಿತ್ತಂ ತ್ವಯಿ ತಿಷ್ಠತ್ಯಚಂಚಲಮ್ ।**
**ತಸ್ಯಾಜ್ಞಾನಮನರ್ಥಾನಾಂ ಮೂಲಂ ನಶ್ಯತಿ ತತ್ ಕ್ಷಣಾತ್ ॥ ೮೧ ॥**
**ತತ್ತಿಷ್ಠತು ಮನೋ ರಾಮ ತ್ವಯಿ ನಾನ್ಯತ್ರ ಮೇ ಸದಾ ।**
**ರಾಮರಾಮೇತಿ ಯದ್ವಾಣೀ ಮಧುರಂ ಗಾಯತಿ ಕ್ಷಣಮ್ ॥ ೮೨ ॥**
**ಸ ಬ್ರಹ್ಮಹಾ ಸುರಾಪೋ ವಾ ಮುಚ್ಯತೇ ಸರ್ವಪಾತಕೈಃ ।**

೮೧-೮೨. ಯಾವನ ಮನಸ್ಸು ಅರೆಕ್ಷಣವಾದರೂ ಅಳ್ಳಾಡದೆ ನಿನ್ನಲ್ಲಿ ನಿಂತದ್ದಾದರೆ ಅನರ್ಥಗಳಿಗೆಲ್ಲ ಕಾರಣವಾದ ಅಂಥವನ ಅವಿದ್ಯೆಯು ಕೂಡಲೆ ನಾಶವಾಗುತ್ತದೆ. ಆದ್ದರಿಂದ ಎಲೈ ರಾಮನೆ, ನನ್ನ ಮನಸ್ಸು ಬೇರೆಲ್ಲಿಯೂ ಹೋಗದೆ ಯಾವಾಗಲೂ ನಿನ್ನಲ್ಲಿ ನಿಲ್ಲಲಿ ! ಯಾವನ ಮಾತು ರಾಮ, ರಾಮ ! ಎಂದು ಇಂಪಾಗಿ ಹಾಡುವದೋ ಅಂಥವನು ಮದ್ಯಪಾನಮಾಡಿದವನಾಗಲಿ, ಬ್ರಹ್ಮಹತ್ಯೆಯನ್ನೆಸಗಿದವ ನಾಗಲಿ - ಎಲ್ಲಾ ಪಾಪಗಳಿಂದಲೂ ಬಿಡಲ್ಪಡುವವನಾಗುವನು.

**ನ ಕಾಂಕ್ಷೇ ವಿಜಯಂ ರಾಮ ನ ಚ ದಾರಸುಖಾದಿಕಮ್ ।**
**ಭಕ್ತಿಮೇವ ಸದಾ ಕಾಂಕ್ಷೇ ತ್ವಯಿ ಬಂಧವಿಮೋಚನೀಮ್ ॥ ೮೩ ॥**
**ತ್ವನ್ಮಾಯಾಕೃತಸಂಸಾರಸ್ತ್ವದಂಶೋಽಹಂ ರಘೂತ್ತಮ ।**
**ಸ್ವಪಾದಭಕ್ತಿಮಾದಿಶ್ಯ ತ್ರಾಹಿ ಮಾಂ ಭವಸಂಕಟಾತ್ ॥ ೮೪ ॥**
**ಪೂರ್ವಂ ಮಿತ್ರಾರ್ಯುದಾಸೀನಾಸ್ತ್ವನ್ಮಾಯಾವೃತಚೇತಸಃ ।**
**ಆಸನ್ ಮೇಽದ್ಯ ಭವತ್ಪಾದದರ್ಶನಾದೇವ ರಾಘವ ॥ ೮೫ ॥**
**ಸರ್ವಂ ಬ್ರಹ್ಮೈವ ಮೇ ಭಾತಿ ಕ್ವ ಮಿತ್ರಂ ಕ್ವ ಚ ಮೇ ರಿಪುಃ ।**

೮೩-೮೫. ಎಲೈ ರಾಮನೆ, ನಾನು ಹೆಂಡತಿ ಮುಂತಾದ ಸುಖವನ್ನಾಗಲಿ, ವಿಜಯವನ್ನಾಗಲಿ, ಬಯಸುತ್ತಿಲ್ಲ. ಸಂಸಾರದಿಂದ ಬಿಡುಗಡೆಮಾಡುವಂಥ ಭಕ್ತಿಯನ್ನೇ ಯಾವಾಗಲೂ ಬಯಸುವೆನು. ಎಲೈ ರಘೂತ್ತಮನೆ, ಸಂಸಾರವು ನಿನ್ನ ಮಾಯೆ ಯಿಂದಾದದ್ದಾಗಿದೆ. ನಾನು ನಿನ್ನ ಅಂಶವಾಗಿರುವೆನು. ನಿನ್ನ ಪಾದಭಕ್ತಿಯನ್ನನುಗ್ರಹಿಸಿ ನನ್ನನ್ನು ಸಂಸಾರದುಃಖದಿಂದ ಕಾಪಾಡು. ನಿನ್ನ ಮಾಯೆಯಿಂದ ಮುಚ್ಚಲ್ಪಟ್ಟ ಮನಸ್ಸಿನ ನನಗೆ ಈ ಹಿಂದೆ ಸ್ನೇಹಿತರು, ಶತ್ರುಗಳು, ಉದಾಸೀನರು, ಕಾಣುತ್ತಿದ್ದರು. ಎಲೈ ರಾಘವನೆ, ಈಗ ನಿನ್ನ ಪಾದದರ್ಶನಮಾತ್ರದಿಂದ ಅವರೆಲ್ಲರೂ ನನಗೆ ಬ್ರಹ್ಮವಾಗಿಯೇ ಕಾಣುತ್ತಿದ್ದಾರೆ. ಹೀಗಿರುವಲ್ಲಿ ನನಗೆ ಮಿತ್ರನು ಯಾರು ? ಶತ್ರುವು ಯಾವನಿದ್ದಾನು ?

**ಯಾವತ್ ತ್ವನ್ಮಾಯಯಾ ಬದ್ಧಸ್ತಾವದ್ ಗುಣವಿಶೇಷತಾ ।**
**ಸಾ ಯಾವದಸ್ತಿ ನಾನಾತ್ವಂ ತಾವದ್ಭವತಿ ನಾನ್ಯಥಾ ॥ ೮೬ ॥**
**ಯಾವನ್ನಾನಾತ್ವಮಜ್ಞಾನಾತ್ ತಾವತ್ ಕಾಲಕೃತಂ ಭಯಮ್ ।**
**ಅತೋಽವಿದ್ಯಾಮುಪಾಸ್ತೇ ಯಃ ಸೋಽನ್ಧೇ ತಮಸಿ ಮಜ್ಜತಿ ॥ ೮೭ ॥**
**ಮಾಯಾಮೂಲಮಿದಂ ಸರ್ವಂ ಪುತ್ರದಾರಾದಿಬಂಧನಮ್ ।**
**ತದುತ್ಸಾರಯ ಮಾಯಾಂ ತ್ವಂ ತವ ದಾಸೀಂ ರಘೂತ್ತಮ ॥ ೮೮ ॥**

೮೬-೮೮. ಎಲ್ಲಿಯವರೆಗೆ ನಿನ್ನ ಮಾಯೆಯಿಂದ (ಜೀವನು) ಬದ್ಧನಾಗಿರುವನೋ ಅಲ್ಲಿಯವರೆಗೂ ಗುಣಗಳ ಪ್ರಭಾವವೂ, ಅದು ಇರುವವರೆಗೂ ನಾನಾತ್ವವೂ ಇದ್ದುಕೊಂಡಿರುವದು. ಇದು ಬೇರೆ ರೀತಿಯಾಗಲಾರದು. ಹೀಗೆ ಅಜ್ಞಾನ ದಿಂದುಂಟಾದ ನಾನಾತ್ವವಿರುವವರೆಗೂ ಮೃತ್ಯುವಿನ ಭಯವಿರುವದು. ಆದ್ದರಿಂದ ಯಾವನು ಈ ಅವಿದ್ಯೆ(ನಾನಾತ್ವ)ಯನ್ನು ಚಿಂತಿಸುವನೋ ಅವನು ಕಗ್ಗತ್ತಲಿನಲ್ಲಿ (ಸಂಸಾರದಲ್ಲಿ) ಮುಳುಗುವನು. ಈ ಮಗ-ಹೆಂಡತಿ, ಮುಂತಾದ ಬಂಧನಗಳೆಲ್ಲವೂ ಮಾಯೆಯ ನಿಮಿತ್ತವಾಗಿಯೇ ಉಂಟಾದವುಗಳು. ಆದ್ದರಿಂದ ಎಲೈ ರಘೂತ್ತಮನೆ, ನಿನ್ನ ದಾಸಿಯಾಗಿರುವ ಮಾಯೆಯನ್ನು ನೀನು ಹೋಗಲಾಡಿಸುವವನಾಗು.

**ತ್ವತ್ಪಾದಪದ್ಮಾರ್ಪಿತಚಿತ್ತವೃತ್ತಿಃ**
**ತ್ವನ್ನಾಮಸಂಗೀತಕಥಾಸು ವಾಣೀ ।**
**ತ್ವದ್ಭಕ್ತಸೇವಾನಿರತೌ ಕರೌ ಮೇ**
**ತ್ವದಂಗಸಂಗಂ ಲಭತಾಂ ಮದಂಗಮ್ ॥ ೮೯ ॥**
**ತ್ವನ್ಮೂರ್ತಿಭಕ್ತಾನ್ ಸ್ವಗುರುಂ ಚ ಚಕ್ಷುಃ**
**ಪಶ್ಯತ್ವಜಸ್ರಂ ಸ ಶೃಣೋತು ಕರ್ಣಃ ।**
**ತ್ವಜ್ಜನ್ಮಕರ್ಮಾಣಿ ಚ ಪಾದಯುಗ್ಮಂ**
**ವ್ರಜತ್ವಜಸ್ರಂ ತವ ಮಂದಿರಾಣಿ ॥ ೯೦ ॥**
**ಅಂಗಾನಿ ತೇ ಪಾದರಜೋವಿಮಿಶ್ರ-**
**ತೀರ್ಥಾನಿ ಬಿಭ್ರತ್ವಹಿಶತ್ರುಕೇತೋಃ ।**
**ಶಿರಸ್ತ್ವದೀಯಂ ಭವಪದ್ಮಜಾದ್ಯೈ-**
**ರ್ಜುಷ್ಟಂ ಪದಂ ರಾಮ ನಮತ್ವಜಸ್ರಮ್ ॥ ೯೧ ॥**

೮೯-೯೧. ನನ್ನ ಚಿತ್ತವೃತ್ತಿಯು ನಿನ್ನ ಪಾದಪದ್ಮಗಳಲ್ಲಿಯೇ ನೆಟ್ಟಗುರಿ ಯುಳ್ಳದ್ದಾಗಿಯೂ ಮಾತು ನಿನ್ನ ನಾಮಸಂಕೀರ್ತನರೂಪವಾದ ಕಥೆಗಳಲ್ಲಿಯೂ ಎರಡೂ ಕೈಗಳು ನಿನ್ನ ಭಕ್ತರ ಸೇವೆಯಲ್ಲಿ ನಿರತವಾಗಿಯೂ ನನ್ನ ಶರೀರವು ನಿನ್ನ

ಪವಿತ್ರದೇಹಸಂಬಂಧವುಳ್ಳದ್ದಾಗಿಯೂ ಆಗಲಿ. ಹಾಗೆಯೇ ಕಣ್ಣು ನಿನ್ನ ಮೂರ್ತಿಯನ್ನೇ ಕಾಣುವ ಭಕ್ತರನ್ನೂ ಗುರುವನ್ನೂ ಯಾವಾಗಲೂ ಕಾಣುವಂತೆಯೂ ನನ್ನ ಕಿವಿಯು ನಿನ್ನ ಹುಟ್ಟು ಹಾಗೂ ದಿವ್ಯಲೀಲೆಗಳನ್ನೇ ಕೇಳುವಂತೆಯೂ ಎರಡೂ ಕಾಲುಗಳು ನಿನ್ನ ದೇವಾಲಯಗಳಿಗೆ ಮತ್ತೆ ಮತ್ತೆ ಹೋಗುತ್ತಿರುವವಾಗಿಯೂ ಆಗಲಿ ! ಎಲೈ ಗರುಡಧ್ವಜನೆ, ನನ್ನ ದೇಹದ ಅವಯವಗಳು ನಿನ್ನ ಪಾದಧೂಳಿಯಿಂದ ಬೆರೆತ ತೀರ್ಥವನ್ನು ಧರಿಸಿರುವಂತೆಯೂ ನನ್ನ ತಲೆಯು - ಶಿವಬ್ರಹ್ಮಾದಿಗಳಿಂದ ಸೇವಿತವಾದ ನಿನ್ನ ಪಾದಗಳಿಗೆ ಯಾವಾಗಲೂ ನಮಸ್ಕರಿಸುತ್ತಲೂ ಇರುವಂತಾಗಲಿ !!

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ಪ್ರಥಮಃ ಸರ್ಗಃ**

---------

## ಎರಡನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಇತ್ಥಂ ಸ್ವಾತ್ಮಪರಿಷ್ವಂಗನಿರ್ಧೂತಾಶೇಷಕಲ್ಮಷಮ್ ।**
**ರಾಮಃ ಸುಗ್ರೀವಮಾಲೋಕ್ಯ ಸಸ್ಮಿತಂ ವಾಕ್ಯಮಬ್ರವೀತ್ ॥ ೧ ॥**
**ಮಾಯಾಂ ಮೋಹಕರೀಂ ತಸ್ಮಿನ್ ವಿತನ್ವನ್ ಕಾರ್ಯಸಿದ್ಧಯೇ ।**
**ಸಖೇ ತ್ವದುಕ್ತಂ ಯತ್ತನ್ಮಾಂ ಸತ್ಯಮೇವ ನ ಸಂಶಯಃ ॥ ೨ ॥**
**ಕಿಂ ತು ಲೋಕಾ ವದಿಷ್ಯಂತಿ ಮಾಮೇವಂ ರಘುನಂದನಃ ।**
**ಕೃತವಾನ್ ಕಿಂ ಕಪೀಂದ್ರಾಯ ಸಖ್ಯಂ ಕೃತ್ವಾಗ್ನಿಸಾಕ್ಷಿಕಮ್ ॥ ೩ ॥**
**ಇತಿ ಲೋಕಾಪವಾದೋ ಮೇ ಭವಿಷ್ಯತಿ ನ ಸಂಶಯಃ ।**
**ತಸ್ಮಾದಾಹ್ವಯ ಭದ್ರಂ ತೇ ಗತ್ವಾ ಯುದ್ಧಾಯ ವಾಲಿನಮ್ ॥ ೪ ॥**
**ಬಾಣೇನೈಕೇನ ತಂ ಹತ್ವಾ ರಾಜ್ಯೇ ತ್ವಾಮಭಿಷೇಚಯೇ ।**

೧-೪. ಶ್ರೀಮಹಾದೇವನಿಂತೆಂದನು : ಹೀಗೆ ತನ್ನ ಶರೀರಾಲಿಂಗನದಿಂದ ಕೊಡವಿದ ಸಮಸ್ತಪಾಪವುಳ್ಳ ಸುಗ್ರೀವನನ್ನು ಕುರಿತು ತನ್ನ ಕಾರ್ಯಸಿದ್ಧಿಗಾಗಿ ಮೋಹಕರವಾದ ಮಾಯೆಯನ್ನು ಹರಡುತ್ತಾ ರಾಮನು ಮುಗುಳುನಗೆಯಿಂದ ಕೂಡಿ ನೋಡುತ್ತಾ ಈ ಮಾತನ್ನು ಹೇಳಿದನು : ''ಎಲೈ ಮಿತ್ರನೆ, ನನ್ನನ್ನು ಕುರಿತು ಈವರೆಗೆ ನೀನು ಏನು ಹೇಳಿರುವೆಯೋ ಅದೆಲ್ಲವೂ ನಿಜವೇ. ಈ ಬಗ್ಗೆ ಸಂಶಯವಿಲ್ಲ. ಆದರೆ

ಲೋಕದ ಜನರು ನನ್ನನ್ನು ಕುರಿತು - 'ಓಹೋ, ಶ್ರೀರಾಮನು, ಅಗ್ನಿಸಾಕ್ಷಿಕವಾಗಿ ಕಪಿರಾಜನೊಡನೆ ಸ್ನೇಹಮಾಡಿಕೊಂಡು ಆತನಿಗೆ (ಉಪಕಾರ)ಮಾಡಿದ್ದಾದರೂ ಏನು ? ಎಂದು ಆಡಿಕೊಳ್ಳುವರು. ಇಂಥ ದೂರು ನನ್ನ ವಿಷಯಕ್ಕೆ ಬರುವದರಲ್ಲಿ ಸಂದೇಹವಿಲ್ಲ. ಆದ್ದರಿಂದ ನಿನಗೆ ಒಳ್ಳೆಯದಾಗಲಿ ! ಈಗ ನೀನು ಹೋಗಿ ವಾಲಿಯನ್ನು ಯುದ್ಧಕ್ಕೆ ಕರೆಯುವವನಾಗು. ಅವನನ್ನು ಒಂದೇ ಬಾಣದಿಂದ ಕೊಂದು (ಕಿಷ್ಕಿಂಧಾ) ರಾಜ್ಯದಲ್ಲಿ ನಿನಗೆ ಪಟ್ಟಾಭಿಷೇಕಮ್ಮಾಡುವೆನು'' ಎಂದನು.

**ತಥೇತಿ ಗತ್ವಾ ಸುಗ್ರೀವಃ ಕಿಷ್ಕಿಂಧೋಪವನಂ ದ್ರುತಮ್ ।**
**ಕೃತ್ವಾ ಶಬ್ದಂ ಮಹಾನಾದಂ ತಮಾಹ್ವಯತ ವಾಲಿನಮ್ ॥ ೫ ॥**
**ತಚ್ಛ್ರುತ್ವಾ ಭ್ರಾತೃನಿನದಂ ರೋಷತಾಮ್ರವಿಲೋಚನಃ ।**
**ನಿರ್ಜಗಾಮ ಗೃಹಾತ್ ಶೀಘ್ರಂ ಸುಗ್ರೀವೋ ಯತ್ರ ವಾನರಃ ॥ ೬ ॥**
**ತಮಾಪತಂತಂ ಸುಗ್ರೀವಃ ಶೀಘ್ರಂ ವಕ್ಷಸ್ಯತಾಡಯತ್ ।**

೫-೬. ಹಾಗೆಯೇ ಆಗಲೆಂದು ಸುಗ್ರೀವನು ಕಿಷ್ಕಿಂಧೆಯ ಉಪವನದ ಸಮೀಪಕ್ಕೆ ಬೇಗನೆ ಹೋಗಿ ಗಟ್ಟಿಯಾಗಿ ಸಿಂಹನಾದವನ್ನು ಮಾಡಿ ವಾಲಿಯನ್ನು ಯುದ್ಧಕ್ಕೆ ಕರೆದನು. ಸಹೋದರನ ಆ ಘರ್ಜನೆಯನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಳ್ಳ (ವಾಲಿಯು) ತನ್ನ ಮನೆಯಿಂದ ಸುಗ್ರೀವನಿದ್ದಲ್ಲಿಗೆ ಹೊರಟುಬಂದನು. ಹಾಗೆ ನುಗ್ಗಿ ಬಂದ (ವಾಲಿಗೆ) ಸುಗ್ರೀವನು ಕೂಡಲೆ ಎದೆಯಲ್ಲಿ ಗುದ್ದಿದನು.

**ಸುಗ್ರೀವಮಪಿ ಮುಷ್ಟಿಭ್ಯಾಂ ಜಘಾನ ಕ್ರೋಧಮೂರ್ಛಿತಃ ।**
**ವಾಲೀ ತಮಪಿ ಸುಗ್ರೀವ ಏವಂ ಕ್ರುದ್ಧೌ ಪರಸ್ಪರಮ್ ॥ ೭ ॥**
**ಅಯುಧ್ಯೇತಾಮೇಕರೂಪೌ ದೃಷ್ಟ್ವಾ ರಾಮೋಽತಿವಿಸ್ಮಿತಃ ।**
**ನ ಮುಮೋಚ ತದಾ ಬಾಣಂ ಸುಗ್ರೀವವಧಶಂಕಯಾ ॥ ೮ ॥**
**ತತೋ ದುದ್ರಾವ ಸುಗ್ರೀವೋ ವಮನ್ ರಕ್ತಂ ಭಯಾಕುಲಃ ।**
**ವಾಲೀ ಸ್ವಭವನಂ ಯಾತಃ ಸುಗ್ರೀವೋ ರಾಮಮಬ್ರವೀತ್ ॥ ೯ ॥**

೭-೯. ವಾಲಿಯು ಕೋಪಗೊಂಡವನಾಗಿ ಎರಡು ಕೈ ಮುಷ್ಟಿಗಳಿಂದಲೂ ಸುಗ್ರೀವನನ್ನು ಹೊಡೆದನು. ಅವನನ್ನು ಮತ್ತೆ ಸುಗ್ರೀವನು ಹೊಡೆದನು. ಹೀಗೆ ಕುಪಿತರಾದ ಇಬ್ಬರೂ ಅನ್ಯೋನ್ಯವಾಗಿ ಯುದ್ಧಮಾಡಿದರು. ರಾಮನಾದರೋ, ಒಂದೇ ರೂಪದವರಾಗಿದ್ದ ಅವರಿಬ್ಬರನ್ನೂ ನೋಡಿ ಅತಿಯಾಗಿ ಆಶ್ಚರ್ಯಗೊಂಡು ಸುಗ್ರೀವನನ್ನೆಲ್ಲಿಕೊಂದುಬಿಟ್ಟೇನೋ, ಎಂಬ ಸಂಶಯದಿಂದ ಆಗ ಬಾಣವನ್ನು ಬಿಡಲಿಲ್ಲ. ಅನಂತರ ಸುಗ್ರೀವನು ರಕ್ತವನ್ನು ಕಾರುತ್ತಾ ಹೆದರಿದವನಾಗಿ ಓಡಿಬಿಟ್ಟನು. ವಾಲಿಯು ತನ್ನ ಮನೆಗೆ ಹೋದನು. ಸುಗ್ರೀವನು ರಾಮನನ್ನು ಕುರಿತು ಹೀಗೆಂದನು :

**ಕಿಂ ಮಾಂ ಘಾತಯಸೇ ರಾಮ ಶತ್ರುಣಾ ಭ್ರಾತೃರೂಪಿಣಾ ।**
**ಯದಿ ಮದ್ಧನನೇ ವಾಂಛಾ ತ್ವಮೇವ ಜಹಿ ಮಾಂ ವಿಭೋ ॥ ೧೦ ॥**
**ಏವಂ ಮೇ ಪ್ರತ್ಯಯಂ ಕೃತ್ವಾ ಸತ್ಯವಾದಿನ್ ರಘೂತ್ತಮ ।**
**ಉಪೇಕ್ಷಸೇ ಕಿಮರ್ಥಂ ಮಾಂ ಶರಣಾಗತವತ್ಸಲ ॥ ೧೧ ॥**

೧೦-೧೧. ''ಎಲೈ ರಾಮನೆ, ಸೋದರನ ರೂಪದಿಂದಿರುವ ಶತ್ರುವಿನಿಂದ ನನ್ನನ್ನೇಕೆ ಕೊಲ್ಲಿಸುವೆ ? ಒಂದು ವೇಳೆ ನನ್ನನ್ನು ಕೊಲ್ಲಲು ನಿನಗೆ ಇಚ್ಛೆಯಿದ್ದರೆ ಎಲೈ ವಿಭುವೆ, ನೀನೇ ಕೊಂದುಬಿಡು. ಎಲೈ ಸತ್ಯವಾದಿಯಾದ ರಘೂತ್ತಮನೆ, ಶರಣಾಗತ ವತ್ಸಲನೆ, ಹೀಗೆಲ್ಲ ನನಗೆ ನಂಬಿಕೆಯನ್ನು ಹುಟ್ಟಿಸಿ ಏತಕ್ಕಾಗಿ ನನ್ನನ್ನು ಕೈಬಿಟ್ಟೆಯಾದೆ ?''

**ಶ್ರುತ್ವಾ ಸುಗ್ರೀವವಚನಂ ರಾಮಃ ಸಾಶ್ರುವಿಲೋಚನಃ ।**
**ಆಲಿಂಗ್ಯ ಮಾ ಸ್ಮ ಭೈಷೀಸ್ತ್ವಂ ದೃಷ್ಟ್ವಾ ವಾಮೇಕರೂಪಿಣೌ ॥ ೧೨ ॥**
**ಮಿತ್ರಘಾತಿತ್ವಮಾಶಂಕ್ಯ ಮುಕ್ತವಾನ್ ಸಾಯಕಂ ನ ಹಿ ।**
**ಇದಾನೀಮೇವ ತೇ ಚಿಹ್ನಂ ಕರಿಷ್ಯೇ ಭ್ರಮಶಾಂತಯೇ ॥ ೧೩ ॥**
**ಗತ್ವಾಹ್ವಯ ಪುನಃ ಶತ್ರುಂ ಹತಂ ದ್ರಕ್ಷ್ಯಸಿ ವಾಲಿನಮ್ ।**
**ರಾಮೋಽಹಂ ತ್ವಾಂ ಶಪೇ ಭ್ರಾತಃ ಹನಿಷ್ಯಾಮಿ ರಿಪುಂ ಕ್ಷಣಾತ್ ॥ ೧೪ ॥**
**ಇತ್ಯಾಶ್ವಾಸ್ಯ ಸ ಸುಗ್ರೀವಂ ರಾಮೋ ಲಕ್ಷ್ಮಣಮಬ್ರವೀತ್ ।**

೧೨-೧೪. ಸುಗ್ರೀವನ ಮಾತನ್ನು ಕೇಳಿ ರಾಮನು ಕಣ್ಣೀರಿಟ್ಟವನಾಗಿ ಆತನನ್ನು ತಬ್ಬಿಕೊಂಡು 'ಹೆದರಬೇಡ ; ನೀವಿಬ್ಬರೂ ಒಂದೇ ರೂಪದವರಾಗಿದ್ದು ನನಗೆ ಎಲ್ಲಿ ಸ್ನೇಹಿತನನ್ನು ಕೊಂದುಬಿಡುವೆನೊ, ಎಂಬ ಸಂಶಯವುಂಟಾದದ್ದರಿಂದ ಬಾಣ ವನ್ನು ಬಿಡಲಾಗಲಿಲ್ಲ. ಆ ಭ್ರಾಂತಿಪರಿಹಾರಕ್ಕೆ ಈಗಲೇ ಗುರುತಿಸುವ ಉಪಾಯವನ್ನು ಮಾಡುವೆನು. ನೀನು ಹೋಗಿ ಮತ್ತೆ (ವಾಲಿ)ಯನ್ನು ಕರೆಯುವವನಾಗು. ಶತ್ರುವು ನಾಶವಾದದ್ದನ್ನು ಕಾಣುವೆ. ರಾಮನಾದ ನಾನು ಆಣೆಯಿಟ್ಟು ನಿನಗೆ ಹೇಳುತ್ತಿರುವೆನು. ಎಲೈ ಭ್ರಾತೃವೆ, ಶತ್ರುವನ್ನು ಕ್ಷಣಮಾತ್ರದಲ್ಲಿ ಕೊಲ್ಲುವೆನು ;ಹೀಗೆಂದು ಆತನು ಸುಗ್ರೀವನನ್ನು ಸಮಾಧಾನಗೊಳಿಸಿ ರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು :

**ಸುಗ್ರೀವಸ್ಯ ಗಲೇ ಪುಷ್ಪಮಾಲಾಮಾಮುಚ್ಯ ಪುಷ್ಪಿತಾಮ್ ।**
**ಪ್ರೇಷಯಸ್ವ ಮಹಾಭಾಗ ಸುಗ್ರೀವಂ ವಾಲಿನಂ ಪ್ರತಿ ॥ ೧೫ ॥**
**ಲಕ್ಷ್ಮಣಸ್ತು ತದಾ ಬದ್ಧ್ವಾ ಗಚ್ಛ ಗಚ್ಛೇತಿ ಸಾದರಮ್ ।**
**ಪ್ರೇಷಯಾಮಾಸ ಸುಗ್ರೀವಂ ಸೋಽಪಿ ಗತ್ವಾ ತಥಾಕರೋತ್ ॥ ೧೬ ॥**
**ಪುನರಪ್ಯದ್ಭುತಂ ಶಬ್ದಂ ಕೃತ್ವಾ ವಾಲಿನಮಾಹ್ವಯತ್ ।**

**ತಚ್ಛ್ರುತ್ವಾ ವಿಸ್ಮಿತೋ ವಾಲೀ ಕ್ರೋಧೇನ ಮಹತಾವೃತಃ ॥ ೧೭ ॥**
**ಬದ್ಧ್ವಾ ಪರಿಕರಂ ಸಮ್ಯಗ್ಗಮನಾಯೋಪಚಕ್ರಮೇ ।**

೧೫-೧೭. 'ಸುಗ್ರೀವನ ಕಂಠಕ್ಕೆ ಅರಳಿದ ಹೂವಿನ ಮಾಲೆಯನ್ನು ಅಲಂಕರಿಸಿ ಎಲೈ ಮಹಾಭಾಗನೆ, ವಾಲಿಯನ್ನು ಕುರಿತು (ಅವನನ್ನು) ಕಳುಹಿಸು.' ಹೀಗೆನ್ನಲು ಲಕ್ಷ್ಮಣನು ಆಗ (ಹೂಮಾಲೆಯನ್ನು ಕೊರಳಿಗೆ) ಸುತ್ತಿ ವಿಶ್ವಾಸದಿಂದ ಹೋಗು, ಹೋಗು, ಎಂದು ಸುಗ್ರೀವನನ್ನು ಕಳುಹಿಸಿದನು. ಆತನೂ ಹಾಗೆ ಮಾಡಿದನು- ಎಂದರೆ ಮತ್ತೊಮ್ಮೆ ಅದ್ಭುತವಾಗಿ ಸಿಂಹನಾದಮಾಡಿ ವಾಲಿಯನ್ನು ಕರೆದನು. ಅದನ್ನು ಕೇಳಿ ಆಶ್ಚರ್ಯಗೊಂಡ ವಾಲಿಯು ಹೆಚ್ಚಿನ ಕೋಪದಿಂದ ಕೂಡಿದವನಾಗಿ ಚೆನ್ನಾಗಿ ಸೊಂಟವನ್ನು ಕಟ್ಟಿಕೊಂಡು ಹೊರಡಲುಪಕ್ರಮಿಸಿದನು.

**ಗಚ್ಛಂತಂ ವಾಲಿನಂ ತಾರಾ ಗೃಹೀತ್ವಾ ನಿಷಿಷೇಧ ತಮ್ ।**
**ನ ಗಂತವ್ಯಂ ತ್ವಯೇದಾನೀಂ ಶಂಕಾ ಮೇಽತೀವ ಜಾಯತೇ ॥ ೧೮ ॥**
**ಇದಾನೀಮೇವ ತೇ ಭಗ್ನಃ ಪುನರಾಯಾತಿ ಸತ್ವರಃ ।**
**ಸಹಾಯೋ ಬಲವಾನ್ ತಸ್ಯ ಕಶ್ಚಿನ್ನೂನಂ ಸಮಾಗತಃ ॥ ೧೯ ॥**

೧೮-೧೯. ಹೋಗುತ್ತಿರುವ ವಾಲಿಯನ್ನು ತಡೆದು ತಾರೆಯು "ಈಗ ನೀನು ಹೋಗಬಾರದು, ನನಗೆ ಬಹಳ ಸಂಶಯವುಂಟಾಗಿದೆ. ಈಗ ತಾನೆ ನಿನ್ನಿಂದ ಪರಾಜಿತನಾಗಿದ್ದು ವಿಳಂಬವಿಲ್ಲದೆ ಮತ್ತೆ (ಆತನು) ಬರುತ್ತಿದ್ದಾನೆ. ಬಲಿಷ್ಠನಾದ ಯಾವನೋ ಒಬ್ಬನ ಸಹಾಯವು ಅವನಿಗೆ ಖಂಡಿತವಾಗಿಯೂ ಒದಗಿರಬೇಕು" ಎಂದು ಹೇಳಿ ಅಡ್ಡಿಪಡಿಸಿದಳು.

**ವಾಲೀ ತಮಾಹ ಹೇ ಸುಭ್ರು ಶಂಕಾ ತೇ ವ್ಯೇತು ತದ್ಗತಾ ।**
**ಪ್ರಿಯೇ ಕರಂ ಪರಿತ್ಯಜ್ಯ ಗಚ್ಛ ಗಚ್ಛಾಮಿ ತಂ ರಿಪುಮ್ ॥ ೨೦ ॥**
**ಹತ್ವಾ ಶೀಘ್ರಂ ಸಮಾಯಾಸ್ಯೇ ಸಹಾಯಸ್ತಸ್ಯ ಕೋ ಭವೇತ್ ।**
**ಸಹಾಯೋ ಯದಿ ಸುಗ್ರೀವಃ ತತೋ ಹತ್ವೋಭಯಂ ಕ್ಷಣಾತ್ ॥ ೨೧ ॥**
**ಆಯಾಸ್ಯೇ ಮಾ ಶುಚಃ ಶೂರಃ ಕಥಂ ತಿಷ್ಠೇತ್ ಗೃಹೇ ರಿಪುಮ್ ।**
**ಜ್ಞಾತ್ವಾಪ್ಯಾಹ್ವಯಮಾನಂ ಹಿ ಹತ್ವಾ ಯಾಸ್ಯಾಮಿ ಸುಂದರಿ ॥ ೨೨ ॥**

೨೦-೨೨. ವಾಲಿಯು ಅವಳನ್ನು ಕುರಿತು ಹೀಗೆಂದನು : 'ಎಲೈ ಶೋಭನವಾದ ಹುಬ್ಬುಳ್ಳವಳೆ, ಆತನ ವಿಷಯಕ್ಕೆ ನಿನಗಿರುವ ಸಂಶಯವು ಹೋಗಲಿ ! ಪ್ರಿಯೆ, ನೀನು ಕೈಯನ್ನು ಬಿಡು. ನಾನು ಹೋಗಿ ಆ ಶತ್ರುವನ್ನು ಬೇಗನೆ ಕೊಂದು ಬರುವೆನು. ಅವನಿಗೆ ಸಹಾಯಕನಾದರೂ ಯಾವನಿದ್ದಾನು ? ಒಂದು ವೇಳೆ ಸುಗ್ರೀವನು

ಸಹಾಯವುಳ್ಳವನಾಗಿದ್ದರೆ ಆಗ ಇಬ್ಬರನ್ನೂ ಕ್ಷಣಮಾತ್ರದಲ್ಲಿ ಕೊಂದು ಹಿಂದಿರುಗುವೆನು. ನೀನು ದುಃಖಿಸಬೇಡ. ಶೂರನಾದವನು ಶತ್ರುವನ್ನು ಆರಿತವನಾಗಿಯೂ ಯುದ್ಧಕ್ಕೆ ಕರೆಯಲ್ಪಟ್ಟು ಹೇಗೆ ತಾನೆ ಮನೆಯಲ್ಲಿದ್ದಾನು ? ಎಲೈ ಸುಂದರಿ, (ಅವನನ್ನು) ಕೊಂದುಬರುವೆನು.'

**ತಾರೋವಾಚ-**

**ಮತ್ತೋऽನ್ಯತ್ ಶೃಣು ರಾಜೇಂದ್ರ ಶ್ರುತ್ವಾ ಕುರು ಯಥೋಚಿತಮ್ ।**
**ಆಹ ಮಾಮಂಗದಃ ಪುತ್ರೋ ಮೃಗಯಾಯಾಂ ಶ್ರುತಂ ವಚಃ ॥ ೨೩ ॥**
**ಅಯೋಧ್ಯಾಧಿಪತಿಃ ಶ್ರೀಮಾನ್ ರಾಮೋ ದಾಶರಥಿಃ ಕಿಲ ।**
**ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಭಾರ್ಯಯಾ ಸಹ ॥ ೨೪ ॥**
**ಆಗತೋ ದಂಡಕಾರಣ್ಯಂ ತತ್ರ ಸೀತಾ ಹೃತಾ ಕಿಲ ।**
**ರಾವಣೇನ ಸಹ ಭ್ರಾತ್ರಾ ಮಾರ್ಗಮಾಣೋऽಥ ಜಾನಕೀಮ್ ॥ ೨೫ ॥**
**ಆಗತೋ ಋಷ್ಯಮೂಕಾದ್ರಿಂ ಸುಗ್ರೀವೇಣ ಸಮಾಗತಃ ।**
**ಚಕಾರ ತೇನ ಸುಗ್ರೀವಃ ಸಖ್ಯಂ ಚಾನಲಸಾಕ್ಷಿಕಮ್ ॥ ೨೬॥**

೨೩-೨೬. ತಾರೆಯಿಂತೆಂದಳು : "ಎಲೈ ರಾಜೇಂದ್ರನೆ, ನಾನು ಹೇಳುವ ಮತ್ತೊಂದು ವಿಚಾರವನ್ನು ಕೇಳು, ಕೇಳಿ ನಿನ್ನಿಷ್ಟಬಂದಂತೆ ಮಾಡು. ಮಗನಾದ ಅಂಗದನು ಬೇಟೆಯ ಸಮಯದಲ್ಲಿ ಕೇಳಿದ್ದ ಈ ಮಾತನ್ನು ನನಗೆ ಹೇಳಿದನು. ಏನೆಂದರೆ: ಅಯೋಧ್ಯೆಗೆ ಒಡೆಯನಾದ ದಶರಥಪುತ್ರನಾದ ಶ್ರೀರಾಮನು ಸೋದರನಾದ ಲಕ್ಷ್ಮಣ ಹಾಗೂ ಹೆಂಡತಿಯಾದ ಸೀತೆಯೊಡಗೂಡಿ ದಂಡಕಾರಣ್ಯಕ್ಕೆ ಬಂದನು. ಅಲ್ಲಿ ರಾವಣನಿಂದ ಸೀತೆಯು ಅಪಹರಿಸಲ್ಪಟ್ಟಳು. ಅನಂತರ ಸೋದರನೊಡನೆ (ರಾಮನು) ಜಾನಕಿಯನ್ನು ಹುಡುಕುತ್ತಾ ಋಷ್ಯಮೂಕಗಿರಿಗೆ ಬಂದು ಸುಗ್ರೀವನೊಡನೆ ಕೂಡಿದ್ದಾನೆ. ಸುಗ್ರೀವನು ಅವನೊಡನೆ ಅಗ್ನಿಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಂಡಿರುತ್ತಾನೆ."

**ಪ್ರತಿಜ್ಞಾಂ ಕೃತವಾನ್ ರಾಮಃ ಸುಗ್ರೀವಾಯ ಸಲಕ್ಷ್ಮಣಃ ।**
**ವಾಲಿನಂ ಸಮರೇ ಹತ್ವಾ ರಾಜಾನಂ ತ್ವಾಂ ಕರೋಮ್ಯಹಮ್ ॥ ೨೭ ॥**
**ಇತಿ ನಿಶ್ಚಿತ್ಯ ತೌ ಯಾತೌ ನಿಶ್ಚಿತಂ ಶೃಣು ಮದ್ವಚಃ ।**
**ಇದಾನೀಮೇವ ತೇ ಭಗ್ನಃ ಕಥಂ ಪುನರುಪಾಗತಃ ॥ ೨೮ ॥**
**ಅತಸ್ತ್ವಂ ಸರ್ವಥಾ ವೈರಂ ತ್ಯಕ್ತ್ವಾ ಸುಗ್ರೀವಮಾನಯ ।**
**ಯೌವರಾಜ್ಯೇऽಭಿಷಿಂಚಾಶು ರಾಮಂ ತ್ವಂ ಶರಣಂ ವ್ರಜ ॥ ೨೯ ॥**
**ಪಾಹಿ ಮಾಮಂಗದಂ ರಾಜ್ಯಂ ಕುಲಂ ಚ ಹರಿಪುಂಗವ ।**

**ಇತ್ಯುಕ್ತ್ವಾಶ್ರುಮುಖೀ ತಾರಾ ಪಾದಯೋಃ ಪ್ರಣಿಪತ್ಯ ತಮ್ ॥ ೩೦ ॥**
**ಹಸ್ತಾಭ್ಯಾಂ ಚರಣೌ ಧೃತ್ವಾ ರುರೋದ ಭಯವಿಹ್ವಲಾ ।**

೨೭-೩೦. "ರಾಮನು ಲಕ್ಮ್ಮಣಸಹಿತನಾಗಿ ಸುಗ್ರೀವನಿಗೆ ಮಾತುಕೊಟ್ಟು ವಾಲಿಯನ್ನು ಯುದ್ಧದಲ್ಲಿ ಕೊಂದು ನಿನ್ನನ್ನು ರಾಜನನ್ನಾಗಿ ಮಾಡುವೆನು" - ಎಂದು ಹೇಳಿರುವನು. ಹೀಗೆ ಇಬ್ಬರೂ ನಿರ್ಣಯಿಸಿಕೊಂಡೇ ಹೊರಟಿರುತ್ತಾರೆ. ಆದ್ದರಿಂದ ನನ್ನ ಮಾತನ್ನು ಕೇಳು. ಈಗ ತಾನೆ ನಿನ್ನಿಂದ ಪರಾಜಿತನಾಗಿ ಅವನು ಮತ್ತೆ ಬಂದದ್ದು ಹೇಗೆ ? ಆದ್ದರಿಂದ ನೀನು ಎಲ್ಲಾ ರೀತಿಯಿಂದಲೂ ಸುಗ್ರೀವನ ವಿಷಯಕ್ಕೆ ದ್ವೇಷವನ್ನು ಬಿಟ್ಟು ಆತನನ್ನು ಕರೆತಂದು ಬೇಗನೆ ಯೌವರಾಜ್ಯದಲ್ಲಿ ಕುಳ್ಳಿರಿಸಿ ಅಭಿಷೇಕಮಾಡುವವನಾಗು. ನೀನು ರಾಮನಿಗೆ ಶರಣಾಗತನಾಗು. ನನ್ನನ್ನೂ ಅಂಗದನನ್ನೂ ರಾಜ್ಯವನ್ನೂ ವಾನರಕುಲವನ್ನೂ ಎಲೈ ಹರಿಶ್ರೇಷ್ಠನೆ, ಕಾಪಾಡುವವನಾಗು' ಹೀಗೆಂದು ಕಣ್ಣೀರಿಡುತ್ತಾ ತಾರೆಯು ಅವನ ಎರಡು ಪಾದಗಳಿಗೂ ನಮಸ್ಕರಿಸಿ ಹೆದರಿದವಳಾಗಿ ತನ್ನ ಎರಡು ಕೈಗಳಿಂದಲೂ ಆತನ ಕಾಲುಗಳನ್ನು ಹಿಡಿದುಕೊಂಡು ಅತ್ತಳು.

**ತಾಮಾಲಿಂಗ್ಯ ತದಾ ವಾಲೀ ಸಸ್ನೇಹಮಿಗಮಬ್ರವೀತ್ ।**
**ಸ್ತ್ರೀಸ್ವಭಾವಾದ್ ಬಿಭೇಷಿ ತ್ವಂ ಪ್ರಿಯೇ ನಾಸ್ತಿ ಭಯಂ ಮಮ ॥ ೩೧ ॥**
**ರಾಮೋ ಯದಿ ಸಮಾಯಾತೋ ಲಕ್ಷ್ಮಣೇನ ಸಮಂ ಪ್ರಭುಃ ।**
**ತದಾ ರಾಮೇಣ ಮೇ ಸ್ನೇಹೋ ಭವಿಷ್ಯತಿ ನ ಸಂಶಯಃ ॥ ೩೨ ॥**
**ರಾಮೋ ನಾರಾಯಣಃ ಸಾಕ್ಷಾದವತೀರ್ಣೋಽಖಿಲಃ ಪ್ರಭುಃ ।**
**ಭೂಭಾರಹರಣಾರ್ಥಾಯ ಶ್ರುತಂ ಪೂರ್ವಂ ಮಯಾನಘೇ ॥ ೩೩ ॥**
**ಸ್ವಪಕ್ಷಃ ಪರಪಕ್ಷೋ ವಾ ನಾಸ್ತಿ ತಸ್ಯ ಪರಾತ್ಮನಃ ।**
**ಆನೇಷ್ಯಾಮಿ ಗೃಹಂ ಸಾಧ್ವಿ ನತ್ವಾ ತಚ್ಚರಣಾಂಬುಜಮ್ ॥ ೩೪ ॥**
**ಭಜತೋಽನುಭಜತ್ಯೇಷ ಭಕ್ತಿಗಮ್ಯಃ ಸುರೇಶ್ವರಃ ।**

೩೧-೪. ಆಗ ವಾಲಿಯು ಆಕೆಯನ್ನು ಅಪ್ಪಿಕೊಂಡು ಪ್ರೀತಿಯಿಂದ ಹೀಗೆಂದನು : ಎಲೈ ಪ್ರಿಯಳೆ, ಹೆಣ್ಣುಸ್ವಭಾವಕ್ಕೆ ತಕ್ಕಂತೆ ನೀನು ಹೆದರಿದ್ದೀಯೆ. ನನಗೇನೂ ಭಯವಿಲ್ಲ. ಲಕ್ಷ್ಮಣನೊಡನೆ ರಾಮನು ಒಂದುವೇಳೆ ಬಂದಿದ್ದರೆ ಆಗ ರಾಮನೊಡನೆ ನನಗೆ ಸ್ನೇಹವು ಆಗಲಿದೆ. ಈ ಬಗ್ಗೆ ಸಂಶಯವಿಲ್ಲ. ಎಲೈ ಪಾಪರಹಿತಳೆ, ರಾಮನು ಸಾಕ್ಷಾತ್ ನಾರಾಯಣನೇ ಆಗಿದ್ದು ಭೂಮಿಯ ಭಾರವನ್ನು ಕಳೆಯುವದಕ್ಕಾಗಿ ಆ ಪ್ರಭುವು ಅವತಾರಮಾಡಿದ್ದಾನೆಂದು ಹಿಂದೆ ನಾನು ಕೇಳಿರುತ್ತೇನೆ. ಪರಮಾತ್ಮನಾದ ಆತನಿಗೆ ತನ್ನವರು, ಶತ್ರುಗಳು ಎಂಬ ಭೇದವಿಲ್ಲ. ಎಲೌ ಪತಿವ್ರತೆಯೆ, ಆತನ

ಪಾದಾರವಿಂದಗಳಿಗೆ ಎರಗಿ ನನ್ನ ಮನೆಗೆ ಕರೆತರುವೆನು. ದೇವತೆಗಳೊಡೆಯನಾದ ಆತನು ತನ್ನನ್ನು ಸೇವಿಸುವವರನ್ನು ಅನುಸರಿಸುವನು. ಈತನು ಭಕ್ತಿಗಮ್ಯನಾಗಿರುವನು.

**ಯದಿ ಸ್ವಯಂ ಸಮಾಯಾತಿ ಸುಗ್ರೀವೋ ಹನ್ಮಿ ತಂ ಕ್ಷಣಾತ್ ।**
**ಯದುಕ್ತಂ ಯೌವರಾಜ್ಯಾಯ ಸುಗ್ರೀವಸ್ಯಾಭಿಷೇಚನಮ್ ॥ ೩೫ ॥**
**ಕಥಮಾಹೂಯಮಾನೋಽಹಂ ಯುದ್ಧಾಯ ರಿಪುಣಾ ಪ್ರಿಯೇ ।**
**ಶೂರೋಽಹಂ ಸರ್ವಲೋಕಾನಾಂ ಸಂಮತಃ ಶುಭಲಕ್ಷಣೇ ॥ ೩೬ ॥**
**ಭೀತಭೀತಮಿದಂ ವಾಕ್ಯಂ ಕಥಂ ವಾಲೀ ವದೇತ್ ಪ್ರಿಯೇ ।**
**ತಸ್ಮಾಚ್ಛೋಕಂ ಪರಿತ್ಯಜ್ಯ ತಿಷ್ಠ ಸುಂದರಿ ವೇಶ್ಮನಿ ॥ ೩೭ ॥**
**ಏವಮಾಶ್ವಾಸ್ಯ ತಾರಾಂ ತಾಂ ಶೋಚನ್ತೀಮಶ್ರುಲೋಚನಾಮ್ ।**
**ಗತೋ ವಾಲೀ ಸಮುದ್ಯುಕ್ತಃ ಸುಗ್ರೀವಸ್ಯ ವಧಾಯ ಸಃ ॥ ೩೮ ॥**

೩೫-೩೮. 'ಸುಗ್ರೀವನೇನಾದರೂ ಖುದ್ದಾಗಿ ಬಂದರೆ ಕ್ಷಣಮಾತ್ರದಲ್ಲಿ ಅವನನ್ನು ನಾಶಗೊಳಿಸುವೆನು. ಸುಗ್ರೀವನನ್ನು ಯೌವರಾಜ್ಯದಲ್ಲಿ ಕುಳ್ಳಿರಿಸುವಂತೆ ನೀನು ಹೇಳಿದೆಯಲ್ಲವೆ ? ಆದರೆ ಎಲೌ ಪ್ರಿಯಳೆ, ಶತ್ರುವಿನಿಂದ ಯುದ್ಧಕ್ಕಾಗಿ ಕರೆಯಲ್ಪಡುತ್ತಿರುವ ನಾನು ಹೇಗೆತಾನೆ ( ಈ ಕೆಲಸವನ್ನು ಮಾಡಿಯೇನು ?) ನಾನಾದರೋ ಎಲೌ ಶುಭಲಕ್ಷಣಳೆ, ಎಲ್ಲಾ ಜನರಿಂದಲೂ ಶೂರನೆಂದೆನಿಸಿಕೊಂಡಿರುವೆನು. ಪ್ರಿಯಳೆ, ವಾಲಿಯೆನಿಸಿದ ನಾನು ಹೆದಹೆದರಿ ಈ ಮಾತನ್ನು ಹೇಗೆ ಹೇಳಲಿ ! ಆದ್ದರಿಂದ ಎಲೌ ಸುಂದರಿ, ನೀನು ಅಳುವದನ್ನು ಬಿಟ್ಟು ಮನೆಯಲ್ಲಿರು.' ಹೀಗೆ ಅಳುತ್ತಾ ಕಣ್ಣೀರಿಡುತ್ತಿರುವ ಆ ತಾರೆಯನ್ನು ಸಮಾಧಾನಗೊಳಿಸಿ ವಾಲಿಯು ಯುದ್ಧಕ್ಕೆ ಸಿದ್ಧನಾಗಿ ಸುಗ್ರೀವನನ್ನು ಕೊಂದುಬಿಡಲು ಹೊರಟನು.

**ದೃಷ್ಟ್ವಾ ವಾಲಿನಮಾಯಾಂತಂ ಸುಗ್ರೀವೋ ಭೀಮವಿಕ್ರಮಃ ।**
**ಉತ್ಪಪಾತ ಗಲೇ ಬದ್ಧಪುಷ್ಪಮಾಲಃ ಮತಂಗವತ್ ॥ ೩೯ ॥**
**ಮುಷ್ಟಿಭ್ಯಾಂ ತಾಡಯಾಮಾಸ ವಾಲಿನಂ ಸೋಽಪಿ ತಂ ತಥಾ ।**
**ಅಹನ್ ವಾಲೀ ಚ ಸುಗ್ರೀವಂ ಸುಗ್ರೀವೋ ವಾಲಿನಂ ತಥಾ ॥ ೪೦ ॥**
**ರಾಮಂ ವಿಲೋಕಯನ್ನೇವ ಸುಗ್ರೀವೋ ಯುಯುಧೇ ಯುಧಿ ।**

೩೯-೪೦. ವಾಲಿಯು ಬರುತ್ತಿರುವದನ್ನು ಕಂಡು ಭಯಂಕರವಾದ ಪರಾಕ್ರಮವುಳ್ಳ ಸುಗ್ರೀವನು ಕೊರಳಲ್ಲಿ ಹೂಮಾಲೆಯನ್ನು ತೊಟ್ಟು ಆನೆಯಂತೆ ಮೇಲೆಬಿದ್ದನು. ಹಾಗೂ ವಾಲಿಯನ್ನು ಎರಡೂ ಕೈಮುಷ್ಟಿಗಳಿಂದ ಗುದ್ದಿದನು. ಅವನೂ ಹಾಗೆಯೇ (ಸುಗ್ರೀವನನ್ನು) ಗುದ್ದಿದನು. ಹೀಗೆ ವಾಲಿಯು ಸುಗ್ರೀವನನ್ನೂ,

ಸುಗ್ರೀವನು ವಾಲಿಯನ್ನೂ ಹೊಡೆದರು. ಸುಗ್ರೀವನು ರಾಮನ ಕಡೆಗೆ ನೋಡಿಕೊಂಡೇ ಯುದ್ಧಮಾಡಿದನು.

**ಇತ್ಯೇವಂ ಯುಧ್ಯಮಾನೌ ತೌ ದೃಷ್ಟ್ವಾ ರಾಮಃ ಪ್ರತಾಪವಾನ್ ।**
**ಬಾಣಮಾದಾಯ ತೂಣೀರಾದ್ಯೆಂದ್ರೇ ಧನುಷಿ ಸಂದಧೇ ॥ ೪೧ ॥**
**ಆಕೃಷ್ಯ ಕರ್ಣಪರ್ಯಂತಮದೃಶ್ಯೋ ವೃಕ್ಷಖಂಡಗಃ ।**
**ನಿರೀಕ್ಷ್ಯ ವಾಲಿನಂ ಸಮ್ಯಗ್ ಲಕ್ಷ್ಯಂ ತದ್ಧೃದಯಂ ಹರಿಃ ॥ ೪೨ ॥**
**ಉತ್ಸಸರ್ಜಾಶನಿಸಮಂ ಮಹಾವೇಗಂ ಬಲಾಬಲಃ ।**
**ಬಿಭೇದ ಸ ಶರೋ ವಕ್ಷೋ ವಾಲಿನಃ ಕಂಪಯನ್ ಮಹೀಮ್ ॥ ೪೩ ॥**
**ಉತ್ಪಪಾತ ಮಹಾಶಬ್ದಂ ಮುಂಚನ್ ಸ ನಿಪಪಾತ ಹ ।**

೪೧-೪೩. ಹೀಗೆ ಯುದ್ಧವನ್ನು ಮಾಡುತ್ತಿರುವ ಅವರಿಬ್ಬರನ್ನೂ ಕಂಡ ಪ್ರತಾಪಶಾಲಿಯಾದ ರಾಮನು ಬತ್ತಳಿಕೆಯಿಂದ ಬಾಣವನ್ನು ತೆಗೆದು ಇಂದ್ರದತ್ತವಾದ ತನ್ನ ಬಿಲ್ಲಿನಲ್ಲಿ ಹೂಡಿದನು. ತಾನು ಮರದ ಸಂದಿನಲ್ಲಿ ಕಾಣಿಸಿಕೊಳ್ಳದಂತೆ ನಿಂತವನಾಗಿ ವಾಲಿಯನ್ನು ಚೆನ್ನಾಗಿ ನೋಡಿ ಗುರಿಯಿಟ್ಟು ಮಹಾಬಲನಾದ ಶ್ರೀಹರಿಯು ಸಿಡಿಲಿಗೆ ಸಮಾನವಾದ ವೇಗವುಳ್ಳ ಬಾಣವನ್ನು ಪ್ರಯೋಗಿಸಿದನು. ಆ ಬಾಣವು ಭೂಮಿಯನ್ನು ಅಲುಗಿಸುತ್ತಾ ವಾಲಿಯ ಎದೆಯನ್ನು ಸೀಳಿತು. ಅವನು ಗಟ್ಟಿಯಾಗಿ ಕೂಗುತ್ತಾ ಮೇಲಕ್ಕೆ ನೆಗೆದು ಅನಂತರ ಕೆಳಕ್ಕೆ ಬಿದ್ದನು.

**ತದಾ ಮುಹೂರ್ತಂ ನಿಃಸಂಜ್ಞೋ ಭೂತ್ವಾ ಚೇತನಮಾಪ ಸಃ ।**
**ತತೋ ವಾಲೀ ದದರ್ಶಾಗ್ರೇ ರಾಮಂ ರಾಜೀವಲೋಚನಮ್ ॥ ೪೪ ॥**
**ಧನುರಾಲಂಬ್ಯ ವಾಮೇನ ಹಸ್ತೇನಾನ್ಯೇನ ಸಾಯಕಮ್ ।**
**ಬಿಭ್ರಾಣಂ ಚೀರವಸನಂ ಜಟಾಮಕುಟಧಾರಿಣಮ್ ॥ ೪೫ ॥**
**ವಿಶಾಲವಕ್ಷಸಂ ಭ್ರಾಜದ್ವನಮಾಲಾವಿಭೂಷಿತಮ್ ।**
**ಪೀನಚಾರ್ವಾಯತಭುಜಂ ನವದೂರ್ವಾದಲಚ್ಛವಿಮ್ ॥ ೪೬ ॥**
**ಸುಗ್ರೀವಲಕ್ಷ್ಮಣಾಭ್ಯಾಂ ಚ ಪಾರ್ಶ್ವಯೋಃ ಪರಿಸೇವಿತಮ್ ।**
**ವಿಲೋಕ್ಯ ಶನಕೈಃ ಪ್ರಾಹ ವಾಲೀ ರಾಮಂ ವಿಗರ್ಹಯನ್ ॥ ೪೭॥**

೪೪-೪೭. ಆಗ ಮುಹೂರ್ತಕಾಲ ಜ್ಞಾನತಪ್ಪಿದ ವಾಲಿಯು ಮತ್ತೆ ಎಚ್ಚರಗೊಂಡವನಾದನು. ಅನಂತರ ಎದುರಿಗೆ ನಿಂತಿರುವ ಕಮಲನೇತ್ರನೂ ಎಡಗೈಯಲ್ಲಿ ಧನುಸ್ಸು, ಮತ್ತೊಂದರಲ್ಲಿ ಬಾಣ - ಇವುಗಳನ್ನು ಧರಿಸಿರುವ, ನಾರುಬಟ್ಟೆಯನ್ನು ಧರಿಸಿರುವ, ಜಟೆಯೆಂಬ ಕಿರೀಟಧಾರಿಯಾದ, ಆಗಲವಾದ ಎದೆಯುಳ್ಳ, ವನಮಾಲಾ

ಅಲಂಕೃತನಾದ, ಸುಂದರವಾದ ಹಾಗೂ ದಪ್ಪವಾದ ಅಗಲವಾದ ಭುಜವುಳ್ಳ ಹೊಸ ಗರಿಕೆಯ ಚಿಗುರಿನಂತೆ ಕಾಂತಿಯುಳ್ಳ, ಎರಡೂ ಕಡೆಗಳಲ್ಲಿ ಸುಗ್ರೀವ - ಲಕ್ಷ್ಮಣರಿಂದ ಸೇವಿತನಾದ ರಾಮನನ್ನು ನೋಡಿ, ದೂರುತ್ತಾ ಮೆಲ್ಲನೆ ಹೀಗೆಂದನು :

**ಕಿಂ ಮಯಾಪಕೃತಂ ರಾಮ ತವ ಯೇನ ಹತೋಽಸ್ಮ್ಯಹಮ್ ।**
**ರಾಜಧರ್ಮಮವಿಜ್ಞಾಯ ಗರ್ಹಿತಂ ಕರ್ಮ ತೇ ಕೃತಮ್ ॥ ೪೮ ॥**
**ವೃಕ್ಷಖಂಡೇ ತಿರೋಭೂತ್ವಾ ತ್ಯಜತಾ ಮಯಿ ಸಾಯಕಮ್ ।**
**ಯಶಃ ಕಿಂ ಲಪ್ಸ್ಯಸೇ ರಾಮ ಚೋರವತ್ ಕೃತಸಂಗರಃ ॥ ೪೯ ॥**
**ಯದಿ ಕ್ಷತ್ರಿಯದಾಯಾದೋ ಮನೋರ್ವಂಶಸಮುದ್ಭವಃ ।**
**ಯುದ್ಧಂ ಕೃತ್ವಾ ಸಮಕ್ಷಂ ಮೇ ಪ್ರಾಪ್ಸ್ಯಸೇ ತತ್ಫಲಂ ತದಾ ॥ ೫೦ ॥**

೪೮-೫೦. ಎಲೈ ರಾಮನೆ, ನೀನು ನನ್ನನ್ನು ಕೊಂದೆಯಲ್ಲ, ನಾನು ನಿನಗೆ ಮಾಡಿರುವ ಅಪರಾಧವಾದರೂ ಏನು ? ರಾಜಧರ್ಮವನ್ನರಿಯದೆ ನೀನು ಕುತ್ಸಿತವಾದ ಕೆಲಸಮಾಡಿರುವೆ. ಎಲೈ ರಾಮನೆ, ನೀನು ಕಳ್ಳನಂತೆ ಮರದ ಕೊಂಬೆಯಲ್ಲಿ ಬಚ್ಚಿಟ್ಟು ಕೊಂಡು ನನ್ನ ಮೇಲೆ ಬಾಣಬಿಟ್ಟು ಯುದ್ಧಮಾಡಿದೆಯಲ್ಲ, ಯಾವ ಕೀರ್ತಿಯನ್ನು ಸಂಪಾದಿಸಲಿರುವೆ ? ಮನುವಿನ ಕುಲದಲ್ಲಿ ಹುಟ್ಟಿದವನಾಗಿ ಕ್ಷತ್ರಿಯಬಂಧುವಾಗಿದ್ದಲ್ಲಿ ಎದುರಿಗೇ ನನ್ನೊಡನೆ ಯುದ್ಧಮಾಡಿ ಆ ಫಲವನ್ನು ಪಡೆಯಲಿದ್ದೆಯಲ್ಲವೆ ?

**ಸುಗ್ರೀವೇಣ ಕೃತಂ ಕಿಂ ತೇ ಮಯಾ ವಾ ನ ಕೃತಂ ಕಿಮು ।**
**ರಾವಣೇನ ಹೃತಾ ಭಾರ್ಯಾ ತವ ರಾಮ ಮಹಾವನೇ ॥ ೫೧ ॥**
**ಸುಗ್ರೀವಂ ಶರಣಂ ಯಾತಃ ತದರ್ಥಮಿತಿ ಶುಶ್ರುಮ ।**
**ಬತ ರಾಮ ನ ಜಾನೀಷೇ ಮದ್ಬಲಂ ಲೋಕವಿಶ್ರುತಮ್ ॥ ೫೨ ॥**
**ರಾವಣಂ ಸಕುಲಂ ಬದ್ಧ್ವಾ ಸಸೀತಂ ಲಂಕಯಾ ಸಹ ।**
**ಆನಯಾಮಿ ಮುಹೂರ್ತಾರ್ಧಾದ್ ಯದಿ ಚೇಚ್ಛಾಮಿ ರಾಘವ ॥ ೫೩ ॥**

೫೧-೫೩. ಸುಗ್ರೀವನು ನಿನಗೆ ಮಾಡಿದ್ದೇನು ? ನಾನು ಮಾಡದಿರುವ ದೇನು ? ಎಲೈ ರಾಮನೆ, ಕಾಡಿನಲ್ಲಿ ನಿನ್ನ ಹೆಂಡತಿಯನ್ನು ರಾವಣನು ಅಪಹರಿಸಲಾಗಿ ಆಕೆಯನ್ನು ಮತ್ತೆ ಪಡೆಯುವದಕ್ಕಾಗಿ ಸುಗ್ರೀವನನ್ನು ಬಳಿಸಾರಿ ಬಂದಿರುವೆಯೆಂತ ಕೇಳಿದೆನು. ರಾಮನೆ, ನನ್ನ ಶಕ್ತಿಯು ಲೋಕಪ್ರಸಿದ್ಧವಾದುದೆಂಬುದನ್ನು ಅಯ್ಯೊ, ನೀನು ಅರಿಯೆಯ ? ನಾನು ಮನಸ್ಸುಮಾಡಿದರೆ ರಾಘವನೆ, ಸೀತೆಯನ್ನು ಲಂಕೆಯೊಡನೆ ರಾಕ್ಷಸಕುಲಸಹಿತನಾದ ರಾವಣನೊಡಗೂಡಿ ಅರ್ಧಮುಹೂರ್ತದಲ್ಲಿ ಕಟ್ಟಿತರುವವ ನಾಗಿದ್ದೇನೆ.

**ಧರ್ಮಿಷ್ಠ ಇತಿ ಲೋಕೇಽಸ್ಮಿನ್ ಕಥ್ಯಸೇ ರಘುನಂದನ ।**
**ವಾನರಂ ವ್ಯಾಧವದ್ಧತ್ವಾ ಧರ್ಮಂ ಕಂ ಲಪ್ಸ್ಯಸೇ ವದ ॥ ೫೪ ॥**
**ಅಭಕ್ಷ್ಯಂ ವಾನರಂ ಮಾಂಸಂ ಹತ್ವಾ ಮಾಂ ಕಿಂ ಕರಿಷ್ಯಸಿ ।**
**ಇತ್ಯೇವಂ ಬಹು ಭಾಷಂತಂ ವಾಲಿನಂ ರಾಘವೋಽಬ್ರವೀತ್ ॥ ೫೫ ॥**

೫೪-೫೫. 'ಎಲೈ ರಘುನಂದನನೆ, ಈ ಲೋಕದಲ್ಲಿ ಧರ್ಮಿಷ್ಠನೆಂದು ಹೇಳಿಕೊಳ್ಳುತ್ತೀಯೆ. ಆದರೆ ಬೇಡರವನಂತೆ ಕಪಿಯನ್ನು ಕೊಂದ ನೀನು ಯಾವ ಧರ್ಮ (ಪದವಿ)ಯನ್ನು ಪಡೆಯುವೆ ? ಹೇಳು. ವಾನರಮಾಂಸವು ತಿನ್ನಲು ನಿಷೇಧಿಸಲ್ಪಟ್ಟಿರುವದರಿಂದ ನನ್ನನ್ನು ಕೊಂದಾದರೂ ಏನು ಮಾಡುವೆ ?' ಹೀಗೆಲ್ಲ ಅತಿಯಾಗಿ ಮಾತನಾಡುತ್ತಿದ್ದ ವಾಲಿಯನ್ನು ಕುರಿತು ರಾಮನು ಇಂತೆಂದನು :

**ಧರ್ಮಸ್ಯ ಗೋಪ್ತಾ ಲೋಕೇಽಸ್ಮಿಂಶ್ಚರಾಮಿ ಸಶರಾಸನಃ ।**
**ಅಧರ್ಮಕಾರಿಣಂ ಹತ್ವಾ ಸದ್ಧರ್ಮಂ ಪಾಲಯಾಮ್ಯಹಮ್ ॥ ೫೬ ॥**
**ದುಹಿತಾ ಭಗಿನೀ ಭ್ರಾತುರ್ಭಾರ್ಯಾ ಚೈವ ತಥಾ ಸ್ನುಷಾ ।**
**ಸಮಾ ಯೋ ರಮತೇ ತಾಸಾಮೇಕಾಮಪಿ ವಿಮೂಢಧೀಃ ॥ ೫೭॥**
**ಪಾತಕೀ ಸ ತು ವಿಜ್ಞೇಯಃ ಸ ವಧ್ಯೋ ರಾಜಭಿಃ ಸದಾ ।**

೫೬-೫೭. 'ಧರ್ಮವನ್ನು ಕಾಪಾಡುವವನಾಗಿ ಈ ಲೋಕದಲ್ಲಿ ಧನುರ್ಧಾರಿಯಾಗಿ ನಾನು ಸಂಚರಿಸುತ್ತಾ ಅಧರ್ಮಿಷ್ಠರನ್ನು ನಾಶಗೊಳಿಸಿ ಸದ್ಧರ್ಮವನ್ನು ಕಾಪಾಡುತ್ತಿರುವೆನು. ಮಗಳು, ಸೋದರಿ, ಸೋದರನ ಹೆಂಡತಿ, ಸೊಸೆ, ಈ ನಾಲ್ವರೂ ಸಮಾನರು. ಇವರುಗಳಲ್ಲಿ ಯಾವಳಾದರೊಬ್ಬಳಲ್ಲಿ ಮೂಢಬುದ್ಧಿಯು ರಮಿಸಿದ್ದೇ ಆದರೆ ಅವನು ಪಾಪಿಯೆಂದೇ ತಿಳಿಯಬೇಕು. ರಾಜರುಗಳು ಅಂಥವನನ್ನು ಕೊಲ್ಲಬೇಕು.

**ತ್ವಂ ತು ಭ್ರಾತುಃ ಕನಿಷ್ಠಸ್ಯ ಭಾರ್ಯಾಯಾಂ ರಮಸೇ ಬಲಾತ್ ।**
**ಅತೋ ಮಯಾ ಧರ್ಮವಿದಾ ಹತೋಽಸಿ ವನಗೋಚರ ॥ ೫೮ ॥**
**ತ್ವಂ ಕಪಿತ್ವಾನ್ನ ಜಾನೀಷೇ ಮಹಾಂತೋ ವಿಚರಂತಿ ಯತ್ ।**
**ಲೋಕಂ ಪುನಾನಾಃ ಸಂಚಾರೈಃ ತತಸ್ತಾನ್ನಾತಿಭಾಷಯೇತ್ ॥ ೫೯ ॥**
**ತಚ್ಛ್ರುತ್ವಾ ಭಯಸಂತ್ರಸ್ತೋ ಜ್ಞಾತ್ವಾ ರಾಮಂ ರಮಾಪತಿಮ್ ।**
**ವಾಲೀ ಪ್ರಣಮ್ಯ ರಭಸಾದ್ ರಾಮಂ ವಚನಮಬ್ರವೀತ್ ॥ ೬೦ ॥**

೫೮-೬೦. ನೀನಾದರೊ, ಕಿರಿಯ ತಮ್ಮನ ಹೆಂಡತಿಯಲ್ಲಿ ಬಲಾತ್ಕಾರದಿಂದ ರಮಿಸಿರುವೆ. ಆದ್ದರಿಂದ ಎಲೈ ಕಾಡುಪ್ರಾಣಿಯೆ, ನೀನು ಧರ್ಮಜ್ಞನಾದ ನನ್ನಿಂದ

ಕೊಲ್ಲಲ್ಪಟ್ಟೆ. ಮಹಾತ್ಮರುಗಳು ತಮ್ಮ ಓಡಾಟದಿಂದ ಲೋಕವನ್ನು ಪವಿತ್ರಗೊಳಿಸುವವರಾಗಿ ಇರುತ್ತಾರೆಂಬುದನ್ನು ಕಪಿಯಾದ್ದರಿಂದ ನೀನರಿಯೆ. ಆದರೆ ತಿಳಿಯುವವನಾಗು. ಅಂಥವರನ್ನು ದೂಷಿಸಬಾರದು. ಹೀಗೆಂಬ ಮಾತನ್ನು ಕೇಳಿ ಹೆದರಿದ ವಾಲಿಯು ರಾಮನನ್ನು ಲಕ್ಷ್ಮೀಪತಿಯಾದ ಶ್ರೀಹರಿಯೇ - ಎಂದು ಅರಿತವನಾಗಿ ಕೂಡಲೆ ನಮಸ್ಕರಿಸಿ ಹೀಗೆಂದನು:

**ರಾಮ ರಾಮ ಮಹಾಭಾಗ ಜಾನೇ ತ್ವಾಂ ಪರಮೇಶ್ವರಮ್ ।**
**ಅಜಾನತಾ ಮಯಾ ಕಿಂಚಿತ್ ಉಕ್ತಂ ತತ್ ಕ್ಷಂತುಮರ್ಹಸಿ ॥ ೬೧ ॥**
**ಸಾಕ್ಷಾತ್ ತ್ವಚ್ಛರಘಾತೇನ ವಿಶೇಷೇಣ ತವಾಗ್ರತಃ ।**
**ತ್ಯಜಾಮ್ಯಸೂನ್ ಮಹಾಯೋಗಿದುರ್ಲಭಂ ತವ ದರ್ಶನಮ್ ॥ ೬೨ ॥**
**ಯನ್ನಾಮ ವಿವಶೋ ಗೃಹ್ಣನ್ ಮ್ರಿಯಮಾಣಃ ಪರಂ ಪದಮ್ ।**
**ಯಾತಿ ಸಾಕ್ಷಾತ್ ಸ ಏವಾದ್ಯ ಮುಮೂರ್ಷೋರ್ಮೇ ಪುರಃ ಸ್ಥಿತಃ ॥ ೬೩ ॥**

೬೧-೬೩. ಎಲೈ ರಾಮನೆ, ಮಹಾಭಾಗನೆ, ನೀನು ಪರಮೇಶ್ವರನೆಂದು ಬಲ್ಲೆನು. ಅರಿಯದೆ ನಾನು ಆಡಿರುವ ಅಲ್ಪಮಾತನ್ನು ನೀನು ಕ್ಷಮಿಸಬೇಕು. ನೇರಾಗಿ ನಿನ್ನ ಬಾಣಪ್ರಹಾರದಿಂದ - ಹಾಗೂ ಹೆಚ್ಚಾಗಿ - ನಿನ್ನ ಎದುರಿಗೇ ಈಗ ಪ್ರಾಣಬಿಡುವೆನು. ನಿನ್ನ ದರ್ಶನವು ಯೋಗಿಗಳಿಗೂ ದುರ್ಲಭವು. ಪರಾಧೀನನಾದಾಗಲೂ ಯಾವ (ನಿನ್ನ) ನಾಮವನ್ನು ನೆನೆಯುತ್ತಾ ಶರೀರವನ್ನು ಬಿಡುವನೋ ಅವನು ಪರಮಪದವಿಯನ್ನೇ ಹೊಂದುವನು. ಅಂಥ (ಭಗವಂತನೇ) ಸಾಯುತ್ತಿರುವ ಈ ನನ್ನ ಮುಂದೆ ಪ್ರತ್ಯಕ್ಷನಾಗಿರುವನು.

**ದೇವ ಜಾನಾಮಿ ಪುರುಷಂ ತ್ವಾಂ ಶ್ರಿಯಂ ಜಾನಕೀಂ ಶುಭಾಮ್ ।**
**ರಾವಣಸ್ಯ ವಧಾರ್ಥಾಯ ಜಾತಂ ತ್ವಾಂ ಬ್ರಹ್ಮಣಾರ್ಥಿತಮ್ ॥ ೬೪ ॥**
**ಅನುಜಾನೀಹಿ ಮಾಂ ರಾಮ ಯಾಂತಂ ತ್ವತ್ಪದಮುತ್ತಮಮ್ ।**
**ಮಮ ತುಲ್ಯಬಲೇ ಬಾಲೇ ಅಂಗದೇ ತ್ವಂ ದಯಾಂ ಕುರು ॥ ೬೫ ॥**
**ವಿಶಲ್ಯಂ ಕುರು ಮೇ ರಾಮ ಹೃದಯಂ ಪಾಣಿನಾ ಸ್ಪೃಶನ್ ।**
**ತಥೇತಿ ಬಾಣಮುದ್ಧೃತ್ಯ ರಾಮಃ ಪಸ್ಪರ್ಶ ಪಾಣಿನಾ ॥ ೬೬ ॥**
**ತ್ಯಕ್ತ್ವಾ ತದ್ವಾನರಂ ದೇಹಮಮರೇಂದ್ರೋಽಭವತ್ ಕ್ಷಣಾತ್ ।**

೬೪-೬೬. ಎಲೈ ಸ್ವಾಮಿಯೆ, ನಿನ್ನನ್ನು ಪುರುಷ (ವಿಷ್ಣು)ನೆಂದೂ ಶುಭಳಾದ ಸೀತೆಯನ್ನು ಲಕ್ಷ್ಮಿಯೆಂದೂ ತಿಳಿದಿರುವೆನು. ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ರಾವಣನ ಸಂಹಾರಕ್ಕಾಗಿ ನೀನು ಹುಟ್ಟಿರುವೆ. ಎಲೈ ರಾಮನೆ, ಆ ಪರಮಪದವಿಯನ್ನು

ಕುರಿತು ಹೊರಟಿರುವ ನನಗೆ ಅಪ್ಪಣೆಯನ್ನು ಕೊಡುವವನಾಗು. ನನಗೆ ಸಮಾನವಾದ ಪರಾಕ್ರಮವುಳ್ಳ ಬಾಲಕನಾದ ಅಂಗದನ ಮೇಲೆ ದಯೆಯಿಡು. ಎಲೈ ರಾಮನೆ, ನನ್ನ ಎದೆಯನ್ನು ನಿನ್ನ ಕೈಯಿಂದ ಮುಟ್ಟಿ ಬಾಣವಿಲ್ಲದ್ದನ್ನಾಗಿ ಮಾಡು' - ಎಂದನು. ಹಾಗೆಯೇ ಆಗಲೆಂದು ರಾಮನು ಬಾಣವನ್ನು ಕಿತ್ತೊಗೆದು ಕೈಯಿಂದ ಮುಟ್ಟಿದನು. (ವಾಲಿಯು) ಆ ಕಪಿಶರೀರವನ್ನು ಬಿಟ್ಟು ಕೂಡಲೆ ದೇವಶ್ರೇಷ್ಠನಾದನು.

**ವಾಲೀ ರಘೂತ್ತಮಶರಾಭಿಹತೋ ವಿಮೃಷ್ಟಃ**
**ರಾಮೇಣ ಶೀತಲಕರೇಣ ಸುಖಾಕರೇಣ।**
**ಸದ್ಯೋ ವಿಮುಚ್ಯ ಕಪಿದೇಹಮನನ್ಯಲಭ್ಯಂ**
**ಪ್ರಾಪ್ತಃ ಪರಂ ಪರಮಹಂಸಗಣೈರ್ದುರಾಪಮ್** ॥ ೬೭ ॥

೬೭. ವಾಲಿಯು ಶ್ರೀರಾಮನ ಬಾಣದಿಂದ ಹೊಡೆಯಲ್ಪಟ್ಟು ಹತನಾದರೂ ತಂಪಾದ ಹಾಗೂ ಸುಖಕರವಾದ ರಾಮನ ಕೈಯಿಂದ ಮುಟ್ಟಲ್ಪಟ್ಟು ಕಪಿದೇಹವನ್ನು ಕೂಡಲೆ ಬಿಟ್ಟವನಾಗಿ, ಪರಮಹಂಸರಿಗೂ ದುಃಸಾಧ್ಯವೆನಿಸಿದ ಹಾಗೂ ಸಾಮಾನ್ಯರಿಗೆ ಅಲಭ್ಯವಾದ ಪದವಿಯನ್ನೇ ಸೇರಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ದ್ವಿತೀಯಃ ಸರ್ಗಃ**

--------------

# ಮೂರನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ನಿಹತೇ ವಾಲಿನಿ ರಣೇ ರಾಮೇಣ ಪರಮಾತ್ಮನಾ ।**
**ದುದ್ರುವುರ್ವಾನರಾಃ ಸರ್ವೇ ಕಿಷ್ಕಿಂಧಾಂ ಭಯವಿಹ್ವಲಾಃ** ॥ ೧ ॥
**ತಾರಾಮೂಚುರ್ಮಹಾಭಾಗೇ ಹತೋ ವಾಲೀ ರಣಾಜಿರೇ ।**
**ಅಂಗದಂ ಪರಿರಕ್ಷಾದ್ಯ ಮಂತ್ರಿಣಃ ಪರಿನೋದಯ** ॥ ೨ ॥
**ಚತುರ್ದ್ವಾರಕಪಾಟಾದೀನ್ ಬದ್ಧ್ವಾ ರಕ್ಷಾಮಹೇ ಪುರೀಮ್ ।**
**ವಾನರಾಣಾಂ ತು ರಾಜಾನಮಂಗದಂ ಕುರು ಭಾಮಿನಿ** ॥ ೩ ॥

೧-೩. ಶ್ರೀಮಹಾದೇವನಿಂತೆಂದನು : ಪರಮಾತ್ಮನಾದ ರಾಮನಿಂದ ಯುದ್ಧದಲ್ಲಿ ವಾಲಿಯು ಕೊಲ್ಲಲ್ಪಡಲಾಗಿ ಭಯಚಕಿತರಾದ ಕಪಿಗಳು ಎಲ್ಲರೂ ಕಿಷ್ಕಿಂಧೆಗೆ ಓಡಿ

ಹೋದರು. ತಾರೆಯನ್ನು ಕುರಿತು ಹೀಗೆಂದರು : 'ಎಲೈ ಮಹಾಭಾಗಳೆ, ಯುದ್ಧರಂಗದಲ್ಲಿ ವಾಲಿಯು ಸತ್ತುಹೋದನು. ಈಗ ಅಂಗದನನ್ನು ಕಾಪಾಡಿಕೊ. ಮಂತ್ರಿಗಳನ್ನು ಸಮಾಧಾನಗೊಳಿಸು. ನಾವು ಈಗ ನಾಲ್ಕು ಬಾಗಿಲುಗಳ ಕದಗಳನ್ನೂ ಮುಚ್ಚಿ ಈ ನಗರಿಯನ್ನು ಕಾಪಾಡುವೆವು. ಎಲೈ ನಾರೀಮಣಿಯೆ, ಕಪಿಗಳಿಗೆಲ್ಲ ರಾಜನನ್ನಾಗಿ ಅಂಗದನನ್ನು ನೇಮಿಸು' - ಎಂದರು.

**ನಿಹತಂ ವಾಲಿನಂ ಶ್ರುತ್ವಾ ತಾರಾ ಶೋಕವಿಮೂರ್ಛಿತಾ ।**
**ಅತಾಡಯತ್ ಸ್ವಪಾಣಿಭ್ಯಾಂ ಶಿರೋ ವಕ್ಷಶ್ಚ ಭೂರಿಶಃ ॥ ೪ ॥**
**ಕಿಮಂಗದೇನ ರಾಜ್ಯೇನ ನಗರೇಣ ಧನೇನ ವಾ ।**
**ಇದಾನೀಮೇವ ನಿಧನಂ ಯಾಸ್ಯಾಮಿ ಪತಿನಾ ಸಹ ॥ ೫ ॥**
**ಇತ್ಯುಕ್ತ್ವಾ ತ್ವರಿತಾ ತತ್ರ ರುದತೀ ಮುಕ್ತಮೂರ್ಧಜಾ ।**
**ಯಯೌ ತಾರಾತಿಶೋಕಾರ್ತಾ ಯತ್ರ ಭರ್ತೃಕಲೇವರಮ್ ॥ ೬ ॥**

೪-೬. ವಾಲಿಯು ಕೊಲ್ಲಲ್ಪಟ್ಟದ್ದನ್ನು ಕೇಳಿ ತಾರೆಯು ದುಃಖದಿಂದ ಮೈಮರೆತವಳಾಗಿ ತನ್ನ ಎರಡೂ ಕೈಗಳಿಂದ ತಲೆಯನ್ನೂ ಎದೆಯನ್ನೂ ಬಹಳವಾಗಿ ಚಚ್ಚಿಕೊಂಡಳು. (ಅನಂತರ) ಅಯ್ಯೊ, ಅಂಗದನಿಂದಾಗಲಿ, ರಾಜ್ಯ, ಹಣ- ಇವುಗಳಿಂದಾಗಲಿ ಆಗಬೇಕಾದದ್ದೇನು ? ಗಂಡನೊಡನೆ ಈಗಲೇ ಸಾಯುವೆನು. ಹೀಗೆಂದು ಹೇಳುತ್ತಾ ಅಳುತ್ತಾ ತಲೆಗೆದರಿದವಳಾಗಿ ಅತಿಯಾದ ಸಂಕಟದಿಂದ ತನ್ನ ಗಂಡನ ಶರೀರವಿದ್ದಲ್ಲಿಗೆ ಹೋದಳು.

**ಪತಿತಂ ವಾಲಿನಂ ದೃಷ್ಟ್ವಾ ರಕ್ತೈಃ ಪಾಂಸುಭಿರಾವೃತಮ್ ।**
**ರುದತೀ ನಾಥ ನಾಥೇತಿ ಪತಿತಾ ತಸ್ಯ ಪಾದಯೋಃ ॥ ೭ ॥**
**ಕರುಣಂ ವಿಲಪಂತೀ ಸಾ ದದರ್ಶ ರಘುನಂದನಮ್ ।**

೭. ರಕ್ತದಿಂದಲೂ ಧೂಳಿನಿಂದಲೂ ಮೆತ್ತಲ್ಪಟ್ಟು ಬಿದ್ದುಹೋಗಿದ್ದ ವಾಲಿಯನ್ನು ಕಂಡು ನಾಥ, ನಾಥ - ಎಂದು ಕೂಗುತ್ತಾ ಅಳುತ್ತಾ ಅವನ ಕಾಲುಗಳಿಗೆ ಬಿದ್ದಳು. ಕರುಣೆಯಿಂದ ಅಳುತ್ತಾ ಆಕೆಯು ಅಲ್ಲಿ ರಾಮನನ್ನು ಕಂಡಳು.

**ರಾಮ ಮಾಂ ಜಹಿ ಬಾಣೇನ ಯೇನ ವಾಲೀ ಹತಸ್ತ್ವಯಾ ।**
**ಗಚ್ಛಾಮಿ ಪತಿಸಾಲೋಕ್ಯಂ ಪತಿರ್ಮಾಮಭಿಕಾಂಕ್ಷತೇ ॥ ೮ ॥**
**ಸ್ವರ್ಗೇಽಪಿ ನ ಸುಖಂ ತಸ್ಯ ಮಾಂ ವಿನಾ ರಘುನಂದನ ।**
**ಪತ್ನೀವಿಯೋಗಜಂ ದುಃಖಮನುಭೂತಂ ತ್ವಯಾನಘ ॥ ೯ ॥**
**ವಾಲಿನೇ ಮಾಂ ಪ್ರಯಚ್ಛಾಸು ಪತ್ನೀದಾನಫಲಂ ಲಭೇತ್ ।**

೮-೯. (ಮತ್ತು ಹೀಗೆಂದಳು). 'ಎಲೈ ರಾಮನೆ, ಯಾವ ಬಾಣದಿಂದ ನೀನು ವಾಲಿಯನ್ನು ಕೊಂದೆಯೋ ಅದರಿಂದ ನನ್ನನ್ನೂ ಕೊಲ್ಲುವವನಾಗು. ನಾನು ಪತಿಯು ಹೋಗಿರುವ ಲೋಕಕ್ಕೇ ಹೋಗುವೆನು. ಏಕೆಂದರೆ ಅವನು ನನ್ನನ್ನು ಬಯಸುತ್ತಾನೆ. ಎಲೈ ರಘುನಂದನನೆ, ನನ್ನನ್ನು ಬಿಟ್ಟು ಸ್ವರ್ಗದಲ್ಲಿಯೂ ಅವನಿಗೆ ಸುಖವಿಲ್ಲ. ಎಲೈ ಪಾಪರಹಿತನೆ, ನೀನು ಹೆಂಡತಿಯ ಅಗಲುವಿಕೆಯ ದುಃಖವನ್ನು ಅನುಭವಿಸಿರುತ್ತೀಯೆ. (ಆದ್ದರಿಂದ) ಜಾಗ್ರತೆಯಾಗಿ ನನ್ನನ್ನು ವಾಲಿಗೆ ಅರ್ಪಿಸುವವನಾಗು. ಆಗ ಪತ್ನೀದಾನದ ಫಲವು ಲಭಿಸಲಿದೆ.

**ಸುಗ್ರೀವ ತ್ವಂ ಸುಖಂ ರಾಜ್ಯಂ ದಾಪಿತಂ ವಾಲಿಘಾತಿನಾ ।**
**ರಾಮೇಣ ರುಮಯಾ ಸಾರ್ಧಂ ಭುಂಕ್ಷ್ವ ಸಾಪತ್ನವರ್ಜಿತಮ್ ॥ ೧೦ ॥**
**ಇತ್ಯೇವಂ ವಿಲಪತೀಂ ತಾಂ ತಾರಾಂ ರಾಮೋ ಮಹಾಮನಾಃ ।**
**ಸಾಂತ್ವಯಾಮಾಸ ದಯಯಾ ತತ್ತ್ವಜ್ಞಾನೋಪದೇಶತಃ ॥ ೧೧ ॥**

೧೦-೧೧. ಎಲೈ ಸುಗ್ರೀವನೆ, ವಾಲಿಸಂಹಾರಕನಾದ (ರಾಮನಿಂದ) ನಿನಗೆ ರಾಜ್ಯವು ಕೊಡಲ್ಪಟ್ಟಿದೆ. ಶತ್ರುರಹಿತವಾದ ರಾಜ್ಯವನ್ನು ರಾಮನೊಡಗೂಡಿ ರುಮೆಯೊಡನೆ ಸುಖದಿಂದ ಅನುಭವಿಸುವವನಾಗು.' ಹೀಗೆಂದು ಅಳುತ್ತಿದ್ದ ಆ ತಾರೆಯನ್ನು ಮಹಾತ್ಮನಾದ ರಾಮನು ಕರುಣೆಯಿಂದ ತತ್ತ್ವೋಪದೇಶದ ಮೂಲಕ ತಿಳಿವನ್ನು ಉಂಟುಮಾಡುತ್ತಾ ಸಮಾಧಾನಗೊಳಿಸಿದನು.

**ಕಿಂ ಭೀರು ಶೋಚಸಿ ವ್ಯರ್ಥಂ ಶೋಕಸ್ಯಾವಿಷಯಂ ಪತಿಮ್ ।**
**ಪತಿಸ್ತವಾಯಂ ದೇಹೋ ವಾ ಜೀವೋ ವಾ ವದ ತತ್ತ್ವತಃ ॥ ೧೨ ॥**
**ಪಂಚಾತ್ಮಕೋ ಜಡೋ ದೇಹಃ ತ್ವಙ್ಮಾಂಸರುಧಿರಾಸ್ಥಿಮಾನ್ ।**
**ಕಾಲಕರ್ಮಗುಣೋತ್ಪನ್ನಃ ಸೋಽಪ್ಯಾಸ್ತೇಽದ್ಯಾಪಿ ತೇ ಪುರಃ ॥ ೧೩ ॥**
**ಮನ್ಯಸೇ ಜೀವಮಾತ್ಮಾನಂ ಜೀವಸ್ತರ್ಹಿ ನಿರಾಮಯಃ ।**
**ನ ಜಾಯತೇ ನ ಮ್ರಿಯತೇ ನ ತಿಷ್ಠತಿ ನ ಗಚ್ಛತಿ ॥ ೧೪ ॥**
**ನ ಸ್ತ್ರೀ ಪುಮಾನ್ ವಾ ಷಂಡೋ ವಾ ಜೀವಃ ಸರ್ವಗತೋಽವ್ಯಯಃ ।**
**ಏಕ ಏವಾದ್ವಿತೀಯೋಽಯಮಾಕಾಶವದಲೇಪಕಃ ॥ ೧೫ ॥**
**ನಿತ್ಯೋ ಜ್ಞಾನಮಯಃ ಶುದ್ಧಃ ಸ ಕಥಂ ಶೋಕಮರ್ಹತಿ ।**

೧೨-೧೫. 'ಎಲೌ ಅಬಲೆಯೆ, ದುಃಖಕ್ಕೆ ಅರ್ಹನಲ್ಲದ ಗಂಡನನ್ನು ಕುರಿತು ವ್ಯರ್ಥವಾಗಿ ಏಕೆ ದುಃಖಿಸುತ್ತಿರುವೆ ? ನಿನ್ನ ಗಂಡನೆಂಬುವನು ಈ ದೇಹವೊ, ಅಥವಾ ಜೀವನೊ, ನಿಶ್ಚಯವಾಗಿ ಹೇಳು. ಪಂಚಭೂತಾತ್ಮಕವಾದ, ಚರ್ಮ, ಮಾಂಸ, ರಕ್ತ, ಎಲುಬುಗಳಿಂದ ಕೂಡಿದ ಕಾಲ-ಕರ್ಮಗಳ ನಿಮಿತ್ತವಾಗಿ ಹುಟ್ಟಿರುವ, ಜಡವಾದ

ದೇಹವೇ (ನಿನ್ನ ಪತಿಯಾದರೆ) ಅದು ಈಗಲೂ ನಿನ್ನ ಎದುರಿಗೇ ಇದೆ. ಹಾಗಿಲ್ಲದೆ ಜೀವನೇ (ಪತಿಯೆಂದು)ಎಣಿಸುವೆಯಾದರೆ ಜೀವನು ದೋಷರಹಿತನು. ಅವನು ಹುಟ್ಟುವದಿಲ್ಲ ; ಸಾಯುವದಿಲ್ಲ ;ನಿಂತಿರುವದಿಲ್ಲ ;ಓಡಾಡುವದಿಲ್ಲ ; ಅವನು ಗಂಡಸಲ್ಲ; ಹೆಂಗಸಲ್ಲ ; ನಪುಂಸಕನಲ್ಲ ; ಅವನು ಸರ್ವಗತನೂ ಅವ್ಯಯನೂ ಆಗಿರುವನು. ಮತ್ತು ಏಕನು ; ಅದ್ವಿತೀಯನು ; ಆಕಾಶದಂತೆ ಅಂಟಿಲ್ಲದವನು ;ನಿತ್ಯನು ; ಜ್ಞಾನಸ್ವರೂಪನು ; ಶುದ್ಧನು ; ಅವನನ್ನು ಕುರಿತು ಶೋಕಿಸುವದಾದರೂ ಹೇಗೆ ?

**ತಾರೋವಾಚ-**

**ದೇಹೋಽಚಿತ್ ಕಾಷ್ಠವದ್ ರಾಮ ಜೀವೋ ನಿತ್ಯಶ್ಚಿದಾತ್ಮಕಃ ।**
**ಸುಖದುಃಖಾದಿಸಂಬಂಧಃ ಕಸ್ಯ ಸ್ಯಾದ್ರಾಮ ಮೇ ವದ ॥ ೧೬ ॥**

೧೬. ತಾರೆಯಿಂತೆಂದಳು : ಎಲೈ ರಾಮನೆ, ಶರೀರವು ಕಟ್ಟಿಗೆಯಂತೆ ಜಡವು. ಜೀವನು ಚೇತನಸ್ವರೂಪನಾದ ನಿತ್ಯನು. ಹೀಗಿರುವಲ್ಲಿ ಸುಖದುಃಖಾದಿಗಳ ಸಂಬಂಧವು ಎಲೈ ರಾಮನೆ, ಯಾರಿಗಾಗುತ್ತದೆ ? ಎಂಬಿದನ್ನು ನನಗೆ ಹೇಳು.

**ಶ್ರೀರಾಮ ಉವಾಚ-**

**ಅಹಂಕಾರಾದಿಸಂಬಂಧೋ ಯಾವದ್ದೇಹೇಂದ್ರಿಯೈಃ ಸಹ ।**
**ಸಂಸಾರಸ್ತಾವದೇವ ಸ್ಯಾದಾತ್ಮನಸ್ತ್ವವಿವೇಕತಃ ॥ ೧೭ ॥**
**ಮಿಥ್ಯಾರೋಪಿತಸಂಸಾರೋ ನ ಸ್ವಯಂ ವಿನಿವರ್ತತೇ ।**
**ವಿಷಯಾನ್ ಧ್ಯಾಯಮಾನಸ್ಯ ಸ್ವಪ್ನೇ ಮಿಥ್ಯಾಗಮೋ ಯಥಾ ॥ ೧೮ ॥**
**ಅನಾದ್ಯವಿದ್ಯಾಸಂಬಂಧಾತ್ ತತ್ಕಾರ್ಯಾಹಂಕೃತೇಸ್ತಥಾ ।**
**ಸಂಸಾರೋಽಪಾರ್ಥಕೋಽಪಿ ಸ್ಯಾತ್ ರಾಗದ್ವೇಷಾದಿಸಂಕುಲಃ ॥ ೧೯ ॥**
**ಮನ ಏವ ಹಿ ಸಂಸಾರೋ ಬಂಧಶ್ಚೈವ ಮನಃ ಶುಭೇ ।**
**ಆತ್ಮಾ ಮನಃಸಮಾನತ್ವಮೇತ್ಯ ತದ್ಗತಬಂಧಭಾಕ್ ॥ ೨೦ ॥**

೧೭-೨೦. ಶ್ರೀರಾಮನಿಂತೆಂದನು : ದೇಹೇಂದ್ರಿಯಗಳೊಡನೆ ಅಹಂಕಾರಾದಿಗಳ ಸಂಬಂಧವು ಎಲ್ಲಿಯವರೆಗಿರುವದೋ ಅಲ್ಲಿಯವರೆಗೇ ಸಂಸಾರವು. ಇದು ಆತ್ಮನ ವಿಷಯವಾದ ವಿವೇಕವಿಲ್ಲದ್ದರಿಂದಾದದ್ದು. ಹೀಗೆ ಸುಳ್ಳಾಗಿಯೇ (ಆತ್ಮನಲ್ಲಿ) ಕಲ್ಪಿಸಲ್ಪಟ್ಟಿರುವ ಸಂಸಾರವು - ಹೇಗೆ ವಿಷಯಗಳನ್ನೇ ಚಿಂತಿಸುತ್ತಿರುವವನಿಗೆ ಕನಸಿನಲ್ಲಿ ಅನೇಕ ಪದಾರ್ಥಗಳು ಪ್ರತ್ಯಕ್ಷವಾಗಿಯೇ ಕಾಣುವಂತೆ -(ಹಾಗು) ಕನಸಿರುವವರೆಗೂ ನಿಜವಾಗಿರುವಂತೆ)- ಜ್ಞಾನವಾಗುವವರೆಗೂ (ಇರುವದು). ಇದು ತಾನಾಗಿಯೇ

ಹೋಗುವದಿಲ್ಲ. ಅನಾದಿಯಾದ ಅವಿದ್ಯೆಯ ಸಂಬಂಧದಿಂದ ಹಾಗೂ ಅವಿದ್ಯೆಯ ಕಾರ್ಯವಾದ ಅಹಂಕಾರದ ನಿಮಿತ್ತ ರಾಗದ್ವೇಷಾದಿಗಳಿಂದ ಕಲುಷಿತವಾಗಿರುವ ಈ ಸಂಸಾರವು ಮಿಥ್ಯೆಯಾಗಿಯೇ ಇರುವದು. ಎಲೈ ಶುಭರೂಪಳೆ, ಸಂಸಾರವೆಂದರೆ ಮನಸ್ಸೇ. ಬಂಧವೆಂದರೂ ಅದೇ. ಆತ್ಮನಾದರೊ, ಮನಸ್ಸಿಗೆ ಹೊಂದಿಕೊಂಡವನಾಗಿರುವಾಗ ಆ (ಮನಸ್ಸಿನ) ಬಂಧದಿಂದ ತಾನೂ ಬದ್ಧನಾದಂತೆ ಕಂಡುಬರುವನು.

**ಯಥಾ ವಿಶುದ್ಧಃ ಸ್ಫಟಿಕೋಽಲಕ್ತಕಾದಿಸಮೀಪಗಃ**
**ತತ್ತದ್ವರ್ಣಯುಗಾಭಾತಿ ವಸ್ತುತೋ ನಾಸ್ತಿ ರಂಜನಮ್ ॥ ೨೧ ॥**
**ಬುದ್ಧೀಂದ್ರಿಯಾದಿಸಾಮೀಪ್ಯಾದಾತ್ಮನಃ ಸಂಸೃತಿರ್ಬಲಾತ್ ।**
**ಆತ್ಮಾ ಸ್ವಲಿಂಗಂ ತು ಮನಃ ಪರಿಗೃಹ್ಯ ತದುದ್ಭವಾನ್ ॥ ೨೨ ॥**
**ಕಾಮಾನ್ ಜುಷನ್ ಗುಣೈರ್ಬದ್ಧಃ ಸಂಸಾರೇ ವರ್ತತೇಽವಶಃ ।**

೨೧-೨೨. ಹೇಗೆ ಸ್ವಚ್ಛವಾದ ಸ್ಫಟಿಕವು ಅರಗು ಮುಂತಾದ ಪದಾರ್ಥಗಳ ಸಮೀಪದಲ್ಲಿದ್ದಾಗ ಆಯಾ ಬಣ್ಣಗಳನ್ನು ಹೊಂದಿದಂತೆ ಕಾಣುತ್ತದೆಯೋ - ನಿಜವಾಗಿ ನೋಡಿದರೆ ಅದರಲ್ಲಿ ಕೆಂಪುಬಣ್ಣವಿರುವದಿಲ್ಲವೋ ಹಾಗೆಯೇ ಬುದ್ಧಿ, ಇಂದ್ರಿಯಗಳೇ ಮುಂತಾದ ಉಪಾಧಿಗಳ ಸಂಬಂಧದಿಂದ ಆತ್ಮನಿಗೆ ಸಂಸಾರವು ಬಲಾತ್ಕಾರದಿಂದ ಕಲ್ಪಿಸಲ್ಪಟ್ಟಿದೆ. ಆತ್ಮನಾದರೊ, ತನ್ನ ಉಪಾಧಿಯಾದ ಮನಸ್ಸನ್ನು ಸ್ವೀಕರಿಸಿ ಆ (ಮನಸ್ಸಿನಲ್ಲಿ) ಹುಟ್ಟುವ ಕಾಮಾದಿಗಳನ್ನು ಅನುಭವಿಸುತ್ತಾ ಸತ್ತ್ವಾದಿಗಳಿಂದ ಬದ್ಧನಾದಂತೆಯೂ ಪರಾಧೀನನಾಗಿರು ವಂತೆಯೂ ಕಂಡುಬರುತ್ತಿರುವನು.

**ಆದೌ ಮನೋಗುಣಾನ್ ಸೃಷ್ಟ್ವಾ ತತಃ ಕರ್ಮಾಣ್ಯನೇಕಧಾ ।**
**ಶುಕ್ಲಲೋಹಿತಕೃಷ್ಣಾನಿ ಗತಯಃ ತತ್ಸಮಾನತಃ ॥ ೨೩ ॥**
**ಏವಂ ಕರ್ಮವಶಾಜ್ಜೀವೋ ಭ್ರಮತ್ಯಾಭೂತಸಂಪ್ಲವಮ್ ।**
**ಸರ್ವೋಪಸಂಹೃತೌ ಜೀವೋ ವಾಸನಾಭಿಃ ಸ್ವಕರ್ಮಭಿಃ ॥ ೨೪ ॥**
**ಅನಾದ್ಯವಿದ್ಯಾವಶಗಃ ತಿಷ್ಠತ್ಯಭಿನಿವೇಶತಃ ।**
**ಸೃಷ್ಟಿಕಾಲೇ ಪುನಃ ಪೂರ್ವವಾಸನಾಮಾನಸೈಃ ಸಹ ॥ ೨೫ ॥**
**ಜಾಯತೇ ಪುನರಪ್ಯೇವಂ ಘಟೀಯಂತ್ರಮಿವಾವಶಃ ।**

೨೩-೨೫. ಮೊದಲು ಜೀವನ ರಾಗಾದಿದೋಷಗಳು ಮನಸ್ಸಿನ ಗುಣಗಳನ್ನು ಉಂಟುಮಾಡಿ ಅನಂತರ ಪುಣ್ಯ-ಪಾಪ- ಮಿಶ್ರರೂಪಗಳಾದ ಅನೇಕ ಕರ್ಮಗಳನ್ನು ಉಂಟುಮಾಡುವವು. ಅದಕ್ಕೆ ಸಮಾನವಾದ ಲೋಕಗಳೂ (ಗತಿಗಳು) ಆಗುವವು. ಹೀಗೆ ಜೀವನು ಕರ್ಮವಶನಾಗಿ ಪ್ರಲಯಕಾಲವಾಗುವವರೆಗೂ ತಿರುಗುತ್ತಿರುವನು. ಎಲ್ಲವೂ ಪ್ರಲಯವಾದಾಗಲೂ ಜೀವನು ತನ್ನ ಕರ್ಮವಾಸನೆಗಳಿಂದ

ಅನಾದಿಯಾದ ಅವಿದ್ಯೆಗೆ ವಶನಾಗಿ ಅಹಂಕಾರರೂಪದಿಂದ (ಅವ್ಯಕ್ತ)ವಾಗಿದ್ದು ಕೊಂಡಿರುವನು. ಮತ್ತೆ ಸೃಷ್ಟಿಕಾಲದಲ್ಲಿ ಹಿಂದಿನ ವಾಸನೆಗಳಿಂದ ಕೂಡಿದ ಮನಸ್ಸಿನೊಡನೆ ಮತ್ತೆ (ಕರ್ಮ)ವಶನಾಗಿ ಘಟೀಯಂತ್ರವು (ಏತವು) ಮೇಲಕ್ಕೂ ಕೆಳಕ್ಕೂ ಓಡಾಡುವಂತೆ - ಹುಟ್ಟುವನು.

**ಯದಾ ಪುಣ್ಯವಿಶೇಷೇಣ ಲಭತೇ ಸಂಗತಿಂ ಸತಾಮ್।**
**ಮದ್ಭಕ್ತಾನಾಂ ಸುಶಾಂತಾನಾಂ ತದಾ ಮದ್ವಿಷಯಾ ಮತಿಃ ॥ ೨೬ ॥**
**ಮತ್ಕಥಾಶ್ರವಣೇ ಶ್ರದ್ಧಾ ದುರ್ಲಭಾ ಜಾಯತೇ ತತಃ ।**
**ತತಃ ಸ್ವರೂಪವಿಜ್ಞಾನಮನಾಯಾಸೇನ ಜಾಯತೇ ॥ ೨೭ ॥**
**ತದಾಚಾರ್ಯಪ್ರಸಾದೇನ ವಾಕ್ಯಾರ್ಥಜ್ಞಾನತಃ ಕ್ಷಣಾತ್ ।**
**ದೇಹೇಂದ್ರಿಯಮನಃಪ್ರಾಣಾಹಂಕೃತಿಭ್ಯಃ ಪೃಥಕ್ ಸ್ಥಿತಮ್ ॥ ೨೮ ॥**
**ಸ್ವಾತ್ಮಾನುಭವತಃ ಸತ್ಯಮಾನಂದಾತ್ಮಾನಮದ್ವಯಮ್ ।**
**ಜ್ಞಾತ್ವಾ ಸದ್ಯೋ ಭವೇನ್ಮುಕ್ತಃ ಸತ್ಯಮೇವ ಮಯೋದಿತಮ್ ॥ ೨೯ ॥**

೨೬-೨೯. ಯಾವಾಗ ಪುಣ್ಯಬಲದಿಂದ ನನ್ನ ಭಕ್ತರಾದ, ಶಾಂತರಾದ ಸತ್ಪುರುಷರ ಸಂಗವನ್ನು ಹೊಂದುವನೋ ಆಗ ನನ್ನ ವಿಷಯವಾದ ಬುದ್ಧಿಯುಂಟಾಗುವದು. ಅನಂತರ (ಪಾಪಿಗಳಿಗೆ) ದುರ್ಲಭವಾದ ನನ್ನ ಕಥೆಯನ್ನು ಕೇಳುವದರಲ್ಲಿ ಶ್ರದ್ಧೆಯುಂಟಾಗುವದು. ಅನಂತರ ಶ್ರಮವಿಲ್ಲದೆ ನನ್ನ ಸ್ವರೂಪಜ್ಞಾನವುಂಟಾಗುವದು. ಆಗ ಗುರುವಿನ ಅನುಗ್ರಹದಿಂದ ಹಾಗೂ ವಾಕ್ಯಾರ್ಥಜ್ಞಾನದಿಂದ ಕ್ಷಣಮಾತ್ರದಲ್ಲಿ - ದೇಹ, ಇಂದ್ರಿಯಗಳು, ಅಹಂಕಾರಗಳಿಂದ ವಿಲಕ್ಷಣನಾದ, ಸತ್ಯನಾದ, ಅದ್ವಿತೀಯನಾದ, ಆನಂದಾತ್ಮನನ್ನು ತನ್ನ ಅನುಭವದಿಂದ ಅರಿತುಕೊಂಡವನಾಗಿ ಕೂಡಲೆ ಮುಕ್ತನಾಗಿಬಿಡುವನು. ಈಗ ನಾನು ಹೇಳಿದ್ದು ಸತ್ಯವಾಗಿರುತ್ತದೆ.

**ಏವಂ ಮಯೋದಿತಂ ಸಮ್ಯಗಾಲೋಚಯತಿ ಯೋಽನಿಶಮ್ ।**
**ತಸ್ಯ ಸಂಸಾರದುಃಖಾನಿ ನ ಸ್ಪೃಶಂತಿ ಕದಾಚನ ॥ ೩೦ ॥**
**ತ್ವಮಪ್ಯೇತನ್ಮಯಾ ಪ್ರೋಕ್ತಮಾಲೋಚಯ ವಿಶುದ್ಧಧೀಃ ।**
**ನ ಸ್ಪೃಶ್ಯಸೇ ದುಃಖಜಾಲೈಃ ಕರ್ಮಬಂಧಾದ್ ವಿಮೋಕ್ಷ್ಯಸೇ ॥ ೩೧ ॥**
**ಪೂರ್ವಜನ್ಮನಿ ತೇ ಸುಭ್ರು ಕೃತಾ ಮದ್ಭಕ್ತಿರುತ್ತಮಾ ।**
**ಅತಸ್ತವ ವಿಮೋಕ್ಷಾಯ ರೂಪಂ ಮೇ ದರ್ಶಿತಂ ಶುಭೇ ॥ ೩೨ ॥**
**ಧ್ಯಾತ್ವಾ ಮದ್ರೂಪಮನಿಶಮಾಲೋಚಯ ಮಯೋದಿತಮ್ ।**
**ಪ್ರವಾಹಪತಿತಂ ಕಾರ್ಯಂ ಕುರ್ವಂತ್ಯಪಿ ನ ಲಿಪ್ಯಸೇ ॥ ೩೩ ॥**

೩೦-೩೩. ಹೀಗೆ ನಾನು ಹೇಳಿರುವ (ಉಪದೇಶ)ವನ್ನು ಯಾವನು ಯಾವಾಗಲೂ ಚೆನ್ನಾಗಿ ಚಿಂತಿಸುತ್ತಾನೋ ಅವನಿಗೆ ಎಂದೆಂದಿಗೂ ಸಂಸಾರದುಃಖಗಳು ಸೋಂಕುವದಿಲ್ಲ. ನೀನು ಕೂಡ ಈಗ ನಾನು ಹೇಳಿದ್ದನ್ನು ಪರಿಶುದ್ಧವಾದ ಮನಸ್ಸಿನಿಂದ ಆಲೋಚಿಸು. ಆಗ ಕರ್ಮಸಮೂಹಗಳಿಂದ ಅಂಟದೆ ಇರುವವಳಾಗಿ ಕರ್ಮಗಳ ಬಂಧದಿಂದ ಬಿಡುಗಡೆಯನ್ನು ಹೊಂದುವೆ. ಎಲೈ ಶೋಭನವಾದ ಹುಬ್ಬುಳ್ಳವಳೆ, ನೀನು ಹಿಂದಿನ ಜನ್ಮದಲ್ಲಿ ನನ್ನ ಭಕ್ತಿಯನ್ನು ಮಾಡಿದವಳಾಗಿದ್ದೆ. ಆದ್ದರಿಂದ ನಿನಗೆ ಮುಕ್ತಿಪ್ರಾಪ್ತಿಯಾಗಲೆಂದು ನನ್ನ ಈ ರೂಪವು ತೋರಿಸಲ್ಪಟ್ಟಿತು. ನನ್ನ ರೂಪವನ್ನು ಧ್ಯಾನಿಸುತ್ತಾ ನಾನು ಹೇಳಿದ್ದನ್ನು ಯಾವಾಗಲೂ ಚಿಂತಿಸುತ್ತಿರು. ಕಾಲಪ್ರವಾಹದಲ್ಲಿ ಆಗಾಗ ಒದಗಿಬರುವ ಕೆಲಸಗಳನ್ನು ಮಾಡುತ್ತಿದ್ದರೂ ನಿನಗೆ ಅದು ಅಂಟಿಕೊಳ್ಳುವದಿಲ್ಲ.

**ಶ್ರೀರಾಮೇಣೋದಿತಂ ಸರ್ವಂ ಶ್ರುತ್ವಾ ತಾರಾತಿವಿಸ್ಮಿತಾ ।**
**ದೇಹಾಭಿಮಾನಜಂ ಶೋಕಂ ತ್ಯಕ್ತ್ವಾ ನತ್ವಾ ರಘೂತ್ತಮಮ್ ॥ ೩೪ ॥**
**ಆತ್ಮಾನುಭವಸಂತುಷ್ಟಾ ಜೀವನ್ಮುಕ್ತಾ ಬಭೂವ ಹ ।**
**ಕ್ಷಣಸಂಗಮಮಾತ್ರೇಣ ರಾಮೇಣ ಪರಮಾತ್ಮನಾ ॥ ೩೫ ॥**
**ಅನಾದಿಬಂಧಂ ನಿರ್ಧೂಯ ಮುಕ್ತಾ ಸಾಪಿ ವಿಕಲ್ಮಷಾ ।**

೩೪-೩೫. ತಾರೆಯು ಶ್ರೀರಾಮನು ಹೇಳಿದ್ದೆಲ್ಲವನ್ನೂ ಕೇಳಿ ಆಶ್ಚರ್ಯಗೊಂಡವಳಾಗಿ ದೇಹಾಭಿಮಾನನಿಮಿತ್ತದಿಂದುಂಟಾಗಿದ್ದ ಶೋಕವನ್ನು ಬಿಟ್ಟು ರಘೂತ್ತಮನಾದ ರಾಮನನ್ನು ನಮಸ್ಕರಿಸಿ ಆತ್ಮಾನುಭವದಿಂದ ತೃಪ್ತಳಾಗಿ ಜೀವನ್ಮುಕ್ತಳಾದಳು. ಪರಮಾತ್ಮನಾದ ರಾಮನೊಡನೆ ಕ್ಷಣಕಾಲ ಸಂಬಂಧವನ್ನು ಪಡೆದದ್ದರಿಂದಲೇ ಅನಾದಿಯಾದ (ಅವಿದ್ಯಾ) ಬಂಧವನ್ನು ಕೊಡವಿಕೊಂಡು ಪಾಪರಹಿತಳಾಗಿ (ಬದುಕಿರುವಾಗಲೆ) ಮುಕ್ತಿಯನ್ನು ಪಡೆದಳು.

**ಸುಗ್ರೀವೋಽಪಿ ಚ ತಚ್ಛ್ರುತ್ವಾ ರಾಮವಕ್ತ್ರಾತ್ ಸಮೀರಿತಮ್ ।**
**ಜಹಾವಜ್ಞಾನಮಖಿಲಂ ಸ್ವಸ್ಥಚಿತ್ತೋಽಭವತ್ತದಾ ॥ ೩೬ ॥**
**ತತಃ ಸುಗ್ರೀವಮಾಹೇದಂ ರಾಮೋ ವಾನರಪುಂಗವಮ್ ।**
**ಭ್ರಾತುರ್ಜ್ಯೇಷ್ಠಸ್ಯ ಪುತ್ರೇಣ ಯದ್ಯುಕ್ತಂ ಸಾಂಪರಾಯಿಕಮ್ ॥ ೩೭ ॥**
**ಕುರು ಸರ್ವಂ ಯಥಾನ್ಯಾಯಂ ಸಂಸ್ಕಾರಾದಿ ಮಮಾಜ್ಞಯಾ ।**

೩೬-೩೭. ಸುಗ್ರೀವನು ಕೂಡ ರಾಮನ ಮುಖದಿಂದ ಹೊರಬಿದ್ದ ಆ (ಉಪದೇಶವನ್ನು) ಕೇಳಿ ಅಜ್ಞಾನವನ್ನು ಪೂರ್ತಿಯಾಗಿ ಬಿಟ್ಟವನಾಗಿ ಆಗ ಸಮಾಧಾನಚಿತ್ತವುಳ್ಳವನಾದನು. ಅನಂತರ ರಾಮನು ಸುಗ್ರೀವನನ್ನು ಕುರಿತು ಹೀಗೆಂದನು : ಹಿರಿಯಣ್ಣನಾದ ಮೃತನಾದ (ವಾಲಿಗೆ) ಮಗನ ಮೂಲಕ

ಮಾಡಲ್ಪಡಬೇಕಾದ ಯಾವ ಕರ್ಮಾಂತರಗಳುಂಟೋ ಅವೆಲ್ಲ ಸಂಸ್ಕಾರಗಳನ್ನೂ ನನ್ನ ಆಜ್ಞೆಯಂತೆ ಶಾಸ್ತ್ರಾನುಗುಣವಾಗಿ ಮಾಡು - ಎಂದನು.

**ತಥೇತಿ ಬಲಿಭಿರ್ಮುಖ್ಯೈಃ ವಾನರೈಃ ಪರಿಣೀಯ ತಮ್ ।**
**ವಾಲಿನಂ ಪುಷ್ಪಕೇ ಕ್ಷಿಪ್ತ್ವಾ ಸರ್ವರಾಜೋಪಚಾರಕೈಃ ॥ ೩೮ ॥**
**ಭೇರೀದುಂದುಭಿನಿರ್ಘೋಷೈಃ ಬ್ರಾಹ್ಮಣೈರ್ಮಂತ್ರಿಭಿಃ ಸಹ ।**
**ಯೂಥಪೈರ್ವಾನರೈಃ ಪೌರೈಃ ತಾರಯಾ ಚಾಂಗದೇನ ಚ ॥ ೩೯ ॥**
**ಗತ್ವಾ ಚಕಾರ ತತ್ಸರ್ವಂ ಯಥಾಶಾಸ್ತ್ರಂ ಪ್ರಯತ್ನತಃ ।**

೩೮-೩೯. ಹಾಗೆಯೇ ಆಗಲೆಂದು (ಸುಗ್ರೀವನು) ಮಂತ್ರಿಗಳು, ಮುಖ್ಯರಾದ ಕಪಿಗಳು, ಪೌರರು, ತಾರಾದೇವಿ, ಅಂಗದ- ಇವರುಗಳೊಡನೆ ಎಲ್ಲಾ ರಾಜೋಪಚಾರಗಳಿಂದ ಕೂಡಿದ ಮತ್ತು ಭೇರಿನಗಾರಿಗಳ ಧ್ವನಿಯಿಂದಲೂ ಬ್ರಾಹ್ಮಣರ ವೇದಘೋಷಗಳಿಂದಲೂ ಕೂಡಿದ ಹೂವಿನಿಂದಲಂಕೃತವಾದ (ರಥ)ದಲ್ಲಿ ವಾಲಿಯ ಮೃತಶರೀರವನ್ನಿಟ್ಟು (ಅಂತ್ಯಯಾತ್ರೆ ಮಾಡಿಸಿ) ಗೌರವದಿಂದ ಶಾಸ್ತ್ರೀಯವಾಗಿ ಸಂಸ್ಕಾರಗಳನ್ನು ನೆರವೇರಿಸಿದನು.

**ಸ್ನಾತ್ವಾ ಜಗಾಮ ರಾಮಸ್ಯ ಸಮೀಪಂ ಮಂತ್ರಿಭಿಃ ಸಹ ।**
**ನತ್ವಾ ರಾಮಸ್ಯ ಚರಣೌ ಸುಗ್ರೀವಃ ಪ್ರಾಹ ಹೃಷ್ಟಧೀಃ ॥ ೪೦॥**
**ರಾಜ್ಯಂ ಪ್ರಶಾಧಿ ರಾಜೇಂದ್ರ, ವಾನರಾಣಾಂ ಸಮೃದ್ಧಿಮತ್ ।**
**ದಾಸೋಽಹಂ ತೇ ಪಾದಪದ್ಮಂ ಸೇವೇ ಲಕ್ಷ್ಮಣವಚ್ಚಿರಮ್ ॥ ೪೧ ॥**
**ಇತ್ಯುಕ್ತೋ ರಾಘವಃ ಪ್ರಾಹ ಸುಗ್ರೀವಂ ಸಸ್ಮಿತಂ ವಚಃ ।**

೪೦-೪೧. ಅನಂತರ ಸ್ನಾನಮಾಡಿ ಮಂತ್ರಿಗಳೊಡಗೂಡಿ ರಾಮನ ಸಮೀಪಕ್ಕೆ ಬಂದನು. ರಾಮನ ಪಾದಗಳಿಗೆ ನಮಸ್ಕರಿಸಿ ಸಂತುಷ್ಟಬುದ್ಧಿಯವನಾದ ಸುಗ್ರೀವನು ಹೀಗೆಂದನು : 'ಎಲೈ ರಾಜೇಂದ್ರನೆ, ಸಮೃದ್ಧಿಪೂರ್ಣವಾದ ವಾನರ ರಾಜ್ಯವನ್ನು ನೀನು ಆಳುವವನಾಗು. ನಾನು ನಿನ್ನ ಸೇವಕನಾಗಿದ್ದುಕೊಂಡು ಲಕ್ಷ್ಮಣನಂತೆ ನಿನ್ನ ಪಾದಾರವಿಂದಗಳನ್ನು ಚಿರಕಾಲ ಸೇವೆಮಾಡಿಕೊಂಡಿರುತ್ತೇನೆ.' ಹೀಗೆಂದ ಕೂಡಲೆ ರಾಮನು ಮುಗುಳುನಗುತ್ತಾ ಸುಗ್ರೀವನನ್ನು ಕುರಿತು ಹೀಗೆಂದನು :

**ತ್ವಮೇವಾಹಂ ನ ಸಂದೇಹಃ ಶೀಘ್ರಂ ಗಚ್ಛ ಮಮಾಜ್ಞಯಾ ।**
**ಪುರರಾಜ್ಯಾಧಿಪತ್ಯೇ ತ್ವಂ ಸ್ವಾತ್ಮಾನಮಭಿಷೇಚಯ ॥ ೪೨ ॥**
**ನಗರಂ ನ ಪ್ರವೇಕ್ಷ್ಯಾಮಿ ಚತುರ್ದಶ ಸಮಾಃ ಸಖೇ ।**
**ಆಗಮಿಷ್ಯತಿ ಮೇ ಭ್ರಾತಾ ಲಕ್ಷ್ಮಣಃ ಪತ್ತನಂ ತವ ॥ ೪೩ ॥**

**ಅಂಗದಂ ಯೌವರಾಜ್ಯೇ ತ್ವಮಭಿಷೇಚಯ ಸಾದರಮ್ ।**
**ಅಹಂ ಸಮೀಪೇ ಶಿಖರೇ ಪರ್ವತಸ್ಯ ಸಹಾನುಜಃ ॥ ೪೪ ॥**
**ವತ್ಸ್ಯಾಮಿ ವರ್ಷದಿವಸಾನ್ ತತಸ್ತ್ವಂ ಯತ್ನವಾನ್ ಭವ ।**
**ಕಿಂಚಿತ್ ಕಾಲಂ ಪುರೇ ಸ್ಥಿತ್ವಾ ಸೀತಾಯಾಃ ಪರಿಮಾರ್ಗಣೇ ॥ ೪೫ ॥**

೪೨-೪೫. 'ನೀನೇ ನಾನು- ಈ ಬಗ್ಗೆ ಸಂಶಯವಿಲ್ಲ. ನನ್ನ ಅಪ್ಪಣೆಯಂತೆ ನೀನು ಬೇಗನೆ ಹೊರಡು. ವಾನರರಾಜ್ಯದ ರಾಜಧಾನಿಯಲ್ಲಿ ನೀನು ನಿನ್ನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿಕೊ. ಎಲೈ ಸ್ನೇಹಿತನೆ, ನಾನು ಹದಿನಾಲ್ಕು ವರ್ಷಗಳ ಕಾಲ ಪಟ್ಟಣವನ್ನು ಪ್ರವೇಶಿಸುವದಿಲ್ಲ. ನಿಮ್ಮ ಊರಿಗೆ ನನ್ನ ಸೋದರನಾದ ಲಕ್ಷ್ಮಣನು ಬರಲಿದ್ದಾನೆ. ನೀನು ಯೌವರಾಜ್ಯದಲ್ಲಿ ಪ್ರೀತಿಪೂರ್ವಕವಾಗಿ ಅಂಗದನನ್ನು ಕುಳ್ಳಿರಿಸು. ನಾನಾದರೊ, ಇಲ್ಲೇ ಸಮೀಪದಲ್ಲಿ ಪರ್ವತದ ಶಿಖರದ ಮೇಲೆ ತಮ್ಮನೊಡನೆ ಮಳೆಗಾಲದ ದಿನಗಳನ್ನು ಕಳೆಯುವೆನು. ಕೆಲವು ಕಾಲ ಊರಿನಲ್ಲಿದ್ದು ಅನಂತರ ನೀನು ಸೀತಾನ್ವೇಷಣೆಗೆ ಪ್ರಯತ್ನಮಾಡುವವನಾಗು.'

**ಸಾಷ್ಟಾಂಗಂ ಪ್ರಣಿಪತ್ಯಾಹ ಸುಗ್ರೀವೋ ರಾಮಪಾದಯೋಃ ।**
**ಯದಾಜ್ಞಾಪಯಸೇ ದೇವ ತತ್ತಥೈವ ಕರೋಮ್ಯಹಮ್ ॥ ೪೬ ॥**
**ಅನುಜ್ಞಾತಸ್ತು ರಾಮೇಣ ಸುಗ್ರೀವಸ್ತು ಸಲಕ್ಷ್ಮಣಃ ।**
**ಗತ್ವಾ ಪುರಂ ತಥಾ ಚಕ್ರೇ ಯಥಾ ರಾಮೇಣ ಚೋದಿತಃ ॥ ೪೭ ॥**
**ಸುಗ್ರೀವೇಣ ಯಥಾನ್ಯಾಯಂ ಪೂಜಿತೋ ಲಕ್ಷ್ಮಣಸ್ತದಾ ।**
**ಆಗತ್ಯ ರಾಘವಂ ಶೀಘ್ರಂ ಪ್ರಣಿಪತ್ಯೋಽಪತಸ್ಥಿವಾನ್ ॥ ೪೮ ॥**

೪೬-೪೮. ಸುಗ್ರೀವನು ರಾಮನ ಪಾದಗಳಿಗೆ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಹೀಗೆಂದನು : 'ಎಲೈ ದೇವನೆ, ನೀನು ಏನು ಅಪ್ಪಣೆಮಾಡುವೆಯೋ ಅದನ್ನು ಹಾಗೆಯೇ ಮಾಡುವೆನು.' ಆಗ ಸುಗ್ರೀವನು ರಾಮನ ಅಪ್ಪಣೆಯನ್ನು ಪಡೆದು ಲಕ್ಷ್ಮಣನೊಡಗೂಡಿ (ಕಿಷ್ಕಿಂಧಾ) ನಗರಿಗೆ ಹೋಗಿ ರಾಮನ ಪ್ರೇರಣೆಯಂತೆ ಎಲ್ಲವನ್ನೂ ಮಾಡಿದನು. ಲಕ್ಷ್ಮಣನೂ ಸುಗ್ರೀವನಿಂದ ಯೋಗ್ಯರೀತಿಯ ಸತ್ಕಾರವನ್ನು ಹೊಂದಿ ಹಿಂದಿರುಗಿ ಬಂದು ರಾಮನನ್ನು ನಮಸ್ಕರಿಸಿ ಎಂದಿನಂತೆ ಸೇವಾತತ್ಪರನಾದನು.

**ತತೋ ರಾಮೋ ಜಗಾಮಾಶು ಲಕ್ಷ್ಮಣೇನ ಸಮನ್ವಿತಃ ।**
**ಪ್ರವರ್ಷಣಗಿರೇರೂರ್ಧ್ವಂ ಶಿಖರಂ ಭೂರಿವಿಸ್ತರಮ್ ॥ ೪೯ ॥**
**ತತ್ರೈಕಂ ಗಹ್ವರಂ ದೃಷ್ಟ್ವಾ ಸ್ಫಾಟಿಕಂ ದೀಪ್ತಿಮಚ್ಛುಭಮ್ ।**
**ವರ್ಷವಾತಾತಪಸಹಂ ಫಲಮೂಲಸಮೀಪಗಮ್ ॥ ೫೦ ॥**
**ವಾಸಾಯ ರೋಚಯಾಮಾಸ ತತ್ರ ರಾಮಃ ಸ ಲಕ್ಷ್ಮಣಃ ।**

೪೯-೫೦. ಅನಂತರ ಲಕ್ಷ್ಮಣಸಹಿತನಾದ ರಾಮನು ಪ್ರವರ್ಷಣ- ಎಂಬ ಬೆಟ್ಟದ ಮೇಲಿರುವ ವಿಶಾಲವಾದ ಜಾಗವುಳ್ಳ ಹಾಗೂ ಎತ್ತರದಲ್ಲಿರುವ ಸ್ಥಳಕ್ಕೆ ಹೋಗಿ ಸ್ಫಟಿಕಮಯವಾಗಿಯೂ ಹೊಳೆಯುತ್ತಿರುವದಾಗಿಯೂ ಮಳೆ- ಬಿಸಿಲುಗಳಿಂದ ಕಾಪಾಡಿಕೊಳ್ಳಲು ಸಮರ್ಥವಾಗಿಯೂ ಕಂದಮೂಲಫಲಗಳಿಗೆ ಹತ್ತಿರವಾಗಿಯೂ ಇರುವ ಗುಹೆಯೊಂದನ್ನು ಕಂಡನು. ಹಾಗೂ ಅದನ್ನೇ ವಾಸಕ್ಕಾಗಿ ಇಷ್ಟಪಟ್ಟನು.

**ದಿವ್ಯಮೂಲಫಲಪುಷ್ಪಸಂಯುತೇ**
**ಮೌಕ್ತಿಕೋಪಮಜಲೌಘಪಲ್ವಲೇ ।**
**ಚಿತ್ರವರ್ಣಮೃಗಪಕ್ಷಿಶೋಭಿತೇ ।**
**ಪರ್ವತೇ ರಘುಕುಲೋತ್ತಮೋಽವಸತ್ ॥ ೫೧ ॥**

೫೧. ದಿವ್ಯವಾದ ಕಂದಮೂಲಫಲಗಳಿಂದಲೂ ಮುತ್ತಿನಂತೆ ಸ್ವಚ್ಛವಾದ ಜಲಧಾರೆಗಳಿಂದಲೂ ತಂಪಾದ ಭೂಮಿಯಿಂದಲೂ ಮತ್ತು ಚಿತ್ರವರ್ಣಗಳಿಂದ ಕೂಡಿದ ಮೃಗಪಕ್ಷಿಗಳಿಂದಲೂ ರಮಣೀಯವಾದ ಆ ಪರ್ವತದಲ್ಲಿ ರಘುಕುಲ ಶ್ರೇಷ್ಠನಾದ ರಾಮನು ವಾಸವಾಗಿದ್ದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ತೃತೀಯಃ ಸರ್ಗಃ**

----------------

# ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ತತ್ರ ವಾರ್ಷಿಕದಿನಾನಿ ರಾಘವೋ**
**ಲೀಲಯಾ ಮಣಿಗುಹಾಸು ಸಂಚರನ್ ।**
**ಪಕ್ವಮೂಲಫಲಭೋಗತೋಷಿತೋ**
**ಲಕ್ಷ್ಮಣೇನ ಸಹಿತೋಽವಸತ್ ಸುಖಮ್ ॥ ೧ ॥**

೧. ಶ್ರೀಮಹಾದೇವನಿಂತೆಂದನು : ರಾಘವನು ಆ ಸ್ಥಳದಲ್ಲಿ ವರ್ಷಾಕಾಲದ ಸಮಯವನ್ನು ಲೀಲೆಯಿಂದ ಕಳೆಯುತ್ತಾ ಮಣಿಮಯವಾದ ಗುಹೆಗಳಲ್ಲಿ ಓಡಾಡುತ್ತಾ ಚೆನ್ನಾಗಿ ಹಣ್ಣಾದ ವಸ್ತುಗಳು - ಕಂದಮೂಲಗಳಿಂದ ತುಷ್ಟನಾಗಿ ಲಕ್ಷ್ಮಣಸಹಿತನಾಗಿ ಸುಖವಾಗಿ ವಾಸವಾಗಿದ್ದನು.

ವಾತನುನ್ನಜಲಪೂರಿತಮೇಘಾ-
ನಂತರಸ್ತನಿತವೈದ್ಯುತಗರ್ಭಾನ್ ।
ವೀಕ್ಷ್ಯ ವಿಸ್ಮಯಮಗಾದ್ಗಜಯೂಥಾ-
ನ್ಯದ್ವದಾಹಿತಸುಕಾಂಚನಕಕ್ಷ್ಯಾನ್ ॥ ೨ ॥
ನವಘಾಸಂ ಸಮಾಸ್ವಾದ್ಯ ಹೃಷ್ಟಪುಷ್ಟಮೃಗದ್ವಿಜಾಃ ।
ಧಾವಂತಃ ಪರಿತೋ ರಾಮಂ ವೀಕ್ಷ್ಯ ವಿಸ್ಫಾರಿತೇಕ್ಷಣಾಃ ॥ ೩ ॥
ನ ಚಲಂತಿ ಸದಾ ಧ್ಯಾನನಿಷ್ಠಾ ಇವ ಮುನೀಶ್ವರಾಃ ।
ರಾಮಂ ಮಾನುಷರೂಪೇಣ ಗಿರಿಕಾನನಭೂಮಿಷು ॥ ೪ ॥
ಚರಂತಂ ಪರಮಾತ್ಮಾನಂ ಜ್ಞಾತ್ವಾ ಸಿದ್ಧಗಣಾ ಭುವಿ ।
ಮೃಗಪಕ್ಷಿಗಣಾ ಭೂತ್ವಾ ರಾಮಮೇವಾನುಸೇವಿರೇ ॥ ೫ ॥

೨-೫. ಗಾಳಿಯಿಂದ ಪ್ರೇರಿಸಲ್ಪಟ್ಟು ನೀರಿನಿಂದ ತುಂಬಿ ಒಳಗೆ ಮಿಂಚುಗಳ ಪ್ರಕಾಶದಿಂದ ಕೂಡಿ ಸಂಚರಿಸುತ್ತಿರುವ ಮೋಡಗಳನ್ನು ನೋಡಿ - ಮದ್ದಾನೆಗಳು ಚಿನ್ನದ ಜರಿಯ ವಸ್ತ್ರಗಳನ್ನು ಹೊದ್ದು ಅತ್ತಿತ್ತ ಸಂಚರಿಸುತ್ತಿರುವಂತೆ ಭಾವಿಸಿ - ರಾಮನು ಆಶ್ಚರ್ಯಗೊಂಡನು. ಹೊಸದಾದ ಹುಲ್ಲನ್ನೂ ಆಹಾರಗಳನ್ನೂ ಸೇವಿಸಿ ಸಂತುಷ್ಟವಾದ ಹಾಗೂ ಕೊಬ್ಬಿದ ಪ್ರಾಣಿ- ಪಕ್ಷಿಗಳು ಅತ್ತಿತ್ತ ಓಡುತ್ತಾ ರಾಮನನ್ನು ಕಂಡು ಕಂಗಳನ್ನು ಝಳುಪಿಸುತ್ತಾ ಸುತ್ತಲೂ ತಿರುಗುತ್ತಿದ್ದವು. ಕೆಲವುಸಲ ಧ್ಯಾನನಿಷ್ಠರಾದ ಋಷಿಗಳಂತೆ - ಮನುಷ್ಯರೂಪಿಯಾದ ರಾಮನನ್ನು ಬೆಟ್ಟದ ಕಾಡುಪ್ರದೇಶಗಳಲ್ಲಿ ಮೃಗಗಳು ಕಂಡು ಅಳ್ಳಾಡದೆ ನಿಂತುಬಿಡುತ್ತಿದ್ದವು. ವನಸಂಚಾರಿಯಾದ ರಾಮನು ಪರಮಾತ್ಮನೆಂಬು ದನ್ನರಿತ ಸಿದ್ಧರುಗಳ ಗುಂಪು ಮೃಗಪಕ್ಷಿಗಳ ರೂಪಗಳನ್ನು ಧರಿಸಿ ರಾಮನನ್ನೇ ಸೇವಿಸುತ್ತಿದ್ದರು.

ಸೌಮಿತ್ರಿರೇಕದಾ ರಾಮಮೇಕಾಂತೇ ಧ್ಯಾನತತ್ಪರಮ್ ।
ಸಮಾಧಿವಿರಮೇ ಭಕ್ತ್ಯಾ ಪ್ರಣಯಾದ್ ವಿನಯಾನ್ವಿತಃ ॥ ೬ ॥
ಅಬ್ರವೀದ್ದೇವ ತೇ ವಾಕ್ಯಾತ್ ಪೂರ್ವೋಕ್ತಾದ್ವಿಗತೋ ಮಮ ।
ಅನಾದ್ಯವಿದ್ಯಾಸಂಭೂತಃ ಸಂಶಯೋ ಹೃದಿ ಸಂಸ್ಥಿತಃ ॥ ೭ ॥
ಇದಾನೀಂ ಶ್ರೋತುಮಿಚ್ಛಾಮಿ ಕ್ರಿಯಾಮಾರ್ಗೇಣ ರಾಘವ ।
ಭವದಾರಾಧನಂ ಲೋಕೇ ಯಥಾ ಕುರ್ವಂತಿ ಯೋಗಿನಃ ॥ ೮ ॥

೬-೮. ಒಮ್ಮೆ ಲಕ್ಷ್ಮಣನು ರಾಮನನ್ನು ಕುರಿತು ಏಕಾಂತದಲ್ಲಿ ಭಕ್ತಿಯಿಂದ ಪ್ರೇಮಪೂರ್ವಕವಾಗಿ ವಿನೀತನಾಗಿ (ಆತನು) ಧ್ಯಾನದಿಂದ ಹೊರಮುಖನಾದಾಗ ಹೀಗೆಂದನು : 'ಎಲೈ ದೇವನೆ, ಹಿಂದೆ ನೀನು ಹೇಳಿದ ಉಪದೇಶದಿಂದ ಅನಾದಿಯಾದ

ಅವಿದ್ಯೆಯಿಂದುಂಟಾಗಿದ್ದ, ಹೃದಯದಲ್ಲಿದ್ದ ಸಂಶಯವು ನನಗೆ ಪರಿಹಾರವಾಯಿತು. ಈಗ ಎಲೈ ರಾಘವನೆ, ಕ್ರಿಯಾಮಾರ್ಗದಿಂದ ಯೋಗಿಗಳು ನಿನ್ನ ಆರಾಧನೆಯನ್ನು ಹೇಗೆ ಮಾಡುವರೆಂಬುದನ್ನು ಕೇಳಲಿಚ್ಛಿಸುತ್ತೇನೆ.

**ಇದಮೇವ ಸದಾ ಪ್ರಾಹುರ್ಯೋಗಿನೋ ಮುಕ್ತಿಸಾಧನಮ್ ।**
**ನಾರದೋಽಪಿ ತಥಾ ವ್ಯಾಸೋ ಬ್ರಹ್ಮಾ ಕಮಲಸಂಭವಃ ॥ ೯ ॥**
**ಬ್ರಹ್ಮಕ್ಷತ್ರಾದಿವರ್ಣಾನಾಮಾಶ್ರಮಾಣಾಂ ಚ ಮೋಕ್ಷದಮ್ ।**
**ಸ್ತ್ರೀಶೂದ್ರಾಣಾಂ ಚ ರಾಜೇಂದ್ರ ಸುಲಭಂ ಮುಕ್ತಿಸಾಧನಮ್ ॥ ೧೦ ॥**
**ತವ ಭಕ್ತಾಯ ಮೇ ಭ್ರಾತ್ರೇ ಬ್ರೂಹಿ ಲೋಕೋಪಕಾರಕಮ್ ।**

೯-೧೦. ಯೋಗಿಗಳು ಈ (ಕ್ರಿಯಾಮಾರ್ಗವನ್ನೇ) ಯಾವಾಗಲೂ ಮುಕ್ತಿಸಾಧನವೆನ್ನುವರು. ನಾರದರು, ವ್ಯಾಸರು, ಕಮಲದಿಂದ ಹುಟ್ಟಿದ ಬ್ರಹ್ಮ - ಇವರೆಲ್ಲರ (ಅಭಿಪ್ರಾಯವೂ ಇದೇ.) ಬ್ರಾಹ್ಮಣ, ಕ್ಷತ್ರಿಯಾದಿಜಾತಿಗಳವರಿಗೂ ಬ್ರಹ್ಮಚರ್ಯಾದಿ ಆಶ್ರಮಿಗಳಿಗೂ ಮುಕ್ತಿಪ್ರದವಾದ ಹಾಗೂ ಹೆಂಗಸರು, ಶೂದ್ರಾದಿಗಳಿಗೂ. ಮೋಕ್ಷಕ್ಕೆ ಹಾದಿಯಾಗಿರುವ ಲೋಕೋಪಕಾರಕವಾಗಿರುವ (ಈ ವಿಷಯವನ್ನು) ನಿನ್ನ ಭಕ್ತನೂ ಸೋದರನೂ ಆದ ನನಗೆ ಹೇಳುವವನಾಗು.

**ಶ್ರೀರಾಮ ಉವಾಚ-**

**ಮಮ ಪೂಜಾವಿಧಾನಸ್ಯ ನಾಂತೋಽಸ್ತಿ ರಘುನಂದನ ।**
**ತಥಾಪಿ ವಕ್ಷ್ಯೇ ಸಂಕ್ಷೇಪಾದ್ ಯಥಾವದನುಪೂರ್ವಶಃ ॥ ೧೧ ॥**
**ಸ್ವಗೃಹ್ಯೋಕ್ತಪ್ರಕಾರೇಣ ದ್ವಿಜತ್ವಂ ಪ್ರಾಪ್ಯ ಮಾನವಃ ।**
**ಸಕಾಶಾದ್ ಸದ್ಗುರೋರ್ಮಂತ್ರಂ ಲಬ್ಧ್ವಾ ಮದ್ಭಕ್ತಿಸಂಯುತಃ ॥ ೧೨ ॥**
**ತೇನ ಸಂದರ್ಶಿತವಿಧಿರ್ಮಾಮೇವಾರಾಧಯೇತ್ ಸುಧೀಃ ।**
**ಹೃದಯೇ ವಾನಲೇ ವಾರ್ಚೇತ್ ಪ್ರತಿಮಾದೌ ವಿಭಾವಸೌ ॥ ೧೩ ॥**
**ಶಾಲಗ್ರಾಮಶಿಲಾಯಾಂ ವಾ ಪೂಜಯೇನ್ಮಾಮತಂದ್ರಿತಃ ।**

೧೧-೧೩. ಶ್ರೀರಾಮನಿಂತೆಂದನು : ಎಲೈ ರಘುನಂದನನೆ, ನನ್ನ ಪೂಜಾಕ್ರಮಗಳು ಲೆಕ್ಕವಿಲ್ಲದಷ್ಟು ಇರುವವು. ಅವುಗಳಿಗೆ ಕೊನೆಯೇ ಇಲ್ಲ. ಆದರೂ ಸಂಕ್ಷೇಪವಾಗಿ ಕ್ರಮವಾಗಿ ಇದ್ದದ್ದು ಇದ್ದಂತೆಯೇ ಹೇಳುವೆನು. ಮನುಷ್ಯನು ತನ್ನ ಶಾಖೆಯ ಗೃಹ್ಯಸೂತ್ರವಿಧಿಗಳಿಗೆ ಅನುಗುಣವಾಗಿ ದ್ವಿಜತ್ವವನ್ನು (ಉಪನಯನವನ್ನು) ಹೊಂದಿ ಸದ್ಗುರುವಿನ ಕಡೆಯಿಂದ ಮಂತ್ರೋಪದೇಶವನ್ನು ಪಡೆದು ಭಕ್ತಿಯುಕ್ತನಾಗಿ ತಿಳಿವಳಿಕೆಯುಳ್ಳವನಾಗಿ ಆ ಗುರುವು ತೋರಿಸಿಕೊಟ್ಟ ಮಾರ್ಗದಿಂದ ನನ್ನನ್ನೇ

ಆರಾಧಿಸಬೇಕು. ಹೃದಯದಲ್ಲಾಗಲಿ, ಅಥವಾ ಅಗ್ನಿ, ಪ್ರತಿಮಾದಿಗಳು, ಸೂರ್ಯ, ಶಾಲಿಗ್ರಾಮಶಿಲೆಯಲ್ಲಾಗಲಿ ನನ್ನನ್ನು ಬೇಸರವಿಲ್ಲದೆ ಪೂಜಿಸಬೇಕು.

**ಪ್ರಾತಃಸ್ನಾನಂ ಪ್ರಕುರ್ವೀತ ಪ್ರಥಮಂ ದೇಹಶುದ್ಧಯೇ ।**
**ವೇದತಂತ್ರೋದಿತೈರ್ಮಂತ್ರೈಃ ಮೃಲ್ಲೇಪನವಿಧಾನತಃ ॥ ೧೪ ॥**
**ಸಂಧ್ಯಾದಿಕರ್ಮ ಯನ್ನಿತ್ಯಂ ತತ್ಕುರ್ಯಾದ್ ವಿಧಿನಾ ಬುಧಃ ।**
**ಸಂಕಲ್ಪಮಾದೌ ಕುರ್ವೀತ ಸಿದ್ಧ್ಯರ್ಥಂ ಕರ್ಮಣಾಂ ಸುಧೀಃ ॥ ೧೫ ॥**
**ಸ್ವಗುರುಂ ಪೂಜಯೇದ್ ಭಕ್ತ್ಯಾ ಮದ್ಬುದ್ಧ್ಯಾ ಪೂಜಕೋ ಮಮ ।**

೧೪-೧೫. ಮೊದಲು ಶರೀರಶುದ್ಧಿಗಾಗಿ ವೇದಗಳು ಅಥವಾ ತಂತ್ರ (ಆಗಮ)ಗಳಲ್ಲಿ ಹೇಳಲ್ಪಟ್ಟಿರುವ ಮಂತ್ರಪೂರ್ವಕವಾಗಿ ಮೃತ್ತಿಕೆಯನ್ನು ಸವರಿಕೊಳ್ಳುವದೇ ಮುಂತಾದ ಕ್ರಮದಿಂದ ಪ್ರಾತಃಕಾಲದ ಸ್ನಾನವನ್ನು ಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮಗಳನ್ನು ಮಾಡಬೇಕು. ಸಾಧಕನು ತನ್ನ ಗುರುವನ್ನು ನಾನೇ ಎಂಬ ಬುದ್ಧಿಯಿಂದ ಭಕ್ತಿಯಿಂದ ಪೂಜಿಸಬೇಕು.

**ಶಿಲಾಯಾಂ ಸ್ನಪನಂ ಕುರ್ಯಾತ್ ಪ್ರತಿಮಾಸು ಪ್ರಮಾರ್ಜನಮ್ ।**
**ಪ್ರಸಿದ್ಧೈರ್ಗಂಧಪುಷ್ಪಾದ್ಯೈಃ ಮತ್ಪೂಜಾ ಸಿದ್ಧಿದಾಯಿಕಾ ॥ ೧೬ ॥**
**ಅಮಾಯಿಕೋಽನುವೃತ್ತ್ಯಾ ಮಾಂ ಪೂಜಯೇನ್ನಿಯತವ್ರತಃ ।**
**ಪ್ರತಿಮಾದಿಷ್ವಲಂಕಾರಃ ಪ್ರಿಯೋ ಮೇ ಕುಲನಂದನ ॥ ೧೭ ॥**

೧೬-೧೭. ಸಾಲಿಗ್ರಾಮಶಿಲೆಗಳಲ್ಲಿ ಪೂಜಿಸುವಾಗ ಅಭಿಷೇಕಮಾಡಬೇಕು. ಪ್ರತಿಮೆಗಳಲ್ಲಾದರೆ ನೀರನ್ನು ಪ್ರೋಕ್ಷಿಸಿ ಒರೆಸಿದರೂ ಆಗುತ್ತದೆ. ಅನಂತರ ಗಂಧ ಹಾಗೂ ಪ್ರಸಿದ್ಧವಾದ ಹೂವುಗಳಿಂದ ನನ್ನ ಪೂಜೆಯನ್ನು ಮಾಡಬೇಕು. ಅದು ಸಿದ್ಧಿಪ್ರದವು. ಕಪಟವಿಲ್ಲದವನಾಗಿ ಗುರೂಪದೇಶಕ್ರಮದಿಂದ ನಿಯಮಬದ್ಧನಾಗಿ ನನ್ನನ್ನು ಅರ್ಚಿಸಬೇಕು. ಎಲೈ ಕುಲಪವಿತ್ರನೆ, ಪ್ರತಿಮಾದಿಗಳಲ್ಲಿ ಅಲಂಕಾರವೂ ನನಗೆ ಬಹಳ ಪ್ರೀತಿಕರವಾದದ್ದು.

**ಅಗ್ನೌ ಯಜೇತ ಹವಿಷಾ ಭಾಸ್ಕರೇ ಸ್ಥಂಡಿಲೇ ಯಜೇತ್ ।**
**ಭಕ್ತೇನೋಪಹೃತಂ ಪ್ರೀತ್ಯೈ ಶ್ರದ್ಧಯಾ ಮಮ ವಾರ್ಯಪಿ ॥ ೧೮ ॥**
**ಕಿಂ ಪುನರ್ಭಕ್ಷ್ಯಭೋಜ್ಯಾದಿ ಗಂಧಪುಷ್ಪಾಕ್ಷತಾದಿಕಮ್ ।**
**ಪೂಜಾದ್ರವ್ಯಾಣಿ ಸರ್ವಾಣಿ ಸಂಪಾದ್ಯೈವಂ ಸಮಾರಭೇತ್ ॥ ೧೯ ॥**

೧೮-೧೯. ಅಗ್ನಿಯಲ್ಲಿ ಪೂಜಿಸುವಾಗ ಹವಿಸ್ಸಿನಿಂದ ಹೋಮಾಡಬೇಕು. ಸೂರ್ಯನಲ್ಲಿ ಪೂಜಿಸುವಾಗ ಮಂಡಲವನ್ನು ರಚಿಸಿ ಅರ್ಚಿಸಬೇಕು. ಭಕ್ತನಾದವನು

ಶ್ರದ್ಧೆಯಿಂದ ಅರ್ಪಿಸುವ ನೀರಾದರೂ ನನಗೆ ಪ್ರೀತಿಕರವೇ. ಹೀಗಿರುವಲ್ಲಿ ಗಂಧ, ಪುಷ್ಪ, ಅಕ್ಷತೆ, ಭಕ್ಷ್ಯ, ಭೋಜ್ಯಾದಿಗಳನ್ನು ಅರ್ಪಿಸಿದಲ್ಲಿ ಹೇಳುವದೇನಿದೆ ? ಹೀಗೆ ಎಲ್ಲಾ ಪೂಜಾಸಾಮಗ್ರಿಗಳನ್ನೂ ಹೊಂದಿಸಿಕೊಂಡು ಪೂಜಾರಂಭಮಾಡಬೇಕು.

**ಚೈಲಾಜಿನಕುಶೈಃ ಸಮ್ಯಗಾಸನಂ ಪರಿಕಲ್ಪಯೇತ್ ।**
**ತತ್ರೋಪವಿಶ್ಯ ದೇವಸ್ಯ ಸಂಮುಖೇ ಶುದ್ಧಮಾನಸಃ ॥ ೨೦ ॥**
**ತತೋ ನ್ಯಾಸಂ ಪ್ರಕುರ್ವೀತ ಮಾತೃಕಾ ಬಹಿರಾಂತರಮ್ ।**
**ಕೇಶವಾದಿ ತತಃ ಕುರ್ಯಾತ್ ತತ್ತ್ವನ್ಯಾಸಂ ತತಃ ಪರಮ್ ॥ ೨೧ ॥**
**ಮನ್ಮೂರ್ತಿಪಂಜರನ್ಯಾಸಂ ಮಂತ್ರನ್ಯಾಸಂ ತತೋ ನ್ಯಸೇತ್ ।**
**ಪ್ರತಿಮಾದಾವಪಿ ತಥಾ ಕುರ್ಯಾನ್ನಿತ್ಯಮತಂದ್ರಿತಃ ॥ ೨೨ ॥**

೨೦-೨೨. ದರ್ಭೆ, ಕೃಷ್ಣಾಜಿನ, ಬಟ್ಟೆಗಳನ್ನು ಕ್ರಮವಾಗಿ ಹಾಸಿಕೊಂಡು ಚೆನ್ನಾಗಿ ಆಸನವನ್ನು ಮಾಡಿಕೊಳ್ಳಬೇಕು. ದೇವರ ಎದುರಿಗೆ ಕುಳಿತು ಶುದ್ಧಮನಸ್ಕನಾಗಿ ಹೊರಗಿನ ಹಾಗೂ ಒಳಗಿನ ಕ್ರಮದ ಮಾತೃಕಾನ್ಯಾಸವನ್ನೂ ಅನಂತರ ಕೇಶವಾದಿನಾಮಗಳಿಂದ ತತ್ತ್ವನ್ಯಾಸವನ್ನೂ ಮಾಡಿಕೊಳ್ಳಬೇಕು. ಅನಂತರ ವಿಷ್ಣುಪಂಜರರೀತಿಯಿಂದ ಮೂರ್ತಿನ್ಯಾಸವನ್ನೂ ಮಂತ್ರನ್ಯಾಸವನ್ನೂ ಮಾಡಿಕೊಳ್ಳಬೇಕು. ಹಾಗೆಯೇ ಭಗವಂತನ ಮೂರ್ತಿಯಲ್ಲಿಯೂ ಬೇಸರವಿಲ್ಲದೆ ನ್ಯಾಸಮಾಡಬೇಕು.

**ಕಲಶಂ ಸ್ವಪುರೋ ವಾಮೇ ಕ್ಷಿಪೇದ್ ಪುಷ್ಪಾದಿ ದಕ್ಷಿಣೇ ।**
**ಅರ್ಘ್ಯಪಾದ್ಯಪ್ರದಾನಾರ್ಥಂ ಮಧುಪರ್ಕಾರ್ಥಮೇವ ಚ ॥ ೨೩ ॥**
**ತಥೈವಾಚಮನಾರ್ಥಂ ತು ನ್ಯಸೇತ್ ಪಾತ್ರಚತುಷ್ಟಯಮ್ ।**
**ಹೃತ್ಪದ್ಮೇ ಭಾನುವಿಮಲೇ ಮತ್ಕಲಾಂ ಜೀವಸಂಜ್ಞಿತಾಮ್ ॥ ೨೪ ॥**
**ಧ್ಯಾಯೇತ್ ಸ್ವದೇಹಮಖಿಲಂ ತಯಾ ವ್ಯಾಪ್ತಮರಿಂದಮ ।**
**ತಾಮೇವಾವಾಹಯೇನ್ನಿತ್ಯಂ ಪ್ರತಿಮಾದಿಷು ಮತ್ಕಲಾಮ್ ॥ ೨೫ ॥**

೨೩-೨೫. ಕಲಶವನ್ನು ತನ್ನ ಮುಂಭಾಗದಲ್ಲಿ ಎಡಕ್ಕೆ ಸ್ಥಾಪಿಸಬೇಕು. ಹೂವು ಮುಂತಾದವುಗಳನ್ನು ಬಲಕ್ಕೂ ಅರ್ಘ್ಯ, ಪಾದ್ಯ, ಮಧುಪರ್ಕ, ಆಚಮನಾದ್ಯುಪಚಾರಗಳಿಗಾಗಿ ನಾಲ್ಕು ಪಾತ್ರೆಗಳನ್ನೂ ಇಟ್ಟುಕೊಳ್ಳಬೇಕು. ಅನಂತರ ಸೂರ್ಯನಂತೆ ಸ್ವಚ್ಛವಾದ ಹೃದಯಕಮಲದಲ್ಲಿ ಜೀವನೆಂಬ ಹೆಸರಿನ ನನ್ನ ಕಲೆಯನ್ನು ಧ್ಯಾನಿಸಿ ಆ (ಚೈತನ್ಯದಿಂದ) ತನ್ನ ದೇಹವೆಲ್ಲವೂ ವ್ಯಾಪ್ತವಾಗಿದೆಯೆಂತ ಚಿಂತಿಸಬೇಕು. ಅದೇ ಕಲೆಯನ್ನೇ ಪ್ರತಿಮಾದಿಗಳಲ್ಲಿಯೂ ಆವಾಹಿಸಬೇಕು. ಮುಂದುವರೆದು-

**ಪಾದ್ಯಾರ್ಘ್ಯಾಚಮನೀಯಾದ್ಯೈಃ ಸ್ನಾನವಸ್ತ್ರವಿಭೂಷಣೈಃ ।**
**ಯಾವಚ್ಛಕ್ಯೋಪಚಾರೈರ್ವಾ ತ್ವರ್ಚಯೇನ್ಮಾಮಮಾಯಯಾ ॥ ೨೬ ॥**
**ವಿಭವೇ ಸತಿ ಕರ್ಪೂರಕುಂಕುಮಾಗರುಚಂದನೈಃ ।**
**ಅರ್ಚಯೇನ್ಮಂತ್ರವನ್ನಿತ್ಯಂ ಸುಗಂಧಕುಸುಮೈಃ ಶುಭೈಃ ॥ ೨೭ ॥**
**ದಶಾವರಣಪೂಜಾಂ ವೈ ಹ್ಯಾಗಮೋಕ್ತಾಂ ಪ್ರಕಾರಯೇತ್ ।**
**ನೀರಾಜನೈರ್ಧೂಪದೀಪೈಃ ನೈವೇದ್ಯೈಃ ಬಹುವಿಸ್ತರೈಃ ॥ ೨೮ ॥**
**ಶ್ರದ್ಧಯೋಪಹರೇನ್ನಿತ್ಯಂ ಶ್ರದ್ಧಾಭುಗಹಮೀಶ್ವರಃ ॥**

೨೬-೨೮. ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನ, ವಸ್ತ್ರ, ಒಡವೆಗಳು ಇತ್ಯಾದಿ ಸಾಧ್ಯವಾದಷ್ಟು ಉಪಚಾರಗಳಿಂದ ವಂಚನೆಯಿಲ್ಲದೆ ನನ್ನನ್ನು ಪೂಜಿಸಬೇಕು. ಅನುಕೂಲವಿದ್ದಲ್ಲಿ ಕುಂಕುಮ (ಕೇಸರಿ), ಅಗರು, ಕರ್ಪೂರ, ಚಂದನಾದಿ ಸುಗಂಧದ್ರವ್ಯಗಳಿಂದಲೂ ಶುಭವಾದ ಸುವಾಸನೆಯುಳ್ಳ ಹೂವುಗಳಿಂದಲೂ ಮಂತ್ರಯುಕ್ತನಾಗಿ ಅರ್ಚನೆಮಾಡಬೇಕು. ಆಗಮೋಕ್ತವಾದ ದಶಾವರಣಪೂಜೆಯನ್ನು ಮಾಡಬೇಕು. ಹಾಗೂ ಧೂಪ, ದೀಪ, ನೈವೇದ್ಯ, ಮಂಗಳಾರತಿ, ಮುಂತಾದ ವಿಸ್ತಾರವಾದ ಅಂಗಗಳಿಂದ ಶ್ರದ್ಧೆಯಿಂದ ಉಪಚಾರಗಳನ್ನು ಸಮರ್ಪಿಸಬೇಕು. ಈಶ್ವರನಾದ ನಾನು ಶ್ರದ್ಧೆಯನ್ನೇ ಸ್ವೀಕರಿಸುವವನಾಗಿರುವೆನು.

**ಹೋಮಂ ಕುರ್ಯಾತ್ ಪ್ರಯತ್ನೇನ ವಿಧಿನಾ ಮಂತ್ರಕೋವಿದಃ ।**
**ಅಗಸ್ತ್ಯೇನೋಕ್ತಮಾರ್ಗೇಣ ಕುಂಡೇನಾಗಮವಿತ್ತಮಃ ॥ ೨೯ ॥**
**ಜುಹುಯಾನ್ಮೂಲಮಂತ್ರೇಣ ಪುಂಸೂಕ್ತೇನಾಥವಾ ಬುಧಃ ।**
**ಅಥವೌಪಾಸನಾಗ್ನೌ ವಾ ಚರುಣಾ ಹವಿಷಾ ತಥಾ ॥ ೩೦ ॥**
**ತಪ್ತಜಾಂಬೂನದಪ್ರಖ್ಯಂ ದಿವ್ಯಾಭರಣಭೂಷಿತಮ್ ।**
**ಧ್ಯಾಯೇದನಲಮಧ್ಯಸ್ಥಂ ಹೋಮಕಾಲೇ ಸದಾ ಬುಧಃ ॥ ೩೧ ॥**
**ಪಾರ್ಷದೇಭ್ಯೋ ಬಲಿಂ ದತ್ವಾ ಹೋಮಶೇಷಂ ಸಮಾಪಯೇತ್ ।**

೨೯-೩೧. ಅನಂತರ ವಿಧಿಪ್ರಕಾರವಾಗಿ ಮಂತ್ರಜ್ಞನಾದ ಸಾಧಕನು ಕಡ್ಡಾಯವಾಗಿ ಹೋಮವನ್ನು ಮಾಡಬೇಕು. ಅಗಸ್ತ್ಯರು ತಿಳಿಸಿರುವಂತೆ ಹೋಮಕುಂಡವನ್ನು ನಿರ್ಮಿಸಿ ಮೂಲಮಂತ್ರದಿಂದಲಾಗಲಿ ಪುರುಷಸೂಕ್ತ ಋಕ್ಕುಗಳಿಂದಲಾಗಲಿ ವಿದ್ವಾಂಸನಾದವನು ಹವನಮಾಡಬೇಕು. ಅಥವಾ ತನ್ನ ನಿತ್ಯೌಪಾಸನಾಗ್ನಿಯಲ್ಲಿ ಚರು, ಆಜ್ಯವೇ ಮುಂತಾದ ಹವಿಸ್ಸುಗಳಿಂದ ಹೋಮಮಾಡಬಹುದು. ಹಾಗೆ ಹೋಮಮಾಡುವಾಗ ಅಗ್ನಿಯ ಮಧ್ಯದಲ್ಲಿ ಪುಟವಿಟ್ಟ ಚಿನ್ನದಂತೆ ಕಾಂತಿಯುಳ್ಳವನಾಗಿರುವ ಹಾಗೂ ದಿವ್ಯಾಭರಣಗಳಿಂದಲಂಕೃತನಾಗಿರುವ ನನ್ನ ಸ್ವರೂಪವನ್ನು ಚಿಂತಿಸಬೇಕು. ಮುಂದು

ವರೆದು ದ್ವಾರಪಾಲಾದಿಗಳಿಗೆ ಬಲಿಪ್ರದಾನವನ್ನರ್ಪಿಸಿ ಮಿಕ್ಕ ಹೋಮಗಳನ್ನು ಪೂರೈಸಬೇಕು.

**ತತೋ ಜಪಂ ಪ್ರಕುರ್ವೀತ ಧ್ಯಾಯೇನ್ಮಾಂ ಯತವಾಕ್ ಸ್ಮರನ್ ।**
**ಮುಖವಾಸಂ ಚ ತಾಂಬೂಲಂ ದತ್ವಾ ಪ್ರೀತಿಸಮನ್ವಿತಃ ॥ ೩೨ ॥**
**ಮದರ್ಥೇ ನೃತ್ಯಗೀತಾದಿ ಸ್ತುತಿಪಾಠಾದಿ ಕಾರಯೇತ್ ।**
**ಪ್ರಣಮೇದ್ದಂಡವದ್ ಭೂಮೌ ಹೃದಯೇ ಮಾಂ ನಿಧಾಯ ಚ ॥ ೩೩ ॥**
**ಶಿರಸಾಧಾಯ ಮದ್ದತ್ತಂ ಪ್ರಸಾದಂ ಭಾವನಾಮಯಮ್ ।**
**ಪಾಣಿಭ್ಯಾಂ ಮತ್ಪದೇ ಮೂರ್ಧ್ನಿ ಗೃಹೀತ್ವಾ ಭಕ್ತಿಸಂಯುತಃ ॥ ೩೪ ॥**
**ರಕ್ಷ ಮಾಂ ಘೋರಸಂಸಾರಾದಿತ್ಯುಕ್ತ್ವಾ ಪ್ರಣಮೇತ್ ಸುಧೀಃ ।**
**ಉದ್ವಾಸಯೇದ್ ಯಥಾಪೂರ್ವಂ ಪ್ರತ್ಯಗ್ ಜ್ಯೋತಿಷಿ ಸಂಸ್ಮರನ್ ॥ ೩೫ ॥**

೩೨-೩೫. ಅನಂತರ ಮೌನದಿಂದ ನನ್ನನ್ನೇ ಸ್ಮರಿಸುತ್ತಾ ಮಂತ್ರಜಪವನ್ನು (ಯಥಾಶಕ್ತಿ) ಮಾಡಬೇಕು. ಆಮೇಲೆ ತಾಂಬೂಲವನ್ನೂ ಮುಖವನ್ನು ಸುವಾಸನೆಗೊಳಿಸುವಂಥ (ಪಚ್ಚಕರ್ಪೂರಾದಿ)ಗಳನ್ನೂ ಅರ್ಪಿಸಿ ಪ್ರೀತಿಯಿಂದೊಡಗೂಡಿ ನನಗಾಗಿ ನೃತ್ಯ, ಸಂಗೀತ, ಸ್ತೋತ್ರಪಾಠಗಳನ್ನು ನಡೆಯಿಸಬೇಕು. ಹೃದಯದಲ್ಲಿ ನನ್ನನ್ನು ಚಿಂತಿಸುತ್ತಾ ನೆಲದ ಮೇಲೆ ದೀರ್ಘದಂಡನಮಸ್ಕಾರವನ್ನು ಮಾಡಬೇಕು. ಅನಂತರ ಭಾವನೆಯಿಂದ ನಾನು ಕೊಟ್ಟ ಪ್ರಸಾದವನ್ನು ತಲೆಯಮೇಲಿರಿಸಿಕೊಂಡು (ಹಾಗೆಂತ ಭಾವಿಸಿಕೊಂಡು) ಎರಡು ಕೈಗಳಿಂದಲೂ ನನ್ನ ಪಾದಗಳನ್ನು ಮುಟ್ಟಿ ಭಕ್ತಿಯುಕ್ತನಾಗಿ 'ಎಲೈ ದೇವನೆ, ನನ್ನನ್ನು ಈ ಭಯಂಕರವಾದ ಸಂಸಾರದಿಂದ ಕಾಪಾಡು' ಎಂದು ನಮಸ್ಕರಿಸಬೇಕು. ಮತ್ತೆ ಹಿಂದಿನಂತೆಯೇ ಒಳಗಿನ ಆತ್ಮಜ್ಯೋತಿಯಲ್ಲಿ ನನ್ನನ್ನು ನೆನೆಯುತ್ತಾ ವಿಸರ್ಜನೆಮಾಡಬೇಕು.

**ಏವಮುಕ್ತಪ್ರಕಾರೇಣ ಪೂಜಯೇದ್ ವಿಧಿವದ್ ಯದಿ ।**
**ಇಹಾಮುತ್ರ ಚ ಸಂಸಿದ್ಧಿಂ ಪ್ರಾಪ್ನೋತಿ ಮದನುಗ್ರಹಾತ್ ॥ ೩೬ ॥**
**ಮದ್ಭಕ್ತೋ ಯದಿ ಮಾಮೇವಂ ಪೂಜಾಂ ಚೈವ ದಿನೇ ದಿನೇ ।**
**ಕರೋತಿ ಮಮ ಸಾರೂಪ್ಯಂ ಪ್ರಾಪ್ನೋತ್ಯೇವ ನ ಸಂಶಯಃ ॥ ೩೭ ॥**
**ಇದಂ ರಹಸ್ಯಂ ಪರಮಂ ಚ ಪಾವನಂ**
**ಮಯೈವ ಸಾಕ್ಷಾತ್ ಕಥಿತಂ ಸನಾತನಮ್ ।**
**ಪಠತ್ಯಜಸ್ರಂ ಯದಿ ವಾ ಶೃಣೋತಿ ಯಃ**
**ಸ ಸರ್ವಪೂಜಾಫಲಭಾಜ್ ನ ಸಂಶಯಃ ॥ ೩೮ ॥**

೩೬-೩೮. ಈ ರೀತಿಯಾಗಿ ಈವರೆಗೆ ಹೇಳಿದಂತೆ ವಿಧಿವತ್ತಾಗಿ ಯಾವನು ಪೂಜಿಸುವನೋ ಅವನು ನನ್ನ ಅನುಗ್ರಹದಿಂದ ಇಹಪರಗಳಲ್ಲಿ ಸಂಸಿದ್ಧಿಯನ್ನು ಪಡೆಯುವನು. ನನ್ನ ಭಕ್ತನು ಹೀಗೆ ಪ್ರತಿದಿನವೂ ನನ್ನನ್ನು ಪೂಜೆಮಾಡಿದ್ದಾದರೆ ನನ್ನ ಸಾರೂಪ್ಯಮುಕ್ತಿಯನ್ನೇ ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ. ಇಂಥ ರಹಸ್ಯವಾದ ಪರಮಪವಿತ್ರವಾದ ಸನಾತನವಾದ (ಕ್ರಿಯಾಯೋಗವು) ನಾನೇ ಸಾಕ್ಷಾತ್ತಾಗಿ ಉಪದೇಶಿಸಿದ್ದಾಗಿದೆ. ಯಾವನೇ ಆಗಲಿ ಮತ್ತೆ ಮತ್ತೆ ಇದನ್ನು ಓದುವನೋ ಅಥವಾ ಕೇಳುವನೋ ಅವನು ಎಲ್ಲಾ ಪೂಜೆಗಳನ್ನೂ ಮಾಡಿದ ಫಲಕ್ಕೆ ಪಾತ್ರನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಏವಂ ಪರಾತ್ಮಾ ಶ್ರೀರಾಮಃ ಕ್ರಿಯಾಯೋಗಮನುತ್ತಮಮ್ ।**
**ಪೃಷ್ಟಃ ಪ್ರಾಹ ಸ್ವಭಕ್ತಾಯ ಶೇಷಾಂಶಾಯ ಮಹಾತ್ಮನೇ ॥ ೩೯ ॥**
**ಪುನಃ ಪ್ರಾಕೃತವದ್ ರಾಮೋ ಮಾಯಾಮಾಲಂಬ್ಯ ದುಃಖಿತಃ ।**
**ಹಾ ಸೀತೇತಿ ವದನ್ ನೈವ ನಿದ್ರಾಂ ಲೇಭೇ ಕಥಂಚನ ॥ ೪೦ ॥**

೩೯-೪೦. ಹೀಗೆ ಪರಮಾತ್ಮನಾದ ಶ್ರೀರಾಮನು ಶ್ರೇಷ್ಠವಾದ ಕ್ರಿಯಾಯೋಗವನ್ನು ಆದಿಶೇಷನ ಅಂಶಭೂತನೂ ಮಹಾತ್ಮನೂ ಆದ ತನ್ನ ಭಕ್ತನಿಗೆ ಕೇಳಲ್ಪಟ್ಟಾಗ ಹೇಳಿದನು. ಮತ್ತೆ ಮಾಯೆಯನ್ನಾಶ್ರಯಿಸಿ ದುಃಖಿತನಾಗಿ ಸಾಮಾನ್ಯ ಮನುಷ್ಯನಂತೆ ಅಯ್ಯೋ, ಸೀತೆ - ಎಂದು ಕೂಗುತ್ತಾ ಹೇಗೂ ನಿದ್ರೆಯನ್ನು ಮಾಡದೆ ಇದ್ದುಕೊಂಡನು.

**ಏತಸ್ಮಿನ್ನಂತರೇ ತತ್ರ ಕಿಷ್ಕಿಂಧಾಯಾಂ ಸುಬುದ್ಧಿಮಾನ್ ।**
**ಹನುಮಾನ್ ಪ್ರಾಹ ಸುಗ್ರೀವಮೇಕಾಂತೇ ಕಪಿನಾಯಕಮ್ ॥ ೪೧ ॥**
**ಶೃಣು ರಾಜನ್ ಪ್ರವಕ್ಷ್ಯಾಮಿ ತವೈವ ಹಿತಮುತ್ತಮಮ್ ।**
**ರಾಮೇಣ ತೇ ಕೃತಃ ಪೂರ್ವಮುಪಕಾರೋ ಹ್ಯನುತ್ತಮಃ ॥ ೪೨ ॥**
**ಕೃತಘ್ನವತ್ ತ್ವಯಾ ನೂನಂ ವಿಸ್ಮೃತಃ ಪ್ರತಿಭಾತಿ ಮೇ ।**
**ತ್ವತ್ಕೃತೇ ನಿಹತೋ ವಾಲೀ ವೀರಸ್ತ್ರೈಲೋಕ್ಯಸಂಮತಃ ॥ ೪೩ ॥**
**ರಾಜ್ಯೇ ಪ್ರತಿಷ್ಠಿತೋಽಸಿ ತ್ವಂ ತಾರಾಂ ಪ್ರಾಪ್ತೋಽಸಿ ದುರ್ಲಭಾಮ್ ।**

೪೧-೪೩. ಈ ನಡುವೆ ಬುದ್ಧಿವಂತನಾದ ಹನುಮಂತನು ಕಿಷ್ಕಿಂಧೆಗೆ ಬಂದು ರಹಸ್ಯದಲ್ಲಿ ಕಪಿರಾಜನಾದ ಸುಗ್ರೀವನಿಗೆ ಹೀಗೆ ಹೇಳಿದನು. ''ಎಲೈ ರಾಜನೆ, ಕೇಳು ; ನಿನಗೆ ಹಿತವಾದದ್ದನ್ನು ತಿಳಿಸುವೆನು. ನಿನಗೆ ರಾಮನಿಂದ ಅತಿಶ್ರೇಷ್ಠವಾದ ಉಪಕಾರವು ಮಾಡಲ್ಪಟ್ಟಿದೆ. ಆದರೆ ನೀನು ಕೃತಘ್ನನಂತೆ ಮರೆತುಬಿಟ್ಟಿರುವೆಯೆಂದು ನನಗೆ

ಕಂಡುಬರುತ್ತಿದೆ. ಸನಗಾಗಿ ತ್ರೈಲೋಕ್ಯವೀರನಾದ ವಾಲಿಯು ಕೊಲ್ಲಲ್ಪಟ್ಟನು. ನೀನು ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ದುರ್ಲಭಳಾದ ತಾರೆಯನ್ನು ಪಡೆದಿರುವೆ.

**ಸ ರಾಮಃ ಪರ್ವತಸ್ಯಾಗ್ರೇ ಭ್ರಾತ್ರಾ ಸಹ ವಸನ್ ಸುಧೀಃ ।**
**ತ್ವದಾಗಮನಮೇಕಾಗ್ರಮೀಕ್ಷತೇ ಕಾರ್ಯಗೌರವಾತ್ ॥ ೪೪ ॥**
**ತ್ವಂ ತು ವಾನರಭಾವೇನ ಸ್ತ್ರೀಸಕ್ತೋ ನಾವಬುದ್ಧ್ಯಸೇ ।**
**ಕರೋಮೀತಿ ಪ್ರತಿಜ್ಞಾಯ ಸೀತಾಯಾಃ ಪರಿಮಾರ್ಗಣಮ್ ॥ ೪೫ ॥**
**ನ ಕರೋಷಿ ಕೃತಘ್ನಸ್ತ್ವಂ ಹನ್ಯಸೇ ವಾಲಿವದ್ ದ್ರುತಮ್ ।**

೪೪-೪೫. ಆ ಬುದ್ಧಿಶಾಲಿಯಾದ ರಾಮನು ಪರ್ವತದ ತುದಿಯಲ್ಲಿ ಸೋದರನೊಡನೆ ವಾಸಮಾಡಿಕೊಡು ನಿರಂತರವಾಗಿ ನಿನ್ನ ಬರುವಿಕೆಯನ್ನೇ ಕಾಯ್ದು ಕೊಂಡು ತನ್ನ ಕಾರ್ಯಸಿದ್ಧಿಗಾಗಿ ಕುಳಿತಿರುವನು. ನೀನಾದರೊ, ಕಪಿಬುದ್ಧಿಯವನಾಗಿ ಹೆಂಗಸಿನಲ್ಲಿ ಅನುರಕ್ತನಾಗಿ ಈ ವಿಷಯವನ್ನರಿಯದೆ ಇರುವೆ. ಸೀತೆಯನ್ನು ಹುಡುಕುವ ಕೆಲಸವನ್ನು ಮಾಡುವೆನು- ಎಂದು ಮಾತುಕೊಟ್ಟು ಈಗ ಮಾಡದೆ ಇರುವೆ. ನೀನು ಉಪಕಾರಸ್ಮರಣೆಯುಳ್ಳವನಲ್ಲ. ಜಾಗ್ರತೆಯಾಗಿ ವಾಲಿಯಂತೆ (ರಾಮನಿಂದ) ಸಂಹರಿಸಲ್ಪಡುವೆ.

**ಹನೂಮದ್ವಚನಂ ಶ್ರುತ್ವಾ ಸುಗ್ರೀವೋ ಭಯವಿಹ್ವಲಃ ।**
**ಪ್ರತ್ಯುವಾಚ ಹನೂಮಂತಂ ಸತ್ಯಮೇವ ತ್ವಯೋದಿತಮ್ ॥ ೪೬ ॥**
**ಶೀಘ್ರಂ ಕುರು ಮಮಾಜ್ಞಾಂ ತ್ವಂ ವಾನರಾಣಾಂ ತರಸ್ವಿನಾಮ್ ।**
**ಸಹಸ್ರಾಣಿ ದಶೇದಾನೀಂ ಪ್ರೇಷಯಾಶು ದಿಶೋ ದಶ ॥ ೪೭ ॥**
**ಸಪ್ತದ್ವೀಪಗತಾನ್ ಸರ್ವಾನ್ ವಾನರಾನಾನಯಂತು ತೇ ।**
**ಪಕ್ಷಮಧ್ಯೇ ಸಮಾಯಾಂತು ಸರ್ವೇ ವಾನರಪುಂಗವಾಃ ॥ ೪೮ ॥**
**ಯೇ ಪಕ್ಷಮತಿವರ್ತಂತೇ ತೇ ವಧ್ಯಾ ಮೇ ನ ಸಂಶಯಃ**
**ಇತ್ಯಾಜ್ಞಾಪ್ಯ ಹನೂಮಂತಂ ಸುಗ್ರೀವೋ ಗೃಹಮಾವಿಶತ್ ॥ ೪೯ ॥**

೪೬-೪೯. ಹನುಮಂತನ ಮಾತನ್ನು ಕೇಳಿ ಭಯದಿಂದ ವಿಸ್ಮಯಗೊಂಡ ಸುಗ್ರೀವನು ಹನುಮಂತನನ್ನು ಕುರಿತು ಹೀಗೆಂದು ಉತ್ತರವನ್ನು ಕೊಟ್ಟನು. 'ಅಯ್ಯ, ನೀನು ಹೇಳಿದ್ದು ನಿಜ ;ಜಾಗ್ರತೆಯಾಗಿ ನೀನು ವೇಗಶಾಲಿಗಳಾದ ವಾನರರಿಗೆ ನನ್ನ ಅಪ್ಪಣೆಯನ್ನು ಜಾರಿಮಾಡು. ಹತ್ತುಸಾವಿರ ಮಂದಿ (ದೂತರನ್ನು) ಹತ್ತು ದಿಕ್ಕುಗಳಿಗೂ ಕಳುಹಿಸುವವನಾಗು. ಅವರುಗಳು ಏಳುದ್ವೀಪಗಳಲ್ಲಿಯೂ ಇರುವ ಎಲ್ಲಾ ಕಪಿಗಳನ್ನೂ ಕರೆತರಲಿ. ಎಲ್ಲಾ ವಾನರಶ್ರೇಷ್ಠರು ಒಂದು ಪಕ್ಷ (೧೫ ದಿನಗಳೊಳಗೆ)ದಲ್ಲಿ ಬರಲಿ.

ಯಾರು ಈ ಅವಧಿಯನ್ನು ಮೀರುವವರೋ ಅವರು ನನ್ನಿಂದ ವಧ್ಯರಾಗುವರು' - ಹೀಗೆ ಸುಗ್ರೀವನು ಹನುಮಂತನಿಗೆ ಅಪ್ಪಣೆಮಾಡಿ ಮನೆಯನ್ನು ಹೊಕ್ಕನು.

**ಸುಗ್ರೀವಾಜ್ಞಾಂ ಪುರಸ್ಕೃತ್ಯ ಹನೂಮಾನ್ ಮಂತ್ರಿಸತ್ತಮಃ ।**
**ತತ್ ಕ್ಷಣೇ ಪ್ರೇಷಯಾಮಾಸ ಹರೀನ್ ದಶ ದಿಶಃ ಸುಧೀಃ ॥ ೫೦ ॥**
**ಅಗಣಿತಗುಣಸತ್ವಾನ್ ವಾಯುವೇಗಪ್ರಚಾರಾನ್**
**ವನಚರಗುಣಮುಖ್ಯಾನ್ ಪರ್ವತಾಕಾರರೂಪಾನ್ ।**
**ಪವನಹಿತಕುಮಾರಃ ಪ್ರೇಷಯಾಮಾಸ ದೂತಾನ್**
**ಅತಿರಭಸತರಾತ್ಮಾ ದಾನಮಾನಾದಿತೃಪ್ತಾನ್ ॥ ೫೧ ॥**

೫೦-೫೧. ಸುಗ್ರೀವನ ಅಪ್ಪಣೆಯನ್ನು ಮುಂದಿಟ್ಟುಕೊಂಡು ಮಂತ್ರಿಶ್ರೇಷ್ಠನಾದ ಬುದ್ಧಿಶಾಲಿಯಾದ ಹನುಮಂತನು ಆ ಕೂಡಲೆ ಹತ್ತು ದಿಕ್ಕುಗಳಿಗೂ ಕಪಿಗಳನ್ನು ಕಳುಹಿಸಿದನು. ಅಪರಿಮಿತವಾದ ಶಕ್ತಿಯಿಂದಲೂ ಗುಣಗಳಿಂದಲೂ ಕೂಡಿದ, ಗಾಳಿಯಂತೆ ವೇಗವಾಗಿ ಸಂಚರಿಸುವ, ಪರ್ವತಗಳಂತೆ ದೊಡ್ಡದಾದ ರೂಪವುಳ್ಳ - ದಾನ, ಗೌರವಾದಿಗಳಿಂದ ಸಂತುಷ್ಟರಾದ, ಹಾಗೂ ಕಾಡಿನಲ್ಲಿ ಸಂಚರಿಸುವ ಗುಣಗಳಿಂದ ಕೂಡಿದ, ಕಪಿಗಳನ್ನು ವಾಯುದೇವನ ಪ್ರಿಯಪುತ್ರನೂ ಅತಿ ಹೆಚ್ಚಿನ ವೇಗಸಂಪನ್ನನೂ ಆದ ಹನುಮಂತನು ಕಳುಹಿಸಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ಚತುರ್ಥಃ ಸರ್ಗಃ**

-----------

# ಐದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**
**ರಾಮಸ್ತು ಪರ್ವತಸ್ಯಾಗ್ರೇ ಮಣಿಸಾನೌ ನಿಶಾಮುಖೇ ।**
**ಸೀತಾವಿರಹಜಂ ಶೋಕಮಸಹನ್ನಿದಮಬ್ರವೀತ್ ॥ ೧ ॥**
**ಪಶ್ಯ ಲಕ್ಷ್ಮಣ ಮೇ ಸೀತಾ ರಾಕ್ಷಸೇನ ಹೃತಾ ಬಲಾತ್ ।**
**ಮೃತಾಽಮೃತಾ ವಾ ನಿಶ್ಚೇತುಂ ನ ಜಾನೇಽದ್ಯಾಪಿ ಭಾಮಿನೀಮ್ ॥ ೨ ॥**
**ಜೀವತೀತಿ ಮಮ ಬ್ರೂಯಾದ್ ಕಶ್ಚಿದ್ ವಾ ಪ್ರಿಯಕೃತ್ ಸ ಮೇ ।**
**ಯದಿ ಜಾನಾಮಿ ತಾಂ ಸಾಧ್ವೀಂ ಜೀವಂತೀಂ ಯತ್ರ ಕುತ್ರ ವಾ - ॥ ೩ ॥**
**ಹಠಾದೇವಾಹರಿಷ್ಯಾಮಿ ಸುಧಾಮಿವ ಪಯೋನಿಧೇಃ ।**

**ಪ್ರತಿಜ್ಞಾಂ ಶೃಣು ಮೇ ಭ್ರಾತಃ ಯೇನ ಮೇ ಜನಕಾತ್ಮಜಾ ॥ ೪ ॥**
**ನೀತಾ ತಂ ಭಸ್ಮಸಾತ್ ಕುರ್ಯಾಂ ಸಪುತ್ರಬಲವಾಹನಮ್ ।**

೧-೪. ಶ್ರೀಮಹಾದೇವನಿಂತೆಂದನು : ರಾಮನಾದರೋ ಪ್ರವರ್ಷಣಪರ್ವತದ ಮೇಲೆ ಮಣಿಮಯಶಿಖರದಲ್ಲಿ ಕುಳಿತು ಒಂದು ಸಂಜೆಯಲ್ಲಿ ಸೀತೆಯ ವಿರಹದುಃಖವನ್ನು ತಾಳಲಾರದೆ ಹೀಗೆಂದನು : - '' ಲಕ್ಷ್ಮಣನೆ, ನೋಡು. ರಾಕ್ಷಸನಿಂದ ಬಲಾತ್ಕಾರವಾಗಿ ಅಪಹರಿಸಲ್ಪಟ್ಟ ಸೀತೆಯು ಬದುಕಿದ್ದಾಳೊ, ದೇಹವನ್ನು ಬಿಟ್ಟಳೊ, ಎಂಬಿದನ್ನು ಈವರೆಗೂ ನಿಶ್ಚಯಿಸಲಾರದೆ ಇದ್ದೇನೆ. ಆಕೆಯನ್ನು (ಕಂಡು) ಬದುಕಿದ್ದಾಳೆಂದು ಯಾವನಾದರೊಬ್ಬನು ನನಗೆ ಹೇಳಿದನಾದರೆ ಅವನು ನನಗೆ ಪ್ರಿಯವನ್ನುಂಟು ಮಾಡಿದವನಾಗುವನು. ಎಲ್ಲಿಯೇ ಆದರೂ ಪತಿವ್ರತೆಯಾದ ಆಕೆಯನ್ನು ಬದುಕಿರುವಳೆಂದು ನಾನು ತಿಳಿದೆನಾದರೆ ಸಮುದ್ರದಿಂದ ಅಮೃತವನ್ನು ತೆಗೆದಂತೆ ಕಡ್ಡಾಯವಾಗಿ ಆಕೆಯನ್ನು ಎತ್ತಿ ತರುವೆನು. ಸಹೋದರನೆ, ನನ್ನ ಪ್ರತಿಜ್ಞೆಯನ್ನು ಕೇಳು. ಜನಕಪುತ್ರಿಯಾದ ಸೀತೆಯು ಯಾವನಿಂದ ಒಯ್ಯಲ್ಪಟ್ಟಿರುವಳೋ ಅವನನ್ನು ಮಕ್ಕಳು - ಬಲ-ವಾಹನಾದಿಗಳ ಸಮೇತ ಸುಟ್ಟುಬಿಡುವೆನು.''

**ಹೇ ಸೀತೇ ಚಂದ್ರವದನೇ ವಸಂತೀ ರಾಕ್ಷಸಾಲಯೇ ।**
**ದುಃಖಾರ್ತಾ ಮಾಮಪಶ್ಯಂತೀ ಕಥಂ ಪ್ರಾಣಾನ್ ಧರಿಷ್ಯಸಿ ॥ ೫ ॥**
**ಚಂದ್ರೋಽಪಿ ಭಾನುವದ್ ಭಾತಿ ಮಮ ಚಂದ್ರಾನನಾಂ ವಿನಾ ।**
**ಚಂದ್ರ ತ್ವಂ ಜಾನಕೀಂ ಸ್ಪೃಷ್ಟ್ವಾ ಕರೈರ್ಮಾಂ ಸ್ಪೃಶ ಶೀತಲೈಃ ॥ ೬ ॥**

೫-೬. ''ಎಲೌ ಚಂದ್ರಮುಖಿಯಾದ ಸೀತೆಯೆ, ರಾಕ್ಷಸನ ಅರಮನೆಯಲ್ಲಿದ್ದುಕೊಂಡು ದುಃಖಿತಳಾಗಿ ನನ್ನನ್ನು ಕಾಣದೆ ಹೇಗೆ ಪ್ರಾಣವನ್ನು ಧರಿಸಿದ್ದೀಯೆ ? ಚಂದ್ರಾನನೆಯಾದ (ಸೀತೆ)ಯಿಲ್ಲದೆ ನನಗೆ ಚಂದ್ರನೂ ಸೂರ್ಯನಂತೆಯೇ (ತಾಪಕರನಾಗಿ) ಕಂಡುಬರುತ್ತಿದಾನೆ. ಎಲೈ ಚಂದ್ರನೆ, ನೀನು ಸೀತೆಯನ್ನು ಮುಟ್ಟಿ ಅನಂತರ ಅದೇ ಕಿರಣಗಳಿಂದ ನನ್ನನ್ನು ಮುಟ್ಟುವವನಾಗು.

**ಸುಗ್ರೀವೋಽಪಿ ದಯಾಹೀನೋ ದುಃಖಿತಂ ಮಾಂ ನ ಪಶ್ಯತಿ ।**
**ರಾಜ್ಯಂ ನಿಷ್ಕಂಟಕಂ ಪ್ರಾಪ್ಯ ಸ್ತ್ರೀಭಿಃ ಪರಿವೃತೋ ರಹಃ ॥ ೭ ॥**
**ಕೃತಘ್ನೋ ದೃಶ್ಯತೇ ವ್ಯಕ್ತಂ ಪಾನಾಸಕ್ತೋಽತಿಕಾಮುಕಃ ।**
**ನಾಯಾತಿ ಶರದಂ ಪಶ್ಯನ್ ಅಪಿ ಮಾರ್ಗಯಿತುಂ ಪ್ರಿಯಾಮ್ ॥ ೮ ॥**
**ಪೂರ್ವೋಪಕಾರಿಣಂ ದುಷ್ಟಃ ಕೃತಘ್ನೋ ವಿಸ್ಮೃತೋ ಹಿ ಮಾಮ್ ।**
**ಹನ್ಮಿ ಸುಗ್ರೀವಮಪ್ಯೇವಂ ಸಪುರಂ ಸಹಬಾಂಧವಮ್ ॥ ೯ ॥**
**ವಾಲೀ ಹತೋ ಯಥಾ ಮೇಽದ್ಯ ಸುಗ್ರೀವೋಽಪಿ ತಥಾ ಭವೇತ್ ॥**

೭-೯. ದಯೆಯಿಲ್ಲದ ಸುಗ್ರೀವನೂ ದುಃಖಿತನಾದ ನನ್ನ ಕಡೆಗೆ ತಿರುಗುತ್ತಿಲ್ಲ. (ಅವನು) ಶತ್ರುರಹಿತವಾದ ರಾಜ್ಯವನ್ನು ಪಡೆದುಕೊಂಡು ಏಕಾಂತದಲ್ಲಿ ಸ್ತ್ರೀಯರೊಡ ಗೂಡಿ ಅತಿಕಾಮುಕನೂ ಪಾನಪ್ರಿಯನೂ ಆಗಿ ಕೃತಘ್ನನಾಗಿ ಕಂಡುಬರುತ್ತಿದ್ದಾನೆ. ಶರತ್ಕಾಲವು ಬಂದಿರುವದನ್ನು ತಿಳಿದೂ ನನ್ನ ಪ್ರಿಯಳಾದ (ಸೀತೆಯನ್ನು) ಹುಡುಕಲು ಇನ್ನೂ ಬಂದಿರುವದಿಲ್ಲ. ಹಿಂದೆ ಉಪಕಾರಮಾಡಿದ ನನ್ನನ್ನು ಆ ದುಷ್ಟನು ಮರೆತೇಬಿಟ್ಟನಲ್ಲವೆ ? ಬಂಧುಗಳು, ಪಟ್ಟಣಸಹಿತನಾದ ಸುಗ್ರೀವನನ್ನೂ - ಹೇಗೆ ನನ್ನಿಂದ ವಾಲಿಯು ಸಂಹರಿಸಲ್ಪಟ್ಟನೋ ಹಾಗೆ - ಕೊಲ್ಲುವೆನು.

**ಇತಿ ರುಷ್ಟಂ ಸಮಾಲೋಕ್ಯ ರಾಘವಂ ಲಕ್ಷ್ಮಣೋಽಬ್ರವೀತ್ ।**
**ಇದಾನೀಮೇವ ಗತ್ವಾಹಂ ಸುಗ್ರೀವಂ ದುಷ್ಟಮಾನಸಮ್ ॥ ೧೦ ॥**
**ಮಾಮಾಜ್ಞಾಪಯ ಹತ್ವಾ ತಮಾಯಾಸ್ಯೇ ರಾಮ ತೇಂತಿಕಮ್ ।**
**ಇತ್ಯುಕ್ತ್ವಾ ಧನುರಾದಾಯ ಸ್ವಯಂ ತೂಣೀರಮೇವ ಚ ॥ ೧೧ ॥**
**ಗಂತುಮಭ್ಯುದ್ಯತಂ ವೀಕ್ಷ್ಯ ರಾಮೋ ಲಕ್ಷ್ಮಣಮಬ್ರವೀತ್ ।**

೧೦-೧೧. ಹೀಗೆ ಕೋಪಗೊಂಡ ರಾಮನನ್ನು ಕುರಿತು ಲಕ್ಷ್ಮಣನು ಹೀಗೆಂದನು : ''ನನಗೆ ಅಪ್ಪಣೆಮಾಡು. ಈಗಲೇ ನಾನು ಹೋಗಿ ಎಲೈ ರಾಮನೆ, ದುಷ್ಟಮನಸ್ಸಿನ ಸುಗ್ರೀವನನ್ನು ಕೊಂದು ಬರುವೆನು.'' ಹೀಗೆಂದು ಹೇಳಿ ತಾನೇ ಧನುಸ್ಸನ್ನೂ ಬಾಣದ ಚೀಲವನ್ನೂ ತೆಗೆದುಕೊಂಡು ಹೊರಡುವದಕ್ಕೆ ಸಿದ್ಧನಾದ ಲಕ್ಷ್ಮಣನನ್ನು ಕಂಡು ರಾಮನಿಂತೆಂದನು :

**ನ ಹಂತವ್ಯಸ್ತ್ವಯಾ ವತ್ಸ ಸುಗ್ರೀವೋ ಮೇ ಪ್ರಿಯಃ ಸಖಾ ।**
**ಕಿಂ ತು ಭೀಷಯ ಸುಗ್ರೀವಂ ವಾಲಿವತ್ ತ್ವಂ ಹನಿಷ್ಯಸೇ ॥ ೧೨ ॥**
**ಇತ್ಯುಕ್ತ್ವಾ ಶೀಘ್ರಮಾದಾಯ ಸುಗ್ರೀವಪ್ರತಿಭಾಷಿತಮ್ ।**
**ಆಗತ್ಯ ಪಶ್ಚಾದ್ ಯತ್ಕಾರ್ಯಂ ತತ್ಕರಿಷ್ಯಾಮ್ಯಸಂಶಯಮ್ ॥ ೧೩ ॥**

೧೨-೧೩. 'ಅಪ್ಪ, ಮಗು, ಸುಗ್ರೀವನನ್ನು ನೀನು ಕೊಲ್ಲಬಾರದು. ಅವನು ನನಗೆ ಪ್ರೀತಿಯ ಸ್ನೇಹಿತನು. ಆದರೆ 'ವಾಲಿಯಂತೆ ನೀನೂ ಕೊಲ್ಲಲ್ಪಡುವೆ' ಎಂದು ಹೆದರಿಸು. ಹಾಗೆ ಹೇಳಿ ಆತನ ಪ್ರತ್ಯುತ್ತರವನ್ನು ಪಡೆದು ಬೇಗನೆ ಬರುವವನಾಗು. ಆನಂತರ ಏನು ಮಾಡಬೇಕೋ ಅದನ್ನು ನಾನು ಮಾಡುವೆನು. ಈ ವಿಷಯದಲ್ಲಿ ಸಂಶಯವು ಬೇಡ.'

**ತಥೇತಿ ಲಕ್ಷ್ಮಣೋಽಗಚ್ಛತ್ ತ್ವರಿತೋ ಭೀಮವಿಕ್ರಮಃ ।**
**ಕಿಷ್ಕಿಂಧಾಂ ಪ್ರತಿ ಕೋಪೇನ ನಿರ್ದಹನ್ನಿವ ವಾನರಾನ್ ॥ ೧೪ ॥**

**ಸರ್ವಜ್ಞೋ ನಿತ್ಯಲಕ್ಷ್ಮೀಕೋ ವಿಜ್ಞಾನಾತ್ಮಾಪಿ ರಾಘವಃ ।**
**ಸೀತಾಮನುಶುಶೋಚಾರ್ತಃ ಪ್ರಾಕೃತಃ ಪ್ರಾಕೃತಾಮಿವ ॥ ೧೫ ॥**

೧೪-೧೫. ಹಾಗೇ ಆಗಲೆಂದು ಭಯಂಕರಪರಾಕ್ರಮಿಯಾದ ಲಕ್ಷ್ಮಣನು ಕಿಷ್ಕಿಂಧೆಯನ್ನು ಕುರಿತು - ಕಪಿಗಳನ್ನೆಲ್ಲ ಸುಡುವವನಂತೆ - ಕೋಪದಿಂದ ವೇಗದಿಂದ ಹೊರಟನು. ಶ್ರೀರಾಮನಾದರೊ, ಸರ್ವಜ್ಞನೂ ನಿತ್ಯಲಕ್ಷ್ಮೀಯುಕ್ತನೂ ವಿಜ್ಞಾನ ಸ್ವರೂಪನೂ ಆಗಿದ್ದರೂ - ಸಾಮಾನ್ಯಮನುಷ್ಯನು ತನ್ನವಳ ವಿಷಯಕ್ಕೆ ಹೇಗೋ ಹಾಗೆ - ಸೀತೆಯನ್ನು ಕುರಿತು ದುಃಖಪಡುತ್ತಿದ್ದನು.

**ಬುದ್ಧ್ಯಾದಿಸಾಕ್ಷಿಣಸ್ತಸ್ಯ ಮಾಯಾಕಾರ್ಯಾತಿವರ್ತಿನಃ ।**
**ರಾಗಾದಿರಹಿತಸ್ಯಾಸ್ಯ ತತ್ಕಾರ್ಯಂ ಕಥಮುದ್ಭವೇತ್ ॥ ೧೬ ॥**
**ಬ್ರಹ್ಮಣೋಕ್ತಮೃತಂ ಕರ್ತುಂ ರಾಜ್ಞೋ ದಶರಥಸ್ಯ ಹಿ ।**
**ತಪಸಃ ಫಲದಾನಾಯ ಜಾತೋ ಮಾನುಷವೇಷಧೃಕ್ ॥ ೧೭ ॥**
**ಮಾಯಯಾ ಮೋಹಿತಾಸ್ಸರ್ವೇ ಜನಾ ಅಜ್ಞಾನಸಂಯುತಾಃ ।**
**ಕಥಮೇಷಾಂ ಭವೇನ್ಮೋಕ್ಷ ಇತಿ ವಿಷ್ಣುರ್ವಿಚಿಂತಯನ್ ॥ ೧೮ ॥**
**ಕಥಾಂ ಪ್ರಥಯಿತುಂ ಲೋಕೇ ಸರ್ವಲೋಕಮಲಾಪಹಾಮ್ ।**
**ರಾಮಾಯಣಾಭಿಧಾಂ ರಾಮೋ ಭೂತ್ವಾ ಮಾನುಷಚೇಷ್ಟಕಃ ॥ ೧೯ ॥**
**ಕ್ರೋಧಂ ಮೋಹಂ ಚ ಕಾಮಂ ಚ ವ್ಯವಹಾರಾರ್ಥಸಿದ್ಧಯೇ ।**
**ತತ್ತತ್ಕಾಲೋಚಿತಂ ಗೃಹ್ಣನ್ ಮೋಹಯತ್ಯವಶಾಃ ಪ್ರಜಾಃ ॥ ೨೦ ॥**

೧೬-೨೦. ಬುದ್ಧಿಯೇ ಮುಂತಾದವುಗಳಿಗೆ ಸಾಕ್ಷಿಯಾದ, ಮಾಯೆಯ ಕಾರ್ಯಗಳನ್ನೆಲ್ಲ ದಾಟಿರುವ, ರಾಗಾದಿದೋಷರಹಿತನಾದ ಇವನಿಗೆ (ಕಾಮಾದಿ)ಗಳು ಹೇಗೆ ಉಂಟಾದಾವು ? ಬ್ರಹ್ಮನು ಹೇಳಿದ ಮಾತನ್ನು ಸತ್ಯವಾಗಿ ಮಾಡುವದಕ್ಕೂ ದಶರಥ ರಾಜನ ತಪಸ್ಸಿಗೆ ಫಲವನ್ನು ಕೊಡುವದಕ್ಕೂ ಮನುಷ್ಯವೇಷದಿಂದ ಹುಟ್ಟಿದವನಾಗಿರುತ್ತಾನೆ. ಅಜ್ಞಾನದಿಂದೊಡಗೂಡಿದ ಜನರು ಮಾಯಾಮೋಹಿತರಾಗಿರುವಲ್ಲಿ ಇವರುಗಳಿಗೆ ಮೋಕ್ಷವು ಹೇಗೆ ಉಂಟಾದೀತು ? ಎಂದು ವಿಷ್ಣುವು ಚಿಂತಿಸಿದವನಾಗಿ ಸಕಲಲೋಕಗಳ ದೋಷಗಳನ್ನೂ ಕಳೆಯುವಂಥ ರಾಮಾಯಣವೆಂಬ ಹೆಸರಿನ ಕಥೆಯನ್ನು ಪ್ರಸಿದ್ಧಿಗೊಳಿಸುವದಕ್ಕಾಗಿ ರಾಮನಾಗಿ ಅವತರಿಸಿ ಮನುಷ್ಯರಂತೆ ಕರ್ಮವನ್ನು ಮಾಡುತ್ತಾ ವ್ಯವಹಾರದ ಪ್ರಯೋಜನಗಳ ಸಿದ್ಧಿಗಾಗಿ ಕೋಪವನ್ನೂ ಮರೆವನ್ನೂ, ಆಶೆಯನ್ನೂ ಆಯಾ ಕಾಲಕ್ಕೆ ತಕ್ಕಂತೆ ಸ್ವೀಕರಿಸಿ ಅಸ್ವತಂತ್ರರಾದ ಜನರನ್ನು ಮೋಹಗೊಳಿಸುತ್ತಿರುವನು.

**ಅನುರಕ್ತ ಇವಾಶೇಷಗುಣೇಷು ಗುಣವರ್ಜಿತಃ ।**
**ವಿಜ್ಞಾನಮೂರ್ತಿರ್ವಿಜ್ಞಾನಶಕ್ತಿಃ ಸಾಕ್ಷ್ಯಗುಣಾನ್ವಿತಃ ॥ ೨೧ ॥**

**ಅತಃ ಕಾಮಾದಿಭಿರ್ನಿತ್ಯಮವಿಲಿಪ್ತೋ ಯಥಾ ನಭಃ ।**
**ವಿಂದಂತಿ ಮುನಯಃ ಕೇಚಿಜ್ಜ್ಞಾನನ್ತಿ ಜನಕಾದಯಃ ॥ ೨೨ ॥**
**ತದ್ಭಕ್ತಾ ನಿರ್ಮಲಾತ್ಮಾನಃ ಸಮ್ಯಕ್ ಜಾನಂತಿ ನಿತ್ಯದಾ ।**
**ಭಕ್ತಚಿತ್ತಾನುಸಾರೇಣ ಜಾಯತೇ ಭಗವಾನಜಃ ॥ ೨೩ ॥**

೨೧-೨೩. ಗುಣರಹಿತನಾದ ಆತನು ಎಲ್ಲಾ ಗುಣಗಳೊಡನೆಯೂ ಕೂಡಿದವನಂತೆಯೂ ವಿಜ್ಞಾನಮೂರ್ತಿಯೂ ವಿಜ್ಞಾನಶಕ್ತಿಯೂ ಆಗಿ ಸಾಕ್ಷಿಯಾಗಿರುವನು. ಗುಣಗಳ ಸಂಬಂಧವಿಲ್ಲದವನಾಗಿರುವನು. ಆದ್ದರಿಂದ ಕಾಮಾದಿಗಳಿಂದ ಯಾವಾಗಲೂ ಅಂಟಿಕೊಳ್ಳದೆ ಇರುವವನಾಗಿ ಆಕಾಶದಂತೆ ಅಲಿಪ್ತನಾಗಿರುವನು. ಕೆಲವು ಮುನಿಗಳೂ ಜನಕಾದಿಜ್ಞಾನಿಗಳೂ ಅವನನ್ನು ಬಲ್ಲವರಾಗಿರುವರು. ನಿರ್ಮಲಚಿತ್ತರಾದ ಆತನ ಭಕ್ತರು ಯಾವಾಗಲೂ ಅವನನ್ನು ಚೆನ್ನಾಗಿ ಬಲ್ಲವರಾಗಿರುವರು. ಅಜನಾದ ಆತನು ಭಕ್ತರ ಮನೋಭೀಷ್ಟಗಳಿಗೆ ಅನುಗುಣವಾಗಿ ಹುಟ್ಟುವನು- (ಎಂದರೆ ಹುಟ್ಟಿದಂತೆ ತೋರಿಕೊಳ್ಳುವನು).

**ಲಕ್ಷ್ಮಣೋಽಪಿ ತದಾ ಗತ್ವಾ ಕಿಷ್ಕಿಂಧಾನಗರಾಂತಿಕಮ್ ।**
**ಜ್ಯಾಘೋಷಮಕರೋತ್ ತೀವ್ರಂ ಭೀಷಯನ್ ಸರ್ವವಾನರಾನ್ ॥ ೨೪ ॥**
**ತಂ ದೃಷ್ಟ್ವಾ ಪ್ರಾಕೃತಾಸ್ತತ್ರ ವಾನರಾ ವಪ್ರಮೂರ್ಧನಿ ।**
**ಚಕ್ರುಃ ಕಿಲಕಿಲಾಶಬ್ದಂ ಧೃತಪಾಷಾಣಪಾದಪಾಃ ॥ ೨೫ ॥**
**ತಾನ್ ದೃಷ್ಟ್ವಾ ಕ್ರೋಧತಾಮ್ರಾಕ್ಷೋ ವಾನರಾನ್ ಲಕ್ಷ್ಮಣಸ್ತದಾ ।**
**ನಿರ್ಮೂಲಾನ್ ಕರ್ತುಮುದ್ಯುಕ್ತೋ ಧನುರಾನಮ್ಯ ವೀರ್ಯವಾನ್ ॥ ೨೬ ॥**

೨೪-೨೬. ಲಕ್ಷ್ಮಣನಾದರೊ, ಆಗ ಕಿಷ್ಕಿಂಧಾನಗರಿಯ ಸಮೀಪಕ್ಕೆಹೋಗಿ ಎಲ್ಲಾ ಕಪಿಗಳನ್ನೂ ಹೆದರಿಸುವಂತೆ ಬಿಲ್ಲಿನ ಹಗ್ಗದಿಂದ ಧ್ವನಿಯನ್ನು ಉಂಟುಮಾಡಿದನು. ಕಾಡುಕಪಿಗಳಾದ ಆ ವಾನರರು ಅವನನ್ನು ಕಂಡು ಬೆಟ್ಟದ ತಪ್ಪಲುಪ್ರದೇಶಗಳಲ್ಲೆಲ್ಲ ಕಿರುಚುತ್ತಾ ಕೂಗುತ್ತಾ ಕಲ್ಲುಗಳನ್ನೂ (ಮರದ)ರೆಂಬೆಗಳನ್ನೂ ಎತ್ತಿಕೊಂಡರು. ಆಗ ಆ ಕಪಿಗಳನ್ನು ಕಂಡು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾದ ವೀರನಾದ ಲಕ್ಷ್ಮಣನು ಧನುಸ್ಸನ್ನು ಮೇಲಕ್ಕೆತ್ತಿ ಅವರನ್ನೆಲ್ಲ ನಾಶಗೊಳಿಸಲು ಹೊರಟನು.

**ತತಃ ಶೀಘ್ರಂ ಸಮಾಪ್ಲುತ್ಯ ಜ್ಞಾತ್ವಾ ಲಕ್ಷ್ಮಣಮಾಗತಮ್ ।**
**ನಿವಾರ್ಯ ವಾನರಾನ್ ಸರ್ವಾನ್ ಅಂಗದೋ ಮಂತ್ರಿಸತ್ತಮಃ ॥ ೨೭ ॥**
**ಗತ್ವಾ ಲಕ್ಷ್ಮಣಸಾಮೀಪ್ಯಂ ಪ್ರಣನಾಮ ಸ ದಂಡವತ್ ।**

**ತತೋಂಗದಂ ಪರಿಷ್ವಜ್ಯ ಲಕ್ಷ್ಮಣಃ ಪ್ರಿಯವರ್ಧನಃ ॥ ೨೮ ॥**
**ಉವಾಚ ವತ್ಸ ಗಚ್ಛ ತ್ವಂ ಪಿತೃವ್ಯಾಯ ನಿವೇದಯ ।**
**ಮಾಮಾಗತಂ ರಾಘವೇಣ ಚೋದಿತಂ ರೌದ್ರಮೂರ್ತಿನಾ ॥ ೨೯ ॥**

೨೭-೨೯. ಅನಂತರ ಬೇಗನೆ ಮಂತ್ರಿಶ್ರೇಷ್ಠನಾದ ಅಂಗದನು ಹಾರಿ ಬಂದು ಲಕ್ಷ್ಮಣನು ಬಂದಿರುವದನ್ನು ತಿಳಿದು ಎಲ್ಲಾ ಕಪಿಗಳನ್ನೂ ತಡೆದು ನಿಲ್ಲಿಸಿ ತಾನು ಲಕ್ಷ್ಮಣನ ಬಳಿಗೆ ಹೋಗಿ ದಂಡವತ್ ಪ್ರಣಾಮಮಾಡಿದನು. ಆಗ ಪ್ರಿಯವನ್ನುಂಟು ಮಾಡುವ ಲಕ್ಷ್ಮಣನು ಅಂಗದನನ್ನು ತಬ್ಬಿಕೊಂಡು ಹೀಗೆಂದನು : 'ಮಗು, ನೀನು ಬೇಗನೆ ಹೋಗಿ ಕೋಪಗೊಂಡ ಶ್ರೀರಾಮನಿಂದ ಪ್ರೇರಿಸಲ್ಪಟ್ಟು ಬಂದಿರುವ ನನ್ನನ್ನು ನಿಮ್ಮ ಚಿಕ್ಕಪ್ಪನಿಗೆ ತಿಳಿಸುವವನಾಗು.'

**ತಥೇತಿ ತ್ವರಿತಂ ಗತ್ವಾ ಸುಗ್ರೀವಾಯ ನ್ಯವೇದಯತ್ ।**
**ಲಕ್ಷ್ಮಣಃ ಕ್ರೋಧತಾಮ್ರಾಕ್ಷಃ ಪುರದ್ವಾರಿ ಬಹಿಃ ಸ್ಥಿತಃ ॥ ೩೦ ॥**
**ತಚ್ಛ್ರುತ್ವಾತೀವ ಸಂತ್ರಸ್ತಃ ಸುಗ್ರೀವೋ ವಾನರೇಶ್ವರಃ ।**
**ಆಹೂಯ ಮಂತ್ರಿಣಾಂ ಶ್ರೇಷ್ಠಂ ಹನೂಮಂತಮಥಾಬ್ರವೀತ್ ॥ ೩೧ ॥**
**ಗಚ್ಛ ತ್ವಮಂಗದೇನಾಶು ಲಕ್ಷ್ಮಣಂ ವಿನಯಾನ್ವಿತಃ ।**
**ಸಾಂತ್ವಯನ್ ಕೋಪಿತಂ ವೀರಂ ಶನೈರಾನಯ ಸಾದರಮ್ ॥ ೩೨ ॥**

೩೦-೩೨. ಹಾಗೆಯೇ ಆಗಲೆಂದು ಜಾಗ್ರತೆಯಾಗಿ ಹೋಗಿ 'ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಲಕ್ಷ್ಮಣನು ಪಟ್ಟಣದ ಹೊರಗಡೆ ನಿಂತಿರುತ್ತಾನೆ' ಎಂದು ಸುಗ್ರೀವನಿಗೆ ತಿಳಿಸಿದನು. ವಾನರೇಶ್ವರನಾದ ಸುಗ್ರೀವನು ಅದನ್ನು ಕೇಳಿ ಬಹಳ ಭಯಗೊಂಡವನಾಗಿ ಮಂತ್ರಿಶ್ರೇಷ್ಠನಾದ ಹನುಮಂತನನ್ನು ಕರೆದು ಹೀಗೆಂದನು : 'ನೀನು ಅಂಗದನೊಡಗೂಡಿ ವಿನೀತನಾಗಿ ಲಕ್ಷ್ಮಣನ ಬಳಿಗೆ ಹೋಗಿ ಕೋಪಗೊಂಡಿರುವ ವೀರನಾದ ಅವನನ್ನು ಸಮಾಧಾನಗೊಳಿಸಿ ಮೆಲ್ಲನೆ ಗೌರವಪೂರ್ವಕವಾಗಿ ಇಲ್ಲಿಗೆ ಕರೆದುಕೊಂಡು ಬಾ.'

**ಪ್ರೇಷಯಿತ್ವಾ ಹನೂಮಂತಂ ತಾರಾಮಾಹ ಕಪೀಶ್ವರಃ ।**
**ತ್ವಂ ಗಚ್ಛ ಸಾಂತ್ವಯಂತೀ ತಂ ಲಕ್ಷ್ಮಣಂ ಮೃದುಭಾಷಿತೈಃ ॥ ೩೩ ॥**
**ಶಾಂತಮಂತಃಪುರಂ ನೀತ್ವಾ ಪಶ್ಚಾದ್ದರ್ಶಯ ಮೇಽನಘೇ ।**
**ಭವತ್ವಿತಿ ತತಸ್ತಾರಾ ಮಧ್ಯಕಕ್ಷಂ ಸಮಾವಿಶತ್ ॥ ೩೪ ॥**

೩೩-೩೪. ಹನುಮಂತನನ್ನು (ಲಕ್ಷ್ಮಣನ ಬಳಿಗೆ) ಕಳುಹಿಸಿ ಕಪಿರಾಜನು ತಾರೆಯನ್ನು ಕುರಿತು ಹೀಗೆಂದನು : 'ಎಲೈ ಪಾಪರಹಿತಳೆ, ನೀನು ಹೋಗು. ಆ

ಲಕ್ಷ್ಮಣನನ್ನು ಮೃದುವಾದ ಮಾತುಗಳಿಂದ ಸಮಾಧಾನಗೊಳಿಸುತ್ತಾ ಅವನು ಶಾಂತನಾದ ಮೇಲೆ ಅಂತಃಪುರಕ್ಕೆ ಕರೆತಂದು ಅನಂತರ ನನಗೆ ತೋರಿಸುವವಳಾಗು' ಹಾಗೆಯೇ ಆಗಲೆಂದು ತಾರೆಯು ಅರಮನೆಯ ಮಧ್ಯದ ವರಾಂಡಕ್ಕೆ ಬಂದಳು.

**ಹನುಮಾನಂಗದೇನೈವ ಸಹಿತೋ ಲಕ್ಷ್ಮಣಾಂತಿಕಮ್ ।**
**ಗತ್ವಾ ನನಾಮ ಶಿರಸಾ ಭಕ್ತ್ಯಾ ಸ್ವಾಗತಮಬ್ರವೀತ್ ॥ ೩೫ ॥**
**ಏಹಿ ವೀರ ಮಹಾಭಾಗ ಭವದ್‌ಗೃಹಮಶಂಕಿತಮ್।**
**ಪ್ರವಿಶ್ಯ ರಾಜದಾರಾದೀನ್ ದೃಷ್ಟ್ವಾ ಸುಗ್ರೀವಮೇವ ಚ ॥ ೩೬ ॥**
**ಯದಾಜ್ಞಾಪಯಸೇ ಪಶ್ಚಾತ್ ತತ್ಸರ್ವಂ ಕರವಾಣಿ ಭೋಃ ।**
**ಇತ್ಯುಕ್ತ್ವಾ ಲಕ್ಷಣಂ ಭಕ್ತ್ಯಾ ಕರೇ ಗೃಹ್ಯ ಸ ಮಾರುತಿಃ ।**
**ಆನಯಾಮಾಸ ನಗರಮಧ್ಯಾದ್ರಾಜಗೃಹಂ ಪ್ರತಿ ॥ ೩೭ ॥**

೩೫-೩೭. ಹನುಮಂತನು ಅಂಗದನೊಡಗೂಡಿ ಲಕ್ಷ್ಮಣನ ಸಮೀಪಕ್ಕೆ ಹೋಗಿ ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿ ಸ್ವಾಗತವನ್ನು ಕೋರಿದನು. 'ಎಲೈ ವೀರನಾದ ಮಹಾಭಾಗನೆ, ನಿಸ್ಸಂಶಯವಾಗಿ ನಿನ್ನದೇ ಮನೆಗೆ ಬರುವವನಾಗು. ಒಳಕ್ಕೆ ಬಂದು ರಾಜಸ್ತ್ರೀಯರೇ ಮುಂತಾದವರನ್ನು ಕಂಡು ಸುಗ್ರೀವನನ್ನೂ ಭೇಟಿಮಾಡಿ ಅನಂತರ ಕಾರ್ಯವನ್ನು ಆಜ್ಞಾಪಿಸು. ಅದೆಲ್ಲವನ್ನೂ ಪೂಜ್ಯನೆ, ನೆರವೇರಿಸಿಕೊಡುವೆನು'- ಹೀಗೆಂದು ಹೇಳಿ ಮಾರುತಿಯು ಭಕ್ತಿಯಿಂದ ಲಕ್ಷ್ಮಣನನ್ನು ಕೈಹಿಡಿದುಕೊಂಡು ನಗರದ ಮಧ್ಯಭಾಗದಿಂದ ಅರಮನೆಗೆ ಕರೆತಂದನು.

**ಪಶ್ಯಂಸ್ತತ್ರ ಮಹಾಸೌಧಾನ್ ಯೂಥಪಾನಾಂ ಸಮಂತತಃ ।**
**ಜಗಾಮ ಭವನಂ ರಾಜ್ಞಃ ಸುರೇಂದ್ರಭವನೋಪಮಮ್ ॥ ೩೮ ॥**
**ಮಧ್ಯಕಕ್ಷ್ಯೇ ಗತಾ ತತ್ರ ತಾರಾ ತಾರಾಧಿಪಾನನಾ ।**
**ಸರ್ವಾಭರಣಸಂಪನ್ನಾ ಮದರಕ್ತಾಂತಲೋಚನಾ ॥ ೩೯ ॥**
**ಉವಾಚ ಲಕ್ಷ್ಮಣಂ ನತ್ವಾ ಸ್ಮಿತಪೂರ್ವಾಭಿಭಾಷಿಣೀ ।**
**ಯಾಹಿ ದೇವರ ಭದ್ರಂ ತೇ ಸಾಧುಸ್ತ್ವಂ ಭಕ್ತವತ್ಸಲಃ ॥ ೪೦ ॥**
**ಕಿಮರ್ಥಂ ಕೋಪಮಾಕಾರ್ಷೀಃ ಭಕ್ತೇ ಭೃತ್ಯೇ ಕಪೀಶ್ವರೇ ॥**

೩೮-೪೦. ಅಲ್ಲಿ ದೊಡ್ಡ ದೊಡ್ಡ ಉಪ್ಪರಿಗೆಗಳನ್ನು ನೋಡುತ್ತಾ (ಕಪಿಗಳ ಗುಂಪಿಗೆ ಒಡೆಯರಾದ)ವರ ಸುತ್ತಲೂ ತಿರುಗಿ ನೋಡುತ್ತಾ ದೇವೇಂದ್ರನ ಅರಮನೆಯಂತಿದ್ದ ರಾಜನ ಅರಮನೆಯನ್ನು ಹೊಕ್ಕನು. ನಡುವಿನ ಭಾಗದಲ್ಲಿ ಚಂದ್ರನಂತೆ ಮುಖವುಳ್ಳ ತಾರೆಯು ಸರ್ವಾಭರಣಭೂಷಿತಳಾಗಿ ಯೌವನದ (ಹುರುಪಿನಿಂದ) ಕೆಂಪಾದ ತುದಿಗಣ್ಣುಗಳುಳ್ಳವಳಾಗಿ ಲಕ್ಷ್ಮಣನನ್ನು ಎದುರುಗೊಂಡು ನಮಸ್ಕರಿಸಿ ಮುಗು

ಉನಗೆಯಿಂದ ಕೂಡಿದ ಮಾತುಗಳಿಂದ "ಎಲೈ ಮೈದುನನೆ, ಬಾ; ನಿನಗೆ ಮಂಗಳವಾಗಲಿ; ನೀನು ಭಕ್ತವತ್ಸಲನೂ ಸತ್ಪುರುಷನೂ ಆಗಿರುವೆ ; ಭಕ್ತನೂ ಸೇವಕನೂ ಆದ ಕಪಿರಾಜನ ವಿಷಯಕ್ಕೆ ಕೋಪವನ್ನೇಕೆ ಮಾಡಿಕೊಂಡೆ ?"

**ಬಹುಕಾಲಮನಾಶ್ವಾಸಂ ದುಃಖಮೇವಾನುಭೂತವಾನ್ ।**
**ಇದಾನೀಂ ಬಹುದುಃಖೌಘಾತ್ ಭವದ್ಭಿರಭಿರಕ್ಷಿತಃ ॥ ೪೧ ॥**
**ಭವತ್ಪ್ರಸಾದಾತ್ ಸುಗ್ರೀವಃ ಪ್ರಾಪ್ತಸೌಖ್ಯೋ ಮಹಾಮತಿಃ ।**
**ಕಾಮಾಸಕ್ತೋ ರಘುಪತೇಃ ಸೇವಾರ್ಥಂ ನಾಗತೋ ಹರಿಃ ॥ ೪೨॥**
**ಆಗಮಿಷ್ಯಂತಿ ಹರಯೋ ನಾನಾದೇಶಗತಾಃ ಪ್ರಭೋ ।**
**ಪ್ರೇಷಿತಾ ದಶಸಾಹಸ್ರಾ ಹರಯೋ ರಘುಸತ್ತಮ ॥ ೪೩ ॥**
**ಆನೇತುಂ ವಾನರಾನ್ ದಿಗ್ಭ್ಯೋ ಮಹಾಪರ್ವತಸನ್ನಿಭಾನ್ ।**

೪೧-೪೩. "(ಸುಗ್ರೀವನು) ಬಹಳಕಾಲ ಯಾವ ಸ್ನೇಹವೂ ದೊರೆಯದೆ ದುಃಖವನ್ನೇ ಅನುಭವಿಸಿದವನು. ಈಗ ಅನೇಕಕಷ್ಟಗಳ ಹೊರೆಯಿಂದ ಅವನು ನಿಮ್ಮಗಳ ಮೂಲಕ ಕಾಪಾಡಲ್ಪಟ್ಟಿರುವನು. ಮಹಾಬುದ್ಧಿಶಾಲಿಯಾದ ಸುಗ್ರೀವನು ನಿಮ್ಮ ಕೃಪೆಯಿಂದ ಸೌಖ್ಯವನ್ನು ಪಡೆದುಕೊಂಡಿರುವನು. ಆದ್ದರಿಂದ ಕಾಮಾಸಕ್ತನಾದ ಆತನು ಶ್ರೀರಾಮನ ಸೇವೆಗೆ ಇನ್ನೂ ಬಂದಿರುವದಿಲ್ಲ. ಆದರೆ ಈಗಾಗಲೇ ಅನೇಕ ದೇಶಗಳಿಗೆ ಹೋಗಿರುವ ಕಪಿಗಳೆಲ್ಲರೂ ಬರಲಿದ್ದಾರೆ. ಪ್ರಭುವೆ, ರಘುಶ್ರೇಷ್ಠನೆ, ಹತ್ತುಸಾವಿರಮಂದಿ ಸಂಖ್ಯೆಯ ಕಪಿಗಳು ಎಲ್ಲಾ ಮೂಲೆಗಳಿಂದಲೂ ಮಹಾಬೆಟ್ಟದಂಥ ಕಪಿಗಳನ್ನು ಕರೆತರುವದಕ್ಕಾಗಿ ಕಳುಹಿಸಲ್ಪಟ್ಟಿದ್ದಾರೆ."

**ಸುಗ್ರೀವಃ ಸ್ವಯಮಾಗತ್ಯ ಸರ್ವವಾನರಯೂಥಪೈಃ ।**
**ವಧಯಿಷ್ಯತಿ ದೈತ್ಯೌಘಾನ್ ರಾವಣಂ ಚ ಹನಿಷ್ಯತಿ ॥ ೪೪ ॥**
**ತ್ವಯೈವ ಸಹಿತೋಽದ್ಯೈವ ಗಂತಾ ವಾನರಪುಂಗವಃ ।**
**ಪಶ್ಯಾಂತರ್ಭವನಂ ತತ್ರ ಪುತ್ರದಾರಸುಹೃದ್ವೃತಮ್ ॥ ೪೫ ॥**
**ದೃಷ್ಟ್ವಾ ಸುಗ್ರೀವಮಭಯಂ ದತ್ವಾ ನಯ ಸಹೈವ ತೇ ॥**

೪೪-೪೫. "ಸುಗ್ರೀವನು ಸಮಸ್ತವಾನರಸೈನ್ಯದೊಡನೆ ತಾನೇ ಬಂದು ರಾಕ್ಷಸರ ಸಮೂಹವನ್ನೆಲ್ಲ ಕೊಂದು ರಾವಣನನ್ನೂ ನಾಶಗೊಳಿಸುತ್ತಾನೆ. ಆ ವಾನರಶ್ರೇಷ್ಠನು ಈಗಲೇ ನಿನ್ನೊಡನೆಯೇ (ರಾಮನ ಬಳಿಗೆ) ಹೋಗಲಿದ್ದಾನೆ. ಇದೊ, ಅಂತಃಪುರದೊಳಗೆ ಮಕ್ಕಳು ಹೆಂಡಿರೊಡನೆ ಕೂಡಿ ಇದ್ದುಕೊಂಡಿರುವ ಸುಗ್ರೀವನನ್ನು ನೋಡು. ಆತನನ್ನು ಕಂಡು ಅಭಯವನ್ನು ನೀಡಿ ನಿನ್ನೊಡನೆಯೇ ಕರೆದೊಯ್ಯುವವನಾಗು."

**ತಾರಾಯಾ ವಚನಂ ಶ್ರುತ್ವಾ ಕೃಶಕ್ರೋಧೋಽಥ ಲಕ್ಷ್ಮಣಃ ।**
**ಜಗಾಮಾಂತಃಪುರಂ ಯತ್ರ ಸುಗ್ರೀವೋ ವಾನರೇಶ್ವರಃ ॥ ೪೬ ॥**
**ರುಮಾಮಾಲಿಂಗ್ಯ ಸುಗ್ರೀವಃ ಪರ್ಯಂಕೇ ಪರ್ಯವಸ್ಥಿತಃ ।**
**ದೃಷ್ಟ್ವಾ ಲಕ್ಷ್ಮಣಮತ್ಯರ್ಥಮುತ್ಪಪಾತಾತಿಭೀತವತ್ ॥ ೪೭ ॥**

೪೬-೪೭. ತಾರೆಯ ಮಾತನ್ನು ಕೇಳಿ ಕಡಿಮೆಯಾದ ಸಿಟ್ಟುಳ್ಳ ಲಕ್ಷ್ಮಣನು ವಾನರೇಶ್ವರನಾದ ಸುಗ್ರೀವನಿರುವ ಅಂತಃಪುರಕ್ಕೆ ಹೋದನು. ಅಲ್ಲಿ ಸುಗ್ರೀವನು ರುಮೆಯನ್ನು ಆಲಿಂಗಿಸಿಕೊಂಡು ಮಂಚದ ಮೇಲೆ ಕುಳಿತಿದ್ದನು. ಲಕ್ಷ್ಮಣನನ್ನು ಕಂಡೊಡನೆ ಅತಿಯಾಗಿ ಹೆದರಿದವನಂತೆ ನೆಗೆದನು.

**ತಂ ದೃಷ್ಟ್ವಾ ಲಕ್ಷ್ಮಣಃ ಕ್ರುದ್ಧೋ ಮದವಿಹ್ವಲಿತೇಕ್ಷಣಮ್ ।**
**ಸುಗ್ರೀವಂ ಪ್ರಾಹ ದುರ್ವೃತ್ತ ವಿಸ್ಮೃತೋಽಸಿ ರಘೂತ್ತಮಮ್ ॥ ೪೮ ॥**
**ವಾಲೀ ಯೇನ ಹತೋ ವೀರಃ ಸ ಬಾಣೋಽದ್ಯ ಪ್ರತೀಕ್ಷತೇ ।**
**ತ್ವಮೇವ ವಾಲಿನೋ ಮಾರ್ಗಂ ಗಮಿಷ್ಯಸಿ ಮಯಾ ಹತಃ ॥ ೪೯ ॥**

೪೮-೪೯. ಮದದಿಂದ ಮಬ್ಬಾದ ಕಣ್ಣುಳ್ಳ ಅವನನ್ನು ಕಂಡು ಕುಪಿತನಾದ ಲಕ್ಷ್ಮಣನು ಹೀಗೆಂದನು : 'ಎಲೈ ಕೆಟ್ಟನಡತೆಯವನೆ, ಶ್ರೀರಾಮನನ್ನು ಮರೆತಿರುವೆ. ಯಾವ ಬಾಣದಿಂದ ವಾಲಿಯು ಕೊಲ್ಲಲ್ಪಟ್ಟನೋ ಅದು ನಿನ್ನನ್ನು ನಿರೀಕ್ಷಿಸುತ್ತಿದೆ. ನನ್ನಿಂದ ಹತನಾದ ನೀನೇ ವಾಲಿಯ ದಾರಿಯನ್ನು ಹಿಡಿಯುವೆ.'

**ಏವಮತ್ಯಂತಪರುಷಂ ವದಂತಂ ಲಕ್ಷ್ಮಣಂ ತದಾ ।**
**ಉವಾಚ ಹನುಮಾನ್ ವೀರಃ ಕಥಮೇವಂ ಪ್ರಭಾಷಸೇ ॥ ೫೦ ॥**
**ತ್ವತ್ತೋಽಧಿಕತರೋ ರಾಮೇ ಭಕ್ತೋಽಯಂ ವಾನರಾಧಿಪಃ ।**
**ರಾಮಕಾರ್ಯಾರ್ಥಮನಿಶಂ ಜಾಗರ್ತಿ ನ ತು ವಿಸ್ಮೃತಃ ॥ ೫೧ ॥**
**ಆಗತಾಃ ಪರಿತಃ ಪಶ್ಯ ವಾನರಾಃ ಕೋಟಿಶಃ ಪ್ರಭೋ ।**
**ಗಮಿಷ್ಯನ್ತ್ಯಚಿರೇಣೈವ ಸೀತಾಯಾಃ ಪರಿಮಾರ್ಗಣಮ್ ॥ ೫೨ ॥**
**ಸಾಧಯಿಷ್ಯತಿ ಸುಗ್ರೀವೋ ರಾಮಕಾರ್ಯಮಶೇಷತಃ ॥**

೫೦-೫೨. ಹೀಗೆ ಬಹಳ ಕಠಿನವಾಗಿ ಮಾತನಾಡುತ್ತಿರುವ ಲಕ್ಷ್ಮಣನನ್ನು ಕುರಿತು ಹನುಮಂತನು ಹೀಗೆಂದನು : ''ಎಲೈ ವೀರನೆ, ಹೀಗೇಕೆ ಮಾತನಾಡುತ್ತಿರುವೆ ? ಈ ಕಪಿರಾಜನು ಶ್ರೀರಾಮನಲ್ಲಿ ನಿನಗಿಂತಲೂ ಹೆಚ್ಚಿನ ಭಕ್ತನಾಗಿರುವನು. ರಾಮನ ಸೇವೆಗಾಗಿಯೇ ಯಾವಾಗಲೂ ಎಚ್ಚತ್ತಿರುವನು. ಎಂದಿಗೂ ಮರೆತಿಲ್ಲ. ಪ್ರಭುವೆ, ಇದೊ, ಕೋಟಿಗಟ್ಟಲೆ ಕಪಿಗಳು ಬಂದಿದ್ದಾರೆ. ನೋಡು. ಇವರುಗಳು ಸೀತೆಯನ್ನು

ಹುಡುಕಲು ಜಾಗ್ರತೆಯಾಗಿ ಹೋಗಲಿದ್ದಾರೆ. ರಾಮನ ಎಲ್ಲಾ ಕೆಲಸಕಾರ್ಯಗಳನ್ನೂ ಸುಗ್ರೀವನು ನೆರವೇರಿಸಿಕೊಡಲಿದ್ದಾನೆ.''

**ಶ್ರುತ್ವಾ ಹನುಮತೋ ವಾಕ್ಯಂ ಸೌಮಿತ್ರಿರ್ಲಜ್ಜಿತೋಽಭವತ್ ।**
**ಸುಗ್ರೀವೋಽಪ್ಯರ್ಘ್ಯಪಾದ್ಯಾದ್ಯೈಃ ಲಕ್ಷ್ಮಣಂ ಸಮಪೂಜಯತ್ ॥ ೫೩ ॥**
**ಆಲಿಂಗ್ಯ ಪ್ರಾಹ ರಾಮಸ್ಯ ದಾಸೋಽಹಂ ತೇನ ರಕ್ಷಿತಃ ।**
**ರಾಮಃ ಸ್ವತೇಜಸಾ ಲೋಕಾನ್ ಕ್ಷಣಾರ್ಧೇನೈವ ಜೇಷ್ಯತಿ ॥ ೫೪ ॥**
**ಸಹಾಯಮಾತ್ರಮೇವಾಹಂ ವಾನರೈಃ ಸಹಿತಃ ಪ್ರಭೋ ।**

೫೩-೫೪.ಹನುಮಂತನ ಮಾತನ್ನು ಕೇಳಿ ಲಕ್ಷ್ಮಣನು ನಾಚಿಕೊಂಡು ಸುಮ್ಮನಾದನು. ಸುಗ್ರೀವನೂ ಅರ್ಘ್ಯಪಾದ್ಯಾದ್ಯುಪಚಾರಗಳಿಂದ ಲಕ್ಷ್ಮಣನನ್ನು ಪೂಜಿಸಿದನು. ಮತ್ತು ಲಕ್ಷ್ಮಣನನ್ನು ಆಲಿಂಗಿಸಿಕೊಂಡು ಹೀಗೆಂದನು : 'ನಾನು ರಾಮನ ಸೇವಕನು ; ಅವನಿಂದ ಕಾಪಾಡಲ್ಪಟ್ಟಿರುವೆನು. ರಾಮನಾದರೊ ತನ್ನ ತೇಜಸ್ಸಿನಿಂದ ಅರ್ಧಕ್ಷಣದಲ್ಲಿ ಎಲ್ಲಾ ಲೋಕಗಳನ್ನೂ ಜಯಿಸಬಲ್ಲನು. ಎಲೈ ಪ್ರಭುವೆ, ನಾನಾದರೊ, ಕೇವಲ ಸಹಾಯಮಾತ್ರನಾಗಿರುವೆನು.'

**ಸೌಮಿತ್ರಿರಪಿ ಸುಗ್ರೀವಂ ಪ್ರಾಹ ಕಿಂಚಿನ್ಮಯೋದಿತಮ್ ।**
**ತತ್ ಕ್ಷಮಸ್ವ ಮಹಾಭಾಗ ಪ್ರಣಯಾದ್ ಭಾಷಿತಂ ಮಯಾ ॥ ೫೫ ॥**
**ಗಚ್ಛಾಮೋಽದ್ಯೈವ ಸುಗ್ರೀವ ರಾಮಸ್ತಿಷ್ಠತಿ ಕಾನನೇ ।**
**ಏಕ ಏವಾತಿದುಃಖಾರ್ತೋ ಜಾನಕೀವಿರಹಾತ್ ಪ್ರಭುಃ ॥ ೫೬ ॥**
**ತಥೇತಿ ರಥಮಾರುಹ್ಯ ಲಕ್ಷ್ಮಣೇನ ಸಮನ್ವಿತಃ ।**
**ವಾನರೈಃ ಸಹಿತೋ ರಾಜಾ ರಾಮಮೇವಾನ್ವಪದ್ಯತ ॥ ೫೭ ॥**

೫೫-೫೭. ಲಕ್ಷ್ಮಣನೂ ಸುಗ್ರೀವನನ್ನು ಕುರಿತು ಹೀಗೆಂದನು : 'ಎಲೈ ಮಹಾಭಾಗನೆ, ನಾನು ಆಡಿದ ಅಲ್ಪಮಾತುಗಳನ್ನು ಕ್ಷಮಿಸುವವನಾಗು. ಅವು ನಿನ್ನ ಮೇಲಿನ ಪ್ರೇಮದಿಂದಲೇ ಹೇಳಿದವುಗಳಾಗಿವೆ. ಈಗಲೆ ನಾವು ಕಾಡಿಗೆ ಹೋಗೋಣ ಎಲೈ ಸುಗ್ರೀವನೆ, ಅಲ್ಲಿ ರಾಮನೊಬ್ಬನೇ ಸೀತೆಯ ಅಗಲುವಿಕೆಯಿಂದ ಬಹಳವಾಗಿ ದುಃಖಿತನಾಗಿ ಇದ್ದುಕೊಂಡಿರುವನು.' ಹೀಗೆನ್ನಲು ಹಾಗೆಯೇ ಆಗಲೆಂದು ಒಪ್ಪಿದ ವಾನರರಾಜನಾದ ಸುಗ್ರೀವನು ಲಕ್ಷ್ಮಣನೊಡಗೂಡಿ ರಥವನ್ನೇರಿ ಕಪಿಗಳ ಸಮೇತ ರಾಮನನ್ನೇ ಅನುಸರಿಸಿ ಹೊರಟನು.

**ಭೇರೀಮೃದಂಗೈಃ ಬಹುಋಕ್ಷವಾನರೈಃ**
**ಶ್ವೇತಾತಪತ್ರೈಃ ವ್ಯಜನೈಶ್ಚ ಶೋಭಿತಃ ।**

**ನೀಲಾಂಗದಾದ್ಯೈಃ ಹನುಮತ್ಪ್ರಧಾನೈಃ**
**ಸಮಾವೃತೋ ರಾಘವಮಭ್ಯಗಾದ್ ಹರಿಃ** **॥ ೫೮ ॥**

೫೮. ಕಪಿರಾಜನಾದ (ಸುಗ್ರೀವನು) ಭೇರಿ, ಮೃದಂಗಾದಿ ವಾದ್ಯಧ್ವನಿಗಳಿಂದಲೂ ಅನೇಕಮಂದಿ ಕಪಿ, ಕರಡಿಗಳಿಂದಲೂ ಕೂಡಿದವನಾಗಿ (ರಾಜಮರ್ಯಾದೆಗಳಾದ) ಶ್ವೇತಚ್ಛತ್ರಿ- ಬೀಸಣಿಗೆಗಳಿಂದ ಸೇವಿತನಾಗಿ ನೀಲ, ಅಂಗದ, ಹನುಮಂತ- ಮುಂತಾದ ಪ್ರಧಾನರಾದ ವಾನರರೊಡಗೂಡಿ ಶ್ರೀರಾಮನಿದ್ದಲ್ಲಿಗೆ ಹೊರಟನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ಪಂಚಮಃ ಸರ್ಗಃ**

---------

# ಆರನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ದೃಷ್ಟ್ವಾ ರಾಮಂ ಸಮಾಸೀನಂ ಗುಹಾದ್ವಾರಿ ಶಿಲಾತಲೇ ।**
**ಚೈಲಾಜಿನಧರಂ ಶ್ಯಾಮಂ ಜಟಾಮೌಲಿವಿರಾಜಿತಮ್** **॥ ೧ ॥**
**ವಿಶಾಲನಯನಂ ಶಾಂತಂ ಸ್ಮಿತಚಾರುಮುಖಾಂಬುಜಮ್ ।**
**ಸೀತಾವಿರಹಸಂತಪ್ತಂ ಪಶ್ಯಂತಂ ಮೃಗಪಕ್ಷಿಣಃ** **॥ ೨ ॥**
**ರಥಾದ್ದೂರಾತ್ ಸಮುತ್ಪತ್ಯ ವೇಗಾತ್ ಸುಗ್ರೀವಲಕ್ಷ್ಮಣೌ ।**
**ರಾಮಸ್ಯ ಪಾದಯೋರಗ್ರೇ ಪೇತತುರ್ಭಕ್ತಿಸಂಯುತೌ** **॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು :- ಗುಹೆಯ ಬಾಗಿಲಿನಲ್ಲಿ ಕಲ್ಲಿನ ಮೇಲೆ ಕುಳಿತಿರುವ, ನಾರುಮಡಿ, ಜಿಂಕೆಯ ಚರ್ಮಗಳನ್ನು ಧರಿಸಿರುವ, ಜಟೆಯೆಂಬ ಕಿರೀಟದಿಂದ ವಿರಾಜಮಾನನಾದ ನೀಲವರ್ಣನಾದ, ವಿಶಾಲವಾದ ಕಣ್ಣುಗಳುಳ್ಳ, ಶಾಂತನಾದ, ಮುಗುಳುನಗೆಯಿಂದ ಕೂಡಿದ ಕಮಲದಂಥ ಮುಖವುಳ್ಳ, ಹಾಗೂ ಸೀತೆಯ ಅಗಲುವಿಕೆಯಿಂದ ಬಳಲಿದ, ಮೃಗಪಕ್ಷಿಗಳನ್ನು ನೋಡುತ್ತಿರುವ ರಾಮನನ್ನು ದೂರದಿಂದಲೇ ಕಂಡು ಸುಗ್ರೀವ- ಲಕ್ಷ್ಮಣರಿಬ್ಬರೂ ರಥದಿಂದ ಕೆಳಗೆ ನೆಗೆದವರಾಗಿ ವೇಗದಿಂದ (ಓಡಿಬಂದು) ಭಕ್ತಿಸಮನ್ವಿತ ರಾಗಿ ರಾಮನ ಎರಡು ಪಾದಗಳಿಗೆ ವಂದಿಸಿದರು.

**ರಾಮಃ ಸುಗ್ರೀವಮಾಲಿಂಗ್ಯ ಪೃಷ್ಟ್ವಾ ನಾಮಯಮಂತಿಕೇ ।**
**ಸ್ಥಾಪಯಿತ್ವಾ ಯಥಾನ್ಯಾಯಂ ಪೂಜಯಾಮಾಸ ಧರ್ಮವಿತ್ ॥ ೪ ॥**
**ತತೋऽಬ್ರವೀದ್ ರಘುಶ್ರೇಷ್ಠಂ ಸುಗ್ರೀವೋ ಭಕ್ತಿನಮ್ರಧೀಃ ।**
**ದೇವ ಪಶ್ಯ ಸಮಾಯಾಂತೀಂ ವಾನರಾಣಾಂ ಮಹಾಚಮೂಮ್ ॥ ೫ ॥**
**ಕುಲಾಚಲಾದ್ರಿಸಂಭೂತಾ ಮೇರುಮಂದರಸನ್ನಿಭಾಃ ।**
**ನಾನಾದ್ವೀಪಸರಿಚ್ಛೈಲವಾಸಿನಃ ಪರ್ವತೋಪಮಾಃ ॥ ೬ ॥**
**ಅಸಂಖ್ಯಾತಾಃ ಸಮಾಯಾಂತಿ ಹರಯಃ ಕಾಮರೂಪಿಣಃ ।**
**ಸರ್ವೇ ದೇವಾಂಶಸಂಭೂತಾ ಸರ್ವೇ ಯುದ್ಧವಿಶಾರದಾಃ ॥ ೭ ॥**

೪-೭. ರಾಮನು ಸುಗ್ರೀವನನ್ನು ತಬ್ಬಿಕೊಂಡು ಹತ್ತಿರದಲ್ಲಿ ಕುಳ್ಳಿರಿಸಿಕೊಂಡು ಯೋಗಕ್ಷೇಮವನ್ನೂ ವಿಚಾರಿಸಿ ಅನಂತರ ರಾಜಯೋಗ್ಯವಾದ ರೀತಿಯಲ್ಲಿ ಸತ್ಕರಿಸಿ ಪೂಜಿಸಿದನು. ಅನಂತರ ರಾಮನನ್ನು ಕುರಿತು ಸುಗ್ರೀವನು ಭಕ್ತಿಯಿಂದ ವಿನೀತನಾಗಿ ಹೀಗೆಂದನು : 'ಸ್ವಾಮಿ, ಇದೊ, ಬರುತ್ತಿರುವ ವಾನರರ ದೊಡ್ಡ ಸೇನೆಯನ್ನು ನೋಡು. ಕುಲಪರ್ವತಗಳಲ್ಲಿ ಹುಟ್ಟಿ ಬೆಳೆದಿರುವ, ಮೇರು, ಮಂದರಪರ್ವತಗಳಿಗೆ ಸಮಾನರಾದ, ಅನೇಕ ದ್ವೀಪಗಳಲ್ಲಿಯೂ ನದಿಯ ದಂಡೆಗಳಲ್ಲಿಯೂ ಬೆಟ್ಟಗಳಲ್ಲಿಯೂ ವಾಸವಾಗಿರುವ, ಪರ್ವತಾಕಾರದ ಶರೀರವುಳ್ಳ, ಇಚ್ಛಾರೂಪವನ್ನು ಧರಿಸಬಲ್ಲ ಲೆಕ್ಕವಿಲ್ಲದಷ್ಟು ಕಪಿಗಳು ಬರುತ್ತಿರುವರು. ಇವರೆಲ್ಲರೂ ದೇವಾಂಶಸಂಭೂತರು, ಹಾಗೂ ಯುದ್ಧಗಳಲ್ಲಿ ನಿಷ್ಣಾತರೂ (ನಿಪುಣರು) ಆಗಿರುತ್ತಾರೆ.

**ಅತ್ರ ಕೇಚಿದ್ ಗಜಬಲಾಃ ಕೇಚಿದ್ದಶಗಜೋಪಮಾಃ ।**
**ಗಜಾಯುತಬಲಾಃ ಕೇಚಿತ್ ಅನ್ಯೇऽಮಿತಬಲಾಃ ಪ್ರಭೋ ॥ ೮ ॥**
**ಕೇಚಿದಂಜನಕೂಟಾಭಾಃ ಕೇಚಿತ್ ಕನಕಸನ್ನಿಭಾಃ ।**
**ಕೇಚಿದ್ ರಕ್ತಾಂತವದನಾಃ ದೀರ್ಘವಾಲಾಸ್ತಥಾಪರೇ ॥ ೯ ॥**
**ಶುದ್ಧಸ್ಫಟಿಕಸಂಕಾಶಾಃ ಕೇಚಿದ್ ರಾಕ್ಷಸಸನ್ನಿಭಾಃ ।**
**ಗರ್ಜಂತಃ ಪರಿತೋ ಯಾಂತಿ ವಾನರಾ ಯುದ್ಧಕಾಂಕ್ಷಿಣಃ ॥ ೧೦ ॥**
**ತ್ವದಾಜ್ಞಾಕಾರಿಣಃ ಸರ್ವೇ ಫಲಮೂಲಾಶನಾಃ ಪ್ರಭೋ ॥**

೮-೧೦. ಇಲ್ಲಿ ಕೆಲವರು ಆನೆಯಷ್ಟು ಬಲವುಳ್ಳವರು ; ಕೆಲವರು ಹತ್ತಾನೆಗಳಷ್ಟು ಬಲಿಷ್ಠರು. ಮತ್ತೆ ಕೆಲವರು ಹತ್ತುಸಾವಿರ ಆನೆಗಳ ಬಲದವರು. ಎಲೈ ಪ್ರಭುವೆ, ಇನ್ನೂ ಕೆಲವರು ಎಣಿಸಲಾರದಷ್ಟು ಆನೆಗಳ ಬಲದವರು. ಕೆಲವರು ಅಂಜನಪರ್ವತದಂತೆ ಕಾಂತಿಯುಳ್ಳವರು ; ಕೆಲವರು ಚಿನ್ನದಂತೆ ಹೊಳಪುಳ್ಳವರು. ಮತ್ತೆ ಕೆಲವರು ಕೆಂಪಾದ ಮುಸುಡಿಯುಳ್ಳವರು ; ಕೆಲವರು ಉದ್ದವಾದ ಬಾಲವುಳ್ಳವರು.

ಕೆಲವರು ಸ್ವಚ್ಛವಾದ ಸ್ಫಟಿಕದಂತೆ ಕಾಂತಿಯುಳ್ಳವರು. ಕೆಲವರು ರಾಕ್ಷಸರಂತೆ ಭಯಂಕರರು. ಯುದ್ಧಕಾಂಕ್ಷಿಗಳಾದ ಕಪಿಗಳು. ಘರ್ಜನೆಮಾಡುತ್ತಾ ಸುತ್ತಲೂ ತಿರುಗಾಡುತ್ತಿರುವರು. ಎಲೈ ಪ್ರಭುವೆ, ಹಣ್ಣುಗೆಡ್ಡೆಗಳೇ ಆಹಾರವಾಗುಳ್ಳ ಇವರೆಲ್ಲರೂ ನಿನ್ನ ಅಪ್ಪಣೆಯನ್ನು ನೆರವೇರಿಸುವರು.

**ಋಕ್ಷಾಣಾಮಧಿಪೋ ವೀರಃ ಜಾಂಬವಾನ್ ನಾಮ ಬುದ್ಧಿಮಾನ್ ।**
**ಏಷ ಮೇ ಮಂತ್ರಿಣಾಂ ಶ್ರೇಷ್ಠಃ ಕೋಟಿಭಲ್ಲೂಕವೃಂದಪಃ ॥ ೧೧ ॥**
**ಹನೂಮಾನೇಷ ವಿಖ್ಯಾತೋ ಮಹಾಸತ್ತ್ವಪರಾಕ್ರಮಃ ।**
**ವಾಯುಪುತ್ರೋऽತಿತೇಜಸ್ವೀ ಮಂತ್ರೀ ಬುದ್ಧಿಮತಾಂ ವರಃ ॥ ೧೨ ॥**
**ನಲೋ ನೀಲಶ್ಚ ಗವಯೋ ಗವಾಕ್ಷೋ ಗಂಧಮಾದನಃ ।**
**ಶರಭೋ ಮೈಂದವಶ್ಚೈವ ಗಜಃ ಪನಸ ಏವ ಚ ॥ ೧೩ ॥**
**ವಲೀಮುಖೋ ದಧಿಮುಖಃ ಸುಷೇಣಸ್ತಾರ ಏವ ಚ ।**
**ಕೇಸರೀ ಚ ಮಹಾಸತ್ತ್ವಃ ಪಿತಾ ಹನುಮತೋ ಬಲೀ ॥ ೧೪ ॥**
**ಏತೇ ತೇ ಯೂಥಪಾ ರಾಮ ಪ್ರಾಧಾನ್ಯೇನ ಮಯೋದಿತಾಃ ।**

೧೧-೧೪. ಇವನಾದರೊ, ಬುದ್ಧಿವಂತನೂ ಕೋಟಿ ಕರಡಿಗಳ ಗುಂಪಿಗೆ ಒಡೆಯನೂ ಆದ ನನ್ನ ಮಂತ್ರಿಶ್ರೇಷ್ಠನಾದ ಜಾಂಬವಂತನೆಂಬವನು. ಇವನು ಮಹಾಬಲ ಪರಾಕ್ರಮಿಯೂ ವಾಯುವಿನ ಮಗನೂ ಅತ್ಯಂತತೇಜಸ್ವಿಯೂ ಬುದ್ಧಿವಂತರಲ್ಲಿ ಪ್ರಧಾನನೂ ಆದ ಹನುಮಂತನೆಂಬವನು. ಇನ್ನು ನಲ, ನೀಲ, ಗವಯ, ಗವಾಕ್ಷ, ಗಂಧಮಾದನ, ಶರಭ, ಮೈಂದ , ಗಜ, ಪನಸ, ವಲೀಮುಖ, ದಧಿಮುಖ, ಸುಷೇಣ, ತಾರ, ಹನುಮಂತನ ತಂದೆಯಾದ ಬಲಿಷ್ಠನಾದ ಕೇಸರಿ, - ಈ ಯೂಥಪರು ಮುಖ್ಯವಾಗಿ ಎಲೈ ರಾಮನೆ, ನನ್ನ ಬಳಿಯಿರುವವರಾಗಿದ್ದಾರೆ. ಪ್ರಧಾನರನ್ನು ಮಾತ್ರ ಹೆಸರಿಸಿರುತ್ತೇನೆ.

**ಮಹಾತ್ಮಾನೋ ಮಹಾವೀರ್ಯಾಃ ಶಕ್ರತುಲ್ಯಪರಾಕ್ರಮಾಃ ।**
**ಏತೇ ಪ್ರತ್ಯೇಕತಃ ಕೋಟಿಕೋಟಿವಾನರಯೂಥಪಾಃ ॥ ೧೫ ॥**
**ತವಾಜ್ಞಾಕಾರಿಣಃ ಸರ್ವೇ ಸರ್ವೇ ದೇವಾಂಶಸಂಭವಾಃ ।**
**ಏಷ ವಾಲಿಸುತಃ ಶ್ರೀಮಾನಂಗದೋ ನಾಮ ವಿಶ್ರುತಃ ॥ ೧೬ ॥**
**ವಾಲಿತುಲ್ಯಬಲೋ ವೀರೋ ರಾಕ್ಷಸಾನಾಂ ಬಲಾಂತಕಃ ।**
**ಏತೇ ಚಾನ್ಯೇ ಚ ಬಹವಸ್ತ್ವದರ್ಥೇ ತ್ಯಕ್ತಜೀವಿತಾಃ ॥ ೧೭ ॥**
**ಯೋದ್ಧಾರಃ ಪರ್ವತಾಗ್ರೈಶ್ಚ ನಿಪುಣಾಃ ಶತ್ರುಘಾತನೇ ।**
**ಆಜ್ಞಾಪಯ ರಘುಶ್ರೇಷ್ಠ ಸರ್ವೇ ತೇ ವಶವರ್ತಿನಃ ॥ ೧೮ ॥**

೧೫-೧೮. ಮಹಾತ್ಮರೂ ಮಹಾವೀರ್ಯಶಾಲಿಗಳೂ ದೇವೇಂದ್ರನಿಗೆ ಸಮನಾದ ಪರಾಕ್ರಮವುಳ್ಳವರೂ ಆಗಿದ್ದು ಇವರುಗಳು ಬಿಡಿಬಿಡಿಯಾಗಿ ಕೋಟಿಕೋಟಿ ಕಪಿಗಳ ಗುಂಪಿಗೆ ಒಡೆಯರಾಗಿರುವರು. ಎಲ್ಲರೂ ನಿನ್ನ ಅಪ್ಪಣೆಯನ್ನು ನಡೆಸುವವರು. ಎಲ್ಲರೂ ದೇವಾಂಶಸಂಭೂತರು.. ಇವನು ವಾಲಿಪುತ್ರನಾದ ಅಂಗದನೆಂಬ ಹೆಸರಿನಿಂದ ಪ್ರಸಿದ್ಧನಾದ ಕಪಿಯು. ಇವನು ವಾಲಿಗೆ ಸಮಾನವಾದ ಬಲವುಳ್ಳವನೂ ರಾಕ್ಷಸರ ಬಲವನ್ನು ನಾಶಮಾಡುವವನೂ ಆಗಿರುವನು. ಇವರಲ್ಲದೆ ಇನ್ನೂಕೆಲವರು ಎಷ್ಟೋ ಕಪಿಗಳು ನಿನಗಾಗಿಯೇ ಪ್ರಾಣವನ್ನು ಬಿಡಲು ಸಿದ್ಧರಿರುತ್ತಾರೆ. ಬೆಟ್ಟದ ಶಿಖರಗಳಿಂದ ಯುದ್ಧಮಾಡಿ ಶತ್ರುಗಳನ್ನು ನಾಶಗೊಳಿಸುವದರಲ್ಲಿ ನಿಪುಣರಾದವರಾಗಿರುವರು. ರಘುಶ್ರೇಷ್ಠನೆ, ಇವರುಗಳಿಗೆ ಅಪ್ಪಣೆಮಾಡು. ಇವರೆಲ್ಲರೂ ನಿನ್ನ ಆಜ್ಞಾಧಾರಕರಾಗಿ ರುವರು.

**ರಾಮಃ ಸುಗ್ರೀವಮಾಲಿಂಗ್ಯ ಹರ್ಷಪೂರ್ಣಾಶ್ರುಲೋಚನಃ ।**
**ಪ್ರಾಹ ಸುಗ್ರೀವ ಜಾನಾಸಿ ಸರ್ವಂ ತ್ವಂ ಕಾರ್ಯಗೌರವಮ್ ॥ ೧೯ ॥**
**ಮಾರ್ಗಣಾರ್ಥಂ ಹಿ ಜಾನಕ್ಯಾ ನಿಯುಂಕ್ಷ್ವ ಯದಿ ರೋಚತೇ ।**
**ಶ್ರುತ್ವಾ ರಾಮಸ್ಯ ವಚನಂ ಸುಗ್ರೀವಃ ಪ್ರೀತಮಾನಸಃ ॥ ೨೦ ॥**
**ಪ್ರೇಷಯಾಮಾಸ ಬಲಿನೋ ವಾನರಾನ್ ವಾನರರ್ಷಭಃ ।**

೧೯-೨೦. ರಾಮನು ಸುಗ್ರೀವನನ್ನು ಆಲಿಂಗಿಸ್ಕಿಕೊಂಡು ಸಂತೋಷ ದಿಂದುಂಟಾದ ಕಣ್ಣೀರುಳ್ಳವನಾಗಿ ಹೀಗೆಂದನು : ''ಸುಗ್ರೀವನೆ, ನೀನು ಎಲ್ಲಾ ಕಾರ್ಯ ಗಳ ಜವಾಬ್ದಾರಿಯನ್ನೂ ಬಲ್ಲವನು. ನಿನಗೆ ಸರಿಯೆನಿಸಿದರೆ ಸೀತಾದೇವಿಯನ್ನು ಹುಡುಕುವದಕ್ಕಾಗಿ ಕಪಿಗಳನ್ನು ಗೊತ್ತುಮಾಡಿ ನೀನೇ ಅಪ್ಪಣೆಮಾಡು''. ಸಂತುಷ್ಟ ಮನಸ್ಕನಾದ ವಾನರಶ್ರೇಷ್ಠನಾದ ಸುಗ್ರೀವನು ರಾಮನ ಮಾತನ್ನು ಕೇಳಿ ಬಲಿಷ್ಠರಾದ ಕಪಿ ಗಳನ್ನು ಕಳುಹಿಸಲು ಅಪ್ಪಣೆಮಾಡಿದನು.

**ದಿಕ್ಷು ಸರ್ವಾಸು ವಿವಿಧಾನ್ ವಾನರಾನ್ ಪ್ರೇಷ್ಯ ಸತ್ವರಮ್ ।**
**ದಕ್ಷಿಣಾಂ ದಿಶಮತ್ಯರ್ಥಂ ಪ್ರಯತ್ನೇನ ಮಹಾಬಲಾನ್ ॥ ೨೧ ॥**
**ಯುವರಾಜಂ ಜಾಂಬವಂತಂ ಹನೂಮಂತಂ ಮಹಾಬಲಮ್ ।**
**ನಲಂ ಸುಷೇಣಂ ಶರಭಂ ಮೈಂದಂ ದ್ವಿವಿದಮೇವ ಚ ॥ ೨೨ ॥**
**ಪ್ರೇಷಯಾಮಾಸ ಸುಗ್ರೀವೋ ವಚನಂ ಚೇದಮಬ್ರವೀತ್ ।**
**ವಿಚಿನ್ವಂತು ಪ್ರಯತ್ನೇನ ಭವಂತೋ ಜಾನಕೀಂ ಶುಭಾಮ್ ॥ ೨೩ ॥**
**ಮಾಸಾದರ್ವಾಜ್ ನಿವರ್ತಧ್ವಂ ಮಚ್ಛಾಸನಪುರಸ್ಸರಾಃ ॥**
**ಸೀತಾಮದೃಷ್ಟ್ವಾ ಯದಿ ವೋ ಮಾಸದೂರ್ಧ್ವಂ ದಿನಂ ಭವೇತ್ ॥ ೨೪ ॥**

**ತದಾ ಪ್ರಾಣಾಂತಿಕಂ ದಂಡಂ ಮತ್ತಃ ಪ್ರಾಪ್ಸ್ಯಥ ವಾನರಾಃ ।**
**ಇತಿ ಪ್ರಸ್ಥಾಪ್ಯ ಸುಗ್ರೀವೋ ವಾನರಾನ್ ಭೀಮವಿಕ್ರಮಾನ್ ॥ ೨೫ ॥**
**ರಾಮಸ್ಯ ಪಾರ್ಶ್ವೇ ಶ್ರೀರಾಮಂ ನತ್ವಾ ಚೋಪವಿವೇಶ ಸಃ ॥**

೨೧-೨೫. ಎಲ್ಲ ದಿಕ್ಕುಗಳಿಗೂ ಜಾಗ್ರತೆಯಾಗಿ ಕಪಿಗಳನ್ನು ಕಳುಹಿಸಿ ವಿಶೇಷವಾಗಿ ದಕ್ಷಿಣದಿಕ್ಕಿಗೆ ಹೆಚ್ಚಿನ ಪ್ರಯತ್ನಮಾಡುವಂಥ ಮಹಾಬಲಿಷ್ಠರಾದ ಜಾಂಬವಂತ, ಯುವರಾಜನಾದ ಅಂಗದ, ಬಲಶಾಲಿಯಾದ ಹನುಮಂತ, ನಲ, ಸುಷೇಣ, ಶರಭ, ಮೈಂದ, ದ್ವಿವಿದ- ಇವರುಗಳನ್ನು ಸುಗ್ರೀವನು ಕಳುಹಿಸಿದವನಾಗಿ ಈ ಮಾತನ್ನು ಹೇಳಿದನು : ''ನೀವುಗಳು ಪ್ರಯತ್ನಮಾಡಿ ಶುಭಳಾದ ಜಾನಕಿಯನ್ನು ಹುಡುಕಿರಿ. ನನ್ನ ಅಪ್ಪಣೆಯನ್ನು ಗೌರವಿಸಿ ಒಂದು ತಿಂಗಳೊಳಗಾಗಿ ಹಿಂದಿರುಗಿ ಬನ್ನಿರಿ. ಸೀತೆಯನ್ನು ಕಾಣದೆ ಒಂದು ತಿಂಗಳ ಕಾಲಮೀರಿದಮೇಲೆ ಒಂದು ದಿನವಾದರೂ ತಡವಾಗಿ ಹಿಂದಿರುಗುವಿರಾದರೆ - ''ಎಲೈ ಕಪಿಗಳೆ ನೀವು ಪ್ರಾಣವನ್ನು ತೆರುವ ದಂಡವನ್ನು ಹೊಂದುವಿರಿ.'' ಹೀಗೆಂದು ಹೇಳಿ ಭಯಂಕರಪರಾಕ್ರಮರಾದ ಕಪಿಗಳನ್ನು ಕಳುಹಿಸಿಕೊಟ್ಟು ಸುಗ್ರೀವನು ಶ್ರೀರಾಮನ ಬಳಿಗೆ ಬಂದು ನಮಸ್ಕರಿಸಿ ಕುಳಿತುಕೊಂಡನು.

**ಗಚ್ಛಂತಂ ಮಾರುತಿಂ ದೃಷ್ಟ್ವಾ ರಾಮೋ ವಚನಮಬ್ರವೀತ್ ।**
**ಅಭಿಜ್ಞಾನಾರ್ಥಮೇತನ್ಮೇ ಹ್ಯಂಗುಲೀಯಕಮುತ್ತಮಮ್ ॥ ೨೬ ॥**
**ಮನ್ನಾಮಾಕ್ಷರಸಂಯುಕ್ತಂ ಸೀತಾಯೈ ದೀಯತಾಂ ರಹಃ ।**
**ಅಸ್ಮಿನ್ ಕಾರ್ಯೇ ಪ್ರಮಾಣಂ ಹಿ ತ್ವಮೇವ ಕಪಿಸತ್ತಮ ॥ ೨೭ ॥**
**ಜಾನಾಮಿ ಸತ್ವಂ ತೇ ಸರ್ವಂ ಗಚ್ಛ ಪಂಥಾಃ ಶುಭಸ್ತವ ।**
**ಏವಂ ಕಪೀನಾಂ ರಾಜ್ಞಾ ತೇ ವಿಸೃಷ್ಟಾಃ ಪರಿಮಾರ್ಗಣೇ ॥ ೨೮ ॥**
**ಸೀತಾಯಾ ಅಂಗದಮುಖಾ ಬಭ್ರಮುಸ್ತತ್ರ ತತ್ರ ಹ ।**

೨೬-೨೮. ಹೊರಡುತ್ತಿರುವ ಹನುಮಂತನನ್ನು ಕಂಡು ರಾಮನು ಹೀಗೆಂದನು : 'ಈ ನನ್ನ ಹೆಸರಿನ ಅಕ್ಷರಗಳುಳ್ಳ ಉಂಗುರವನ್ನು ಗುರುತಿಗಾಗಿ ಸೀತಾದೇವಿಗೆ ರಹಸ್ಯದಲ್ಲಿ ಕೊಡುವವನಾಗು ; ಎಲೈ ಕಪಿಶ್ರೇಷ್ಠನೆ, ಈ ಕೆಲಸದಲ್ಲಿ ನೀನು ಮಾತ್ರವೇ ನಂಬಿಕೆಗೆ ಅರ್ಹನು. ಏಕೆಂದರೆ ನಿನ್ನ ಬಲಪರಾಕ್ರಮಗಳನ್ನು ನಾನು ಬಲ್ಲೆನು. ನಿನಗೆ ದಾರಿಯು ಶುಭಕರವಾಗಲಿ ! ಇನ್ನು ಹೊರಡು' ಎಂದನು. ಹೀಗೆ ಕಪಿರಾಜನಿಂದ ಸೀತೆಯನ್ನು ಹುಡುಕುವದಕ್ಕಾಗಿ ಕಳುಹಿಸಲ್ಪಟ್ಟ ಅಂಗದನೇ ಮುಂತಾದ ಕಪಿಗಳು ಅಲ್ಲಲ್ಲಿ ಅಲೆಯುತ್ತಿದ್ದರು.

**ಭ್ರಮಂತೋ ವಿಂಧ್ಯಗಹನೇ ದದೃಶುಃ ಪರ್ವತೋಪಮಮ್ ।**
**ರಾಕ್ಷಸಂ ಭೀಷಣಾಕಾರಂ ಭಕ್ಷಯಂತಂ ಮೃಗಾನ್ ಗಜಾನ್ ॥ ೨೯ ॥**
**ರಾವಣೋಽಯಮಿತಿ ಜ್ಞಾತ್ವಾ ಕೇಚಿದ್ ವಾನರಪುಂಗವಾಃ ।**
**ಜಘ್ನುಃ ಕಿಲಕಿಲಾಶಬ್ದಂ ಮುಂಚಂತೋ ಮುಷ್ಟಿಭಿಃ ಕ್ಷಣಾತ್ ॥ ೩೦ ॥**
**ನಾಯಂ ರಾವಣ ಇತ್ಯುಕ್ತ್ವಾ ಯಯುರನ್ಯನ್ಮಹದ್ವನಮ್ ।**

೨೯-೩೦. ದಟ್ಟವಾದ ವಿಂಧ್ಯಪರ್ವತದ ಕಾಡಿನಲ್ಲಿ ಅಡ್ಡಾಡುತ್ತಾ ಪರ್ವತದಂತೆ ದೇಹವುಳ್ಳ ಭಯಂಕರಾಕೃತಿಯ ಹಾಗೂ ಪ್ರಾಣಿಗಳನ್ನು ಆನೆಗಳನ್ನೂ ತಿನ್ನುತ್ತಿರುವ ಒಬ್ಬ ರಾಕ್ಷಸನನ್ನು ಕಂಡರು. ಕೆಲವು ವಾನರಶ್ರೇಷ್ಠರು ಈತನೇ ರಾವಣನೆಂದು ಭಾವಿಸಿ ಕ್ಷಣಮಾತ್ರದಲ್ಲಿ ತಮ್ಮ ಮುಷ್ಟಿಗಳಿಂದ ಗುದ್ದುತ್ತಾ ಕಿಲಕಿಲನೆ ಶಬ್ದಮಾಡಿದರು. ಆದರೆ ಇವನು ರಾವಣನಲ್ಲ - ಎಂದು ತಿಳಿದವರಾಗಿ ಬೇರೊಂದು ಕಾಡಿಗೆ ಹೊರಟನು.

**ತೃಷಾರ್ತಾಃ ಸಲಿಲಂ ತತ್ರ ನಾವಿಂದನ್ ಹರಿಪುಂಗವಾಃ ।**
**ವಿಭ್ರಮಂತೋ ಮಹಾರಣ್ಯೇ ಶುಷ್ಕಕಂಠೋಷ್ಠತಾಲುಕಾಃ ॥ ೩೧ ॥**
**ದದೃಶುರ್ಗಹ್ವರಂ ತತ್ರ ತೃಣಗುಲ್ಮಾವೃತಂ ಮಹತ್ ।**
**ಆರ್ದ್ರಪಕ್ಷಾನ್ ಕ್ರೌಂಚಹಂಸಾನ್ ನಿಃಸೃತಾನ್ ದದೃಶುಃ ತತಃ ॥ ೩೨ ॥**
**ಅತ್ರಾಸ್ತೇ ಸಲಿಲಂ ನೂನಂ ಪ್ರವಿಶಾಮೋ ಮಹಾಗುಹಾಮ್ ।**
**ಇತ್ಯುಕ್ತ್ವಾ ಹನುಮಾನಗ್ರೇ ಪ್ರವಿವೇಶ ತಮನ್ವಯುಃ ॥ ೩೩ ॥**

೩೧-೩೩. ಅಲ್ಲಿ ಎಲ್ಲಿಯೂ ನೀರು ದೊರೆಯದ ಕಾರಣ, ಬಾಯಾರಿದವರಾಗಿ ಆ ಕಪಿಶ್ರೇಷ್ಠರು ಒಣಗಿದ ಗಂಟಲು - ನಾಲಗೆಗಳುಳ್ಳವರಾಗಿ ತಿರುಗುತ್ತಾ ಆ ಮಹಾಕಾಡಿನಲ್ಲಿ ಒಂದು ದಟ್ಟವಾದ ಹಾಗೂ ಹುಲ್ಲುಪೊದೆಗಳಿಂದ ಮುಚ್ಚಲ್ಪಟ್ಟಿದ್ದ ಗುಹೆಯನ್ನು ನೋಡಿದರು. ಅನಂತರ ಒದ್ದೆಯಾದ ರೆಕ್ಕೆಗಳುಳ್ಳ ಕ್ರೌಂಚ, ಹಂಸ ಮುಂತಾದ ಹಕ್ಕಿಗಳು ಹೊರಬಂದದ್ದನ್ನು ಕಂಡರು: 'ಇಲ್ಲಿ ನೀರು ಖಂಡಿತವಾಗಿಯೂ ಇದೆ ; ಈ ದೊಡ್ಡ ಗುಹೆಯೊಳಕ್ಕೆ ಹೋಗೋಣ' - ಎಂದುಕೊಂಡು ಹನುಮಂತನು ಮುಂದಾಗಿ ಒಳಹೊಕ್ಕನು. ಉಳಿದವರು ಅವನನ್ನು ಅನುಸರಿಸಿದರು.

**ಸರ್ವೇ ಪರಸ್ಪರಂ ಧೃತ್ವಾ ಬಾಹೂನ್ ಬಾಹುಭಿರುತ್ಸುಕಾಃ ।**
**ಅಂಧಕಾರೇ ಮಹದ್ದೂರಂ ಗತ್ವಾಪಶ್ಯನ್ ಕಪೀಶ್ವರಾಃ ॥ ೩೪ ॥**
**ಜಲಾಶಯಾನ್ ಮಣಿನಿಭತೋಯಾನ್ ಕಲ್ಪದ್ರುಮೋಪಮಾನ್ ।**
**ವೃಕ್ಷಾನ್ ಪಕ್ವಫಲೈರ್ನಮ್ರಾನ್ ಮಧುದ್ರೋಣಸಮನ್ವಿತಾನ್ ॥ ೩೫ ॥**

**ಗೃಹಾನ್ ಸರ್ವಗುಣೋಪೇತಾನ್ ಮಣಿವಸ್ತ್ರಾದಿಪೂರಿತಾನ್ ।**
**ದಿವ್ಯಭಕ್ಷ್ಯಾನ್ನಸಹಿತಾನ್ ಮಾನುಷ್ಯೈಃ ಪರಿವರ್ಜಿತಾನ್ ॥ ೩೬ ॥**

೩೪-೩೬. ಎಲ್ಲರೂ ಅನ್ಯೋನ್ಯವಾಗಿ ತೋಳುಗಳನ್ನು ಹಿಡಿದುಕೊಂಡು ಕುತೂಹಲದಿಂದ ಕತ್ತಲೆಯಲ್ಲಿಯೇ ಬಹಳ ದೂರ ಹೋಗಿ ಆ ಕಪಿಶ್ರೇಷ್ಠರು - ಸ್ಪಟಿಕಮಣಿಯಂತೆ ಸ್ವಚ್ಛವಾದ ನೀರುಳ್ಳ ಕೆರೆಗಳನ್ನೂ ಕಲ್ಪವೃಕ್ಷದಂಥ ಹಾಗೂ ಚೆನ್ನಾಗಿ ಪಕ್ವವಾಗಿ ಬಾಗಿರುವ ರೆಂಬೆಗಳುಳ್ಳ ಹಣ್ಣಿನ ಮರಗಳನ್ನೂ ಅವುಗಳಲ್ಲಿ ಕೊಳಗಗಟ್ಟಲೆ ರಸವುಳ್ಳ ಜೇನಿನ ಗೂಡುಗಳನ್ನೂ ಒಡವೆ, ವಸ್ತ್ರಗಳಿಂದ ತುಂಬಿದ ಹಾಗೂ ದಿವ್ಯವಾದ ತಿಂಡಿಗಳು, ಊಟಗಳಿಂದ ಕೂಡಿ ಸಕಲ ಸೌಕರ್ಯವಿಶಿಷ್ಟವಾದ ಮನೆಗಳನ್ನೂ ಕಂಡರು. ಆದರೆ ಮನುಷ್ಯರಾರೂ ಅಲ್ಲಿರಲಿಲ್ಲ.

**ವಿಸ್ಮಿತಾಸ್ತತ್ರ ಭವನೇ ದಿವ್ಯೇ ಕನಕವಿಷ್ಟರೇ ।**
**ಪ್ರಭಯಾ ದೀಪ್ಯಮಾನಾಂ ತು ದದೃಶುಃ ಸ್ತ್ರಿಯಮೇಕಕಾಮ್ ॥ ೩೭ ॥**
**ಧ್ಯಾಯಂತೀಂ ಚೀರವಸನಾಂ ಯೋಗಿನೀಂ ಯೋಗಮಾಸ್ಥಿತಾಮ್ ।**
**ಪ್ರಣೇಮುಸ್ತಾಂ ಮಹಾಭಾಗಾ ಭಕ್ತ್ಯಾ ಭೀತ್ಯಾ ಚ ವಾನರಾಃ ॥ ೩೮ ॥**
**ದೃಷ್ಟ್ವಾ ತಾನ್ ವಾನರಾನ್ ದೇವೀ ಪ್ರಾಹ ಯೂಯಂ ಕಿಮಾಗತಾಃ ।**
**ಕುತೋ ವಾ ಕಸ್ಯ ವಾ ದೂತಾಃ ಮತ್ಸ್ಥಾನಂ ಕಿಂ ಪ್ರಧರ್ಷಥ ॥ ೩೯ ॥**

೩೭-೩೯. ಆಶ್ಚರ್ಯಗೊಂಡವರಾಗಿ ಆ ಕಪಿಗಳು ಅಲ್ಲಿ ಚಿನ್ನದ ಪೀಠದ ಮೇಲೆ ಕುಳಿತು ಧ್ಯಾನಮಾಡುತ್ತಾ ತನ್ನ ಕಾಂತಿಯಿಂದ ಹೊಳೆಯುತ್ತಿರುವ ಹಾಗೂ ನಾರುಮಡಿಗಳನ್ನುಟ್ಟು ಯೋಗತತ್ಪರಳಾಗಿದ್ದ ಒಬ್ಬ ಹೆಂಗಸನ್ನು ಕಂಡರು. ಭಯಭಕ್ತಿಗಳಿಂದ ಆ ಮಹಾಭಾಗಳಿಗೆ ವಾನರರೆಲ್ಲರೂ ನಮಸ್ಕಾರಮಾಡಿದರು. ಆ ಕಪಿಗಳನ್ನು ನೋಡಿದ ಆಕೆಯು 'ನೀವುಗಳು ಏಕೆ ಬಂದಿರಿ ? ಎಲ್ಲಿಂದ ? ಯಾರ ಸೇವಕರು ನೀವು ? ನನ್ನ ಈ ಜಾಗವನ್ನೇಕೆ ಆಕ್ರಮಿಸಿದ್ದೀರಿ?' ಎಂದು ಕೇಳಿದಳು.

**ತಚ್ಛ್ರುತ್ವಾ ಹನುಮಾನಾಹ ಶೃಣು ವಕ್ಷ್ಯಾಮಿ ದೇವಿ ತೇ ।**
**ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥಃ ಪ್ರಭುಃ ॥ ೪೦ ॥**
**ತಸ್ಯ ಪುತ್ರೋ ಮಹಾಭಾಗೋ ಜ್ಯೇಷ್ಠೋ ರಾಮ ಇತಿ ಶ್ರುತಃ।**
**ಪಿತುರಾಜ್ಞಾಂ ಪುರಸ್ಕೃತ್ಯ ಸಭಾರ್ಯಃ ಸಾನುಜೋ ವನಮ್ ॥ ೪೧ ॥**
**ಗತಸ್ತತ್ರ ಹೃತಾ ಭಾರ್ಯಾ ತಸ್ಯ ಸಾಧ್ವೀ ದುರಾತ್ಮನಾ ।**
**ರಾವಣೇನ ತತೋ ರಾಮಃ ಸುಗ್ರೀವಂ ಸಾನುಜೋ ಯಯೌ ॥ ೪೨ ॥**
**ಸುಗ್ರೀವೋ ಮಿತ್ರಭಾವೇನ ರಾಮಸ್ಯ ಪ್ರಿಯವಲ್ಲಭಾಮ್ ।**
**ಮೃಗಯಧ್ವಮಿತಿ ಪ್ರಾಹ ತತೋ ವಯಮುಪಾಗತಾಃ ॥ ೪೩ ॥**

೪೦-೪೩. ಅದನ್ನು ಕೇಳಿ ಹನುಮಂತನು ಹೀಗೆಂದನು : 'ಎಲೌ ದೇವಿಯೆ, ಕೇಳು ; ಹೇಳುವೆನು. ಅಯೋಧ್ಯೆಗೆ ಒಡೆಯನಾದ ಶ್ರೀಮಂತನಾದ ದಶರಥ ಮಹಾರಾಜನ ಹಿರಿಯ ಮಗನು ರಾಮನೆಂದು ಪ್ರಸಿದ್ಧನಾಗಿರುವನು. ಆತನು ತಂದೆಯ ಅಪ್ಪಣೆಯನ್ನು ಗೌರವಿಸಿ ತಮ್ಮ ಹಾಗೂ ಹೆಂಡತಿಯೊಡನೆ ಕಾಡಿಗೆ ಹೋದನು. ಅಲ್ಲಿ ದುರಾತ್ಮನಾದ ರಾವಣನಿಂದ ಪತಿವ್ರತೆಯಾದ ಅವನ ಹೆಂಡತಿಯು ಕದಿಯಲ್ಪಟ್ಟಳು. ಅನಂತರ ರಾಮನು ಸಹೋದರನೊಡನೆ ಸುಗ್ರೀವನ ಬಳಿಗೆ ಬಂದನು. ಸುಗ್ರೀವನು ಸ್ನೇಹಭಾವದಿಂದ ರಾಮನ ಪ್ರೀತಿಯ ಹೆಂಡತಿಯನ್ನು ಹುಡುಕಿ ತನ್ನಿರಿ - ಎಂದು ನಮಗೆ ಹೇಳಿದನು. ಆಗ ನಾವುಗಳು ಬಂದೆವು.

**ತತೋ ವನಂ ವಿಚಿನ್ವಂತೋ ಜಾನಕೀಂ ಜಲಕಾಂಕ್ಷಿಣಃ ।**
**ಪ್ರವಿಷ್ಟಾ ಗಹ್ವರಂ ಘೋರಂ ದೈವಾದತ್ರ ಸಮಾಗತಾಃ ॥ ೪೪ ॥**
**ತ್ವಂ ವಾ ಕಿಮರ್ಥಮತ್ರಾಸಿ ಕಾ ವಾ ತ್ವಂ ವದ ನಃ ಶುಭೇ ।**
**ಯೋಗಿನೀ ಚ ತಥಾ ದೃಷ್ಟ್ವಾ ವಾನರಾನ್ ಪ್ರಾಹ ಹೃಷ್ಟಧೀಃ ॥ ೪೫ ॥**
**ಯಥೇಷ್ಟಂ ಫಲಮೂಲಾನಿ ಜಗ್ಧ್ವಾ ಪೀತ್ವಾಮೃತಂ ಪಯಃ ।**
**ಆಗಚ್ಛಥ ತತೋ ವಕ್ಷ್ಯೇ ಮಮ ವೃತ್ತಾಂತಮಾದಿತಃ ॥ ೪೬ ॥**

೪೪-೪೬. ಅನಂತರ ಕಾಡಿನಲ್ಲಿ ಸೀತೆಯನ್ನು ಹುಡುಕುತ್ತಾ ನೀರಿನ ಬಯಕೆಯಿಂದ ಭಯಂಕರವೂ ಗಹನವೂ ಆದ (ಗುಹೆ)ಯನ್ನು ಹೊಕ್ಕು ಅದೃಷ್ಟವಶದಿಂದ ಇಲ್ಲಿಗೆ ಬಂದು ಸೇರಿದೆವು. ನೀನಾದರೊ, ಏತಕ್ಕಾಗಿ ಇಲ್ಲಿರುವೆ ? ನೀನು ಯಾರು ? ಎಲೈ ಶುಭಳೆ, ನಮಗೆ ಹೇಳು' ಎಂದನು. ಆ ಯೋಗಿನಿಯು ಆ ಸ್ಥಿತಿಯಲ್ಲಿದ್ದ ಕಪಿಗಳಿಗೆ ಸಂತೋಷದಿಂದ ಹೀಗೆಂದಳು. 'ನೀವುಗಳು ಇಷ್ಟಬಂದಷ್ಟು ಹಣ್ಣುಗಳನ್ನೂ ಗೆಡ್ಡೆಗಳನ್ನೂ ತಿಂದು ಅಮೃತಸಮಾನವಾದ ನೀರನ್ನು ಕುಡಿದು ಬನ್ನಿರಿ. ಅನಂತರ ನನ್ನ ಕಥೆಯನ್ನು ಪ್ರಾರಂಭದಿಂದ ಹೇಳುವೆನು.'- ಎಂದಳು.

**ತಥೇತಿ ಭುಕ್ತ್ವಾ ಪೀತ್ವಾ ಚ ಹೃಷ್ಟಾಸ್ತೇ ಸರ್ವವಾನರಾಃ ।**
**ದೇವ್ಯಾಃ ಸಮೀಪಂ ಗತ್ವಾ ತೇ ಬದ್ಧಾಂಜಲಿಪುಟಾಃ ಸ್ಥಿತಾಃ ॥ ೪೭ ॥**
**ತತಃ ಪ್ರಾಹ ಹನೂಮಂತಂ ಯೋಗಿನೀ ದಿವ್ಯದರ್ಶನಾ ।**
**ಹೇಮಾ ನಾಮ ಪುರಾ ದಿವ್ಯರೂಪಿಣೀ ವಿಶ್ವಕರ್ಮಣಃ ॥ ೪೮ ॥**
**ಪುತ್ರೀ ಮಹೇಶಂ ನೃತ್ಯೇನ ತೋಷಯಾಮಾಸ ಭಾಮಿನೀ ।**
**ತುಷ್ಟೋ ಮಹೇಶಃ ಪ್ರದದಾವಿದಂ ದಿವ್ಯಪುರಂ ಮಹತ್ ॥ ೪೯ ॥**
**ಅತ್ರ ಸ್ಥಿತಾ ಸಾ ಸುದತೀ ವರ್ಷಾಣಾಮಯುತಾಯುತಮ್ ।**

**ತಸ್ಯಾ ಅಹಂ ಸಖೀ ವಿಷ್ಣುತತ್ಪರಾ ಮೋಕ್ಷಕಾಂಕ್ಷಿಣೀ ॥ ೫೦ ॥**
**ನಾಮ್ನಾ ಸ್ವಯಂಪ್ರಭಾ ದಿವ್ಯಗಂಧರ್ವತನಯಾ ಪುರಾ ।**

೪೭-೫೦. ಹಾಗೆಯೇ ಆಗಲೆಂದು ತಿಂದು - ಕುಡಿದು ಸಂತುಷ್ಟರಾಗಿ ಆ ಕಪಿಗಳೆಲ್ಲರೂ ದೇವಿಯ ಹತ್ತಿರಕ್ಕೆ ಬಂದು ಕೈಗಳನ್ನು ಮುಗಿದುಕೊಂಡು ನಿಂತರು. ಅನಂತರ ಹನುಮಂತನನ್ನು ಕುರಿತು ದಿವ್ಯದೃಷ್ಟಿಯುಳ್ಳ ಆ ಯೋಗಿನಿಯು ಹೀಗೆಂದಳು : ವಿಶ್ವಕರ್ಮನ ಮಗಳಾದ ದಿವ್ಯಸುಂದರಿಯಾದ ಹೇಮಾ ಎಂಬ ಸ್ತ್ರೀಯು ಹಿಂದೆ ಈಶ್ವರನನ್ನು ತನ್ನ ನಾಟ್ಯದಿಂದ ಸಂತೋಷಗೊಳಿಸಿದಳು. ತೃಪ್ತನಾದ ಈಶ್ವರನು ದೊಡ್ಡದಾದ ದಿವ್ಯವಾದ ಈ ಪುರವನ್ನು ಅವಳಿಗೆ ಅನುಗ್ರಹಿಸಿದನು. ಶೋಭನವಾದ ದಂತಪಂಕ್ತಿಯುಳ್ಳ ಆಕೆಯ ಇಲ್ಲಿ ಒಂದು ಲಕ್ಷ ವರ್ಷಗಳ ಕಾಲ ಇದ್ದುಕೊಂಡಿದ್ದಳು. ಆಕೆಯ ಸ್ನೇಹಿತೆಯಾದ ನಾನು ವಿಷ್ಣುವನ್ನೇ ತತ್ಪರಳಾಗಿ ಚಿಂತಿಸುತ್ತಾ ಮೋಕ್ಷವನ್ನು ಬಯಸಿ ಇದ್ದುಕೊಂಡಿರುವೆನು. ನಾನು ಹಿಂದೆ ಸ್ವಯಂಪ್ರಭೆ ಎಂಬ ಹೆಸರಿನವಳಾಗಿ ಒಬ್ಬ ಗಂಧರ್ವನ ಮಗಳಾಗಿದ್ದೆನು.

**ಗಚ್ಛಂತೀ ಬ್ರಹ್ಮಲೋಕಂ ಸಾ ಮಾಮಾಹೇದಂ ತಪಶ್ಚರ ।**
**ಅತ್ರೈವ ನಿವಸಂತೀ ತ್ವಂ ಸರ್ವಪ್ರಾಣಿವಿವರ್ಜಿತೇ ॥ ೫೧ ॥**
**ತ್ರೇತಾಯುಗೇ ದಾಶರಥಿರ್ಭೂತ್ವಾ ನಾರಾಯಣೋಽವ್ಯಯಃ ।**
**ಭೂಭಾರಹರಣಾರ್ಥಾಯ ವಿಚರಿಷ್ಯತಿ ಕಾನನೇ ॥ ೫೨ ॥**
**ಮಾರ್ಗಂತೋ ವಾನರಾಸ್ತಸ್ಯ ಭಾರ್ಯಾಮಾಯಾಂತಿ ತೇ ಗುಹಾಮ್ ।**
**ಪೂಜಯಿತ್ವಾಽಥ ತಾನ್ ನತ್ವಾ ರಾಮಂ ಸ್ತುತ್ವಾ ಪ್ರಯತ್ನತಃ ॥ ೫೩ ॥**
**ಯಾತಾಸಿ ಭವನಂ ವಿಷ್ಣೋರ್ಯೋಗಿಗಮ್ಯಂ ಸನಾತನಮ್ ।**

೫೧-೫೩. ಆಕೆಯು ಬ್ರಹ್ಮಲೋಕವನ್ನು ಕುರಿತು ಹೊರಟವಳಾಗಿ ನನ್ನನ್ನು ಹೀಗೆಂದಳು : 'ಯಾವ ಪ್ರಾಣಿಗಳೂ ಇಲ್ಲದ ಇಲ್ಲಿಯೇ ವಾಸವಾಗಿದ್ದುಕೊಂಡು ನೀನು ತಪಸ್ಸನ್ನು ಮಾಡು. ಅವ್ಯಯನಾದ ನಾರಾಯಣನು ತ್ರೇತಾಯುಗದಲ್ಲಿ ದಶರಥನ ಮಗನಾಗಿ ಅವತಾರಮಾಡಿ ಭೂಭಾರವನ್ನು ಕಳೆಯುವದಕ್ಕಾಗಿ ಕಾಡಿನಲ್ಲಿ ಸಂಚರಿಸಲಿರುವನು. ಅವನ ಹೆಂಡತಿಯನ್ನು ಹುಡುಕುತ್ತಾ ಕಪಿಗಳು ನಿನ್ನ ಗುಹೆಗೆ ಬರಲಿರುವರು. ಪ್ರಯತ್ನಪೂರ್ವಕವಾಗಿ ಅವರೆಲ್ಲರನ್ನೂ ಸತ್ಕರಿಸಿ ನಮಸ್ಕರಿಸಿ ರಾಮನನ್ನು ಸ್ತೋತ್ರ ಮಾಡಿ, ಅನಂತರ ಯೋಗಿಗಳು ಮಾತ್ರ ಪ್ರವೇಶಿಸುವಂಥ ಸನಾತನವಾದ ವಿಷ್ಣುವಿನ ಮಂದಿರವನ್ನು ಪಡೆಯಲಿರುವೆ.'

**ಇತೋಽಹಂ ಗಂತುಮಿಚ್ಛಾಮಿ ರಾಮಂ ದ್ರಷ್ಟುಂ ತ್ವರಾನ್ವಿತಾ ।**
**ಯೂಯಂ ಪಿದಧ್ವಮಕ್ಷೀಣಿ ಗಮಿಷ್ಯಥ ಬಹಿರ್ಗುಹಾಮ್ ॥ ೫೪ ॥**

**ತಥೈವ ಚಕ್ರುಸ್ತೇ ವೇಗಾದ್ ಗತಾಃ ಪೂರ್ವಸ್ಥಿತಂ ವನಮ್ ।**
**ಸಾಪಿ ತ್ಯಕ್ತ್ವಾ ಗುಹಾಂ ಶೀಘ್ರಂ ಯಯೌ ರಾಘವಸನ್ನಿಧಿಮ್ ॥ ೫೫ ॥**
**ತತ್ರ ರಾಮಂ ಸಸುಗ್ರೀವಂ ಲಕ್ಷ್ಮಣಂ ಚ ದದರ್ಶ ಹ ।**
**ಕೃತ್ವಾ ಪ್ರದಕ್ಷಿಣಂ ರಾಮಂ ಪ್ರಣಮ್ಯ ಬಹುಶಃ ಸುಧೀಃ ॥ ೫೬ ॥**
**ಆಹ ಗದ್ಗದಯಾ ವಾಚಾ ರೋಮಾಂಚಿತತನೂರುಹಾ ॥**

೫೪-೫೬. ''ಎಲೈ ವಾನರರೆ, ರಾಮನನ್ನು ನೋಡುವದಕ್ಕಾಗಿ ಜಾಗ್ರತೆಯಾಗಿ ನಾನು ಇಲ್ಲಿಂದ ಹೊರಡಲಿಚ್ಛಿಸುವೆನು ; ನೀವುಗಳು ಕಣ್ಣುಗಳನ್ನು ಮುಚ್ಚಿಕೊಳ್ಳಿರಿ. ಗುಹೆಯ ಹೊರಕ್ಕೆ ಹೋಗಲಿರುವಿರಿ'' ಎಂದಳು. ಅವರೆಲ್ಲರೂ ಹಾಗೆಯೇ ಮಾಡಿದರು. ಜಾಗ್ರತೆಯಾಗಿ ಹಿಂದೆ ತಾವು ಇದ್ದಂಥ ಕಾಡಿಗೇ ಬಂದವರಾದರು. ಆಕೆಯೂ ಕೂಡಲೆ ಗುಹೆಯನ್ನು ಬಿಟ್ಟವಳಾಗಿ ರಾಮನ ಹತ್ತಿರಕ್ಕೆ ಬಂದಳು. ಅಲ್ಲಿ ಸುಗ್ರೀವಸಹಿತನಾದ ರಾಮನನ್ನೂ ಲಕ್ಷ್ಮಣನನ್ನೂ ಕಂಡಳು. ಪ್ರದಕ್ಷಿಣೆಯನ್ನು ಮಾಡಿ ಬಹಳವಾಗಿ ನಮಸ್ಕರಿಸಿ ಜಾಣಳಾದ ಆಕೆಯು ಮೈಪುಲಕಗೊಂಡವಳಾಗಿ ಗದ್ಗದವಾದ ಮಾತುಗಳಿಂದ ಹೀಗೆಂದಳು :

**ದಾಸೀ ತವಾಹಂ ರಾಜೇಂದ್ರ ದರ್ಶನಾರ್ಥಮಿಹಾಗತಾ ।**
**ಬಹುವರ್ಷಸಹಸ್ರಾಣಿ ತಪ್ತಂ ಮೇ ದುಶ್ಚರಂ ತಪಃ ॥ ೫೭ ॥**
**ಗುಹಾಯಾಂ ದರ್ಶನಾರ್ಥಂ ತೇ ಫಲಿತಂ ಮೇಽದ್ಯ ತತ್ತಪಃ ।**
**ಅದ್ಯ ಹಿ ತ್ವಾಂ ನಮಸ್ಯಾಮಿ ಮಾಯಾಯಾಃ ಪರತಃ ಸ್ಥಿತಮ್ ॥ ೫೮ ॥**
**ಸರ್ವಭೂತೇಷು ಚಾಲಕ್ಷ್ಯಂ ಬಹಿರಂತರವಸ್ಥಿತಮ್ ।**
**ಯೋಗಮಾಯಾಜವನಿಕಾಚ್ಛನ್ನೋ ಮಾನುಷವಿಗ್ರಹಃ ॥ ೫೯ ॥**
**ನ ಲಕ್ಷ್ಯಸೇಽಜ್ಞಾನದೃಶಾಂ ಶೈಲೂಷ ಇವ ರೂಪಧೃಕ್ ।**

೫೭-೫೯. 'ಎಲೈ ರಾಜೇಂದ್ರನೆ, ನಿನ್ನ ದಾಸಿಯಾದ ನಾನು ನಿನ್ನನ್ನು ಕಾಣುವದಕ್ಕಾಗಿ ಇಲ್ಲಿಗೆ ಬಂದಿರುವೆನು. ನಿನ್ನ ದರ್ಶನಕ್ಕೆಂದೇ ಗುಹೆಯಲ್ಲಿ ಕುಳಿತವಳಾಗಿ ನಾನು ಅನೇಕವರ್ಷಗಳ ಕಾಲ ಕಠಿನವಾದ ತಪಸ್ಸನ್ನು ಮಾಡಿದೆನು. ಈಗ ನನ್ನ ತಪಸ್ಸು ಸಾರ್ಥಕವಾಯಿತು. ಮಾಯೆಯಿಂದ ಆಚೆಗಿರುವ ಹಾಗೂ ಎಲ್ಲಾ ಪ್ರಾಣಿಗಳಲ್ಲಿಯೂ ಗೂಢನಾಗಿದ್ದುಕೊಂಡಿರುವ, ಒಳಗೂ ಹೊರಗೂ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವ ನಿನ್ನನ್ನು ಈಗ ನಮಸ್ಕರಿಸುವೆನು. ನೀನು ಯೋಗಮಾಯೆಯೆಂಬ ತೆರೆಯಿಂದ ಮುಚ್ಚಲ್ಪಟ್ಟವನಾಗಿದ್ದು ಮನುಷ್ಯರೂಪದಿಂದ ತೋರಿಕೊಳ್ಳುತ್ತಿರುವೆ. ನಟನಂತೆ ವೇಷಧಾರಿಯಾದ ನೀನು ಅಜ್ಞಾನಿಗಳ ಕಣ್ಣಿಗೆ ಕಂಡುಬರುವವನಾಗಿಲ್ಲ.'

**ಮಹಾಭಾಗವತಾನಾಂ ತ್ವಂ ಭಕ್ತಿಯೋಗವಿಧಿತ್ಸಯಾ ।**
**ಅವತೀರ್ಣೋಽಸಿ ಭಗವನ್ ಕಥಂ ಜಾನಾಮಿ ತಾಮಸೀ ॥ ೬೦ ॥**
**ಲೋಕೇ ಜಾನಾತು ಯಃ ಕಶ್ಚಿತ್ ತವ ತತ್ತ್ವಂ ರಘೂತ್ತಮ ।**
**ಮಮೈತದೇವ ರೂಪಂ ತೇ ಸದಾ ಭಾತು ಹೃದಾಲಯೇ ॥ ೬೧ ॥**
**ರಾಮ ತೇ ಪಾದಯುಗಲಂ ದರ್ಶಿತಂ ಮೋಕ್ಷದರ್ಶನಮ್ ।**
**ಅದರ್ಶನಂ ಭವಾರ್ಣಾನಾಂ ಸನ್ಮಾರ್ಗಪರಿದರ್ಶನಮ್ ॥ ೬೨ ॥**

೬೦-೬೨. 'ಎಲೈ ಭಗವಂತನೆ, ನೀನು ಮಹಾಭಾಗವತರುಗಳಿಗೆ ಭಕ್ತಿಯೋಗವನ್ನು ಉಪದೇಶಿಸುವದಕ್ಕಾಗಿ ಅವತಾರಮಾಡಿರುತ್ತೀಯೆ. ತಾಮಸಗುಣ ವಿಶಿಷ್ಟಳಾದ ನಾನು ಹೇಗೆ ತಾನೆ ನಿನ್ನನ್ನು ಅರಿತೇನು ? ಎಲೈ ರಘುಶ್ರೇಷ್ಠನೆ, ಲೋಕದಲ್ಲಿ ಯಾವನೋ ಒಬ್ಬನು ನಿನ್ನ ನಿಜತತ್ತ್ವವನ್ನು ಬೇಕಾದರೆ ಕಂಡುಕೊಳ್ಳಲಿ. ನನಗಾದರೊ, ಈ ಎದುರಿಗೆ ಇರುವ ರೂಪವೇ ಯಾವಾಗಲೂ ಹೃದಯದಲ್ಲಿ ಸ್ಫುರಿಸುತ್ತಿರಲಿ ! ಎಲೈ ರಾಮನೆ, ಮೋಕ್ಷವನ್ನು ತೋರಿಸುವ ನಿನ್ನ ಎರಡು ಪಾದಾರವಿಂದಗಳು ಸಂಸಾರ ಸಮುದ್ರದ ದರ್ಶನವನ್ನು ಕಳೆಯತಕ್ಕವಾಗಿಯೂ ಒಳ್ಳೆಯ ಮಾರ್ಗವನ್ನು ತೋರತಕ್ಕ ವಾಗಿಯೂ ಇವೆ. ಇವುಗಳನ್ನು ನಾನು ಕಂಡೆನು.

**ಧನಪುತ್ರಕಲತ್ರಾದಿವಿಭೂತಿಪರಿದರ್ಪಿತಃ ।**
**ಅಕಿಂಚನಧನಂ ತ್ವಾದ್ಯ ನಾಭಿಧಾತುಂ ಜನೋಽರ್ಹತಿ ॥ ೬೩ ॥**
**ನಿವೃತ್ತಗುಣಮಾರ್ಗಾಯ ನಿಷ್ಕಿಂಚನಧನಾಯ ತೇ ।**
**ನಮಃ ಸ್ವಾತ್ಮಾಭಿರಾಮಾಯ ನಿರ್ಗುಣಾಯ ಗುಣಾತ್ಮನೇ ॥ ೬೪ ॥**
**ಕಾಲರೂಪಿಣಮೀಶಾನಮಾದಿಮಧ್ಯಾಂತವರ್ಜಿತಮ್ ।**
**ಸಮಂ ಚರಂತಂ ಸರ್ವತ್ರ ಮನ್ಯೇ ತ್ವಾಂ ಪುರುಷೋತ್ತಮಮ್ ॥ ೬೫ ॥**

೬೩-೬೫. ಹಣ, ಮಗ, ಹೆಂಡತಿ - ಮುಂತಾದ ವೈಭವಗಳಿಂದ ಕೊಬ್ಬಿ ಹೋಗಿರುವ ಪ್ರಾಕೃತನು ಸಂನ್ಯಾಸಿಗಳಿಗೆ ಸರ್ವಸ್ವನಾಗಿರುವ ನಿನ್ನ (ನಾಮವನ್ನು) ಹೇಳಲು ಕೂಡ ಯೋಗ್ಯನಾಗಲಾರನು. ನಿಷ್ಕಿಂಚನರಾದ ತ್ಯಾಗಿಗಳಿಗೆ ಧನರೂಪನಾದ, ಗುಣಗಳ ಪ್ರವೃತ್ತಿಗಿಂತ ಹಿಂದಕ್ಕೆ ಇರುವ ತನ್ನಲ್ಲೇ ತಾನೇ ಆನಂದರೂಪನಾಗಿದ್ದು ಕೊಂಡಿರುವ (ಉಪಾಧಿಗಳಿಂದ) ಗುಣಾತ್ಮಕನೂ (ಸ್ವತಃ) ನಿರ್ಗುಣನೂ ಆಗಿರುವ ನಿನಗೆ ನಮಸ್ಕಾರಗಳು. ಎಲ್ಲಕ್ಕೂ ಒಡೆಯನೂ ಕಾಲರೂಪನೂ ಮೊದಲುಕೊನೆಗಳಿಲ್ಲದವನೂ ಎಲ್ಲೆಲ್ಲೂ ಸಮನಾಗಿರುವವನೂ ಆಗಿ ಸಂಚರಿಸುತ್ತಿರುವ ನಿನ್ನನ್ನು ನಾನು ಪುರುಷೋತ್ತಮನೆಂದೇ ತಿಳಿದಿರುತ್ತೇನೆ.

**ದೇವ ತೇ ಚೇಷ್ಟಿತಂ ಕಶ್ಚಿತ್ ನ ವೇದ ನೃವಿಡಂಬನಮ್ ।**
**ನ ತೇಽಸ್ತಿ ಕಶ್ಚಿದ್ದಯಿತೋ ದ್ವೇಷ್ಯೋ ವಾ ಪರ ಏವ ಚ ॥ ೬೬ ॥**
**ತ್ವನ್ಮಾಯಾಪಿಹಿತಾತ್ಮಾನಃ ತ್ವಾಂ ಪಶ್ಯಂತಿ ತಥಾವಿಧಮ್।**
**ಅಜಸ್ಯಾಕರ್ತುರೀಶಸ್ಯ ದೇವತಿರ್ಯಙ್ನರಾದಿಷು ॥ ೬೭ ॥**
**ಜನ್ಮಕರ್ಮಾದಿಕಂ ಯದ್ಯತ್ತದತ್ಯಂತವಿಡಂಬನಮ್ ॥**

೬೬-೬೭. ಎಲೈ ದೇವನೆ, ನಿನ್ನ ಈ ಮಾನುಷವಾದ ಅವತಾರಲೀಲೆಯ ಆಟಗಳನ್ನು ಯಾವನೊಬ್ಬನೂ ತಿಳಿದಿರಲಾರನು. ನಿನಗೆ ಬೇಡದವರಾಗಲಿ, ಬೇಕಾದವರಾಗಲಿ ಯಾರೂ ಇರುವದಿಲ್ಲ. ನಿನ್ನ ಮಾಯೆಯಿಂದ ಮುಚ್ಚಲ್ಪಟ್ಟವರಾಗಿ ನಿನ್ನನ್ನೂ ಹಾಗೆ (ಶತ್ರುಮಿತ್ರನೆಂಬ ಭಾವದಿಂದ) ಜನರು ತಿಳಿಯುತ್ತಾರೆ. ಜನ್ಮರಹಿತನೂ, ಅಕರ್ತೃವೂ, ಎಲ್ಲಕ್ಕೂ ಒಡೆಯನೂ ಆದ ನೀನು ದೇವತೆಗಳು, ಮನುಷ್ಯರು, ಪಶುಪ್ರಾಣಿಗಳಲ್ಲಿ ಹುಟ್ಟಿದವನಂತೆ ನಟಿಸುತ್ತಾ ಜನ್ಮಕರ್ಮಾದಿಲೀಲೆಗಳನ್ನು ತೋರ್ಪಡಿಸುತ್ತಿರುವದು ಹೆಚ್ಚಿನ ಆಶ್ಚರ್ಯದ ವಿಷಯವಾಗಿದೆ.

**ತ್ವಾಮಾಹುರಕ್ಷರಂ ಜಾತಂ ಕಥಾಶ್ರವಣಸಿದ್ಧಯೇ ।**
**ಕೇಚಿತ್ ಕೋಸಲರಾಜಸ್ಯ ತಪಸಃ ಫಲಸಿದ್ಧಯೇ ॥ ೬೮ ॥**
**ಕೌಸಲ್ಯಯಾ ಪ್ರಾರ್ಥ್ಯಮಾನಂ ಜಾತಮಾಹುಃ ಪರೇ ಜನಾಃ ।**
**ದುಷ್ಟರಾಕ್ಷಸಭೂಭಾರಹರಣಾಯಾರ್ಥಿತೋ ವಿಭುಃ ॥ ೬೯ ॥**
**ಬ್ರಹ್ಮಣಾ ನರರೂಪೇಣ ಜಾತೋಽಯಮಿತಿ ಕೇಚನ ॥**

೬೮-೬೯. ನಿನ್ನ ಕಥೆಯನ್ನು ಕೇಳಿ ಉದ್ಧಾರವಾಗಲೆಂದು ಕೃಪೆಯಿಂದ ನಾಶರಹಿತನಾದ ನೀನು ಕೋಸಲರಾಜನಾದ ದಶರಥನ ತಪಸ್ಸಿನ ಫಲಸಿದ್ಧಿಗಾಗಿ ಹುಟ್ಟಿರುವೆ ಎಂದು ಕೆಲವರು ಹೇಳುವರು. ಮತ್ತೆ ಕೆಲವು ಜನರು ಕೌಸಲ್ಯೆಯ ಪ್ರಾರ್ಥನೆಗೆ ಅನುಗುಣವಾಗಿ ಹುಟ್ಟಿರುವೆ - ಎನ್ನುವರು. ಇನ್ನೂ ಕೆಲವರು ದುಷ್ಟರಾದ ರಾಕ್ಷಸರನ್ನು ಕೊಂದು ಭೂಮಿಯ ಭಾರವನ್ನು ಕಳೆಯುವದಕ್ಕಾಗಿ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ವಿಭುವಾದ ಈತನು ಹುಟ್ಟಿರುವನು - ಎನ್ನುವರು.

**ಶೃಣ್ವಂತಿ ಗಾಯಂತಿ ಚ ಯೇ ಕಥಾಸ್ತೇ ರಘುನಂದನ ।**
**ಪಶ್ಯಂತಿ ತವ ಪಾದಾಬ್ಜಂ ಭವಾರ್ಣವಸುತಾರಣಮ್ ॥ ೭೦ ॥**
**ತ್ವನ್ಮಾಯಾಗುಣಬದ್ಧಾಹಂ ವ್ಯತಿರಿಕ್ತಂ ಗುಣಾಶ್ರಯಮ್ ।**
**ಕಥಂ ತ್ವಾಂ ದೇವ ಜಾನೀಯಾಂ ಸ್ತೋತುಂ ವಾಽವಿಷಯಂ ವಿಭುಮ್ ॥ ೭೧ ॥**
**ನಮಸ್ಯಾಮಿ ರಘುಶ್ರೇಷ್ಠಂ ಬಾಣಾಸನಶರಾನ್ವಿತಮ್ ।**
**ಲಕ್ಷ್ಮಣೇನ ಸಹ ಭ್ರಾತ್ರಾ ಸುಗ್ರೀವಾದಿಭಿರನ್ವಿತಮ್ ॥ ೭೨ ॥**

೭೦-೭೨. ಎಲೈ ರಘುಶ್ರೇಷ್ಠನೆ, ಯಾರು ನಿನ್ನ ಕಥೆಯನ್ನು ಕೇಳುವರೋ, ಗಾನಮಾಡುವರೋ ಅವರು ಸಂಸಾರವೆಂಬ ಸಮುದ್ರವನ್ನು ಸುಲಭವಾಗಿ ದಾಟಿಸುವಂಥ ನಿನ್ನ ಪಾದಾರವಿಂದಗಳನ್ನು ಕಂಡುಕೊಳ್ಳುವರು. ನಿನ್ನ ಮಾಯಾಗುಣಗಳಿಂದ ಕಟ್ಟಲ್ಪಟ್ಟ ನಾನು ಗುಣಗಳಿಂದ ಬೇರೆಯಾಗಿರುವವನೂ ಗುಣಾಶ್ರಯನೂ ಆಗಿರುವ ಮತ್ತು ಸ್ತೋತ್ರಕ್ಕೂ ಅವಿಷಯನಾದ ವ್ಯಾಪಕನಾದ ನಿನ್ನನ್ನು ಹೇಗೆ ತಾನೆ ಅರಿತುಕೊಳ್ಳಲಿ? ಆದ್ದರಿಂದ ರಘುಶ್ರೇಷ್ಠನೂ ಬಾಣ ಬತ್ತಳಿಕೆಗಳಿಂದ ಅಲಂಕೃತನೂ ಸೋದರನಾದ ಲಕ್ಷ್ಮಣನೊಡಗೂಡಿದವನೂ ಸುಗ್ರೀವಾದಿ (ವಾನರರು)ಗಳಿಂದ ಸೇವಿಸಲ್ಪಟ್ಟವನೂ ಆಗಿರುವ ನಿನ್ನನ್ನು ನಾನು ನಮಸ್ಕರಿಸುವೆನು.

**ಏವಂ ಸ್ತುತೋ ರಘುಶ್ರೇಷ್ಠಃ ಪ್ರಸನ್ನಃ ಪ್ರಣತಾಘಹೃತ್ ।**
**ಉವಾಚ ಯೋಗಿನೀಂ ಭಕ್ತಾಂ ಕಿಂ ತೇ ಮನಸಿ ಕಾಂಕ್ಷಿತಮ್ ॥ ೭೩ ॥**
**ಸಾ ಪ್ರಾಹ ರಾಘವಂ ಭಕ್ತ್ಯಾ ಭಕ್ತಿಂ ತೇ ಭಕ್ತವತ್ಸಲ ।**
**ಯತ್ರ ಕುತ್ರಾಪಿ ಜಾತಾಯಾ ನಿಶ್ಚಲಾಂ ದೇಹಿ ಮೇ ಪ್ರಭೋ ॥ ೭೪ ॥**
**ತ್ವದ್ಭಕ್ತೇಷು ಸದಾ ಸಂಗೋ ಭೂಯಾನ್ಮೇ ಪ್ರಾಕೃತೇಷು ನ ।**
**ಜಿಹ್ವಾ ಮೇ ರಾಮ ರಾಮೇತಿ ಭಕ್ತ್ಯಾ ವದತು ಸರ್ವದಾ ॥ ೭೫ ॥**
**ಮಾನಸಂ ಶ್ಯಾಮಲಂ ರೂಪಂ ಸೀತಾಲಕ್ಷ್ಮಣಸಂಯುತಮ್ ।**
**ಧನುರ್ಬಾಣಧರಂ ಪೀತವಾಸಸಂ ಮುಕುಟೋಜ್ಜ್ವಲಮ್ ॥ ೭೬ ॥**
**ಅಂಗದೈರ್ನೂಪುರೈರ್ಮುಕ್ತಾಹಾರೈಃ ಕೌಸ್ತುಭಕುಂಡಲೈಃ ।**
**ಭಾಂತಂ ಸ್ಮರತು ಮೇ ರಾಮ ವರಂ ನಾನ್ಯಂ ವೃಣೇ ಪ್ರಭೋ ॥ ೭೭ ॥**

೭೩-೭೭. ಈ ರೀತಿಯಾಗಿ ಸ್ತೋತ್ರಮಾಡಲ್ಪಟ್ಟ, ನಮಸ್ಕರಿಸಿದವರ ಪಾಪಗಳನ್ನು ಕಳೆಯುವ ರಘುಶ್ರೇಷ್ಠನಾದ ರಾಮನು ಭಕ್ತಳಾದ ಆ ಯೋಗಿನಿಯನ್ನು ಕುರಿತು ನಿನ್ನ ಮನಸ್ಸಿನ ಬಯಕೆಯೇನು ? ಎಂದು ಕೇಳಿದನು. ಆಕೆಯು ಭಕ್ತಿಯಿಂದ ರಾಮನನ್ನು ಕುರಿತು 'ಎಲೈ ಭಕ್ತವತ್ಸಲನೆ, ನನಗೆ ಎಲ್ಲಿಯೇ ಜನ್ಮವುಂಟಾಗಲಿ, ನಿಶ್ಚಲವಾದ ನಿನ್ನ ಭಕ್ತಿಯನ್ನು ಮಾತ್ರ ದಯಪಾಲಿಸುವವನಾಗು. ಯಾವಾಗಲೂ ನಿನ್ನ ಭಕ್ತರೊಡನೆ ನನಗೆ ಸಂಗವು ದೊರಕಲಿ. ಸಂಸಾರಿಗಳ ಜೊತೆಗೆ ಬೇಡ. ಯಾವಾಗಲೂ ನನ್ನ ನಾಲಗೆಯು ಭಕ್ತಿಯಿಂದ ರಾಮ, ರಾಮ - ಎಂದು ಪಠಿಸುತ್ತಿರಲಿ ; ನನ್ನ ಮನಸ್ಸು ನೀಲಮೇಘಶ್ಯಾಮನಾದ ಸೀತಾಲಕ್ಷ್ಮಣರೊಡಗೂಡಿದ, ಧನುರ್ಬಾಣಗಳನ್ನು ಧರಿಸಿರುವ, ಪೀತಾಂಬರಧಾರಿಯಾದ, ಕಿರೀಟದಿಂದ ವಿರಾಜಮಾನನಾದ, ಹಾಗೂ ತೋಳುಬಂದಿ, ಕಾಲುಸರ, ಮುತ್ತಿನಹಾರಗಳಿಂದಲೂ ಕೌಸ್ತುಭರತ್ನದಿಂದಲೂ ಕಿವಿಯ ಆಭರಣಗಳಿಂದಲೂ

ಶೋಭಾಯಮಾನವಾದ ನಿನ್ನ ರೂಪವನ್ನು ನೆನೆಯುತ್ತಿರಲಿ. ಎಲೈ ಪ್ರಭುವೆ, ನಾನು ಬೇರೇನೂ ವರವನ್ನು ಬೇಡುವದಿಲ್ಲ.

**ಶ್ರೀರಾಮ ಉವಾಚ-**

**ಭವತ್ವೇವಂ ಮಹಾಭಾಗೇ ಗಚ್ಛ ತ್ವಂ ಬದರೀವನಮ್ ।**
**ತತ್ರೈವ ಮಾಂ ಸ್ಮರಂತೀ ತ್ವಂ ತ್ಯಕ್ತ್ವೇದಂ ಭೂತಪಂಚಕಮ್ ॥ ೭೮ ॥**
**ಮಾಮೇವ ಪರಮಾತ್ಮಾನಮಚಿರಾತ್ ಪ್ರತಿಪದ್ಯಸೇ ।**
**ಶ್ರುತ್ವಾ ರಘೂತ್ತಮವಚೋಽಮೃತಸಾರಕಲ್ಪಂ**
**ಗತ್ವಾ ತದೈವ ಬದರೀತರುಖಂಡಜುಷ್ಟಮ್ ।**
**ತೀರ್ಥಂ ತದಾ ರಘುಪತಿಂ ಮನಸಾ ಸ್ಮರಂತೀ**
**ತ್ಯಕ್ತ್ವಾ ಕಲೇವರಮವಾಪ ಪರಂ ಪದಂ ಸಾ ॥ ೭೯ ॥**

೭೮-೭೯. ಶ್ರೀರಾಮನಿಂತೆಂದನು : 'ಎಲೈ ಮಹಾಭಾಗಳೆ, ಹಾಗೇ ಆಗಲಿ ; ನೀನು ಬದರೀವನಕ್ಕೆ ಹೊರಡುವವಳಾಗು. ಅಲ್ಲಿಯೇ ನನ್ನನ್ನು ಚಿಂತಿಸುತ್ತಾ ಈ ಪಾಂಚ ಭೌತಿಕವಾದ ಶರೀರವನ್ನು ಬಿಟ್ಟವಳಾಗಿ ಪರಮಾತ್ಮನಾದ ನನ್ನನ್ನೇ ಜಾಗ್ರತೆಯಾಗಿ ಪಡೆಯಲಿರುವೆ.' ರಘುಶ್ರೇಷ್ಠನ ಅಮೃತದ ಸಾರದಂತಿರುವ ಮಾತನ್ನು ಕೇಳಿ ಆಕೆಯು ಆಗಲೇ ಬದರೀಮರಗಳಿಂದ ಕೂಡಿದ ಪುಣ್ಯಕ್ಷೇತ್ರಕ್ಕೆ ಹೋಗಿ ಅಲ್ಲಿ ರಾಮನನ್ನು ಮನಸ್ಸಿನಿಂದ ಧ್ಯಾನಿಸುತ್ತಾ ಇದ್ದು ಕಡೆಯಲ್ಲಿ ಶರೀರವನ್ನು ಬಿಟ್ಟು ಪರಮಪದವನ್ನು ಪಡೆದಳು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**
**ಷಷ್ಠಃ ಸರ್ಗಃ**

-----------

## ಏಳನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಅಥ ತತ್ರ ಸಮಾಸೀನಾ ವೃಕ್ಷಖಂಡೇಷು ವಾನರಾಃ ।**
**ಚಿಂತಯಂತೋ ವಿಮುಹ್ಯಂತಃ ಸೀತಾಮಾರ್ಗಣಕರ್ಶಿತಾಃ ॥ ೧ ॥**
**ತತೋಽಬ್ರವೀದಂಗದಃ ಕಾಂಶ್ಚಿದ್ ವಾನರಾನ್ ವಾನರರ್ಷಭಃ ।**
**ಭ್ರಮತಾಂ ಗಹ್ವರೇಽಸ್ಮಾಕಂ ಮಾಸೋ ನೂನಂ ಗತೋಽಭವತ್ ॥ ೨ ॥**

**ಸೀತಾ ನಾಧಿಗತಾಸ್ಮಾಭಿಃ ನ ಕೃತಂ ರಾಜಶಾಸನಮ್ ।**
**ಯದಿ ಗಚ್ಛಾಮ ಕಿಷ್ಕಿಂಧಾಂ ಸುಗ್ರೀವೋಽಸ್ಮಾನ್ ಹನಿಷ್ಯತಿ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಅನಂತರ ಮರಗಳ ಮೇಲೆ ಕುಳಿತುಕೊಂಡಿದ್ದ ಕಪಿಗಳು ಸೀತಾದೇವಿಯನ್ನು ಹುಡುಕಿ ಬಳಲಿದವರಾಗಿ, ಮೋಹಗೊಂಡು ಚಿಂತಿಸುತ್ತಾ ಇದ್ದರು. ಅಲ್ಲಿ ವಾನರಶ್ರೇಷ್ಠನಾದ ಅಂಗದನು ಕೆಲವು ಕಪಿಗಳನ್ನು ಕುರಿತು ಹೀಗೆಂದನು : 'ದಟ್ಟವಾದ ಕಾಡಿನಲ್ಲಿ ಅಲೆಯುತ್ತಿದ್ದ ನಮ್ಮಗಳಿಗೆ ಒಂದು ತಿಂಗಳ ಕಾಲ ನಿಜವಾಗಿಯೂ ಕಳೆದೇಹೋಯಿತು. ನಾವು ಸೀತೆಯನ್ನು ಪಡೆಯಲಿಲ್ಲ. ರಾಜಾಜ್ಞೆಯನ್ನು ಪಾಲಿಸಲಿಲ್ಲ. ನಾವು ಈಗ ಕಿಷ್ಕಿಂಧೆಗೆ ವಾಪಸು ಹೋದದ್ದೇ ಆದರೆ ಸುಗ್ರೀವನು ನಮ್ಮನ್ನು ಕೊಲ್ಲಲಿರುವನು'

**ವಿಶೇಷತಃ ಶತ್ರುಸುತಂ ಮಾಂ ಮಿಷಾನ್ನಿಹನಿಷ್ಯತಿ ।**
**ಮಯಿ ತಸ್ಯ ಕುತಃ ಪ್ರೀತಿರಹಂ ರಾಮೇಣ ರಕ್ಷಿತಃ ॥ ೪ ॥**
**ಇದಾನೀಂ ರಾಮಕಾರ್ಯಂ ಮೇ ನ ಕೃತಂ ತನ್ಮಿಷಂ ಭವೇತ್ ।**
**ತಸ್ಯ ಮದ್ಧನನೇ ನೂನಂ ಸುಗ್ರೀವಸ್ಯ ದುರಾತ್ಮನಃ ॥ ೫ ॥**
**ಮಾತೃಕಲ್ಪಾಂ ಭ್ರಾತೃಭಾರ್ಯಾಂ ಪಾಪಾತ್ಮಾನುಭವತ್ಯಸೌ ।**
**ನ ಗಚ್ಛೇಯಮತಃ ಪಾರ್ಶ್ವಂ ತಸ್ಯ ವಾನರಪುಂಗವಾಃ ॥ ೬ ॥**
**ತ್ಯಕ್ಷ್ಯಾಮಿ ಜೀವಿತಂ ಚಾತ್ರ ಯೇನ ಕೇನಾಪಿ ಮೃತ್ಯುನಾ ।**

೪-೬. 'ವಿಶೇಷವಾಗಿ ಶತ್ರುವಿನ ಮಗನಾದ ನನ್ನನ್ನು ನೆಪವೊಡ್ಡಿ ಕೊಂದು ಬಿಡುತ್ತಾನೆ. ಏಕೆಂದರೆ ನನ್ನಲ್ಲಿ ಅವನಿಗೆ ಪ್ರೀತಿಯಾದರೂ ಹೇಗೆ ಇದ್ದೀತು ? ನಾನು ರಾಮನಿಂದ ಈ ಮೊದಲು ಕಾಪಾಡಲ್ಪಟ್ಟಿದ್ದೆನು. ಈಗಲಾದರೊ, ನಾನು ರಾಮಕಾರ್ಯವನ್ನು ನೆರವೇರಿಸಿರುವದಿಲ್ಲ. ದುರಾತ್ಮನಾದ ಸುಗ್ರೀವನಿಗೆ ನನ್ನನ್ನು ಕೊಲ್ಲುವದಕ್ಕೆ ಖಂಡಿತವಾಗಿಯೂ ಅದೇ ನೆಪವಾಗಬಹುದು. ಆ ಪಾಪಾತ್ಮನಾದರೊ, ತಾಯಿಗೆ ಸಮಾನಳಾದ ಸೋದರನ ಹೆಂಡತಿಯನ್ನು ಅನುಭವಿಸುತ್ತಿರುವನು. ಎಲೈ ವಾನರ ಶ್ರೇಷ್ಠರೆ, ಆದ್ದರಿಂದ ನಾನು ಆತನೆಡೆಗೆ ಹೋಗುವದಿಲ್ಲ. ಏನಾದರೊಂದು ಮೃತ್ಯುದ್ವಾರದಿಂದ ಜೀವನವನ್ನು ಮುಗಿಸಿಬಿಡುವೆನು.'

**ಇತ್ಯುಶ್ರುನಯನಂ ಕೇಚಿದ್ ದೃಷ್ಟ್ವಾ ವಾನರಪುಂಗವಾಃ ।**
**ವ್ಯಥಿತಾಃ ಸಾಶ್ರುನಯನಾ ಯುವರಾಜಮಥಾಬ್ರುವನ್ ॥ ೭॥**
**ಕಿಮರ್ಥಂ ತವ ಶೋಕೋಽತ್ರ, ವಯಂ ತೇ ಪ್ರಾಣರಕ್ಷಕಾಃ ।**
**ಭವಾಮೋ ನಿವಸಾಮೋಽತ್ರ ಗುಹಾಯಾಂ ಭಯವರ್ಜಿತಾಃ ॥ ೮ ॥**

**ಸರ್ವಸೌಭಾಗ್ಯಸಹಿತಂ ಪುರಂ ದೇವಪುರೋಪಮಮ್ ।**
**ಶನೈಃ ಪರಸ್ಪರಂ ವಾಕ್ಯಂ ವದತಾಂ ಮಾರುತಾತ್ಮಜಃ ॥ ೯ ॥**
**ಶ್ರುತ್ವಾಂಗದಂ ಸಮಾಲಿಂಗ್ಯ ಪ್ರೋವಾಚ ನಯಕೋವಿದಃ ॥**

೭-೯. ಹೀಗೆ ಕಣ್ಣೀರಿನಿಂದ ಕೂಡಿದ ಅಂಗದನನ್ನು ಕಂಡು ಕೆಲವು ವಾನರಶ್ರೇಷ್ಠರು ದುಃಖಿತರಾಗಿ ತಾವೂ ಕಣ್ಣೀರು ತಂದುಕೊಂಡು ಯುವರಾಜನನ್ನು ಕುರಿತು ಹೀಗೆಂದರು : 'ನಿನ್ನ ಶೋಕವಾದರೂ ಏತಕ್ಕಾಗಿ ? ನಿನ್ನ ಪ್ರಾಣಗಳನ್ನು ನಾವು ಕಾಪಾಡುವೆವು. ಇಲ್ಲಿಯೇ ಗುಹೆಯಲ್ಲಿ ಯಾವ ಹೆದರಿಕೆಯೂ ಇಲ್ಲದಂತೆ ವಾಸಮಾಡಿಕೊಂಡಿರೋಣ. ಈ ಗುಹಾನಗರಿಯು ಎಲ್ಲಾ ಸೌಭಾಗ್ಯಗಳಿಂದಲೂ ಕೂಡಿದ್ದಾಗಿ ದೇವಪುರದಂತೆ ಇದ್ದುಕೊಂಡಿದೆ.' ಹೀಗೆ ಅನ್ಯೋನ್ಯವಾಗಿ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿದ ಮಾರುತಾತ್ಮಜನಾದ ನೀತಿವಂತನಾದ ಹನುಮಂತನು ಮೆಲ್ಲನೆ ಬಂದು ಅಂಗದನನ್ನು ಆಲಿಂಗಿಸಿಕೊಂಡು ಹೀಗೆಂದನು :

**ವಿಚಾರ್ಯತೇ ಕಿಮರ್ಥಂ ತೇ ದುರ್ವಿಚಾರೋ ನ ಯುಜ್ಯತೇ ।**
**ರಾಜ್ಞೋಽತ್ಯಂತಪ್ರಿಯಸ್ತ್ವಂ ಹಿ ತಾರಾಪುತ್ರೋಽತಿವಲ್ಲಭಃ ॥ ೧೦ ॥**
**ರಾಮಸ್ಯ ಲಕ್ಷ್ಮಣಾತ್ ಪ್ರೀತಿಸ್ತ್ವಯಿ ನಿತ್ಯಂ ಪ್ರವರ್ಧತೇ ।**
**ಅತೋ ನ ರಾಘವಾದ್ ಭೀತಿಸ್ತವ ರಾಜ್ಞೋ ವಿಶೇಷತಃ ॥ ೧೧ ॥**
**ಅಹಂ ತವ ಹಿತೇ ಸಕ್ತೋ ವತ್ಸ ನಾನ್ಯಂ ವಿಚಾರಯ ।**

೧೦-೧೧. 'ನೀನು ಹೀಗೇಕೆ ಚಿಂತಿಸುತ್ತಿರುವೆ ? ಕೆಟ್ಟ ವಿಚಾರಗಳನ್ನು (ಮನಸ್ಸಿಗೆ) ತಂದುಕೊಳ್ಳುವದು ಯೋಗ್ಯವಲ್ಲ. ನೀನಾದರೊ, ತಾರೆಯ ಮಗನಾಗಿದ್ದು ರಾಜನಿಗೆ ಅತ್ಯಂತ ಪ್ರೇಮಪಾತ್ರನಾಗಿರುವೆ. ರಾಮನಿಗೆ ಲಕ್ಷ್ಮಣನಿಗಿಂತಲೂ ಹೆಚ್ಚಾಗಿ ನಿನ್ನಲ್ಲಿ ಪ್ರೀತಿಯು ಬೆಳೆದಿರುತ್ತದೆ. ಆದ್ದರಿಂದ ನಿನಗೆ ರಾಮನಿಂದ ಅಥವಾ ಹೆಚ್ಚಾಗಿ ರಾಜನಾದ ಸುಗ್ರೀವನಿಂದ ಯಾವ ಹೆದರಿಕೆಯೂ ಇರುವದಿಲ್ಲ. ಮಗು, ನಾನು ನಿನ್ನ ಹಿತದಲ್ಲಿ ತೊಡಗಿರುತ್ತೇನೆ, ಬೇರೇನನ್ನೂ ಯೋಚಿಸದಿರು.'

**ಗುಹಾವಾಸಶ್ಚ ನಿರ್ಭೇದ್ಯ ಇತ್ಯುಕ್ತಂ ವಾನರೈಸ್ತು ಯತ್ ।**
**ತದೇತದ್ರಾಮಬಾಣಾನಾಮಭೇದ್ಯಂ ಕಿಂ ಜಗತ್ತ್ರಯೇ ॥ ೧೨ ॥**
**ಯೇ ತ್ವಾಂ ದುರ್ಬೋಧಯಂತ್ಯೇತೇ ವಾನರಾ ವಾನರರ್ಷಭ ।**
**ಪುತ್ರದಾರಾದಿಕಂ ತ್ಯಕ್ತ್ವಾ ಕಥಂ ಸ್ಥಾಸ್ಯಂತಿ ತೇ ತ್ವಯಾ ॥ ೧೩ ॥**

೧೨-೧೩. 'ಗುಹೆಯಲ್ಲಿ ವಾಸವಾಗಿದ್ದಲ್ಲಿ ಯಾರೂ ಭೇದಿಸಲಾರರು-ಎಂದು ವಾನರರು ಹೇಳಿದರಲ್ಲ, ಅದು ಸರಿಯಲ್ಲ. ರಾಮನ ಬಾಣಗಳಿಗೆ

ಅಭೇದ್ಯವಾಗಿರುವದು ಈ ಮೂರು ಲೋಕಗಳಲ್ಲಿಯೂ ಯಾವದು ತಾನೆ ಇದ್ದೀತು ? ಎಲೈ ವಾನರಶ್ರೇಷ್ಠನೆ, ಯಾವ ಈ ಕಪಿಗಳು ನಿನಗೆ ದುರ್ಬೋಧನೆಯನ್ನು ಮಾಡುತ್ತಿರುವರೋ ಅವರುಗಳು ಹೆಂಡಿರುಮಕ್ಕಳನ್ನು ಬಿಟ್ಟು ಹೇಗೆ ತಾನೆ ನಿನ್ನೊಡನೆ ಇದ್ದಾರು'?

**ಅನ್ಯತ್ ಗುಹ್ಯತಮಂ ವಕ್ಷ್ಯೇ ರಹಸ್ಯಂ ಶೃಣು ಮೇ ಸುತ ।**
**ರಾಮೋ ನ ಮಾನುಷೋ ದೇವಃ ಸಾಕ್ಷಾನ್ನಾರಾಯಣೋಽವ್ಯಯಃ ॥ ೧೪ ॥**
**ಸೀತಾ ಭಗವತೀ ಮಾಯಾ ಜನಸಂಮೋಹಕಾರಿಣೀ ।**
**ಲಕ್ಷ್ಮಣೋ ಭುವನಾಧಾರಃ ಸಾಕ್ಷಾತ್ ಶೇಷಃ ಫಣೀಶ್ವರಃ ॥ ೧೫ ॥**
**ಬ್ರಹ್ಮಣಾ ಪ್ರಾರ್ಥಿತಾಸ್ಸರ್ವೇ ರಕ್ಷೋಗಣವಿನಾಶನೇ ।**
**ಮಾಯಾಮಾನುಷಭಾವೇನ ಜಾತಾ ಲೋಕೈಕರಕ್ಷಕಾಃ ॥ ೧೬ ॥**

೧೪-೧೬. 'ಪುತ್ರನೆ, ಮತ್ತೊಂದು ಗುಟ್ಟಾದ ರಹಸ್ಯತಮವಾದ ವಿಚಾರವನ್ನು ಹೇಳುವೆನು, ಕೇಳು. ರಾಮನು ಮನುಷ್ಯನಲ್ಲ ; ಅವನು ಅವ್ಯಯನಾದ ಸಾಕ್ಷಾನ್ನಾರಾಯಣನೇ. ಜನಗಳನ್ನು ಮೋಹಗೊಳಿಸುವ ಸೀತೆಯು ಪೂಜ್ಯಳಾದ ಮಾಯೆಯೇ. ಲಕ್ಷ್ಮಣನಾದರೊ, ಪ್ರಪಂಚಕ್ಕೆ ಆಧಾರನಾದ ಫಣಿರಾಜನಾದ ಸಾಕ್ಷಾತ್ ಆದಿಶೇಷನೇ ಆಗಿರುತ್ತಾನೆ. ಇವರೆಲ್ಲರೂ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವರಾಗಿ ರಾಕ್ಷಸರ ಗುಂಪನ್ನು ನಾಶಗೊಳಿಸುವದಕ್ಕಾಗಿ ಮಾಯೆಯಿಂದ ಮನುಷ್ಯಭಾವವನ್ನು ಹೊಂದಿ ಲೋಕವನ್ನು ಕಾಪಾಡುವದಕ್ಕಾಗಿಯೇ ಹುಟ್ಟಿರುತ್ತಾರೆ.

**ವಯಂ ಚ ಪಾರ್ಷದಾಃ ಸರ್ವೇ ವಿಷ್ಣೋರ್ವೈಕುಂಠವಾಸಿನಃ ।**
**ಮನುಷ್ಯಭಾವಮಾಪನ್ನೇ ಸ್ವೇಚ್ಛಯಾ ಪರಮಾತ್ಮನಿ ॥ ೧೭ ॥**
**ವಯಂ ವಾನರರೂಪೇಣ ಜಾತಾಸ್ತಸ್ಯೈವ ಮಾಯಯಾ ।**
**ವಯಂ ತು ತಪಸಾ ಪೂರ್ವಮಾರಾಧ್ಯ ಜಗತಾಂ ಪತಿಮ್ ॥ ೧೮ ॥**
**ತೇನೈವಾನುಗೃಹೀತಾಃ ಸ್ಮಃ ಪಾರ್ಷದತ್ವಮುಪಾಗತಾಃ ।**
**ಇದಾನೀಮಪಿ ತಸ್ಯೈವ ಸೇವಾಂ ಕೃತ್ವಾ ಚ ಮಾಯಯಾ ॥ ೧೯ ॥**
**ಪುನರ್ವೈಕುಂಠಮಾಸಾದ್ಯ ಸುಖಂ ಸ್ಥಾಸ್ಯಾಮಹೇ ವಯಮ್ ।**
**ಇತ್ಯಂಗದಮಥಾಶ್ವಾಸ್ಯ ಗತಾ ವಿಂಧ್ಯಂ ಮಹಾಚಲಮ್ ॥ ೨೦ ॥**

೧೭-೨೦. ''ನಾವೆಲ್ಲರೂ ವೈಕುಂಠವಾಸಿಯಾದ ವಿಷ್ಣುವಿನ ಸೇವಕರು ; ಭಗವಂತನು ತನ್ನ ಇಚ್ಛಾನುಗುಣವಾಗಿ ಮನುಷ್ಯನಾಗಿ ಅವತರಿಸಲಾಗಿ ಅವನ ಮಾಯೆಯಿಂದಲೇ ನಾವು ಕಪಿಗಳ ರೂಪದಿಂದ ಹುಟ್ಟಿರುತ್ತೇವೆ. ನಾವಾದರೊ, ಹಿಂದೆ ತಪಸ್ಸಿನಿಂದ ಜಗತ್ಪತಿಯಾದ ವಿಷ್ಣುವನ್ನು ಆರಾಧಿಸಿ ಅವನ ಪ್ರಸಾದದಿಂದಲೇ ಮಾಯೆ

ಯಿಂದ ಸೇವಕರಾಗಿದ್ದೇವೆ. ಈಗಲೂ ಆತನ ಸೇವೆಯನ್ನೇ ಮಾಡಿ ಪುನಃ ವೈಕುಂಠವನ್ನು ಪಡೆದು ಸುಖವಾಗಿರೋಣ.'' ಹೀಗೆಂದು ಅಂಗದನನ್ನು ಸಮಾಧಾನಗೊಳಿಸಿ ವಿಂಧ್ಯ ವೆಂಬ ಮಹಾಪರ್ವತಕ್ಕೆ ಹೋದರು.

**ವಿಚಿನ್ವಂತೋಽಥ ಶನಕೈಃ ಜಾನಕೀಂ ದಕ್ಷಿಣಾಂಬುಧೇಃ ।**
**ತೀರೇ ಮಹೇಂದ್ರಾಖ್ಯಗಿರೇಃ ಪವಿತ್ರಂ ಪಾದಮಾಯಯುಃ ॥ ೨೧ ॥**
**ದೃಷ್ಟ್ವಾ ಸಮುದ್ರಂ ದುಷ್ಪಾರಮಗಾಧಂ ಭಯವರ್ಧನಮ್ ।**
**ವಾನರಾ ಭಯಸಂತ್ರಸ್ತಾಃ ಕಿಂ ಕುರ್ಮ ಇತಿ ವಾದಿನಃ ॥ ೨೨ ॥**
**ನಿಷೇದುರುದಧೇಸ್ತೀರೇ ಸರ್ವೇ ಚಿಂತಾಸಮನ್ವಿತಾಃ ।**
**ಮಂತ್ರಯಾಮಾಸುರನ್ಯೋನ್ಯಮಂಗದಾದ್ಯಾ ಮಹಾಬಲಾಃ ॥ ೨೩ ॥**

೨೧-೨೩. ಮೆಲ್ಲನೆ ಸೀತಾದೇವಿಯನ್ನು ಹುಡುಕುತ್ತಾ ದಕ್ಷಿಣಸಮುದ್ರ ತೀರದಲ್ಲಿ ಪವಿತ್ರವಾದ ಮಹೇಂದ್ರವೆಂಬ ಹೆಸರಿನ ಪರ್ವತದ ಬುಡಕ್ಕೆ ಬಂದವರಾದರು. ಅತ್ಯಂತ ಆಳವಾಗಿಯೂ ಭಯವನ್ನುಂಟುಮಾಡುವದಾಗಿಯೂ ಆಗಿರುವ, ದಾಟಲ ಸಾಧ್ಯವಾದ ಸಮುದ್ರವನ್ನು ಕಂಡು ಕಪಿಗಳು ಭಯದಿಂದ ನಡುಗಿದವರಾಗಿ 'ಮಾಡುವ ದೇನು ?' ಎಂದುಕೊಳ್ಳುತ್ತಾ ಚಿಂತಾಕ್ರಾಂತರಾಗಿ ಸಮುದ್ರದ ದಡದಲ್ಲಿ ಕುಳಿತುಬಿಟ್ಟರು. ಮಹಾಬಲಿಷ್ಠರಾದ ಅಂಗದನೇ ಮೊದಲಾದವರು ಪರಸ್ಪರವಾಗಿ ಆಲೋಚಿಸ ತೊಡಗಿದರು.

**ಭ್ರಮತೋ ನೋ ವನೇ ಮಾಸೋ ಗತೋಽತ್ರೈವ ಗುಹಾಂತರೇ ।**
**ನ ದೃಷ್ಟೋ ರಾವಣೋ ವಾದ್ಯ ಸೀತಾ ವಾ ಜನಕಾತ್ಮಜಾ ॥ ೨೪ ॥**
**ಸುಗ್ರೀವಸ್ತೀಕ್ಷ್ಣ ದಂಡೋಽಸ್ಮಾನ್ ನಿಹನ್ಯೇವ ನ ಸಂಶಯಃ ।**
**ಸುಗ್ರೀವವಧತೋಽಸ್ಮಾಕಂ ಶ್ರೇಯಃ ಪ್ರಾಯೋಪವೇಶನಮ್ ॥ ೨೫ ॥**
**ಇತಿ ನಿಶ್ಚಿತ್ಯ ತತ್ರೈವ ದರ್ಭಾನಾಸ್ತೀರ್ಯ ಸರ್ವತಃ ।**
**ಉಪಾವಿವೇಶುಸ್ತೇ ಸರ್ವೇ ಮರಣೇ ಕೃತನಿಶ್ಚಯಾಃ ॥ ೨೬ ॥**

೨೪-೨೬. 'ಸಂಚಾರಮಾಡುತ್ತಿದ್ದ ನಮಗೆ ಇಲ್ಲಿಯೇ ಗುಹೆಯೊಳಗೇ ಒಂದು ತಿಂಗಳ ಕಾಲವು ಕಳೆದುಹೋಯಿತು. ರಾವಣನಾಗಲಿ, ಜನಕನ ಮಗಳಾದ ಸೀತೆಯಾಗಲಿ ನಮಗೆ ಸಿಗಲಿಲ್ಲ. ತೀಕ್ಷ್ಣವಾದ ಶಿಕ್ಷೆಯನ್ನು ಕೊಡುವ ಸುಗ್ರೀವನು ನಮ್ಮನ್ನು ಖಂಡಿತವಾಗಿಯೂ ಕೊಲ್ಲುವನು. ಈ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಸುಗ್ರೀವನಿಂದ ವಧೆಯನ್ನು ಹೊಂದುವದಕ್ಕಿಂತಲೂ ಉಪವಾಸಬಿದ್ದು ಸಾಯುವದೇ ಮೇಲು.' ಹೀಗೆಂದುಕೊಂಡು ಅಲ್ಲಿಯೇ ಸುತ್ತಲೂ ದರ್ಭೆಗಳನ್ನು ಹಾಸಿದವರಾಗಿ ಅವರೆಲ್ಲರೂ ಸಾಯಲು ನಿಶ್ಚಯಿಸಿಕೊಂಡು ಕುಳಿತುಬಿಟ್ಟರು.

**ಏತಸ್ಮಿನ್ನಂತರೇ ತತ್ರ ಮಹೇಂದ್ರಾದ್ರಿಗುಹಾಂತರಾತ್ ।**
**ನಿರ್ಗತ್ಯ ಶನಕೈರಾಗಾತ್ ಗೃಧ್ರಃ ಪರ್ವತಸನ್ನಿಭಃ ॥ ೨೭ ॥**
**ದೃಷ್ಟ್ವಾ ಪ್ರಾಯೋಪವೇಶೇನ ಸ್ಥಿತಾನ್ ವಾನರಪುಂಗವಾನ್ ।**
**ಉವಾಚ ಶನಕೈರ್ಗೃಧ್ರಃ ಪ್ರಾಪ್ತೋ ಭಕ್ಷ್ಯೋಽದ್ಯ ಮೇ ಬಹುಃ**
**ಏಕೈಕಶಃ ಕ್ರಮಾತ್ ಸರ್ವಾನ್ ಭಕ್ಷಯಾಮಿ ದಿನೇ ದಿನೇ ॥ ೨೮ ॥**

೨೭-೨೮. ಈ ನಡುವೆ ಮಹೇಂದ್ರಪರ್ವತದ ಗುಹೆಯೊಳಗಿಂದ ಒಂದು ಬೆಟ್ಟದಷ್ಟು ದೊಡ್ಡದಾದ ಹದ್ದು ಮೆಲ್ಲನೆ ಹೊರಬಂದು ಪ್ರಾಯೋಪವೇಶಮಾಡಿ ಕುಳಿತಿದ್ದ ವಾನರಶ್ರೇಷ್ಠರನ್ನು ಕಂಡು ಹೀಗೆಂದಿತು : 'ಓಹೋ, ಈಗ ನನಗೆ ಸಮೃದ್ಧಿಯಾಗಿ ಆಹಾರವು ದೊರಕಿತು ; ಒಂದೊಂದೇ (ಕಪಿಯನ್ನು) ಕ್ರಮವಾಗಿ ಪ್ರತಿದಿನವೂ ತಿನ್ನುವೆನು.'

**ಶ್ರುತ್ವಾ ತದ್ ಗೃಧ್ರವಚನಂ ವಾನರಾ ಭೀತಮಾನಸಾಃ ।**
**ಭಕ್ಷಯಿಷ್ಯತಿ ನಃ ಸರ್ವಾನಸೌ ಗೃಧ್ರೋ ನ ಸಂಶಯಃ ॥ ೨೯ ॥**
**ರಾಮಕಾರ್ಯಂ ಚ ನಾಸ್ಮಾಭಿಃ ಕೃತಂ ಕಿಂಚಿದ್ಧರೀಶ್ವರಾಃ ।**
**ಸುಗ್ರೀವಸ್ಯಾಪಿ ಚ ಹಿತಂ ನ ಕೃತಂ ಸ್ವಾತ್ಮನಾಮಪಿ ॥ ೩೦ ॥**
**ವೃಥಾನೇನ ವಧಂ ಪ್ರಾಪ್ತಾ ಗಚ್ಛಾಮೋ ಯಮಸಾದನಮ್ ।**
**ಅಹೋ ಜಟಾಯುರ್ಧರ್ಮಾತ್ಮಾ ರಾಮಸ್ಯಾರ್ಥೇ ಮೃತಃ ಸುಧೀಃ ॥ ೩೧ ॥**
**ಮೋಕ್ಷಂ ಪ್ರಾಪ ದುರಾವಾಪಂ ಯೋಗಿನಾಮಪ್ಯರಿಂದಮಃ ।**

೨೯-೩೦. ಕಪಿಗಳು ಆ ಹದ್ದಿನ ಮಾತನ್ನು ಕೇಳಿ ಬೆದರಿದವರಾಗಿ 'ಅಯ್ಯೋ, ಈ ಹದ್ದು ನಮ್ಮೆಲ್ಲರನ್ನೂ ತಿಂದುಹಾಕಲಿದೆ. ಈ ಬಗ್ಗೆ ಸಂಶಯವಿಲ್ಲ. ಕಪಿಶ್ರೇಷ್ಠರೆ, ನಾವು ಶ್ರೀರಾಮನ ಕಾರ್ಯವನ್ನೂ ನೆರವೇರಿಸಿದವರಾಗಲಿಲ್ಲ. ನಮ್ಮವರಿಗೇ ಹಿತವನ್ನುಂಟು ಮಾಡುವದಾಗಲಿ, ಸುಗ್ರೀವನಿಗೇ ಆಗಲಿ ಏನೂ ಉಪಕಾರವನ್ನು ಮಾಡಲಿಲ್ಲ. ವ್ಯರ್ಥವಾಗಿ ಈತನಿಂದ ಮರಣವನ್ನು ಹೊಂದಿ ಯಮನ ಪಟ್ಟಣಕ್ಕೆ ಹೋಗುತ್ತಿದ್ದೇವೆ. ಧರ್ಮಾತ್ಮನಾದ ಹಾಗೂ ಜ್ಞಾನನಾದ ಜಟಾಯುವು ರಾಮಕಾರ್ಯಕ್ಕಾಗಿಯೇ ಪ್ರಾಣವನ್ನು ಬಿಟ್ಟನು. ಯೋಗಿಗಳಿಗೂ ದುರ್ಲಭವಾದ ಮುಕ್ತಿಯನ್ನು ಶತ್ರುನಾಶಕನಾದ ಆತನು ಪಡೆದುಕೊಂಡನು' - (ಎಂದುಕೊಂಡರು.)

**ಸಂಪಾತಿಸ್ತು ತದಾ ವಾಕ್ಯಂ ಶ್ರುತ್ವಾ ವಾನರಭಾಷಿತಮ್ ।**
**ಕೇ ವಾ ಯೂಯಂ ಮಮ ಭ್ರಾತುಃ ಕರ್ಣಪೀಯೂಷಸನ್ನಿಭಮ್ ॥ ೩೨ ॥**
**ಜಟಾಯುರಿತಿ ನಾಮಾದ್ಯ ವ್ಯಾಹರಂತಃ ಪರಸ್ಪರಮ್ ।**
**ಉಚ್ಯತಾಂ ವೋ ಭಯಂ ಮಾ ಭೂನ್ಮತ್ತಃ ಪ್ಲವಗಸತ್ತಮಾಃ ॥ ೩೩ ॥**

೩೨-೩೩. ಆಗ ಸಂಪಾತಿಯು ವಾನರರು ಆಡುತ್ತಿದ್ದ ಮಾತನ್ನು ಕೇಳಿ 'ನೀವು ಯಾರು ? ಕಿವಿಗೆ ಅಮೃತಪ್ರಾಯವಾದ, ನನ್ನ ಸೋದರನಾದ ಜಟಾಯುವೆಂಬವನ ಹೆಸರನ್ನು ಒಬ್ಬರಿಗೊಬ್ಬರು ಹೇಳುತ್ತಿದ್ದೀರಲ್ಲ ? ನಿಮಗೆ ನನ್ನ ಕಡೆಯಿಂದ ಹೆದರಿಕೆಯಾಗುವದು ಬೇಡ. ಎಲೈ ಕಪಿಶ್ರೇಷ್ಠರೆ, ವೃತ್ತಾಂತವೇನೆಂಬುದನ್ನು ಹೇಳಿರಿ.'

**ತಮುವಾಚಾಂಗದಃ ಶ್ರೀಮಾನುತ್ಥಿತೋ ಗೃಧ್ರಸನ್ನಿಧೌ ।**
**ರಾಮೋ ದಾಶರಥಿಃ ಶ್ರೀಮಾನ್ ಲಕ್ಷ್ಮಣೇನ ಸಮನ್ವಿತಃ ॥ ೩೪ ॥**
**ಸೀತಯಾ ಭಾರ್ಯಯಾ ಸಾರ್ಧಂ ವಿಚಚಾರ ಮಹಾವನೇ ।**
**ತಸ್ಯ ಸೀತಾ ಹೃತಾ ಸಾಧ್ವೀ ರಾವಣೇನ ದುರಾತ್ಮನಾ ॥ ೩೫ ॥**
**ಮೃಗಯಾಂ ನಿರ್ಗತೇ ರಾಮೇ ಲಕ್ಷ್ಮಣೇ ಚ ಹೃತಾ ಬಲಾತ್ ।**
**ರಾಮ ರಾಮೇತಿ ಕ್ರೋಶಂತೀ ಶ್ರುತ್ವಾ ಗೃಧ್ರಃ ಪ್ರತಾಪವಾನ್ ॥ ೩೬ ॥**
**ಜಟಾಯುರ್ನಾಮ ಪಕ್ಷೀಂದ್ರಃ ಯುದ್ಧಂ ಕೃತ್ವಾ ಸುದಾರುಣಮ್ ।**
**ರಾವಣೇನ ಹತೋ ವೀರೋ ರಾಘವಾರ್ಥಂ ಮಹಾಬಲಃ ॥ ೩೭ ॥**
**ರಾಮೇಣ ದಗ್ಧೋ ರಾಮಸ್ಯ ಸಾಯುಜ್ಯಮಗಮತ್ ಕ್ಷಣಾತ್ ।**

೩೪-೩೭. ಶ್ರೀಮಂತನಾದ ಅಂಗದನು ಆ ಹದ್ದಿನ ಸಮೀಪದಲ್ಲಿ ಎದ್ದುನಿಂತವನಾಗಿ ಅವನನ್ನು ಕುರಿತು ಹೀಗೆಂದನು : ''ದಶರಥನ ಪುತ್ರನಾದ ಶ್ರೀರಾಮನು ಲಕ್ಷ್ಮಣ ಮತ್ತು ಹೆಂಡತಿಯಾದ ಸೀತೆಯೊಡಗೂಡಿ ದೊಡ್ಡ ಕಾಡಿನಲ್ಲಿ ಸಂಚರಿಸುತ್ತಿದ್ದನು. ಅವನ ಧರ್ಮಪತ್ನಿಯಾದ ಸೀತೆಯು ದುರಾತ್ಮನಾದ ರಾವಣನಿಂದ ಕದಿಯಲ್ಪಟ್ಟಳು. ರಾಮನೂ ಲಕ್ಷ್ಮಣನೂ ಬೇಟೆಗಾಗಿ ಹೋಗಿದ್ದಾಗ ಬಲವಂತದಿಂದ (ಆಕೆಯನ್ನು ರಾವಣನು ಅಪಹರಿಸಿದನು). ರಾಮ, ರಾಮ- ಎಂಬುದಾಗಿ ಕೂಗುತ್ತಿದ್ದುದನ್ನು ಕೇಳಿದ ಪ್ರತಾಪಶಾಲಿಯಾದ ಗೃಧ್ರರಾಜನಾದ ಜಟಾಯುವೆಂಬ ಹೆಸರಿನ ವೀರನಾದ ಪಕ್ಷಿಶ್ರೇಷ್ಠನು ಭಯಂಕರವಾದ ಯುದ್ಧವನ್ನು ಮಾಡಿ ರಾವಣನಿಂದ ಕೊಲ್ಲಲ್ಪಟ್ಟನು. ರಾಮನಿಗಾಗಿ ಆ ಮಹಾಬಲಶಾಲಿಯು ಪ್ರಾಣವನ್ನು ತೆತ್ತಾಗ ರಾಮನಿಂದ ಸಂಸ್ಕರಿಸಲ್ಪಟ್ಟವನಾಗಿ ಕ್ಷಣಮಾತ್ರದಲ್ಲಿ ರಾಮನ ಸಾಯುಜ್ಯವನ್ನೂ ಸೇರಿದನು.

**ರಾಮಃ ಸುಗ್ರೀವಮಾಸಾದ್ಯ ಸಖ್ಯಂ ಕೃತ್ವಾಗ್ನಿಸಾಕ್ಷಿಕಮ್ ।**
**ಸುಗ್ರೀವಚೋದಿತೋ ಹತ್ವಾ ವಾಲಿನಂ ಸುದುರಾಸದಮ್ ॥ ೩೮ ॥**
**ರಾಜ್ಯಂ ದದೌ ವಾನರಾಣಾಂ ಸುಗ್ರೀವಾಯ ಮಹಾಬಲಃ ।**
**ಸುಗ್ರೀವಃ ಪ್ರೇಷಯಾಮಾಸ ಸೀತಾಯಾಃ ಪರಿಮಾರ್ಗಣೇ ॥ ೩೯ ॥**
**ಅಸ್ಮಾನ್ ವಾನರವೃಂದಾನ್ ವೈ ಮಹಾಸತ್ವಾನ್ ಮಹಾಬಲಃ ।**

೩೮-೩೯. ರಾಮನು ಸುಗ್ರೀವನನ್ನು ಬಳಿಸಾರಿ ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಮಾಡಿಕೊಂಡು ಸುಗ್ರೀವನಿಂದ ಪ್ರೇರಿತನಾಗಿ ಮಹಾಪರಾಕ್ರಮಿಯಾದ ವಾಲಿಯನ್ನು ಕೊಂದು ವಾನರರ ರಾಜ್ಯವನ್ನು ಸುಗ್ರೀವನಿಗೆ ಕೊಟ್ಟನು. ಮಹಾಬಲಿಷ್ಠನಾದ ಸುಗ್ರೀವನು ಸೀತೆಯನ್ನು ಹುಡುಕುವದಕ್ಕಾಗಿ ಈ ನಮ್ಮ ಕಪಿಗಳ ಗುಂಪನ್ನು ಕಳುಹಿಸಿ ಕೊಟ್ಟನು.

**ಮಾಸಾದರ್ವಾಜ್ ನಿವರ್ತಧ್ವಂ ನೋ ಚೇತ್ ಪ್ರಾಣಾನ್ ಹರಾಮಿ ವಃ ।**
**ಇತ್ಯಾಜ್ಞಯಾ ಭ್ರಮಂತೋಽಸ್ಮಿನ್ ವನೇ ಗಹ್ವರಮಧ್ಯಗಾಃ ॥ ೪೦ ॥**
**ಗತೋ ಮಾಸೋ ನ ಜಾನೀಮಃ ಸೀತಾಂ ವಾ ರಾವಣಂ ಚ ವಾ ।**
**ಮರ್ತುಂ ಪ್ರಾಯೋಪವಿಷ್ಟಾಃ ಸ್ಮಸ್ತೀರೇ ಲವಣವಾರಿಧೇಃ ॥ ೪೧ ॥**
**ಯದಿ ಜಾನಾಸಿ ಹೇ ಪಕ್ಷಿನ್ ಸೀತಾಂ ಕಥಯ ನಃ ಶುಭಾಮ್ ।**

೪೦-೪೧. ''ಒಂದು ತಿಂಗಳೊಳಗೇ ನೀವು ಹಿಂದಿರುಗಬೇಕು. ಹಾಗಿಲ್ಲವಾದರೆ ನಿಮ್ಮ ಪ್ರಾಣಗಳನ್ನು ತೆಗೆದುಬಿಡುವೆನು'' -ಎಂಬ (ಸುಗ್ರೀವನ) ಅಪ್ಪಣೆಯಂತೆ (ಹೊರಟವರಾಗಿ) ದಟ್ಟವಾದ ಕಾಡಿನ ಮಧ್ಯದಲ್ಲಿ ಸಂಚರಿಸುತ್ತಿರುವಾಗ ತಿಂಗಳು ಕಳೆದದ್ದನ್ನೇ ತಿಳಿಯದೆ ಹೋದೆವು. ಮತ್ತು ಸೀತೆಯನ್ನಾಗಲಿ, ರಾವಣನನ್ನಾಗಲಿ, ನಾವು ಹುಡುಕಲಾಗಲಿಲ್ಲ. ಆದ್ದರಿಂದ ಸಾಯುವ ಉದ್ದೇಶದಿಂದ ಉಪವಾಸ ಮಾಡಿ ಸಮುದ್ರದ ತೀರದಲ್ಲಿ ಕುಳಿತಿದ್ದೇವೆ. ಎಲೈ ಪಕ್ಷಿಯೆ, ನೀನೇನಾದರೂ ಶುಭಳಾದ ಸೀತೆಯನ್ನು ಬಲ್ಲೆಯಾದರೆ ಹೇಳುವವನಾಗು.''

**ಅಂಗದಸ್ಯ ವಚಃ ಶ್ರುತ್ವಾ ಸಂಪಾತಿರ್ಹೃಷ್ಟಮಾನಸಃ ।**
**ಉವಾಚ ಮತ್ಪ್ರಿಯೋ ಭ್ರಾತಾ ಜಟಾಯುಃ ಪ್ಲವಗೇಶ್ವರಾಃ ॥ ೪೨ ॥**
**ಬಹುವರ್ಷಸಹಸ್ರಾಂತೇ ಭ್ರಾತೃವಾರ್ತಾ ಶ್ರುತಾ ಮಯಾ ।**
**ವಾಕ್ಸಾಹಾಯ್ಯಂ ಕರಿಷ್ಯೇಽಹಂ ಭವತಾಂ ಪ್ಲವಗೇಶ್ವರಾಃ ॥ ೪೩ ॥**
**ಭ್ರಾತುಃ ಸಲಿಲದಾನಾಯ ನಯಧ್ವಂ ಮಾಂ ಜಲಾಂತಿಕಮ್ ।**
**ಪಶ್ಚಾತ್ ಸರ್ವಂ ಶುಭಂ ವಕ್ಷ್ಯೇ ಭವತಾಂ ಕಾರ್ಯಸಿದ್ಧಯೇ ॥ ೪೪ ॥**

೪೨-೪೪. ಅಂಗದನ ಮಾತನ್ನು ಕೇಳಿ ಸಂಪಾತಿಯು ಸಂತುಷ್ಟಮನಸ್ಕನಾಗಿ ಹೀಗೆಂದನು : 'ಎಲೈ ಕಪಿಶ್ರೇಷ್ಠರುಗಳೆ, ಜಟಾಯುವು ನನ್ನ ಪ್ರಿಯನಾದ ಸಹೋದರನು; ಅನೇಕ ಸಾವಿರ ವರ್ಷಗಳ ಅನಂತರ ಸೋದರನ ಸುದ್ಧಿಯು ನನಗೆ ಕೇಳಬಂದಿದೆ. ಎಲೈ ಕಪಿಗಳೆ, ನಾನು ನಿಮಗೆ ಮಾತಿನ ಸಹಾಯವನ್ನು ಮಾಡಬಲ್ಲೆನು. ಸೋದರನಿಗೆ ತರ್ಪಣ ಮಾಡುವದಕ್ಕಾಗಿ ನನ್ನನ್ನು ನೀರಿನ ಸಮೀಪಕ್ಕೆ ಕರೆದೊಯ್ಯಿರಿ. ಅನಂತರ ನಿಮ್ಮ ಕಾರ್ಯ ಸಿದ್ಧಿಗೆ ತಕ್ಕ ಎಲ್ಲಾ ಶುಭಸಮಾಚಾರವನ್ನೂ ಹೇಳಲಿರುವೆನು.

**ತಥೇತಿ ನಿನ್ಯುಸ್ತೇ ತೀರಂ ಸಮುದ್ರಸ್ಯ ವಿಹಂಗಮಮ್ ।**
**ಸೋಽಪಿ ತತ್ಸಲಿಲೇ ಸ್ನಾತ್ವಾ ಭ್ರಾತುರ್ದತ್ವಾ ಜಲಾಂಜಲಿಮ್ ॥ ೪೫ ॥**
**ಪುನಃ ಸ್ವಸ್ಥಾನಮಾಸಾದ್ಯ ಸ್ಥಿತೋ ನೀತೋ ಹರೀಶ್ವರೈಃ ।**
**ಸಂಪಾತಿಃ ಕಥಯಾಮಾಸ ವಾನರಾನ್ ಪರಿಹರ್ಷಯನ್ ॥ ೪೬ ॥**

೪೫-೪೬. ಹಾಗೆಯೇ ಆಗಲೆಂದು ಅವರುಗಳು ಆ ಹಕ್ಕಿಯನ್ನು ಸಮುದ್ರ ತೀರಕ್ಕೆ ಒಯ್ದರು. ಅವನು ಕೂಡ ಆ ನೀರಿನಲ್ಲಿ ಸ್ನಾನಮಾಡಿ ಸೋದರನಿಗೆ ಜಲತರ್ಪಣ ವನ್ನು ಮಾಡಿ ಮತ್ತೆ ತನ್ನ ಜಾಗಕ್ಕೆ ಕಪಿಗಳಿಂದ ಒಯ್ಯಲ್ಪಟ್ಟವನಾದನು. ಆ ಸಂಪಾತಿಯು ಕಪಿಗಳನ್ನು ಸಂತೋಷಗೊಳಿಸುತ್ತಾ ಹೀಗೆ ಹೇಳಿದನು.

**ಲಂಕಾ ನಾಮ ನಗರ್ಯಾಸ್ತೇ ತ್ರಿಕೂಟಗಿರಿಮೂರ್ಧನಿ ।**
**ತತ್ರಾಶೋಕವನೇ ಸೀತಾ ರಾಕ್ಷಸೀಭಿಃ ಸುರಕ್ಷಿತಾ ॥ ೪೭ ॥**
**ಸಮುದ್ರಮಧ್ಯೇ ಸಾ ಲಂಕಾ ಶತಯೋಜನದೂರತಃ ।**
**ದೃಶ್ಯತೇ ಮೇ ನ ಸಂದೇಹಃ ಸೀತಾ ಚ ಪರಿದೃಶ್ಯತೇ ॥ ೪೮ ॥**
**ಗೃಧ್ರತ್ವಾತ್ ದೂರದೃಷ್ಟಿರ್ಮೇ ನಾತ್ರ ಸಂಶಯಿತುಂ ಕ್ಷಮಮ್ ।**
**ಶತಯೋಜನವಿಸ್ತೀರ್ಣಂ ಸಮುದ್ರಂ ಯಸ್ತು ಲಂಘಯೇತ್ ॥ ೪೯ ॥**
**ಸ ಏವ ಜಾನಕೀಂ ದೃಷ್ಟ್ವಾ ಪುನರಾಯಾಸ್ಯತಿ ಧ್ರುವಮ್ ।**

೪೭-೪೯. ತ್ರಿಕೂಟಪರ್ವತದ ಶಿಖರದಲ್ಲಿ ಲಂಕೆಯೆಂಬ ಪಟ್ಟಣವಿದೆ. ಅಲ್ಲಿ ಸೀತೆಯು ರಾಕ್ಷಸಿಯರಿಂದ ಕಾಪಾಡಲ್ಪಟ್ಟು ಇರುತ್ತಾಳೆ. ಆ ಲಂಕೆಯಾದರೊ, ಸಮುದ್ರದ ಮಧ್ಯದಲ್ಲಿ ಇಲ್ಲಿಂದ ಒಂದು ನೂರು ಯೋಜನಗಳ ದೂರದಲ್ಲಿದೆ. ನನಗೆ ಇಲ್ಲಿಂದಲೇ ಸೀತೆಯಿರುವದು ಕಂಡುಬರುತ್ತಿದೆ. ಸಂಶಯವಿಲ್ಲ. ಹದ್ದಾಗಿರುವ ನನಗೆ ಸ್ವಭಾವದಿಂದಲೇ ದೂರದೃಷ್ಟಿಯಿದೆ. ಈ ವಿಷಯದಲ್ಲಿ ಅನುಮಾನಿಸವದು ಸರಿಯಲ್ಲ. ಆದರೆ ಯಾವನು ನೂರು ಯೋಜನಗಳಷ್ಟು ವಿಸ್ತಾರವಾದ ಆ ಸಮುದ್ರವನ್ನು ನೆಗೆಯಬಲ್ಲನೋ ಅವನೇ ಸೀತೆಯನ್ನು ಕಂಡು ಹಿಂದಿರುಗಿಬರಲಿರುವನು. ಇದು ನಿಶ್ಚಿತವು.

**ಅಹಮೇವ ದುರಾತ್ಮಾನಂ ರಾವಣಂ ಹಂತುಮುತ್ಸಹೇ ।**
**ಭ್ರಾತುರ್ಹಂತಾರಮೇಕಾಕೀ ಕಿಂ ತು ಪಕ್ಷವಿವರ್ಜಿತಃ ॥ ೫೦ ॥**
**ಯತಧ್ವಮತಿಯತ್ನೇನ ಲಂಘಿತುಂ ಸರಿತಾಂ ಪತಿಮ್ ।**
**ತತೋ ಹಂತಾ ರಘುಶ್ರೇಷ್ಠೋ ರಾವಣಂ ರಾಕ್ಷಸಾಧಿಪಮ್ ॥ ೫೧ ॥**

೫೦-೫೧. ಸೋದರನನ್ನು ಕೊಂದಿರುವ ದುರಾತ್ಮನಾದ ರಾವಣನನ್ನು ನಾನೇ ಕೊಲ್ಲಲು ಇಚ್ಛಿಸುವೆನು. ಆದರೆ ಈಗ ನನಗೆ ರೆಕ್ಕೆಗಳಿರುವದಿಲ್ಲ. ನೀವುಗಳು

ಚೆನ್ನಾಗಿ ಪ್ರಯತ್ನಿಸಿ ಸಮುದ್ರವನ್ನು ಹಾರಲು ಕಾರ್ಯಪ್ರವೃತ್ತರಾಗಿರಿ. ಅನಂತರ ರಘುಶ್ರೇಷ್ಠನಾದ ರಾಮನು ರಾಕ್ಷಸಾಧಿಪನಾದ ರಾವಣನನ್ನು ಕೊಲ್ಲುವವನಾಗುತ್ತಾನೆ.

**ಉಲ್ಲಂಘ್ಯ ಸಿಂಧುಂ ಶತಯೋಜನಾಯತಂ**
**ಲಂಕಾಂ ಪ್ರವಿಶ್ಯಾಥ ವಿದೇಹಕನ್ಯಕಾಮ್ ।**
**ದೃಷ್ಟ್ವಾ ಸಮಾಭಾಷ್ಯ ಚ ವಾರಿಧಿಂ ಪುನ**
**ಸ್ತರ್ತುಂ ಸಮರ್ಥಃ ಕತಮೋ ವಿಚಾರ್ಯತಾಮ್ ॥ ೫೨ ॥**

೫೨. ನೂರು ಯೋಜನಗಳ ವಿಸ್ತೀರ್ಣವುಳ್ಳ ಸಮುದ್ರವನ್ನು ದಾಟಿ ಲಂಕೆಯನ್ನು ಪ್ರವೇಶಿಸಿ ವಿದೇಹರಾಜನ ಮಗಳಾದ ಸೀತೆಯನ್ನು ಕಂಡು ಮಾತನಾಡಿಸಿ ಮತ್ತೊಮ್ಮೆ ಸಮುದ್ರವನ್ನು ದಾಟಿ ಬರಲು ನಿಮ್ಮಲ್ಲಿ ಯಾವನು ಸಮರ್ಥನೆಂಬುದನ್ನು ವಿಚಾರಮಾಡಿರಿ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ಸಪ್ತಮಃ ಸರ್ಗಃ**

-----------------

## ಎಂಟನೆಯ ಸರ್ಗ

**ಶ್ರೀ ಮಹಾದೇವ ಉವಾಚ-**
**ಅಥ ತೇ ಕೌತುಕಾವಿಷ್ಟಾಃ ಸಂಪಾತಿಂ ಸರ್ವವಾನರಾಃ ।**
**ಪಪ್ರಚ್ಛುರ್ಭಗವನ್ ಬ್ರೂಹಿ ಸ್ವಮುದಂತಂ ತ್ವಮಾದಿತಃ ॥ ೧ ॥**
**ಸಂಪಾತಿಃ ಕಥಯಾಮಾಸ ಸ್ವವೃತ್ತಾಂತಂ ಪುರಾಕೃತಮ್ ।**
**ಅಹಂ ಪುರಾ ಜಟಾಯುಶ್ಚ ಭ್ರಾತರೌ ರೂಢಯೌವನೌ ॥ ೨ ॥**
**ಬಲೇನ ದರ್ಪಿತಾವಾವಾಂ ಬಲಜಿಜ್ಞಾಸಯಾ ಖಗೌ ।**
**ಸೂರ್ಯಮಂಡಲಪರ್ಯಂತಂ ಗಂತುಮುತ್ಪತಿತೌ ಮದಾತ್ ॥ ೩ ॥**

ಶ್ರೀ ಮಹಾದೇವನಿಂತೆಂದನು : - ಅನಂತರ ಕುತೂಹಲಾವಿಷ್ಟರಾದ ಎಲ್ಲಾ ಕಪಿಗಳೂ ಸಂಪಾತಿಯನ್ನು ಕುರಿತು ಹೀಗೆಂದು ಕೇಳಿದರು - 'ಪೂಜ್ಯನೆ, ನೀನು ನಿನ್ನ ವೃತ್ತಾಂತವನ್ನು ಪ್ರಾರಂಭದಿಂದಲೂ ಹೇಳುವವನಾಗು.' ಆಗ ಸಂಪಾತಿಯು ತಾನು ಹಿಂದೆ ಮಾಡಿದ್ದನ್ನು ಹೇಳತೊಡಗಿದನು. ನಾನು ಹಾಗೂ ಜಟಾಯು- ಇಬ್ಬರು ಸೋದರರು ಯೌವನಮದಾವಿಷ್ಟರಾಗಿ, ಬಲದಿಂದ ಕೊಬ್ಬಿ ಯಾರು ಹೆಚ್ಚು

ಬಲಿಷ್ಠರೆಂಬುದನ್ನು ನಿರ್ಣಯಿಸಲೋಸುಗ ಸೂರ್ಯಮಂಡಲದವರೆಗೂ ಹೋಗಲು ಮದವೇರಿ ಮೇಲೆ ಹಾರಿದೆವು.

**ಬಹುಯೋಜನಸಾಹಸ್ರಂ ಗತೌ ತತ್ರ ಪ್ರತಾಪಿತಃ ।**
**ಜಟಾಯುಸ್ತಂ ಪರಿತ್ರಾತುಂ ಪಕ್ಷೈರಾಚ್ಛಾದ್ಯ ಮೋಹತಃ ॥ ೪ ॥**
**ಸ್ಥಿತೋಽಹಂ ರಶ್ಮಿಭಿರ್ದಗ್ಧಪಕ್ಷೋಽಸ್ಮಿನ್ ವಿಂಧ್ಯಮೂರ್ಧನಿ ।**
**ಪತಿತೋ ದೂರಪತನಾತ್ ಮೂರ್ಛಿತೋಽಹಂ ಕಪೀಶ್ವರಾಃ ॥ ೫ ॥**
**ದಿನತ್ರಯಾತ್ ಪುನಃ ಪ್ರಾಣಸಹಿತೋ ದಗ್ಧಪಕ್ಷಕಃ ।**
**ದೇಶಂ ವಾ ಗಿರಿಕೂಟಾನ್ ವಾ ನ ಜಾನೇ ಭ್ರಾಂತಮಾನಸಃ ॥ ೬ ॥**

೪-೬. ನಾವಿಬ್ಬರೂ ಸಹಸ್ರಾರು ಯೋಜನಗಳ ದೂರ ಹೋದವರಾಗಿ ಅಲ್ಲಿ ನಾನು ಜಟಾಯುವು ಸೂರ್ಯಕಿರಣಗಳಿಂದ ಸುಡಲ್ಪಡುತ್ತಿರುವಾಗ ಅವನನ್ನು ಕಾಪಾಡುವದಕ್ಕಾಗಿ ಅವಿವೇಕದಿಂದ (ಮುಂದಿನ ಪರಿಣಾಮವನ್ನರಿಯದೆ) ರೆಕ್ಕೆಗಳಿಂದ ಮುಚ್ಚಿದವನಾಗಿ ಇದ್ದೆನು. ಆಗ ಸೂರ್ಯಕಿರಣಗಳಿಂದ ಸುಡಲ್ಪಟ್ಟ ರೆಕ್ಕೆಯುಳ್ಳವನಾಗಿ ಈ ವಿಂಧ್ಯಪರ್ವತದ ಮೇಲೆ ಬಿದ್ದು ಬಹಳ ಎತ್ತರ ಹಾರಿದ್ದರ ನಿಮಿತ್ತ ಮೂರ್ಛಿತನಾದೆನು. ಎಲೈ ಕಪಿಶ್ರೇಷ್ಠರೆ, ಮೂರುದಿನಗಳ ಅನಂತರ ಮತ್ತೆ ಪ್ರಾಣವು ಕೂಡಿಕೊಂಡಾಗ ಸುಟ್ಟ ರೆಕ್ಕೆಗಳ ನಾನು ಭ್ರಾಂತನಾಗಿ ಬೆಟ್ಟಗಳ ಕೂಟವನ್ನಾಗಲಿ, ದೇಶವನ್ನಾಗಲಿ, ಅರಿಯಲಾರದೆ ಹೋದೆನು.

**ಶನೈರುನ್ಮೀಲ್ಯ ನಯನೇ ದೃಷ್ಟ್ವಾ ತತ್ರಾಶ್ರಮಂ ಶುಭಮ್ ।**
**ಶನೈಃ ಶನೈರಾಶ್ರಮಸ್ಯ ಸಮೀಪಂ ಗತವಾನಹಮ್ ॥ ೭ ॥**
**ಚಂದ್ರಮಾ ನಾಮ ಮುನಿರಾಟ್ ದೃಷ್ಟ್ವಾ ಮಾಂ ವಿಸ್ಮಿತೋಽವದತ್ ।**
**ಸಂಪಾತೇ ಕಿಮಿದಂ ತೇಽದ್ಯ ವಿರೂಪಂ ಕೇನ ವಾ ಕೃತಮ್ ॥ ೮ ॥**
**ಜಾನಾಮಿ ತ್ವಾಮಹಂ ಪೂರ್ವಮತ್ಯಂತಬಲವಾನಸಿ ।**
**ದಗ್ಧೌ ಕಿಮರ್ಥಂ ತೇ ಪಕ್ಷೌ ಕಥ್ಯತಾಂ ಯದಿ ಮನ್ಯಸೇ ॥ ೯ ॥**

೭-೯. ಮೆಲ್ಲನೆ ಕಣ್ಣು ತೆರೆದು ನೋಡಲಾಗಿ ಅಲ್ಲಿ ಒಂದು ಆಶ್ರಮವು ಗೋಚರಿಸಿತು. ನಿಧಾನವಾಗಿ ಆಶ್ರಮದ ಸಮೀಪಕ್ಕೆ ಹೋದೆನು. ಅಲ್ಲಿದ್ದ ಚಂದ್ರಮನೆಂಬ ಒಬ್ಬ ಮುನಿಶ್ರೇಷ್ಠರು ನನ್ನನ್ನು ಕಂಡು ಆಶ್ಚರ್ಯಭರಿತನಾಗಿ ''ಎಲೈ ಸಂಪಾತಿಯೆ, ಇದೇನು ? ಈ ವಿಕೃತರೂಪವು ನಿನಗೆ ಯಾರಿಂದ ಮಾಡಲ್ಪಟ್ಟಿತು ? - ನಾನಾದರೋ ನಿನ್ನನ್ನು ಈ ಮುಂಚೆಯೇ ಬಲ್ಲೆನು. ಆಗ ಬಹಳ ಬಲಿಷ್ಠನಾಗಿದ್ದೆಯಲ್ಲವೆ? ನಿನ್ನ ರೆಕ್ಕೆಗಳು ಏಕೆ ಸುಡಲ್ಪಟ್ಟವು ? ಗೊತ್ತಿದ್ದರೆ ಹೇಳು'' ಎಂದನು.

**ತತಃ ಸ್ವಚೇಷ್ಟಿತಂ ಸರ್ವಂ ಕಥಯಿತ್ವಾತಿದುಃಖಿತಃ ।**
**ಅಬ್ರವಂ ಮುನಿಶಾರ್ದೂಲಂ ದಹ್ಯೇಽಹಂ ದಾವವಹ್ನಿನಾ ॥ ೧೦ ॥**
**ಕಥಂ ಧಾರಯಿತುಂ ಶಕ್ತೋ ವಿಪಕ್ಷೋ ಜೀವಿತುಂ ಪ್ರಭೋ ।**
**ಇತ್ಯುಕ್ತೋಽಥ ಮುನಿರ್ವೀಕ್ಷ್ಯ ಮಾಂ ದಯಾರ್ದ್ರವಿಲೋಚನಃ ॥ ೧೧ ॥**
**ಶೃಣು ವತ್ಸ ವಚೋ ಮೇಽದ್ಯ ಶ್ರುತ್ವಾ ಕುರು ಯಥೇಪ್ಸಿತಮ್ ।**

೧೦-೧೧. ಅನಂತರ ನನ್ನ ಕಾರ್ಯಗಳೆಲ್ಲವನ್ನೂ ಆತನಿಗೆ ತಿಳಿಸಿ ಬಹಳ ದುಃಖಗೊಂಡವನಾಗಿ ಮುನಿಶ್ರೇಷ್ಠನನ್ನು ಕುರಿತು ಹೀಗೆಂದೆನು : 'ಪ್ರಭುವೆ, ನಾನು ಕಾಡುಕಿಚ್ಚಿನಲ್ಲಿ ಬಿದ್ದು ಸಾಯುವೆನು ; ಏಕೆಂದರೆ ರೆಕ್ಕೆಗಳಿಲ್ಲದೆ ಜೀವನವನ್ನು ಹೇಗೆ ಸಾಗಿಸಲಿ?' ಹೀಗೆನ್ನಲು ಆ ಮುನಿಯು ಕರುಣಾಪೂರ್ಣವಾದ ಕಣ್ಣುಗಳಿಂದ ನನ್ನನ್ನು ನೋಡಿ 'ಅಪ್ಪಾ ಮಗು, ನನ್ನ ಮಾತನ್ನು ಕೇಳು, ಆಮೇಲೆ ನಿನಗೆ ಇಷ್ಟಬಂದಂತೆ ಮಾಡು' - ಎಂದನು.

**ದೇಹಮೂಲಮಿದಂ ದುಃಖಂ ದೇಹಃ ಕರ್ಮಸಮುದ್ಭವಃ ।**
**ಕರ್ಮ ಪ್ರವರ್ತತೇ ದೇಹೇಽಹಂಬುದ್ಧ್ಯಾ ಪುರುಷಸ್ಯ ಹಿ ॥ ೧೨ ॥**
**ಅಹಂಕಾರಸ್ತ್ವನಾದಿಃ ಸ್ಯಾದವಿದ್ಯಾಸಂಭವೋ ಜಡಃ ।**
**ಚಿಚ್ಛಾಯಯಾ ಸದಾ ಯುಕ್ತಃ ತಪ್ತಾಯಃಪಿಂಡವತ್ ಸದಾ ॥ ೧೩ ॥**
**ತೇನ ದೇಹಸ್ಯ ತಾದಾತ್ಮ್ಯಾತ್ ದೇಹಶ್ಚೇತನವಾನ್ ಭವೇತ್ ।**
**ದೇಹೋಽಹಮಿತಿ ಬುದ್ಧಿಃ ಸ್ಯಾದಾತ್ಮನೋಽಹಂಕೃತೇರ್ಬಲಾತ್ ॥ ೧೪ ॥**
**ತನ್ಮೂಲ ಏಷ ಸಂಸಾರಃ ಸುಖದುಃಖಾದಿಸಾಧಕಃ ।**

೧೨-೧೩. ''ಈ ದುಃಖಕ್ಕೆಲ್ಲ ಕಾರಣವಾದದ್ದು ಶರೀರವು. ಅದಾದರೊ, ಕರ್ಮದಿಂದೆ ಹುಟ್ಟಿರುತ್ತದೆ. ಪುರುಷನಿಗೆ ಶರೀರದಲ್ಲಿ ನಾನು- ಎಂಬ ಬುದ್ಧಿಯುಂಟಾಗ ಲಾಗಿ ಕರ್ಮವು ಆರಂಭವಾಗುವದು. ಈ ನಾನು ಎಂಬ 'ಅಹಂಕಾರ'ವಾದರೊ, ಅವಿದ್ಯೆ ಯಿಂದ ಹುಟ್ಟಿದ್ದು, ತಾನು ಜಡವಾಗಿದ್ದರೂ ಬೆಂಕಿಯಿಂದ ಕಾಯಿಸಿದ ಕಬ್ಬಿಣದ ಚೆಂಡಿ ನಂತೆ ಚಿತ್ - ವಸ್ತುವಿನ ಆಭಾಸದಿಂದ ಕೂಡಿರುತ್ತದೆ. ಇದರೊಡನೆ ಬೆರೆತದ್ದರಿಂದ ದೇಹವು ಚೇತನವೆನಿಸುತ್ತದೆ. ಅಹಂಕಾರದ ಬಲದಿಂದ ದೇಹವು ನಾನೆಂಬ ಬುದ್ಧಿ ಯುಂಟಾಗುವದು. ಸುಖದುಃಖಾದಿಗಳಿಗೆ ಆಶ್ರಯವಾಗಿರುವ ಈ ಸಂಸಾರವೆಲ್ಲವೂ ಅಹಂಕಾರ - ದೇಹತಾದಾತ್ಮ್ಯದಿಂದಲೇ ಆಗಿರುವದು.

**ಆತ್ಮನೋ ನಿರ್ವಿಕಾರಸ್ಯ ಮಿಥ್ಯಾ ತಾದಾತ್ಮ್ಯತಃ ಸದಾ ।**
**ದೇಹೋಽಹಂ ಕರ್ಮಕರ್ತಾಹಮಿತಿ ಸಂಕಲ್ಪ್ಯ ಸರ್ವದಾ ॥ ೧೫ ॥**

**ಜೀವಃ ಕರೋತಿ ಕರ್ಮಾಣಿ ತತ್ಫಲೈರ್ಬಧ್ಯತೇಽವಶಃ ।**
**ಊರ್ಧ್ವಾಧೋ ಭ್ರಮತೇ ನಿತ್ಯಂ ಪಾಪಪುಣ್ಯಾತ್ಮಕಃ ಸ್ವಯಮ್ ॥ ೧೬ ॥**
**ಕೃತಂ ಮಯಾಧಿಕಂ ಪುಣ್ಯಂ ಯಜ್ಞದಾನಾದಿ ನಿಶ್ಚಿತಮ್ ।**
**ಸ್ವರ್ಗಂ ಗತ್ವಾ ಸುಖಂ ಭೋಕ್ಷ್ಯೇ ಇತಿ ಸಂಕಲ್ಪವಾನ್ ಭವೇತ್ ॥ ೧೭ ॥**

•೧೫-೧೭. ನಿರ್ವಿಕಾರನಾದ ಆತ್ಮನಿಗೆ ದೇಹಾದಿಗಳೊಡನೆ ಸುಳ್ಳಾದ ತಾನೆಂಬ ಅಭಿಮಾನದ ನಿಮಿತ್ತ ಯಾವಾಗಲೂ 'ನಾನು ದೇಹವು ; ನಾನು ಕರ್ಮವನ್ನು ಮಾಡುವವನು;' ಎಂದು ಸಂಕಲ್ಪಿಸಿಕೊಂಡು ಜೀವನು ಕರ್ಮಗಳನ್ನು ಮಾಡುವನು. ಅನಂತರ ಆ ಕರ್ಮಫಲಗಳಿಗೆ ಯತ್ನವಿಲ್ಲದೆ ಕಟ್ಟುಬೀಳುವನು. ತಾನು ಪಾಪಪುಣ್ಯಗಳ ಕರ್ತೃವಾದದ್ದರ ಫಲವಾಗಿ ಯಾವಾಗಲೂ ಮೇಲಕ್ಕೂ ಕೆಳಕ್ಕೂ ಸಂಚರಿಸುವನು. 'ನಾನು ನಿಶ್ಚಯವಾಗಿಯೂ ಯಜ್ಞದಾನಾದಿರೂಪವಾದ ಹೆಚ್ಚಿನ ಪುಣ್ಯವನ್ನು ಮಾಡಿರುವೆನು. ಆದ್ದರಿಂದ ಸ್ವರ್ಗಕ್ಕೆ ಹೋಗಿ ಸುಖವನ್ನನುಭವಿಸುವೆನು' - ಎಂದು ತೀರ್ಮಾನಿಸುತ್ತಾನೆ.

**ತಥೈವಾಧ್ಯಾಸತಸ್ತತ್ರ ಚಿರಂ ಭುಕ್ತ್ವಾ ಸುಖಂ ಮಹತ್ ।**
**ಕ್ಷೀಣಪುಣ್ಯಃ ಪತತ್ಯರ್ವಾಕ್ ಅನಿಚ್ಛನ್ ಕರ್ಮಚೋದಿತಃ ॥ ೧೮ ॥**
**ಪತಿತ್ವಾ ಮಂಡಲೇ ಚೇಂದೋಸ್ತತೋ ನೀಹಾರಸಂಯುತಃ ।**
**ಭೂಮೌ ಪತಿತ್ವಾ ವ್ರೀಹ್ಯಾದೌ ತತ್ರ ಸ್ಥಿತ್ವಾ ಚಿರಂ ಪುನಃ ॥ ೧೯ ॥**
**ಭೂತ್ವಾ ಚತುರ್ವಿಧಂ ಭೋಜ್ಯಂ ಪುರುಷೈರ್ಭುಜ್ಯತೇ ತತಃ ।**

೧೮-೧೯. ಹಾಗೆಯೇ ಅಧ್ಯಾಸ ಎಂದರೆ ತಪ್ಪುತಿಳಿವಳಿಕೆಯಿಂದ ಆ (ಸ್ವರ್ಗದಲ್ಲಿ) ಹೆಚ್ಚಿನ ಸುಖವನ್ನು ಬಹುಕಾಲ ಅನುಭವಿಸಿ ಪುಣ್ಯವು ಸವೆಯಲಾಗಿ ಕರ್ಮಪ್ರೇರಿತನಾಗಿ ತಾನು ಇಚ್ಛೆಪಡದೆ ಇದ್ದರೂ ತಲೆಕೆಳಗಾಗಿ ಬೀಳುವನು. ಹಾಗೆ ಬೀಳುವಾಗ ಚಂದ್ರಮಂಡಲವನ್ನು ಸೇರಿ ಅಲ್ಲಿ ಹಿಮವಾಗಿ ಹನಿಯ ರೂಪದಿಂದ ಭೂಮಿಯಲ್ಲಿ ಬಿದ್ದು ಬತ್ತವೇ ಮುಂತಾದ (ಧಾನ್ಯಗಳಲ್ಲಿ) ಬಹಳಕಾಲವಿದ್ದುಕೊಂಡು ನಾಲ್ಕುವಿಧವಾದ (ಭಕ್ಷ್ಯ-ಭೋಜ್ಯ-ಲೇಹ್ಯ- ಚೋಷ್ಯ)ಗಳೆಂಬ ತಿನ್ನುವ ಪದಾರ್ಥಗಳಾಗಿ ಮನುಷ್ಯರಿಂದ ಭಕ್ಷಿಸಲ್ಪಡುವನು.

**ರೇತೋ ಭೂತ್ವಾ ಪುನಸ್ತೇನ ಋತೌ ಸ್ತ್ರೀಯೋನಿಸಿಂಚಿತಃ ।**
**ಯೋನಿರಕ್ತೇನ ಸಂಯುಕ್ತಂ ಜರಾಯುಪರಿವೇಷ್ಟಿತಮ್ ॥ ೨೦ ॥**
**ದಿನೇನೈಕೇನ ಕಲಲಂ ಭೂತ್ವಾ ರೂಢತ್ವಮಾಪ್ನುಯಾತ್ ।**
**ತತ್ಪುನಃ ಪಂಚರಾತ್ರೇಣ ಬುದ್ಬುದಾಕಾರತಾಮಿಯಾತ್ ॥ ೨೧ ॥**
**ಸಪ್ತರಾತ್ರೇಣ ತದಪಿ ಮಾಂಸಪೇಶಿತ್ವಮಾಪ್ನುಯಾತ್ ।**

**ಪಕ್ಷಮಾತ್ರೇಣ ಸಾ ಪೇಶೀ ರುಧಿರೇಣ ಪರಿಪ್ಲುತಾ ॥ ೨೨ ॥**
**ತಸ್ಯಾ ಏವಾಂಕುರೋತ್ಪತ್ತಿಃ ಪಂಚವಿಂಶತಿರಾತ್ರಿಷು ।**

೨೦-೨೨. ಮನುಷ್ಯನ ಶರೀರದಲ್ಲಿ ರೇತಸ್ಸಾಗಿ ಪರಿವರ್ತನೆಯನ್ನು ಹೊಂದಿ ಋತುಮತಿಯಾದಾಗ ಹೆಂಗಸಿನ ಯೋನಿಯಲ್ಲಿ ಸುರಿಯಲ್ಪಟ್ಟವನಾಗಿ ಯೋನಿರಕ್ತ ದೊಡನೆ ಕೂಡಿ ಗರ್ಭವನ್ನು ಆವರಿಸಿರುವ ಕೋಶದಲ್ಲಿ ಒಂದು ದಿನ ಕಲಲ (ಕೆಸರಿ ನಂಥ) ರೂಪವನ್ನು ಹೊಂದುವನು. ಅದು ಮತ್ತೆ ಐದು ರಾತ್ರಿಗಳು ಕಳೆಯಲಾಗಿ ನೀರಿನ ಗುಳ್ಳೆಯ ಆಕಾರವನ್ನು ಹೊಂದುವದು. ಏಳು ರಾತ್ರೆಗಳಿಗೆ ಅದು ಕೂಡ ಮಾಂಸದ ಮುದ್ದೆಯಾಗುವದು. ಹದಿನೈದು ದಿನಗಳಿಗೆ ಆ ಪಿಂಡವು ರಕ್ತದೊಡಗೂಡಿ ಇಪ್ಪತ್ತೈದು ರಾತ್ರಿಗಳೊಳಗೆ ಮೊಳಕೆಯಾಗುವದು.

**ಗ್ರೀವಾ ಶಿರಶ್ಚ ಸ್ಕಂಧಶ್ಚ ಪೃಷ್ಠವಂಶಸ್ತಥೋದರಮ್ ।**
**ಪಂಚಧಾಂಗಾನಿ ಚೈಕೈಕಂ ಜಾಯನ್ತೇ ಮಾಸತಃ ಕ್ರಮಾತ್ ॥ ೨೩ ॥**
**ಪಾಣಿಪಾದೌ ತಥಾ ಪಾರ್ಶ್ವಾಃ ಕಟಿರ್ಜಾನು ತಥೈವ ಚ ।**
**ಮಾಸದ್ವಯಾತ್ ಪ್ರಜಾಯನ್ತೇ ಕ್ರಮೇಣೈವ ನ ಚಾನ್ಯಥಾ ॥ ೨೪ ॥**
**ತ್ರಿಭಿರ್ಮಾಸೈಃ ಪ್ರಜಾಯನ್ತೇ ಅಂಗಾನಾಂ ಸಂಧಯಃ ಕ್ರಮಾತ್ ।**
**ಸರ್ವಾಂಗುಲ್ಯಃ ಪ್ರಜಾಯನ್ತೇ ಕ್ರಮಾನ್ಮಾಸಚತುಷ್ಟಯೇ ॥ ೨೫ ॥**

೨೩-೨೫. ಕತ್ತು, ತಲೆ, ಹೆಗಲು, ಬೆನ್ನಿನ ಹುರಿ, ಹೊಟ್ಟೆ - ಹೀಗೆ ಐದು ವಿಧ ವಾದ ಅಂಗಗಳು ಒಂದೊಂದಾಗಿ ತಿಂಗಳುಕಾಲದಷ್ಟು ಸಮಯದಲ್ಲಿ ಕ್ರಮದಿಂದ ಹುಟ್ಟುವವು. ಅನಂತರ ಕೈ, ಕಾಲು, ಪಕ್ಕೆಗಳು, ಸೊಂಟ, ಮಂಡಿ - ಇವು ಕ್ರಮವಾಗಿ ಎರಡು ತಿಂಗಳುಗಳಿಗೆ ಹುಟ್ಟುವವು. ಮೂರು ತಿಂಗಳುಗಳಿಗೆ ಕೀಲುಗಳೂ ಕೈಕಾಲು ಬೆರಳುಗಳು ನಾಲ್ಕು ತಿಂಗಳಿಗೂ ಉಂಟಾಗುವವು.

**ನಾಸಾ ಕರ್ಣೌ ಚ ನೇತ್ರೇ ಚ ಜಾಯಂತೇ ಪಂಚಮಾಸತಃ ।**
**ದಂತಪಂಕ್ತಿರ್ನಖಾ ಗುಹ್ಯಂ ಪಂಚಮೇ ಜಾಯತೇ ತಥಾ ॥ ೨೬ ॥**
**ಅರ್ವಾಕ್ ಷಣ್ಮಾಸತಃ ಛಿದ್ರಂ ಕರ್ಣಯೋರ್ಭವತಿ ಸ್ಫುಟಮ್ ॥**
**ಪಾಯುರ್ಮೇಢ್ರಮುಪಸ್ಥಂ ಚ ನಾಭಿಶ್ಚಾಪಿ ಭವೇನ್ನೃಣಾಮ್ ॥ ೨೭ ॥**
**ಸಪ್ತಮೇ ಮಾಸಿ ರೋಮಾಣಿ ಶಿರಃ ಕೇಶಾಸ್ತಥೈವ ಚ ।**
**ವಿಭಕ್ತಾವಯವತ್ವಂ ಚ ಸರ್ವಂ ಸಂಪದ್ಯತೇಽಷ್ಟಮೇ ॥ ೨೮ ॥**
**ಜಠರೇ ವರ್ಧತೇ ಗರ್ಭಃ ಸ್ತ್ರಿಯಾ ಏವಂ ವಿಹಂಗಮ ।**

೨೬-೨೮. ಮೂಗು, ಕಿವಿ- ಇವು ಐದನೆಯ ತಿಂಗಳಿನಲ್ಲಿಯೂ ಹಲ್ಲಿನ ಸಾಲು (ವಸಡು) ಗಳು, ಉಗುರು, ರಹಸ್ಯೇಂದ್ರಿಯವೂ ಸಹ ಆಗಲೆ ಉಂಟಾಗುವದು.

ಆ ತಿಂಗಳಿನ ಅನಂತರ ಕಿವಿಯ ರಂಧ್ರಗಳು ಸ್ಫುಟವಾಗಿ ರೂಪುಗೊಳ್ಳುವವು. ಹಾಗೂ ಪಾಯು, ಮಲ ಮೂತ್ರವಿಸರ್ಜನಾಂಗಗಳು, ಹೊಕ್ಕುಳು ಸಹ ಅಭಿವ್ಯಕ್ತವಾಗುವವು. ಏಳನೆಯ ತಿಂಗಳಿನಲ್ಲಿ ತಲೆಯ ಕೂದಲುಗಳು, ಮೈಗೂದಲು ಉಂಟಾಗಿ ಎಲ್ಲಾ ಅವಯವಗಳೂ ಬಿಡಿಬಿಡಿಯಾಗಿ ಕಾಣಿಸಿಕೊಂಡು ಎಂಟನೆಯ ತಿಂಗಳಿಗೆ ಸರ್ವವೂ ಸಿದ್ಧವಾಗುವದು ಎಲೈ ಪಕ್ಷಿಯೆ, ಹೀಗೆ ಹೆಂಗಸಿನ ಹೊಟ್ಟೆಯಲ್ಲಿ ಗರ್ಭವು ಬೆಳೆಯುತ್ತದೆ.

**ಪಂಚಮೇ ಮಾಸಿ ಚೈತನ್ಯಂ ಜೀವಃ ಪ್ರಾಪ್ನೋತಿ ಸರ್ವಶಃ ।**
**ನಾಭಿಸೂತ್ರಾಲ್ಪರಂಧ್ರೇಣ ಮಾತೃಭುಕ್ತಾನ್ನಸಾರತಃ ॥ ೨೯ ॥**
**ವರ್ಧತೇ ಗರ್ಭಗಃ ಪಿಂಡೋ ನ ಮ್ರಿಯೇತ ಸ್ವಕರ್ಮತಃ ।**
**ಸ್ಮೃತ್ವಾ ಸರ್ವಾಣಿ ಜನ್ಮಾನಿ ಪೂರ್ವಕರ್ಮಾಣಿ ಸರ್ವಶಃ ॥ ೩೦ ॥**
**ಜಠರಾನಲತಪ್ತೋಽಯಮಿದಂ ವಚನಮಬ್ರವೀತ್ ।**

೨೯-೩೦. ತಾಯಿಯು ಮಾಡುವ ಊಟದ ಅನ್ನಸಾರದಿಂದ ಹೊಕ್ಕಳು ದಾರದಲ್ಲಿರುವ ತೂತಿನ ಮೂಲಕ ಐದನೆಯ ತಿಂಗಳಿನಲ್ಲಿ ಜೀವನು ಎಲ್ಲಾ ರೀತಿ ಯಿಂದಲೂ ಚೈತನ್ಯವನ್ನು ಪಡೆಯುತ್ತಾನೆ. ಗರ್ಭದಲ್ಲಿರುವ ಪಿಂಡವು ತನ್ನ ಕರ್ಮಾನು ಗುಣವಾಗಿ ಸಾಯದೆ ಬೆಳೆಯುತ್ತದೆ. ಆಗ ಹಿಂದಿನ ಜನ್ಮಗಳಲ್ಲಿ ಮಾಡಿದ ಎಲ್ಲಾ ಪೂರ್ವ ಕರ್ಮದ ಸ್ಮರಣೆಯುಂಟಾಗುವದು. ಜಠರಾಗ್ನಿಯ ತಾಪದಿಂದ ದುಃಖಿತನಾದ ಜೀವನು ಹೀಗೆನ್ನುವನು :

**ನಾನಾಯೋನಿಸಹಸ್ರೇಷು ಜಾಯಮಾನೋಽನುಭೂತವಾನ್ ।**
**ಪುತ್ರದಾರಾದಿಸಂಬಂಧಂ ಕೋಟಿಶಃ ಪಶುಬಾಂಧವಾನ್ ॥ ೩೧ ॥**
**ಕುಟುಂಬಭರಣಾಸಕ್ತ್ಯಾ ನ್ಯಾಯಾನ್ಯಾಯೈಃ ಧನಾರ್ಜನಮ್ ।**
**ಕೃತಂ ನಾಕರವಂ ವಿಷ್ಣುಚಿಂತಾಂ ಸ್ವಪ್ನೇಽಪಿ ದುರ್ಭಗಃ ॥ ೩೨ ॥**

೩೧-೩೨. ಅನೇಕ ಸಹಸ್ರಾರು ಜೀವಿಗಳಲ್ಲಿ ಹುಟ್ಟಿ ಮಗ, ಹೆಂಡತಿ, ಪಶುಗಳು, ಬಂಧುಗಳು - ಹೀಗೆ ಕೋಟಿಗಟ್ಟಲೆಯ ಜನರ ಸಂಬಂಧವನ್ನು ಈವರೆಗೆ ಅನುಭವಿಸಿದೆನು. ನ್ಯಾಯವೊ, ಅನ್ಯಾಯವೊ - ಕುಟುಂಬವನ್ನು ಕಾಪಾಡಿಕೊಳ್ಳುವ ಆಸೆ ಯಿಂದ ಹಣವನ್ನು ಸಂಪಾದಿಸಿದೆನು. ಪಾಪಿಯಾದ ನಾನು ಕನಸಿನಲ್ಲಿಯೂ ವಿಷ್ಣುವಿನ ಸ್ಮರಣೆಯನ್ನು ಮಾಡದೆ ಹೋದೆನು.

**ಇದಾನೀಂ ತತ್ಫಲಂ ಭುಂಜೇ ಗರ್ಭದುಃಖಂ ಮಹತ್ತರಮ್ ।**
**ಅಶಾಶ್ವತೇ ಶಾಶ್ವತವದ್ ದೇಹೇ ತೃಷ್ಣಾಸಮನ್ವಿತಃ ॥ ೩೩ ॥**
**ಅಕಾರ್ಯಾಣ್ಯೇವ ಕೃತವಾನ್ ನ ಕೃತಂ ಹಿತಮಾತ್ಮನಃ ।**
**ಇತ್ಯೇವಂ ಬಹುಧಾ ದುಃಖಮನುಭೂಯ ಸ್ವಕರ್ಮತಃ ॥ ೩೪ ॥**

**ಕದಾ ನಿಷ್ಕ್ರಮಣಂ ಮೇ ಸ್ಯಾತ್ ಗರ್ಭಾನ್ನಿರಯಸನ್ನಿಭಾತ್ ।**
**ಇತ ಊರ್ಧ್ವಂ ನಿತ್ಯಮಹಂ ವಿಷ್ಣುಮೇವಾನುಪೂಜಯೇ ॥ ೩೫ ॥**

೩೩-೩೫. ''ಈಗ ಬಹಳ ದಾರುಣವಾದ ಗರ್ಭವಾಸದುಃಖವನ್ನು (ಆ ವಿಷ್ಣುವನ್ನು ಮರೆತದ್ದರ) ಫಲವಾಗಿ ಅನುಭವಿಸುತ್ತಿರುವೆನು. ಅನಿತ್ಯವಾದ ಈ ದೇಹದಲ್ಲಿ ನಿತ್ಯವೆಂಬ ಭಾವನೆಯಿಂದ ಕೂಡಿ ಆಸೆಗೆ ಒಳಗಾಗಿ ಮಾಡಬಾರದ್ದನ್ನೇ ಮಾಡಿದೆನು. ನನ್ನ ಹಿತಕ್ಕೆ ತಕ್ಕದ್ದನ್ನು ಮಾಡಿಕೊಳ್ಳಲಿಲ್ಲ.'' ಹೀಗೆಂದು ತನ್ನ ಕರ್ಮಾನುಗುಣವಾಗಿ ಬಹಳ ದುಃಖಗಳನ್ನು ಅನುಭವಿಸಿ ''ನರಕಸದೃಶವಾದ ಈ ಗರ್ಭದಿಂದ ನನಗೆ ಯಾವಾಗ ಬಿಡುಗಡೆಯಾದೀತು ? ಇನ್ನು ಮುಂದೆ ನಾನು ಯಾವಾಗಲೂ ವಿಷ್ಣುವನ್ನೇ ಪೂಜಿಸುವೆನು'' (ಎಂದು ಚಿಂತಿಸುವನು.)

**ಇತ್ಯಾದಿ ಚಿಂತಯನ್ ಜೀವೋ ಯೋನಿಯಂತ್ರಪ್ರಪೀಡಿತಃ ।**
**ಜಾಯಮಾನೋಽತಿದುಃಖೇನ ನರಕಾತ್ ಪಾತಕೀ ಯಥಾ ॥ ೩೬ ॥**
**ಪೂತಿವ್ರಣಾನ್ನಿಪತಿತಃ ಕ್ರಿಮಿರೇಷ ಇವಾಪರಃ ।**
**ತತೋ ಬಾಲ್ಯಾದಿ ದುಃಖಾನಿ ಸರ್ವ ಏವಂ ವಿಭುಂಜತೇ ॥ ೩೭ ॥**

೩೬-೩೭. ಹೀಗೆಲ್ಲ ಯೋಚಿಸುತ್ತಾ ಜೀವನು ಬಹಳ ಕಷ್ಟದಿಂದ - ಪಾಪಿಯು ನರಕದಿಂದ ಹಿಂದಿರುಗುವಂತೆ - ಯೋನಿಯೆಂಬ ಯಂತ್ರದಿಂದ ಹಿಂಸಿಸಲ್ಪಟ್ಟವನಾಗಿ - ಕೀವುತುಂಬಿದ ಹುಣ್ಣಿನಿಂದ ಕ್ರಿಮಿಯು ಹೊರಬರುವಂತೆ - ಜನ್ಮವನ್ನು ಪಡೆಯುವನು. ಅನಂತರ ಬಾಲ್ಯವೇ ಮುಂತಾದ ದುಃಖಗಳನ್ನೂ ಎಲ್ಲವನ್ನೂ ಅನುಭವಿಸುವನು.

**ತ್ವಯಾ ಚೈವಾನುಭೂತಾನಿ ಸರ್ವತ್ರ ವಿದಿತಾನಿ ಚ ।**
**ನ ವರ್ಣಿತಾನಿ ಮೇ ಗೃಧ್ರ ಯೌವನಾದಿಷು ಸರ್ವತಃ ॥ ೩೮ ॥**
**ಏವಂ ದೇಹೋಽಹಮಿತ್ಯಸ್ಮಾದಭ್ಯಾಸಾನ್ನಿರಯಾದಿಕಮ್ ।**
**ಗರ್ಭವಾಸಾದಿದುಃಖಾನಿ ಭವನ್ತ್ಯಭಿನಿವೇಶತಃ ॥ ೩೯ ॥**
**ತಸ್ಮಾದ್ದೇಹದ್ವಯಾದನ್ಯಮಾತ್ಮಾನಂ ಪ್ರಕೃತೇಃ ಪರಮ್ ।**
**ಜ್ಞಾತ್ವಾ ದೇಹಾದಿಮಮತಾಂ ತ್ಯಕ್ತ್ವಾತ್ಮಜ್ಞಾನವಾನ್ ಭವೇತ್ ॥ ೪೦ ॥**

೩೮-೪೦. ಎಲೈ ಹದ್ದೇ, ಎಲ್ಲರಿಗೂ ಗೊತ್ತಿರುವ ಯೌವನಾದಿ ದುಃಖಗಳನ್ನು ನೀನೂ ಅನುಭವಿಸಿಯೇ ಇರುವೆಯಾದ್ದರಿಂದ ನಾನು ವರ್ಣಿಸಲಿಲ್ಲ. ಹೀಗೆ 'ದೇಹವೇ ನಾನು' ಎಂಬ ತಪ್ಪು ತಿಳಿವಳಿಕೆಯಿಂದ ನರಕವೂ ಗರ್ಭವಾಸಾದಿಗಳೂ ಅಭಿಮಾನದಿಂದ ಸಂಭವಿಸುತ್ತವೆ. ಆದ್ದರಿಂದ (ಸ್ಥೂಲ-ಸೂಕ್ಷ್ಮ) ಈ ಎರಡೂ

ದೇಹಗಳಿಗಿಂತ ವಿಲಕ್ಷಣನಾದ, ಪ್ರಕೃತಿಯನ್ನೂ ಮೀರಿದ ಆತ್ಮನನ್ನು ಅರಿತುಕೊಂಡು ದೇಹಾದಿಗಳಲ್ಲಿ ನಾನು ಎಂಬ ಬುದ್ಧಿಯನ್ನು ತ್ಯಾಗಮಾಡಿ ಆತ್ಮಜ್ಞಾನಿಯಾಗಬೇಕು.

**ಜಾಗ್ರದಾದಿವಿನಿರ್ಮುಕ್ತಂ ಸತ್ಯಜ್ಞಾನಾದಿಲಕ್ಷಣಮ್ ।**
**ಶುದ್ಧಂ ಬುದ್ಧಂ ಸದಾ ಶಾಂತಮಾತ್ಮಾನಮವಧಾರಯೇತ್ ॥ ೪೧ ॥**
**ಚಿದಾತ್ಮನಿ ಪರಿಜ್ಞಾತೇ ನಷ್ಟೇ ಮೋಹೇಽಜ್ಞಸಂಭವೇ ।**
**ದೇಹಃ ಪತತು ವಾರಬ್ಧಕರ್ಮವೇಗೇನ ತಿಷ್ಠತು ॥ ೪೨ ॥**
**ಯೋಗಿನೋ ನ ಹಿ ದುಃಖಂ ವಾ ಸುಖಂ ವಾಜ್ಞಾನಸಂಭವಮ್ ।**
**ತಸ್ಮಾದ್ದೇಹೇನ ಸಹಿತೋ ಯಾವತ್ ಪ್ರಾರಬ್ಧಸಂಕ್ಷಯಃ ॥ ೪೩ ॥**
**ತಾವತ್ ತಿಷ್ಠ ಸುಖೇನ ತ್ವಂ ಧೃತಕಂಚುಕಸರ್ಪವತ್ ।**

೪೧-೪೩. ಎಚ್ಚರವೇ ಮುಂತಾದ ಅವಸ್ಥೆಗಳನ್ನು ಮೀರಿದ, ಸತ್ಯಜ್ಞಾನಾದಿ ರೂಪನಾದ ಹಾಗೂ ಸದಾ ಶುದ್ಧನೂ ಬುದ್ಧನೂ ಶಾಂತನೂ ಆದ ಆತ್ಮನನ್ನು (ಅರಿತು) ನಿಶ್ಚಯಿಸಿಕೊಳ್ಳಬೇಕು. ಚಿದ್ರೂಪನಾದ ಆತ್ಮನು ಅರಿಯಲ್ಪಡಲಾಗಿ ಅಜ್ಞಾನದಿಂದಾಗಿದ್ದ ಮೋಹವು ನಾಶವಾಗಲಾಗಿ ಈ ಶರೀರವು ಬಿದ್ದಾರೂ ಬೀಳಲಿ ! ಅಥವಾ ಪ್ರಾರಬ್ಧ ಕರ್ಮದ ವೇಗದಿಂದ (ಆ ಕರ್ಮವು ಸವೆಯುವವರೆಗೆ ) ಇದ್ದುಕೊಂಡಾದರೂ ಇರಲಿ. ಏಕೆಂದರೆ ಯೋಗಿಯಾದವನಿಗೆ ಅಜ್ಞಾನನಿಮಿತ್ತವಾದ ಸುಖದುಃಖಗಳಿರುವದಿಲ್ಲವಷ್ಟೆ ! ಆದ್ದರಿಂದ ನೀನು ಪ್ರಾರಬ್ಧವು ಕಳೆಯುವವರೆಗೆ - ಪೊರೆಸಹಿತವಾದ ಹಾವು ಇರುವಂತೆ - ಸುಖವಾಗಿ ದೇಹದ ಸಮೇತವಾಗಿಯೇ ಇದ್ದುಕೊಂಡಿರು.

**ಅನ್ಯದ್ ವಕ್ಷ್ಯಾಮಿ ತೇ ಪಕ್ಷಿನ್ ಶೃಣು ಮೇ ಪರಮಂ ಹಿತಮ್ ।**
**ತ್ರೇತಾಯುಗೇ ದಾಶರಥಿಃ ಭೂತ್ವಾ ನಾರಾಯಣೋಽವ್ಯಯಃ ॥ ೪೪ ॥**
**ರಾವಣಸ್ಯ ವಧಾರ್ಥಾಯ ದಂಡಕಾನಾಗಮಿಷ್ಯತಿ ।**
**ಸೀತಯಾ ಭಾರ್ಯಯಾ ಸಾರ್ಧಂ ಲಕ್ಷ್ಮಣೇನ ಸಮನ್ವಿತಃ ॥ ೪೫ ॥**
**ತತ್ರಾಶ್ರಮೇ ಜನಕಜಾಂ ಭ್ರಾತೃಭ್ಯಾಂ ರಹಿತೇ ವನೇ ।**
**ರಾವಣಶ್ಚೌರವನ್ನೀತ್ವಾ ಲಂಕಾಯಾಂ ಸ್ಥಾಪಯಿಷ್ಯತಿ ॥ ೪೬ ॥**

೪೪-೪೬. ಎಲೈ ಪಕ್ಷಿಯೆ, ನನ್ನ ಪರಮ ಹಿತವಾದ ಈ ಮಾತನ್ನು ಹೇಳುವೆನು ಕೇಳು. ತ್ರೇತಾಯುಗದಲ್ಲಿ ಅವ್ಯಯನಾದ ನಾರಾಯಣನು ದಶರಥನ ಮಗನಾದ ರಾಮನಾಗಿ ಅವತರಿಸಿ ರಾವಣನ ವಧೆಗಾಗಿ ದಂಡಕೆಯೆಂಬ ಕಾಡಿಗೆ ಹೆಂಡತಿಯಾದ ಸೀತೆ ಹಾಗೂ ಲಕ್ಷ್ಮಣನೊಡಗೂಡಿ ಬರಲಿರುವನು. ಅಲ್ಲಿ ಆಶ್ರಮದಲ್ಲಿ ಇಬ್ಬರು ಸೋದರರೂ ಇಲ್ಲದಾಗ ಜನಕಪುತ್ರಿಯಾದ(ಸೀತೆ)ಯನ್ನು ರಾವಣನು ಕಳ್ಳನಂತೆ ಅಪಹರಿಸಿಕೊಂಡು ಹೋಗಿ ಲಂಕೆಯಲ್ಲಿಡುವನು.

**ತಸ್ಯಾಃ ಸುಗ್ರೀವನಿರ್ದೇಶಾದ್ವಾನರಾಃ ಪರಿಮಾರ್ಗಣೇ ।**
**ಆಗಮಿಷ್ಯಂತಿ ಜಲಧೇಸ್ತೀರಂ ತತ್ರ ಸಮಾಗಮಃ ॥ ೪೭ ॥**
**ತ್ವಯಾ ತೈಃ ಕಾರಣವಶಾದ್ ಭವಿಷ್ಯತಿ ನ ಸಂಶಯಃ ।**
**ತದಾ ಸೀತಾಸ್ಥಿತಿಂ ತೇಭ್ಯಃ ಕಥಯಸ್ವ ಯಥಾರ್ಥತಃ ॥ ೪೮ ॥**
**ತದೈವ ತವ ಪಕ್ಷೌ ದ್ವಾವುತ್ಪತ್ಸ್ಯೇತೇ ಪುನರ್ನವೌ ॥**

೪೭-೪೮. ಆಕೆಯನ್ನು ಹುಡುಕುವದಕ್ಕಾಗಿ ಸುಗ್ರೀವನ ಅಪ್ಪಣೆಯಂತೆ ಕಪಿಗಳು ಸಮುದ್ರತೀರಕ್ಕೆ ಬರಲಿರುವರು. ಅಲ್ಲಿ ಕಾರಣಾಂತರಗಳಿಂದ ಅವರೊಡನೆ ನಿನಗೆ ಸಮಾಗಮವಾಗುವದು. ಈ ಬಗ್ಗೆ ಸಂಶಯವಿಲ್ಲ. ಆಗ ನೀನು ಸೀತೆಯ ಇರುವಿಕೆಯನ್ನು ಇದ್ದದ್ದು ಇದ್ದಂತೆ ಅವರಿಗೆ ಹೇಳುವವನಾಗು. ಆಗಲೇ ನಿನಗೆ ಮತ್ತೆ ಎರಡು ಹೊಸ ರೆಕ್ಕೆಗಳು ಹುಟ್ಟುವವು.

**ಸಂಪಾತಿರುವಾಚ-**

**ಬೋಧಯಾಮಾಸ ಮಾಂ ಚಂದ್ರನಾಮಾ ಮುನಿಕುಲೇಶ್ವರಃ ।**
**ಪಶ್ಯಂತು ಪಕ್ಷೌ ಮೇ ಜಾತೌ ನೂತನಾವತಿಕೋಮಲೌ ॥ ೪೯ ॥**
**ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಸೀತಾಂ ದ್ರಕ್ಷ್ಯಥ ನಿಶ್ಚಯಮ್ ।**
**ಯತ್ನಂ ಕುರುಧ್ವಂ ದುರ್ಲಂಘ್ಯಸಮುದ್ರಸ್ಯ ವಿಲಂಘನೇ ॥ ೫೦ ॥**

೪೯-೫೦. ಸಂಪಾತಿಯಿಂತೆಂದನು : 'ಚಂದ್ರನೆಂಬ ಹೆಸರಿನ ಮುನಿಶ್ರೇಷ್ಠನೊಬ್ಬನು ನನಗೆ ಈ ರೀತಿಯಾಗಿ ಉಪದೇಶಿಸಿದನು. ಇದೊ, ನೋಡಿರಿ ನನಗೆ ಹೊಸತಾದ ಬಹು ಕೋಮಲವಾದ ಎರಡು ರೆಕ್ಕೆಗಳು ಹುಟ್ಟಿಯೇ ಬಿಟ್ಟಿರುತ್ತವೆ. ನಿಮಗೆಲ್ಲ ಮಂಗಳವಾಗಲಿ ! ಸೀತೆಯನ್ನು ನೀವು ಖಂಡಿತ ಕಾಣುವಿರಿ. ದಾಟಲ ಸಾಧ್ಯವೆಂತ ಕಂಡುಬರುತ್ತಿರುವ ಈ ಸಮುದ್ರವನ್ನು ಹಾರುವ ವಿಷಯಕ್ಕೆ ಪ್ರಯತ್ನ ಮಾಡಿರಿ. ನಾನು ಹೋಗಿಬರುತ್ತೇನೆ' - ಎಂದಿತು.

**ಯನ್ನಾಮಸ್ಮೃತಿಮಾತ್ರತೋಽಪರಿಮಿತಂ ಸಂಸಾರವಾರಾಂನಿಧಿಂ**
**ತೀರ್ತ್ವಾ ಗಚ್ಛತಿ ದುರ್ಜನೋಽಪಿ ಪರಮಂ ವಿಷ್ಣೋಃ ಪದಂ ಶಾಶ್ವತಮ್ ।**
**ತಸ್ಯೈವ ಸ್ಥಿತಿಕಾರಿಣಸ್ತ್ರಿಜಗತಾಂ ರಾಮಸ್ಯ ಭಕ್ತಾಃ ಪ್ರಿಯಾಃ**
**ಯೂಯಂ ಕಿಂ ನ ಸಮುದ್ರಮಾತ್ರತರಣೇ ಶಕ್ತಾಃ ಕಥಂ ವಾನರಾಃ ॥ ೫೧ ॥**

೫೧. ದುಷ್ಟನಾದವನು ಕೂಡ ಯಾವನ ನಾಮವನ್ನು ನೆನೆಸಿಕೊಂಡ ಮಾತ್ರದಿಂದ ಸಂಸಾರವೆಂಬ ಸಮುದ್ರವನ್ನು ದಾಟಿ ಶಾಶ್ವತವಾದ ಹಾಗೂ ಪರಮವಾದ ವಿಷ್ಣುವಿನ ಸ್ಥಾನವನ್ನು ಹೊಂದಬಲ್ಲನೋ ಅಂಥ, ಮೂರು ಜಗತ್ತುಗಳ ಸ್ಥಿತಿಕಾರಕನೂ

ಆದ ರಾಮನ ಪ್ರಿಯಭಕ್ತರಾದ ಎಲೈ ವಾನರರೆ, ನೀವು ಕೇವಲ (ನೀರಿನ) ಸಮುದ್ರವನ್ನು ದಾಟುವದರಲ್ಲಿ ಶಕ್ತರಾಗದೆ ಹೋಗಲು ಹೇಗೆ ಸಾಧ್ಯವಾದೀತು ?

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ**

**ಅಷ್ಟಮಃ ಸರ್ಗಃ**

------------

## ಒಂಭತ್ತನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಗತೇ ವಿಹಾಯಸಾ ಗೃಧ್ರರಾಜೇ ವಾನರಪುಂಗವಾಃ ।**
**ಹರ್ಷೇಣ ಮಹತಾವಿಷ್ಟಾಃ ಸೀತಾದರ್ಶನಲಾಲಸಾಃ ॥ ೧ ॥**
**ಊಚುಃ ಸಮುದ್ರಂ ಪಶ್ಯಂತೋ ನಕ್ರಚಕ್ರಭಯಂಕರಮ್ ।**
**ತರಂಗಾದಿಭಿರುನ್ನದ್ಧಮಾಕಾಶಮಿವ ದುರ್ಗ್ರಹಮ್ ॥ ೨ ॥**
**ಪರಸ್ಪರಮವೋಚನ್ ವೈ ಕಥಮೇನಂ ತರಾಮಹೇ ।**

೧-೨. ಶ್ರೀ ಮಹಾದೇವನಿಂತೆಂದನು : ಗೃಧ್ರರಾಜನಾದ (ಸಂಪಾತಿಯು) ಆಕಾಶಮಾರ್ಗದಿಂದ ಹಾರಿಹೋಗಲಾಗಿ ಸೀತೆಯನ್ನು ನೋಡಬೇಕೆಂದು ತವಕಿಸುವಂಥ ಕಪಿಗಳು ಬಹಳ ಸಂತೋಷದಿಂದ ಕೂಡಿದವರಾಗಿ ಸಮುದ್ರದ ಕಡೆಗೆ ನೋಡುತ್ತಾ ಹೀಗೆಂದರು : 'ಮೊಸಳೆಗಳು, ನೀರಿನ ಸುಳಿಗಳು, ಹೆದ್ದೆರಗಳಿಂದ ಕೂಡಿ ಎದ್ದು ಕುಣಿಯುತ್ತಿರುವಂತೆ ಕಂಡುಬರುವ ಹಾಗೂ ಆಕಾಶದಂತೆ ಅಳತೆಗೆ ಸಿಗದ ಈ ಸಮುದ್ರವನ್ನು ನಾವು ಹೇಗೆ ದಾಟಿಯೇವು'? ಎಂದು ಅನ್ಯೋನ್ಯವಾಗಿ ಮಾತನಾಡಿಕೊಂಡರು.

**ಉವಾಚ ಚಾಂಗದಸ್ತತ್ರ ಶೃಣುಧ್ವಂ ವಾನರೋತ್ತಮಾಃ ।**
**ಭವಂತೋಽತ್ಯಂತಬಲಿನಃ ಶೂರಾಶ್ಚ ಕೃತವಿಕ್ರಮಾಃ ॥ ೩ ॥**
**ಕೋ ವಾತ್ರ ವಾರಿಧಿಂ ತೀರ್ತ್ವಾ ರಾಜಕಾರ್ಯಂ ಕರಿಷ್ಯತಿ ।**
**ಏತೇಷಾಂ ವಾನರಾಣಾಂ ಸ ಪ್ರಾಣದಾತಾ ನ ಸಂಶಯಃ ॥ ೪ ॥**

೩-೪. ಅವರಲ್ಲಿ ಅಂಗದನು ಇಂತೆಂದನು : 'ಎಲೈ ವಾನರಶ್ರೇಷ್ಠರುಗಳಿರಾ, ನನ್ನ ಮಾತನ್ನು ಕೇಳಿರಿ. ನೀವುಗಳು ಹೆಚ್ಚಿನ ಬಲಿಷ್ಠರೂ ಶೂರರೂ ಪರಾಕ್ರಮಿಗಳೂ ಆಗಿದ್ದೀರಿ. ನಿಮ್ಮಗಳ ನಡುವೆ ಯಾವನು ಸಮುದ್ರವನ್ನು ದಾಟಿ ರಾಜಕಾರ್ಯವನ್ನು ಮಾಡಬಲ್ಲನೋ ಅವನು ಈ ಎಲ್ಲಾ ಕಪಿಗಳಿಗೂ ಪ್ರಾಣದಾನವನ್ನು ಮಾಡಿದವನಾಗುವನು.

**ತದುತ್ತಿಷ್ಠತು ಮೇ ಶೀಘ್ರಂ ಪುರತೋ ಯೋ ಮಹಾಬಲಃ ।**
**ವಾನರಾಣಾಂ ಚ ಸರ್ವೇಷಾಂ ರಾಮಸುಗ್ರೀವಯೋರಪಿ ॥ ೫ ॥**
**ಸ ಏವ ಪಾಲಕೋ ಭೂಯಾತ್ ನಾತ್ರ ಕಾರ್ಯಾ ವಿಚಾರಣಾ ।**
**ಇತ್ಯುಕ್ತೇ ಯುವರಾಜೇನ ತೂಷ್ಣೀಂ ವಾನರಸೈನಿಕಾಃ ॥ ೬ ॥**
**ಆಸನ್ನೋಚುಃ ಕಿಂಚಿದಪಿ ಪರಸ್ಪರವಿಲೋಕಿನಃ ।**

೫-೬. ಆದ್ದರಿಂದ ಯಾವನು ಬಹಳ ಗಟ್ಟಿಗನೋ ಅವನು ಮೇಲಕ್ಕೆದ್ದು ನನ್ನೆದುರಿಗೆ ನಿಲ್ಲಲಿ. ಅವನೇ ಎಲ್ಲಾ ಕಪಿಗಳನ್ನೂ ಹಾಗೂ ರಾಮ - ಸುಗ್ರೀವರುಗಳನ್ನೂ ಕಾಪಾಡಿದವನಾಗುವನು. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವದಿಲ್ಲ.' ಹೀಗೆಂದು ಯುವರಾಜನು ನುಡಿಯಲಾಗಿ ವಾನರಸೈನಿಕರೆಲ್ಲ ಸುಮ್ಮನಾಗಿಬಿಟ್ಟರು. ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಕುಳಿತರು.

### ಅಂಗದ ಉವಾಚ-

**ಉಚ್ಯತಾಂ ವೈ ಬಲಂ ಸರ್ವೈಃ ಪ್ರತ್ಯೇಕಂ ಕಾರ್ಯಸಿದ್ಧಯೇ ।**
**ಕೇನ ವಾ ಸಾಧ್ಯತೇ ಕಾರ್ಯಂ ಜಾನೀಮಸ್ತದನಂತರಮ್ ॥ ೭ ॥**
**ಅಂಗದಸ್ಯ ವಚಃ ಶ್ರುತ್ವಾ ಪ್ರೋಚುರ್ವೀರಾ ಬಲಂ ಪೃಥಕ್ ।**
**ಯೋಜನಾನಾಂ ದಶಾರಭ್ಯ ದಶೋತ್ತರಗುಣಂ ಜಗುಃ ॥ ೮ ॥**
**ಶತಾದರ್ವಾಕ್ ಜಾಂಬವಾಂಸ್ತು ಪ್ರಾಹ ಮಧ್ಯೇ ವನೌಕಸಾಮ್ ।**
**ಪುರಾ ತ್ರಿವಿಕ್ರಮೇ ದೇವೇ ಪಾದಂ ಭೂಮಾನಲಕ್ಷಣಮ್ ॥ ೯ ॥**
**ತ್ರಿಃಸಪ್ತಕೃತ್ವೋಽಹಮಗಾಂ ಪ್ರದಕ್ಷಿಣವಿಧಾನತಃ ।**
**ಇದಾನೀಂ ವಾರ್ಧಕಗ್ರಸ್ತೋ ನ ಶಕ್ನೋಮಿ ವಿಲಂಘಿತುಮ್ ॥ ೧೦ ॥**

೮-೧೦. ಅಂಗದನ ಮಾತನ್ನು ಕೇಳಿ ಆ ವೀರರೆಲ್ಲರೂ ತಮ್ಮ ತಮ್ಮ ಬಲವನ್ನು ಬೇರೆ ಬೇರೆಯಾಗಿ ಹೇಳತೊಡಗಿದರು. ಹತ್ತು ಯೋಜನಗಳಿಂದಾರಂಭಿಸಿ ಹತ್ತು ಹತ್ತರಂತೆಯೇ ಏರಿಸುತ್ತಾ ನೂರಕ್ಕಿಂತ ಈಚೆಗೆ (ಕಡಿಮೆಯಾಗಿ) ಹೇಳಿದರು. ಕಪಿಗಳ ನಡುವೆ ಜಾಂಬವಂತನು ಹೀಗೆಂದನು : 'ಹಿಂದೆ ಭಗವಂತನು ತ್ರಿವಿಕ್ರಮಾವತಾರಮಾಡಿ ವ್ಯಾಪಕವಾದ ಭೂಮಿಯನ್ನೆಲ್ಲ ತನ್ನ ಪಾದದಲ್ಲಿ ಅಳತೆಮಾಡಿದನಲ್ಲವೆ ? ಅಂಥ ಭೂಮಿಯನ್ನು ನಾನು ಪ್ರದಕ್ಷಿಣೆಮಾಡುವ ರೀತಿಯಿಂದ ಇಪ್ಪತ್ತೊಂದು ಬಾರಿ ತಿರುಗಿದ್ದೇನೆ. (ಎಂದರೆ ಭೂಮಿಯನ್ನೆಲ್ಲ ಪೂರ್ಣವಾಗಿ ಬಳಸಿ ಹಾರಿರುತ್ತೇನೆ.) ಈಗಲಾದರೊ, ಮುದಿತನದಿಂದ ಬಳಲಿರುವದರಿಂದ (ಹಿಂದಿನಂತೆ) ಹಾರಲಾರೆನು.

ಅಂಗದೋಽಪ್ಯಾಹ ಮೇ ಗಂತುಂ ಶಕ್ಯಂ ಪಾರಂ ಮಹೋದಧೇಃ ।
ಪುನರ್ಲಂಘನಸಾಮರ್ಥ್ಯಂ ನ ಜಾನಾಮ್ಯಸ್ತಿ ವಾ ನ ವಾ ॥ ೧೧ ॥
ತಮಾಹ ಜಾಂಬವಾನ್ ವೀರಸ್ತ್ವಂ ರಾಜಾ ನೋ ನಿಯಾಮಕಃ ।
ನ ಯುಕ್ತಂ ತ್ವಾಂ ನಿಯೋಕ್ತುಂ ಮೇ ತ್ವಂ ಸಮರ್ಥೋಽಸಿ ಯದ್ಯಪಿ ॥ ೧೨ ॥

೧೧-೧೨. ಅಂಗದನೂ ಹೀಗೆಂದನು : ''ನನಗೆ ಸಮುದ್ರದ ಆಚೆಗೆ ಹೋಗಲು ಶಕ್ತಿಯೇನೋ ಇದ್ದೀತು. ಆದರೆ ಮತ್ತೆ ಹಿಂದಿರುಗಿ ಹಾರಿಬರುವಷ್ಟು ಶಕ್ತಿಯು ಇದೆಯೊ, ಇಲ್ಲವೊ ಹೇಳಲಾರೆ.'' ಆಗ ವೀರನಾದ ಜಾಂಬವಂತನು ಅವನನ್ನು ಕುರಿತು ''ನೀನು ರಾಜನು. ನಮ್ಮೆಲ್ಲರನ್ನೂ ಆಳುವವನು. ಒಂದು ವೇಳೆ ನೀನು ಸಮರ್ಥನೇ ಆಗಿದ್ದರೂ ನಿನ್ನನ್ನು ಅಪ್ಪಣೆಮಾಡಿ ಹೋಗುವಂತೆ ಕಳುಹಿಸುವದು ಯುಕ್ತ ವಲ್ಲ'' ಎಂದನು.

ಅಂಗದ ಉವಾಚ-

ಏವಂ ಚೇತ್ ಪೂರ್ವವತ್ ಸರ್ವೇ ಸ್ವಪ್ಸ್ಯಾಮೋ ದರ್ಭವಿಷ್ಟರೇ ।
ಕೇನಾಪಿ ನ ಕೃತಂ ಕಾರ್ಯಂ ಜೀವಿತುಂ ಚ ನ ಶಕ್ಯತೇ ॥ ೧೩ ॥
ತಮಾಹ ಜಾಂಬವಾನ್ ವೀರೋ ದರ್ಶಯಿಷ್ಯಾಮಿ ತೇ ಸುತ ।
ಯೇನಾಸ್ಮಾಕಂ ಕಾರ್ಯಸಿದ್ಧಿರ್ಭವಿಷ್ಯತ್ಯಚಿರೇಣ ಚ ॥ ೧೪ ॥
ಇತ್ಯುಕ್ತ್ವಾ ಜಾಂಬವಾನ್ ಪ್ರಾಹ ಹನೂಮಂತಮವಸ್ಥಿತಮ್ ।

೧೩-೧೪. ಅಂಗದನಿಂತೆಂದನು : ''ಹೀಗಾದರೆ ನಾವೆಲ್ಲರೂ ಹಿಂದಿನಂತೆ ದರ್ಭಾಸನದಲ್ಲಿ ಮಲಗಿ (ಪ್ರಾಯೋಪವೇಶವನ್ನೇ ಮುಂದುವರೆಸೋಣ). ಏಕೆಂದರೆ ಯಾರಿಂದಲೂ ಕಾರ್ಯವು ಸಾಧ್ಯವಾಗದೆ ಹೋದರೆ ಬದುಕಲು ಸಾಧ್ಯವಾಗುವದಿಲ್ಲ.'' ಆಗ ವೀರನಾದ ಜಾಂಬವಂತನು ''ಮಗು, ನಮ್ಮ ಕೆಲಸವು ಜಾಗ್ರತೆಯಾಗಿ ಯಾವನಿಂದ ಸಿದ್ಧಿಯಾಗಲಿರುವದೋ ಅವನನ್ನು ನಿನಗೆ ಈಗಲೆ ತೋರಿಸುವೆನು.'' ಎಂದು ಹೇಳುತ್ತಾ ಕುಳಿತಿದ್ದ ಹನುಮಂತನನ್ನು ಕುರಿತು ಹೀಗೆಂದನು :

ಹನೂಮನ್ ಕಿಂ ರಹಸ್ತೂಷ್ಣೀಂ ಸ್ಥೀಯತೇ ಕಾರ್ಯಗೌರವೇ ।
ಪ್ರಾಪ್ತೇಽಜ್ಞೇನೇವ ಸಾಮರ್ಥ್ಯಂ ದರ್ಶಯಾದ್ಯ ಮಹಾಬಲ ॥ ೧೫ ॥
ತ್ವಂ ಸಾಕ್ಷಾದ್ ವಾಯುತನಯೋ ವಾಯುತುಲ್ಯಪರಾಕ್ರಮಃ ।
ರಾಮಕಾರ್ಯಾರ್ಥಮೇವ ತ್ವಂ ಜನಿತೋಽಸಿ ಮಹಾತ್ಮನಾ ॥ ೧೬ ॥
ಜಾತಮಾತ್ರೇಣ ತೇ ಪೂರ್ವಂ ದೃಷ್ಟ್ವೋದ್ಯಂತಂ ವಿಭಾವಸುಮ್ ।

**ಪಕ್ವಂ ಫಲಂ ಜಿಘೃಕ್ಷಾಮಿತ್ಯುತ್ಪ್ಲುತಂ ಬಾಲಚೇಷ್ಟಯಾ ॥ ೧೭ ॥**
**ಯೋಜನಾನಾಂ ಪಂಚಶತಂ ಪತಿತೋಽಸಿ ತತೋ ಭುವಿ ।**

೧೫-೧೭. 'ಎಲೈ ಹನುಮಂತನೆ, ಹೆಚ್ಚಿನ ಕಾರ್ಯಸಾಧನೆಯ ಸಮಯವು ಬಂದಿರುವಾಗ - ಏನೂ ತಿಳಿಯದ ದಡ್ಡನಂತೆ - ಏಕಾಂತದಲ್ಲಿ ಸುಮ್ಮನೆ ಏಕೆ ನಿಂತಿರುವೆ? ಎಲೈ ಮಹಾಬಲನೆ, ನಿನ್ನ ಸಾಮರ್ಥ್ಯವನ್ನು ಈಗ ತಿಳಿಸುವೆನು. ನೀನಾದರೊ, ನೇರಾಗಿ ವಾಯುದೇವತೆಯ ಪುತ್ರನು. ವಾಯುವಿಗೆ ಸಮಾನವಾದ ಬಲವುಳ್ಳವನು. ಆ ಮಹಾತ್ಮನಿಂದ ರಾಮನ ಸೇವೆಗಾಗಿಯೇ ಸೃಷ್ಟಿಸಲ್ಪಟ್ಟಿರುವೆ. ಹಿಂದೆ ನೀನು ಹುಟ್ಟಿದ ಕೂಡಲೆ ಆಗ ತಾನೆ ಉದಯಿಸುತ್ತಿದ್ದ ಸೂರ್ಯನನ್ನು ಕಂಡು ಹುಡುಗಾಟಿಕೆಯ ಚೇಷ್ಟೆಗೆ ತಕ್ಕಂತೆ ಹಣ್ಣಾದ ಫಲವನ್ನು ಹಿಡಿದುಕೊಳ್ಳುವೆನು - ಎಂದು ಐದುನೂರುಯೋಜನಗಳ ಎತ್ತರಕ್ಕೆ ನೆಗೆದುಬಿಟ್ಟೆ. ಅನಂತರ ಭೂಮಿಯ ಮೇಲೆ ಬೀಳುವವನಾದೆ.

**ಅತಸ್ತ್ವದ್ಬಾಲಮಾಹಾತ್ಮ್ಯಂ ಕೋ ವಾ ಶಕ್ನೋತಿ ವರ್ಣಿತುಮ್ ।**
**ಉತ್ತಿಷ್ಠ ಕುರು ರಾಮಸ್ಯ ಕಾರ್ಯಂ ನಃ ಪಾಹಿ ಸುವ್ರತ ॥ ೧೮ ॥**
**ಶ್ರುತ್ವಾ ಜಾಂಬವತೋ ವಾಕ್ಯಂ ಹನುಮಾನತಿಹರ್ಷಿತಃ ।**
**ಚಕಾರ ನಾದಂ ಸಿಂಹಸ್ಯ ಬ್ರಹ್ಮಾಂಡಂ ಸ್ಫೋಟಯನ್ನಿವ ॥ ೧೯ ॥**

೧೮-೧೯. ಆದ್ದರಿಂದ ನಿನ್ನ ಬಾಲ್ಯದ ಮಹಿಮೆಯನ್ನು ವರ್ಣಿಸಲು ಯಾವನು ತಾನೆ ಸಮರ್ಥನಾದಾನು ? ಎಲೈ ಸುವ್ರತನೆ, ಎದ್ದೇಳು. ರಾಮಕಾರ್ಯವನ್ನು ಮಾಡುವವನಾಗು. ನಮ್ಮನ್ನು ಕಾಪಾಡು.'' ಹೀಗೆಂಬ ಜಾಂಬವಂತನ ಮಾತನ್ನು ಕೇಳಿ ಬಹಳ ಸಂತೋಷಗೊಂಡ ಹನುಮಂತನು ಬ್ರಹ್ಮಾಂಡವನ್ನೇ ಸೀಳುವಂಥ ಸಿಂಹನಾದವನ್ನು ಮಾಡಿದನು.

**ಬಭೂವ ಪರ್ವತಾಕಾರಸ್ತ್ರಿವಿಕ್ರಮ ಇವಾಪರಃ ।**
**ಲಂಘಯಿತ್ವಾ ಜಲನಿಧಿಂ ಕೃತ್ವಾ ಲಂಕಾಂ ಚ ಭಸ್ಮಸಾತ್ ॥ ೨೦ ॥**
**ರಾವಣಂ ಸಕುಲಂ ಹತ್ವಾ ನೇಷ್ಯೇ ಜನಕನಂದಿನೀಮ್ ।**
**ಯದ್ವಾ ಬದ್ಧ್ವಾ ಗಲೇ ರಜ್ಜ್ವಾ ರಾವಣಂ ವಾಮಪಾಣಿನಾ ॥ ೨೧ ॥**
**ಲಂಕಾಂ ಸಪರ್ವತಾಂ ಧೃತ್ವಾ ರಾಮಸ್ಯಾಗ್ರೇ ಕ್ಷಿಪಾಮ್ಯಹಮ್ ।**
**ಯದ್ವಾ ದೃಷ್ಟ್ವೈವ ಯಾಸ್ಯಾಮಿ ಜಾನಕೀಂ ಶುಭಲಕ್ಷಣಾಮ್ ॥ ೨೨ ॥**

೨೦-೨೨. ಮತ್ತೊಬ್ಬ ತ್ರಿವಿಕ್ರಮನಂತೆ ಪರ್ವತಾಕಾರನಾಗಿ ಬೆಳೆದುಬಿಟ್ಟನು. ''ಸಮುದ್ರವನ್ನು ದಾಟಿ ಲಂಕೆಯನ್ನು ಸುಟ್ಟು ಬೂದಿಮಾಡಿ ರಾಕ್ಷಸಕುಲಸಮೇತನಾದ ರಾವಣನನ್ನು ಕೊಂದು ಸೀತೆಯನ್ನು ತಂದುಬಿಡುವೆನು. ಅಥವಾ ರಾವಣನನ್ನು

ಹಗ್ಗದಿಂದ ಕುತ್ತಿಗೆಯಲ್ಲಿ ಕಟ್ಟಿ ಎಡಗೈಯಲ್ಲಿ ಹಿಡಿದುಕೊಂಡು ಪರ್ವತಸಹಿತವಾದ ಲಂಕೆಯನ್ನು ಹೊತ್ತುತಂದು ರಾಮನ ಎದುರಿಗೆ ಇಟ್ಟುಬಿಡುವೆನು. ಅಥವಾ ಶುಭ ಲಕ್ಷಣಳಾದ ಸೀತೆಯನ್ನು ಕಂಡೇ ಹಿಂದಿರುಗಿ ಬರುವೆನು'' (ಎಂದು ಘರ್ಜಿಸಿದನು.)

**ಶ್ರುತ್ವಾ ಹನುಮತೋ ವಾಕ್ಯಂ ಜಾಂಬವಾನಿದಮಬ್ರವೀತ್ ।**
**ದೃಷ್ಟ್ವೈವಾಗಚ್ಛ ಭದ್ರಂ ತೇ ಜೀವಂತೀಂ ಜಾನಕೀಂ ಶುಭಾಮ್ ॥ ೨೩ ॥**
**ಪಶ್ಚಾದ್ ರಾಮೇಣ ಸಹಿತೋ ದರ್ಶಯಿಷ್ಯಸಿ ಪೌರುಷಮ್ ।**
**ಕಲ್ಯಾಣಂ ಭವತಾತ್ ಭದ್ರ ಗಚ್ಛತಸ್ತೇ ವಿಹಾಯಸಾ ॥ ೨೪ ॥**
**ಗಚ್ಛಂತಂ ರಾಮಕಾರ್ಯಾರ್ಥಂ ವಾಯುಸ್ತ್ವಾಮನುಗಚ್ಛತು ।**

೨೩-೨೪. ಹನುಮಂತನ ಮಾತನ್ನು ಕೇಳಿ ಜಾಂಬವಂತನಿಂತೆಂದನು : ''ಶುಭಳಾದ ಜೀವಂತಳಾದ ಸೀತೆಯನ್ನು ಕಂಡೇ ಹಿಂದಿರುಗಿ ಬಾ. ಅನಂತರ ರಾಮನೊಡಗೂಡಿ ನಿನ್ನ ಶಕ್ತಿಯನ್ನು ತೋರಿಸುವೆಯಂತೆ. ಆಕಾಶಮಾರ್ಗದಲ್ಲಿ ಹೊರಟಿರುವ ಭದ್ರನೆ, ನಿನಗೆ ಮಂಗಳವಾಗಲಿ. ರಾಮಕಾರ್ಯಕ್ಕಾಗಿ ಹೊರಟಿರುವ ನಿನ್ನನ್ನು ವಾಯುದೇವನು ಹಿಂಬಾಲಿಸಲಿ.''

**ಇತ್ಯಾಶೀರ್ಭಿಃ ಸಮಾಮಂತ್ರ್ಯ ವಿಸೃಷ್ಟಃ ಪ್ಲವಗಾಧಿಪೈಃ ।**
**ಮಹೇಂದ್ರಾದ್ರಿಶಿರೋ ಗತ್ವಾ ಬಭೂವಾದ್ಭುತದರ್ಶನಃ ॥ ೨೫ ॥**
**ಮಹಾನಗೇಂದ್ರಪ್ರತಿಮೋ ಮಹಾತ್ಮಾ**
**ಸುವರ್ಣವರ್ಣೋಽರುಣಚಾರುವಕ್ತ್ರಃ ।**
**ಮಹಾಫಣೀಂದ್ರಾಭಸುದೀರ್ಘಬಾಹು-**
**ರ್ವಾತಾತ್ಮಜೋಽದೃಶ್ಯತ ಸರ್ವಭೂತೈಃ ॥ ೨೬ ॥**

೨೫-೨೬. ಹೀಗೆ ಆಶೀರ್ವಾದಗಳಿಂದ ಹರಸಲ್ಪಟ್ಟು ಕಪಿಮುಖ್ಯರಿಂದ ಬೀಳ್ಕೊಡಲ್ಪಟ್ಟ ಹನುಮಂತನು ಮಹೇಂದ್ರಪರ್ವತದ ಶಿಖರವನ್ನೇರಿ ಅದ್ಭುತ ರೂಪದಿಂದ ತೋರಿಕೊಂಡನು. ಮಹಾತ್ಮನಾದ ಅವನು ದೊಡ್ಡ ಪರ್ವತಕ್ಕೆ ಸಮನಾದ ಆಕಾರವುಳ್ಳವನಾಗಿ, ಹೊಂಬಣ್ಣದಿಂದ ಕೂಡಿ, ಕೆಂಪಾದ ಕಣ್ಣುಗಳು ಹಾಗೂ ಸುಂದರಮುಖವುಳ್ಳವನೂ ದೊಡ್ಡ ಹಾವಿನಂತಿರುವ ಉದ್ದವಾದ ತೋಳುಗಳುಳ್ಳವನೂ ಆಗಿ ಆ ವಾಯುಪುತ್ರನು ಎಲ್ಲಾ ಪ್ರಾಣಿಗಳಿಗೂ ಕಾಣಿಸಿಕೊಂಡನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಕಿಷ್ಕಿಂಧಾಕಾಂಡೇ ನವಮಃ ಸರ್ಗಃ**

**ಸಮಾಪ್ತಮಿದಂ ಕಿಷ್ಕಿಂಧಾಕಾಂಡಮ್**

----------

# ಸುಂದರಕಾಂಡ

## ಒಂದನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಶತಯೋಜನಿನವಿಸ್ತೀರ್ಣಂ ಸಮುದ್ರಂ ಮಕರಾಲಯಮ್ ।**
**ಲಿಲಂಘಯಿಷುರಾನಂದಸಂದೋಹೋ ಮಾರುತಾತ್ಮಜಃ ॥ ೧ ॥**
**ಧ್ಯಾತ್ವಾ ರಾಮಂ ಪರಾತ್ಮಾನಮಿದಂ ವಚನಮಬ್ರವೀತ್ ।**
**ಪಶ್ಯಂತು ವಾನರಾಃ ಸರ್ವೇ ಗಚ್ಛಂತಂ ಮಾಂ ವಿಹಾಯಸಾ ॥ ೨ ॥**
**ಅಮೋಘಂ ರಾಮನಿರ್ಮುಕ್ತಂ ಮಹಾಬಾಣಮಿವಾಖಿಲಾಃ ।**

೧-೨. ಶ್ರೀ ಮಹಾದೇವನಿಂತೆಂದನು : ನೂರುಯೋಜನಗಳಷ್ಟು ಅಗಲವಾದ, ಮೊಸಳೆಗಳಿಗೆ ವಾಸಸ್ಥಾನವಾದ ಸಮುದ್ರವನ್ನು ನೆಗೆಯಲು ಅಪೇಕ್ಷೆಯುಳ್ಳ ಮಾರುತಿಯು ಆನಂದಪೂರ್ಣನಾಗಿ ಪರಮಾತ್ಮನಾದ ಶ್ರೀರಾಮನನ್ನು ಧ್ಯಾನಿಸಿ ಹೀಗೆಂದನು : ''ಇದೊ, ಕಪಿಗಳೆಲ್ಲರೂ ನೋಡಿರಿ ; ರಾಮನು ಬಿಟ್ಟ ಅಮೋಘವಾದ ಬಾಣದಂತೆ ಆಕಾಶಮಾರ್ಗದಿಂದ ಹೋಗುತ್ತಿರುವ ನನ್ನನ್ನು (ನೋಡಿರಿ).''

**ಪಶ್ಯಾಮ್ಯದ್ಯೈವ ರಾಮಸ್ಯ ಪತ್ನೀಂ ಜನಕನಂದಿನೀಮ್ ।**
**ಕೃತಾರ್ಥೋಽಹಂ ಕೃತಾರ್ಥೋಽಹಂ ಪುನಃ ಪಶ್ಯಾಮಿ ರಾಘವಮ್ ॥ ೩ ॥**
**ಪ್ರಾಣಪ್ರಯಾಣಸಮಯೇ ಯಸ್ಯ ನಾಮ ಸಕೃತ್ ಸ್ಮರನ್ ।**
**ನರಸ್ತೀರ್ತ್ವಾ ಭವಾಂಭೋಧಿಮಪಾರಂ ಯಾತಿ ತತ್ಪದಮ್ ॥ ೪ ॥**
**ಕಿಂ ಪುನಸ್ತಸ್ಯ ದೂತೋಽಹಂ ತದಂಗಾಂಗುಲಿಮುದ್ರಿಕಃ ।**
**ತಮೇವ ಹೃದಯೇ ಧ್ಯಾತ್ವಾ ಲಂಘಯಾಮ್ಯಲ್ಪವಾರಿಧಿಮ್ ॥ ೫ ॥**

೩-೫. ''ಈಗಲೆ ನಾನು ರಾಮಪತ್ನಿಯಾದ ಜಾನಕಿಯನ್ನು ಕಾಣುವೆನು. ಕಾರ್ಯಸಿದ್ಧಿಯನ್ನು ಹೊಂದಿ ಕೃತಕೃತ್ಯನಾದ ನಾನು ಮತ್ತೆ ರಾಮನನ್ನು ಸಂದರ್ಶಿಸುವೆನು. ಮನುಷ್ಯನು ಪ್ರಾಣಹೋಗುವ ಸಮಯದಲ್ಲಿ ಯಾವಾತನ ನಾಮವನ್ನು ಒಮ್ಮೆ ನೆನೆದರೂ ದಡವು ಕಾಣದಂಥ ಸಂಸಾರಸಮುದ್ರವನ್ನು ದಾಟಿ ಆ ಭಗವಂತನ ಪದವಿಯನ್ನು ಸೇರುವನೋ, ಅಂಥ (ಶ್ರೀರಾಮನ) ಸೇವಕನೂ ಅವನ ಹೆಸರಿನ ಮುದ್ರೆಯುಂಗುರವುಳ್ಳವನೂ ಆದ ನಾನು ಅವನನ್ನೇ ಹೃದಯದಲ್ಲಿ ಚಿಂತಿಸುತ್ತಾ ಅಲ್ಪವಾದ ಈ ಸಮುದ್ರವನ್ನು ನೆಗೆಯುವೆನು.''

**ಇತ್ಯುಕ್ತ್ವಾ ಹನುಮಾನ್ ಬಾಹೂ ಪ್ರಸಾರ್ಯಾಯತವಾಲಧಿಃ ।**
**ಋಜುಗ್ರೀವೋರ್ಧ್ವದೃಷ್ಟಿಃ ಸನ್ನಾಕುಂಚಿತಪದದ್ವಯಃ ॥ ೬ ॥**
**ದಕ್ಷಿಣಾಭಿಮುಖಸ್ತೂರ್ಣಂ ಪುಪ್ಲುವೇಽನಿಲವಿಕ್ರಮಃ ।**
**ಆಕಾಶಾತ್ ತ್ವರಿತಂ ದೇವೈರ್ವೀಕ್ಷ್ಯಮಾಣೋ ಜಗಾಮ ಸಃ ॥ ೭ ॥**

೬-೭. ಹೀಗೆಂದು ಹೇಳಿ ಹನುಮಂತನು ತೋಳುಗಳನ್ನು ಚಾಚಿ ಬಾಲವನ್ನು ಬಿಚ್ಚಿಕೊಂಡು ನೆಟ್ಟನೆಯ ಕತ್ತುಳ್ಳವನಾಗಿ ನೋಟವನ್ನು ಮೇಲಕ್ಕೆ ಮಾಡಿಕೊಂಡು ಎರಡೂ ಕಾಲುಗಳನ್ನು ಮಡಚಿಕೊಂಡು ದಕ್ಷಿಣದಿಕ್ಕಿಗೆ ಇದಿರಾಗಿ ವೇಗವಾಗಿ ವಾಯುವಿನಂತೆ ಪರಾಕ್ರಮದಿಂದ ಕೂಡಿ, ದೇವತೆಗಳು ನೋಡುತ್ತಿರುವಂತೆಯೇ ನೆಗೆದು ಆಕಾಶಮಾರ್ಗದಿಂದ ಮುನ್ನಡೆದನು.

**ದೃಷ್ಟ್ವಾನಿಲಸುತಂ ದೇವಾ ಗಚ್ಛಂತಂ ವಾಯುವೇಗತಃ ।**
**ಪರೀಕ್ಷಣಾರ್ಥಂ ಸತ್ತ್ವಸ್ಯ ವಾನರಸ್ಯೇದಮಬ್ರುವನ್ ॥ ೮ ॥**
**ಗಚ್ಛತ್ಯೇಷ ಮಹಾಸತ್ತ್ವೋ ವಾನರೋ ವಾಯುವಿಕ್ರಮಃ ।**
**ಲಂಕಾಂ ಪ್ರವೇಷ್ಟುಂ ಶಕ್ತೋ ವಾ ನ ವಾ ಜಾನೀಮಹೇ ಬಲಮ್ ॥ ೯ ॥**
**ಏವಂ ವಿಚಾರ್ಯ ನಾಗಾನಾಂ ಮಾತರಂ ಸುರಸಾಭಿಧಾಮ್ ।**
**ಅಬ್ರವೀದ್ದೇವತಾವೃಂದಃ ಕೌತೂಹಲಸಮನ್ವಿತಃ ॥ ೧೦ ॥**

೮-೧೦. ವಾಯುವೇಗದಿಂದ ಹಾರುತ್ತಿದ್ದ ಹನುಮಂತನನ್ನು ನೋಡಿದ ದೇವತೆಗಳು ಈ ಕಪಿಯ ಬಲವನ್ನು ಪರೀಕ್ಷಿಸುವದಕ್ಕಾಗಿ ಹೀಗೆಂದರು : ''ಈ ಬಲಶಾಲಿಯಾದ ವಾಯುವಿನಂತೆ ಪರಾಕ್ರಮವುಳ್ಳ ಕಪಿಯು ಲಂಕೆಗೆ ಹೊರಟಿರುವನು. ಆದರೆ ಆ ನಗರಿಯನ್ನು ಪ್ರವೇಶಿಸಲು ಶಕ್ತನೊ, ಅಲ್ಲವೊ, ನಾವರಿಯೆವು. (ಆದ್ದರಿಂದ ಪರೀಕ್ಷಿಸೋಣ)-'' ಎಂದುಕೊಂಡು ನಾಗದೇವತೆಗಳ ತಾಯಿಯಾದ ಸುರಸಾ ಎಂಬ ಹೆಸರಿನವಳನ್ನು ಕುರಿತು ಕುತೂಹಲಾವಿಷ್ಟವಾದ ದೇವತೆಗಳ ಸಮೂಹವು ಹೀಗೆಂದಿತು.

**ಗಚ್ಛ ತ್ವಂ ವಾನರೇಂದ್ರಸ್ಯ ಕಿಂಚಿದ್ ವಿಘ್ನಂ ಸಮಾಚರ ।**
**ಜ್ಞಾತ್ವಾ ತಸ್ಯ ಬಲಂ ಬುದ್ಧಿಂ ಪುನರೇಹಿ ತ್ವರಾನ್ವಿತಾ ॥ ೧೧ ॥**
**ಇತ್ಯುಕ್ತಾ ಸಾ ಯಯೌ ಶೀಘ್ರಂ ಹನುಮದ್ವಿಘ್ನಕಾರಣಾತ್ ।**
**ಆವೃತ್ಯ ಮಾರ್ಗಂ ಪುರತಃ ಸ್ಥಿತ್ವಾ ವಾನರಮಬ್ರವೀತ್ ॥ ೧೨ ॥**

೧೧-೧೨. ''ನೀನು ಹೋಗಿ ಆ ಕಪಿಶ್ರೇಷ್ಠನಿಗೆ ಸ್ವಲ್ಪ ಅಡ್ಡಿಯನ್ನುಂಟು ಮಾಡು ; ಅವನ ಬಲವನ್ನೂ ಬುದ್ಧಿಯನ್ನೂ ತಿಳಿದುಕೊಂಡು ಜಾಗ್ರತೆಯಾಗಿ ಮತ್ತೆ ಬಾ''. ಹೀಗೆ ಹೇಳಲ್ಪಟ್ಟ ಆಕೆಯು ಹನುಮಂತನಿಗೆ ಅಡ್ಡಿಪಡಿಸುವದಕ್ಕಾಗಿ ಬೇಗನೆ

ಹೊರಟು ಅವನ ದಾರಿಯನ್ನು ಅಡ್ಡಗಟ್ಟಿ ಮುಂದೆ ನಿಂತು ಕಪಿಯನ್ನು ಕುರಿತು ಹೀಗೆಂದಳು :

**ಏಹಿ ಮೇ ವದನಂ ಶೀಘ್ರಂ ಪ್ರವಿಶಸ್ವ ಮಹಾಮತೇ ।**
**ದೇವೈಸ್ತ್ವಂ ಕಲ್ಪಿತೋ ಭಕ್ಷ್ಯಃ ಕ್ಷುಧಾಸಂಪೀಡಿತಾತ್ಮನಃ ॥ ೧೩ ॥**
**ತಾಮಾಹ ಹನುಮಾನ್ ಮಾತರಹಂ ರಾಮಸ್ಯ ಶಾಸನಾತ್ ।**
**ಗಚ್ಛಾಮಿ ಜಾನಕೀಂ ದ್ರಷ್ಟುಂ ಪುನರಾಗಮ್ಯ ಸತ್ವರಃ ॥ ೧೪ ॥**
**ರಾಮಾಯ ಕುಶಲಂ ತಸ್ಯಾಃ ಕಥಯಿತ್ವಾ ತ್ವದಾನನಮ್ ।**
**ನಿವೇಕ್ಷ್ಯೇ ದೇಹಿ ಮೇ ಮಾರ್ಗಂ ಸುರಸಾಯೈ ನಮೋಽಸ್ತು ತೇ ॥ ೧೫ ॥**

೧೩-೧೫. ''ಎಲೈ ಬುದ್ಧಿಶಾಲಿಯೆ, ಜಾಗ್ರತೆಯಾಗಿ ನನ್ನ ಬಾಯೊಳಕ್ಕೆ ಬರುವವನಾಗು. ಹಸಿವಿನಿಂದ ಬಳಲಿದ ನನಗೆ ದೇವತೆಗಳಿಂದಲೇ ನೀನು ಆಹಾರವಾಗಿ ಮಾಡಲ್ಪಟ್ಟಿರುವೆ.'' ಆಗ ಹನುಮಂತನು ಆಕೆಯನ್ನು ಕುರಿತು ''ತಾಯೆ, ನಾನು ರಾಮನ ಅಪ್ಪಣೆಯಂತೆ ಸೀತೆಯನ್ನು ಕಾಣುವದಕ್ಕಾಗಿ ಹೋಗುತ್ತಿರುವೆನು. ಜಾಗ್ರತೆಯಾಗಿ ಹಿಂದಿರುಗಿ ಬಂದು ಆಕೆಯ ಕುಶಲವೃತ್ತಾಂತವನ್ನು ರಾಮನಿಗೆ ತಿಳಿಸಿ ಅನಂತರ ನಿನ್ನ ಮುಖವನ್ನು ಹೊಗುವೆನು. ನನಗೆ ದಾರಿಯನ್ನು ಕೊಡು. ಸುರಸೆಗೆ ನಮಸ್ಕಾರವಿರಲಿ!''

**ಇತ್ಯುಕ್ತ್ವಾ ಪುನರೇವಾಹ ಸುರಸಾ ಕ್ಷುಧಿತಾಸ್ಮ್ಯಹಮ್ ।**
**ಪ್ರವಿಶ್ಯ ಗಚ್ಛ ಮೇ ವಕ್ತ್ರಂ ನೋ ಚೇತ್ ತ್ವಾಂ ಭಕ್ಷಯಾಮ್ಯಹಮ್ ॥ ೧೬ ॥**
**ಇತ್ಯುಕ್ತೋ ಹನುಮಾನಾಹ ಮುಖಂ ಶೀಘ್ರಂ ವಿದಾರಯ ।**
**ಪ್ರವಿಶ್ಯ ವದನಂ ತೇಽದ್ಯ ಗಚ್ಛಾಮಿ ತ್ವರಯಾನ್ವಿತಃ ॥ ೧೭ ॥**
**ಇತ್ಯುಕ್ತ್ವಾ ಯೋಜನಾಯಾಮದೇಹೋ ಭೂತ್ವಾ ಪುರಃ ಸ್ಥಿತಃ ।**

೧೬-೧೭. ಹೀಗೆನ್ನಲು ಮತ್ತೆ ಸುರಸೆಯು ''ನಾನು ಹಸಿದಿರುವೆನು. ನನ್ನ ಬಾಯನ್ನು ಪ್ರವೇಶಿಸಿ ಅನಂತರ ಹೋಗು. ಹಾಗಿಲ್ಲವಾದರೆ ನಿನ್ನನ್ನು ತಿಂದುಹಾಕು ವೆನು'' ಎಂದಳು. ಆಗ ಹನುಮಂತನು ''ಬೇಗನೆ ಬಾಯಿ ತೆರೆಯುವಳಾಗು ! ನಿನ್ನ ಮುಖವನ್ನು ಹೊಕ್ಕು ಬೇಗನೆ ಹೊರಡುವೆನು.'' ಹೀಗೆಂದು ಹೇಳಿ ಒಂದು ಯೋಜನ ದಷ್ಟು ವಿಸ್ತಾರವಾದ ಶರೀರವುಳ್ಳವನಾಗಿ ಎದುರಿಗೆ ನಿಂತನು.

**ದೃಷ್ಟ್ವಾ ಹನುಮತೋ ರೂಪಂ ಸುರಸಾ ಪಂಚಯೋಜನಮ್ ।**
**ಮುಖಂ ಚಕಾರ ಹನುಮಾನ್ ದ್ವಿಗುಣಂ ರೂಪಮಾದಧತ್ ॥ ೧೮ ॥**
**ತತಶ್ಚಕಾರ ಸುರಸಾ ಯೋಜನಾನಾಂ ಚ ವಿಂಶತಿಮ್ ।**
**ವಕ್ತ್ರಂ ಚಕಾರ ಹನುಮಾನ್ ತ್ರಿಂಶದ್ಯೋಜನಸಂಮಿತಮ್ · ॥ ೧೯ ॥**

**ತತಶ್ಚಕಾರ ಸುರಸಾ ಪಂಚಾಶದ್ಯೋಜನಾಯತಮ್ ।**
**ವಕ್ತ್ರಂ ತದಾ ಹನೂಮಾಂಸ್ತು ಬಭೂವಾಂಗುಷ್ಠಸನ್ನಿಭಃ ॥ ೨೦ ॥**
**ಪ್ರವಿಶ್ಯ ವದನಂ ತಸ್ಯಾಃ ಪುನರೇತ್ಯ ಪುರಃ ಸ್ಥಿತಃ**

೧೮-೧೯. ಸುರಸೆಯು ಹನುಮಂತನ ರೂಪವನ್ನು ಕಂಡು ಐದುಯೋಜನ ದಗಲವಾದ ಮುಖವನ್ನು ಮಾಡಿದಳು. ಆಗ ಹನುಮಂತನು ಅದಕ್ಕೆರಡರಷ್ಟು ದೊಡ್ಡ ರೂಪವನ್ನು ಧರಿಸಿದನು. ಅನಂತರ ಸುರಸೆಯು ಇಪ್ಪತ್ತು ಯೋಜನದಗಲವಾದ ಮುಖವನ್ನು ಮಾಡಿದಳು. ಆಗ ಹನುಮಂತನು ಮೂವತ್ತುಯೋಜನದಷ್ಟು ಶರೀರವುಳ್ಳವನಾದನು. ಅನಂತರ ಸುರಸೆಯು ಐವತ್ತುಯೋಜನಗಳಷ್ಟು ಅಗಲವಾದ ಮುಖವನ್ನು ಹಿಗ್ಗಿಸಿದಳು. ಆಗ ಹನುಮಂತನು ಅಂಗುಷ್ಠಬೆರಳಿನಷ್ಟು ಚಿಕ್ಕವನಾಗಿ ಆಕೆಯ ಬಾಯೊಳಗೆ ಹೊಕ್ಕು ಪುನಃ ಹಿಂದಕ್ಕೆ ಬಂದು ಎದುರಿಗೆ ನಿಂತನು.

**ಪ್ರವಿಷ್ಟೋ ನಿರ್ಗತೋಽಹಂ ತೇ ವದನಂ ದೇವಿ ತೇ ನಮಃ ।**
**ಏವಂ ವದಂತಂ ದೃಷ್ಟ್ವಾ ಸಾ ಹನೂಮಂತಮಥಾಬ್ರವೀತ್ ॥ ೨೧ ॥**
**ಗಚ್ಛ ಸಾಧಯ ರಾಮಸ್ಯ ಕಾರ್ಯಂ ಬುದ್ಧಿಮತಾಂ ವರ ।**
**ದೇವೈಃ ಸಂಪ್ರೇಷಿತಾಹಂ ತೇ ಬಲಂ ಜಿಜ್ಞಾಸುಭಿಃ ಕಪೇ ॥ ೨೨ ॥**
**ದೃಷ್ಟ್ವಾ ಸೀತಾಂ ಪುನರ್ಗತ್ವಾ ರಾಮಂ ದ್ರಕ್ಷ್ಯಸಿ ಗಚ್ಛ ಭೋಃ ॥**

೨೧-೨೨. "ಎಲೌ ದೇವಿಯೆ, ನಿನ್ನ ಬಾಯನ್ನು ಪ್ರವೇಶಿಸಿ ಹೊರಬಂದ ವನಾಗಿರುವೆನು. ನಿನಗೆ ನಮಸ್ಕಾರವಿರಲಿ," ಹೀಗೆ ಹೇಳುತ್ತಿದ್ದ ಆ ಹನುಮಂತನನ್ನು ಕಂಡು ಆಕೆಯು ಹೀಗೆಂದಳು : "ಎಲೈ ಬುದ್ಧಿವಂತರಲ್ಲಿ ಶ್ರೇಷ್ಠನೆ, ರಾಮಕಾರ್ಯವನ್ನು ಸಾಧಿಸುವವನಾಗು ; ಹೊರಡು ; ಎಲೈ ಕಪಿಯೆ, ನಿನ್ನ ಬಲವನ್ನು ಗೊತ್ತುಪಡಿಸುವದ ಕ್ಕಾಗಿ ದೇವತೆಗಳಿಂದ ಕಳುಹಿಸಲ್ಪಟ್ಟ ನಾನು (ಮೆಚ್ಚಿದೆನು). ಸೀತೆಯನ್ನು ಕಂಡು ಹಿಂದಿರುಗಿ ಬಂದು ರಾಮನನ್ನು ಕಾಣಲಿರುವೆ!"

**ಇತ್ಯುಕ್ತ್ವಾ ಸಾ ಯಯೌ ದೇವಲೋಕಂ ವಾಯುಸುತಃ ಪುನಃ ।**
**ಜಗಾಮ ವಾಯುಮಾರ್ಗೇಣ ಗರುತ್ಮಾನಿವ ಪಕ್ಷಿರಾಟ್ ॥ ೨೩ ॥**
**ಸಮುದ್ರೋಽಪ್ಯಾಹ ಮೈನಾಕಂ ಮಣಿಕಾಂಚನಪರ್ವತಮ್ ।**
**ಗಚ್ಛತ್ಯೇಷ ಮಹಾಸತ್ವೋ ಹನೂಮಾನ್ ಮಾರುತಾತ್ಮಜಃ ॥ ೨೪ ॥**
**ರಾಮಸ್ಯ ಕಾರ್ಯಸಿದ್ಧ್ಯರ್ಥಂ ತಸ್ಯ ತ್ವಂ ಸಚಿವೋ ಭವ ।**

೨೩ - ೨೪. ಹೀಗೆಂದು ಹೇಳಿ ಆಕೆಯು ದೇವಲೋಕಕ್ಕೆ ಹೊರಟಳು. ಮತ್ತೆ ಹನುಮಂತನು ವಾಯುಮಾರ್ಗದಿಂದ ಪಕ್ಷಿಶ್ರೇಷ್ಠನಾದ ಗರುಡನಂತೆ ಹೊರಟನು. ಆಗ

ಸಮುದ್ರರಾಜನು ಚಿನ್ನ - ರತ್ನಮಯವಾದ ಮೈನಾಕಪರ್ವತವನ್ನು ಕುರಿತು ಹೀಗೆಂದನು. ''ಇದೊ, ಬಹಳ ಗಟ್ಟಿಗನಾದ, ಮಾರುತನ ಮಗನಾದ ಹನುಮಂತನು ರಾಮನ ಕಾರ್ಯ ಸಾಧನೆಗಾಗಿ ಹೋಗುತ್ತಿರುವನು, ನೀನು ಅವನಿಗೆ ಸಹಾಯಕನಾಗು.''

**ಸಗರೈರ್ವರ್ಧಿತೋ ಯಸ್ಮಾತ್ ಪುರಾಹಂ ಸಾಗರೋಽಭವಮ್ ।**
**ತಸ್ಯಾನ್ವಯೇ ಬಭೂವಾಸೌ ರಾಮೋ ದಾಶರಥಿಃ ಪ್ರಭುಃ ॥ ೨೫ ॥**
**ತಸ್ಯ ಕಾರ್ಯಾರ್ಥಸಿದ್ಧ್ಯರ್ಥಂ ಗಚ್ಛತ್ಯೇಷ ಮಹಾಕಪಿಃ ।**
**ತ್ವಮುತ್ತಿಷ್ಠ ಜಲಾತ್ ತೂರ್ಣಂ ತ್ವಯಿ ವಿಶ್ರಮ್ಯ ಗಚ್ಛತು ॥ ೨೬ ॥**
**ಸ ತಥೇತಿ ಪ್ರಾದುರಭೂತ್ ಜಲಮಧ್ಯಾನ್ಮಹೋನ್ನತಃ ।**
**ನಾನಾಮಣಿಮಯೈಃ ಶೃಂಗೈಸ್ತಸ್ಯೋಪರಿ ನರಾಕೃತಿಃ ॥ ೨೭ ॥**

೨೫-೨೭. ''ಸಗರಪುತ್ರರಿಂದ ಹಿಂದೆ ಬೆಳೆಸಲ್ಪಟ್ಟ ನಾನು ಸಾಗರನೆನಿಸಿದೆನು. ಆ(ಸಗರನ)ವಂಶದಲ್ಲಿಯೇ ದಶರಥಪುತ್ರನಾದ ಪ್ರಭುವಾದ ರಾಮನು ಹುಟ್ಟಿದನು. ಅವನ ಕೆಲಸಕ್ಕಾಗಿ ಈ ಮಹಾಕಪಿಯು ಪ್ರಯಾಣಮಾಡುತ್ತಿರುವನು. ನೀನು ಜಾಗ್ರತೆ ಯಾಗಿ ನೀರಿನಿಂದ ಎದ್ದೇಳು. ನಿನ್ನಲ್ಲಿ ಆತನು ವಿಶ್ರಾಂತಿಯನ್ನು ಹೊಂದಿ ಹೋಗಲಿ.'' ಎಂದನು ಆಗ ಅವನು ಹಾಗೆಯೇ ಆಗಲೆಂದು ನೀರಿನ ಮಧ್ಯದಿಂದ ಎತ್ತರವಾದ ಆಕಾರ ದಿಂದ ನಾನಾಮಣಿಮಯವಾದ ಶಿಖರಗಳ ಮೇಲೆ ಮನುಷ್ಯಾಕಾರನಾಗಿ ತೋರಿ ಕೊಂಡನು.

**ಪ್ರಾಹ ಯಾಂತಂ ಹನೂಮಂತಂ ಮೈನಾಕೋಽಹಂ ಮಹಾಕಪೇ ।**
**ಸಮುದ್ರೇಣ ಸಮಾದಿಷ್ಟಸ್ತ್ವದ್ವಿಶ್ರಾಮಾಯ ಮಾರುತೇ ॥ ೨೮ ॥**
**ಆಗಚ್ಛಾಮೃತಕಲ್ಪಾನಿ ಜಗ್ಧ್ವಾ ಪಕ್ವಫಲಾನಿ ಮೇ ।**
**ವಿಶ್ರಮ್ಯಾತ್ರ ಕ್ಷಣಂ ಪಶ್ಚಾದ್ ಗಮಿಷ್ಯಸಿ ಯಥಾಸುಖಮ್ ॥ ೨೯ ॥**

೨೮-೨೯. ಹೋಗುತ್ತಿರುವ ಹನುಮಂತನನ್ನು ಕುರಿತು ಹೀಗೆಂದನು : ''ಎಲೈ ಮಹಾಕಪಿಯೆ, ನಾನು ಮೈನಾಕನು. ಮಾರುತಿಯೆ, ನಿನ್ನ ವಿಶ್ರಾಂತಿಗಾಗಿ ಸಮುದ್ರರಾಜ ನಿಂದ ಅಪ್ಪಣೆಮಾಡಲ್ಪಟ್ಟಿರುವೆನು. ಇಳಿದು ಬಾ. ಅಮೃತಸಮಾನವಾದ ಪಕ್ವವಾದ ಹಣ್ಣು ಗಳನ್ನು ತಿಂದು ನನ್ನಲ್ಲಿ ವಿಶ್ರಾಂತಿಯನ್ನು ಪಡೆದು ಅನಂತರ ಸುಖವಾಗಿ ಹೋಗುವೆ ಯಂತೆ.''

**ಏವಮುಕ್ತೋಽಥ ತಂ ಪ್ರಾಹ ಹನೂಮಾನ್ ಮಾರುತಾತ್ಮಜಃ ।**
**ಗಚ್ಛತೋ ರಾಮಕಾರ್ಯಾರ್ಥಂ ಭಕ್ಷಣಂ ಮೇ ಕಥಂ ಭವೇತ್ ॥ ೩೦ ॥**
**ವಿಶ್ರಾಮೋ ವಾ ಕಥಂ ಮೇ ಸ್ಯಾತ್ ಗಂತವ್ಯಂ ತ್ವರಿತಂ ಮಯಾ ।**
**ಇತ್ಯುಕ್ತ್ವಾ ಸ್ಪೃಷ್ಟಶಿಖರಃ ಕರಾಗ್ರೇಣ ಯಯೌ ಕಪಿಃ ॥ ೩೧ ॥**

೩೦-೩೧. ಹೀಗೆ ಹೇಳಲ್ಪಟ್ಟ ಮಾರುತನ ಮಗನಾದ ಹನುಮಂತನು ಅವನನ್ನು ಕುರಿತು ಹೀಗೆಂದನು : ''ರಾಮನ ಕಾರ್ಯಕ್ಕಾಗಿ ಹೊರಟಿರುವ ನನಗೆ ತಿನ್ನುವದು ಹೇಗೆ ಸರಿಯಾದೀತು ? ಮತ್ತು ವಿಶ್ರಾಂತಿಯನ್ನು ಪಡೆಯುವದಾದರೂ ಹೇಗೆ ಯೋಗ್ಯವಾದೀತು? ನಾನು ಬೇಗನೆ ಹೋಗಬೇಕಾಗಿದೆ.'' ಎಂದು ಹೇಳಿ ಕೈಗಳ ತುದಿಯಿಂದ (ಮೈನಾಕನ) ಶಿಖರವನ್ನು ಮುಟ್ಟಿ ಆ ಕಪಿಯು ಹೊರಟನು.

**ಕಿಂಚಿದ್ದೂರಂ ಗತಸ್ಯಾಸ್ಯ ಛಾಯಾಂ ಛಾಯಾಗ್ರಹೋಽಗ್ರಹೀತ್ ।**
**ಸಿಂಹಿಕಾ ನಾಮ ಸಾ ಘೋರಾ ಜಲಮಧ್ಯೇ ಸ್ಥಿತಾ ಸದಾ ॥ ೩೨ ॥**
**ಆಕಾಶಗಾಮಿನಾಂ ಛಾಯಾಮಾಕ್ರಮ್ಯಾಕೃಷ್ಯ ಭಕ್ಷಯೇತ್ ।**
**ತಯಾ ಗೃಹೀತೋ ಹನುಮಾಂಶ್ಚಿಂತಯಾಮಾಸ ವೀರ್ಯವಾನ್ ॥ ೩೩ ॥**
**ಕೇನೇದಂ ಮೇ ಕೃತಂ ವೇಗರೋಧನಂ ವಿಘ್ನಕಾರಿಣಾ ।**
**ದೃಶ್ಯತೇ ನೈವ ಕೋಽಪ್ಯತ್ರ ವಿಸ್ಮಯೋ ಮೇ ಪ್ರಜಾಯತೇ ॥ ೩೪ ॥**

೩೨-೩೪. ಸ್ವಲ್ಪದೂರ ಹೋದ ಅನಂತರ ಅವನ ನೆರಳನ್ನು ಸಿಂಹಿಕೆ ಎಂಬ ಹೆಸರಿನ, ಯಾವಾಗಲೂ ನೀರಿನಲ್ಲಿ ಇರುವ ಭಯಂಕರವಾದ ಛಾಯಾಗ್ರಹವು ಹಿಡಿದು ಕೊಂಡಿತು. ಅದು ಆಕಾಶದಲ್ಲಿ ಸಂಚರಿಸುವ ಪ್ರಾಣಿಗಳ ನೆರಳನ್ನು ಸೆಳೆದು (ಅನಂತರ ಪ್ರಾಣಿಗಳನ್ನು ಹಿಡಿದು) ತಿನ್ನುವಂಥಾದ್ದಾಗಿತ್ತು. ಆ ಗ್ರಹದಿಂದ ಹಿಡಿಯಲ್ಪಟ್ಟ ವೀರ್ಯಶಾಲಿಯಾದ ಹನುಮಂತನು ''ವಿಘ್ನಮಾಡುವ ಯಾರಿಂದ ಈ ನನ್ನ ವೇಗವು ತಡೆಯಲ್ಪಟ್ಟಿತು ? ಇಲ್ಲಿ ಯಾರೊಬ್ಬರೂ ಕಾಣಿಸುತ್ತಿಲ್ಲ. ನನಗೆ ಆಶ್ಚರ್ಯವಾಗುತ್ತಿದೆ'' ಎಂದು ಆಲೋಚಿಸಲು ಆರಂಭಿಸಿದನು.

**ಏವಂ ವಿಚಿಂತ್ಯ ಹನುಮಾನಧೋ ದೃಷ್ಟಿಂ ಪ್ರಸಾರಯತ್ ।**
**ತತ್ರ ದೃಷ್ಟ್ವಾ ಮಹಾಕಾಯಾಂ ಸಿಂಹಿಕಾಂ ಘೋರರೂಪಿಣೀಮ್ ॥ ೩೫ ॥**
**ಪಪಾತ ಸಲಿಲೇ ತೂರ್ಣಂ ಪದ್ಭ್ಯಾಮೇವಾಹನದ್ ರುಷಾ ।**
**ಪುನರುತ್ಪ್ಲುತ್ಯ ಹನುಮಾನ್ ದಕ್ಷಿಣಾಭಿಮುಖೋ ಯಯೌ ॥ ೩೬ ॥**

೩೫-೩೬. ಹೀಗೆ ಆಲೋಚಿಸಿ ಹನುಮಂತನು ತನ್ನ ದೃಷ್ಟಿಯನ್ನು ಕೆಳ ಚಾಚಿದನು. ಅಲ್ಲಿ ಮಹಾಭಯಂಕರಳಾದ ದೊಡ್ಡ ಶರೀರದ ಸಿಂಹಿಕೆಯನ್ನು ಕಂಡು ವೇಗವಾಗಿ ನೀರಿನೊಳಕ್ಕೆ ಬಿದ್ದನು. ಕೋಪದಿಂದ ಕಾಲುಗಳಿಂದಲೇ ಅವಳನ್ನು ಒದ್ದು ಕೊಂದನು. ಮತ್ತೆ ಮೇಲಕ್ಕೆ ನೆಗೆದು ದಕ್ಷಿಣಾಭಿಮುಖನಾಗಿ ಹೊರಟನು.

**ತತೋ ದಕ್ಷಿಣಮಾಸಾದ್ಯ ಕೂಲಂ ನಾನಾಫಲದ್ರುಮಮ್ ।**
**ನಾನಾಪಕ್ಷಿ ಮೃಗಾಕೀರ್ಣಂ ನಾನಾಪುಷ್ಪಲತಾವೃತಮ್ ॥ ೩೭ ॥**

**ತತೋ ದದರ್ಶ ನಗರಂ ತ್ರಿಕೂಟಾಚಲಮೂರ್ಧನಿ ।**
**ಪ್ರಾಕಾರೈರ್ಬಹುಭಿರ್ಯುಕ್ತಂ ಪರಿಖಾಭಿಶ್ಚ ಸರ್ವತಃ ॥ ೩೮ ॥**
**ಪ್ರವೇಕ್ಷ್ಯಾಮಿ ಕಥಂ ಲಂಕಾಮಿತಿ ಚಿಂತಾಪರೋಽಭವತ್ ।**

೩೭-೩೮. ಅನಂತರ ದಕ್ಷಿಣತೀರವನ್ನು ತಲುಪಿ ಅಲ್ಲಿ ಅನೇಕ ಮೃಗಪಕ್ಷಿಗಳಿಂದ ತುಂಬಿದ್ದ ನಾನಾವಿಧವಾದ ಹೂವು - ಬಳ್ಳಿಗಳಿಂದ ಆವೃತವಾಗಿದ್ದ ತ್ರಿಕೂಟಪರ್ವತದ ಮೇಲ್ಭಾಗದಲ್ಲಿದ್ದ ಹಾಗೂ ಸುತ್ತಲೂ ಅನೇಕ ಕೋಟೆಗಳಿಂದಲೂ ಅಗಳುಗಳಿಂದಲೂ ಕೂಡಿದ್ದ ಲಂಕೆಯನ್ನು ಹೇಗೆ ಪ್ರವೇಶಿಸಲಿ ? ಎಂದು ಚಿಂತಾಕ್ರಾಂತನಾದನು.

**ರಾತ್ರೌ ವೇಕ್ಷ್ಯಾಮಿ ಸೂಕ್ಷ್ಮೋಽಹಂ ಲಂಕಾಂ ರಾವಣಪಾಲಿತಾಮ್ ।**
**ಏವಂ ವಿಚಿಂತ್ಯ ತತ್ರೈವ ಸ್ಥಿತ್ವಾ ಲಂಕಾಂ ಜಗಾಮ ಸಃ ॥ ೩೯ ॥**
**ಧೃತ್ವಾ ಸೂಕ್ಷ್ಮಂ ವಪುರ್ದ್ವಾರಂ ಪ್ರವಿವೇಶ ಪ್ರತಾಪವಾನ್ ।**

೩೯. ''ರಾತ್ರಿವೇಳೆಯಲ್ಲಿ ಸೂಕ್ಷ್ಮರೂಪನಾಗಿ ನಾನು ರಾವಣನಿಂದ ಆಳಲ್ಪಡುತ್ತಿರುವ ಲಂಕೆಯನ್ನು ಪ್ರವೇಶಿಸುವೆನು''-ಹೀಗೆಂದು ಚಿಂತಿಸಿ ಅಲ್ಲೇ ಇದ್ದುಕೊಂಡಿದ್ದು (ಸಂಜೆಯ ವೇಳೆಗೆ) ಸೂಕ್ಷ್ಮವಾದ ಶರೀರವನ್ನು ಧರಿಸಿ ಪ್ರತಾಪಶಾಲಿಯಾದ ಆತನು ಲಂಕೆಯ ಬಾಗಿಲನ್ನು ಹೊಕ್ಕನು.

**ತತ್ರ ಲಂಕಾಪುರೀ ಸಾಕ್ಷಾದ್ ರಾಕ್ಷಸೀರೂಪಧಾರಿಣೀ ।**
**ಪ್ರವಿಶಂತಂ ಹನೂಮಂತಂ ದೃಷ್ಟ್ವಾ ಲಂಕಾ ವ್ಯತರ್ಜಯತ್ ॥ ೪೦ ॥**
**ಕಸ್ತ್ವಂ ವಾನರರೂಪೇಣ ಮಾಮನಾದೃತ್ಯ ಲಂಕಿಣೀಮ್ ।**
**ಪ್ರವಿಶ್ಯ ಚೋರವದ್ ರಾತ್ರೌ ಕಿಂ ಭವಾನ್ ಕರ್ತುಮಿಚ್ಛತಿ ॥ ೪೧ ॥**
**ಇತ್ಯುಕ್ತ್ವಾ ರೋಷತಾಮ್ರಾಕ್ಷೀ ಪಾದೇನಾಭಿಜಘಾನ ತಮ್ ।**

೪೦-೪೧. ಅಲ್ಲಿ ರಾಕ್ಷಸವೇಷವನ್ನು ಧರಿಸಿದ್ದ ಲಂಕಾಧಿದೇವತೆಯು ಒಳಕ್ಕೆ ಪ್ರವೇಶಮಾಡುತ್ತಿದ್ದ ಹನುಮಂತನನ್ನು ಕಂಡು ಹೀಗೆಂದು ಗದರಿಸಿದಳು : ''ಯಾರೊ, ನೀನು? ನನ್ನನ್ನು ತಿರಸ್ಕರಿಸಿ ಕಪಿಯ ವೇಷದಿಂದ ಕಳ್ಳನಂತೆ ರಾತ್ರಿಯಲ್ಲಿ ಒಳಹೊಕ್ಕು ಏನುಮಾಡಬೇಕೆಂದಿರುವೆ ?'' ಹೀಗೆ ಹೇಳುತ್ತಾ ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ ಕಾಲಿನಿಂದ ಅವನನ್ನು ಒದ್ದಳು.

**ಹನುಮಾನಪಿ ತಾಂ ವಾಮಮುಷ್ಟಿನಾಽವಜ್ಞಯಾಽಹನತ್ ।**
**ತದೈವ ಪತಿತಾ ಭೂಮೌ ರಕ್ತಮುದ್ವಮತೀ ಭೃಶಮ್ ॥ ೪೨ ॥**
**ಉತ್ಥಾಯ ಪ್ರಾಹ ಸಾ ಲಂಕಾ ಹನೂಮಂತಂ ಮಹಾಬಲಮ್ ।**
**ಹನೂಮಾನ್ ಗಚ್ಛ ಭದ್ರಂ ತೇ ಜಿತಾ ಲಂಕಾ ತ್ವಯಾನಘ ॥ ೪೩ ॥**

೪೨-೪೩. ಹನುಮಂತನೂ ಆಕೆಯನ್ನು ಎಡಗೈಮುಷ್ಟಿಯಿಂದ ತಿರಸ್ಕಾರವಾಗಿ ಹೊಡೆದನು. ಅಷ್ಟುಮಾತ್ರಕ್ಕೇ ಆಕೆಯು ಕೂಡಲೆ ರಕ್ತವನ್ನು ಕಾರುತ್ತಾ ನೆಲದಮೇಲೆ ಬಿದ್ದಳು. ಮತ್ತೆ ಮೇಲೆದ್ದು ಆ ಲಂಕಿಣಿಯು ಮಹಾಬಲಶಾಲಿಯಾದ ಹನುಮಂತನನ್ನು ಕುರಿತು ''ಎಲೈ ಹನುಮಂತನೆ, ನಿನಗೆ ಮಂಗಳವಾಗಲಿ ! ಪಾಪರಹಿತನೆ, ನೀನು ಲಂಕೆಯನ್ನು ಗೆದ್ದಿರುವೆ. ನೀನು ಮುಂದಕ್ಕೆ ಹೊರಡುವವನಾಗು- ಎಂದಳು.

**ಪುರಾಹಂ ಬ್ರಹ್ಮಣಾ ಪ್ರೋಕ್ತಾ ಹ್ಯಷ್ಟಾವಿಂಶತಿಪರ್ಯಯೇ ।**
**ತ್ರೇತಾಯುಗೇ ದಾಶರಥೀ ರಾಮೋ ನಾರಾಯಣೋಽವ್ಯಯಃ ॥ ೪೪ ॥**
**ಜನಿಷ್ಯತೇ ಯೋಗಮಾಯಾ ಸೀತಾ ಜನಕವೇಶ್ಮನಿ ।**
**ಭೂಭಾರಹರಣಾರ್ಥಾಯ ಪ್ರಾರ್ಥಿತೋಽಯಂ ಮಯಾ ಕ್ವಚಿತ್ ॥ ೪೫ ॥**
**ಸಭಾರ್ಯೋ ರಾಘವೋ ಭ್ರಾತ್ರಾ ಗಮಿಷ್ಯತಿ ಮಹಾವನಮ್ ।**
**ತತ್ರ ಸೀತಾಂ ಮಹಾಮಾಯಾಂ ರಾವಣೋಽಪಹರಿಷ್ಯತಿ ॥ ೪೬ ॥**

೪೪-೪೬. ಹಿಂದೆ ನಾನು ಬ್ರಹ್ಮನಿಂದ ತಿಳಿದದ್ದೇನೆಂದರೆ: ಇಪ್ಪತ್ತೆಂಟನೆಯ ಬಾರಿಗೆ (ಬಂದ ಕಾಲಮಾನದ) ತ್ರೇತಾಯುಗದಲ್ಲಿ ಒಮ್ಮೆ ಭೂಭಾರವನ್ನು ಪರಿಹರಿಸಬೇಕೆಂದು ನನ್ನಿಂದ ಪ್ರಾರ್ಥಿಸಲ್ಪಟ್ಟ ಅವ್ಯಯನಾದ ನಾರಾಯಣನು ದಶರಥನ ಮಗನಾಗಿ ಹುಟ್ಟಲಿರುವನು. ಜನಕರಾಜನ ಮನೆಯಲ್ಲಿ ಯೋಗಮಾಯೆಯು ಸೀತೆಯಾಗಿ ಹುಟ್ಟಲಿರುವಳು. ಪತ್ನೀಸಮೇತನಾದ ರಾಮನು ತಮ್ಮನೊಡನೆ ಕಾಡಿಗೆ ತೆರಳುವನು. ಅಲ್ಲಿ ಮಹಾಮಾಯೆಯಾದ ಸೀತೆಯನ್ನು ರಾವಣನು ಅಪಹರಿಸುವನು.

**ಪಶ್ಚಾದ್ ರಾಮೇಣ ಸಾಚಿವ್ಯಂ ಸುಗ್ರೀವಸ್ಯ ಭವಿಷ್ಯತಿ ।**
**ಸುಗ್ರೀವೋ ಜಾನಕೀಂ ದ್ರಷ್ಟುಂ ವಾನರಾನ್ ಪ್ರೇಷಯಿಷ್ಯತಿ ॥ ೪೭ ॥**
**ತತ್ರೈಕೋ ವಾನರೋ ರಾತ್ರಾವಾಗಮಿಷ್ಯತಿ ತೇಽಂತಿಕಮ್ ।**
**ತ್ವಯಾ ಚ ಭರ್ತ್ಸಿತಃ ಸೋಽಪಿ ತ್ವಾಂ ಹನಿಷ್ಯತಿ ಮುಷ್ಟಿನಾ ॥ ೪೮ ॥**
**ತೇನಾಹತಾ ತ್ವಂ ವ್ಯಥಿತಾ ಭವಿಷ್ಯಸಿ ಯದಾನಘೇ ।**
**ತದೈವ ರಾವಣಸ್ಯಾಂತೋ ಭವಿಷ್ಯತಿ ನ ಸಂಶಯಃ ॥ ೪೯ ॥**

೪೭-೪೯. ''ಅನಂತರ ರಾಮನೊಡನೆ ಸುಗ್ರೀವನಿಗೆ ಸ್ನೇಹವಾಗುವದು. ಸುಗ್ರೀವನು ಸೀತೆಯನ್ನು ನೋಡುವದಕ್ಕಾಗಿ ಕಪಿಗಳನ್ನು ಕಳುಹಿಸುವನು. ಅಲ್ಲಿ ಒಂದು ಕಪಿಯು ರಾತ್ರೆಯಲ್ಲಿ ನಿನ್ನ ಸಮೀಪಕ್ಕೆ ಬರಲಿದೆ. ನಿನ್ನಿಂದ ಗದರಿಸಲ್ಪಟ್ಟ ಆ ಕಪಿಯು ಮುಷ್ಟಿಯಿಂದ ನಿನ್ನನ್ನು ಗುದ್ದುವದು. ಅದರಿಂದ ಹೊಡೆಯಲ್ಪಟ್ಟ ನೀನು ಎಲೈ ಪಾಪರಹಿತಳೆ, ಯಾವಾಗ ಕಳೆಗುಂದಿ ಸೋಲುವೆಯೋ ಆಗಲೇ ರಾವಣನ ನಾಶವು ಆಗಲಿದೆ. ಈ ವಿಷಯದಲ್ಲಿ ಸಂಶಯವಿಲ್ಲ.

**ತಸ್ಮಾತ್ ತ್ವಯಾ ಜಿತಾ ಲಂಕಾ ಜಿತಂ ಸರ್ವಂ ತ್ವಯಾನಘ ।**
**ರಾವಣಾಂತಃಪುರವರೇ ಕ್ರೀಡಾಕಾನನಮುತ್ತಮಮ್ ॥ ೫೦ ॥**
**ತನ್ಮಧ್ಯೇಽಶೋಕವನಿಕಾ ದಿವ್ಯಪಾದಪಸಂಕುಲಾ ।**
**ಅಸ್ತಿ ತಸ್ಯಾಂ ಮಹಾವೃಕ್ಷಃ ಶಿಂಶಪಾ ನಾಮ ಮಧ್ಯಗಃ ॥ ೫೧ ॥**
**ತತ್ರಾಸ್ತೇ ಜಾನಕೀ ಘೋರರಾಕ್ಷಸೀಭಿಃ ಸುರಕ್ಷಿತಾ ।**
**ದೃಷ್ಟ್ವೈವ ಗಚ್ಛ ತ್ವರಿತಂ ರಾಘವಾಯ ನಿವೇದಯ ॥ ೫೨ ॥**

೫೦-೫೨. ''ಆದ್ದರಿಂದ ನೀನು ಲಂಕೆಯನ್ನು ಗೆದ್ದಿರುವೆ. ಎಲೈ ಪಾಪರಹಿತನೆ, ಇದರಿಂದ ನೀನು ಎಲ್ಲವನ್ನೂ ಗೆದ್ದಂತಾಯಿತು. (ಈಗ ಕೇಳು.) ರಾವಣನ ಅಂತಃಪುರದ ನಡುವೆ ಒಂದು ಕ್ರೀಡಾತೋಟವಿದೆ. ಅದರ ನಡುವೆ ಒಳ್ಳೆಯ ಮರಗಳಿಂದ ನಿಬಿಡವಾದ ಅಶೋಕವನವೆಂಬ ಒಂದು ಕೈತೋಟವಿದೆ. ಅಲ್ಲಿ ಒಂದು ಶಿಂಶಪಾ ಎಂಬ ಹೆಸರಿನ ದೊಡ್ಡ ಮರವಿದೆ. ಅಲ್ಲಿ ಭಯಂಕರರಾದ ರಾಕ್ಷಸಿಯರಿಂದ ಕಾಪಾಡಲ್ಪಟ್ಟ ಸೀತೆಯು ಇದ್ದುಕೊಂಡಿರುವಳು. ಆಕೆಯನ್ನು ಕಂಡು ಕೂಡಲೆ ಹೊರಟು ನೀನು ಶ್ರೀರಾಮನಿಗೆ ತಿಳಿಸುವವನಾಗು.''

**ಧನ್ಯಾಹಮಪ್ಯದ್ಯ ಚಿರಾಯ ರಾಘವ-**
**ಸ್ಮೃತಿರ್ಮಮಾಸೀದ್ ಭವಪಾಶಮೋಚನೀ ।**
**ತದ್ಭಕ್ತಸಂಗೋಽಪ್ಯತಿದುರ್ಲಭೋ ಮಮ**
**ಪ್ರಸೀದತಾಂ ದಾಶರಥಿಃ ಸದಾ ಹೃದಿ ॥ ೫೩ ॥**
**ಉಲ್ಲಂಘಿತೇಽಬ್ಧೌ ಪವನಾತ್ಮಜೇನ**
**ಧರಾಸುತಾಯಾಶ್ಚ ದಶಾನನಸ್ಯ ।**
**ಪುಸ್ಫೋರ ವಾಮಾಕ್ಷಿ ಭುಜಶ್ಚ ತೀವ್ರಂ**
**ರಾಮಸ್ಯ ದಕ್ಷಾಂಗಮತೀಂದ್ರಿಯಸ್ಯ ॥ ೫೪ ॥**

೫೩-೫೪. ನಾನು ಈಗ ಧನ್ಯಳಾದೆನು. ಬಹಳ ಕಾಲದ ಅನಂತರ ಸಂಸಾರ ಬಂಧವನ್ನೇ ನಾಶಗೊಳಿಸುವ ರಾಮನ ನೆನಪು ದೊರಕಿತು. ಆ (ರಾಮ)ನ ಭಕ್ತರ ಸ್ನೇಹವೂ ನನಗೆ ಅತಿದುರ್ಲಭವೇ ಸರಿ. ದಾಶರಥಿಯು ಯಾವಾಗಲೂ ನನಗೆ ಪ್ರಸನ್ನನಾಗಲಿ ! (ಎಂದು ಪ್ರಾರ್ಥಿಸಿದಳು.) ಹೀಗೆ ಸಮುದ್ರವು ದಾಟಲ್ಪಡಲಾಗಿ ಸೀತಾದೇವಿಯ ಹಾಗೂ ರಾವಣನ ಎಡಗಣ್ಣು ಭುಜಗಳೂ ಇಂದ್ರಿಯಗೋಚರನಲ್ಲದ ರಾಮನ ಬಲಭಾಗದ ಶರೀರವೂ ಹಾರಿದವು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಸುಂದರಕಾಂಡೇ ಪ್ರಥಮಃ ಸರ್ಗಃ**

-----------

# ಎರಡನೆಯ ಸರ್ಗ

**ಶ್ರೀ ಮಹಾದೇವ ಉವಾಚ :-**

**ತತೋ ಜಗಾಮ ಹನುಮಾನ್ ಲಂಕಾಂ ಪರಮಶೋಭನಾಮ್ ।**
**ರಾತ್ರೌ ಸೂಕ್ಷ್ಮತನುರ್ಭೂತ್ವಾ ಬಭ್ರಾಮ ಪರಿತಃ ಪುರೀಮ್ ॥ ೧ ॥**
**ಸೀತಾನ್ವೇಷಣಕಾರ್ಯಾರ್ಥೀ ಪ್ರವಿವೇಶ ನೃಪಾಲಯಮ್ ।**
**ತತ್ರ ಸರ್ವಪ್ರದೇಶೇಷು ವಿವಿಚ್ಯ ಹನುಮಾನ್ ಕಪಿಃ ॥ ೨ ॥**
**ನಾಪಶ್ಯಜ್ಜಾನಕೀಂ ಸ್ಮೃತ್ವಾ ತತೋ ಲಂಕಾಭಿಭಾಷಿತಾಮ್ ।**
**ಜಗಾಮ ಹನುಮಾನ್ ಶೀಘ್ರಮಶೋಕವನಿಕಾಂ ಶುಭಾಮ್ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಅನಂತರ ಹನುಮಂತನು ಪರಮ ಶೋಭನವಾದ ಲಂಕಾನಗರಿಗೆ ಹೋದನು. ರಾತ್ರೆಯಲ್ಲಿ ಸೂಕ್ಷ್ಮವಾದ ಶರೀರವನ್ನು ಧರಿಸಿ ಊರಿನ ಸುತ್ತಲೂ ತಿರುಗಿದನು. ಸೀತಾದೇವಿಯನ್ನು ಹುಡುಕುವ ಸಲುವಾಗಿ ರಾತ್ರಿಯಲ್ಲಿ ರಾಜನ ಅರಮನೆಯನ್ನು ಪ್ರವೇಶಿಸಿದನು. ಅಲ್ಲಿ ಈ ಕಪಿಯಾದ ಹನುಮಂತನು ಎಲ್ಲಾ ಜಾಗಗಳಲ್ಲಿಯೂ ಹುಡುಕಿ ಆಕೆಯನ್ನು ಕಾಣದೆ ಲಂಕಿಣಿಯು ಹೇಳಿದ್ದ ಮಾತನ್ನು ನೆನಪುಮಾಡಿಕೊಂಡು ಬೇಗನೆ ಶುಭವಾದ ಅಶೋಕವನಕ್ಕೆ ಹೋದನು.

**ಸುರಪಾದಪಸಂಬಾಧಾಂ ರತ್ನಸೋಪಾನವಾಪಿಕಾಮ್ ।**
**ನಾನಾಪಕ್ಷಿಮೃಗಾಕೀರ್ಣಾಂ ಸ್ವರ್ಣಪ್ರಾಸಾದಶೋಭಿತಾಮ್ ॥ ೪ ॥**
**ಫಲೈರಾನಮ್ರಶಾಖಾಗ್ರಪಾದಪೈಃ ಪರಿವಾರಿತಾಮ್ ।**
**ವಿಚಿನ್ವನ್ ಜಾನಕೀಂ ತತ್ರ ಪ್ರತಿವೃಕ್ಷಂ ಮರುತ್ಸುತಃ ॥ ೫ ॥**
**ದದರ್ಶಾಭ್ರಂಲಿಹಂ ತತ್ರ ಚೈತ್ಯಪ್ರಾಸಾದಮುತ್ತಮಮ್ ।**
**ದೃಷ್ಟ್ವಾ ವಿಸ್ಮಯಮಾಪನ್ನೋ ಮಣಿಸ್ತಂಭಶತಾನ್ವಿತಮ್ ॥ ೬ ॥**

೪-೬. ದೇವಲೋಕದ ವೃಕ್ಷಗಳ ಸಮೂಹಗಳಿಂದಲೂ ರತ್ನಮಯವಾದ ಮೆಟ್ಟಿಲುಗಳ ಕೊಳವುಳ್ಳದ್ದಾಗಿಯೂ ಇರುವ, ಅನೇಕ ಮೃಗಪಕ್ಷಿಗಳಿಂದ ತುಂಬಿದ, ಅಲ್ಲಲ್ಲಿ ಚಿನ್ನದ ಉಪ್ಪರಿಗೆಗಳಿಂದ ರಮಣೀಯವಾಗಿರುವ, ಹಣ್ಣುಗಳಿಂದ ಜಗ್ಗಿ ಬುಡದವರೆಗೂ ಬಾಗಿರುವ ಕೊಂಬೆಗಳುಳ್ಳ, ಮರಗಳಿಂದ ತುಂಬಿರುವ ಆ ವನದಲ್ಲಿ ಒಂದೊಂದು ಮರವನ್ನೂ ಕಣ್ಣಿಟ್ಟು ಹುಡುಕುತ್ತಾ ಸೀತೆಯನ್ನು ಅನ್ವೇಷಣೆಮಾಡುತ್ತಿರುವ ವಾಯುಪುತ್ರನು ಅತಿ ಎತ್ತರದಿಂದ ಆಕಾಶವನ್ನು ಮುಟ್ಟುವಂತಿರುವ ಚೈತ್ಯಪ್ರಾಸಾದವೆಂಬ

ಕಟ್ಟಡವನ್ನು ಕಂಡನು. ನೂರಾರು ರತ್ನಮಯವಾದ ಕಂಬಗಳಿಂದ ಕೂಡಿದ ಆ ಪ್ರಾಸಾದವನ್ನು ನೋಡಿ ಆಶ್ಚರ್ಯಗೊಂಡನು.

**ಸಮತೀತ್ಯ ಪುನರ್ಗತ್ವಾ ಕಿಂಚಿದ್ದೂರಂ ಸ ಮಾರುತಿಃ ।**
**ದದರ್ಶ ಶಿಂಶಪಾವೃಕ್ಷಮತ್ಯಂತನಿಬಿಡಚ್ಛದಮ್ ॥ ೭ ॥**
**ಅದೃಷ್ಟಾತಪಮಾಕೀರ್ಣಂ ಸ್ವರ್ಣವರ್ಣವಿಹಂಗಮಮ್ ।**
**ತನ್ಮೂಲೇ ರಾಕ್ಷಸೀಮಧ್ಯೇ ಸ್ಥಿತಾಂ ಜನಕನಂದಿನೀಮ್ ॥ ೮ ॥**
**ದದರ್ಶ ಹನುಮಾನ್ ವೀರೋ ದೇವತಾಮಿವ ಭೂತಲೇ ।**
**ಏಕವೇಣೀಂ ಕೃಶಾಂ ದೀನಾಂ ಮಲಿನಾಂಬರಧಾರಿಣೀಮ್ ॥ ೯ ॥**
**ಭೂಮೌ ಶಯಾನಾಂ ಶೋಚಂತೀಂ ರಾಮ ರಾಮೇತಿ ಭಾಷಿಣೀಮ್ ।**
**ತ್ರಾತಾರಂ ನಾಧಿಗಚ್ಛಂತೀಮುಪವಾಸಕೃಶಾಂ ಶುಭಾಮ್ ॥ ೧೦ ॥**

೭-೧೦. ಅದನ್ನು ದಾಟಿ ಮತ್ತೆ ಸ್ವಲ್ಪದೂರ ಮುಂದೆ ಹೋಗಿ ಬಹಳವಾಗಿ ದಟ್ಟವಾಗಿ ಹರಡಿಕೊಂಡಿರುವ ಎಲೆಗಳುಳ್ಳ, ಬಿಸಿಲನ್ನೇ ಅರಿಯದ ಬುಡವುಳ್ಳ, ಹಾಗೂ ಹಳದಿಯ ಬಣ್ಣದ ಹಕ್ಕಿಗಳಿಂದ ತುಂಬಿದ ಶಿಂಶಪಾವೃಕ್ಷವನ್ನು ಕಂಡನು. ಅದರ ಬುಡದಲ್ಲಿ ಭೂಲೋಕದ ದೇವತೆಯೊ, ಎಂಬಂತಿರುವ, ರಾಕ್ಷಸಿಯರ ನಡುವೆ ಕುಳಿತಿದ್ದ ಸೀತೆಯನ್ನೂ ವೀರನಾದ ಹನುಮಂತನು ನೋಡಿದನು. (ಆಕೆಯು) ಒಂದೇ ಜಡೆಯಿಂದ ಮಾಡಿದ ಕೇಶವುಳ್ಳವಳಾಗಿ, ಬಡಕಲಾಗಿ ದೈನ್ಯದಿಂದ ಕೂಡಿದವಳಾಗಿ, ಮಾಸಿದ ಬಟ್ಟೆಯನ್ನುಟ್ಟವಳಾಗಿ, ನೆಲದಮೇಲೆ ಕುಳಿತು ದುಃಖಿಸುತ್ತಾ ರಾಮ-ರಾಮ- ಎಂದುಚ್ಚರಿಸುತ್ತಾ ತನ್ನನ್ನು ಕಾಪಾಡುವವರನ್ನು ಕಾಣದೆ ಉಪವಾಸದಿಂದ ಬಳಲಿದವಳಾಗಿದ್ದಳು.

**ಶಾಖಾಂತಚ್ಛದಮಧ್ಯಸ್ಥೋ ದದರ್ಶ ಕಪಿಕುಂಜರಃ ।**
**ಕೃತಾರ್ಥೋಽಹಂ ಕೃತಾರ್ಥೋಽಹಂ ದೃಷ್ಟ್ವಾ ಜನಕನಂದಿನೀಮ್ ॥ ೧೧ ॥**
**ಮಯ್ಯೈವ ಸಾಧಿತಂ ಕಾರ್ಯಂ ರಾಮಸ್ಯ ಪರಮಾತ್ಮನಃ ।**
**ತತಃ ಕಿಲಕಿಲಾಶಬ್ದೋ ಬಭೂವಾಂತಃಪುರಾದ್ ಬಹಿಃ ॥ ೧೨ ॥**
**ಕಿಮೇತದಿತಿ ಸಂಲೀನೋ ವೃಕ್ಷಪತ್ರೇಷು ಮಾರುತಿಃ ।**
**ಆಯಾಂತಂ ರಾವಣಂ ದೃಷ್ಟ್ವಾ ಸ್ತ್ರೀಜನೈಃ ಪರಿವಾರಿತಮ್ ॥ ೧೩ ॥**
**ದಶಾಸ್ಯಂ ವಿಂಶತಿಭುಜಂ ನೀಲಾಂಜನಚಯೋಪಮಮ್ ।**
**ದೃಷ್ಟ್ವಾ ವಿಸ್ಮಯಮಾಪನ್ನಃ ಪತ್ರಖಂಡೇಷ್ವಲೀಯತ ॥ ೧೪ ॥**

೧೧-೧೪. ಕಪಿಶ್ರೇಷ್ಠನು ಮರದ ಎಲೆಗಳ ನಡುವೆ ಇದ್ದುಕೊಂಡು (ಸೀತೆಯನ್ನು) ಕಂಡನು. 'ಆಹಾ ! ಸೀತೆಯನ್ನು ಕಂಡ ನಾನು ಕೃತಕೃತ್ಯನಾದೆನು. ಪರಮಾತ್ಮನಾದ ಶ್ರೀರಾಮನ ಕಾರ್ಯವು ನನ್ನಿಂದಲೇ ನೆರವೇರಿಸಲ್ಪಟ್ಟಿತು' (ಎಂದು

ಕೊಂಡನು.) ಅನಂತರ ಅಂತಃಪುರದ ಹೊರಭಾಗದಲ್ಲಿ ಕಿಲ ಕಿಲ- ಎಂಬ ಗಲಾಟೆಯು ಆಯಿತು. ಇದೇನಿರಬಹುದು? ಎಂದು ಮಾರುತಿಯು ಎಲೆಗಳ ಮರೆಯಲ್ಲಿ ಅಡಗಿ ಕೊಂಡವನಾಗಿ, ಸ್ತ್ರೀಜನರೊಡಗೂಡಿ ಬರುತ್ತಿರುವ ಹತ್ತುತಲೆಗಳು ಹಾಗೂ ಇಪ್ಪತ್ತು ತೋಳುಗಳುಳ್ಳ, ನೀಲಪರ್ವತದಂತೆ ಕಾಂತಿಯುಳ್ಳ, ರಾವಣನನ್ನು ಕಂಡು ಆಶ್ಚರ್ಯ ಗೊಂಡವನಾಗಿ ಮತ್ತೆ ಎಲೆಗಳ ಮರೆಯಲ್ಲಿ ಸೇರಿಕೊಂಡನು.

**ರಾವಣೋ ರಾಘವೇಣಾಶು ಮರಣಂ ಮೇ ಕಥಂ ಭವೇತ್ ।**
**ಸೀತಾರ್ಥಮಪಿ ನಾಯಾತಿ ರಾಮಃ ಕಿಂ ಕಾರಣಂ ಭವೇತ್ ॥ ೧೫ ॥**
**ಇತ್ಯೇವಂ ಚಿಂತಯನ್ನಿತ್ಯಂ ರಾಮಮೇವ ಸದಾ ಹೃದಿ ।**
**ತಸ್ಮಿನ್ ದಿನೇಽಪರರಾತ್ರೌ ರಾವಣೋ ರಾಕ್ಷಸಾಧಿಪಃ ॥ ೧೬ ॥**
**ಸ್ವಪ್ನೇ ರಾಮೇಣ ಸಂದಿಷ್ಟಃ ಕಶ್ಚಿದಾಗತ್ಯ ವಾನರಃ ।**
**ಕಾಮರೂಪಧರಃ ಸೂಕ್ಷ್ಮೋ ವೃಕ್ಷಾಗ್ರಸ್ಥೋಽನುಪಶ್ಯತಿ ॥ ೧೭ ॥**

೧೫-೧೭. ರಾವಣನಾದರೊ, 'ಆಹಾ ! ಶ್ರೀರಾಮನಿಂದ ನನಗೆ ಮರಣವು ಹೇಗಾದೀತು ? ಸೀತೆಗೋಸ್ಕರವಾಗಿಯಾದರೂ ರಾಮನು ಬರಲಿಲ್ಲವಲ್ಲ ? ಕಾರಣ ವೇನಿರಬಹುದು ?' ಹೀಗೆಂದು ಯಾವಾಗಲೂ ಹೃದಯದಲ್ಲಿ ರಾಮನನ್ನೇ ಚಿಂತಿಸುತ್ತಾ ಆ ದಿನ ರಾತ್ರಿಯ ಉತ್ತರಾರ್ಧದಲ್ಲಿ (ಬೆಳಗಿನ ಝಾವಕ್ಕೆ) ಕನಸು ಕಂಡನು. ಅದರಲ್ಲಿ ರಾಮನಿಂದ ಸಂದೇಶವನ್ನು ಹೊತ್ತುತಂದಿದ್ದ ಒಬ್ಬ ಕಪಿಯು ಇಚ್ಛಾವೇಷಧಾರಿಯಾಗಿ ಸೂಕ್ಷ್ಮರೂಪದಿಂದ ಮರದ ತುದಿಯಲ್ಲಿ ಕುಳಿತು ಕೆಳಕ್ಕೇ ನೋಡುತ್ತಿದ್ದನು.

**ಇತಿ ದೃಷ್ಟ್ವಾಽದ್ಭುತಂ ಸ್ವಪ್ನಂ ಸ್ವಾತ್ಮನ್ಯೇವಾನುಚಿಂತ್ಯ ಸಃ ।**
**ಸ್ವಪ್ನಃ ಕದಾಚಿತ್ ಸತ್ಯಃ ಸ್ಯಾದೇವಂ ತತ್ರ ಕರೋಮ್ಯಹಮ್ ॥ ೧೮ ॥**
**ಜಾನಕೀಂ ವಾಕ್‌ಶರೈರ್ವಿಧ್ವಾ ದುಃಖಿತಾಂ ನಿತರಾಮಹಮ್ ।**
**ಕರೋಮಿ ದೃಷ್ಟ್ವಾ ರಾಮಾಯ ನಿವೇದಯತು ವಾನರಃ ॥ ೧೯ ॥**
**ಇತ್ಯೇವಂ ಚಿಂತಯನ್ ಸೀತಾಸಮೀಪಮಗಮದ್ ದ್ರುತಮ್ ।**

೧೮-೧೯. ಹೀಗೆ ಆಶ್ಚರ್ಯಕರವಾಗಿದ್ದ ಕನಸುಕಂಡವನಾಗಿ ಅವನು ತನ್ನೊಳಗೇ ಆಲೋಚಿಸಿಕೊಳ್ಳುತ್ತಾ "ಕೆಲವು ವೇಳೆ ಕನಸು ಕೂಡ ನಿಜವಾಗಿರಬಹುದಾಗಿದೆ ; ಆದ್ದರಿಂದ ಈಗ ಹೀಗೆ ಮಾಡುವೆನು. ಏನೆಂದರೆ : ದುಃಖಿತಳಾಗಿರುವ ಸೀತೆಯನ್ನು ಕಠಿನವಾದ ಬಾಣಗಳಂಥ ಮಾತುಗಳಿಂದ ಚೆನ್ನಾಗಿ ಹಿಂಸಿಸಿ ಪೀಡಿಸುವೆನು. ಕಪಿಯು ಇದನ್ನು ಕಂಡು ರಾಮನಲ್ಲಿಗೆ ಹೋಗಿ ಹೇಳಲಿ !" ಹೀಗೆಂದು ಆಲೋಚಿಸುತ್ತಾ ಬೇಗನೆ ಸೀತೆಯ ಹತ್ತಿರಕ್ಕೆ ಬಂದನು.

**ನೂಪುರಾಣಾಂ ಕಿಂಕಿಣೀನಾಂ ಶ್ರುತ್ವಾ ಸಿಂಜಿತಮಂಗನಾ ।**
**ಸೀತಾ ಭೀತಾ ಲೀಯಮಾನಾ ಸ್ವಾತ್ಮನ್ಯೇವ ಸುಮಧ್ಯಮಾ ॥ ೨೦ ॥**
**ಅಧೋಮುಖ್ಯಶ್ರುನಯನಾ ಸ್ಥಿತಾ ರಾಮಾರ್ಪಿತಾಂತರಾ ।**
**ರಾವಣೋಽಪಿ ತದಾ ಸೀತಾಮಾಲೋಕ್ಯಾಹ ಸುಮಧ್ಯಮೇ ॥ ೨೧ ॥**
**ಮಾಂ ದೃಷ್ಟ್ವಾ ಕಿಂ ವೃಥಾ ಸುಭ್ರು ಸ್ವಾತ್ಮನ್ಯೇವ ವಿಲೀಯಸೇ ।**

೨೦-೨೧. ಕಾಲುಗೆಜ್ಜೆಗಳ ಹಾಗೂ ಬಳೆಗಳ ಧ್ವನಿಯನ್ನು ಕೇಳಿ ಸುಂದರ ನಡುವಿನ ಸೀತಾದೇವಿಯು ಹೆದರಿದವಳಾಗಿ ನಡುಗುತ್ತಾ ತನ್ನಲ್ಲಿಯೇ ತಾನು ಮುದುರಿಕೊಂಡಳು. ತಲೆ ತಗ್ಗಿಸಿದವಳಾಗಿ ಕಣ್ಣೀರು ಸುರಿಸುತ್ತಾ ಒಳಗೆ ರಾಮನಿಗೇ ತನ್ನನ್ನು ಸಮರ್ಪಿಸಿಕೊಂಡವಳಾಗಿ ಇದ್ದುಬಿಟ್ಟಳು. ರಾವಣನಾದರೊ, ಆಗ ಸೀತೆಯನ್ನು ಕಂಡು 'ಎಲೈ ಸುಮಧ್ಯಮಳೆ, ಶೋಭನವಾದ ಹುಬ್ಬುಗಳುಳ್ಳವಳೆ, ನೀನು ನನ್ನನ್ನು ಕಂಡು ಏತಕ್ಕೆ ವ್ಯರ್ಥವಾಗಿ ಮುದುರಿಕೊಳ್ಳುವೆ ?

**ರಾಮೋ ವನಚರಾಣಾಂ ಹಿ ಮಧ್ಯೇ ತಿಷ್ಠತಿ ಸಾನುಜಃ ।**
**ಕದಾಚಿದ್ದೃಶ್ಯತೇ ಕಶ್ಚಿತ್ ಕದಾಚಿನ್ನೈವ ದೃಶ್ಯತೇ ॥ ೨೨ ॥**
**ಮಯಾ ತು ಬಹುಧಾ ಲೋಕಾಃ ಪ್ರೇಷಿತಾಸ್ತಸ್ಯ ದರ್ಶನೇ ।**
**ನ ಪಶ್ಯಂತಿ ಪ್ರಯತ್ನೇನ ವೀಕ್ಷಮಾಣಾಃ ಸಮನ್ತತಃ ॥ ೨೩ ॥**
**ಕಿಂ ಕರಿಷ್ಯಸಿ ರಾಮೇಣ ನಿಃಸ್ಪೃಹೇಣ ಸದಾ ತ್ವಯಿ ।**
**ತ್ವಯಾ ಸದಾಲಿಂಗಿತೋಽಪಿ ಸಮೀಪಸ್ಥೋಽಪಿ ಸರ್ವದಾ ॥ ೨೪ ॥**
**ಹೃದಯೇಽಸ್ಯ ನ ಚ ಸ್ನೇಹಸ್ತ್ವಯಿ ರಾಮಸ್ಯ ಜಾಯತೇ ।**

೨೨-೨೪. ರಾಮನು ತಮ್ಮನೊಡನೆ ಕಾಡುಜನರ ನಡುವೆ ಇದ್ದುಕೊಂಡಿರುವನು. ಕೆಲವು ಸಲ ಕಾಣಿಸಿಕೊಳ್ಳುತ್ತಾನೆ. ಮತ್ತೆ ಕೆಲವು ಸಲ ಕಾಣಿಸಿಕೊಳ್ಳುವದಿಲ್ಲ. ನಾನಾದರೊ, ಅವನನ್ನು ಹುಡುಕಲು ಅನೇಕ ಲೋಕಗಳಿಗೆ ಜನರನ್ನು ಕಳುಹಿಸಿದೆನು. ಪ್ರಯತ್ನಪೂರ್ವಕವಾಗಿ ಹುಡುಕುತ್ತಿದ್ದರೂ ಎಲ್ಲಿಯೂ ಆತನು ಕಂಡುಬಂದಿಲ್ಲ. ಯಾವಾಗಲೂ ನಿನ್ನಲ್ಲಿ ಪ್ರೀತಿಯೇ ಇಲ್ಲದಿರುವ ರಾಮನನ್ನು ಕಟ್ಟಿಕೊಂಡು ಏನು ಮಾಡುವೆ ? ಅವನು ನಿನ್ನ ಹತ್ತಿರವೇ ಯಾವಾಗಲೂ ಇದ್ದಾಗಲೂ ನೀನು ಆಲಿಂಗಿಸಿಕೊಂಡಾಗಲೂ ಅವನ ಹೃದಯದಲ್ಲಿ ನಿನ್ನ ಬಗ್ಗೆ ಪ್ರೀತಿಯು ಹುಟ್ಟಿರುವದಿಲ್ಲ.

**ತ್ವತ್ಕೃತಾನ್ ಸರ್ವಭೋಗಾಂಶ್ಚ ತ್ವದ್ಗುಣಾನಪಿ ರಾಘವಃ ।**
**ಭುಂಜಾನೋಽಪಿ ನ ಜಾನಾತಿ ಕೃತಘ್ನೋ ನಿರ್ಗುಣೋಽಧಮಃ ॥ ೨೫ ॥**
**ತ್ವಮಾನೀತಾ ಮಯಾ ಸಾಧ್ವೀ ದುಃಖಶೋಕಸಮಾಕುಲಾ ।**
**ಇದಾನೀಮಪಿ ನಾಯಾತಿ ಭಕ್ತಿಹೀನಃ ಕಥಂ ವ್ರಜೇತ್ ॥ ೨೬ ॥**

**ನಿಃಸತ್ತ್ವೋ ನಿರ್ಮಮೋ ಮಾನೀ ಮೂಢಃ ಪಂಡಿತಮಾನವಾನ್ ।**
**ನರಾಧಮಂ ತ್ವದ್ವಿಮುಖಂ ಕಿಂ ಕರಿಷ್ಯಸಿ ಭಾಮಿನಿ ॥ ೨೭ ॥**
**ತ್ವಯ್ಯತೀವ ಸಮಾಸಕ್ತಂ ಮಾಂ ಭಜಸ್ವಾಸುರೋತ್ತಮಮ್ ।**
**ದೇವಗಂಧರ್ವನಾಗಾನಾಂ ಯಕ್ಷಕಿನ್ನರಯೋಷಿತಮ್ ॥ ೨೮ ॥**
**ಭವಿಷ್ಯತಿ ನಿಯೋಕ್ತ್ರೀ ತ್ವಂ ಯದಿ ಮಾಂ ಪ್ರತಿಪದ್ಯಸೇ ।**

೨೫-೨೮. ನಿನ್ನ ಕೊಡುಗೆಯಾದ ಎಲ್ಲಾ ಸುಖಗಳನ್ನೂ ನಿನ್ನ ಗುಣಗಳನ್ನೂ ರಾಮನು ಅನುಭವಿಸುತ್ತಿದ್ದರೂ ಅರಿಯದೆ ಇರುವನು. ಪತಿವ್ರತೆಯಾದ ನೀನು ನನ್ನಿಂದ ಅಪಹರಿಸಿ ತರಲ್ಪಟ್ಟಿರುವೆಯಾದರೂ ದುಃಖಶೋಕಗಳಿಂದ ಪೀಡಿಸಲ್ಪಟ್ಟಿರುವ ನಿನ್ನ ಬಳಿಗೆ ಈಗಲೂ ಕೃತಘ್ನನೂ, ನಿರ್ಗುಣನೂ, ಅಧಮನೂ ಆದ ಅವನು ಬಂದಿರುವ ದಿಲ್ಲ. ಪ್ರೀತಿಯಿಲ್ಲದವನು ಹೇಗೆ ತಾನೆ ಬಂದಾನು ? ಶಕ್ತಿರಹಿತನಾದ, ಮಮಕಾರ ವಿಲ್ಲದ, ಮೂಢನಾದ, ದುರಭಿಮಾನಿಯೂ ತಾನೇ ಜಾಣನೆಂಬ ಅಹಂಕಾರಿಯೂ ಆದ, ಮತ್ತು ನಿನ್ನ ವಿಷಯಕ್ಕೆ ಪರಾಙ್ಮುಖನಾದ ಆ ನರಾಧಮನನ್ನು ಕಟ್ಟಿಕೊಂಡು ಎಲೌ ಭಾಮಿನಿ, ಏನು ಮಾಡುವೆ ? (ಇದಕ್ಕೆ ಬದಲಾಗಿ) ನಿನ್ನಲ್ಲಿ ಅತಿಯಾಗಿ ಪ್ರೀತಿಯುಳ್ಳವನಾ ಗಿರುವ ರಾಕ್ಷಸಶ್ರೇಷ್ಠನಾದ ನನ್ನನ್ನು ಭಜಿಸುವವಳಾಗು. ನೀನು ನನ್ನನ್ನು ಸೇರುವೆಯಾದರೆ ದೇವ- ಗಂಧರ್ವ-ನಾಗ- ಯಕ್ಷ-ಕಿನ್ನರಸ್ತ್ರೀಯರಿಗೆಲ್ಲ ಒಡತಿಯಾಗಿ ಮಾಡಲ್ಪಡುವೆ.

**ರಾವಣಸ್ಯ ವಚಃ ಶ್ರುತ್ವಾ ಸೀತಾಮರ್ಷಸಮನ್ವಿತಾ ।**
**ಉವಾಚಾಧೋಮುಖೀ ಭೂತ್ವಾ ನಿಧಾಯ ತೃಣಮಂತರೇ ॥ ೨೯ ॥**
**ರಾಘವಾದ್ ಬಿಭ್ಯತಾ ನೂನಂ ಭಿಕ್ಷುರೂಪಂ ತ್ವಯಾ ಧೃತಮ್ ।**
**ರಹಿತೇ ರಾಘವಾಭ್ಯಾಂ ತ್ವಂ ಶುನೀವ ಹವಿರಧ್ವರೇ ॥ ೩೦ ॥**
**ಹೃತವಾನಸಿ ಮಾಂ ನೀಚ ತತ್ಫಲಂ ಪ್ರಾಪ್ಸ್ಯಸೇಽಚಿರಾತ್ ।**
**ಯದಾ ರಾಮಶರಾಘಾತವಿದಾರಿತವಪುರ್ಭವಾನ್ ॥ ೩೧ ॥**
**ಜ್ಞಾಸ್ಯಸೇಽಮಾನುಷಂ ರಾಮಂ ಗಮಿಷ್ಯಸಿ ಯಮಾಂತಿಕಮ್ ।**

೨೯-೩೧. ರಾವಣನ ಮಾತನ್ನು ಕೇಳಿ ಸೀತೆಯು ಕೋಪದಿಂದ ಕೂಡಿದವಳಾಗಿ ತಲೆ ತಗ್ಗಿಸಿಕೊಂಡು ಒಂದು ಹುಲ್ಲುಕಡ್ಡಿಯನ್ನು ಅಡ್ಡಲಾಗಿಟ್ಟುಕೊಂಡು ಹೀಗೆ ನುಡಿ ದಳು. ''ರಾಮನಿಂದ ಹೆದರಿದ ನೀನು ಸಂನ್ಯಾಸಿಯ ವೇಷವನ್ನು ಧರಿಸಿ ರಾಮಲಕ್ಷ್ಮಣ ರಿಲ್ಲದಾಗ - ಯಜ್ಞದಲ್ಲಿ ನಾಯಿಯು ಹವಿಸ್ಸನ್ನು ಅಪಹರಿಸುವಂತೆ - ಎಲೈ ನೀಚನೆ, ನನ್ನ ನ್ನು ಕದ್ದಿರುವೆ. ಸದ್ಯದಲ್ಲಿಯೇ ಅದರ ಫಲವನ್ನು ಹೊಂದಲಿರುವೆ. ಯಾವಾಗ ನೀನು ರಾಮನ ಬಾಣದ ಹೊಡೆತದಿಂದ ಸೀಳಲ್ಪಟ್ಟ ಶರೀರನಾಗಿ ಯಮನ ಸಮೀಪಕ್ಕೆ ಹೋಗಲಿ ರುವೆಯೋ ಆಗ ರಾಮನು ಮನುಷ್ಯನಲ್ಲವೆಂಬುದನ್ನು ಅರಿಯಲಿರುವೆ.''

**ಸಮುದ್ರಂ ಶೋಷಯಿತ್ವಾ ವಾ ಶರೈರ್ಬದ್ಧ್ವಾಽಥ ವಾರಿಧಿಮ್ ।**
**ಹಂತುಂ ತ್ವಾಂ ಸಮರೇ ರಾಮೋ ಲಕ್ಷ್ಮಣೇನ ಸಮನ್ವಿತಃ ॥ ೩೨ ॥**
**ಆಗಮಿಷ್ಯತ್ಯಸಂದೇಹೋ ದ್ರಕ್ಷ್ಯಸೇ ರಾಕ್ಷಸಾಧಮ ।**
**ತ್ವಾಂ ಸಪುತ್ರಂ ಸಹಬಲಂ ಹತ್ವಾ ನೇಷ್ಯತಿ ಮಾಂ ಪುರಮ್ ॥ ೩೩ ॥**

೩೨-೩೩. 'ಸಮುದ್ರವನ್ನು ಒಣಗಿಸಿಯಾಗಲಿ ಅಥವಾ ಸಮುದ್ರಕ್ಕೆ ಬಂಧನವನ್ನು (ಸೇತುವನ್ನು) ರಚಿಸಿಯಾಗಲಿ ಲಕ್ಷ್ಮಣಸಹಿತನಾದ ರಾಮನು ಎಲೈ ರಾಕ್ಷಸಾಧಮನೆ, ನಿನ್ನನ್ನು ಯುದ್ಧದಲ್ಲಿ ಕೊಲ್ಲುವದಕ್ಕಾಗಿ ಬರಲಿದ್ದಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ನೋಡುವೆಯಂತೆ. ಮಕ್ಕಳು, ಸೈನ್ಯಬಲಸಹಿತನಾದ ನಿನ್ನನ್ನು ಕೊಂದು ನನ್ನನ್ನು (ಅಯೋಧ್ಯಾ) ಪುರಿಗೆ ಕರೆದೊಯ್ಯಲಿರುವನು.'

**ಶ್ರುತ್ವಾ ರಕ್ಷಃಪತಿಃ ಕ್ರುದ್ಧೋ ಜಾನಕ್ಯಾಃ ಪರುಷಾಕ್ಷರಮ್ ।**
**ವಾಕ್ಯಂ ಕ್ರೋಧಸಮಾವಿಷ್ಟಃ ಖಡ್ಗಮುದ್ಯಮ್ಯ ಸತ್ವರಃ ॥ ೩೪ ॥**
**ಹಂತುಂ ಜನಕರಾಜಸ್ಯ ತನಯಾಂ ತಾಮ್ರಲೋಚನಃ ।**
**ಮಂಡೋದರೀ ನಿವಾರ್ಯಾಹ ಪತಿಂ ಪತಿಹಿತೇ ರತಾ ॥ ೩೫ ॥**

೩೪-೩೫. ಜಾನಕಿಯ ಕಠಿನವಾದ ಮಾತುಗಳನ್ನು ಕೇಳಿ ರಾಕ್ಷಸಾಧಿಪನಾದ ರಾವಣನು ಕುಪಿತನಾಗಿ ಸಿಟ್ಟಿನಿಂದಲೇ ಪ್ರೇರಿತನಾಗಿ ಕೂಡಲೆ ಕತ್ತಿಯನ್ನೆತ್ತಿ ಕೆಂಗಣ್ಣನಾಗಿ ಜನಕರಾಜನ ಮಗಳಾದ ಸೀತೆಯನ್ನು ಕೊಲ್ಲಲು ಮುಂದಾದನು. ಪತಿಯ ಹಿತದಲ್ಲಿ ನಿರತಳಾದ ಮಂಡೋದರಿಯು ಆಗ ತಡೆದು ಗಂಡನನ್ನು ಕುರಿತು ಇಂತೆಂದಳು :

**ತ್ಯಜೈನಾಂ ಮಾನುಷೀಂ ದೀನಾಂ ದುಃಖಿತಾಂ ಕೃಪಣಾಂ ಕೃಶಾಮ್ ।**
**ದೇವಗಂಧರ್ವನಾಗಾನಾಂ ಬಹ್ವ್ಯಃ ಸಂತಿ ವರಾಂಗನಾಃ ॥ ೩೬ ॥**
**ತ್ವಾಮೇವ ವರಯಂತ್ಯುಚ್ಚೈಃ ಮದಮತ್ತವಿಲೋಚನಾಃ ।**

೩೬. ಮನುಷ್ಯಳೂ, ದೀನಳೂ, ದುಃಖಿತಳೂ, ಬಳಲಿದವಳೂ, ಸಣಕಲಾಗಿರುವವಳೂ ಆದ ಈಕೆಯನ್ನು ಕೈಬಿಡುವನಾಗು. ದೇವಗಂಧರ್ವನಾಗಕನ್ಯೆಯರಲ್ಲಿ ಸುಂದರಿಯರಾದ ಅನೇಕರು ಮದದಿಂದ ಕೊಬ್ಬಿದ ದೃಷ್ಟಿಯುಳ್ಳವರಾಗಿ, ನಿನ್ನನ್ನೇ ಬಯಸುತ್ತಿರುವರು.

**ತತೋಽಬ್ರವೀದ್ದಶಗ್ರೀವೋ ರಾಕ್ಷಸೀರ್ವಿಕೃತಾನನಾಃ ।**
**ಯಥಾ ಮೇ ವಶಗಾ ಸೀತಾ ಭವಿಷ್ಯತಿ ಸಕಾಮನಾ ॥ ೩೭ ॥**

**ತಥಾ ಯತಧ್ವಂ ತ್ವರಿತಂ ತರ್ಜನಾದರಣಾದಿಭಿಃ ।**
**ದ್ವಿಮಾಸಾಭ್ಯಂತರೇ ಸೀತಾ ಯದಿ ಮೇ ವಶಗಾ ಭವೇತ್ ॥ ೩೮ ॥**
**ತದಾ ಸರ್ವಸುಖೋಪೇತಾ ರಾಜ್ಯಂ ಭೋಕ್ಷ್ಯತಿ ಸಾ ಮಯಾ ।**
**ಯದಿ ಮಾಸದ್ವಯಾದೂರ್ಧ್ವಂ ಮಚ್ಛಯ್ಯಾಂ ನಾಭಿನಂದತಿ ॥ ೩೯ ॥**
**ತದಾ ಮೇ ಪ್ರಾತರಾಶಾಯ ಹತ್ವಾ ಕುರುತ ಮಾನುಷೀಮ್ ।**
**ಇತ್ಯುಕ್ತ್ವಾ ಪ್ರಯಯೌ ಸ್ತ್ರೀಭೀ ರಾವಣೋಽನ್ತಃಪುರಾಲಯಮ್ ॥ ೪೦ ॥**

೩೭-೪೦. ಅನಂತರ ರಾವಣನು ವಿಕಾರವಾದ ಮುಖವುಳ್ಳ ರಾಕ್ಷಸಿಯರನ್ನು ಕುರಿತು ಹೀಗೆಂದನು : 'ಸೀತೆಯು ತನ್ನ ಇಚ್ಛೆಯಿಂದಲೇ ನನಗೆ ವಶಳಾಗುವದು ಹೇಗಾದೀತೋ ಹಾಗೆ ನೀವು ಈ ಕೂಡಲೆ ಹೆದರಿಕೆ, ಒಳ್ಳೆಯ ಮಾತು - ಮುಂತಾದ ರೀತಿಯಿಂದ ಪ್ರಯತ್ನಿಸಿರಿ. ಇನ್ನು ಎರಡು ತಿಂಗಳೊಳಗೆ ಸೀತೆಯು ನನಗೆ ಅಧೀನ ಳಾದಲ್ಲಿ ಆಗ ಎಲ್ಲಾ ಸುಖಗಳಿಂದ ಕೂಡಿದ ರಾಜ್ಯವನ್ನು ನನ್ನೊಡನೆ ಅನುಭವಿಸಲಿರು ವಳು. ಒಂದು ವೇಳೆ ಎರಡುತಿಂಗಳು ಕಳೆದ ಅನಂತರವೂ ಆಕೆಯು ನನ್ನ ಹಾಸಿಗೆಯನ್ನು ಇಷ್ಟಪಡದೆ ಹೋದರೆ ಆಗ ಆಕೆಯನ್ನು ಕೊಂದು ನನ್ನ ಬೆಳಗಿನ ಉಪಹಾರಕ್ಕೆ ಸಿದ್ಧಗೊಳಿಸಿರಿ.' ಹೀಗೆಂದ್ದು ಹೇಳಿ ರಾವಣನು ಸ್ತ್ರೀಯರೊಡಗೂಡಿ ಅಂತಃಪುರಕ್ಕೆ ಹೊರಟುಹೋದನು.

**ರಾಕ್ಷಸ್ಯೋ ಜಾನಕೀಮೇತ್ಯ ಭೀಷಯಂತ್ಯಃ ಸ್ವತರ್ಜನೈಃ ।**
**ತತ್ರೈಕಾ ಜಾನಕೀಮಾಹ ಯೌವನಂ ತೇ ವೃಥಾ ಗತಮ್ ॥ ೪೧ ॥**
**ರಾವಣೇನ ಸಮಾಸಾದ್ಯ ಸಫಲಂ ತು ಭವಿಷ್ಯತಿ ।**
**ಅಪರಾ ಚಾಹ ಕೋಪೇನ ಕಿಂ ವಿಲಂಬೇನ ಭಾಮಿನಿ ॥ ೪೨ ॥**
**ಇದಾನೀಂ ಛೇದ್ಯತಾಮಂಗಂ ವಿಭಜ್ಯ ಚ ಪೃಥಕ್ ಪೃಥಕ್ ।**
**ಅನ್ಯಾ ತು ಖಡ್ಗಮುದ್ಯಮ್ಯ ಜಾನಕೀಂ ಹಂತುಮುದ್ಯತಾ ॥ ೪೩ ॥**
**ಅನ್ಯಾ ಕರಾಲವದನಾ ವಿದಾರ್ಯಾಸ್ಯಮಭೀಷಯತ್ ।**

೪೧-೪೩. ರಾಕ್ಷಸಿಯರು ಆಗ ಸೀತೆಯ ಬಳಿಗೆ ಬಂದು ತಮ್ಮ ತಮ್ಮ ಬೆದರಿಕೆ ಗಳಿಂದ ಸೀತೆಯನ್ನು ಗದರಿಸುತ್ತಾ ಇದ್ದರು. ಅವರುಗಳಲ್ಲೊಬ್ಬಳು 'ಎಲ್ಲೈ ನಿನ್ನ ಯೌವನವು ವ್ಯರ್ಥವಾಯಿತು. ಈಗಲಾದರೂ ರಾವಣನೊಡಗೂಡಿದರೆ ಸಫಲವಾ ದೀತು' ಎಂದಳು. ಕೋಪದಿಂದ ಕೂಡಿದ ಮತ್ತೊಬ್ಬಳು ಹೀಗೆಂದಳು : 'ಎಲೌ ಜೊತೆ ಗಾರಳೆ, ತಡವೇಕೆ ? ಈಗಲೇ ಇವಳ ಶರೀರವನ್ನು ಬಿಡಿಬಿಡಿಯಾಗಿ ತುಂಡುಮಾಡಿ

ಬಿಡೋಣ.' ಮತ್ತೊಬ್ಬಳು ಕತ್ತಿಯನ್ನೆತ್ತಿ ಸೀತೆಯನ್ನು ಕೊಲ್ಲಲು ಉದ್ಯುಕ್ತಳಾದಳು. ಭಯಂಕರವಾದ ಮುಖದ ಇನ್ನೊಬ್ಬಳು ತನ್ನ ಬಾಯ್ದೆರೆದು ಸೀತೆಯನ್ನು ಹೆದರಿಸಿದಳು.

**ಏವಂ ತಾಂ ಭೀಷಯಂತೀಸ್ತಾ ರಾಕ್ಷಸೀರ್ವಿಕೃತಾನನಾಃ ।**
**ನಿವಾರ್ಯ ತ್ರಿಜಟಾ ವೃದ್ಧಾ ರಾಕ್ಷಸೀ ವಾಕ್ಯಮಬ್ರವೀತ್ ॥ ೪೪ ॥**
**ಶೃಣುಧ್ವಂ ದುಷ್ಟರಾಕ್ಷಸ್ಯೋ ಮದ್ವಾಕ್ಯಂ ವೋ ಹಿತಂ ಭವೇತ್ ।**
**ನ ಭೀಷಯಧ್ವಂ ರುದತೀಂ ನಮಸ್ಕುರುತ ಜಾನಕೀಮ್ ॥ ೪೫ ॥**
**ಇದಾನೀಮೇವ ಮೇ ಸ್ವಪ್ನೇ ರಾಮಃ ಕಮಲಲೋಚನಃ ।**
**ಆರುಹ್ಯೈರಾವತಂ ಶುಭ್ರಂ ಲಕ್ಷ್ಮಣೇನ ಸಮಾಗತಃ ॥ ೪೬ ॥**
**ದಗ್ಧ್ವಾ ಲಂಕಾಪುರೀಂ ಸರ್ವಾಂ ಹತ್ವಾ ರಾವಣಮಾಹವೇ ।**
**ಆರೋಪ್ಯ ಜಾನಕೀಂ ಸ್ವಾಂಕೇ ಸ್ಥಿತೋ ದೃಷ್ಟೋಽಗಮೂರ್ಧನಿ ॥ ೪೭ ॥**

೪೪-೪೭. ಹೀಗೆ ಆಕೆಯನ್ನು ಗದರಿಸುತ್ತಿದ್ದ ವಿಕಾರಮುಖಿಯರಾದ ರಾಕ್ಷಸಿಯರನ್ನು ತಡೆದು ವೃದ್ಧಳಾದ ತ್ರಿಜಟೆಯೆಂಬ ರಾಕ್ಷಸಿಯು ಹೀಗೆಂದಳು : 'ಎಲೌ ದುಷ್ಟರಾಕ್ಷಸಿಯರೆ, ನನ್ನ ಮಾತನ್ನು ಕೇಳಿರಿ. ನಿಮಗೆ ಒಳ್ಳೆಯದಾದೀತು. ಅಳುತ್ತಿರುವ ಸೀತೆಯನ್ನು ಗದರಿಸಬೇಡಿರಿ. ಆಕೆಗೆ ನಮಸ್ಕಾರಮಾಡಿರಿ. ಇದೇ ತಾನೆ ನಾನು ಕನಸು ಕಂಡೆನು. ಅದರಲ್ಲಿ ಕಮಲಲೋಚನನಾದ ರಾಮನು ಶುಭ್ರವಾದ ಐರಾವತವನ್ನು ಏರಿ ಲಕ್ಷ್ಮಣನೊಡಗೂಡಿ ಬಂದನು. ಲಂಕಾಪಟ್ಟಣವನ್ನೆಲ್ಲ ಸುಟ್ಟು ಯುದ್ಧದಲ್ಲಿ ರಾವಣನನ್ನು ಕೊಂದು ಸೀತೆಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಪರ್ವತದ ಶಿಖರದಲ್ಲಿರುವಂತೆ ಕಂಡೆನು.'

**ರಾವಣೋ ಗೋಮಯಹ್ರದೇ ತೈಲಾಭ್ಯಕ್ತೋ ದಿಗಂಬರಃ ।**
**ಅಗಾಹತ್ ಪುತ್ರಪೌತ್ರೈಶ್ಚ ಕೃತ್ವಾ ವದನಮಾಲಿಕಾಮ್ ॥ ೪೮ ॥**
**ವಿಭೀಷಣಸ್ತು ರಾಮಸ್ಯ ಸಂನಿಧೌ ಹೃಷ್ಟಮಾನಸಃ ।**
**ಸೇವಾಂ ಕರೋತಿ ರಾಮಸ್ಯ ಪಾದಯೋರ್ಭಕ್ತಿಸಂಯುತಃ ॥ ೪೯ ॥**
**ಸರ್ವಥಾ ರಾವಣಂ ರಾಮೋ ಹತ್ವಾ ಸಕುಲಮಂಜಸಾ ।**
**ವಿಭೀಷಣಾಯಾಧಿಪತ್ಯಂ ದತ್ವಾ ಸೀತಾಂ ಶುಭಾನನಾಮ್ ॥ ೫೦ ॥**
**ಅಂಕೇ ನಿಧಾಯ ಸ್ವಪುರೀಂ ಗಮಿಷ್ಯತಿ ನ ಸಂಶಯಃ ।**
**ತ್ರಿಜಟಾಯಾ ವಚಃ ಶ್ರುತ್ವಾ ಭೀತಾಸ್ತಾ ರಾಕ್ಷಸಸ್ತ್ರಿಯಃ ॥ ೫೧ ॥**
**ತೂಷ್ಣೀಮಾಸಂಸ್ತತ್ರ ತತ್ರ ನಿದ್ರಾವಶಮುಪಾಗತಾಃ ।**

೪೮-೫೧. 'ರಾವಣನು ಸಗಣಿಯ ಹೊಂಡದಲ್ಲಿ -ಮೈಗೆ ಎಣ್ಣೆಯನ್ನು ಸವರಿಕೊಂಡು ಬರಿಯ ಮೈಯಲ್ಲಿ -ಕುತ್ತಿಗೆಗೆ ರುಂಡಮಾಲೆಯನ್ನು ಧರಿಸಿದವನಾಗಿ ಮಕ್ಕಳು ಮೊಮ್ಮಕ್ಕಳೊಡನೆ - ಮುಳುಗಿದ್ದನು. ವಿಭೀಷಣನಾದರೊ, ರಾಮನ ಹತ್ತಿರದಲ್ಲಿ ಸಂತೋಷಚಿತ್ತವುಳ್ಳವನಾಗಿ ಭಕ್ತಿಯಿಂದ ಕೂಡಿ ರಾಮನ ಎರಡು ಪಾದಗಳ ಸೇವೆಯನ್ನು ಮಾಡುತ್ತಿದ್ದನು. ಎಲ್ಲ ರೀತಿಯಿಂದಲೂ ರಾಮನು ವಂಶಸಮೇತನಾದ ರಾವಣನನ್ನು ಕೊಂದು ಕೂಡಲೆ ವಿಭೀಷಣನಿಗೆ ರಾಜ್ಯದ ಅಧಿಕಾರವನ್ನು ದಯಪಾಲಿಸಿ ಶುಭಮುಖಿಯಾದ ಸೀತೆಯನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು ತನ್ನ ಊರಿಗೆ ಹೊರಡುವನು. ಈ ಬಗ್ಗೆ ಸಂಶಯವಿಲ್ಲ.' ಹೀಗೆ ತ್ರಿಜಟೆಯು ಆಡಿದ ಮಾತನ್ನು ಕೇಳಿ ಹೆದರಿದ ಆ ರಾಕ್ಷಸಸ್ತ್ರೀಯರು ಸುಮ್ಮನಾದರು. ಮತ್ತು ಅಲ್ಲಲ್ಲೇ ನಿದ್ರಾಪರವಶರಾಗಿ ಮಲಗಿದರು.

**ತರ್ಜಿತಾ ರಾಕ್ಷಸೀಭಿಃ ಸಾ ಸೀತಾ ಭೀತಾತಿವಿಹ್ವಲಾ ।**
**ತ್ರಾತಾರಂ ನಾಧಿಗಚ್ಛಂತೀ ದುಃಖೇನ ಪರಿಮೂರ್ಛಿತಾ ।। ೫೨ ॥**
**ಅಶ್ರುಭಿಃ ಪೂರ್ಣನಯನಾ ಚಿಂತಯಂತೀದಮಬ್ರವೀತ್ ।**
**ಪ್ರಭಾತೇ ಭಕ್ಷಯಿಷ್ಯಂತಿ ರಾಕ್ಷಸ್ಯೋ ಮಾಮಸಂಶಯಃ ॥ ೫೩ ॥**
**ಇದಾನೀಮೇವ ಮರಣಂ ಕೇನೋಪಾಯೇನ ಮೇ ಭವೇತ್ ।**

೫೨-೫೩. ರಾಕ್ಷಸಿಯರಿಂದ ಗದರಿಸಲ್ಪಟ್ಟ ಆ ಸೀತೆಯು ಹೆದರಿ ಬಹಳ ಚಂಚಲಳಾಗಿ ತನ್ನನ್ನು ಕಾಪಾಡುವವರಿಲ್ಲದೆ ದುಃಖದಿಂದ ಎಚ್ಚರದಪ್ಪಿದವಳಾಗಿ ಕಣ್ಣೀರುಗಳಿಂದ ತುಂಬಿದ ನೇತ್ರವುಳ್ಳವಳಾಗಿ ಚಿಂತಿಸುತ್ತಾ ಹೀಗೆಂದಳು : 'ಬೆಳಗ್ಗೆ ವೇಳೆಗೆ ನನ್ನನ್ನು ರಾಕ್ಷಸಿಯರು ತಿಂದುಬಿಡುವರು. ಈ ಬಗ್ಗೆ ಸಂಶಯವಿಲ್ಲ. ಆದ್ದರಿಂದ ಈಗಲೇ ನನಗೆ ಯಾವ ಉಪಾಯದಿಂದ ಸಾವು ಬಂದೀತು'?

**ಏವಂ ಸುದುಃಖೇನ ಪರಿಪ್ಲುತಾ ಸಾ**
**ವಿಮುಕ್ತಕಂಠಂ ರುದತೀ ಚಿರಾಯ ।**
**ಆಲಂಬ್ಯ ಶಾಖಾಂ ಕೃತನಿಶ್ಚಯಾ ಮೃತೌ**
**ನ ಜಾನತೀ ಕಂಚಿದುಪಾಯಮಂಗನಾ ॥ ೫೪ ॥**

೫೪. ಹೀಗೆ ಹೆಚ್ಚಿನ ದುಃಖದಿಂದ ತೇಲಾಡುತ್ತಿರುವ ಆಕೆಯು ಗಟ್ಟಿಯಾಗಿ ಬಹಳ ಕಾಲ ಅಳುತ್ತಿದ್ದು ಸಾಯಲು ನಿಶ್ಚಯಿಸಿ ಮರದ ಕೊಂಬೆಯನ್ನಾಶ್ರಯಿಸಿ ಏನೊಂದೂ ಉಪಾಯವು ಹೊಳೆಯದೆ ಇದ್ದಳು.[1]

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಸುಂದರಕಾಂಡೇ ದ್ವಿತೀಯಃ ಸರ್ಗಃ**

-------------

1. ಸೀತಾದೇವಿಯು ದುಃಖವು ಮಿತಿಮೀರಿದಾಗ ಪ್ರಾಣವನ್ನಾದರೂ ಕಳೆದುಕೊಂಡು ಶಾಂತಿಯನ್ನು ಪಡೆಯಬೇಕೆಂದು ಬಯಸುತ್ತಾಳೆ. ಆದರೆ ಬದುಕಿರುವಾಗಲೇ ದೊರಕದೆ ಇರುವ ಶಾಂತಿಯು ಸತ್ತಮೇಲಾದರೂ ಹೇಗೆ ದೊರೆತೀತು ? ಅವಳ ಬಯಕೆಯು ಸರಿಯಲ್ಲವೆಂದು ತಿಳಿಸುವದಕ್ಕಾಗಿಯೇ ಇಲ್ಲಿ ಪ್ರಸ್ತಾಪಿಸಲಾಗಿದೆ. ನಿಜವಾದ ಶಾಂತಿಯು ದೊರಕಬೇಕಾದರೆ ಆಕೆಯು ರಾಮನನ್ನು ಪಡೆಯಬೇಕು. ಅದು ಬದುಕಿರುವಾಗಲೇ ಸಾಧ್ಯವಾದದ್ದು. ಆದ್ದರಿಂದ ಈಗ ಬಂದಿರುವ ಸಂಕಟವನ್ನು ಹೇಗಾದರೂ ಸಹಿಸಿಕೊಂಡು ಆಕೆಯು ರಾಮನ ಪ್ರಾಪ್ತಿಗಾಗಿ ದೃಢನಿಶ್ಚಯವನ್ನು ಮಾಡಿದರೆ ಮಾತ್ರವೇ ದುಃಖಪರಿಹಾರವಾಗುತ್ತದೆ. ನಿಜವಾಗಿಯೂ ರಾಮನ ದೂತನೇ ಈಗ ಬಂದು ಅವಳ ವ್ಯಸನವನ್ನು ನೀಗಲು ಸಿದ್ಧನಾಗಿದ್ದಾನೆ. ಸೀತೆಯು ಕುಳಿತಿರುವ ಮರದ ಮೇಲ್ಭಾಗದಲ್ಲಿಯೇ ಕೊಂಬೆಯ ಮೇಲೆ ಹನುಮಂತನಿದ್ದಾನೆ. ಕೆಲವೇ ಸಮಯದ ದುಃಖಸಹನೆಯು ಮಾತ್ರ ಅಗತ್ಯವಿದೆ.

ಇದರಂತೆಯೇ ಮಾನವನಿಗೆ ಮೇಲೆ ಮೇಲೆ ತೋರುವ ಸಾಂಸಾರಿಕದುಃಖಗಳನ್ನು ತಡೆದುಕೊಂಡು ಮುಂದುವರಿದಾಗಲೇ ನಿತ್ಯಸುಖಪ್ರಾಪ್ತಿಯಾಗುವದು. ಸುಖವು ಅವನ ಸ್ವರೂಪವೇ ಆಗಿರುವದರಿಂದ ಅವನು ಬಹಿರ್ಮುಖನಾಗಿರುವದನ್ನು ಮಟ್ಟಿಗೆ ತ್ಯಜಿಸಿ ಅಂತರ್ಮುಖನಾದರೆ ಸಾಕು. ಆನಂದದ ಪ್ರಾಪ್ತಿಯು ಸುಲಭವಾಗಿ ಆಗುವದು - ಎಂಬುದು ಇಲ್ಲಿ ತಿಳಿಸಿದಂತಾಗಿದೆ.

----------

# ಮೂರನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಉದ್ಬಂಧನೇನ ವಾ ಮೋಕ್ಷ್ಯೇ ಶರೀರಂ ರಾಘವಂ ವಿನಾ ।**
**ಜೀವಿತೇನ ಫಲಂ ಕಿಂ ಸ್ಯಾನ್ಮಮ ರಕ್ಷೋಽಧಿಮಧ್ಯತಃ ॥ ೧ ॥**
**ದೀರ್ಘಾ ವೇಣೀ ಮಮಾತ್ಯರ್ಥಂ ಉದ್ಬಂಧಾಯ ಭವಿಷ್ಯತಿ**
**ಏವಂ ನಿಶ್ಚಿತಬುದ್ಧಿಂ ತಾಂ ಮರಣಾಯಾಥ ಜಾನಕೀಮ್ ॥ ೨ ॥**
**ವಿಲೋಕ್ಯ ಹನುಮಾನ್ ಕಿಂಚಿದ್ ವಿಚಾರ್ಯೈತದಭಾಷತ ।**
**ಶನೈಃ ಶನೈಃ ಸೂಕ್ಷ್ಮರೂಪೋ ಜಾನಕ್ಯಾಃ ಶ್ರೋತ್ರಗಂ ವಚಃ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : 'ನೇಣುಹಾಕಿಕೊಳ್ಳುವದರಿಂದ ಲಾದರೂ ಈ ದೇಹತ್ಯಾಗಮಾಡಿಬಿಡುವೆನು. ಈ ರಾಕ್ಷಸರ ನಡುವೆ ನನಗೆ ರಾಮನಿಲ್ಲದೆ ಬದುಕಿದ್ದು ಫಲವಾದರೂ ಏನಿದ್ದೀತು ? ನನ್ನ ಈ ಉದ್ದವಾದ ಜಡೆಯು ನೇಣು ಹಾಕಿಕೊಳ್ಳಲು ಸಾಕಾಗಿದೆ.' ಹೀಗೆಂದು ಸಾಯಲು ನಿಶ್ಚಯಿಸಿದವಳಾದ ಸೀತೆಯನ್ನು ಹನುಮಂತನು ನೋಡಿ ವಿಚಾರಮಾಡಿ ಹೀಗೆ ಮಾತನಾಡಿದನು ; ಅವನು ಸೂಕ್ಷ್ಮರೂಪದಿಂದಲೇ ಮೆಲ್ಲಮೆಲ್ಲನೆ ಸೀತೆಯ ಕಿವಿಗೆ ಬೀಳುವಂತೆ ಹೀಗೆಂದನು :-

**ಇಕ್ಷ್ವಾಕುವಂಶಸಂಭೂತೋ ರಾಜಾ ದಶರಥೋ ಮಹಾನ್ ।**
**ಅಯೋಧ್ಯಾಧಿಪತಿಸ್ತಸ್ಯ ಚತ್ವಾರೋ ಲೋಕವಿಶ್ರುತಾಃ ॥ ೪ ॥**
**ಪುತ್ರಾ ದೇವಸಮಾಃ ಸರ್ವೇ ಲಕ್ಷಣೈರುಪಲಕ್ಷಿತಾಃ ।**
**ರಾಮಶ್ಚ ಲಕ್ಷ್ಮಣಶ್ಚೈವ ಭರತಶ್ಚೈವ ಶತ್ರುಹಾ ॥ ೫ ॥**
**ಜ್ಯೇಷ್ಠೋ ರಾಮಃ ಪಿತುರ್ವಾಕ್ಯಾದ್ದಂಡಕಾರಣ್ಯಮಾಗತಃ ।**
**ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಭಾರ್ಯಯಾ ಸಹ ॥ ೬ ॥**
**ಉವಾಸ ಗೌತಮೀತೀರೇ ಪಂಚವಟ್ಯಾಂ ಮಹಾಮನಾಃ ।**

೪-೬. 'ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಮಹಾತ್ಮನಾದ ದಶರಥರಾಜನೆಂಬವನು ಅಯೋಧ್ಯಾಧಿಪತಿಯಾಗಿದ್ದನು. ಅವನಿಗೆ ನಾಲ್ವರು ಲೋಕಪ್ರಸಿದ್ಧರಾದ ದೇವತೆಗಳಿಗೆ ಸಮಾನರಾದ, ಲಕ್ಷಣಸಂಪನ್ನರಾದ, ರಾಮ, ಲಕ್ಷ್ಮಣ, ಭರತ, ಶತ್ರುಘ್ನ- ರೆಂಬ ಹೆಸರಿನ ಮಕ್ಕಳಿದ್ದರು. ಅವರಲ್ಲಿ ಹಿರಿಯನಾದ ರಾಮನು ತಂದೆಯ ಅಪ್ಪಣೆಯಂತೆ ದಂಡಕಾರಣ್ಯಕ್ಕೆ ಸೋದರನಾದ ಲಕ್ಷ್ಮಣ ಹಾಗೂ ಹೆಂಡತಿಯಾದ ಸೀತೆಯೊಡಗೂಡಿ ಹೋದನು. ಅಲ್ಲಿ ಆ ಮಹಾತ್ಮನು ಗೌತಮೀನದಿಯ ದಡದಲ್ಲಿರುವ ಪಂಚವಟಿಯಲ್ಲಿ ವಾಸವಾಗಿದ್ದನು.'

**ತತ್ರ ನೀತಾ ಮಹಾಭಾಗಾ ಸೀತಾ ಜನಕನಂದಿನೀ ।**
**ರಹಿತೇ ರಾಮಚಂದ್ರೇಣ ರಾವಣೇನ ದುರಾತ್ಮನಾ ॥ ೭ ॥**
**ತತೋ ರಾಮೋಽತಿದುಃಖಾರ್ತೋ ಮಾರ್ಗಮಾಣೋಽಥ ಜಾನಕೀಮ್ ।**
**ಜಟಾಯುಷಂ ಪಕ್ಷಿರಾಜಮಪಶ್ಯತ್ ಪತಿತಂ ಭುವಿ ॥ ೮ ॥**
**ತಸ್ಮೈ ದತ್ವಾ ದಿವಂ ಶೀಘ್ರಮೃಷ್ಯಮೂಕಮುಪಾಗಮತ್ ।**
**ಸುಗ್ರೀವೇಣ ಕೃತಾ ಮೈತ್ರೀ ರಾಮಸ್ಯ ವಿದಿತಾತ್ಮನಃ ॥ ೯ ॥**
**ತದ್ಭಾರ್ಯಾಹಾರಿಣಂ ಹತ್ವಾ ವಾಲಿನಂ ರಘುನಂದನಃ ।**
**ರಾಜ್ಯೇಽಭಿಷಿಚ್ಯ ಸುಗ್ರೀವಂ ಮಿತ್ರಕಾರ್ಯಂ ಚಕಾರ ಸಃ ॥ ೧೦ ॥**

೭-೧೦. ''ಅಲ್ಲಿ ಮಹಾಭಾಗಳಾದ ಜನಕನ ಮಗಳಾದ ಸೀತೆಯು ರಾಮಚಂದ್ರನು ಇಲ್ಲದ ಸಮಯದಲ್ಲಿ ದುರಾತ್ಮನಾದ ರಾವಣನಿಂದ ಕದ್ದೊಯ್ಯಲ್ಪಟ್ಟಳು. ಅನಂತರ ರಾಮನು ಬಹಳ ದುಃಖದಿಂದ ಬಳಲಿದವನಾಗಿ ಸೀತೆಯನ್ನು ಹುಡುಕುತ್ತಾ ನೆಲದಮೇಲೆ ಬಿದ್ದಿದ್ದ ಪಕ್ಷಿರಾಜನಾದ ಜಟಾಯುವನ್ನು ಕಂಡನು. ಅವನಿಗೆ ಬೇಗನೆ ಸ್ವರ್ಗಲೋಕವನ್ನನುಗ್ರಹಿಸಿ ಋಷ್ಯಮೂಕಪರ್ವತಕ್ಕೆ ಬಂದನು. ಆತ್ಮಜ್ಞನಾದ ರಾಮನು ಸುಗ್ರೀವನೊಡನೆ ಸ್ನೇಹವನ್ನು ಮಾಡಿಕೊಂಡನು. ಆತನ ಹೆಂಡತಿಯನ್ನು ಅಪಹರಿಸಿದ್ದ ವಾಲಿಯನ್ನು ಶ್ರೀರಾಮನು ಕೊಂದು ಸುಗ್ರೀವನಿಗೆ ರಾಜ್ಯಾಭಿಷೇಕವನ್ನು ನಡೆಯಿಸಿ ಮಿತ್ರಕಾರ್ಯವನ್ನು ನೆರವೇರಿಸಿಕೊಟ್ಟನು.''

**ಸುಗ್ರೀವಸ್ತು ಸಮಾನಾಯ್ಯ ವಾನರಾನ್ ವಾನರಪ್ರಭುಃ ।**
**ಪ್ರೇಷಯಾಮಾಸ ಪರಿತೋ ವಾನರಾನ್ ಪರಿಮಾರ್ಗಣೇ ॥ ೧೧ ॥**
**ಸೀತಾಯಾಸ್ತತ್ರ ಚೈಕೋಽಹಂ ಸುಗ್ರೀವಸಚಿವೋ ಹರಿಃ ।**
**ಸಂಪಾತಿವಚನಾತ್ ಶೀಘ್ರಮುಲ್ಲಂಘ್ಯ ಶತಯೋಜನಮ್ ॥ ೧೨ ॥**
**ಸಮುದ್ರಂ ನಗರೀಂ ಲಂಕಾಂ ವಿಚಿನ್ವನ್ ಜಾನಕೀಂ ಶುಭಾಮ್ ।**
**ಶನೈರಶೋಕವನಿಕಾಂ ವಿಚಿನ್ವನ್ ಶಿಂಶಪಾತರುಮ್ ॥ ೧೩ ॥**
**ಅದ್ರಾಕ್ಷಂ ಜಾನಕೀಮತ್ರ ಶೋಚಂತೀಂ ದುಃಖಸಂಪ್ಲುತಾಮ್ ।**
**ರಾಮಸ್ಯ ಮಹಿಷೀಂ ದೇವೀಂ ಕೃತಕೃತ್ಯೋಽಹಮಾಗತಃ ॥ ೧೪ ॥**
**ಇತ್ಯುಕ್ತ್ವೋಪರರಾಮಾಥ ಮಾರುತಿರ್ಬುದ್ಧಿಮತ್ತರಃ ।**

೧೧-೧೪ ''ವಾನರರೊಡೆಯನಾದ ಸುಗ್ರೀವನು ಕಪಿಗಳನ್ನು ಬರಮಾಡಿಕೊಂಡು ಸೀತೆಯನ್ನು ಹುಡುಕುವದಕ್ಕಾಗಿ ಕಳುಹಿಸಿದನು. ಅವರಲ್ಲೊಬ್ಬನಾದ ಸುಗ್ರೀವನ ಮಂತ್ರಿಯಾದ ನಾನು ಸಂಪಾತಿಯ ಮಾತಿನಂತೆ ನೂರು ಯೋಜನದಗಲದ ಸಮುದ್ರವನ್ನು ನೆಗೆದು ಲಂಕಾಪಟ್ಟಣವನ್ನೆಲ್ಲ ಹುಡುಕಿ ಶುಭಳಾದ ಜಾನಕಿಯನ್ನು ಮೆಲ್ಲನೆ ಅಶೋಕವನದಲ್ಲಿ ಶಿಂಶುಪಾವೃಕ್ಷದ ಬಳಿ ಕಂಡೆನು. ಅಳುತ್ತಾ ದುಃಖದಲ್ಲಿ ಮುಳುಗಿದ್ದ ರಾಮನ ಪತ್ನಿಯಾದ ಈ ದೇವಿಯನ್ನು ಕಂಡು ನಾನು ಕೃತಕೃತ್ಯನಾದೆನು.'' ಬುದ್ಧಿವಂತರಲ್ಲಿ ಹಿರಿಯನಾದ ಮಾರುತಿಯು ಹೀಗೆಂದು ಹೇಳಿ ಸುಮ್ಮನಾದನು.

**ಸೀತಾ ಕ್ರಮೇಣ ತತ್ಸರ್ವಂ ಶ್ರುತ್ವಾ ವಿಸ್ಮಯಮಾಯಯೌ ।**
**ಕಿಮಿದಂ ಮೇ ಶ್ರುತಂ ವ್ಯೋಮ್ನಿ ವಾಯುನಾ ಸಮುದೀರಿತಮ್ ॥ ೧೫ ॥**
**ಸ್ವಪ್ನೋ ವಾ ಮೇ ಮನೋಭ್ರಾಂತಿರ್ಯದಿ ವಾ ಸತ್ಯಮೇವ ತತ್ ।**
**ನಿದ್ರಾ ಮೇ ನಾಸ್ತಿ ದುಃಖೇನ ಜಾನಾಮ್ಯೇತತ್ ಕುತೋ ಭ್ರಮಃ ॥ ೧೬ ॥**
**ಯೇನ ಮೇ ಕರ್ಣಪೀಯೂಷಂ ವಚನಂ ಸಮುದೀರಿತಮ್ ।**
**ಸ ದೃಶ್ಯತಾಂ ಮಹಾಭಾಗಃ ಪ್ರಿಯವಾದೀ ಮಮಾಗ್ರತಃ ॥ ೧೭ ॥**

೧೫-೧೭. ಸೀತಾದೇವಿಯು ಕ್ರಮವಾಗಿ ಅದೆಲ್ಲವನ್ನೂ ಕೇಳಿ ಆಶ್ಚರ್ಯ ಗೊಂಡಳು. ''ಗಾಳಿಯಿಂದ ಬಂದ ಈ ಮಾತುಗಳು ನನ್ನ ಕಿವಿಗೆ ಬಿದ್ದವಲ್ಲ, ಇದೇನಿರ ಬೇಕು ? ನನ್ನ ಕನಸೊ, ಅಥವಾ ಮನಸ್ಸಿನ ಭ್ರಮೆಯೊ, ಇಲ್ಲವೆ ಇದು ನಿಜವೇ ಆಗಿ ದ್ದೀತೊ ? ಆದರೆ ದುಃಖದಿಂದ ನನಗೆ ನಿದ್ರೆಯೇ ಬರುವದಿಲ್ಲ. ಭ್ರಮೆಯೂ ಅಲ್ಲ. ಏಕೆಂದರೆ ಚೆನ್ನಾಗಿ ಅರಿಯುತ್ತಿದೇನೆ. ಯಾವನಿಂದ ನನ್ನ ಕಿವಿಗೆ (ಇಂಪಾದ) ಅಮೃತ ವಾದ ಈ ಮಾತು ಹೇಳಲ್ಪಟ್ಟಿತೋ ಆ ಪ್ರಿಯವಾದಿಯಾದ ಮಹಾನುಭಾವನು ನನ್ನೆದು ರಿಗೆ ಕಾಣಿಸಿಕೊಳ್ಳಲಿ !''

**ಶ್ರುತ್ವಾ ತಜ್ಜಾನಕೀವಾಕ್ಯಂ ಹನುಮಾನ್ ಪತ್ರಖಂಡತಃ ।**
**ಅವತೀರ್ಯ ಶನೈಃ ಸೀತಾಪುರತಃ ಸಮವಸ್ಥಿತಃ ॥ ೧೮ ॥**
**ಕಲವಿಂಕಪ್ರಮಾಣಾಂಗೋ ರಕ್ತಾಸ್ಯಃ ಪೀತವಾನರಃ ।**
**ನನಾಮ ಶನಕೈಃ ಸೀತಾಂ ಪ್ರಾಂಜಲಿಃ ಪುರತಃ ಸ್ಥಿತಃ। ।೧೯ ॥**
**ದೃಷ್ಟ್ವಾ ತಂ ಜಾನಕೀ ಭೀತಾ ರಾವಣೋಽಯಮುಪಾಗತಃ ।**
**ಮಾಂ ಮೋಹಯಿತುಮಾಯಾತೋ ಮಾಯಯಾ ವಾನರಾಕೃತಿಃ ॥ ೨೦ ॥**
**ಇತ್ಯೇವಂ ಚಿಂತಯಿತ್ವಾ ಸಾ ತೂಷ್ಣೀಮಾಸೀದಧೋಮುಖೀ ।**

೧೮-೨೦. ಸೀತೆಯು ಆಡಿದ ಆ ಮಾತನ್ನು ಕೇಳಿ ಹನುಮಂತನು ಎಲೆಗಳ ಮಧ್ಯದಿಂದ ಕೆಳಗಿಳಿದು ಮೆಲ್ಲನೆ ಸೀತೆಯ ಮುಂದೆ ಬಂದು ನಿಂತನು. ಗುಬ್ಬಚ್ಚಿಯ ಪ್ರಮಾಣದ ಶರೀರವುಳ್ಳವನಾಗಿ ಕೆಂಪಾದ ಮುಖದಿಂದಲೂ ಹಳದಿಯ ವರ್ಣ ದಿಂದಲೂ ಕೂಡಿದ ಆ ಕಪಿಯು ಸೀತೆಯ ಮುಂಭಾಗದಲ್ಲಿ ನಿಂತು ಕೈಮುಗಿದವನಾಗಿ ಮೆಲ್ಲನೆ ನಮಸ್ಕರಿಸಿದನು. ಅವನನ್ನು ಕಂಡು ಸೀತೆಯು ರಾವಣನೇ ಬಂದಿರುತ್ತಾನೆಂದು ಭಾವಿಸಿ ಹೆದರಿದವಳಾಗಿ ''ಓಹೋ, ಕಪಿಯ ವೇಷದಿಂದ ನನ್ನನ್ನು ಮೋಸಗೊಳಿಸಲು ಇವನು ಬಂದ್ಧಿರುವನು'' ಎಂದು ಚಿಂತಿಸುತ್ತಾ ತಲೆತಗ್ಗಿಸಿಕೊಂಡು ಸುಮ್ಮನಾಗಿಬಿಟ್ಟಳು.

**ಪುನರಪ್ಯಾಹ ತಾಂ ಸೀತಾಂ ದೇವಿ ಯತ್ತ್ವಂ ವಿಶಂಕಸೇ ।**
**ನಾಹಂ ತಥಾವಿಧೋ ಮಾತಃ ತ್ಯಜ ಶಂಕಾಂ ಮಯಿ ಸ್ಥಿತಾಮ್ ॥ ೨೧ ॥**
**ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯ ಪರಮಾತ್ಮನಃ ।**
**ಸಚಿವೋಽಹಂ ಹರೀಂದ್ರಸ್ಯ ಸುಗ್ರೀವಸ್ಯ ಶುಭಪ್ರದೇ ॥ ೨೨ ॥**
**ವಾಯೋಃ ಪುತ್ರೋಽಹಮಖಿಲಪ್ರಾಣಭೂತಸ್ಯ ಶೋಭನೇ ।**

೨೧-೨೨. ಆ ಸೀತೆಯನ್ನು ಕುರಿತು (ಹನುಮಂತನು) ಮತ್ತೂ ಹೀಗೆಂದನು: ''ದೇವಿ, ನೀನು ಏನು ಸಂಶಯವನ್ನು ಹೊಂದಿರುವೆಯೋ - ತಾಯೆ, ನಾನು ಅಂಥವನಲ್ಲ. ನನ್ನ ವಿಷಯಕ್ಕೆ ಇರುವ ಸಂಶಯವನ್ನು ಕೈಬಿಡುವಳಾಗು. ನಾನು

ಕೋಸಲೇಂದ್ರನಾದ ಪರಮಾತ್ಮನಾದ ಶ್ರೀರಾಮನ ಸೇವಕನು. ಕಪಿಶ್ರೇಷ್ಠನಾದ ಸುಗ್ರೀವನ ಮಂತ್ರಿಯು. ಶುಭಪ್ರದಳೆ, ನಾನು ಎಲ್ಲರಿಗೂ ಪ್ರಾಣಭೂತನಾಗಿರುವ ವಾಯುದೇವನ ಮಗನು.''

**ತಚ್ಛ್ರುತ್ವಾ ಜಾನಕೀ ಪ್ರಾಹ ಹನೂಮಂತಂ ಕೃತಾಂಜಲಿಮ್ ।**
**ವಾನರಾಣಾಂ ಮನುಷ್ಯಾಣಾಂ ಸಂಗತಿರ್ಘಟತೇ ಕಥಮ್ ॥ ೨೩ ॥**
**ಯಥಾ ತ್ವಂ ರಾಮಚಂದ್ರಸ್ಯ ದಾಸೋಽಹಮಿತಿ ಭಾಷಸೇ ।**

೨೩. ಆ ಮಾತನ್ನು ಕೇಳಿ ಸೀತೆಯು ಕೈಮುಗಿದು ನಿಂತಿರುವ ಹನುಮಂತನನ್ನು ಕುರಿತು ''ಎಲೈ ವಾನರನೆ, ನೀನು ಶ್ರೀರಾಮನ ಸೇವಕನೆಂದು ಹೇಳಿಕೊಂಡೆಯಲ್ಲ, ಕಪಿಗಳಿಗೂ ಮನುಷ್ಯರಿಗೂ ಸ್ನೇಹವು ಹೇಗೆ ಹೊಂದೀತು ?''

**ತಾಮಾಹ ಮಾರುತಿಃ ಪ್ರೀತೋ ಜಾನಕೀಂ ಪುರತಃ ಸ್ಥಿತಃ ।**
**ಋಷ್ಯಮೂಕಮಗಾದ್ ರಾಮಃ ಶಬರ್ಯಾ ನೋದಿತಃ ಸುಧೀಃ ॥ ೨೪ ॥**
**ಸುಗ್ರೀವೋ ಋಷ್ಯಮೂಕಸ್ಥೋ ದೃಷ್ಟವಾನ್ ರಾಮಲಕ್ಷ್ಮಣೌ ।**
**ಭೀತೋ ಮಾಂ ಪ್ರೇಷಯಾಮಾಸ ಜ್ಞಾತುಂ ರಾಮಸ್ಯ ಹೃದ್ಗತಮ್ ॥ ೨೫ ॥**
**ಬ್ರಹ್ಮಚಾರಿವಪುರ್ಧೃತ್ವಾ ಗತೋಽಹಂ ರಾಮಸನ್ನಿಧಿಮ್ ।**

೨೪-೨೫. ಸುಪ್ರೀತನಾದ ಹನುಮಂತನು ಎದುರಿಗೆ ನಿಂತು ಸೀತೆಯನ್ನು ಕುರಿತು ಹೀಗೆಂದನು : ''ಬುದ್ಧಿಶಾಲಿಯಾದ ರಾಮನು ಶಬರಿಯಿಂದ ಪ್ರೇರಿಸಲ್ಪಟ್ಟವನಾಗಿ ಋಷ್ಯಮೂಕಪರ್ವತಕ್ಕೆ ಬಂದನು. ಋಷ್ಯಮೂಕದಲ್ಲಿದ್ದ ಸುಗ್ರೀವನು ರಾಮಲಕ್ಷ್ಮಣರನ್ನು ಕಂಡನು. ಆಗ ಹೆದರಿದವನಾಗಿ ರಾಮನ ಮನಸ್ಸು ಅರಿತುಕೊಳ್ಳಲು (ನನ್ನನ್ನು ಪ್ರೇರಿಸಿದನು). ನಾನು ಬ್ರಹ್ಮಚಾರಿಯ ವೇಷವನ್ನು ಧರಿಸಿ ಶ್ರೀರಾಮನ ಸನ್ನಿಧಿಗೆ ಬಂದೆನು.

**ಜ್ಞಾತ್ವಾ ರಾಮಸ್ಯ ತದ್ಭಾವಂ ಸ್ಕಂಧೋಪರಿ ನಿಧಾಯ ತೌ ।**
**ನೀತ್ವಾ ಸುಗ್ರೀವಸಾಮೀಪ್ಯಂ ಸಖ್ಯಂ ಚಾಕರವಂ ತಯೋಃ ॥ ೨೬ ॥**
**ಸುಗ್ರೀವಸ್ಯ ಹೃತಾ ಭಾರ್ಯಾ ವಾಲಿನಾ ತಂ ರಘೂತ್ತಮಃ ।**
**ಜಘಾನೈಕೇನ ಬಾಣೇನ ತತೋ ರಾಜ್ಯೇಽಭಿಷೇಚಯತ್ ॥ ೨೭ ॥**
**ಸುಗ್ರೀವಂ ವಾನರಾಣಾಂ ಸ ಪ್ರೇಷಯಾಮಾಸ ವಾನರಾನ್ ।**
**ದಿಗ್ಭ್ಯೋ ಮಹಾಬಲಾನ್ ವೀರಾನ್ ಭವತ್ಯಾಃ ಪರಿಮಾರ್ಗಣೇ ॥ ೨೮ ॥**

೨೬-೨೮. ರಾಮನ ಅಭಿಪ್ರಾಯವನ್ನರಿತವನಾಗಿ (ರಾಮಲಕ್ಷ್ಮಣ) ರಿಬ್ಬರನ್ನೂ ಹೆಗಲಮೇಲೇರಿಸಿಕೊಂಡು ಸುಗ್ರೀವನ ಹತ್ತಿರಕ್ಕೆ ಕರೆದೊಯ್ದು

ಅವರಿಬ್ಬರಿಗೂ ಸ್ನೇಹವನ್ನು ಮಾಡಿಸಿದೆನು. ವಾಲಿಯಿಂದ ಅಪಹರಿಸಲ್ಪಟ್ಟಿದ್ದ ಸುಗ್ರೀವನ ಹೆಂಡತಿಗಾಗಿ ರಾಮನು ವಾಲಿಯನ್ನು ಒಂದೇ ಬಾಣದಿಂದ ಕೊಂದು ಅನಂತರ ಸುಗ್ರೀವನಿಗೆ ಪಟ್ಟಾಭಿಷೇಕಮಾಡಿದನು. ಅವನು ಮಹಾಬಲಶಾಲಿಗಳೂ ವೀರರೂ ಆದ ಕಪಿಗಳನ್ನು ನಿಮ್ಮನ್ನು ಹುಡುಕುವದಕ್ಕಾಗಿ ದಿಕ್ಕುಗಳಿಗೆ ಕಳುಹಿಸಿದನು.

**ಗಚ್ಛಂತಂ ರಾಘವೋ ದೃಷ್ಟ್ವಾ ಮಾಮಭಾಷತ ಸಾದರಮ್ ।**
**ತ್ವಯಿ ಕಾರ್ಯಮಶೇಷಂ ಮೇ ಸ್ಥಿತಂ ಮಾರುತನಂದನ ॥ ೨೯ ॥**
**ಬ್ರೂಹಿ ಮೇ ಕುಶಲಂ ಸರ್ವಂ ಸೀತಾಯೈ ಲಕ್ಷ್ಮಣಸ್ಯ ಚ ।**
**ಅಂಗುಲೀಯಕಮೇತನ್ಮೇ ಪರಿಜ್ಞಾನಾರ್ಥಮುತ್ತಮಮ್ ॥ ೩೦ ॥**
**ಸೀತಾಯೈ ದೀಯತಾಂ ಸಾಧು ಮನ್ನಾಮಾಕ್ಷರಮುದ್ರಿತಮ್ ।**
**ಇತ್ಯುಕ್ತ್ವಾ ಪ್ರದದೌ ಮಹ್ಯಂ ಕರಾಗ್ರಾದಂಗುಲೀಯಕಮ್ ॥ ೩೧ ॥**

೨೯-೩೧. ಹೊರಡುತ್ತಿದ್ದ ನನ್ನನ್ನು ಕಂಡು ರಾಮನು ಪ್ರೇಮದಿಂದ ಹೀಗೆ ನುಡಿದನು ; ''ಎಲೈ ವಾಯುಪುತ್ರನೆ, ನನ್ನ ಎಲ್ಲಾ ಕಾರ್ಯಸಿದ್ಧಿಯೂ ನಿನ್ನನ್ನು ಸೇರಿರುತ್ತದೆ. ಸೀತಾದೇವಿಗೆ ನೀನು ನನ್ನ ಮತ್ತು ಲಕ್ಷ್ಮಣನ ಕುಶಲವಾರ್ತೆಯನ್ನು ಹೇಳುವವನಾಗು. ಇದೊ, ಈ ಉತ್ತಮವಾದ, ನನ್ನ ಹೆಸರಿನ ಅಕ್ಷರಮುದ್ರೆಯುಳ್ಳ-ಉಂಗುರವನ್ನು ನನ್ನ ನೆನಪಿಗಾಗಿ ಸೀತೆಗೆ ಕೊಡುವವನಾಗು' ಎಂದು ಹೇಳಿ ತನ್ನ ಬೆರಳಿನಿಂದ ಉಂಗುರವನ್ನು ತೆಗೆದು ನನಗೆ ಕೊಟ್ಟನು.

**ಪ್ರಯತ್ನೇನ ಮಯಾನೀತಂ ದೇವಿ ಪಶ್ಯಾಂಗುಲೀಯಕಮ್ ।**
**ಇತ್ಯುಕ್ತ್ವಾ ಪ್ರದದೌ ದೇವ್ಯೈ ಮುದ್ರಿಕಾಂ ಮಾರುತಾತ್ಮಜಃ ॥ ೩೨ ॥**
**ನಮಸ್ಕೃತ್ವಾ ಸ್ಥಿತೋ ದೂರಾತ್ ಬದ್ಧಾಂಜಲಿಪುಟೋ ಹರಿಃ ।**

೩೨. 'ಎಲೌ ದೇವಿಯೆ, ಪ್ರಯತ್ನಪೂರ್ವಕವಾಗಿ ನನ್ನಿಂದ ತರಲ್ಪಟ್ಟಿರುವ ಈ ಉಂಗುರವನ್ನು ನೋಡು' ಎಂದು ಹೇಳಿ ಮಾರುತಿಯು ಮುದ್ರೆಯುಂಗುರವನ್ನು ಸೀತಾದೇವಿಗೆ ಅರ್ಪಿಸಿ ನಮಸ್ಕಾರಮಾಡಿ ಕೈಮುಗಿದುಕೊಂಡು ದೂರದಲ್ಲಿ ನಿಂತುಕೊಂಡನು.

**ದೃಷ್ಟ್ವಾ ಪ್ರಮುದಿತಾ ಸೀತಾ ರಾಮನಾಮಾಂಕಿತಾಂ ತದಾ ।**
**ಮುದ್ರಿಕಾಂ ಶಿರಸಾ ಧೃತ್ವಾ ಸ್ರವದಾನಂದನೇತ್ರಜಾ ॥ ೩೩ ॥**
**ಕಪೇ ಮೇ ಪ್ರಾಣದಾತಾ ತ್ವಂ ಬುದ್ಧಿಮಾನಸಿ ರಾಘವೇ ।**
**ಭಕ್ತೋಽಸಿ ಪ್ರಿಯಕಾರೀ ತ್ವಂ ವಿಶ್ವಾಸೋಽಸ್ತಿ ತವೈವ ಹಿ ॥ ೩೪ ॥**
**ನೋ ಚೇನ್ಮತ್ಸಂನಿಧಿಂ ಚಾನ್ಯಂ ಪುರುಷಂ ಪ್ರೇಷಯೇತ್ ಕಥಮ್ ।**

೩೩-೩೪. ರಾಮನಾಮಾಂಕಿತವಾಗಿದ್ದ ಆ ಮುದ್ರೆಯುಂಗುರವನ್ನು ಕಂಡು ಸೀತೆಯು ಆನಂದಬಾಷ್ಪಗಳನ್ನು ಸುರಿಸುತ್ತಾ ತಲೆಯಮೇಲಿಟ್ಟುಕೊಂಡವಳಾಗಿ ಹೀಗೆಂದಳು : ''ಎಲೌ ಕಪಿವರ್ಯನೆ, ನೀನೇ ನನ್ನ ಪ್ರಾಣಗಳನ್ನು ಕೊಟ್ಟವನಾಗಿರುವೆ. ನೀನು ಬಹಳ ಜಾಣನು. ಶ್ರೀರಾಮನಲ್ಲಿ ಭಕ್ತಿಯುಳ್ಳವನೂ ಆತನಿಗೆ ಪ್ರಿಯವಾದದ್ದನ್ನು ಮಾಡುವವನೂ ಆಗಿರುವೆ. (ರಾಮನಿಗೆ) ನಿನ್ನಲ್ಲಿಯೇ ಬಹಳ ವಿಶ್ವಾಸವಿರುವದು. ಹಾಗಿಲ್ಲವಾದರೆ ನನ್ನ ಹತ್ತಿರಕ್ಕೆ ಬೇರೊಬ್ಬ ಪುರುಷನನ್ನಾದರೂ ರಾಮನು ಹೇಗೆ ಕಳುಹಿಸಿಯಾನು ?

**ಹನೂಮನ್ ದೃಷ್ಟಮಖಿಲಂ ಮಮ ದುಃಖಾದಿಕಂ ತ್ವಯಾ ।**
**ಸರ್ವಂ ಕಥಯ ರಾಮಾಯ ಯಥಾ ಮೇ ಜಾಯತೇ ದಯಾ ॥ ೩೫ ॥**
**ಮಾಸದ್ವಯಾವಧಿ ಪ್ರಾಣಾಃ ಸ್ಥಾಸ್ಯಂತಿ ಮಮ ಸತ್ತಮ ।**
**ನಾಗಮಿಷ್ಯತಿ ಚೇದ್ ರಾಮೋ ಭಕ್ಷಯಿಷ್ಯತಿ ಮಾಂ ಖಲಃ ॥ ೩೬ ॥**
**ಅತಃ ಶೀಘ್ರಂ ಕಪೀಂದ್ರೇಣ ಸುಗ್ರೀವೇಣ ಸಮನ್ವಿತಃ ।**
**ವಾನರಾನೀಕಪ್ಯೈಃ ಸಾರ್ಧಂ ಹತ್ವಾ ರಾವಣಮಾಹವೇ ॥ ೩೭ ॥**
**ಸಪುತ್ರಂ ಸಬಲಂ ರಾಮೋ ಯದಿ ಮಾಂ ಮೋಚಯೇತ್ ಪ್ರಭುಃ ।**
**ತತ್ತಸ್ಯ ಸದೃಶಂ ವೀರ್ಯಂ ವೀರ ವರ್ಣಯ ವರ್ಣಿತಮ್ ॥ ೩೮ ॥**

೩೫-೩೮. ಎಲೈ ಹನುಮಂತನೆ, ಎಲ್ಲವನ್ನೂ ನೀನೇ ಕಂಡಿರುವೆ. ಈ ನನ್ನ ಕಷ್ಟವನ್ನೆಲ್ಲ ರಾಮನಿಗೆ - ನನ್ನ ಮೇಲೆ ಅವನಿಗೆ ದಯೆ ಬರುವಂತೆ - ಹೇಳುವವನಾಗು. ಎಲೈ ಬಲಿಷ್ಠನೆ, ಇನ್ನು ಎರಡುತಿಂಗಳುಗಳ ಕಾಲ ಮಾತ್ರವೇ ನನ್ನ ಪ್ರಾಣಗಳಿರುವವು. ರಾಮನು ಅಷ್ಟರಲ್ಲಿ ಬರದೆಹೋದರೆ ಆ ಪಾಪಿಯು ನನ್ನನ್ನು ತಿಂದುಬಿಡುವನು. ಆದ್ದರಿಂದ ಜಾಗ್ರತೆಯಾಗಿ ಕಪಿಶ್ರೇಷ್ಠನಾದ ಸುಗ್ರೀವನೊಡಗೂಡಿ ವಾನರಸೈನ್ಯ ಸಮೇತನಾಗಿ ರಾಮನು ಬಂದು ಯುದ್ಧದಲ್ಲಿ ಪುತ್ರ -ಬಲ-ಸಹಿತನಾದ ರಾವಣನನ್ನು ಕೊಂದು ಆ ಪ್ರಭುವು ನನ್ನನ್ನು ಬಿಡಿಸಿದ್ದೇ ಆದರೆ, ಅದು ಅವನ ಶಕ್ತಿವೀರ್ಯಗಳಿಗೆ ತಕ್ಕದ್ದಾದೀತು. ಎಲೈ ವೀರನೆ, ಈಗ ನಾನು ವಿವರಿಸಿದುದನ್ನು ರಾಮನಿಗೆ ವರ್ಣಿಸಿ ಹೇಳು.

**ಯಥಾ ಮಾಂ ತಾರಯೇದ್ರಾಮೋ ಹತ್ವಾ ಶೀಘ್ರಂ ದಶಾನನಮ್ ।**
**ತಥಾ ಯತಸ್ವ ಹನುಮನ್ ವಾಚಾ ಧರ್ಮಮವಾಪ್ನುಹಿ ॥ ೩೯ ॥**

೩೯. ರಾಮನು ಹೇಗೆ ಬೇಗನೆ ರಾವಣನನ್ನು ಕೊಂದು ನನ್ನನ್ನು ಕಾಪಾಡುವನೋ ಹಾಗೆ ನೀನು ಪ್ರಯತ್ನಮಾಡಬೇಕು. ಎಲೈ ಹನುಮನೆ, ವಾಕ್‌ಸಹಾಯವನ್ನು ನೀನು ಈಗ ನನಗೆ ನೀಡಿ ಪುಣ್ಯವನ್ನು ಕಟ್ಟಿಕೊ.

**ಹನೂಮಾನಪಿ ತಾಮಾಹ ದೇವಿ ದೃಷ್ಟೋ ಯಥಾ ಮಯಾ ।**
**ರಾಮಃ ಸಲಕ್ಷ್ಮಣಃ ಶೀಘ್ರಮಾಗಮಿಷ್ಯತಿ ಸಾಯುಧಃ ॥ ೪೦ ॥**
**ಸುಗ್ರೀವೇಣ ಸಸೈನ್ಯೇನ ಹತ್ವಾ ದಶಮುಖಂ ಬಲಾತ್ ।**
**ಸಮಾನೇಷ್ಯತಿ ದೇವಿ ತ್ವಾಮಯೋಧ್ಯಾಂ ನಾತ್ರ ಸಂಶಯಃ ॥ ೪೧ ॥**

೪೦-೪೧. ಹನುಮಂತನು ಕೂಡ ಆಕೆಯನ್ನು ಕುರಿತು ಹೀಗೆಂದನು : 'ತಾಯೆ, ನಾನು ಎಲ್ಲವನ್ನೂ ಕಂಡಿರುವೆನು. (ಅದನ್ನೇ ರಾಮನಿಗೆ ತಿಳಿಸುವೆನು.) ರಾಮನು ಆಯುಧಸಮೇತನಾಗಿ ಲಕ್ಷ್ಮಣನೊಡನೆ ಬೇಗನೆ ಬರಲಿದ್ದಾನೆ. ಸೇನಾಸಮೇತನಾದ ಸುಗ್ರೀವನ ಸಹಾಯಬಲದಿಂದ ರಾವಣನನ್ನು ಕೊಂದು, ಎಲೈ ದೇವಿ, ನಿನ್ನನ್ನು ಅಯೋಧ್ಯೆಗೆ ಕರೆದೊಯ್ಯುವನು. ಈ ವಿಷಯದಲ್ಲಿ ಸಂಶಯವಿಲ್ಲ.'

**ತಮಾಹ ಜಾನಕೀ ರಾಮಃ ಕಥಂ ವಾರಿಧಿಮಾತತಮ್ ।**
**ತೀರ್ತ್ವಾ ಯಾಸ್ಯತ್ಯಮೇಯಾತ್ಮಾ ವಾನರಾನೀಕಪೈಃ ಸಹ ॥ ೪೨ ॥**
**ಹನೂಮಾನಾಹ ಮೇ ಸ್ಕಂಧಾವಾರುಹ್ಯ ಪುರುಷರ್ಷಭೌ ।**
**ಆಯಾಸ್ಯತಃ ಸಸೈನ್ಯಶ್ಚ ಸುಗ್ರೀವೋ ವಾನರೇಶ್ವರಃ ॥ ೪೩ ॥**
**ವಿಹಾಯಸಾ ಕ್ಷಣೇನೈವ ತೀರ್ತ್ವಾ ವಾರಿಧಿಮಾತತಮ್ ।**
**ನಿರ್ದಹಿಷ್ಯತಿ ರಕ್ಷೌಘಾನ್ ತ್ವತ್ಕೃತೇ ನಾತ್ರ ಸಂಶಯಃ ॥ ೪೪ ॥**

೪೨-೪೪. ಸೀತೆಯು ಅವನನ್ನು ಕುರಿತು ಹೀಗೆಂದಳು : 'ವಿಸ್ತಾರವಾಗಿ ಹರಡಿಕೊಂಡಿರುವ ಸಮುದ್ರವನ್ನು ರಾಮನು ದಾಟಿಕೊಂಡು ವಾನರಸೈನ್ಯದೊಡನೆ ಬರುವದಾದರೂ ಹೇಗೆ?' ಆಗ ಹನುಮಂತನು ಹೀಗೆಂದನು : 'ಪುರುಷಶ್ರೇಷ್ಠರಾದ ಆ ರಾಮಲಕ್ಷ್ಮಣರಿಬ್ಬರೂ ನನ್ನ ಹೆಗಲನ್ನೇರಿ ಬರಲಿರುವರು. ವಾನರೇಶ್ವರನಾದ ಸುಗ್ರೀವನು ಸೇನಾಸಮೇತನಾಗಿಯೇ ವಿಶಾಲವಾದ ಸಮುದ್ರವನ್ನು ಕ್ಷಣಮಾತ್ರದಲ್ಲಿ (ನೆಗೆದು) ದಾಟಿದವನಾಗಿ (ಲಂಕೆಗೆ ಬಂದು) ನಿನ್ನ ನಿಮಿತ್ತವಾಗಿಯೇ ರಾಕ್ಷಸರ ಗುಂಪನ್ನು ಸುಟ್ಟು ಬೂದಿ ಮಾಡುವನು. ಈ ವಿಷಯದಲ್ಲಿ ಸಂಶಯವಿಲ್ಲ.'

**ಅನುಜ್ಞಾಂ ದೇಹಿ ಮೇ ದೇವಿ ಗಚ್ಛಾಮಿ ತ್ವರಯಾನ್ವಿತಃ ।**
**ದ್ರಷ್ಟುಂ ರಾಮಂ ಸಹ ಭ್ರಾತ್ರಾ ತ್ವರಯಾಮಿ ತವಾಂತಿಕಮ್ ॥ ೪೫ ॥**
**ದೇವಿ ಕಿಂಚಿದಭಿಜ್ಞಾನಂ ದೇಹಿ ಮೇ ಯೇನ ರಾಘವಃ ।**
**ವಿಶ್ವಸೇನ್ಮಾಂ ಪ್ರಯತ್ನೇನ ತತೋ ಗಂತಾ ಸಮುತ್ಸುಕಃ ॥ ೪೬ ॥**
**ತತಃ ಕಿಂಚಿದ್ ವಿಚಾರ್ಯಾಥ ಸೀತಾ ಕಮಲಲೋಚನಾ ।**
**ವಿಮುಚ್ಯ ಕೇಶಪಾಶಾಂತೇ ಸ್ಥಿತಂ ಚೂಡಾಮಣಿಂ ದದೌ ॥ ೪೭ ॥**
**ಅನೇನ ವಿಶ್ವಸೇದ್ ರಾಮಃ ತ್ವಾಂ ಕಪೀಂದ್ರ ಸಲಕ್ಷ್ಮಣಃ ।**

೪೫-೪೭. "ಎಲೌ ದೇವಿಯೆ, ನನಗೆ ಅಪ್ಪಣೆಯನ್ನು ಕೊಡು. ಜಾಗ್ರತೆಯಾಗಿ ರಾಮನಲ್ಲಿಗೆ ಹೊರಡುವೆನು. ಮತ್ತು ಸಹೋದರನೊಡನೆ ರಾಮನನ್ನು ನಿನ್ನ ಬಳಿಗೆ ಬರಲು ಅವಸರಪಡಿಸುವೆನು. ದೇವಿ, ರಾಮನು ನನ್ನನ್ನು ಕಷ್ಟಪಟ್ಟು ಸೀತಾದರ್ಶನಮಾಡಿದ್ದಾನೆಂದು ನಂಬುವದಕ್ಕಾಗಿ ಏನಾದರೊಂದು ಗುರುತನ್ನು ಕೊಡುವವಳಾಗು. ಅನಂತರ ಹೊರಡಲುದ್ಯುಕ್ತನಾಗುವೆನು." ಹೀಗೆನ್ನಲಾಗಿ ಕಮಲಲೋಚನೆಯಾದ ಸೀತೆಯು ಸ್ವಲ್ಪ ಆಲೋಚಿಸಿದವಳಾಗಿ ತನ್ನ ಜಡೆಯ ತುದಿಯಲ್ಲಿದ್ದ ಚೂಡಾಮಣಿ ಎಂಬ ರತ್ನವನ್ನು (ಹನುಮಂತನಿಗೆ) ಕೊಟ್ಟಳು. ಅನಂತರ 'ಎಲೈ ಕಪೀಂದ್ರನೆ, ಲಕ್ಷ್ಮಣಸಹಿತನಾದ ರಾಮನು ಇದರಿಂದ ನಿನ್ನನ್ನು ನಂಬುವನು.

**ಅಭಿಜ್ಞಾನಾರ್ಥಮನ್ಯಚ್ಚ ವದಾಮಿ ತವ ಸುವ್ರತ ।**
**ಚಿತ್ರಕೂಟಗಿರೌ ಪೂರ್ವಮೇಕದಾ ರಹಸಿ ಸ್ಥಿತಃ ॥ ೪೮ ॥**
**ಮದಂಕೇ ಶಿರ ಆಧಾಯ ನಿದ್ರಾತಿ ರಘುನಂದನಃ ।**
**ಐಂದ್ರಃ ಕಾಕಸ್ತದಾಗತ್ಯ ನಖೈಸ್ತುಂಡೇನ ಚಾಸಕೃತ್ ॥ ೪೯ ॥**
**ಮತ್ಪಾದಾಂಗುಷ್ಠಮಾರಕ್ತಂ ವಿದದಾರಾಮಿಷಾಶಯಾ ।**

೪೮-೪೯. ಎಲೈ ಸುವ್ರತನೆ, ಗುರುತಿಗಾಗಿ ಮತ್ತೊಂದು ವಿಷಯವನ್ನು ಹೇಳುವೆನು. ಒಮ್ಮೆ ಚಿತ್ರಕೂಟಾದ್ರಿಯಲ್ಲಿ ರಾಮನು ಏಕಾಂತದಲ್ಲಿ ನನ್ನ ತೊಡೆಯ ಮೇಲೆ ತಲೆಯನ್ನಿಟ್ಟು ನಿದ್ರೆಮಾಡುತ್ತಿದ್ದನು. ಆಗ ಇಂದ್ರನ ಮಗನು ಕಾಗೆಯ ರೂಪದಿಂದ ಬಂದು ಉಗುರು, ಹಾಗೂ ಕೊಕ್ಕಿನಿಂದೆ ಬಾರಿಬಾರಿಗೂ ಕೆಂಪಾದ ನನ್ನ ಕಾಲಿನ ಹೆಬ್ಬೆಟ್ಟನ್ನು ಮಾಂಸದ ಆಸೆಯಿಂದ ಕುಕ್ಕುವನಾದನು.

**ತತೋ ರಾಮಃ ಪ್ರಬುಧ್ಯಾಥ ದೃಷ್ಟ್ವಾ ಪಾದಂ ಕೃತವ್ರಣಮ್ ।**
**ಕೇನ ಭದ್ರೇ ಕೃತಂ ಚೈತದ್ ವಿಪ್ರಿಯಂ ಮೇ ದುರಾತ್ಮನಾ ॥ ೫೦ ॥**
**ಇತ್ಯುಕ್ತ್ವಾ ಪುರತೋಽಪಶ್ಯದ್ ವಾಯಸಂ ಮಾಂ ಪುನಃ ಪುನಃ ।**
**ಅಭಿದ್ರವಂತಂ ರಕ್ತಾಸ್ಯನಖತುಂಡಂ ಚುಕೋಪ ಹ ॥ ೫೧ ॥**

೫೦-೫೧. ಅನಂತರ ರಾಮನು ಎಚ್ಚತ್ತು ಗಾಯವಾಗಿದ್ದ ನನ್ನ ಕಾಲನ್ನು ನೋಡಿ 'ಎಲೌ ಭದ್ರೆ, ನನಗೆ ಅಪ್ರಿಯವಾದ ಈ ಕೆಲಸವನ್ನು ಮಾಡಿದವನಾರು ?' ಹೀಗೆನ್ನುತ್ತಾ ಎದುರಿಗೇ ಇದ್ದ ಕಾಗೆಯನ್ನೂ ನನ್ನನ್ನೂ ಮತ್ತೆಮತ್ತೆ ನೋಡಿದನು. ರಕ್ತದಿಂದ ಕೂಡಿದ ಉಗುರು ಹಾಗೂ ಕೊಕ್ಕುಳ್ಳ ಆ ಕಾಗೆಯು ತಪ್ಪಿಸಿಕೊಂಡು ಓಡುತ್ತಿರಲು ಕೋಪಗೊಂಡನು.

**ತೃಣಮೇಕಮುಪಾದಾಯ ದಿವ್ಯಾಸ್ತ್ರೇಣಾಭಿಯೋಜ್ಯ ತತ್ ।**
**ಚಿಕ್ಷೇಪ ಲೀಲಯಾ ರಾಮೋ ವಾಯಸೋಪರಿ ತಜ್ಜ್ವಲನ್ ॥ ೫೨ ॥**
**ಅಭ್ಯದ್ರವದ್ ವಾಯಸಶ್ಚ ಭೀತೋ ಲೋಕಾನ್ ಭ್ರಮನ್ ಪುನಃ ।**
**ಇಂದ್ರಬ್ರಹ್ಮಾದಿಭಿಶ್ಚಾಪಿ ನ ಶಕ್ಯೋ ರಕ್ಷಿತುಂ ತದಾ ॥ ೫೩ ॥**
**ರಾಮಸ್ಯ ಪಾದಯೋರಗ್ರೇಽಪತತ್ ಭೀತ್ಯಾ ದಯಾನಿಧೇಃ ।**

೫೨-೫೩. ಒಂದು ಹುಲ್ಲುಕಡ್ಡಿಯನ್ನು ತೆಗೆದುಕೊಂಡು ದಿವ್ಯಾಸ್ತ್ರದಿಂದ ಅದನ್ನು ಅಭಿಮಂತ್ರಿಸಿ ರಾಮನು ಲೀಲಾಮಾತ್ರದಿಂದ ಅದನ್ನು ಕಾಗೆಯಮೇಲೆ ಎಸೆದನು. ಅದು ಉರಿಯುತ್ತಾ ಅಟ್ಟಿಸಿಕೊಂಡು ಹೋಯಿತು. ಕಾಗೆಯು ಕೂಡ ಹೆದರಿ ಲೋಕಗಳನ್ನೆಲ್ಲ ಅಲೆದು ಇಂದ್ರ - ಬ್ರಹ್ಮ ಮುಂತಾದವರಿಂದಲೂ ಕಾಪಾಡಲ್ಪಡಲು ಅಸಮರ್ಥವಾದಾಗ ಮತ್ತೆ ದಯಾನಿಧಿಯಾದ ರಾಮನ ಪಾದಗಳಿಗೇ ಭಯದಿಂದ ಶರಣುಹೊಕ್ಕು ಬಿದ್ದುಕೊಂಡಿತು.

**ಶರಣಾಗತಮಾಲೋಕ್ಯ ರಾಮಸ್ತಮಿದಮಬ್ರವೀತ್ ।**
**ಅಮೋಘಮೇತದಸ್ತ್ರಂ ಮೇ ದತ್ತ್ವೈಕಾಕ್ಷಮಿತೋ ವ್ರಜ ॥ ೫೪ ॥**
**ಸವ್ಯಂ ದತ್ವಾ ತತಃ ಕಾಕ ಏವಂ ಪೌರುಷವಾನಪಿ ।**
**ಉಪೇಕ್ಷತೇ ಕಿಮರ್ಥಂ ಮಾಮಿದಾನೀಂ ಸೋಽಪಿ ರಾಘವಃ ॥ ೫೫ ॥**

೫೪-೫೫. ಶರಣಾಗತನಾದ ಆತನನ್ನು ಕಂಡು ರಾಮನು ಹೀಗೆಂದನು : 'ಈ ನನ್ನ ಅಸ್ತ್ರವು ವ್ಯರ್ಥವಾಗತಕ್ಕದ್ದಲ್ಲ. ಇದಕ್ಕೆ ಒಂದು ಕಣ್ಣನ್ನು ಕೊಟ್ಟು ಇಲ್ಲಿಂದ ಹೊರಡು.' ಹೀಗೆನ್ನಲು ಅನಂತರ ಆ ಕಾಗೆಯು ಎಡಗಣ್ಣನ್ನು ಅರ್ಪಿಸಿತು. ಇಂಥ ಪೌರುಷವುಳ್ಳವನಾಗಿದ್ದರೂ ರಾಮನು ಏತಕ್ಕಾಗಿ ನನ್ನನ್ನು ಇನ್ನೂ ಉದಾಸೀನಮಾಡುತ್ತಿದ್ದಾನೆ. ?

**ಹನೂಮಾನಪಿ ತಾಮಾಹ ಶ್ರುತ್ವಾ ಸೀತಾನುಭಾಷಿತಮ್ ।**
**ದೇವಿ ತ್ವಾಂ ಯದಿ ಜಾನಾತಿ ಸ್ಥಿತಾಮತ್ರ ರಘೂತ್ತಮಃ ॥ ೫೬ ॥**
**ಕರಿಷ್ಯತಿ ಕ್ಷಣಾದ್ ಭಸ್ಮ ಲಂಕಾಂ ರಾಕ್ಷಸಮಂಡಿತಾಮ್ ।**
**ಜಾನಕೀ ಪ್ರಾಹ ತಂ ವತ್ಸ ಕಥಂ ತ್ವಂ ಯೋತ್ಸ್ಯಸೇಽಸುರೈಃ ।**
**ಅತಿಸೂಕ್ಷ್ಮವಪುಸ್ಸರ್ವೇ ವಾನರಾಶ್ಚ ಭವಾದೃಶಾಃ ॥ ೫೭ ॥**

೫೬-೫೭. ಸೀತೆಯು ಆಡಿದ ಮಾತನ್ನು ಕೇಳಿ ಹನುಮಂತನು ಹೀಗೆಂದನು : 'ದೇವಿ, ಶ್ರೀರಾಮನು ನೀನು ಇಲ್ಲಿರುವೆಯೆಂಬುದನ್ನು ಬಲ್ಲವನೇ ಆಗಿದ್ದರೆ ಒಂದು ಕ್ಷಣದಲ್ಲಿ ರಾಕ್ಷಸರಿಂದಲಂಕೃತವಾಗಿರುವ ಈ ಲಂಕೆಯನ್ನು ಸುಟ್ಟು ಬೂದಿಮಾಡುತ್ತಿದ್ದನು.' ಆಗ ಜಾನಕಿಯಿಂತೆಂದಳು : 'ಮಗು, ನೀನು ರಾಕ್ಷಸರೊಡನೆ ಹೇಗೆ ಯುದ್ಧ

ಮಾಡುವೆ ? ಬಹಳ ಸಣ್ಣಶರೀರದವನಾಗಿರುವೆಯಲ್ಲ ? ಕಪಿಗಳೆಲ್ಲರೂ ನಿನ್ನಂತೆಯೇ ಇರುವವರಲ್ಲವೆ ?

**ಶ್ರುತ್ವಾ ತದ್ವಚನಂ ದೇವ್ಯೈ ಪೂರ್ವರೂಪಮದರ್ಶಯತ್ ।**
**ಮೇರುಮಂದರಸಂಕಾಶಂ ರಕ್ಷೋಗಣವಿಭೀಷಣಮ್ ॥ ೫೮ ॥**
**ದೃಷ್ಟ್ವಾ ಸೀತಾ ಹನೂಮಂತಂ ಮಹಾಪರ್ವತಸನ್ನಿಭಮ್ ।**
**ಹರ್ಷೇಣ ಮಹತಾವಿಷ್ಟಾ ಪ್ರಾಹ ತಂ ಕಪಿಕುಂಜರಮ್ ॥ ೫೯ ॥**
**ಸಮರ್ಥೋಽಸಿ ಮಹಾಸತ್ತ್ವ ದ್ರಕ್ಷ್ಯಂತಿ ತ್ವಾಂ ಮಹಾಬಲಮ್ ।**
**ರಾಕ್ಷಸ್ಯಸ್ತೇ ಶುಭಃ ಪಂಥಾ ಗಚ್ಛ ರಾಮಾಂತಿಕಂ ದ್ರುತಮ್ ॥ ೬೦ ॥**

೫೮-೬೦. ಆಕೆಯ ಮಾತನ್ನು ಕೇಳಿ ದೇವಿಗೆ ತನ್ನ ನಿಜರೂಪವನ್ನು- ಎಂದರೆ ಮೇರುಮಂದರಪರ್ವತಗಳಿಗೆ ಸಮಾನವಾದ, ರಾಕ್ಷಸರ ಸಮೂಹವನ್ನೆಲ್ಲ ಗದರಿಸುವಂಥ ರೂಪವನ್ನು ತೋರಿಸಿದನು. ಸೀತೆಯು ಮಹಾಪರ್ವತದಂತಿರುವ ಹನುಮಂತನನ್ನು ಕಂಡು ಬಹಳವಾದ ಸಂತೋಷದಿಂದ ಕೂಡಿದವಳಾಗಿ ಆ ಕಪಿಶ್ರೇಷ್ಠನನ್ನು ಕುರಿತು ಹೀಗೆಂದಳು : 'ಎಲೈ ಬಲಶಾಲಿಯೆ, ನೀನು ಗಟ್ಟಿಗನು, ರಾಕ್ಷಸಿಯರು ನೀನು ಮಹಾಬಲಶಾಲಿಯೆಂಬುದನ್ನು ಕಂಡುಕೊಳ್ಳುವರು. ನಿನಗೆ ದಾರಿಯು ಶುಭವಾಗಲಿ ! ಬೇಗನೆ ರಾಮನ ಬಳಿಗೆ ಹೊರಡು.'

**ಬುಭುಕ್ಷಿತಃ ಕಪಿಃ ಪ್ರಾಹ ದರ್ಶನಾತ್ ಪಾರಣಂ ಮಮ ।**
**ಭವಿಷ್ಯತಿ ಫಲೈಸ್ಸರ್ವೈಃ ತವ ದೃಷ್ಟೌ ಸ್ಥಿತೈರ್ಹಿಮೇ ॥ ೬೧ ॥**
**ತಥೇತ್ಯುಕ್ತಃ ಸ ಜಾನಕ್ಯಾ ಭಕ್ಷಯಿತ್ವಾ ಫಲಂ ಕಪಿಃ ।**
**ತತಃ ಪ್ರಸ್ಥಾಪಿತೋಽಗಚ್ಛದ್ ಜಾನಕೀಂ ಪ್ರಣಿಪತ್ಯ ಸಃ ॥ ೬೨ ॥**

೬೧-೬೨. ಹಸಿದಿದ್ದ ಆ ಕಪಿಯು ಹೀಗೆಂದನು :'ತಾಯೆ, ನನಗೆ ನಿನ್ನ ಪವಿತ್ರವಾದ ದೃಷ್ಟಿಯು ತಾಕಿರುವ (ಈ ವನದಲ್ಲಿರುವ ಎಲ್ಲಾ ಮರಗಳು ಹಣ್ಣುಗಳಿಂದ ಪಾರಣೆಯು (ಭೋಜನವು) ಆಗಲಿದೆ. ಅಪ್ಪಣೆಯೆ ?' ಆಗ ಸೀತೆಯು ಹಾಗೆಯೇ ಆಗಲಿ - ಎಂದಳು. ಜಾನಕಿಯಿಂದ ಅಪ್ಪಣೆಪಡೆದ ಕಪಿಯು ಹಣ್ಣುಗಳನ್ನು ತಿಂದು ಅನಂತರ ಸೀತೆಗೆ ನಮಸ್ಕಾರಮಾಡಿ ಆಕೆಯಿಂದ ಬೀಳ್ಕೊಟ್ಟವನಾಗಿ ಹೊರಟನು.

**ಕಿಂಚಿದ್ದೂರಮಥೋ ಗತ್ವಾ ಸ್ವಾತ್ಮನ್ಯೇವಾನುಚಿಂತಯತ್ ।**
**ಕಾರ್ಯಾರ್ಥಮಾಗತೋ ದೂತಃ ಸ್ವಾಮಿಕಾರ್ಯಾವಿರೋಧತಃ ॥ ೬೩ ॥**
**ಅನ್ಯತ್ ಕಿಂಚಿದಸಂಪಾದ್ಯ ಗಚ್ಛತ್ಯಧಮ ಏವ ಸಃ ।**
**ಅತೋಽಹಂ ಕಿಂಚಿದನ್ಯಚ್ಚ ಕೃತ್ವಾ ದೃಷ್ಟ್ವಾಥ ರಾವಣಮ್ ॥ ೬೪ ॥**
**ಸಂಭಾಷ್ಯ ಚ ತತೋ ರಾಮದರ್ಶನಾರ್ಥಂ ವ್ರಜಾಮ್ಯಹಮ್ ।**

೬೩-೬೪. ಸ್ವಲ್ಪದೂರ ಹೋದವನಾಗಿ ತನ್ನಲ್ಲೇ ಹೀಗೆ ಯೋಚಿಸಿಕೊಂಡನು : 'ಕಾರ್ಯಸಾಧನೆಗೆ ಬಂದಿರುವ ಸೇವಕನು ಯಜಮಾನನ ಕಾರ್ಯಕ್ಕೆ ವಿರೋಧವಿಲ್ಲದಂತೆ ಬೇರೇನನ್ನಾದರೂ ಸಾಧಿಸದೆ ಹಾಗೆಯೇ ಹೋದರೆ ಅವನು ಕೀಳಾದವನೇ ಸರಿ ; ಆದ್ದರಿಂದ ನಾನು ಮತ್ತೇನಾದರೂ ಸ್ವಲ್ಪ ಕೆಲಸಮಾಡಿ, ರಾವಣನನ್ನು ಕಂಡು ಮಾತನಾಡಿ ಅನಂತರ ಶ್ರೀರಾಮನ ದರ್ಶನಕ್ಕಾಗಿ ಹೊರಡುವೆನು.'

**ಇತಿ ನಿಶ್ಚಿತ್ಯ ಮನಸಾ ವೃಕ್ಷಖಂಡಾನ್ ಮಹಾಬಲಃ ।**
**ಉತ್ಪಾಟ್ಯಾಶೋಕವನಿಕಾಂ ನಿರ್ವೃಕ್ಷಾಮಕರೋತ್ ಕ್ಷಣಾತ್ ॥ ೬೫ ॥**
**ಸೀತಾಶ್ರಯನಗಂ ತ್ಯಕ್ತ್ವಾ ವನಂ ಶೂನ್ಯಂ ಚಕಾರ ಸಃ ।**
**ಉತ್ಪಾಟಯಂತಂ ವಿಪಿನಂ ದೃಷ್ಟ್ವಾ ರಾಕ್ಷಸಯೋಷಿತಃ ॥ ೬೬ ॥**
**ಅಪೃಚ್ಛನ್ ಜಾನಕೀಂ ಕೋಽಸೌ ವಾನರಾಕೃತಿರುದ್ಭಟಃ ।**

೬೫-೬೬. ಹೀಗೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಮಹಾಬಲಶಾಲಿಯಾದ ಆತನು ಮರಗಳ ಕೊಂಬೆಗಳ ತುಂಡುಗಳನ್ನು ಮುರಿದು ಬುಡಗಳನ್ನು ಕಿತ್ತು ಕ್ಷಣಮಾತ್ರದಲ್ಲಿ ಅಶೋಕವನವನ್ನು (ಬೋಳಾಗಿ) ಮರಗಳಿಲ್ಲದ್ದನ್ನಾಗಿ ಮಾಡಿಬಿಟ್ಟನು. ಆದರೆ ಸೀತೆಯು ಕುಳಿತಿದ್ದ ಮರವೊಂದನ್ನು ಬಿಟ್ಟು ಉಳಿದ ತೋಟವನ್ನು ಖಾಲಿಮಾಡಿಬಿಟ್ಟನು. ಹೀಗೆ ಮರಗಳನ್ನು ಕಿತ್ತೆಸೆಯುತ್ತಿರುವ ಕಪಿಯನ್ನು ಕಂಡು ರಾಕ್ಷಸಿಯರು ಸೀತೆಯನ್ನು ಕುರಿತು 'ಕಪಿಯ'ವೇಷದ ಈ ಕೊಬ್ಬಿದ ವ್ಯಕ್ತಿಯು ಯಾರು?' ಎಂದು ಕೇಳಿದರು.

**ಜಾನಕ್ಯುವಾಚ-**

**ಭವತ್ಯ ಏವ ಜಾನಂತಿ ಮಾಯಾಂ ರಾಕ್ಷಸನಿರ್ಮಿತಾಮ್ ।**
**ನಾಹಮೇನಂ ವಿಜಾನಾಮಿ ದುಃಖಶೋಕಸಮಾಕುಲಾ ॥ ೬೭ ॥**
**ಇತ್ಯುಕ್ತಾಸ್ತ್ವರಿತಂ ಗತ್ವಾ ರಾಕ್ಷಸ್ಯೋ ಭಯಪೀಡಿತಾಃ ।**
**ಹನೂಮತಾ ಕೃತಂ ಸರ್ವಂ ರಾವಣಾಯ ನ್ಯವೇದಯನ್ ॥ ೬೮ ॥**

೬೭-೬೮. ಜಾನಕಿಯಿಂತೆಂದಳು : 'ರಾಕ್ಷಸರು ಹರಡಿರುವ ಮಾಯೆಯನ್ನು ನೀವೇ ಬಲ್ಲವರಾಗಿರುವಿರಿ. ನನಗೇನೂ ತಿಳಿಯದು. ದುಃಖದಿಂದಲೂ ಶೋಕದಿಂದಲೂ ನಾನು ಬಳಲುತ್ತಿರುವೆನು'. ಹೀಗೆನ್ನಲು ಭಯದಿಂದ ನಡುಗಿದ ರಾಕ್ಷಸಿಯರು ಜಾಗ್ರತೆಯಾಗಿ (ರಾವಣನ ಬಳಿಗೆ) ಹೋಗಿ ಹನುಮಂತನು ಮಾಡಿದ ಎಲ್ಲಾ ಕೃತ್ಯಗಳನ್ನೂ ಹೀಗೆಂದು ತಿಳಿಸಿದರು.

**ದೇವ ಕಶ್ಚಿನ್ಮಹಾಸತ್ತ್ವೋ ವಾನರಾಕೃತಿದೇಹಭೃತ್ ।**
**ಸೀತಯಾ ಸಹ ಸಂಭಾಷ್ಯ ಹ್ಯಶೋಕವನಿಕಾಂ ಕ್ಷಣಾತ್ ॥ ೧೯ ॥**
**ಉತ್ಪಾಟ್ಯ ಚೈತ್ಯಪ್ರಾಸಾದಂ ಬಭಂಜಾಮಿತವಿಕ್ರಮಃ ।**
**ಪ್ರಾಸಾದರಕ್ಷಿಣಃ ಸರ್ವಾನ್ ಹತ್ವಾ ತತ್ರೈವ ತಸ್ಥಿವಾನ್ ॥ ೨೦ ॥**

೧೯-೨೦. ''ಸ್ವಾಮಿ, ಕಪಿಯ ಆಕಾರದ ಶರೀರವನ್ನು ಧರಿಸಿರುವ ಒಂದು ದೊಡ್ಡ ಪ್ರಾಣಿಯು ಸೀತೆಯೊಡನೆ ಮಾತನಾಡಿ ಕ್ಷಣಮಾತ್ರದಲ್ಲಿಅಶೋಕವನವನ್ನು ಕಿತ್ತೊಗೆದು ಚೈತ್ಯಪ್ರಾಸಾದವನ್ನು ಮುರಿದುಹಾಕಿತು. ಮಹಾಪರಾಕ್ರಮಿಯಾದ ಅದು ಪ್ರಾಸಾದವನ್ನು ಕಾಯುತ್ತಿದ್ದವರನ್ನೆಲ್ಲ ಕೊಂದು ಇನ್ನೂ ಅಲ್ಲಿಯೇ ನಿಂತಿದೆ.''

**ತಚ್ಛ್ರುತ್ವಾ ತೂರ್ಣಮುತ್ಥಾಯ ವನಭಂಗಂ ಮಹಾಪ್ರಿಯಮ್ ।**
**ಕಿಂಕರಾನ್ ಪ್ರೇಷಯಾಮಾಸ ನಿಯುತಂ ರಾಕ್ಷಸಾಧಿಪಃ ॥ ೨೧ ॥**
**ನಿಭಗ್ನಚೈತ್ಯಪ್ರಾಸಾದಪ್ರಥಮಾಂತರಸಂಸ್ಥಿತಃ ।**
**ಹನುಮಾನ್ ಪರ್ವತಾಕಾರೋ ಲೋಹಸ್ತಂಭಕೃತಾಯುಧಃ ॥ ೨೨ ॥**
**ಕಿಂಚಿಲ್ಲಾಂಗೂಲಚಲನೋ ರಕ್ತಾಸ್ಯೋ ಭೀಷಣಾಕೃತಿಃ ।**
**ಆಪತಂತಂ ಮಹಾಸಂಘಂ ರಾಕ್ಷಸಾನಾಂ ದದರ್ಶ ಸಃ ॥ ೨೩ ॥**

೨೧-೨೩. ರಾಕ್ಷಸಾಧಿಪನಾದ ರಾವಣನು ತನಗೆ ಬಹಳ ಅಪ್ರಿಯವಾದ ವನಭಂಗದ ಸುದ್ದಿಯನ್ನು ಕೇಳಿ ಬೇಗನೆದ್ದು ನಿಯುತ (ಲಕ್ಷ) ಸಂಖ್ಯಾಕರಾದ ಕಿಂಕರರೆಂಬ ಸೇವಕರನ್ನು ಕಳುಹಿಸಿದನು. ಇತ್ತಲಾಗಿ ಹನುಮಂತನು ಚೈತ್ಯಪ್ರಾಸಾದವನ್ನು ಮೊದಲು ಮುರಿದುಹಾಕಿ ಅದರ ಸಮೀಪದಲ್ಲಿಯೇ ಪರ್ವತಾಕಾರದೇಹದಿಂದ ನಿಂತವನಾಗಿ ಕಬ್ಬಿಣದ ತೊಲೆಯನ್ನು ಆಯುಧವಾಗಿ ಮಾಡಿಕೊಂಡವನಾಗಿ, ಬಾಲವನ್ನು ಸ್ವಲ್ಪ ಅಲ್ಲಾಡಿಸುತ್ತಾ ಕೆಂಪಾದ ಮುಖದಿಂದಲೂ ಭಯಂಕರವಾದ ರೂಪದಿಂದಲೂ ಕೂಡಿದವನಾಗಿ ಎದುರು ಬೀಳುತ್ತಾ ಬರುತ್ತಿರುವ ರಾಕ್ಷಸರ ಮಹಾಗುಂಪನ್ನು ಕಂಡನು.

**ಚಕಾರ ಸಿಂಹನಾದಂ ಚ ಶ್ರುತ್ವಾ ತೇ ಮುಮುಹುರ್ಭೃಶಮ್ ।**
**ಹನೂಮಂತಮಥೋ ದೃಷ್ಟ್ವಾ ರಾಕ್ಷಸಾ ಭೀಷಣಾಕೃತಿಮ್ ॥ ೨೪ ॥**
**ನಿರ್ಜಘ್ನುರ್ವಿವಿಧಾಸ್ತ್ರೌಘೈಃ ಸರ್ವರಾಕ್ಷಸಘಾತಿನಮ್ ।**
**ತತ ಉತ್ಥಾಯ ಹನುಮಾನ್ ಮುದ್ಗರೇಣ ಸಮಂತತಃ ॥ ೨೫ ॥**
**ನಿಷ್ಪಿಪೇಷ ಕ್ಷಣಾದೇವ ಮಶಕಾನಿವ ಯೂಥಪಃ ।**

೨೪-೨೫. ಮತ್ತು ಅವನು ಸಿಂಹನಾದವನ್ನೂ ಮಾಡಿದನು. ಅವರು ಅದನ್ನು ಕೇಳಿ ಮೋಹಿತರಾದರು. ಅನಂತರ ಭಯಂಕರಾಕಾರನಾದ ಹನುಮಂತನನ್ನು ಕಂಡು

ರಾಕ್ಷಸರು ನಾನಾವಿಧವಾದ ಅಸ್ತ್ರಗಳ ಸಮೂಹದಿಂದ ರಾಕ್ಷಸರನ್ನೆಲ್ಲ ಕೊಲ್ಲುತ್ತಿರುವ ಅವನನ್ನು ಚೆನ್ನಾಗಿ ಹೊಡೆದರು. ಹನುಮಂತನು ಅನಂತರ ಮೇಲಕ್ಕೆದ್ದು ಮುದ್ಗರವೆಂಬ ಆಯುಧದಿಂದ ಕ್ಷಣಮಾತ್ರದಲ್ಲಿ ಸುತ್ತಲೂ ಇದ್ದ ರಾಕ್ಷಸರನ್ನು ಆನೆಯು ಸೊಳ್ಳೆಗಳನ್ನು ಬಡಿಯುವಂತೆ ಕೊಂದು ತಿಕ್ಕಿಹಾಕಿದನು.

**ನಿಹತಾನ್ ಕಿಂಕರಾನ್ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ ।**
**ಪಂಚ ಸೇನಾಪತೀಂಸ್ತತ್ರ ಪ್ರೇಷಯಾಮಾಸ ದುರ್ಮದಾನ್ ॥ ೭೬ ॥**
**ಹನೂಮಾನಪಿ ತಾನ್ ಸರ್ವಾನ್ ಲೋಹಸ್ತಂಭೇನ ಚಾಹನತ್ ।**
**ತತಃ ಕ್ರುದ್ಧೋ ಮಂತ್ರಿಸುತಾನ್ ಪ್ರೇಷಯಾಮಾಸ ಸಪ್ತ ಸಃ ॥ ೭೭ ॥**
**ಆಗತಾನಪಿ ತಾನ್ ಸರ್ವಾನ್ ಪೂರ್ವವದ್ ವಾನರೇಶ್ವರಃ ।**
**ಕ್ಷಣಾನ್ನಿಃಶೇಷತೋ ಹತ್ವಾ ಲೋಹಸ್ತಂಭೇನ ಮಾರುತಿಃ ॥ ೭೮ ॥**
**ಪೂರ್ವಸ್ಥಾನಮುಪಾಶ್ರಿತ್ಯ ಪ್ರತೀಕ್ಷನ್ ರಾಕ್ಷಸಾನ್ ಸ್ಥಿತಃ ।**

೭೬-೭೮. ಕಿಂಕರರು ಕೊಲ್ಲಲ್ಪಟ್ಟರೆಂಬುದನ್ನು ಕೇಳಿ ರಾವಣನು ಕೋಪಾವಿಷ್ಟನಾಗಿ ಮದಗರ್ವಿತರಾದ ಐದು ಜನ ಸೇನಾಪತಿಗಳನ್ನು ಅಲ್ಲಿಗೆ ಕಳುಹಿಸಿದನು. ಅವರೆಲ್ಲರನ್ನೂ ಹನುಮಂತನು ಕಬ್ಬಿಣದ ಕಂಭದಿಂದ ಹೊಡೆದು ಕೊಂದನು. ಅನಂತರ ಆ (ರಾವಣನು) ಕುಪಿತನಾಗಿ ಏಳು ಜನ ಮಂತ್ರಿಪುತ್ರರ ಗುಂಪನ್ನು ಯುದ್ಧಕ್ಕೆ ಕಳುಹಿಸಿದನು. ಹಾಗೆ ಬಂದ ಅವರೆಲ್ಲರನ್ನೂ ವಾನರೇಶ್ವರನು ಹಿಂದಿನಂತೆಯೇ ಲೋಹಸ್ತಂಭದಿಂದ ಕ್ಷಣಮಾತ್ರದಲ್ಲಿ ಒಬ್ಬರೂ ಉಳಿಯದಂತೆ ಕೊಂದು ತನ್ನ ಹಿಂದಿನ ಜಾಗಕ್ಕೇ ಬಂದು ನಿಂತವನಾಗಿ ರಾಕ್ಷಸರ ಬರುವಿಕೆಯನ್ನು ಕಾಯುತ್ತಿದ್ದನು.

**ತತೋ ಜಗಾಮ ಬಲವಾನ್ ಕುಮಾರೋಽಕ್ಷಃ ಪ್ರತಾಪವಾನ್ ।**
**ತಮುತ್ಪಪಾತ ಹನುಮಾನ್ ದೃಷ್ಟ್ವಾಽಽಕಾಶೇ ಸಮುದ್ಗರಃ ॥ ೭೯ ॥**
**ಗಗನಾತ್ ತ್ವರಿತೋ ಮೂರ್ಧ್ನಿ ಮುದ್ಗರೇಣ ವ್ಯತಾಡಯತ್ ।**
**ಹತ್ವಾ ತಮಕ್ಷಂ ನಿಃಶೇಷಂ ಬಲಂ ಸರ್ವಂ ಚಕಾರ ಸಃ ॥ ೮೦ ॥**

೭೯-೮೦. ಅನಂತರ ಪ್ರತಾಪಶಾಲಿಯೂ ಬಲಿಷ್ಠನೂ ಆದ ಅಕ್ಷಕುಮಾರನು ಹೊರಟುಬಂದನು. ಅವನನ್ನು ಕಂಡು ಹನುಮಂತನು ಮುದ್ಗರವೆಂಬ ಆಯುಧ ಸಹಿತನಾಗಿ ಆಕಾಶಕ್ಕೆ ನೆಗೆದನು. ವೇಗವಾಗಿ ಆಕಾಶದಿಂದಲೇ ಕೆಳಕ್ಕೆ ಮುದ್ಗರಾಯುಧ ದಿಂದ ರಾಕ್ಷಸನ ತಲೆಯಮೇಲೆ ಹೊಡೆದನು. ಹೀಗೆ ಅಕ್ಷನನ್ನು ಕೊಂದು ರಾಕ್ಷಸಸೈನ್ಯವನ್ನೆಲ್ಲ ಸ್ವಲ್ಪವೂ ಉಳಿಯದಂತೆ (ನಾಶ) ಮಾಡಿದನು.

**ತತಃ ಶ್ರುತ್ವಾ ಕುಮಾರಸ್ಯ ವಧಂ ರಾಕ್ಷಸಪುಂಗವಃ ।**
**ಕ್ರೋಧೇನ ಮಹತಾವಿಷ್ಟ ಇಂದ್ರಜೇತಾರಮಬ್ರವೀತ್ ॥ ೮೧ ॥**
**ಪುತ್ರ ಗಚ್ಛಾಮ್ಯಹಂ ತತ್ರ ಯತ್ರಾಸ್ತೇ ಪುತ್ರಹಾ ರಿಪುಃ ।**
**ಹತ್ವಾ ತಮಥವಾ ಬದ್ಧ್ವಾ ಆನಯಿಷ್ಯಾಮಿ ತೇಂತಿಕಮ್ ॥ ೮೨ ॥**
**ಇಂದ್ರಜಿತ್ ಪಿತರಂ ಪ್ರಾಹ ತ್ಯಜ ಶೋಕಂ ಮಹಾಮತೇ ।**
**ಮಯಿ ಸ್ಥಿತೇ ಕಿಮರ್ಥಂ ತ್ವಂ ಭಾಷಸೇ ದುಃಖಿತಂ ವಚಃ ॥ ೮೩ ॥**
**ಬದ್ಧ್ವಾಽಽನೇಷ್ಯೇ ದ್ರುತಂ ತಾತ ವಾನರಂ ಬ್ರಹ್ಮಪಾಶತಃ ।**
**ಇತ್ಯುಕ್ತ್ವಾ ರಥಮಾರುಹ್ಯ ರಾಕ್ಷಸೈರ್ಬಹುಭಿರ್ವೃತಃ ॥ ೮೪ ॥**
**ಜಗಾಮ ವಾಯುಪುತ್ರಸ್ಯ ಸಮೀಪಂ ವೀರವಿಕ್ರಮಃ ।**

೮೧-೮೪. ಅನಂತರ ಅಕ್ಷಕುಮಾರನ ಸಾವನ್ನು ಕೇಳಿ ರಾಕ್ಷಸಶ್ರೇಷ್ಠನಾದ (ರಾವಣನು) ಬಹಳ ಕೋಪಾವಿಷ್ಟನಾಗಿ ಇಂದ್ರಜಿತ್ತನ್ನು ಕುರಿತು ಹೀಗೆಂದನು : ''ಮಗನೆ, ಅದೊ, ಆ ನನ್ನ ಮಗನನ್ನು ಕೊಂದ ಶತ್ರುವು ಎಲ್ಲಿರುವನೋ ಅಲ್ಲಿಗೆ ಹೋಗುವೆನು. ಅವನನ್ನು ಕೊಂದುಹಾಕಿ ಅಥವಾ ಕಟ್ಟಿ ನಿನ್ನ ಬಳಿಗೆ ತರುವೆನು.'' ಆಗ ಇಂದ್ರಜಿತ್ತು ತಂದೆಯನ್ನು ಕುರಿತು ಹೀಗೆಂದನು : ''ಎಲೌ ಬುದ್ಧಿಶಾಲಿಯೆ, ಶೋಕವನ್ನು ಬಿಡು. ನಾನು ಇರುವಾಗಲೇ ನೀನು ದುಃಖದಿಂದ ಕೂಡಿದ ಮಾತನ್ನೇಕೆ ಆಡುವೆ ? ಅಪ್ಪ, ನಾನು ಆ ಕಪಿಯನ್ನು ಬ್ರಹ್ಮಾಸ್ತ್ರದಿಂದ ಕಟ್ಟಿ ತರುವೆನು.'' ಹೀಗೆಂದು ಹೇಳಿ ವೀರ್ಯವಂತನೂ ಪರಾಕ್ರಮಶಾಲಿಯೂ ಆದ ಆತನು ರಥವನ್ನೇರಿ ಅನೇಕ ರಾಕ್ಷಸರೊಡಗೂಡಿ ವಾಯುಪುತ್ರನಾದ (ಹನುಮಂತ) ನಿದ್ದಲ್ಲಿಗೆ ಬಂದನು.

**ತತೋಽತಿಗರ್ಜಿತಂ ಶ್ರುತ್ವಾ ಸ್ತಂಭಮುದ್ಯಮ್ಯ ವೀರ್ಯವಾನ್ ।**
**ಉತ್ಪಪಾತ ನಭೋ ದೇಶಂ ಗರುತ್ಮಾನಿವ ಮಾರುತಿಃ ॥ ೮೫ ॥**
**ತತೋ ಭ್ರಮಂತಂ ನಭಸಿ ಹನೂಮಂತಂ ಶಿಲೀಮುಖೈಃ ।**
**ವಿದ್ಧ್ವಾ ತಸ್ಯ ಶಿರೋಭಾಗಮಿಷುಭಿಶ್ಚಾಷ್ಟಭಿಃ ಪುನಃ ॥ ೮೬ ॥**
**ಹೃದಯಂ ಪಾದಯುಗಲಂ ಷಡ್ಭಿರೇಕೇನ ವಾಲಧಿಮ್ ।**
**ಭೇದಯಿತ್ವಾ ತತೋ ಘೋರಂ ಸಿಂಹನಾದಮಥಾಕರೋತ್ ॥ ೮೭ ॥**

೮೫-೮೭. ಅನಂತರ ಹೆಚ್ಚಿನ ಘರ್ಜನೆಯನ್ನು ಕೇಳಿ ವೀರನಾದ ಹನುಮಂತನು ಗರುಡನಂತೆ ಆಕಾಶಕ್ಕೆ ಹಾರಿದನು. ಹಾಗೆಯೇ ಆಕಾಶದಲ್ಲಿ ಹಾರಾಡುತ್ತಿದ್ದ ಹನುಮಂತನಿಗೆ ಅವನ ತಲೆಯಭಾಗಕ್ಕೆ ಬಾಣಗಳಿಂದ ಹೊಡೆದು, ಎಂಟು ಬಾಣಗಳಿಂದ ಎದೆಯನ್ನೂ ಆರು ಬಾಣಗಳಿಂದ ಎರಡು ಕಾಲುಗಳನ್ನೂ

ಹೊಡೆದು ಒಂದು ಬಾಣವನ್ನು ಬಾಲಕ್ಕೂ ಹೊಡೆದು ಅನಂತರ ಇಂದ್ರಜಿತನು ಘಟ್ಟಿಯಾಗಿ ಸಿಂಹನಾದಮಾಡಿದನು.

**ತತೋಽತಿಹರ್ಷಾದ್ ಹನುಮಾನ್ ಸ್ತಂಭಮುದ್ಯಮ್ಯ ವೀರ್ಯವಾನ್ ।**
**ಜಘಾನ ಸಾರಥಿಂ ಸಾಶ್ವಂ ರಥಂ ಚಾಚೂರ್ಣಯತ್ ಕ್ಷಣಾತ್ ॥ ೮೮ ॥**
**ತತೋಽನ್ಯಂ ರಥಮಾದಾಯ ಮೇಘನಾದೋ ಮಹಾಬಲಃ ।**
**ಶೀಘ್ರಂ ಬ್ರಹ್ಮಾಸ್ತ್ರಮಾದಾಯ ಬದ್ಧ್ವಾ ವಾನರಪುಂಗವಮ್ ॥ ೮೯ ॥**
**ನಿನಾಯ ನಿಕಟಂ ರಾಜ್ಞೋ ರಾವಣಸ್ಯ ಮಹಾಬಲಃ ।**

೮೮-೮೯. ಅನಂತರ ಹೆಚ್ಚಿನ ಸಂತೋಷದಿಂದ ವೀರ್ಯಶಾಲಿಯಾದ ಹನುಮಂತನು ಕಂಬವನ್ನೆತ್ತಿ (ಇಂದ್ರಜಿತ್ತಿನ) ರಥ, ಸಾರಥಿ, ಕುದುರೆಗಳನ್ನೆಲ್ಲ ಕ್ಷಣಮಾತ್ರದಲ್ಲಿ ಪುಡಿಮಾಡಿದನು. ಮಹಾಬಲಶಾಲಿಯಾದ ಮೇಘನಾದನು ಬೇರೊಂದು ರಥವನ್ನೇರಿ ಜಾಗ್ರತೆಯಾಗಿ ಬ್ರಹ್ಮಾಸ್ತ್ರವನ್ನು ಹೂಡಿ ಕಪಿಶ್ರೇಷ್ಠನನ್ನು ಬಂಧಿಸಿ ರಾಜನಾದ ರಾವಣನ ಸಮೀಪಕ್ಕೆ ಕರೆದೊಯ್ದನು.

**ಯಸ್ಯ ನಾಮ ಸತತಂ ಜಪಂತಿ ಯೇ**
**(ಅ) ಜ್ಞಾನಕರ್ಮಕೃತಬಂಧನಂ ಕ್ಷಣಾತ್ ।**
**ಸದ್ಯ ಏವ ಪರಿಮುಚ್ಯ ತತ್ಪದಂ**
**ಯಾಂತಿ ಕೋಟಿರವಿಭಾಸುರಂ ಶಿವಮ್ ॥ ೯೦ ॥**
**ತಸ್ಯೈವ ರಾಮಸ್ಯ ಪದಾಂಬುಜಂ ಸದಾ**
**ಹೃತ್ಪದ್ಮಮಧ್ಯೇ ಸುನಿಧಾಯ ಮಾರುತಿಃ ।**
**ಸದ್ಯೈವ ನಿರ್ಮುಕ್ತಸಮಸ್ತಬಂಧನಃ**
**ಕಿಂ ತಸ್ಯ ಪಾಶೈರಿತರೈಶ್ಚ ಬಂಧನೈಃ ॥ ೯೧ ॥**

೯೦-೯೧. ಯಾರು ಯಾವ (ಆ ರಾಮನ) ನಾಮವನ್ನು ಸದಾಕಾಲವೂ ಜಪಿಸುತ್ತಿರುವರೋ ಅಂಥವರು ಕ್ಷಣಮಾತ್ರದಲ್ಲಿ ಅಜ್ಞಾನದಿಂದುಂಟಾದ ಬಂಧನವನ್ನು ಬಿಡಿಸಿಕೊಂಡು ಕೋಟಿಸೂರ್ಯಪ್ರಕಾಶಮಾನವಾದ ಮಂಗಳಕರವಾದ ಆತನ ಪದವಿಯನ್ನು ಸೇರುವರೋ, ಅದೇ ಶ್ರೀರಾಮನ ಪಾದಾರವಿಂದವನ್ನು ಯಾವಾಗಲೂ ಹೃದಯಕಮಲದ ಮಧ್ಯದಲ್ಲಿ ಮಾರುತಿಯು ದೃಢವಾಗಿರಿಸಿಕೊಂಡು ಎಂದೆಂದಿಗೂ ಎಲ್ಲಾ ಕಟ್ಟುಗಳಿಂದಲೂ ಬಿಡಲ್ಪಟ್ಟಿರುವನೋ ಅಂಥವನಿಗೆ ಪಾಶಗಳಿಂದಾಗಲಿ, ಇತರ ಬಂಧಗಳಿಂದಾಗಲಿ ಏನಾದೀತು?

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಸುಂದರಕಾಂಡೇ ತೃತೀಯಃ ಸರ್ಗಃ**

-------------

# ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಯಾಂತಂ ಕಪೀಂದ್ರಂ ಧೃತಪಾಶಬಂಧನಂ**
**ವಿಲೋಕಯಂತಂ ನಗರಂ ವಿಭೀತವತ್ ।**
**ಅತಾಡಯನ್ಮುಷ್ಟಿತಲೈಃ ಸಕೋಪನಾಃ**
**ಪೌರಾಃ ಸಮಂತಾದನುಯಾಂತ ಈಕ್ಷಿತುಮ್ ॥ ೧ ॥**
**ಬ್ರಹ್ಮಾಸ್ತ್ರಮೇನಂ ಕ್ಷಣಮಾತ್ರಸಂಗಮಂ**
**ಕೃತ್ವಾ ಗತಂ ಬ್ರಹ್ಮವರೇಣ ಸತ್ವರಮ್ ।**
**ಜ್ಞಾತ್ವಾ ಹನೂಮಾನಪಿ ಫಲ್ಗುರಜ್ಜುಭಿಃ**
**ಧೃತೋ ಯಯೌ ಕಾರ್ಯವಿಶೇಷಗೌರವಾತ್ ॥ ೨ ॥**

೧-೨. ಶ್ರೀ ಮಹಾದೇವನಿಂತೆಂದನು : ಪಾಶಗಳಿಂದ ಬಿಗಿಯಲ್ಪಟ್ಟು, ನಗರವನ್ನೆಲ್ಲ ನೋಡುತ್ತಾ ಹೆದರಿಕೆಯಿಂದ ಕೂಡಿದವನಂತೆ ಕಂಡುಬರುತ್ತಿರುವ ಹನುಮಂತನು ಹೋಗುತ್ತಿರಲಾಗಿ ನೋಡುವದಕ್ಕಾಗಿ ಸುತ್ತಲೂ ನೆರೆದಿದ್ದ ಪೌರರು ಕೋಪಾವಿಷ್ಟರಾಗಿ ಮುಷ್ಟಿಗಳ ಹೊಡೆತದಿಂದ ಅವನನ್ನು ಗುದ್ದಿದರು. ಬ್ರಹ್ಮನ ವರ ಪ್ರದಾನದಂತೆ ಒಂದು ಕ್ಷಣಕಾಲ ಮಾತ್ರ ಬಂಧಿಸಿ ಮತ್ತೆ ಬಿಚ್ಚಿಕೊಂಡು ಹೊರಟುಹೋದಂಥ ಬ್ರಹ್ಮಾಸ್ತ್ರವನ್ನು ಹನುಮಂತನು ತಿಳಿದವನಾದರೂ ನಿರ್ಬಲವಾದ ಹಗ್ಗಗಳಿಂದ ಕಟ್ಟಿಹಿಡಿಯಲ್ಪಟ್ಟಿದ್ದ ಆತನು ವಿಶೇಷಕಾರ್ಯಗಳ ಸಲುವಾಗಿ ಹಾಗೆಯೇ ಬಂಧನವನ್ನು ಸಹಿಸಿಕೊಂಡಿದ್ದನು.

**ಸಭಾಂತರಸ್ಥಸ್ಯ ಚ ರಾವಣಸ್ಯ ತಂ**
**ಪುರೋ ನಿಧಾಯಾಹ ಬಲಾರಿಜಿತ್ ತದಾ ।**
**ಬದ್ಧೋ ಮಯಾ ಬ್ರಹ್ಮವರೇಣ ವಾನರಃ**
**ಸಮಾಗತೋಽನೇನ ಹತಾ ಮಹಾಸುರಾಃ ।**
**ಯದ್ಯುಕ್ತಮತ್ರಾರ್ಯ ವಿಚಾರ್ಯ ಮಂತ್ರಿಭಿಃ ।**
**ವಿಧೀಯತಾಮೇಷ ನ ಲೌಕಿಕೋ ಹರಿಃ ॥ ೩ ॥**

೩. ಸಭೆಯ ನಡುವೆ ಇದ್ದ ರಾವಣನ ಎದುರಿಗೆ ಅವನನ್ನು ಹಾಜರುಪಡಿಸಿ ಇಂದ್ರಜಿತನು ಆಗ ಹೀಗೆಂದನು : ''ಈ ಕಪಿಯು ಬ್ರಹ್ಮಾಸ್ತ್ರದ ಮೂಲಕ ನನ್ನಿಂದ ಕಟ್ಟಿ ಹಾಕಲ್ಪಟ್ಟು ಇಲ್ಲಿಗೆ ಬಂದಿರುವನು. ಇವನಿಂದ ದೊಡ್ಡ ದೊಡ್ಡ ರಾಕ್ಷಸರು ಕೊಲ್ಲಲ್ಪಟ್ಟರು

ವರು. ಪೂಜ್ಯನೆ, ಈಗ ಏನು ಮಾಡುವದು ಯೋಗ್ಯವೋ ಅದನ್ನು ಮಂತ್ರಿಗಳೊಡನೆ ಸಮಾಲೋಚಿಸಿ ಮಾಡೋಣವಾಗಲಿ. ಈ ಕಪಿಯು ಸಾಮಾನ್ಯಕಪಿಯಂತೂ ಅಲ್ಲ.

**ತತೋ ವಿಲೋಕ್ಯಾಹ ಸ ರಾಕ್ಷಸೇಶ್ವರಃ**
**ಪ್ರಹಸ್ತಮಗ್ರೇ ಸ್ಥಿತಮಂಜನಾದ್ರಿಭಮ್ ।**
**ಪ್ರಹಸ್ತ ಪೃಚ್ಛೈನಮಸೌ ಕಿಮಾಗತಃ**
**ಕಿಮತ್ರ ಕಾರ್ಯಂ ಕುತ ಏವ ವಾನರಃ ॥ ೪ ॥**
**ವನಂ ಕಿಮರ್ಥಂ ಸಕಲಂ ವಿನಾಶಿತಂ**
**ಹತಾಃ ಕಿಮರ್ಥಂ ಮಮ ರಾಕ್ಷಸಾ ಬಲಾತ್ ।**
**ತತಃ ಪ್ರಹಸ್ತೋ ಹನುಮಂತಮಾದರಾತ್**
**ಪಪ್ರಚ್ಛ ಕೇನ ಪ್ರಹಿತೋಽಸಿ ವಾನರ ॥ ೫ ॥**
**ಭಯಂ ಚ ತೇ ಮಾಸ್ತು ವಿಮೋಕ್ಷ್ಯಸೇ ಮಯಾ**
**ಸತ್ಯಂ ವದಸ್ವಾಖಿಲರಾಜಸಂನಿಧೌ ।**

೪-೫. ಅನಂತರ ಆ ರಾಕ್ಷಸರಾಜನು ಎದುರಿಗೆ ಇದ್ದ, ಕಾಡಿಗೆಯ ಪರ್ವತದಂತಿರುವ ಪ್ರಹಸ್ತನನ್ನು ನೋಡಿ ಹೀಗೆಂದನು : 'ಎಲೈ ಪ್ರಹಸ್ತನೆ, ಈತನನ್ನು ಕೇಳು. ಇವನೇಕೆ ಇಲ್ಲಿಗೆ ಬಂದನು? ಇಲ್ಲಿ ಇವನಿಗೆ ಕೆಲಸವಾದರೂ ಏನು ? ಈ ಕಪಿಯು ಅಶೋಕವನವನ್ನು ಏತಕ್ಕಾಗಿ ನಾಶಮಾಡಿದನು ? ನಮ್ಮ ಕಡೆಯ ರಾಕ್ಷಸರನ್ನೇಕೆ ಕೊಂದನು ?' ಆಗ ಪ್ರಹಸ್ತನು ಹನುಮಂತನನ್ನು ಆದರದಿಂದ ಕೇಳಿದನು : 'ಎಲೈ ಕಪಿಯೆ, ನೀನು ಯಾರಿಂದ ಕಳುಹಿಸಲ್ಪಟ್ಟಿರುವೆ ? ನೀನು ಭಯಪಟ್ಟುಕೊಳ್ಳಬೇಡ. ಈಗಲೆ ಬಿಡುಗಡೆಯನ್ನು ಹೊಂದಲಿರುವೆ. ಆದರೆ ಎಲ್ಲಾ ರಾಜರುಗಳ ಮುಂದೆ ನಿಜವನ್ನು ಹೇಳು.'

**ತತೋಽತಿಹರ್ಷಾತ್ ಪವನಾತ್ಮಜೋ ರಿಪುಂ**
**ನಿರೀಕ್ಷ್ಯ ಲೋಕತ್ರಯಕಂಟಕಾಸುರಮ್ ।**
**ವಕ್ತುಂ ಪ್ರಚಕ್ರೇ ರಘುನಾಥಸತ್ಕಥಾಂ**
**ಕ್ರಮೇಣ ರಾಮಂ ಮನಸಾ ಸ್ಮರನ್ ಮುಹುಃ ॥ ೬ ॥**

೬. ಅನಂತರ ಬಹಳ ಸಂತೋಷದಿಂದ ಮಾರುತಿಯು ಮೂರುಲೋಕಗಳಿಗೂ ಕಂಟಕನಾಗಿರುವ ಶತ್ರುವನ್ನು ನೋಡುತ್ತಾ ಕ್ರಮವಾಗಿ ಮನಸ್ಸಿನಲ್ಲಿ ಮತ್ತೆ ಮತ್ತೆ ರಾಮನನ್ನು ಧ್ಯಾನಿಸುತ್ತಾ ಶ್ರೀರಾಮನ ಸತ್ಕಥೆಯನ್ನು ಹೇಳಲಾರಂಭಿಸಿದನು.

**ಶೃಣು ಸ್ಫುಟಂ ದೇವಗಣಾದ್ಯಮಿತ್ರ ಹೇ**
**ರಾಮಸ್ಯ ದೂತೋಽಹಮಶೇಷಹೃತ್ ಸ್ಥಿತೇಃ ।**
**ಯಸ್ಯಾಖಿಲೇಶಸ್ಯ ಹೃತಾಧುನಾ ತ್ವಯಾ**
**ಭಾರ್ಯಾ ಸ್ವನಾಶಾಯ ಶುನೇವ ಸದ್ಧವಿಃ** ॥ ೭ ॥
**ಸ ರಾಘವೋಽಭ್ಯೇತ್ಯ ಮತಂಗಪರ್ವತಂ**
**ಸುಗ್ರೀವಮೈತ್ರೀಮನಲಸ್ಯ ಸಂನಿಧೌ ।**
**ಕೃತ್ವೈಕಬಾಣೇನ ನಿಹತ್ಯ ವಾಲಿನಂ**
**ಸುಗ್ರೀವಮೇವಾಧಿಪತಿಂ ಚಕಾರ ತಮ್** ॥ ೮ ॥
**ಸ ವಾನರಾಣಾಮಧಿಪೋ ಮಹಾಬಲೀ**
**ಮಹಾಬಲೈರ್ವಾನರಯೂಥಕೋಟಿಭಿಃ ।**
**ರಾಮೇಣ ಸಾರ್ಧಂ ಸಹ ಲಕ್ಷ್ಮಣೇನ ಭೋ**
**ಪ್ರವರ್ಷಣೇಽಮರ್ಷಯುತೋಽವತಿಷ್ಠತೇ** ॥ ೯ ॥

೭-೯. 'ಎಲೈ ದೇವಗಣಗಳ ವೈರಿಯೆ, ಚೆನ್ನಾಗಿ ಕೇಳು. ನಾನು ಅಖಿಲರ ಹೃದಯದಲ್ಲಿರುವ ರಾಮನ ದೂತನು. ಯಾವ ಸರ್ವಾಂತರನಾದ ಆ ಒಡೆಯನ ಹೆಂಡತಿಯು - ನಾಯಿಯು ಪವಿತ್ರವಾದ ಹವಿಸ್ಸನ್ನಪಹರಿಸುವಂತೆ - ನಿನ್ನಿಂದ ನಿನ್ನ ನಾಶಕ್ಕಾಗಿ ಕದಿಯಲ್ಪಟ್ಟಳೋ ಆ ರಾಘವನು ಮತಂಗಪರ್ವತಕ್ಕೆ ಬಂದು ಅಗ್ನಿದೇವನ ಸನ್ನಿಧಿಯಲ್ಲಿ ಸುಗ್ರೀವನೊಡನೆ ಸ್ನೇಹವನ್ನು ಬೆಳೆಯಿಸಿ, ಒಂದೇ ಬಾಣದಿಂದ ವಾಲಿಯನ್ನು ಕೊಂದು ಸುಗ್ರೀವನನ್ನೇ (ಕಿಷ್ಕಿಂಧೆಗೆ) ಒಡೆಯನನ್ನಾಗಿ ಮಾಡಿದನು. ಎಲೈ ರಾಕ್ಷಸರಾಜನೆ, ಕಪಿಗಳೊಡೆಯನಾದ ಮಹಾಬಲಶಾಲಿಯಾದ ಆತನು ಕೋಟಿ ಗಟ್ಟಲೆಯ ಕಪಿಗಳ ಗುಂಪಿನೊಡನೆ ರಾಮಲಕ್ಷ್ಮಣರೊಡನೆ - ಈಗ ಪ್ರವರ್ಷಣಪರ್ವತದಲ್ಲಿ ಕುಪಿತನಾಗಿದ್ದುಕೊಂಡಿರುವನು.

**ಸಂಚೋದಿತಾಸ್ತೇನ ಮಹಾಹರೀಶ್ವರಾಃ**
**ಧರಾಸುತಾಂ ಮಾರ್ಗಯಿತುಂ ದಿಶೋ ದಶ ।**
**ತತ್ರಾಹಮೇಕಃ ಪವನಾತ್ಮಜಃ ಕಪಿಃ**
**ಸೀತಾಂ ವಿಚಿನ್ವನ್ ಶನಕೈಃ ಸಮಾಗತಃ** ॥ ೧೦ ॥
**ದೃಷ್ಟ್ವಾ ಮಯಾ ಪದ್ಮಪಲಾಶಲೋಚನಾ**
**ಸೀತಾ ಕಪಿತ್ವಾದ್ ವಿಪಿನಂ ವಿನಾಶಿತಮ್ ।**
**ದೃಷ್ಟ್ವಾ ತತೋಽಹಂ ರಭಸಾ ಸಮಾಗತಾನ್**
**ಮಾಂ ಹಂತುಕಾಮಾನ್ ಧೃತಚಾಪಸಾಯಕಾನ್** ॥ ೧೧ ॥

**ಮಯಾ ಹತಾಸ್ತೇ ಪರಿರಕ್ಷಿತಂ ವಪುಃ**
**ಪ್ರಿಯೋ ಹಿ ದೇಹೋಽಖಿಲದೇಹಿನಾಂ ಪ್ರಭೋ ।**
**ಬ್ರಹ್ಮಾಸ್ತ್ರಪಾಶೇನ ನಿಬಧ್ಯ ಮಾಂ ತತಃ**
**ಸಮಾಗಮನ್ಮೇಘನಿನಾದನಾಮಕಃ ॥ ೧೨ ॥**
**ಸ್ಪೃಷ್ಟ್ವೈವ ಮಾಂ ಬ್ರಹ್ಮವರಪ್ರಭಾವತಃ**
**ತ್ಯಕ್ತ್ವಾ ಗತಂ ಸರ್ವಮವೈಮಿ ರಾವಣ ।**
**ತಥಾಪ್ಯಹಂ ಬದ್ಧ ಇವಾಗತೋ ಹಿತಂ**
**ಪ್ರವಕ್ತುಕಾಮಃ ಕರುಣಾರಸಾರ್ದ್ರಧೀಃ ॥ ೧೩ ॥**

೧೦-೧೩. ಆತನಿಂದ ಕಳುಹಿಸಲ್ಪಟ್ಟ ಮಹಾಕಪಿಗಳು ದಿಕ್ಕುದಿಕ್ಕುಗಳಲ್ಲಿಯೂ ಸೀತಾದೇವಿಯನ್ನು ಹುಡುಕುವದಕ್ಕೆ ಹೊರಟಿರುವರು. ಅಂಥವರಲ್ಲೊಬ್ಬನಾದ ವಾಯುಪುತ್ರನಾದ ನಾನು ಸೀತೆಯನ್ನು ಹುಡುಕುತ್ತಾ ಮೆಲ್ಲನೆ ಬಂದೆನು. ನಾನು ಕಮಲನಯನೆಯಾದ ಸೀತೆಯನ್ನು ಕಂಡೆನು. ಕಪಿಯ ಸ್ವಭಾವಕ್ಕನುಗುಣವಾಗಿ ಅಶೋಕ ವನವನ್ನು ನಾಶಗೊಳಿಸಿದೆನು. ಅನಂತರ ನಾನು ವೇಗದಿಂದ ನುಗ್ಗಿ ಬರುತ್ತಾ ಧನುರ್ಬಾಣಧಾರಿಗಳಾಗಿ ನನ್ನನ್ನು ಕೊಲ್ಲುವದಕ್ಕಾಗಿ ಹವಣಿಸುತ್ತಿದ್ದ ರಾಕ್ಷಸರನ್ನು ಕಂಡು ಕೊಂದುಹಾಕಿದೆನು. ನನ್ನ ಶರೀರವನ್ನು ಕಾಪಾಡಿಕೊಂಡೆನು. ಏಕೆಂದರೆ - ಎಲೈ ಪ್ರಭುವೆ, ಶರೀರವು ಎಲ್ಲಾ ದೇಹಧಾರಿಗಳಿಗೂ ಪ್ರಿಯವಾದದ್ದೇ ಆಗಿರುವದು. ಅನಂತರ ಬ್ರಹ್ಮಾಸ್ತ್ರಪಾಶಗಳಿಂದ ನನ್ನನ್ನು ಮೇಘನಾದನೆಂಬವನು ಕಟ್ಟಿಹಾಕಿದನು. ಬ್ರಹ್ಮನ ವರದಿಂದ ಅದು ಕೇವಲ ನನ್ನನ್ನು ಮುಟ್ಟಿ ಪುನಃ ಬಿಟ್ಟುಹೋಯಿತು. ರಾವಣನೆ, ನಾನು ಇದೆಲ್ಲವನ್ನೂ ಬಲ್ಲೆನು. ಆದರೂ ನಾನು ಕಟ್ಟಲ್ಪಟ್ಟವನಂತೆ ಬಂದಿರುತ್ತೇನೆ. ಏಕೆಂದರೆ ಕರುಣೆಯಿಂದ ಕರಗಿದ ಮನಸ್ಸುಳ್ಳವನಾಗಿ ನಿನಗೆ ಉಪದೇಶಮಾಡಲು ಬಂದಿರುವೆನು.

**ವಿಚಾರ್ಯ ಲೋಕಸ್ಯ ವಿವೇಕತೋ ಗತಿಂ**
**ನ ರಾಕ್ಷಸೀಂ ಬುದ್ಧಿಮುಪೈಹಿ ರಾವಣ ।**
**ದೈವೀಂ ಗತಿಂ ಸಂಸೃತಿಮೋಕ್ಷಹೈತುಕೀಂ**
**ಸಮಾಶ್ರಯಾತ್ಯಂತಹಿತಾಯ ದೇಹಿನಃ ॥ ೧೪ ॥**
**ತ್ವಂ ಬ್ರಹ್ಮಣೋ ಹ್ಯುತ್ತಮವಂಶಸಂಭವಃ**
**ಪೌಲಸ್ತ್ಯಪುತ್ರೋಽಸಿ ಕುಬೇರಬಾಂಧವಃ ।**
**ದೇಹಾತ್ಮಬುದ್ಧ್ಯಾಪಿ ಚ ಪಶ್ಯ ರಾಕ್ಷಸೋ**
**ನಾಸ್ಯಾತ್ಮಬುದ್ಧ್ಯಾ ಕಿಮು ರಾಕ್ಷಸೋ ನ ಹಿ ॥ ೧೫ ॥**

**ಶರೀರಬುದ್ಧೀಂದ್ರಿಯದುಃಖಸಂತತಿ**
**ರ್ನ ತೇ ನ ಚ ತ್ವಂ ತವ ನಿರ್ವಿಕಾರತಃ ।**
**ಅಜ್ಞಾನಹೇತೋಶ್ಚ ತಥೈವ ಸಂತತೇ-**
**ರಸತ್ವಮಸ್ಯಾಃ ಸ್ವಪತೋ ಹಿ ದೃಶ್ಯವತ್ ॥ ೧೬ ॥**

೧೪-೧೬. ಎಲೈ ರಾವಣನೆ, ನೀನು ವಿವೇಕದಿಂದ ಲೋಕವ್ಯವಹಾರಸ್ಥಿತಿಯನ್ನು ವಿಚಾರಮಾಡಿದವನಾಗಿ ರಾಕ್ಷಸಬುದ್ಧಿಯನ್ನು ಕೈಬಿಡುವವನಾಗು. ಸಂಸಾರದಿಂದ ಬಿಡುಗಡೆಯನ್ನು ಮಾಡಿಸುವ ದೈವಸಂಪತ್ತಿನ ಹಾದಿಯನ್ನು ಎಂದರೆ ದೇಹಿಯಾದವನಿಗೆ ಅತ್ಯಂತಹಿತವಾದದ್ದನ್ನು ಆಶ್ರಯಿಸುವವನಾಗು. ನೀನಾದರೊ, ಪುಲಸ್ತ್ಯಬ್ರಹ್ಮನ ಉತ್ತಮ ವಂಶದಲ್ಲಿ ಪೌಲಸ್ತ್ಯನ ಮಗನಾಗಿ ಹುಟ್ಟಿದವನಾಗಿ ಕುಬೇರನ ಬಂಧುವಾಗಿರುವೆ. ದೇಹಾತ್ಮಬುದ್ಧಿಯಿಂದ ನೋಡಿದರೂ ನೀನು ರಾಕ್ಷಸನಲ್ಲ. ಇನ್ನು ಆತ್ಮಬುದ್ಧಿಯಿಂದ ಲಾದರೂ ರಾಕ್ಷಸನೇನು ? ಅಲ್ಲ. ನಿನ್ನ ಆತ್ಮನು ನಿರ್ವಿಕಾರನಾಗಿರುವದರಿಂದ ಶರೀರ - ಬುದ್ಧಿ- ಇಂದ್ರಿಯಗಳ ಸಂಪರ್ಕದಿಂದಾಗುವ ದುಃಖವು ನಿನಗಲ್ಲ. ಅವು ನೀನಲ್ಲ. ಅಜ್ಞಾನದ ನಿಮಿತ್ತವಾದ ಈ ದುಃಖಸಂತತಿಯು ಸುಳ್ಳೇ ಆಗಿರುತ್ತದೆ. ನಿದ್ರಿಸುತ್ತಿರುವ ವನಿಗೆ ಅವನೊಳಗೇ ತೋರುತ್ತಿರುವ ದೃಶ್ಯಗಳು ಹೇಗೆ ಮಿಥ್ಯೆಯೋ ಹಾಗೆ -ಎಂದು ತಿಳಿ.

**ಇದಂ ತು ಸತ್ಯಂ ತವ ನಾಸ್ತಿ ವಿಕ್ರಿಯಾ**
**ವಿಕಾರಹೇತುರ್ನ ಚ ತೇಽದ್ವಯತ್ವತಃ ।**
**ಯಥಾ ನಭಃ ಸರ್ವಗತಂ ನ ಲಿಪ್ಯತೇ**
**ತಥಾ ಭವಾನ್ ದೇಹಗತೋಽಪಿ ಸೂಕ್ಷ್ಮಕಃ ॥ ೧೭ ॥**
**ದೇಹೇಂದ್ರಿಯಪ್ರಾಣಶರೀರಸಂಗತ-**
**ಸ್ತ್ವಾತ್ಮೇತಿ ಬುದ್ಧ್ವಾಽಖಿಲಬಂಧಭಾಗ್ ಭವೇತ್ ।**
**ಚಿನ್ಮಾತ್ರಮೇವಾಹಮಜೋಽಹಮಕ್ಷರೋ**
**ಹ್ಯಾನಂದಭಾವೋಽಹಮಿತಿ ಪ್ರಮುಚ್ಯತೇ ॥ ೧೮ ॥**

೧೭-೧೮. ಈ ವಿಷಯವು ನಿಜವು. ಏನೆಂದರೆ ನಿನಗೆ ವಿಕಾರವು ಇರುವದಿಲ್ಲ. ನೀನು ಅದ್ವಯನಾಗಿರುವದರಿಂದಲೇ ವಿಕಾರಕ್ಕೆ ಕಾರಣವೂ ಇಲ್ಲ. ಸರ್ವಗತವಾಗಿದ್ದರೂ ಆಕಾಶವು ಹೇಗೆ ಯಾವದಕ್ಕೂ ಅಂಟಿಕೊಳ್ಳುವದಿಲ್ಲವೋ ಹಾಗೆ ನೀನು ದೇಹದಲ್ಲಿರುವೆ ಯಾದರೂ ಸೂಕ್ಷ್ಮನೂ (ಅಸಂಗನೂ) ಆಗಿರುವೆ. ದೇಹ, ಇಂದ್ರಿಯಗಳು, ಪ್ರಾಣ, ಶರೀರ - ಇವುಗಳಲ್ಲಿ ಸಂಬಂಧವನ್ನು ಹೊಂದಿದವನು ಆತ್ಮನು- ಎಂದು ತಿಳಿದವನಾದರೆ ಎಲ್ಲಾ ವಿಧವಾದ ಬಂಧನಗಳಿಗೂ ಕಾರಣನಾಗುವನು. ಆದರೆ ನಾನು ಚಿನ್ಮಾತ್ರನು, ಅಜನು, ಅಕ್ಷರನು, ಆನಂದರೂಪನು - ಎಂದು ತಿಳಿದವನಾದರೆ ಬಿಡುಗಡೆಯನ್ನು ಹೊಂದುವನು.

ದೇಹೋಽಪ್ಯನಾತ್ಮಾ ಪೃಥಿವೀವಿಕಾರಜೋ
ನ ಪ್ರಾಣ ಆತ್ಮಾನಿಲ ಏಷ ಏವ ಸಃ ।
ಮನೋಽಪ್ಯಹಂಕಾರವಿಕಾರ ಏವ ನೋ
ನ ಚಾಪಿ ಬುದ್ಧಿಃ ಪ್ರಕೃತೇರ್ವಿಕಾರಜಾ ॥ ೧೯ ॥
ಆತ್ಮಾ ಚಿದಾನಂದಮಯೋಽವಿಕಾರಾನ್
ದೇಹಾದಿಸಂಘಾದ್ ವ್ಯತಿರಿಕ್ತ ಈಶ್ವರಃ ।
ನಿರಂಜನೋ ಮುಕ್ತ ಉಪಾಧಿತಃ ಸದಾ
ಜ್ಞಾತ್ವೈವಮಾತ್ಮಾನಮಿತೋ ವಿಮುಚ್ಯತೇ ॥ ೨೦ ॥

೧೯-೨೦. ಪೃಥಿವಿಯ ಕಾರ್ಯವಾಗಿರುವದರಿಂದ ದೇಹವೂ ಅನಾತ್ಮವೇ. ಪ್ರಾಣವೆಂಬುದು ಕೇವಲ ಗಾಳಿಯಾದ್ದರಿಂದ ಅದೂ ಆತ್ಮನಲ್ಲ. ಮನಸ್ಸು ಕೂಡ ಅಹಂಕಾರದ ವಿಕಾರವೇ ಆದ್ದರಿಂದ ಆತ್ಮನಲ್ಲ. ಬುದ್ಧಿಯೂ ಆತ್ಮನಲ್ಲ. ಏಕೆಂದರೆ ಅದು ಪ್ರಕೃತಿಯ ವಿಕಾರವಾಗಿರುತ್ತದೆ. ಆತ್ಮನಾದರೊ, ಚಿದಾನಂದಸ್ವರೂಪನು ಅವಿಕಾರನೂ ದೇಹಾದಿಗಳ ಗುಂಪಿಗಿಂತ ಬೇರೆಯಾದವನೂ ಎಲ್ಲಕ್ಕೂ ಒಡೆಯನೂ ಅಂಟಿಲ್ಲದವನೂ ಉಪಾಧಿಗಳಿಂದ ಮುಕ್ತನೂ ಆಗಿರುವನು. ಹೀಗೆ ಆತ್ಮನನ್ನರಿತುಕೊಂಡವನು ಈ ಸಂಸಾರದಿಂದ ಮುಕ್ತನಾಗುವನು.

ಅತೋಽಹಮಾತ್ಯಂತಿಕಮೋಕ್ಷಸಾಧನಂ
ವಕ್ಷ್ಯೇ ಶೃಣುಷ್ವಾವಹಿತೋ ಮಹಾಮತೇ ।
ವಿಷ್ಣೋರ್ಹಿ ಭಕ್ತಿಃ ಸುವಿಶೋಧನಂ ಧಿಯಃ
ತತೋ ಭವೇತ್ ಜ್ಞಾನಮತೀವ ನಿರ್ಮಲಮ್ ॥ ೨೧ ॥
ವಿಶುದ್ಧತತ್ತ್ವಾನುಭವೋ ಭವೇತ್ತತಃ
ಸಮ್ಯಗ್ ವಿದಿತ್ವಾ ಪರಮಂ ಪದಂ ವ್ರಜೇತ್ ।
ಅತೋ ಭಜಸ್ವಾದ್ಯ ಹರಿಂ ರಮಾಪತಿಂ
ರಾಮಂ ಪುರಾಣಂ ಪ್ರಕೃತೇಃ ಪರಂ ವಿಭುಮ್ ॥ ೨೨ ॥
ವಿಸೃಜ್ಯ ಮೌರ್ಖ್ಯಂ ಹೃದಿ ಶತ್ರುಭಾವನಾಂ
ಭಜಸ್ವ ರಾಮಂ ಶರಣಾಗತಪ್ರಿಯಮ್ ।
ಸೀತಾಂ ಪುರಸ್ಕೃತ್ಯ ಸಪುತ್ರಬಾಂಧವೋ
ರಾಮಂ ನಮಸ್ಕೃತ್ಯ ವಿಮುಚ್ಯಸೇ ಭಯಾತ್ ॥ ೨೩ ॥

೨೧-೨೩. ಆದ್ದರಿಂದ ನಾನು ನಿನಗೆ ಹೆಚ್ಚಿನ ಮೋಕ್ಷಸಾಧನವನ್ನು ಹೇಳುವೆನು. ಎಲೌ ಮಹಾಬುದ್ಧಿಶಾಲಿಯೆ, ಮನಸ್ಸಿಟ್ಟು ಕೇಳು. ವಿಷ್ಣುಭಕ್ತಿಯೆಂಬುದು ಬುದ್ಧಿಗೆ

ಹೆಚ್ಚಿನ ಶೋಧನಕರವು. ಅನಂತರ ಅತ್ಯಂತನಿರ್ಮಲವಾದ ಜ್ಞಾನವಾಗುವದು. ಮತ್ತೆ ವಿಶುದ್ಧವಾದ ತತ್ತ್ವಾನುಭವವೂ ಆಗುವದು. ಅನಂತರ ಚೆನ್ನಾಗಿ ಆ ತತ್ತ್ವವನ್ನರಿತು ಪರಮಪದವಿ (ಮೋಕ್ಷ)ವನ್ನು (ಜೀವನು) ಪಡೆಯುವನು. ಆದ್ದರಿಂದ ಈಗ ರಮಾಪತಿ ಯಾದ ಪುರಾಣನೂ, ಪ್ರಕೃತಿಗಿಂತ ಹೆಚ್ಚಿನವನೂ ಸರ್ವವ್ಯಾಪಿಯೂ ಆದ ರಾಮನೆಂಬ ಶ್ರೀಹರಿಯನ್ನು ಭಜಿಸುವವನಾಗು. ಹೃದಯದಲ್ಲಿ ಶತ್ರುಭಾವನೆಯನ್ನೂ ಮೂರ್ಖತನ ವನ್ನೂ ಕೈಬಿಟ್ಟು ಶರಣಾಗತಪ್ರಿಯನಾದ ರಾಮನನ್ನು ಸೇವಿಸು. ಸೀತಾದೇವಿಯನ್ನು ಮುಂದಿಟ್ಟುಕೊಂಡು ಪುತ್ರಬಂಧುವರ್ಗಸಹಿತನಾಗಿ ರಾಮನನ್ನು ನಮಸ್ಕರಿಸುವೆಯಾದರೆ ಭಯದಿಂದ ಬಿಡುಗಡೆಯನ್ನು ಹೊಂದುವೆ.

**ರಾಮಂ ಪರಾತ್ಮಾನಮಭಾವಯನ್ ಜನೋ**
**ಭಕ್ತ್ಯಾ ಹೃದಿಸ್ಥಂ ಸುಖರೂಪಮದ್ವಯಮ್ ।**
**ಕಥಂ ಪರಂ ತೀರಮವಾಪ್ನುಯಾಜ್ಜನೋ**
**ಭವಾಂಬುಧೇರ್ದುಃಖತರಂಗಮಾಲಿನಃ ॥ ೨೪ ॥**
**ನೋ ಚೇತ್ತ್ವಮಜ್ಞಾನಮಯೇನ ವಹ್ನಿನಾ**
**ಜ್ವಲಂತಮಾತ್ಮಾನಮರಕ್ಷಿತಾರಿವತ್ ।**
**ನಯಸ್ಯಧೋಽಧಃ ಸ್ವಕೃತೈಶ್ಚ ಪಾತಕೈಃ**
**ವಿಮೋಕ್ಷಶಂಕಾ ನ ಚ ತೇ ಭವಿಷ್ಯತಿ ॥ ೨೫ ॥**

೨೪-೨೫. ಹೃದಯದಲ್ಲಿದ್ದುಕೊಂಡು ಸುಖರೂಪನೂ ಅದ್ವಿತೀಯನೂ ಆಗಿರುವ ಪರಮಾತ್ಮನಾದ ರಾಮನನ್ನು ಚಿಂತಿಸದೆ ಜೀವನು ದುಃಖವೆಂಬ ಅಲೆಗಳ ಮಾಲೆಗಳಿಂದ ಕೂಡಿದ ಸಂಸಾರವೆಂಬ ಸಮುದ್ರದ ದಡವನ್ನು ಹೇಗೆತಾನೆ ಹೊಂದಿ ಯಾನು ? ಆದ್ದರಿಂದ ಅಜ್ಞಾನವೆಂಬ ಬೆಂಕಿಯಿಂದ ಸುಟ್ಟುಹೋಗುತ್ತಿರುವ ನಿನ್ನನ್ನು ನೀನು ಶತ್ರುವಿನಂತೆ - ಕಾಪಾಡಿಕೊಳ್ಳದೆ ಇರುವೆಯಾದರೆ ನಿನ್ನ ಪಾಪಕರ್ಮಗಳಿಂದಲೇ ನೀನೇ ನಿನ್ನನ್ನು ತುಳಿದುಕೊಂಡವನಾಗಿ ಅಧೋಗತಿಯನ್ನು ಹೊಂದುವೆ. ಬಿಡು ಗಡೆಯನ್ನು ಹೊಂದುವ ಆಸೆಯೂ ನಿನಗೆ ಉಳಿಯಲಾರದು.

**ಶ್ರುತ್ವಾಮೃತಾಸ್ವಾದಸಮಾನಭಾಷಿತಂ**
**ತದ್ವಾಯುಸೂನೋರ್ದಶಕಂಧರೋಽಸುರಃ ।**
**ಅಮೃಷ್ಯಮಾಣೋಽತಿರುಷಾ ಕಪೀಶ್ವರಂ**
**ಜಗಾದ ರಕ್ತಾಂತವಿಲೋಚನೋ ಜ್ವಲನ್ ॥ ೨೬ ॥**
**ಕಥಂ ಮಮಾಗ್ರೇ ವಿಲಪಸ್ಯಭೀತವತ್**

ಪ್ಲವಂಗಮಾನಾಮಧಮೋಽಸಿ ದುಷ್ಟಧೀಃ ।
ಕ ಏಷ ರಾಮಃ ಕತಮೋ ವನೇಚರೋ
ನಿಹನ್ಮಿ ಸುಗ್ರೀವಯುತಂ ನರಾಧಮಮ್ ॥ ೨೭ ॥
ತ್ವಾಂ ಚಾದ್ಯ ಹತ್ವಾ ಜನಕಾತ್ಮಜಾಂ ತತೋ
ನಿಹನ್ಮಿ ರಾಮಂ ಸಹ ಲಕ್ಷ್ಮಣಂ ತತಃ ।
ಸುಗ್ರೀವಮಗ್ರೇ ಬಲಿನಂ ಕಪೀಶ್ವರಂ
ಸವಾನರಂ ಹನ್ಮ್ಯಚಿರೇಣ ವಾನರ ॥ ೨೮ ॥

೨೬-೨೭. ದಶಕಂಠರಾವಣನು ಆ ವಾಯುಪುತ್ರನ ಅಮೃತರಸದ ಸವಿಯುಳ್ಳ ಮಾತನ್ನು ಕೇಳಿದವನಾಗಿ ಸಹಿಸಲಾರದೆ ಹೆಚ್ಚಿನ ಕೋಪದಿಂದ ಕಪಿರಾಜನನ್ನು ಕುರಿತು ಕೆಂಪಾದ ಕಣ್ಣುಗಳಿಂದ ಉರಿಯುವ (ದೃಷ್ಟಿ)ಯುಳ್ಳವನಾಗಿ ಹೀಗೆಂದನು : "ಸ್ವಲ್ಪವೂ ಹೆದರದವನಾಗಿ ನನ್ನೆದುರಿಗೆ ಏನು ಹರಟುತ್ತಿರುವೆ ? ನೀನು ಕಪಿಗಳಲ್ಲೆಲ್ಲ ಹೆಚ್ಚಿನ ದುಷ್ಟನಿರುವೆ. ಆ ರಾಮನು ಯಾರು ? ಕಾಡುತಿರುಗುವ ಅವನೆಲ್ಲಿ ? ನರಾಧಮನಾದ ಅವನನ್ನು ಸುಗ್ರೀವನೊಡನೆ ಕೊಲ್ಲುವೆನು. ಈಗ ನಿನ್ನನ್ನು ಕೊಂದು ಅನಂತರ ಸೀತೆಯನ್ನೂ ಲಕ್ಷ್ಮಣಸಹಿತನಾದ ರಾಮನನ್ನೂ ಕೊಲ್ಲುವೆನು. ಕಪೀಶ್ವರನಾದ ಅವನನ್ನು ಮೊದಲು ಎಲ್ಲಾ ಕಪಿಗಳೊಡನೆ ಎಲೈ ವಾನರನೆ, ಇದೊ, ಸಂಹರಿಸಲಿರುವೆನು."

ಶ್ರುತ್ವಾ ದಶಗ್ರೀವವಚಃ ಸ ಮಾರುತಿಃ
ವಿವೃದ್ಧಕೋಪೇನ ದಹನ್ನಿವಾಸುರಮ್ ।
ನ ಮೇ ಸಮಾ ರಾವಣಕೋಟಯೋಽಧಮ
ರಾಮಸ್ಯ ದಾಸೋಽಹಮಪಾರವಿಕ್ರಮಃ ॥ ೨೯ ॥

೨೯. ಮಾರುತಿಯು ಆ ರಾವಣನ ಮಾತನ್ನು ಕೇಳಿ ಕೆರಳಿದ ಕೋಪದಿಂದ ರಾಕ್ಷಸನನ್ನು ಸುಡುವಂತೆ ನೋಡುತ್ತಾ "ಎಲೈ ಅಧಮನೆ, ನಾನು ರಾಮನ ದಾಸನು ; ಅಳೆಯಲಾರದ ಪರಾಕ್ರಮವುಳ್ಳವನು ! ಕೋಟಿರಾವಣರೂ ನನಗೆ ಸರಿಸಾಟಿಯಾಗಲಾರರು" ಎಂದನು.

ಶ್ರುತ್ವಾತಿಕೋಪೇನ ಹನೂಮತೋ ವಚೋ
ದಶಾನನೋ ರಾಕ್ಷಸಮೇವಮಬ್ರವೀತ್ ।
ಪಾರ್ಶ್ವೇ ಸ್ಥಿತಂ ಮಾರಯ ಖಂಡಶಃ ಕಪಿಂ
ಪಶ್ಯಂತು ಸರ್ವೇಽಸುರಮಿತ್ರಬಾಂಧವಾಃ ॥ ೩೦ ॥

**ನಿವಾರಯಾಮಾಸ ತತೋ ವಿಭೀಷಣೋ**
**ಮಹಾಸುರಂ ಸಾಯುಧಮುದ್ಯತಂ ವಧೇ ।**
**ರಾಜನ್ ವಧಾರ್ಹೋ ನ ಭವೇತ್ ಕಥಂಚನ**
**ಪ್ರತಾಪಯುಕ್ತಃ ಪರರಾಜವಾನರಃ ॥ ೩೧ ॥**

೩೦-೩೧. ರಾವಣನು ಹನುಮಂತನ ಮಾತನ್ನು ಕೇಳಿ ಹೆಚ್ಚಿನ ಕೋಪದಿಂದ ಕೂಡಿ (ಹತ್ತಿರದಲ್ಲಿ) ಪಕ್ಕದಲ್ಲಿದ್ದ ರಾಕ್ಷಸನನ್ನು ಕುರಿತು ಹೀಗೆಂದನು ; ''ಈ ಕಪಿಯನ್ನು ತುಂಡುತುಂಡಾಗಿ ಕತ್ತರಿಸು, ರಾಕ್ಷಸಬಂಧುಮಿತ್ರರೆಲ್ಲರೂ ನೋಡಲಿ.'' ಹೀಗೆನ್ನಲು ಅನಂತರ ವಿಭೀಷಣನು ಆಯುಧಸಮೇತನಾಗಿ ಕಪಿಯನ್ನು ಕೊಲ್ಲಲು ಹೊರಟಿರುವ ರಾಕ್ಷಸನನ್ನು ತಡೆದನು. ''ರಾಜನೆ, ಪ್ರತಾಪಶಾಲಿಗಳಾದ ನಾವು ಪರರಾಜರ ಕಡೆಯ ಕಪಿಯಾದ ಇವನನ್ನು ಹೇಗೂ ಕೊಲ್ಲಬಾರದು.''

**ಹತೇಽಸ್ಮಿನ್ ವಾನರೇ ದೂತೇ ವಾರ್ತಾಂ ಕೋ ವಾ ನಿವೇದಯೇತ್ ।**
**ರಾಮಾಯ ತ್ವಂ ಯಮುದ್ದಿಶ್ಯ ವಧಾಯ ಸಮುಪಸ್ಥಿತಃ ॥ ೩೨ ॥**
**ಅತೋ ವಧಸಮಂ ಕಿಂಚಿದನ್ಯಚ್ಚಿಂತಯ ವಾನರೇ ।**
**ಸಚಿಹ್ನೋ ಗಚ್ಛತು ಹರಿರ್ಯಂ ದೃಷ್ಟ್ವಾ ಯಾಸ್ಯತಿ ದ್ರುತಮ್ ॥ ೩೩ ॥**
**ರಾಮಃ ಸುಗ್ರೀವಸಹಿತಸ್ತತೋ ಯುದ್ಧಂ ಭವೇತ್ತವ ।**

೩೨-೩೩. ''ಯಾವನನ್ನು ಕೊಲ್ಲಲು ನೀನು ಹೊರಟಿರುವೆಯೋ ಆ ದೂತನಾದ ಈ ಕಪಿಯು ವಧಿಸಲ್ಪಟ್ಟರೆ ರಾಮನಿಗೆ ಸುದ್ದಿಯನ್ನಾದರೂ ತಿಳಿಸುವವರಾರು ? ಆದ್ದರಿಂದ ವಧೆಗೆ ಸಮಾನವಾದ ಬೇರೊಂದು (ಶಿಕ್ಷೆಯನ್ನು) ಕಪಿಗೆ ಕೊಡಲು ಯೋಚಿಸುವವನಾಗು. ಯಾವ ಗುರುತನ್ನು ನೋಡಿ ಸುಗ್ರೀವಸಹಿತನಾದ ರಾಮನೆಂಬ ಶತ್ರುವು ಬೇಗನೆ ನಮ್ಮ ಮೇಲೆ ದಂಡೆತ್ತಿಬರಬಹುದೋ ಅಂಥ ಗುರುತಿನೊಡನೆ ಈ ಕಪಿಯು ಹೋಗಲಿ. ಅನಂತರ ನಿನಗೆ ಯುದ್ಧಮಾಡುವ (ಸಂದರ್ಭವು) ಒದಗಲಿದೆ.''

**ವಿಭೀಷಣವಚಃ ಶ್ರುತ್ವಾ ರಾವಣೋಽಪ್ಯೇತದಬ್ರವೀತ್ ।**
**ವಾನರಾಣಾಂ ಹಿ ಲಾಂಗೂಲೇ ಮಹಾಮಾನೋ ಭವೇತ್ ಕಿಲ ॥ ೩೪ ॥**
**ಅತೋ ವಸ್ತ್ರಾದಿಭಿಃ ಪುಚ್ಛಂ ವೇಷ್ಟಯಿತ್ವಾ ಪ್ರಯತ್ನತಃ ।**
**ವಹ್ನಿನಾ ಯೋಜಯಿತ್ವೈನಂ ಭ್ರಾಮಯಿತ್ವಾ ಪುರೇಽಭಿತಃ ॥ ೩೫ ॥**
**ವಿಸರ್ಜಯತ ಪಶ್ಯಂತು ಸರ್ವೇ ವಾನರಯೂಥಪಾಃ ।**

೩೪-೩೫. ವಿಭೀಷಣನ ಮಾತನ್ನು ಕೇಳಿ ರಾವಣನು ಹೀಗೆಂದನು. ''ಕಪಿಗಳಿಗೆ ಯಾವಾಗಲೂ ತಮ್ಮ ಬಾಲದಲ್ಲಿ ಅಭಿಮಾನವಿರುವದು. ಆದ್ದರಿಂದ ಬಟ್ಟೆ

ಮುಂತಾದವುಗಳಿಂದ ಬಾಲವನ್ನು ಚೆನ್ನಾಗಿ ಸುತ್ತಿ ಬೆಂಕಿಯನ್ನಿಟ್ಟು ಊರಿನ ಸುತ್ತಲೂ ತಿರುಗಾಡಿಸಿ ಕೈ ಬಿಡಿರಿ. ಅನಂತರ ಎಲ್ಲಾ ಕಪಿಗಳೂ ನೋಡಿಕೊಳ್ಳಲಿ!''

**ತಥೇತಿ ಶಣಪಟ್ಟೈಶ್ಚ ವಸ್ತ್ರೈರನ್ಯೈರನೇಕಶಃ ।**
**ತೈಲಾಕ್ತೈರ್ವೇಷ್ಟಯಾಮಾಸುಃ ಲಾಂಗೂಲಂ ಮಾರುತೇರ್ದೃಢಮ್ ॥ ೩೬ ॥**
**ಪುಚ್ಛಾಗ್ರೇ ಕಿಂಚಿದನಲಂ ದೀಪಯಿತ್ವಾಥ ರಾಕ್ಷಸಾಃ ।**
**ರಜ್ಜುಭಿಃ ಸುದೃಢಂ ಬಧ್ವಾ ಧೃತ್ವಾ ತಂ ಬಲಿನೋಽಸುರಾಃ ॥ ೩೭ ॥**
**ಸಮಂತಾದ್ ಭ್ರಾಮಯಾಮಾಸುಶ್ಚೋರೋಽಯಮಿತಿ ವಾದಿನಃ ।**
**ತೂರ್ಯಘೋಷೈರ್ಘೋಷಯಂತಸ್ತಾಡಯಂತೋ ಮುಹುರ್ಮುಹುಃ ॥ ೩೮ ॥**

೩೬-೩೮. ಹಾಗೆಯೇ ಆಗಲೆಂದು ಎಣ್ಣೆಯಿಂದ ತೋಯಿಸಲ್ಪಟ್ಟ ಸೆಣಬಿನ ಬಟ್ಟೆಗಳು ಹಾಗೂ ಇತರ ಬಟ್ಟೆಗಳಿಂದ ಬಹಳವಾಗಿ ಮಾರುತಿಯ ಬಲವಾದ ಬಾಲವನ್ನು ಸುತ್ತಿದರು. ಅನಂತರ ಬಲಿಷ್ಠರಾದ ಆ ರಾಕ್ಷಸರು ಬಾಲದ ತುದಿಗೆ ಸ್ವಲ್ಪ ಬೆಂಕಿಯನ್ನು ಹೊತ್ತಿಸಿ ಅವನನ್ನು ಬಲವಾದ ಹಗ್ಗಗಳಿಂದ ಬಿಗಿದು ಕಟ್ಟಿ ಹಿಡಿದುಕೊಂಡು ''ಇವನು ಕಳ್ಳನು'' ಎಂದು ಕಿರುಚುತ್ತಾ ವಾದ್ಯಗಳನ್ನು ಧ್ವನಿಮಾಡುತ್ತಾ ಮತ್ತೆ ಮತ್ತೆ ಅವನಿಗೆ ಏಟುಗಳನ್ನು ಹೊಡೆಯುತ್ತಾ (ಊರಿನ) ಸುತ್ತಲೂ ತಿರುಗಾಡಿಸಿದರು.

**ಹನೂಮತಾಪಿ ತತ್ಸರ್ವಂ ಸೋಢಂ ಕಿಂಚಿಚ್ಚಿಕೀರ್ಷುಣಾ ।**
**ಗತ್ವಾ ತು ಪಶ್ಚಿಮದ್ವಾರಸಮೀಪಂ ತತ್ರ ಮಾರುತಿಃ ॥ ೩೯ ॥**
**ಸೂಕ್ಷ್ಮೋ ಬಭೂವ ಬಂಧೇಭ್ಯೋ ನಿಃಸೃತಃ ಪುನರಪ್ಯಸೌ ।**
**ಬಭೂವ ಪರ್ವತಾಕಾರಸ್ತತ ಉತ್ಪ್ಲುತ್ಯ ಗೋಪುರಮ್ ॥ ೪೦ ॥**
**ತತ್ರೈಕಂ ಸ್ತಂಭಮಾದಾಯ ಹತ್ವಾ ತಾನ್ ರಕ್ಷಿಣಃ ಕ್ಷಣಾತ್ ।**
**ವಿಚಾರ್ಯ ಕಾರ್ಯಶೇಷಂ ಸ ಪ್ರಾಸಾದಾಗ್ರಾದ್ ಗೃಹಾದ್ ಗೃಹಮ್ ॥ ೪೧ ॥**
**ಉತ್ಪ್ಲುತ್ಯೋತ್ಪ್ಲುತ್ಯ ಸಂದೀಪ್ತಪುಚ್ಛೇನ ಮಹತಾ ಕಪಿಃ ।**
**ದದಾಹ ಲಂಕಾಮಖಿಲಾಂ ಸಾಟ್ಟಪ್ರಾಕಾರತೋರಣಾಮ್ ॥ ೪೨ ॥**

೩೯-೪೨. ಏನೋ ಕಾರ್ಯವನ್ನು ಮಾಡಲಿಚ್ಛೆಯಿಂದ ಹನುಮಂತನೂ ಅದೆಲ್ಲವನ್ನೂ ತಡೆದುಕೊಂಡನು. ಪಶ್ಚಿಮದಿಕ್ಕಿನ ಬಾಗಿಲಿನ ಬಳಿಗೆ ಹೋದ ನಂತರ ಅಲ್ಲಿ ಮಾರುತಿಯು ಚಿಕ್ಕ ಆಕಾರವನ್ನು ಹೊಂದಿ ಕಟ್ಟುಗಳಿಂದ ಹೊರಬಂದನು. ಮತ್ತೊಮ್ಮೆ ಅವನು ಪರ್ವತದಂತೆ ಆಕಾರವನ್ನು ಹೊಂದಿದವನಾಗಿ ಅಲ್ಲಿಂದ ನೆಗೆದು ಗೋಪುರವನ್ನು ಸೇರಿ ಅಲ್ಲಿ ಒಂದು ಗೂಟವನ್ನು ತೆಗೆದುಕೊಂಡು ಕ್ಷಣಮಾತ್ರದಲ್ಲಿ ರಕ್ಷಣೆಯ ಕಾವಲುಗಾರರನ್ನು ಕೊಂದು ಉಳಿದಿರುವ ಕೆಲಸವೇನೆಂದು ಚಿಂತಿಸುತ್ತಾ ಉಪ್ಪರಿಗೆಯ ಮೇಲಿನಿಂದಲೇ ಮನೆಯಿಂದ ಮನೆಗೆ ನೆಗೆದನು. ಬಹಳವಾಗಿ ಹತ್ತಿ ಉರಿಯುತ್ತಿದ್ದ ಬಾಲದ

ಬೆಂಕಿಯಿಂದ ಮಹಡಿ- ಉಪ್ಪರಿಗೆಗಳಿಂದ ಕೂಡಿದ ಇಡಿಯ ಲಂಕಾಪಟ್ಟಣವನ್ನು ಸುಟ್ಟನು.

**ಹಾ ತಾತ ಪುತ್ರ ನಾಥೇತಿ ಕ್ರಂದಮಾನಾಃ ಸಮಂತತಃ ।**
**ವ್ಯಾಪ್ತಾಃ ಪ್ರಾಸಾದಶಿಖರೇಽಪ್ಯಾರೂಢಾ ದೈತ್ಯಯೋಷಿತಃ ॥ ೪೩ ॥**
**ದೇವತಾ ಇವ ದೃಶ್ಯಂತೇ ಪತಂತ್ಯಃ ಪಾವಕೇಽಖಿಲಾಃ ।**
**ವಿಭೀಷಣಗೃಹಂ ತ್ಯಕ್ತ್ವಾ ಸರ್ವಂ ಭಸ್ಮೀಕೃತಂ ಪುರಮ್ ॥ ೪೪ ॥**

೪೩-೪೪. ಅಯ್ಯೊ, ಅಪ್ಪ, ಮಗನೆ, ನಾಥ- ಎಂದು ಅಳುತ್ತಾ ಸುತ್ತಲೂ ಹರಡಿದ ರಾಕ್ಷಸಸ್ತ್ರೀಯರು ಉಪ್ಪರಿಗೆಗಳನ್ನು ಏರಿದವರೂ ಆಗಿದ್ದು ಕೆಳಗೆ ಬೆಂಕಿಗೆ ಬೀಳುತ್ತಾ ದೇವತೆಗಳಂತೆ ಕಂಡುಬರುತ್ತಿದ್ದರು. ವಿಭೀಷಣನ ಮನೆಯೊಂದನ್ನು ಬಿಟ್ಟು ಎಲ್ಲ ಪಟ್ಟಣವೂ ಸುಟ್ಟು ಬೂದಿಮಾಡಲ್ಪಟ್ಟಿತ್ತು.

**ತತ ಉತ್ಪ್ಲುತ್ಯ ಜಲಧೌ ಹನೂಮಾನ್ ಮಾರುತಾತ್ಮಜಃ ।**
**ಲಾಂಗೂಲಂ ಮಜ್ಜಯಿತ್ವಾಂತಃ ಸ್ವಸ್ಥಚಿತ್ತೋ ಬಭೂವ ಸಃ ॥ ೪೫ ॥**
**ವಾಯೋಃ ಪ್ರಿಯಸಖಿತ್ವಾಚ್ಚ ಸೀತಯಾ ಪ್ರಾರ್ಥಿತೋಽನಲಃ ।**
**ನ ದದಾಹ ಹರೇಃ ಪುಚ್ಛಂ ಬಭೂವಾತ್ಯಂತಶೀತಲಃ ॥ ೪೬ ॥**

೪೫-೪೬. ಅನಂತರ ವಾಯುವಿನ ಪುತ್ರನಾದ ಹನುಮಂತನು ನೀರಿನಲ್ಲಿ ಮುಳುಗಿ ಎದ್ದವನಾಗಿ ಬಾಲವನ್ನು ನೀರಿನೊಳಕ್ಕೆ ಅದ್ದಿ ಸಮಾಧಾನಚಿತ್ತನಾದನು. ವಾಯುದೇವನಿಗೆ ಪರಮಸ್ನೇಹಿತನಾದ್ದರಿಂದಲೂ ಸೀತೆಯಿಂದ ಪ್ರಾರ್ಥಿಸಲ್ಪಟ್ಟವನಾದ್ದರಿಂದಲೂ ಅಗ್ನಿದೇವನು ಕಪಿಯ ಬಾಲವನ್ನು ಸುಡಲಿಲ್ಲ. ಬಹಳ ತಂಪಾಗಿದ್ದನು.

**ಯನ್ನಾಮಸಂಸ್ಮರಣಧೂತಸಮಸ್ತಪಾಪಾ-**
**ಸ್ತಾಪತ್ರಯಾನಲಮಪೀಹ ತರಂತಿ ಸದ್ಯಃ ।**
**ತಸ್ಯೈವ ಕಿಂ ರಘುವರಸ್ಯ ವಿಶಿಷ್ಟದೂತಃ**
**ಸಂತಪ್ಯತೇ ಕಥಮಸೌ ಪ್ರಕೃತಾನಲೇನ ॥ ೪೭ ॥**

೪೭. (ಜನರು) ಯಾವ (ರಾಮನ) ನಾಮವನ್ನು ನೆನೆದಮಾತ್ರದಿಂದ ಎಲ್ಲಾ ಪಾಪಗಳನ್ನೂ ಕೊಡವಿಕೊಂಡು ತಾಪತ್ರಯವೆಂಬ ಬೆಂಕಿಯನ್ನು ಕೂಡ ದಾಟಿಬಿಡುವರೋ, ಅಂಥ ರಘುವರನಾದ (ರಾಮನ) ಆಪ್ತಸೇವಕನಾದ ಈ (ಹನುಮಂತನು) ಪ್ರಾಕೃತವಾದ ಈ ಬೆಂಕಿಯಿಂದ ಹೇಗೆತಾನೆ ಸುಡಲ್ಪಟ್ಟಾನು ?

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಸುಂದರಕಾಂಡೇ ಚತುರ್ಥಃ ಸರ್ಗಃ**

-----------

# ಐದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ತತಃ ಸೀತಾಂ ನಮಸ್ಕೃತ್ಯ ಹನೂಮಾನಬ್ರವೀದ್ ವಚಃ ।**
**ಆಜ್ಞಾಪಯತು ಮಾಂ ದೇವಿ ಭವತೀ ರಾಮಸನ್ನಿಧಿಮ್ ॥ ೧ ॥**
**ಗಚ್ಛಾಮಿ ರಾಮಸ್ತ್ವಾಂ ದ್ರಷ್ಟುಮಾಗಮಿಷ್ಯತಿ ಸಾನುಜಃ ।**
**ಇತ್ಯುಕ್ತ್ವಾ ತ್ರಿಃ ಪರಿಕ್ರಮ್ಯ ಜಾನಕೀಂ ಮಾರುತಾತ್ಮಜಃ ॥ ೨ ॥**
**ಪ್ರಣಮ್ಯ ಪ್ರಸ್ಥಿತೋ ಗಂತುಮಿದಂ ವಚನಮಬ್ರವೀತ್ ।**

೧-೨. ಶ್ರೀಮಹಾದೇವನಿಂತೆಂದನು : ಅನಂತರ ಹನುಮಂತನು ಸೀತೆಗೆ ನಮಸ್ಕರಿಸಿ ಹೀಗೆಂದನು : 'ಎಲೌ ದೇವಿ, ನೀನು ನನಗೆ ರಾಮಸನ್ನಿಧಿಗೆ ಹೊರಡಲು ಅಪ್ಪಣೆಕೊಡು. ನಾನು ಹೊರಡುವೆನು. ಸೋದರನೊಡನೆ ರಾಮನು ನಿನ್ನನ್ನು ನೋಡಲು ಬರಲಿದ್ದಾನೆ' ಹೀಗೆಂದು ಹೇಳಿ ಸೀತೆಯನ್ನು ಮೂರುಬಾರಿ ಪ್ರದಕ್ಷಿಣೆಮಾಡಿ ಮಾರುತಿಯು ಮತ್ತೆ ವಂದಿಸಿ ಹೊರಡಲುದ್ಯುಕ್ತನಾಗಿ ಹೀಗೆಂದನು :

**ದೇವಿ ಗಚ್ಛಾಮಿ ಭದ್ರಂ ತೇ ತೂರ್ಣಂ ದ್ರಕ್ಷ್ಯಸಿ ರಾಘವಮ್ ।**
**ಲಕ್ಷ್ಮಣಂ ಚ ಸಸುಗ್ರೀವಂ ವಾನರಾಯುತಕೋಟಿಭಿಃ ॥ ೩ ॥**
**ತತಃ ಪ್ರಾಹ ಹನೂಮಂತಂ ಜಾನಕೀ ದುಃಖಕರ್ಶಿತಾ ।**
**ತ್ವಾಂ ದೃಷ್ಟ್ವಾ ವಿಸ್ಮೃತಂ ದುಃಖಮಿದಾನೀಂ ತ್ವಂ ಗಮಿಷ್ಯಸಿ ॥ ೪ ॥**
**ಇತಃ ಪರಂ ಕಥಂ ವರ್ತೇ ರಾಮವಾರ್ತಾಶ್ರುತಿಂ ವಿನಾ ।**

೩-೪. 'ದೇವಿ, ನಾನು ಹೋಗುವೆನು. ನಿನಗೆ ಮಂಗಳವಾಗಲಿ ! ಶ್ರೀರಾಮನನ್ನು ಜಾಗ್ರತೆಯಾಗಿ ಕಾಣಲಿರುವೆ. ಹತ್ತುಸಾವಿರಕೋಟಿಕಪಿಗಳಿಂದಾವೃತನಾದ ಸುಗ್ರೀವನೊಡನೆ ಲಕ್ಷ್ಮಣನನ್ನೂ ಕಾಣಲಿರುವೆ.' ಅನಂತರ ದುಃಖದಿಂದ ಬಳಲಿದ ಸೀತೆಯು ಹನುಮಂತನನ್ನು ಕುರಿತು ಹೀಗೆಂದಳು : 'ನಿನ್ನನ್ನು ನೋಡಿ ನನ್ನ ದುಃಖವನ್ನು ಮರೆತಿದ್ದೆನು ; ಈಗಲಾದರೊ, ನೀನು ಹೊರಟಿರುವೆ. ಇನ್ನು ಮುಂದೆ ನಾನು ರಾಮನ ವೃತ್ತಾಂತವನ್ನೂ ಕೇಳದೆ ಹೇಗೆ ಇದ್ದುಕೊಂಡಿರಲಿ ?

**ಮಾರುತಿರುವಾಚ-**

**ಯದ್ಯೇವಂ ದೇವಿ ಮೇ ಸ್ಕಂಧಮಾರೋಹ ಕ್ಷಣಮಾತ್ರತಃ ।**
**ರಾಮೇಣ ಯೋಜಯಿಷ್ಯಾಮಿ ಮನ್ಯಸೇ ಯದಿ ಜಾನಕಿ ॥ ೫ ॥**

೫. ಮಾರುತಿಯು ಹೀಗೆಂದನು : 'ದೇವಿ, ಹಾಗಾದರೆ ನೀನು ನನ್ನ ಹೆಗಲನ್ನೇರು ವವಳಾಗು. ನೀನು ಇಷ್ಟಪಡುವೆಯಾದರೆ, ಎಲೌ ಜಾನಕಿಯೆ, ನಿನ್ನನ್ನು ರಾಮನೊಡನೆ ಕ್ಷಣಮಾತ್ರದಲ್ಲಿ ಸೇರಿಸಿಬಿಡುವೆನು.'

**ಸೀತೋವಾಚ-**

**ರಾಮಃ ಸಾಗರಮಾಶೋಷ್ಯ ಬದ್ಧ್ವಾ ವಾ ಶರಪಂಜರೈಃ ।**
**ಆಗತ್ಯ ವಾನರೈಃ ಸಾರ್ಧಂ ಹತ್ವಾ ರಾವಣಮಾಹವೇ ॥ ೬ ॥**
**ಮಾಂ ನಯೇದ್ ಯದಿ ರಾಮಸ್ಯ ಕೀರ್ತಿರ್ಭವತಿ ಶಾಶ್ವತೀ ।**
**ಅತೋ ಗಚ್ಛ ಕಥಂ ಚಾಪಿ ಪ್ರಾಣಾನ್ ಸಂಧಾರಯಾಮ್ಯಹಮ್ ॥ ೭ ॥**

೬-೭. ಸೀತೆಯಿಂತೆಂದಳು : ರಾಮನು ಸಮುದ್ರವನ್ನು ಒಣಗಿಸಿ ಅಥವಾ ಬಾಣ ಗಳ ಪಂಜರದಿಂದ ಬಂಧಿಸಿ ಕಪಿಗಳೊಡಗೂಡಿ ಬಂದು ಯುದ್ಧದಲ್ಲಿ ರಾವಣನನ್ನು ಕೊಂದು ನನ್ನನ್ನು ಕರೆದೊಯ್ದನಾದರೆ ಆಗ ರಾಮನಿಗೆ ಶಾಶ್ವತವಾದ ಕೀರ್ತಿಯುಂಟಾ ಗುವದು. ಆದ್ದರಿಂದ ನೀನು ಹೊರಡು. ನಾನು ಹೇಗೋ ಪ್ರಾಣಗಳನ್ನು ಇಟ್ಟು ಕೊಂಡಿರುವೆನು.

**ಇತಿ ಪ್ರಸ್ಥಾಪಿತೋ ವೀರಃ ಸೀತಯಾ ಪ್ರಣಿಪತ್ಯ ತಾಮ್ ।**
**ಜಗಾಮ ಪರ್ವತಸ್ಯಾಗ್ರೇ ಗಂತುಂ ಪಾರಂ ಮಹೋದಧೇಃ ॥ ೮ ॥**
**ತತ್ರ ಗತ್ವಾ ಮಹಾಸತ್ತ್ವಃ ಪಾದಾಭ್ಯಾಂ ಪೀಡಯನ್ ಗಿರಿಮ್ ।**
**ಜಗಾಮ ವಾಯುವೇಗೇನ ಪರ್ವತಶ್ಚ ಮಹೀತಲಮ್ ॥ ೯ ॥**
**ಗತೋ ಮಹೀಸಮಾನತ್ವಂ ತ್ರಿಂಶದ್ ಯೋಜನಮುಚ್ಛ್ರಿತಃ ।**

೮-೯. ಈ ರೀತಿಯಾಗಿ ಸೀತೆಯಿಂದ ಕಳುಹಿಸಿಕೊಡಲ್ಪಟ್ಟ ವೀರನಾದ ಆತನು ಆಕೆಯನ್ನು ವಂದಿಸಿ ಸಮುದ್ರದ ಆಚೆಯ ದಡವನ್ನು ಸೇರುವದಕ್ಕಾಗಿ ಪರ್ವತದ ತುದಿಗೆ ಬಂದನು. ಮಹಾಬಲಶಾಲಿಯಾದ ಆತನು ಅಲ್ಲಿಗೆ ಹೋಗಿ ಎರಡು ಕಾಲುಗಳಿಂದ ಬೆಟ್ಟ ವನ್ನು ತುಳಿದು ವಾಯುವೇಗದಿಂದ ಹೊರಟನು. ಮೂವತ್ತುಯೋಜನಗಳಷ್ಟು ಎತ್ತರ ವಾಗಿದ್ದ ಪರ್ವತವಾದರೊ, ಭೂಮಿಗೆ ಸಮಾನವಾಗಿ ತಗ್ಗಿ ನೆಲಮಟ್ಟವಾಗಿಬಿಟ್ಟಿತು.

**ಮಾರುತಿರ್ಗಗನಾಂತಸ್ಥೋ ಮಹಾಶಬ್ದಂ ಚಕಾರ ಸಃ ।**
**ತಂ ಶ್ರುತ್ವಾ ವಾನರಾಃ ಸರ್ವೇ ಜ್ಞಾತ್ವಾ ಮಾರುತಿಮಾಗತಮ್ ॥ ೧೦ ॥**
**ಹರ್ಷೇಣ ಮಹತಾವಿಷ್ಟಾಃ ಶಬ್ದಂ ಚಕ್ರುರ್ಮಹಾಸ್ವನಮ್ ।**
**ಶಬ್ದೇನೈವ ವಿಜಾನೀಮಃ ಕೃತಕಾರ್ಯಃ ಸಮಾಗತಃ ॥ ೧೧ ॥**
**ಹನೂಮಾನೇವ ಪಶ್ಯಧ್ವಂ ವಾನರಾ ವಾನರರ್ಷಭಮ್ ।**

೧೦-೧೧. ಆಕಾಶದಲ್ಲಿದ್ದುಕೊಂಡೇ ಮಾರುತಿಯು ದೊಡ್ಡಶಬ್ದವನ್ನು ಮಾಡಿದನು. ಅದನ್ನು ಕೇಳಿ ಕಪಿಗಳೆಲ್ಲರೂ ಹನುಮಂತನು ಬಂದಿರುವನೆಂದರಿತು ಬಹಳ ಸಂತೋಷದಿಂದ ಕೂಡಿದವರಾಗಿ ದೊಡ್ಡ ಧ್ವನಿಯಿಂದ ಕೂಗಿಕೊಂಡರು. 'ಎಲೌ ಕಪಿಗಳೆ, ಕಪಿಶ್ರೇಷ್ಠನನ್ನು ನೋಡಿರಿ ; ಅವನು ಕಾರ್ಯಸಾಧನೆಯನ್ನು ಮಾಡಿಕೊಂಡಪನಾಗಿ ಬಂದಿರುವನು. ಧ್ವನಿಯಿಂದಲೇ ಇದು ಗೊತ್ತಾಗುತ್ತಿದೆ. ಅವನು ಹನುಮಂತನೇ ಹೌದು.'

**ಏವಂ ಬ್ರುವತ್ಸು ವೀರೇಷು ವಾನರೇಷು ಸ ಮಾರುತಿಃ ।**
**ಅವತೀರ್ಯ ಗಿರೇರ್ಮೂರ್ಧ್ನಿ ವಾನರಾನಿದಮಬ್ರವೀತ್ ॥ ೧೨ ॥**
**ದೃಷ್ಟ್ವಾ ಸೀತಾ ಮಯಾ ಲಂಕಾ ಧರ್ಷಿತಾ ಚ ಸಕಾನನಾ ।**
**ಸಂಭಾಷಿತೋ ದಶಗ್ರೀವಃ ತತೋಽಹಂ ಪುನರಾಗತಃ ॥ ೧೩ ॥**
**ಇದಾನೀಮೇವ ಗಚ್ಛಾಮೋ ರಾಮಸುಗ್ರೀವಸನ್ನಿಧಿಮ್ ।**

೧೨-೧೩. ವೀರನಾದ ವಾನರನು ಹೀಗೆ ಹೇಳುತ್ತಿರಲಾಗಿ ಆ ಮಾರುತಿಯು ಬೆಟ್ಟದ ಮೇಲಿನಿಂದ ಇಳಿದು ಬಂದು ಕಪಿಗಳನ್ನು ಕುರಿತು ಹೀಗೆಂದನು : 'ನಾನು ಸೀತೆಯನ್ನು ಕಂಡೆನು. ವನಗಳಿಂದೊಡಗೂಡಿದ ಲಂಕೆಯನ್ನೂ ಹಾಳುಗೆಡವಿದ್ದಾಯಿತು. ರಾವಣನನ್ನು ಮಾತನಾಡಿಸಿದ್ದಾಯಿತು. ಅನಂತರ ನಾನು ಹಿಂದಿರುಗಿ ಬಂದಿರುತ್ತೇನೆ. ಈಗಲೇ ರಾಮ ಮತ್ತು ಸುಗ್ರೀವರ ಸಮೀಪಕ್ಕೆ ಹೋಗೋಣ.'

**ಇತ್ಯುಕ್ತಾ ವಾನರಾಃ ಸರ್ವೇ ಹರ್ಷೇಣಾಲಿಂಗ್ಯ ಮಾರುತಿಮ್ ।**
**ಕೇಚಿಚ್ಚುಚುಂಬುರ್ಲಾಂಗೂಲಂ ನನೃತುಃ ಕೇಚಿದುತ್ಸುಕಾಃ ॥ ೧೪ ॥**
**ಹನೂಮತಾ ಸಮೇತಾಸ್ತೇ ಜಗ್ಮುಃ ಪ್ರಸ್ರವಣಂ ಗಿರಿಮ್ ॥**
**ಗಚ್ಛಂತೋ ದದೃಶುರ್ವೀರಾ ವನಂ ಸುಗ್ರೀವರಕ್ಷಿತಮ್ ॥ ೧೫ ॥**
**ಮಧುಸಂಜ್ಞಂ ತದಾ ಪ್ರಾಹುರಂಗದಂ ವಾನರರ್ಷಭಾಃ ।**

೧೪-೧೫. ಹೀಗೆ ಹೇಳಲ್ಪಟ್ಟ ಕಪಿಗಳು ಸಂತೋಷದಿಂದ ಮಾರುತಿಯನ್ನು ತಬ್ಬಿಕೊಂಡವರಾಗಿ ಕೆಲವರು ಬಾಲವನ್ನು ಮುತ್ತಿಟ್ಟರು. ಕೆಲವರು ಕುತೂಹಲಾವಿಷ್ಟರಾಗಿ ಕುಣಿದರು. ಅವರುಗಳು ಹನುಮಂತನೊಡಗೂಡಿ ಪ್ರಸ್ರವಣವೆಂಬ ಬೆಟ್ಟಕ್ಕೆ ಬಂದರು. ಬರುವಾಗ (ಮಾರ್ಗದಲ್ಲಿ) ಆ ವೀರರು ಸುಗ್ರೀವನಿಂದ ಕಾಪಾಡಲ್ಪಟ್ಟಿದ್ದ 'ಮಧು' ಎಂಬ ಹೆಸರಿನವನವನ್ನು ಕಂಡರು. ಆಗ ವಾನರಶ್ರೇಷ್ಠರು ಅಂಗದನನ್ನು ಕುರಿತು ಹೀಗೆಂದರು :

**ಕ್ಷುಧಿತಾಃ ಸ್ಮೋ ವಯಂ ವೀರ ದೇಹ್ಯನುಜ್ಞಾಂ ಮಹಾಮತೇ ।**
**ಭಕ್ಷಯಾಮಃ ಫಲಾನ್ಯದ್ಯ ಪಿಬಾಮೋಽಮೃತವನ್ಮಧು ॥ ೧೬ ॥**
**ಸಂತುಷ್ಟಾ ರಾಘವಂ ದ್ರಷ್ಟುಂ ಗಚ್ಛಾಮೋಽದ್ಯೈವ ಸಾನುಜಮ್ ।**

೧೬. 'ಎಲೈ ವೀರನೆ, ನಾವು ಹಸಿದಿರುತ್ತೇವೆ. ಮಹಾಬುದ್ಧಿಶಾಲಿಯೆ, ನಮಗೆ ಅಪ್ಪಣೆಯನ್ನು ಕೊಡು. ಈಗ ನಾವು ಹಣ್ಣುಗಳನ್ನು ತಿನ್ನುವೆವು. ಅಮೃತಸಮಾನ ವಾಗಿರುವ ಜೇನನ್ನು ಕುಡಿಯುವೆವು. ತೃಪ್ತರಾಗಿ ಸೋದರರನೊಡಗೂಡಿದ ರಾಮನನ್ನು ನೋಡುವದಕ್ಕೆ ಈಗಲೆ ಹೊರಡುವೆವು.'

**ಅಂಗದ ಉವಾಚ-**

**ಹನೂಮಾನ್ ಕೃತಕಾರ್ಯೋಽಯಂ ಪಿಬತೈತತ್ ಪ್ರಸಾದತಃ ।**
**ಜಕ್ಷಧ್ವಂ ಫಲಮೂಲಾನಿ ತ್ವರಿತಂ ಹರಿಸತ್ತಮಾಃ ॥ ೧೭ ॥**
**ತತಃ ಪ್ರವಿಶ್ಯ ಹರಯಃ ಪಾತುಮಾರೇಭಿರೇ ಮಧು ।**
**ರಕ್ಷಿಣಸ್ತಾನನಾದೃತ್ಯ ದಧಿವಕ್ತ್ರೇಣ ನೋದಿತಾನ್ ॥ ೧೮ ॥**
**ಪಿಬತಸ್ತಾಡಯಾಮಾಸುರ್ವಾನರಾನ್ ವಾನರರ್ಷಭಾಃ ।**
**ತತಸ್ತಾನ್ ಮುಷ್ಟಿಭಿಃ ಪಾದೈಶ್ಚೂರ್ಣಯಿತ್ವಾ ಪಪುರ್ಮಧು ॥ ೧೯ ॥**

೧೭-೧೯. ಅಂಗದನಿಂತೆಂದನು : 'ಹನುಮಂತನು ಕಾರ್ಯಸಾಧನೆ ಮಾಡಿ ಕೊಂಡು ಬಂದಿದ್ದಾನೆ. ಆದ್ದರಿಂದ ಸಂತೋಷದಿಂದ ನೀವು ಈ (ಮಧುವನ್ನು) ಕುಡಿಯಿರಿ. ಎಲೈ ಕಪಿಶ್ರೇಷ್ಠರೆ, ಬೇಗನೆ ಫಲಮೂಲಾದಿಗಳನ್ನು ತಿನ್ನಿರಿ.' ಹೀಗೆನ್ನಲು ಕಪಿಗಳು ವನವನ್ನು ಹೊಕ್ಕು ಮಧುವನ್ನು ಕುಡಿಯಲಾರಂಭಿಸಿದರು. ಆಗ ದಧಿವಕ್ತ್ರನಿಂದ ಪ್ರೇರಿಸಲ್ಪಟ್ಟ ಆ ಕಾವಲುಗಾರರನ್ನು ತಿರಸ್ಕರಿಸಿ ವಾನರಶ್ರೇಷ್ಠರು (ಕಾವಲುಗಾರ) ಕಪಿಗಳನ್ನು ಹೊಡೆದರು. ಮತ್ತೆ ಅವರನ್ನು ಮುಷ್ಟಿಗಳಿಂದ ಗುದ್ದಿ ಕಾಲುಗಳಿಂದ ಪುಡಿಮಾಡಿದರು.

**ತತೋ ದಧಿಮುಖಃ ಕ್ರುದ್ಧಃ ಸುಗ್ರೀವಸ್ಯ ಸ ಮಾತುಲಃ ।**
**ಜಗಾಮ ರಕ್ಷಿಭಿಃ ಸಾರ್ಧಂ ಯತ್ರ ರಾಜಾ ಕಪೀಶ್ವರಃ ॥ ೨೦ ॥**
**ಗತ್ವಾ ತಮಬ್ರವೀದ್ ದೇವ ಚಿರಕಾಲಾಭಿರಕ್ಷಿತಮ್ ।**
**ನಷ್ಟಂ ಮಧುವನಂ ತೇಽದ್ಯ ಕುಮಾರೇಣ ಹನೂಮತಾ ॥ ೨೧ ॥**

೨೦-೨೧. ಅನಂತರ ಸುಗ್ರೀವನ ಸೋದರಮಾವನಾದ ಕುಪಿತನಾದ ಆ ದಧಿಮುಖನು ಕಾವಲುಗಾರರೊಡನೆ ಕೂಡಿ ಕಪಿರಾಜನಾದ ಸುಗ್ರೀವನಿದ್ದಲ್ಲಿಗೆ ಬಂದನು. ಬಂದನಂತರ ಅವನನ್ನು ಕುರಿತು ''ಸ್ವಾಮಿ, ನಿಮ್ಮ ಮಗನಾದ ಅಂಗದ, ಹಾಗೂ ಹನುಮಂತ- ಇವರುಗಳಿಂದ ನೀವು ಬಹಳಕಾಲದಿಂದಲೂ ಕಾಪಾಡಿ ಇಟ್ಟಿದ್ದ ಮಧುವನವೆಲ್ಲವೂ ನಾಶವಾಗಿ ಹೋಯಿತು'' - ಎಂದನು.

**ಶ್ರುತ್ವಾ ದಧಿಮುಖೇನೋಕ್ತಂ ಸುಗ್ರೀವೋ ಹೃಷ್ಟಮಾನಸಃ ।**
**ದೃಷ್ಟ್ವಾಗತೋ ನ ಸಂದೇಹಃ ಸೀತಾಂ ಪವನನಂದನಃ ॥ ೨೨ ॥**

**ನೋ ಚೇನ್ಮಧುವನಂ ದ್ರಷ್ಟುಂ ಸಮರ್ಥಃ ಕೋ ಭವೇನ್ಮಮ ।**
**ತತ್ರಾಪಿ ವಾಯುಪುತ್ರೇಣ ಕೃತಂ ಕಾರ್ಯಂ ನ ಸಂಶಯಃ ॥ ೨೩ ॥**

೨೨-೨೩. ದಧಿಮುಖನು ಹೇಳಿದ ಮಾತನ್ನು ಕೇಳಿ ಸಂತುಷ್ಟಹೃದಯನಾದ ಸುಗ್ರೀವನು ಹೀಗೆಂದನು : ''ವಾಯುಪುತ್ರನಾದ ಮಾರುತಿಯು ಸೀತೆಯನ್ನು ಕಂಡು ಹಿಂದಿರುಗಿರುತ್ತಾನೆ. ಇದರಲ್ಲಿ ಸಂಶಯವಿಲ್ಲ. ಹಾಗಿಲ್ಲವಾಗಿದ್ದರೆ ನನ್ನ ಮಧುವನವನ್ನು ನೋಡಲು (ಭೋಗಿಸಲು) ಯಾವನು ತಾನೆ ಧೈರ್ಯಮಾಡಿಯಾನು ? ಅದರಲ್ಲಿಯೂ ಪವನನಂದನನಾದ ಹನುಮಂತನೇ ಈ (ಸೀತಾದರ್ಶನ)ಕಾರ್ಯವನ್ನು ಮಾಡಿದ್ದಾನೆ. ಇದು ನಿಜ.''

**ಶ್ರುತ್ವಾ ಸುಗ್ರೀವವಚನಂ ಹೃಷ್ಟೋ ರಾಮಸ್ತಮಬ್ರವೀತ್ ।**
**ಕಿಮುಚ್ಯತೇ ತ್ವಯಾ ರಾಜನ್ ವಚಃ ಸೀತಾಕಥಾನ್ವಿತಮ್ ॥ ೨೪ ॥**
**ಸುಗ್ರೀವಸ್ತ್ವಬ್ರವೀತ್ ವಾಕ್ಯಂ ದೇವ ದೃಷ್ಟಾವನೀಸುತಾ ।**
**ಹನೂಮತ್ಪ್ರಮುಖಾಸ್ಸರ್ವೇ ಪ್ರವಿಷ್ಟಾ ಮಧುಕಾನನಮ್ ॥ ೨೫ ॥**
**ಭಕ್ಷಯಂತಿ ಸ್ಮ ಸಕಲಂ ತಾಡಯಂತಿ ಸ್ಮ ರಕ್ಷಿಣಃ ।**
**ಅಕೃತ್ವಾ ದೇವಕಾರ್ಯಂ ತೇ ದ್ರಷ್ಟುಂ ಮಧುವನಂ ಮಮ ॥ ೨೬ ॥**
**ನ ಸಮರ್ಥಾಸ್ತತೋ ದೇವೀ ದೃಷ್ಟ್ವಾ ಸೀತೇತಿ ನಿಶ್ಚಿತಮ್ ।**

೨೪-೨೬. ಸುಗ್ರೀವನ ಮಾತನ್ನು ಕೇಳಿ ಸಂತೋಷಗೊಂಡ ರಾಮನು ಅವನನ್ನು ಕುರಿತು ಹೀಗೆಂದನು : 'ಎಲೈ ರಾಜನೆ, ಸೀತೆಯ ವೃತ್ತಾಂತದೊಡಗೂಡಿದ ಮಾತನ್ನು ಏನನ್ನು ಆಡುತ್ತಿರುವೆ ?' ಆಗ ಸುಗ್ರೀವನು 'ಸ್ವಾಮಿ, ಸೀತೆಯು ಸಿಕ್ಕಿರುತ್ತಾಳೆ. ಹನುಮಂತನೇ ಮುಂತಾದ ಕಪಿಗಳೆಲ್ಲರೂ ಮಧುವನವನ್ನು ಹೊಕ್ಕಿದ್ದಾರೆ. 'ಎಲ್ಲಾ ಹಣ್ಣುಗಳನ್ನೂ ತಿನ್ನುತ್ತಿದ್ದರು ; ಕಾವಲುಗಾರರನ್ನು ಹೊಡೆಯುತ್ತಿದ್ದರು' (ಎಂದು ವರ್ತಮಾನವು ಬಂದಿದೆ). ಸ್ವಾಮಿಕಾರ್ಯವನ್ನು ನೆರವೇರಿಸದೆ ನನ್ನ ಮಧುವನವನ್ನು ಅವರು ನೋಡಲೂ ಆರರು. ಆದ್ದರಿಂದ ಅವರುಗಳು ಸೀತೆಯನ್ನು ಕಂಡಿರುವದು ಖಂಡಿತ'- ಎಂದನು.

**ರಕ್ಷಿಣೋ ವೋ ಭಯಂ ಮಾಸ್ತು ಗತ್ವಾ ಬ್ರೂತ ಮಮಾಜ್ಞಯಾ ।**
**ವಾನರಾನಂಗದಮುಖಾನಾನಯಧ್ವಂ ಮಮಾಂತಿಕಮ್ ॥ ೨೭ ॥**

೨೭. (ಮುಂದುವರೆದು ಹೀಗೆಂದನು ) : ಎಲೈ ಕಾವಲುಗಾರರಿರಾ, ನಿಮಗೆ ಹೆದರಿಕೆ ಬೇಡ. ಈಗಲೆ ಹೋಗಿ ನನ್ನ ಅಪ್ಪಣೆಯಂತೆ ಹೇಳಿರಿ. ಅಂಗದನೇ ಮೊದಲಾದ ಕಪಿಗಳನ್ನು ನನ್ನ ಸಮೀಪಕ್ಕೆ ಕರೆತನ್ನಿರಿ.

**ಶ್ರುತ್ವಾ ಸುಗ್ರೀವವಚನಂ ಗತ್ವಾ ತೇ ವಾಯುವೇಗತಃ ।**
**ಹನುಮತ್ಪ್ರಮುಖಾನೂಚುಃ ಗಚ್ಛತೇಶ್ವರಶಾಸನಾತ್ ॥ ೨೮ ॥**
**ದ್ರಷ್ಟುಮಿಚ್ಛತಿ ಸುಗ್ರೀವಃ ಸರಾಮೋ ಲಕ್ಷ್ಮಣಾನ್ವಿತಃ ।**
**ಯುಷ್ಮಾನತೀವ ಹೃಷ್ಟಾಸ್ತೇ ತ್ವರಯಂತಿ ಮಹಾಬಲಾಃ ॥ ೨೯ ॥**

೨೮-೨೯. ಅವರುಗಳು ಸುಗ್ರೀವನ ಮಾತನ್ನು ಕೇಳಿ ವಾಯುವೇಗದಿಂದ ಹೊರಟವರಾಗಿ ಹನುಮಂತನೇ ಮೊದಲಾದವರನ್ನು (ಸಂಧಿಸಿ) ಹೀಗೆಂದರು : ''ಯಜಮಾನನ ಅಪ್ಪಣೆಯಾಗಿದೆ ; ನಡೆಯಿರಿ ; ರಾಮಲಕ್ಷ್ಮಣರೊಡನೆ ಇರುವ ಸುಗ್ರೀವನು ನಿಮ್ಮನ್ನು ನೋಡಲಿಚ್ಛಿಸುತ್ತಾನೆ.'' ಹೀಗೆನ್ನಲು ಆ ಮಹಾಬಲಶಾಲಿಗಳು ಆತುರಪಟ್ಟವರಾಗಿ (ಹೊರಟರು).

**ತಥೇತ್ಯಂಬರಮಾಸಾದ್ಯ ಯಯುಸ್ತೇ ವಾನರೋತ್ತಮಾಃ ।**
**ಹನೂಮಂತಂ ಪುರಸ್ಕೃತ್ಯ ಯುವರಾಜಂ ತಥಾಂಗದಮ್ ॥ ೩೦ ॥**
**ರಾಮಸುಗ್ರೀವಯೋರಗ್ರೇ ನಿಪೇತುರ್ಭುವಿ ಸತ್ವರಮ್ ।**

೩೦. ಹಾಗೆ ಹೊರಟ ವಾನರಶ್ರೇಷ್ಠರುಗಳು ಆಕಾಶಮಾರ್ಗದಿಂದ ಪ್ರಯಾಣ ಮಾಡಿದರು. ಹನುಮಂತನನ್ನೂ ಯುವರಾಜನಾದ ಅಂಗದನನ್ನೂ ಮುಂದಿಟ್ಟುಕೊಂಡು ಜಾಗ್ರತೆಯಾಗಿ ಬಂದು ರಾಮ, ಸುಗ್ರೀವರ ಮುಂಭಾಗದಲ್ಲಿ ನೆಲದಮೇಲೆ ಬಾಗಿದರು.

**ಹನೂಮಾನ್ ರಾಘವಂ ಪ್ರಾಹ ದೃಷ್ಟ್ವಾ ಸೀತಾ ನಿರಾಮಯಾ ।**
**ಸಾಷ್ಟಾಂಗಂ ಪ್ರಣಿಪತ್ಯಾಗ್ರೇ ರಾಮಂ ಪಶ್ಚಾದ್ಧರೀಶ್ವರಮ್ ॥ ೩೧ ॥**
**ಕುಶಲಂ ಪ್ರಾಹ ರಾಜೇಂದ್ರ ಜಾನಕೀ ತ್ವಾಂ ಶುಚಾನ್ವಿತಾ ।**

೩೧. ಮೊದಲು ರಾಮನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಅನಂತರ ಕಪಿರಾಜನಾದ ಸುಗ್ರೀವನನ್ನೂ ವಂದಿಸಿ ಹನುಮಂತನು ರಾಮನನ್ನು ಕುರಿತು 'ಎಲೈ ರಾಜೇಂದ್ರನೆ, ಶೋಕಾವಿಷ್ಟಳಾದ ಸೀತೆಯು ನಿನಗೆ ಕುಶಲವನ್ನು ತಿಳಿಸಿರುತ್ತಾಳೆ'- (ಎಂದನು).

**ಅಶೋಕವನಿಕಾಮಧ್ಯೇ ಶಿಂಶಪಾಮೂಲಮಾಶ್ರಿತಾ ।**
**ರಾಕ್ಷಸೀಭಿಃ ಪರಿವೃತಾ ನಿರಾಹಾರಾ ಕೃಶಾ ಪ್ರಭೋ ॥ ೩೨ ॥**
**ಹಾ ರಾಮ ರಾಮೇತಿ ಶೋಚಂತೀ ಮಲಿನಾಂಬರಾ ।**
**ಏಕವೇಣೀ ಮಯಾ ದೃಷ್ಟ್ವಾ ಶನೈರಾಶ್ವಾಸಿತಾ ಶುಭಾ ॥ ೩೩ ॥**

೩೨-೩೩. ಎಲೈ ಪ್ರಭುವೆ, ಅಶೋಕವನದ ನಡುವೆ ಶಿಂಶಪಾವೃಕ್ಷದ ಬುಡದಲ್ಲಿದ್ದ, ರಾಕ್ಷಸಿಯರಿಂದ ಸುತ್ತುವರಿಯಲ್ಪಟ್ಟವಳಾದ, ಆಹಾರವಿಲ್ಲದೆ ಬಳಲಿದ್ದ, ಮತ್ತು ಕೊಳೆಯ ಬಟ್ಟೆಯನ್ನುಟ್ಟು (ಯಾವಾಗಲೂ) ರಾಮ, ರಾಮ- ಎಂದು ದುಃಖದಿಂದ

ಉಚ್ಚರಿಸುತ್ತಾ ಒಂದೇ ಸೀಳಾಗಿ ಮಾಡಿದ ಜಡೆಯುಳ್ಳವಳಾಗಿದ್ದ ಶುಭಳಾದ ಸೀತೆಯನ್ನು ಮೆಲ್ಲನೆ ನಾನು ಕಂಡು ಸಮಾಧಾನಗೊಳಿಸಿದೆನು.

**ವೃಕ್ಷಶಾಖಾಂತರೇ ಸ್ಥಿತ್ವಾ ಸೂಕ್ಷ್ಮರೂಪೇಣ ತೇ ಕಥಾಮ್ ।**
**ಜನ್ಮಾರಭ್ಯ ತವಾತ್ಯರ್ಥಂ ದಂಡಕಾಗಮನಂ ತಥಾ ॥ ೩೪ ॥**
**ದಶಾನನೇನ ಹರಣಂ ಜಾನಕ್ಯಾ ರಹಿತೇ ತ್ವಯಿ ।**
**ಸುಗ್ರೀವೇಣ ಯಥಾ ಮೈತ್ರೀ ಕೃತ್ವಾ ವಾಲಿನಿಬರ್ಹಣಮ್ ॥ ೩೫ ॥**
**ಮಾರ್ಗಣಾರ್ಥಂ ಚ ವೈದೇಹ್ಯಾಃ ಸುಗ್ರೀವೇಣ ವಿಸರ್ಜಿತಾಃ ।**
**ಮಹಾಬಲಾ ಮಹಾಸತ್ತ್ವಾ ಹರಯೋ ಜಿತಕಾಶಿನಃ ॥ ೩೬ ॥**
**ಗತಾಃ ಸರ್ವತ್ರ ಸರ್ವೇ ವೈ ತತ್ರೈಕೋಽಹಮಿಹಾಗತಃ ।**

೩೪-೩೬. ಮರದ ಕೊಂಬೆಯ ಸಂದಿಯಲ್ಲಿ ಸೂಕ್ಷ್ಮರೂಪದಿಂದ ಕುಳಿತು ನಿನ್ನ ಕಥೆಯನ್ನು (ಆರಂಭಿಸಿ) ನೀನು ಹುಟ್ಟಿದಾಗಿನಿಂದ ದಂಡಕೆಗೆ ಬಂದದ್ದರವರೆಗೂ (ಹೇಳಿ) ಮುಂದುವರೆದು ನೀನಿಲ್ಲದಾಗ ರಾವಣನು ಸೀತೆಯನ್ನು ಕದ್ದದ್ದು, (ರಾಮನು) ಸುಗ್ರೀವನೊಡನೆ ಸ್ನೇಹವನ್ನು ಬೆಳೆಯಿಸಿದ್ದು, ವಾಲಿಯನ್ನು ವಧಮಾಡಿದ್ದು, ಸೀತೆಯನ್ನು ಹುಡುಕಲು ಸುಗ್ರೀವನಿಂದ ಮಹಾಬಲಿಷ್ಠರೂ ಪರಾಕ್ರಮಶಾಲಿಗಳೂ ಆದ ತೇಜಸ್ವಿಗಳಾದ ಕಪಿಗಳು ಎಲ್ಲಕಡೆಗಳಿಗೆ ಕಳುಹಿಸಲ್ಪಟ್ಟದ್ದು, ನಾನೊಬ್ಬನು ಇಲ್ಲಿಗೆ (ಲಂಕೆಗೆ) ಬಂದದ್ದು- (ಇವುಗಳನ್ನು ತಿಳಿಸಿದೆನು).

**ಅಹಂ ಸುಗ್ರೀವಸಚಿವೋ ದಾಸೋಽಹಂ ರಾಘವಸ್ಯ ಹಿ ।**
**ದೃಷ್ಟ್ವಾ ಯಜ್ಜಾನಕೀ ಭಾಗ್ಯಾತ್ ಪ್ರಯಾಸಃ ಫಲಿತೋಽದ್ಯ ಮೇ ॥ ೩೭ ॥**
**ಇತ್ಯುದೀರಿತಮಾಕರ್ಣ್ಯ ಸೀತಾ ವಿಸ್ಫಾರಿತೇಕ್ಷಣಾ ।**
**ಕೇನ ವಾ ಕರ್ಣಪೀಯೂಷಂ ಶ್ರಾವಿತಂ ಮೇ ಶುಭಾಕ್ಷರಮ್ ॥ ೩೮ ॥**
**ಯದಿ ಸತ್ಯಂ ತದಾಯಾತು ಮದ್ದರ್ಶನಪಥಂ ತು ಸಃ ।**
**ತತೋಽಹಂ ವಾನರಾಕಾರಃ ಸೂಕ್ಷ್ಮರೂಪೇಣ ಜಾನಕೀಮ್ ॥ ೩೯ ॥**
**ಪ್ರಣಮ್ಯ ಪ್ರಾಂಜಲಿರ್ಭೂತ್ವಾ ದೂರಾದೇವ ಸ್ಥಿತಃ ಪ್ರಭೋ ।**

೩೭-೩೯. 'ನಾನು ಸುಗ್ರೀವನ ಮಂತ್ರಿಯು. ರಾಮನ ಸೇವಕನು. ಅದೃಷ್ಟಬಲದಿಂದ ಸೀತೆಯನ್ನು ಕಂಡೆನು. ಈಗ ನನ್ನ ಶ್ರಮವು ಸಾರ್ಥಕವಾಯಿತು'- ಹೀಗೆಂದ ಮಾತನ್ನು ಕೇಳಿ ಸೀತೆಯು (ಎಡಗಣ್ಣು) ಹಾರಿದವಳಾಗಿ 'ಯಾವನಿಂದ ನನಗೆ ಈ ಕರ್ಣಾನಂದಕರವಾದ ಶುಭಾಕ್ಷರಗಳುಳ್ಳ ಮಾತು ಕೇಳಬಂದಿತೋ ಅದು ನಿಜವಾಗಿದ್ದರೆ ಅವನು ನನ್ನ ಕಣ್ಣಿಗೆ ಗೋಚರನಾಗಲಿ !' ಎಂದಳು. ಅನಂತರ ನಾನು ಕಪಿಯ ಆಕಾರದಿಂದ

ಸೂಕ್ಷ್ಮಶರೀರಧಾರಿಯಾಗಿ ಸೀತೆಯನ್ನು ಒಳಿಸಾರಿ ನಮಸ್ಕರಿಸಿ, ಎಲೈ ಪ್ರಭುವೆ, ದೂರದಿಂದಲೇ ಕೈಮುಗಿದು ನಿಂತುಕೊಂಡೆನು.

**ಪೃಷ್ಟೋಽಹಂ ಸೀತಯಾ ಕಸ್ತ್ವಮಿತ್ಯಾದಿ ಬಹುವಿಸ್ತರಮ್ ।**
**ಮಯಾ ಸರ್ವಂ ಕ್ರಮೇಣೈವ ವಿಜ್ಞಾಪಿತಮರಿಂದಮ ॥ ೪೦ ॥**
**ಪಶ್ಚಾನ್ಮಯಾರ್ಪಿತಂ ದೇವ್ಯೈ ಭವದ್ದತ್ತಾಂಗುಲೀಯಕಮ್ ।**
**ತೇನ ಮಾಮತಿವಿಶ್ವಸ್ತಾ ವಚನಂ ಚೇದಮಬ್ರವೀತ್ ॥ ೪೧ ॥**
**ಯಥಾ ದೃಷ್ಟಾಽಸ್ಮಿ ಹನುಮನ್ ಪೀಡ್ಯಮಾನಾ ದಿವಾನಿಶಮ್ ।**
**ರಾಕ್ಷಸೀನಾಂ ತರ್ಜನೈಸ್ತತ್ ಸರ್ವಂ ಕಥಯ ರಾಘವೇ ॥ ೪೨ ॥**

೪೦-೪೨. 'ನೀನು ಯಾರು ? ಎಂದು ಸೀತೆಯಿಂದ ಕೇಳಲ್ಪಟ್ಟವನಾದಾಗ ಎಲೈ ಶತ್ರುನಾಶನನೆ, ನಾನು ಬಹಳ ವಿವರವಾಗಿ ಕ್ರಮವಾಗಿ ಎಲ್ಲವನ್ನೂ ಹೇಳಿದೆನು. ಅನಂತರ ನೀನು ಕೊಟ್ಟಿದ್ದ ಉಂಗುರವನ್ನು ದೇವಿಗೆ ಅರ್ಪಿಸಿದೆನು. ಅದರಿಂದ ಆಕೆಯು ನನ್ನಲ್ಲಿ ಹೆಚ್ಚಿನ ನಂಬಿಕೆಯುಳ್ಳವಳಾಗಿ ಈ ಮಾತನ್ನು ಹೇಳಿದಳು : 'ಎಲೈ ಹನುಮಂತನೆ, ಹಗಲೂ ರಾತ್ರಿಯೂ ರಾಕ್ಷಸಿಯರ ಬೆದರಿಕೆಗಳಿಂದ ನಾನು ಪೀಡಿಸಲ್ಪಡುತ್ತಿರುವದನ್ನು ನೀನು ಕಣ್ಣಲ್ಲಿ ಕಂಡಂತೆಯೇ ಎಲ್ಲವನ್ನೂ ಶ್ರೀರಾಮನಿಗೆ ತಿಳಿಸುವವನಾಗು.'

**ಮಯೋಕ್ತಂ ದೇವಿ ರಾಮೋಽಪಿ ತ್ವಚ್ಚಿಂತಾಪರಿನಿಷ್ಠಿತಃ ।**
**ಪರಿಶೋಚತ್ಯಹೋರಾತ್ರಂ ತ್ವದ್ವಾರ್ತಾಂ ನಾಧಿಗಮ್ಯ ಸಃ ॥ ೪೩ ॥**
**ಇದಾನೀಮೇವ ಗತ್ವಾಹಂ ಸ್ಥಿತಿಂ ರಾಮಾಯ ತೇ ಬ್ರುವೇ ।**
**ರಾಮಃ ಶ್ರವಣಮಾತ್ರೇಣ ಸುಗ್ರೀವೇಣ ಸಲಕ್ಷ್ಮಣಃ ॥ ೪೪ ॥**
**ವಾನರಾನೀಕಪೈಃ ಸಾರ್ಧಂ ಆಗಮಿಷ್ಯತಿ ತೇಽನ್ತಿಕಮ್ ।**
**ರಾವಣಂ ಸಕುಲಂ ಹತ್ವಾ ನೇಷ್ಯತಿ ತ್ವಾಂ ಸ್ವಕಂ ಪುರಮ್ ॥ ೪೫ ॥**
**ಅಭಿಜ್ಞಾಂ ದೇಹಿ ಮೇ ದೇವಿ ಯಥಾ ಮಾಂ ವಿಶ್ವಸೇದ್ ವಿಭುಃ ।**

೪೩-೪೫. ಆಗ ನಾನೂ ಆಕೆಗೆ ಹೀಗೆಂದೆನು : 'ಎಲೌ ದೇವಿ, ರಾಮನು ಕೂಡ ಹಗಲೂರಾತ್ರೆಯೂ ನಿನ್ನ ಯೋಚನೆಯಲ್ಲೇ ಮುಳುಗಿದ್ದು ನಿನ್ನ ಸುದ್ದಿಯನ್ನು ತಿಳಿಯದೆ ದುಃಖಪಡುತ್ತಿರುವನು. ಆದ್ದರಿಂದ ನಾನು ಈಗಲೆ ಹೊರಟು ರಾಮನ ಬಳಿಗೆ ಹೋಗಿ ನಿನ್ನ ಪರಿಸ್ಥಿತಿಯನ್ನು ಅವನಿಗೆ ತಿಳಿಸುವೆನು. ರಾಮನು ಸುದ್ದಿಯನ್ನು ಕೇಳಿದ ಕೂಡಲೆ ಸುಗ್ರೀವ - ಲಕ್ಷ್ಮಣಸಹಿತನಾಗಿ ವಾನರಸೈನ್ಯದೊಡಗೂಡಿ ನಿನ್ನ ಸಮೀಪಕ್ಕೆ ಬರಲಿರುವನು. ಪರಿವಾರಸಹಿತನಾದ ರಾವಣನನ್ನು ಕೊಂದು ನಿನ್ನನ್ನು ತನ್ನ ಊರಿಗೆ ಕರೆದೊಯ್ಯಲಿರುವನು. ದೇವಿ, ನನಗೆ ರಾಮನು ನಂಬುವಂಥ ಒಂದು ಗುರುತನ್ನು ಕೊಡುವವಳಾಗು.'

**ಇತ್ಯುಕ್ತ್ವಾ ಸಾ ಶಿರೋರತ್ನಂ ಚೂಡಾಪಾಶೇ ಸ್ಥಿತಂ ಪ್ರಿಯಮ್ ।**
**ದತ್ತ್ವಾ ಕಾಕೇನ ಯದ್ವೃತ್ತಂ ಚಿತ್ರಕೂಟಗಿರೌ ಪುರಾ ॥ ೪೬ ॥**
**ತದಪ್ಯಾಹಾಶ್ರುಪೂರ್ಣಾಕ್ಷೀ ಕುಶಲಂ ಬ್ರೂಹಿ ರಾಘವಮ್ ।**
**ಲಕ್ಷ್ಮಣಂ ಬ್ರೂಹಿ ಮೇ ಕಿಂಚಿದ್ದುರುಕ್ತಂ ಭಾಷಿತಂ ಪುರಾ ॥ ೪೭ ॥**
**ತತ್ ಕ್ಷಮಸ್ವಾಜ್ಞಭಾವೇನ ಭಾಷಿತಂ ಕುಲನಂದನ ।**
**ತಾರಯೇನ್ಮಾಂ ಯಥಾ ರಾಮಸ್ತಥಾ ಕುರು ದಯಾನ್ವಿತಃ ॥ ೪೮ ॥**
**ಇತ್ಯುಕ್ತ್ವಾ ರುದತೀ ಸೀತಾ ದುಃಖೇನ ಮಹತಾವೃತಾ ।**
**ಮಯಾಪ್ಯಾಶ್ವಾಸಿತಾ ರಾಮ ವದತಾ ಸರ್ವಮೇವ ತೇ ॥ ೪೯ ॥**

೪೭-೪೯. ಹೀಗೆ ಹೇಳಲ್ಪಟ್ಟ ಆಕೆಯು ಪ್ರಿಯವಾದ ತನ್ನ ಚೂಡಾಮಣಿಯನ್ನು ಕೊಟ್ಟು ಹಿಂದೆ ಚಿತ್ರಕೂಟಪರ್ವತದಲ್ಲಿ ಕಾಗೆಯಿಂದ ಸಂಭವಿಸಿದ ಕಥೆಯನ್ನೂ ಹೇಳಿ ಕಣ್ಣೀರಿಟ್ಟವಳಾಗಿ ಹೀಗೆಂದಳು : 'ರಾಮನಿಗೆ ಕುಶಲವನ್ನು ಹೇಳು. ಲಕ್ಷ್ಮಣನಿಗೆ ಸಹ ಹಿಂದೆ ನಾನು ಆಡಿದ್ದ ಕೆಟ್ಟಮಾತುಗಳನ್ನು ಕ್ಷಮಿಸುವಂತೆಯೂ ಅದು ತಿಳಿಯದೆ ಆಡಿದವುಗಳೆಂದೂ ಹೇಳು. ಮತ್ತು ಎಲೈ ಕುಲಪುತ್ರನೆ, ದಯಾವಂತನಾದ ರಾಮನು ನನ್ನನ್ನು ಹೇಗೆ ಉದ್ಧಾರಮಾಡಿಯಾನೋ ಹಾಗೆ ಏರ್ಪಡಿಸುವವನಾಗು.' ಈ ರೀತಿಯಾಗಿ ಹೇಳಿ ಹೆಚ್ಚಿನ ದುಃಖದಿಂದ ಸೀತೆಯು ಅಳುತ್ತಾ ಇರಲು ನಾನು ಕೂಡ ಸಮಾಧಾನಗೊಳಿಸಿದೆನು. ಎಲೈ ರಾಮನೆ, ನಿನಗೆ ಎಲ್ಲವನ್ನೂ ಹೇಳಿದ್ದೇನೆ.

**ತತಃ ಪ್ರಸ್ಥಾಪಿತೋ ರಾಮ ತ್ವತ್ಸಮೀಪಮಿಹಾಗತಃ ।**
**ತದಾಗಮನವೇಲಾಯಮಶೋಕವನಿಕಾಂ ಪ್ರಿಯಾಮ್ ॥ ೫೦ ॥**
**ಉತ್ಪಾಟ್ಯ ರಾಕ್ಷಸಾಂಸ್ತತ್ರ ಬಹೂನ್ ಹತ್ವಾ ಕ್ಷಣಾದಹಮ್ ।**
**ರಾವಣಸ್ಯ ಸುತಂ ಹತ್ವಾ ರಾವಣೇನಾಭಿಭಾಷ್ಯ ಚ ॥ ೫೧ ॥**
**ಲಂಕಾಮಶೇಷತೋ ದಗ್ಧ್ವಾ ಪುನರಪ್ಯಗಮಂ ಕ್ಷಣಾತ್ ।**

೫೦-೫೧. ಅನಂತರ ಎಲೈ ರಾಮನೆ, ಅಲ್ಲಿಂದ ಹೊರಟು ನಿನ್ನಲ್ಲಿಗೆ ಬಂದಿದ್ದೇನೆ. ಬರುವ ಸಮಯಕ್ಕೆ (ರಾವಣನಿಗೆ) ಪ್ರಿಯವಾಗಿದ್ದ ಅಶೋಕವನವನ್ನು ಕಿತ್ತು ಬಿಸುಟು ಅಲ್ಲಿದ್ದ ಬಹಳಮಂದಿ ರಾಕ್ಷಸರನ್ನೆಲ್ಲ ಕ್ಷಣಮಾತ್ರದಲ್ಲಿ ಕೊಂದು ರಾವಣನ ಮಗನಾದ (ಅಕ್ಷಕುಮಾರ)ನನ್ನೂ ಕೊಂದು ರಾವಣನೊಡನೆ ಮಾತನಾಡಿಕೊಂಡು ಲಂಕೆಯನ್ನು ಪೂರ್ಣವಾಗಿ ಸುಟ್ಟು ಕ್ಷಣಮಾತ್ರದಲ್ಲಿ ಹಿಂದಿರುಗಿ ಬಂದಿರುತ್ತೇನೆ.'

**ಶ್ರುತ್ವಾ ಹನುಮತೋ ವಾಕ್ಯಂ ರಾಮೋಽತ್ಯಂತಪ್ರಹೃಷ್ಟಧೀಃ ।**
**ಹನೂಮಂಸ್ತೇ ಕೃತಂ ಕಾರ್ಯಂ ದೇವೈರಪಿ ಸುದುಷ್ಕರಮ್ ॥ ೫೨ ॥**

**ಉಪಕಾರಂ ನ ಪಶ್ಯಾಮಿ ತವ ಪ್ರತ್ಯುಪಕಾರಿಣಃ ।**
**ಇದಾನೀಂ ತೇ ಪ್ರಯಚ್ಛಾಮಿ ಸರ್ವಸ್ವಂ ಮಮ ಮಾರುತೇ ॥ ೫೩ ॥**
**ಇತ್ಯಾಲಿಂಗ್ಯ ಸಮಾಕೃಷ್ಯ ಗಾಢಂ ವಾನರಪುಂಗವಮ್ ।**
**ಸಾರ್ದ್ರನೇತ್ರೋ ರಘುಶ್ರೇಷ್ಠಃ ಪರಾಂ ಪ್ರೀತಿಮವಾಪ ಸಃ ॥ ೫೪ ॥**

೫೨-೫೪. ಹನುಮಂತನ ಮಾತನ್ನು ಕೇಳಿ ರಾಮನು ಬಹಳವಾಗಿ ಹಿಗ್ಗಿದವನಾಗಿ ಹೀಗೆಂದನು : 'ಎಲೈ ಹನುಮಂತನೆ, ದೇವತೆಗಳಿಂದಲೂ ಅಸಾಧ್ಯವಾದ ಕೆಲಸವನ್ನು ಮಾಡಿರುವೆ; ಪ್ರತ್ಯುಪಕಾರಮಾಡಿರುವ ನಿನಗೆ ನಾನು ಮಾಡಬಹುದಾದ ಉಪಕಾರವನ್ನು ಕಾಣೆನು. ಎಲೈ ಮಾರುತಿಯೆ, ಈಗ ನಿನಗೆ ನನ್ನ ಸರ್ವಸ್ವವನ್ನೂ ಒಪ್ಪಿಸುವೆನು' ಎಂದು ಹೇಳುತ್ತಾ ಹತ್ತಿರಕ್ಕೆ ಎಳೆದುಕೊಂಡು ಕಪಿಶ್ರೇಷ್ಠನನ್ನು ಭದ್ರವಾಗಿ ಆಲಿಂಗಿಸಿಕೊಂಡು ಒದ್ದೆಯಾದ ಕಣ್ಣುಳ್ಳವನಾದ ಆ ರಘುಶ್ರೇಷ್ಠನು ಹೆಚ್ಚಿನ ಆನಂದವನ್ನು ಹೊಂದಿದನು.

**ಹನೂಮಂತಮುವಾಚೇದಂ ರಾಘವೋ ಭಕ್ತವತ್ಸಲಃ ।**
**ಪರಿರಂಭೋ ಹಿ ಮೇ ಲೋಕೇ ದುರ್ಲಭಃ ಪರಮಾತ್ಮನಃ ॥ ೫೫ ॥**
**ಅತಸ್ತ್ವಂ ಮಮ ಭಕ್ತೋಽಸಿ ಪ್ರಿಯೋಽಸಿ ಹರಿಪುಂಗವ ।**

೫೫. ಭಕ್ತವತ್ಸಲನಾದ ರಾಮನು ಹನುಮಂತನನ್ನು ಕುರಿತು ಹೀಗೆಂದನು : 'ನನಗೆ ಹೆಚ್ಚನ ಆತ್ಮೀಯನಾದಂಥವನ ಆಲಿಂಗನವು ಲೋಕದಲ್ಲಿ ದುರ್ಲಭವೇ ಸರಿ. ಎಲೈ ಹರಿಶ್ರೇಷ್ಠನೆ, ಆದ್ದರಿಂದ ನೀನು ನನ್ನ ಭಕ್ತನಾಗಿರುವೆ. ಪ್ರೀತಿಪಾತ್ರನಾಗಿರುವೆ.'

**ಯತ್ಪಾದಪದ್ಮಯುಗಲಂ ತುಲಸೀದಲಾದ್ಯೈಃ**
**ಸಂಪೂಜ್ಯ ವಿಷ್ಣುಪದವೀಮತುಲಾಂ ಪ್ರಯಾಂತಿ ।**
**ತೇನೈವ ಕಿಂ ಪುನರಸೌ ಪರಿರಬ್ಧಮೂರ್ತೀ**
**ರಾಮೇಣ ವಾಯುತನಯಃ ಕೃತಪುಣ್ಯಪುಂಜಃ ॥ ೫೬ ॥**

೫೬. ಯಾವ (ಭಗವಂತನ) ಪಾದಪದ್ಮಗಳನ್ನು ತುಳಸೀದಳವೇ ಮುಂತಾದವುಗಳಿಂದ ಪೂಜಿಸಿದವರು ಹೆಚ್ಚಿನದಾದ ವಿಷ್ಣುಪದವಿಯನ್ನು ಹೊಂದವರೋ, ಅಂಥ ರಾಮನಿಂದಲೇ ಆಲಂಗಿಸಲ್ಪಟ್ಟ ಶರೀರವುಳ್ಳ ವಾಯುಪುತ್ರನು ಹಿಂದೆ ಮಾಡಿದ ಪುಣ್ಯಗಳ ಗುಂಪುಳ್ಳ ಭಕ್ತನೆಂದು ಹೇಳುವದೇನಿದೆ ?

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಸುಂದರಕಾಂಡೇ ಪಂಚಮಃ ಸರ್ಗಃ**
**ಸಮಾಪ್ತಮಿದಂ ಸುಂದರಕಾಂಡಮ್**

------------

# ಯುದ್ಧಕಾಂಡ

## ಒಂದನೆಯ ಸರ್ಗ

**ಶ್ರೀ ಮಹಾದೇವ ಉವಾಚ -**

**ಯಥಾವದ್ ಭಾಷಿತಂ ವಾಕ್ಯಂ ಶ್ರುತ್ವಾ ರಾಮೋ ಹನೂಮತಃ ।**
**ಉವಾಚಾನಂತರಂ ವಾಕ್ಯಂ ಹರ್ಷೇಣ ಮಹತಾ ವೃತಃ ॥ ೧॥**
**ಕಾರ್ಯಂ ಕೃತಂ ಹನುಮತಾ ದೇವೈರಪಿ ಸುದುಷ್ಕರಮ್ ।**
**ಮನಸಾಪಿ ಯದನ್ಯೇನ ಸ್ಮರ್ತುಂ ಶಕ್ಯಂ ನ ಭೂತಲೇ ॥ ೨॥**
**ಶತಯೋಜನವಿಸ್ತೀರ್ಣಂ ಲಂಘಯೇದ್ ಕಃ ಪಯೋನಿಧಿಮ್ ।**
**ಲಂಕಾಂ ಚ ರಾಕ್ಷಸೈರ್ಗುಪ್ತಾಂ ಕೋ ವಾ ಧರ್ಷಯಿತುಂ ಕ್ಷಮಃ ॥ ೩॥**

೧-೩. ಶ್ರೀ ಮಹಾದೇನಿಂತೆಂದನು : ಹನುಮಂತನು (ಸೀತೆಯ ವಿಷಯ ದಲ್ಲಿ) ಇದ್ದದ್ದು ಇದ್ದಂತೆ ಹೇಳಿದ ಮಾತನ್ನು ಕೇಳಿದ ರಾಮನು ಬಹಳ ಸಂತೋಷದಿಂದ ಕೂಡಿದವನಾಗಿ ಆನಂತರ ಹೀಗೆಂದನು : 'ದೇವತೆಗಳಿಂದಲೂ ಮಾಡಲು ಕಷ್ಟಕರ ವಾದಂಥ ಕೆಲಸವನ್ನು ಹನುಮಂತನು ಮಾಡಿರುತ್ತಾನೆ. ಭೂಮಿಯಲ್ಲಿ ಬೇರಾವ ನೊಬ್ಬನೂ ಮನಸ್ಸಿನಲ್ಲಿ ಕೂಡ ಇಂಥ ಕೆಲಸವನ್ನು ಯೋಚಿಲಾರನು. ನೂರು ಯೋಜನಗಳಷ್ಟು ಅಗಲವಾದ ಸಮುದ್ರವನ್ನು ಯಾವನು ತಾನೆ ನೆಗೆದಾನು? ರಾಕ್ಷಸರಿಂದ ಕಾಪಾಡಲ್ಪಟ್ಟ ಲಂಕೆಯನ್ನು ಯಾವನು ತಾನೇ ಅಲ್ಲಾಡಿಸಿಯಾನು ?

**ಭೃತ್ಯಕಾರ್ಯಂ ಹನುಮತಾ ಕೃತಂ ಸರ್ವಮಶೇಷತಃ ।**
**ಸುಗ್ರೀವಸ್ಯೇದೃಶೋ ಲೋಕೇ ನ ಭೂತೋ ನ ಭವಿಷ್ಯತಿ ॥ ೪॥**
**ಅಹಂ ಚ ರಘುವಂಶಶ್ಚ ಲಕ್ಷ್ಮಣಶ್ಚ ಕಪೀಶ್ವರಃ ।**
**ಜಾನಕ್ಯಾ ದರ್ಶನೇನಾದ್ಯ ರಕ್ಷಿತಾಃ ಸ್ಮೋ ಹನೂಮತಾ ॥ ೫॥**
**ಸರ್ವಥಾ ಸುಕೃತಂ ಕಾರ್ಯಂ ಜಾನಕ್ಯಾಃ ಪರಿಮಾರ್ಗಣಮ್ ।**
**ಸಮುದ್ರಂ ಮನಸಾ ಸ್ಮೃತ್ವಾ ಸೀದತೀವ ಮನೋ ಮಮ ॥ ೬॥**
**ಕಥಂ ನಕ್ರಝಷಾಕೀರ್ಣಂ ಸಮುದ್ರಂ ಶತಯೋಜನಮ್ ।**
**ಲಂಘಯಿತ್ವಾ ರಿಪುಂ ಹನ್ಯಾಂ ಕಥಂ ದ್ರಕ್ಷ್ಯಾಮಿ ಜಾನಕೀಮ್ ॥ ೭॥**

೪-೭. ಸುಗೀವನ ಸೇವಕನಾದ ಹನುಮಂತನು ಸೇವಾಕಾರ್ಯ ವನ್ನು ಪೂರ್ಣವಾಗಿ ಅನುಷ್ಠಿಸಿರುತ್ತಾನೆ. ಇಂಥ (ಸೇವಕನು) ಭೂಮಿಯಲ್ಲಿ ಹಿಂದೆ

ಇರಲಿಲ್ಲ. ಮುಂದೆ ಇರಲಾರನು. ನಾನು, ರಘುವಂಶ, ಲಕ್ಷ್ಮಣ, ಕಪಿರಾಜನಾದ ಸುಗ್ರೀವ-ಎಲ್ಲರೂ ಸೀತೆಯನ್ನು ಹನುಮಂತನು ಕಂಡು (ಹಿಡಿದದ್ದರಿಂದ) ಕಾಪಾಡಲ್ಪಟ್ಟೆವು. ಸೀತೆಯನ್ನು ಹುಡುಕಿದ್ದು ಎಲ್ಲ ರೀತಿಯಿಂದಲೂ ಒಳ್ಳೆಯ ಕೆಲಸವಾಯಿತು. (ಆದರೆ) ಸಮುದ್ರವನ್ನು ನೆನೆಸಿಕೊಂಡರೆ ನನ್ನ ಮನಸ್ಸು ಕುಸಿಯುವಂತಾಗಿದೆ. ಮೀನುಮೊಸಳೆಗಳಿಂದ ತುಂಬಿದ ನೂರುಯೋಜನದಗಲದ ಸಮುದ್ರವನ್ನು ದಾಟಿ ಶತ್ರುವನ್ನು ನಾನು ಹೇಗೆ ಕೊಂದೇನು? ಸೀತೆಯನ್ನು ಹೇಗೆ ಕಂಡೇನು?

**ಶ್ರುತ್ವಾ ತು ರಾಮವಚನಂ ಸುಗ್ರೀವಃ ಪ್ರಾಹ ರಾಘವಮ್।**
**ಸಮುದ್ರಂ ಲಂಘಯಿಷ್ಯಾಮೋ ಮಹಾನಕ್ರಝಷಾಕುಲಮ್ ॥ ೮॥**
**ಲಂಕಾಂ ಚ ವಿಧಮಿಷ್ಯಾಮೋ ಹನಿಷ್ಯಾಮೋಽದ್ಯ ರಾವಣಮ್ ।**
**ಚಿಂತಾಂ ತ್ಯಜ ರಘುಶ್ರೇಷ್ಠ ಚಿಂತಾ ಕಾರ್ಯವಿನಾಶಿನೀ ॥ ೯॥**
**ಏತಾನ್ ಪಶ್ಯ ಮಹಾಸತ್ವಾನ್ ಶೂರಾನ್ ವಾನರಪುಂಗವಾನ್ ।**
**ತ್ವತ್ಪ್ರಿಯಾರ್ಥಂ ಸಮುದ್ಯುಕ್ತಾನ್ ಪ್ರವೇಷ್ಟುಮಪಿ ಪಾವಕಮ್ ॥ ೧೦॥**

೮-೧೦. ರಾಮನ ಮಾತನ್ನು ಕೇಳಿ ಸುಗ್ರೀವನು ರಾಘವನನ್ನು ಕುರಿತು ಹೀಗೆಂದನು : 'ಎಲೈ ರಘುಶ್ರೇಷ್ಠನೆ, ದೊಡ್ಡ ಮೀನು ಮೊಸಳೆಗಳಿಂದ ತುಂಬಿದ ಸಮುದ್ರವನ್ನು ನೆಗೆಯೋಣ ; ಲಂಕೆಯನ್ನು ನಾಶಮಾಡೋಣ; ರಾವಣನನ್ನು ಕೊಲ್ಲೋಣ. ಎಲೈ ರಘೂತ್ತಮನೆ, ಚಿಂತೆಯನ್ನು ಬಿಡು. ಚಿಂತೆಯೆಂಬುದು ಎಲ್ಲಾ ಕೆಲಸಗಳನ್ನೂ ಹಾಳುಮಾಡುವದು. ಇದೊ, ಶೂರರೂ ಮಹಾಶಕ್ತಿಶಾಲಿಗಳೂ ಆದ ಕಪಿಶ್ರೇಷ್ಠರನ್ನು ನೋಡು. ಇವರುಗಳು ನಿನ್ನ ಹಿತಕ್ಕಾಗಿ ಅಗ್ನಿಪ್ರವೇಶವನ್ನು ಕೂಡ ಮಾಡಲು ಸಿದ್ಧರಾಗಿರುವರು.

**ಸಮುದ್ರತರಣೇ ಬುದ್ಧಿಂ ಕುರುಷ್ವ ಪ್ರಥಮಂ ತತಃ ।**
**ದೃಷ್ಟ್ವಾ ಲಂಕಾಂ ದಶಗ್ರೀವೋ ಹತ ಇತ್ಯೇವ ಮನ್ಮಹೇ ॥ ೧೧॥**
**ನ ಹಿ ಪಶ್ಯಾಮ್ಯಹಂ ಕಂಚಿತ್ ತ್ರಿಷು ಲೋಕೇಷು ರಾಘವ ।**
**ಗೃಹೀತಧನುಷೋ ಯಸ್ತೇ ತಿಷ್ಠೇದಭಿಮುಖೋ ರಣೇ ॥ ೧೨॥**
**ಸರ್ವಥಾ ನೋ ಜಯೋ ರಾಮ ಭವಿಷ್ಯತಿ ನ ಸಂಶಯಃ ।**
**ನಿಮಿತ್ತಾನಿ ಚ ಪಶ್ಯಾಮಿ ತಥಾ ಭೂತಾನಿ ಸರ್ವಶಃ ॥ ೧೩॥**

೧೧-೧೩. 'ಮೊದಲು ಸಮುದ್ರವನ್ನು ದಾಟುವ ಬಗ್ಗೆ ಮನಸ್ಸುಮಾಡು. ಲಂಕೆಯನ್ನು ಕಂಡದ್ದೇ ಆದರೆ ರಾವಣನು ನಾಶವಾದನೆಂದೇ ಭಾವಿಸುವೆವು. ರಾಘವನೆ, ಈ ಮೂರು ಲೋಕಗಳಲ್ಲಿಯೂ ನಿನಗೆ ಎದುರಾಗಿ ಯುದ್ಧದಲ್ಲಿ

ಧನುಸ್ಸನ್ನು ಹಿಡಿದು ನಿಲ್ಲುವ ಯಾವನನ್ನೂ ನಾನು ಕಾಣೆನು, ಎಲೈ ರಾಮನೆ, ನಮಗೆ ಜಯವು ಖಂಡಿತ' ಸಂಶಯವಿಲ್ಲ. ಅಂಥ ಶಕುನಗಳನ್ನೇ ಸುತ್ತಲೂ ನೋಡುತ್ತಿರುವೆನು.

**ಸುಗ್ರೀವವಚನಂ ಶ್ರುತ್ವಾ ಭಕ್ತಿವೀರ್ಯಸಮನ್ವಿತಮ್ ।**
**ಅಂಗೀಕೃತ್ಯಾಬ್ರವೀದ್ರಾಮೋ ಹನೂಮಂತಂ ಪುರಃಸ್ಥಿತಮ್ ॥ ೧೪ ॥**
**ಯೇನ ಕೇನ ಪ್ರಕಾರೇಣ ಲಂಘಯಾಮೋ ಮಹಾರ್ಣವಮ್ ।**
**ಲಂಕಾಸ್ವರೂಪಂ ಮೇ ಬ್ರೂಹಿ ದುಸ್ಸಾಧ್ಯಂ ದೇವದಾನವೈಃ ॥ ೧೫ ॥**
**ಜ್ಞಾತ್ವಾ ತಸ್ಯ ಪ್ರತೀಕಾರಂ ಕರಿಷ್ಯಾಮಿ ಕಪೀಶ್ವರ ।**

೧೪-೧೫. ಸುಗ್ರೀವನ ಭಕ್ತಿ ಹಾಗೂ ಪೌರುಷಗಳಿಂದೊಡಗೂಡಿದ ಮಾತನ್ನು ಕೇಳಿ ಒಪ್ಪಿಕೊಂಡು ಎದುರಿಗೆ ನಿಂತಿದ್ದ ಹನುಮಂತನನ್ನು ಕುರಿತು ರಾಮನಿಂತೆಂದನು: 'ಏನಾದರೊಂದು ರೀತಿಯಿಂದ ಸಮುದ್ರವನ್ನು ದಾಟೋಣ. ಕಪೀಶ್ವರನೆ, ನೀನಾದರೋ, ಈಗ ನನಗೆ ದೇವದಾನವರಿಗೂ ಜಯಿಸಲು ದುಸ್ಸಾಧ್ಯವಾದಂಥ ಆ ಲಂಕೆಯ ಸ್ವರೂಪವನ್ನು ಹೇಳು. ಅದು ತಿಳಿದಮೇಲೆ ಆತನಿಗೆ (ರಾವಣನಿಗೆ) ತಕ್ಕದ್ದನ್ನು ಕೈಗೊಳ್ಳಲಿರುವೆನು.

**ಶ್ರುತ್ವಾ ರಾಮಸ್ಯ ವಚನಂ ಹನೂಮಾನ್ ವಿನಯಾನ್ವಿತಃ ।**
**ಉವಾಚ ಪ್ರಾಂಜಲಿರ್ದೇವ ಯಥಾ ದೃಷ್ಟಂ ಬ್ರವೀಮಿ ತೇ ॥ ೧೬॥**
**ಲಂಕಾ ದಿವ್ಯಾ ಪುರೀ ದೇವ ತ್ರಿಕೂಟಶಿಖರೇ ಸ್ಥಿತಾ।**
**ಸ್ವರ್ಣಪ್ರಾಕಾರಸಹಿತಾ ಸ್ವರ್ಣಾಟ್ಟಾಲಕಸಂಯುತಾ ॥ ೧೭॥**
**ಪರಿಖಾಭಿಃ ಪರಿವೃತಾ ಪೂರ್ಣಾಭಿರ್ನಿರ್ಮಲೋದಕೈಃ ।**
**ನಾನೋಪವನಶೋಭಾಢ್ಯಾ ದಿವ್ಯವಾಪೀಭಿರಾವೃತಾ । ॥ ೧೮॥**
**ಗೃಹೈರ್ವಿಚಿತ್ರಶೋಭಾಢ್ಯೈಃ ಮಣಿಸ್ತಂಭಮಯೈಃ ಶುಭೈಃ**
**ಪಶ್ಚಿಮದ್ವಾರಮಾಸಾದ್ಯ ಗಜವಾಹಾಃ ಸಹಸ್ರಶಃ ॥ ೧೯॥**

೧೬-೧೯. ರಾಮನ ಮಾತನ್ನು ಕೇಳಿ ಹನುಮಂತನು ವಿನಯಾನ್ವಿತನಾಗಿ ಕೈಮುಗಿದುಕೊಂಡು ಹೀಗೆಂದನು : 'ಸ್ವಾಮಿ, ನಾನು ಕಂಡಂತೆಯೇ ನಿನಗೆ ಹೇಳುವೆನು. ಲಂಕೆಯೆಂಬುದು ತ್ರಿಕೂಟಪರ್ವತದ ಶಿಖರದ ಮೇಲಿರುವ ದಿವ್ಯವಾದ ಪಟ್ಟಣವು ಅದು ಚಿನ್ನದ ಕೋಟೆ, ಉಪ್ಪರಿಗೆ ಹಾಗೂ ಶುದ್ಧವಾದ ನೀರಿನಿಂದ ತುಂಬಿರುವ ಅಗಳು (ಕಾಲುವೆ)ಗಳಿಂದ ಕೂಡಿರುವದು. ಅನೇಕ ಕೈದೋಟಗಳಿಂದ ಶೋಭಾಯಮಾನವಾಗಿರುವದು. ದಿವ್ಯವಾದ ಬಾವಿಗಳೂ ಇವೆ. ಮಣಿಮಯವಾದ

ಶುಭವನ್ನು (ಸೂಚಿಸುವ ಆಕಾರದ) ಕಂಬಗಳಿಂದ ಕೂಡಿದ ಹಾಗೂ ವಿಚಿತ್ರವಾದ ಕಾಂತಿಯಿಂದ ಕೂಡಿದ ಮನೆಗಳಿಂದ ತುಂಬಿದೆ. ಪಶ್ಚಿಮದಿಕ್ಕಿನ ಬಾಗಿಲಿನಲ್ಲಿ ಸಾವಿರಾರು ಆನೆಯಸವಾರರು (ತಮ್ಮ ವಾಹನಗಳೊಡನೆ) ಸನ್ನದ್ಧರಾಗಿರುವರು.

**ಉತ್ತರೇ ದ್ವಾರಿ ತಿಷ್ಠಂತಿ ಸಾಶ್ವವಾಹಾಃ ಸಪತ್ತಯಃ ।**
**ತಿಷ್ಠಂತ್ಯರ್ಬುದಸಂಖ್ಯಾಕಾ ಪ್ರಾಚ್ಯಾಮಪಿ ತಥೈವ ಚ ॥ ೨೦॥**
**ರಕ್ಷಿಣೋ ರಾಕ್ಷಸಾ ವೀರ ದ್ವಾರಂ ದಕ್ಷಿಣಮಾಶ್ರಿತಾಃ ।**
**ಮಧ್ಯಕಕ್ಷೇಽಪ್ಯಸಂಖ್ಯಾತಾ ಗಜಾಶ್ವರಥಪತ್ತಯಃ ॥ ೨೧ ॥**
**ರಕ್ಷಯಂತಿ ಸದಾ ಲಂಕಾಂ ನಾನಾಸ್ತ್ರಕುಶಲಾಃ ಪ್ರಭೋ ।**
**ಸಂಕ್ರಮೈರ್ವಿವಿಧೈರ್ಲಂಕಾ ಶತಘ್ನೀಭಿಶ್ಚ ಸಂಯುತಾ ॥ ೨೨ ॥**

೨೦-೨೨. 'ಎಲೈ ವೀರನೆ (ಕೇಳು). ಉತ್ತರದ ಬಾಗಿಲಿನಲ್ಲಿ ಕುದುರೆಗಳ ಸವಾರರೂ ಸಿಪಾಯಿಗಳೂ ಸಿದ್ಧರಾಗಿ ನಿಂತಿರುವರು. ಹಾಗೆಯೇ ಅರ್ಬುದದಷ್ಟು ಸಂಖ್ಯೆಯ ಸವಾರರು ಪೂರ್ವದಿಕ್ಕಿನ ಬಾಗಿಲಿನಲ್ಲಿಯೂ ಸನ್ನದ್ಧರಾಗಿರುವರು. ಇನ್ನು ದಕ್ಷಿಣದ ಬಾಗಿಲಿನಲ್ಲಿ ಕಾವಲುಗಾರರಾದ ರಾಕ್ಷಸರು ನಿಂತಿರುವರು. (ಲಂಕೆಯ) ಮಧ್ಯದ ವಿಭಾಗಗಲ್ಲಿಯೂ ಲೆಕ್ಕವಿಲ್ಲದಷ್ಟು ಆನೆ, ಕುದುರೆ, ರಥ, ಕಾಲಾಳುಗಳು ಇದ್ದು ಕೊಂಡಿರುವರು. ಪ್ರಭುವೆ, ಇಂಥ ನಾನಾಸ್ತ್ರಗಳ ಕುಶಲರಾದ ರಕ್ಷಕರು ಯಾವಾಗಲೂ ಲಂಕೆಯನ್ನು ಕಾಪಾಡುತ್ತಿರುವರು. ಲಂಕೆಯು ನಾನಾವಿಧವಾದ (ರಕ್ಷಣೆಗಳ ಸಾಮಗ್ರಿಗಳಿಂದ) ದಾಟುವಂಥದ್ದಾಗಿಯೂ ನೂರಾರು ಜನರನ್ನು ಕೊಲ್ಲುವಂಥ (ಆಯುಧಗಳಿಂದ) ಕೂಡಿದ್ದಾಗಿಯೂ ಇರುವದು.

**ಏವಂ ಸ್ಥಿತೇಽಪಿ ದೇವೇಶ ಶೃಣು ಮೇ ತತ್ರ ಚೇಷ್ಟಿತಮ್ ।**
**ದಶಾನನಬಲೌಘಸ್ಯ ಚತುರ್ಥಾಂಶೋ ಮಯಾ ಹತಃ ॥ ೨೩ ॥**
**ದಗ್ಧ್ವಾ ಲಂಕಾಂ ಪುರೀಂ ಸ್ವರ್ಣಪ್ರಾಸಾದೋ ಧರ್ಷಿತೋ ಮಯಾ ।**
**ಶತಘ್ನ್ಯಃ ಸಂಕ್ರಮಾಶ್ಚೈವ ನಾಶಿತಾ ಮೇ ರಘೂತ್ತಮ ॥ ೨೪ ॥**
**ದೇವ ತ್ವದ್ದರ್ಶನಾದೇವ ಲಂಕಾ ಭಸ್ಮೀಕೃತಾ ಭವೇತ್ ।**
**ಪ್ರಸ್ಥಾನಂ ಕುರು ದೇವೇಶ ಗಚ್ಛಾಮೋ ಲವಣಾಂಬುಧೇಃ ॥ ೨೫ ॥**
**ತೀರಂ ಸಹ ಮಹಾವೀರ್ಯೈಃ ವಾನರೌಘೈಃ ಸಮಂತತಃ ॥**

೨೩-೨೫. 'ಹೀಗಿದ್ದರೂ ಎಲೈ ದೇವೇಶನೆ, ನಾನು ಅಲ್ಲಿ ಮಾಡಿದ ಕಾರ್ಯವೇನೆಂಬುದನ್ನು ಕೇಳು. ರಾವಣನ ಬಲಶಕ್ತಿಯ ನಾಲ್ಕನೆಯ ಒಂದು ಭಾಗವನ್ನು ನಾನು ನಾಶಗೊಳಿಸಿದೆನು. ಲಂಕಾಪಟ್ಟಣವನ್ನು ಸುಟ್ಟು ಚಿನ್ನದ ಗೋಪುರ

ವನ್ನು ಕೆಡವಿಬಿಟ್ಟೆನು. ರಘುಶ್ರೇಷ್ಠನೆ, ಶತಘ್ನಿಗಳನ್ನೂ ರಕ್ಷಣಾವ್ಯವಸ್ಥೆಗಳನ್ನೂ ನಾನು ನಾಶಮಾಡಿದೆನು. ಸ್ವಾಮಿ, ನೀನು ನೋಡಿದಮಾತ್ರದಿಂದಲೇ ಲಂಕೆಯು ಸುಟ್ಟು ಬೂದಿಯಾದೀತು. ಆದ್ದರಿಂದ ನೀವು ಹೊರಡಿರಿ. ಸುತ್ತುವರಿದಿರುವ ಮಹಾವೀರ ರಾದ ಕಪಿಗಳ ಗುಂಪಿನೊಡನೆ ಸಮುದ್ರದ ದಡಕ್ಕೆ ಹೋಗೋಣ.'

**ಶ್ರುತ್ವಾ ಹನುಮತೋ ವಾಕ್ಯಮುವಾಚ ರಘುನಂದನಃ ।**
**ಸುಗ್ರೀವ ಸೈನಿಕಾನ್ ಸರ್ವಾನ್ ಪ್ರಸ್ಥಾನಾಯಾಭಿನೋದಯ ॥ ೨೬ ॥**
**ಇದಾನೀಮೇವ ವಿಜಯೋ ಮುಹೂರ್ತಃ ಪರಿವರ್ತತೇ ।**
**ಅಸ್ಮಿನ್ ಮುಹೂರ್ತೇ ಗತ್ವಾಹಂ ಲಂಕಾಂ ರಾಕ್ಷಸಸಂಕುಲಾಮ್ ॥ ೨೭ ॥**
**ಸಪ್ರಾಕಾರಾಂ ಸುದುರ್ಧರ್ಷಾಂ ನಾಶಯಾಮಿ ಸರಾವಣಾಮ್ ।**
**ಆನೇಷ್ಯಾಮಿ ಚ ಸೀತಾಂ ಮೇ ದಕ್ಷಿಣಾಕ್ಷಿ ಸ್ಫುರತ್ಯಧಃ ॥ ೨೮ ॥**

೨೬-೨೮. ಹನುಮಂತನ ಮಾತನ್ನು ಕೇಳಿ ರಾಮನಿಂತೆಂದು : 'ಎಲೈ ಸುಗ್ರೀವನೆ, ಎಲ್ಲಾ ಸೈನಿಕರನ್ನೂ ಹೊರಡುವಂತೆ ಪ್ರೇರಿಸುವವನಾಗು. ಈಗಲೇ ವಿಜಯವೆಂಬ ಮುಹೂರ್ತವು ಒದಗಿಬಂದಿರುತ್ತದೆ. ಈ ಮುಹೂರ್ತದಲ್ಲಿ ನಾನು ಲಂಕೆಗೆ ಹೊರಟು ರಾಕ್ಷಸರಿಂದ ತುಂಬಿದ, ಹಾಗೂ ಪ್ರಾಕಾರಗಳಿಂದಾವೃತವಾದ, ಜಯಿಸಲು ಕಷ್ಟಸಾಧ್ಯವಾದ, ರಾವಣನಿಂದ ಕೂಡಿದ (ಆ ನಗರಿಯನ್ನು) ನಾಶಗೊಳಿಸುವೆನು. ಸೀತೆಯನ್ನು ಕರೆತರುವೆನು. ನನ್ನ ಬಲಗಣ್ಣು ಹಾರುತ್ತಿದೆ.

**ಪ್ರಯಾತು ವಾಹಿನೀ ಸರ್ವಾ ವಾನರಾಣಾಂ ತರಸ್ವಿನಾಮ್ ।**
**ರಕ್ಷಂತು ಯೂಥಪಾಃ ಸೇನಾಮಗ್ರೇ ಪೃಷ್ಠೇ ಚ ಪಾರ್ಶ್ವಯೋಃ ॥ ೨೯ ॥**
**ಹನೂಮಂತಮಥಾರುಹ್ಯ ಗಚ್ಛಾಮ್ಯಗ್ರೇಽಙ್ಗದಂ ತತಃ ।**
**ಆರುಹ್ಯ ಲಕ್ಷ್ಮಣೋ ಯಾತು ಸುಗ್ರೀವ ತ್ವಂ ಮಯಾಸಹ ॥ ೩೦ ॥**
**ಗಜೋ ಗವಾಕ್ಷೋ ಗವಯೋ ಮೈಂದೋ ದ್ವಿವಿದ ಏವ ಚ ।**
**ನಲೋ ನೀಲಃ ಸುಷೇಣಶ್ಚ ಜಾಂಬವಾಂಶ್ಚ ತಥಾಪರೇ ॥ ೩೧ ॥**
**ಸರ್ವೇ ಗಚ್ಛಂತು ಸರ್ವತ್ರ ಸೇನಾಯಾಃ ಶತ್ರುಘಾತಿನಃ ।**
**ಇತ್ಯಾಜ್ಞಾಪ್ಯ ಹರೀನ್ ರಾಮಃ ಪ್ರತಸ್ಥೇ ಸಹಲಕ್ಷ್ಮಣಃ ॥ ೩೨ ॥**
**ಸುಗ್ರೀವಸಹಿತೋ ಹರ್ಷಾತ್ ಸೇನಾಮಧ್ಯಗತೋ ವಿಭುಃ ॥**

೨೯-೩೨. 'ವೇಗಶಾಲಿಗಳಾದ ಕಪಿಗಳ ಸೈನ್ಯವೆಲ್ಲವೂ ಹೊರಡಲಿ. ಸೇನಾಪತಿಗಳು ಸೈನ್ಯವನ್ನು ಹಿಂದುಗಡೆ, ಮುಂದುಗಡೆ ಹಾಗೂ ಅಕ್ಕಪಕ್ಕಗಳಲ್ಲಿ ಕಾಪಾಡುತ್ತಿರಲಿ. ನಾನು ಹನುಮಂತನನ್ನೇರಿ ಮುಂದೆ ಹೊರಡುವೆನು. ಅನಂತರ ಅಂಗದನನ್ನು ಏರಿ ಲಕ್ಷ್ಮಣನು ಬರಲಿ. ಎಲೈ ಸುಗ್ರೀವನೆ, ನೀನಾದರೊ, ನನ್ನೊಡನೆ

ಬಾ. ಗಜ, ಗವಾಕ್ಷ, ಗವಯ, ಮೈಂದ, ದ್ವಿವಿದ, ನಲ, ನೀಲ, ಸುಷೇಣ, ಜಾಂಬವಂತ ಹಾಗೂ ಇತರರು ಎಲ್ಲರೂ ಹೊರಡಲಿ. ಶತ್ರು ಸಂಹಾರಕರಾದ ಸೇನಾಪ್ರಂದದವರೆಲ್ಲ ತೆರಳಲಿ'- ಹೀಗೆ ಕಪಿಗಳಿಗೆ ಅಪ್ಪಣೆಮಾಡಿ ಸುಗ್ರೀವನೊಡನೆ ಸಂತೋಷದಿಂದ ಸೇನೆಯ ನಡುವೆ ಕೂಡಿ ಲಕ್ಷ್ಮಣಸಮೇತನಾಗಿ ರಾಮನು ಹೊರಟನು.

**ವಾರಣೇಂದ್ರನಿಭಾಃ ಸರ್ವೇ ವಾನರಾಃ ಕಾಮರೂಪಿಣಃ ।**
**ಕ್ಷ್ವೇಲಂತಃ ಪರಿಗರ್ಜಂತೋ ಜಗ್ಮುಸ್ತೇ ದಕ್ಷಿಣಾಂ ದಿಶಾಮ್ ॥ ೩೩ ॥**
**ಭಕ್ಷಯಂತೋ ಯಯುಃ ಸರ್ವೇ ಫಲಾನಿ ಚ ಮಧೂನಿ ಚ ।**
**ಬ್ರುವಂತೋ ರಾಘವಸ್ಯಾಗ್ರೇ ಹನಿಷ್ಯಾಮೋಽದ್ಯ ರಾವಣಮ್ ॥ ೩೪ ॥**
**ಏವಂ ತೇ ವಾನರಶ್ರೇಷ್ಠಾ ಗಚ್ಛಂತ್ಯತುಲವಿಕ್ರಮಾಃ ।**

೩೩-೩೪. ಇಚ್ಛಾರೂಪವನ್ನು ಧರಿಸಬಲ್ಲ ಆ ಕಪಿಗಳೆಲ್ಲರೂ ಆನೆಗಳಂತೆ ಕಂಡು ಬರುತ್ತಿದ್ದರು. ಘರ್ಜಿಸುತ್ತಾ ಕಿರುಚಾಡುತ್ತಾ ದಕ್ಷಿಣದಿಕ್ಕನ್ನು ಕುರಿತು ಹೊರಟವರಾಗಿ ಕಂದಮೂಲಫಲಗಳನ್ನೂ ಜೇನನ್ನೂ ತಿನ್ನುತ್ತಾ ಹೊರಟರು. ರಾಮನ ಮುಂದೆ 'ನಾವು ಇದೊ, ರಾವಣನನ್ನು ಕೊಲ್ಲುವೆವು' ಎಂದು ಹೇಳುತ್ತಾ ಆ ಅಪಾರಪರಾಕ್ರಮಿಗಳಾದ ಕಪಿಗಳು ಮುನ್ನಡೆದರು.

**ಹರಿಭ್ಯಾಮುಹ್ಯಮಾನೌ ತೌ ಶುಶುಭಾತೇ ರಘೂತ್ತಮೌ ।**
**ನಕ್ಷತ್ರೈಃ ಸೇವಿತೌ ಯದ್ವಚ್ಚಂದ್ರಸೂರ್ಯಾವಿವಾಂಬರೇ ॥ ೩೫ ॥**
**ಆವೃತ್ಯ ಪೃಥಿವೀಂ ಕೃತ್ಸ್ನಾಂ ಜಗಾಮ ಮಹತೀ ಚಮೂಃ ।**
**ಪ್ರಸ್ಫೋಟಯಂತಃ ಪುಚ್ಛಾಗ್ರಾನ್ ಉದ್ವಹಂತಶ್ಚ ಪಾದಪಾನ್ ॥ ೩೬ ॥**
**ಶೈಲಾನಾರೋಹಯಂತಶ್ಚ ಜಗ್ಮುರ್ಮಾರುತವೇಗತಃ ।**
**ಅಸಂಖ್ಯಾತಾಶ್ಚ ಸರ್ವತ್ರ ವಾನರಾಃ ಪರಿಪೂರಿತಾಃ ॥ ೩೭ ॥**
**ಗತಾ ಚಮೂರ್ದಿವಾ ರಾತ್ರಂ ಕ್ವಚಿನ್ನಾಸಜ್ಜತ ಕ್ಷಣಮ್ ।**

೩೫-೩೭. ಇಬ್ಬರು ಕಪಿಗಳನ್ನೇರಿದ ಆ ರಘುಶ್ರೇಷ್ಠರಾದ ರಾಮ-ಲಕ್ಷ್ಮಣರು ಆಕಾಶದಲ್ಲಿ ನಕ್ಷತ್ರಗಳಿಂದ ಸೇವಿಸಲ್ಪಡುತ್ತಿರುವ ಚಂದ್ರಸೂರ್ಯರಂತೆ ವಿರಾಜಮಾನ ರಾಗಿದ್ದರು. ಇಡಿಯ ಭೂಮಿಯನ್ನೆಲ್ಲ ತುಂಬಿದ್ದ ಭಾರಿಯಾದ ಸೈನ್ಯವು ಹೋಗುತ್ತಿತ್ತು. ಕಪಿಗಳು ಆಗಾಗ ಬಾಲದ ತುದಿಗಳನ್ನು ಕೊಡವುತ್ತಾ ಮರಗಳನ್ನು ಹತ್ತುತ್ತಾ ಬೆಟ್ಟಗಳನ್ನೇರುತ್ತಾ ಗಾಳಿಯಂತೆ ವೇಗದಿಂದ ಹೋಗುತ್ತಿದ್ದರು. ಎಲ್ಲೆಲ್ಲಿಯೂ ಕಪಿಗಳು ಲೆಕ್ಕವಿಲ್ಲದಷ್ಟು ತುಂಬಿದವರಾಗಿದ್ದರು. ಹಗಲೂ ರಾತ್ರಿಯೂ ಕ್ಷಣಕಾಲವೂ ವಿಶ್ರಾಂತಿಯಿಲ್ಲದೆ ಸೈನ್ಯವು ಹೊರಟಿತು.

**ಕಾನನಾನಿ ವಿಚಿತ್ರಾಣಿ ಪಶ್ಯನ್ ಮಲಯಸಹ್ಯಯೋಃ ।**
**ತೇ ಸಹ್ಯಂ ಸಮತಿಕ್ರಮ್ಯ ಮಲಯಂ ಚ ತಥಾ ಗಿರೀನ್ ॥ ೩೮ ॥**
**ಆಯಯುಶ್ಚಾನುಪೂರ್ವ್ಯೇಣ ಸಮುದ್ರಂ ಭೀಮನಿಃಸ್ವನಮ್ ।**
**ಅವತೀರ್ಯ ಹನೂಮಂತಂ ರಾಮಃ ಸುಗ್ರೀವಸಂಯುತಃ ॥ ೩೯ ॥**
**ಸಲಿಲಾಭ್ಯಾಶಮಾಸಾದ್ಯ ರಾಮೋ ವಚನಮಬ್ರವೀತ್ ।**

೩೮-೩೯. ಮಲಯ-ಸಹ್ಯಪರ್ವತಗಳ ವಿಚಿತ್ರವಾದ ಕಾಡುಗಳನ್ನು ನೋಡುತ್ತಾ ಅವರುಗಳು ಸಹ್ಯ-ಮಲಯಾದ್ರಿಗಳನ್ನು ದಾಟಿ ಹಾಗೂ ಇನ್ನೂ ಕೆಲವು ಬೆಟ್ಟಗಳನ್ನೆಲ್ಲ ಹಾದು ಕ್ರಮವಾಗಿ ಭಯಂಕರವಾದ ಶಬ್ದದಿಂದ ಭೋರ್ಗರೆಯುತ್ತಿರುವ ಸಮುದ್ರದ ಬಳಿಗೆ ಬಂದರು. ಹನುಮಂತನ (ಹೆಗಲಿನಿಂದ) ಕೆಳಗಿಳಿದ ರಾಮನು ಸುಗ್ರೀವ ಸಹಿತನಾಗಿ ನೀರನ್ನು ಸಮೀಪಿಸಿದವನಾಗಿ ಹೀಗೆ ಹೇಳಿದನು.

**ಆಗತಾಃ ಸ್ಮೋ ವಯಂ ಸರ್ವೇ ಸಮುದ್ರಂ ಮಕರಾಲಯಮ್ ।**
**ಇತೋ ಗಂತುಮಶಕ್ಯಂ ನೋ ನಿರುಪಾಯೇನ ವಾನರಾಃ ॥ ೪೦ ॥**
**ಅತ್ರ ಸೇನಾನಿವೇಶೋಽಸ್ತು ಮಂತ್ರಯಾಮೋಽಸ್ಯ ತಾರಣೇ ।**

೪೦. ''ಮೊಸಳೆಗಳಿಗೆ ವಾಸಸ್ಥಾನವಾದ ಸಮುದ್ರದ ಬಳಿಗೆ ನಾವೆಲ್ಲರೂ ಬಂದಿರುತ್ತೇವೆ. ಆದರೆ ಇಲ್ಲಿಂದ ಮುಂದಕ್ಕೆ ಸಾಗಲು ಯಾವ ಸಾಧನವೂ ಇಲ್ಲದೆ ಸಾಧ್ಯವಾಗುವಂತೆ ಇಲ್ಲ. ಎಲೈ ಕಪಿಗಳಿರಾ, ಇಲ್ಲಿಯೇ ಸೈನ್ಯವು ಬೀಡುಬಿಟ್ಟಿರಲಿ ; ಈ ಸಮುದ್ರವನ್ನು ದಾಟುವದು ಹೇಗೆಂಬ ಬಗ್ಗೆ ಆಲೋಚಿಸೋಣ.''

**ಶ್ರುತ್ವಾ ರಾಮಸ್ಯ ವಚನಂ ಸುಗ್ರೀವಃ ಸಾಗರಾಂತಿಕೇ।**
**ಸೇನಾಂ ನ್ಯವೇಶಯತ್ ಕ್ಷಿಪ್ರಂ ರಕ್ಷಿತಾಂ ಕಪಿಕುಂಜರೈಃ ॥ ೪೧ ॥**
**ತೇ ಪಶ್ಯಂತೋ ವಿಷೇದುಸ್ತಂ ಸಾಗರಂ ಭೀಮದರ್ಶನಮ್।**
**ಮಹೋನ್ನತತರಂಗಾಢ್ಯಂ ಭೀಮನಕ್ರಭಯಂಕರಮ್ ॥ ೪೨ ॥**
**ಅಗಾಧಂ ಗಗನಾಕಾರಂ ಸಾಗರಂ ವೀಕ್ಷ್ಯ ದುಃಖಿತಾಃ ।**
**ತರಿಷ್ಯಾಮಃ ಕಥಃ ಘೋರಂ ಸಾಗರಂ ವರುಣಾಲಯಮ್ ॥ ೪೩ ॥**
**ಹಂತವ್ಯೋಽಸ್ಮಾಭಿರದ್ಯೈವ ರಾವಣೋ ರಾಕ್ಷಸಾಧಮಃ ।**
**ಇತಿ ಚಿಂತಾಕುಲಾಃ ಸರ್ವೇ ರಾಮಪಾರ್ಶ್ವೇ ವ್ಯವಸ್ಥಿತಾಃ ॥ ೪೪ ॥**

೪೧-೪೪. ರಾಮನ ಮಾತನ್ನು ಕೇಳಿ ಸುಗ್ರೀವನು ಸಮುದ್ರದ (ದಡ) ಸಮೀಪದಲ್ಲಿ ಕಪಿಶ್ರೇಷ್ಠರಿಂದ ರಕ್ಷಿಸಲ್ಪಟ್ಟಿರುವ ಸೈನ್ಯವನ್ನು ನೆಲೆಗೊಳಿಸಿದನು. ಅವರುಗಳಾದರೊ, ಭಯಂಕರನೋಟವುಳ್ಳ ಸಮುದ್ರವನ್ನು ಕಂಡು ವಿಷಾದವನ್ನು

ಹೊಂದಿದರು. ಹಾಗೂ ಅತಿ ಎತ್ತರವಾದ ಅಲೆಗಳಿಂದ ಕೂಡಿದ, ಭಾರಿಯ ಮೊಸಳೆಗಳಿಂದ ಹೆದರಿಕೆಯುಂಟುಮಾಡುವ, ಆಳವಾದ, ಆಕಾಶದಂತೆ ಎಲ್ಲೆಲ್ಲೂ ಹರಡಿರುವ ಸಾಗರವನ್ನು ಕಂಡು ದುಃಖಿತರಾಗಿ, ವರುಣನ ವಾಸಸ್ಥಾನವಾದ ಘೋರವಾದ ಈ ಸಮುದ್ರವನ್ನು ಹೇಗೆ ದಾಟಿಯೇವು ? ನಾವು ಈಗಲೆ ರಾಕ್ಷಸರಲ್ಲಿ ಕೀಳಾದವನಾದ ರಾವಣನನ್ನು ಕೊಲ್ಲಬೇಕಾಗಿದೆ- ಎಂದು ಚಿಂತಾಕ್ರಾಂತರಾಗಿ ಎಲ್ಲರೂ ರಾಮನ ಪಕ್ಕದಲ್ಲಿ ನಿಂತುಕೊಂಡರು.

**ರಾಮಃ ಸೀತಾಮನುಸ್ಮೃತ್ಯ ದುಃಖೇನ ಮಹತಾ ವೃತಃ।**
**ವಿಲಪ್ಯ ಜಾನಕೀಂ ಸೀತಾಂ ಬಹುಧಾ ಕಾರ್ಯಮಾನುಷಃ ॥ ೪೫ ॥**
**ಅದ್ವಿತೀಯಶ್ಚಿದಾತ್ಮೈಕಃ ಪರಮಾತ್ಮಾ ಸನಾತನಃ ।**
**ಯಸ್ತು ಜಾನಾತಿ ರಾಮಸ್ಯ ಸ್ವರೂಪಂ ತತ್ವತೋ ಜನಃ ॥ ೪೬ ॥**
**ತಂ ನ ಸ್ಪೃಶತಿ ದುಃಖಾದಿ ಕಿಮುತಾನಂದಮವ್ಯಯಮ್ ।**
**ದುಃಖಹರ್ಷಭಯಕ್ರೋಧಲೋಭಮೋಹಮದಾದಯಃ ॥ ೪೭ ॥**
**ಅಜ್ಞಾನಲಿಂಗಾನ್ಯೇತಾನಿ ಕುತಃ ಸಂತಿ ಚಿದಾತ್ಮನಿ ।**

೪೫-೪೭. ರಾಮನು ಸೀತೆಯನ್ನು ನೆನೆಸಿಕೊಂಡು ಹೆಚ್ಚಿನ ದುಃಖದಿಂದ ಕೂಡಿದವನಾಗಿ ಸೀತೆಗಾಗಿ ಬಹಳವಾಗಿ ಅಳುವವನಾಗಿ ತನ್ನ ಮಾನುಷಭಾವವ (ತೋರಿಸಿಕೊಂಡನು). ಆದರೆ ಅದ್ವಿತೀಯನೂ ಚಿದಾತ್ಮರೂಪನೂ ಏಕನೂ ಸನಾತನನೂ ಆದ ಪರಮಾತ್ಮನೇ ಅವನಾಗಿರುವನು. ಹಾಗೆಂದು (ಅವನನ್ನು) ಯಾವನು ಅರಿತು ಕೊಂಡಿರುವನೋ ಅವನನ್ನು ದುಃಖಾದಿಗಳು ಮುಟ್ಟುವದಿಲ್ಲ. ಹೀಗಿರುವಲ್ಲಿ ಆನಂದನೂ ಅವ್ಯಯನೂ ಆದ (ರಾಮನನ್ನು) ದುಃಖ, ಸಂತೋಷ, ಭಯ, ಕೋಪ, ಜಿಪುಣತನ, ಮೋಹ, ಮದಾದಿಗಳು ಹೇಗೆತಾನೆ ಮುಟ್ಟಿಯಾವು ? ಇವೆಲ್ಲವೂ ಅಜ್ಞಾನದ ಕುರುಹುಗಳೇ ಆಗಿದ್ದು ಚಿದಾತ್ಮನಾದ (ರಾಮನಲ್ಲಿ) ಹೇಗೆ ಇರಬಲ್ಲವು ?

**ದೇಹಾಭಿಮಾನಿನೋ ದುಃಖಂ ನ ದೇಹಸ್ಯ ಚಿದಾತ್ಮನಃ ।**
**ಸಂಪ್ರಸಾದೇ ದ್ವಯಾಭಾವಾತ್ ಸುಖಮಾತ್ರಂ ಹಿ ದೃಶ್ಯತೇ ॥ ೪೮ ॥**
**ಬುಧ್ಯಾದ್ಯಭಾವಾತ್ ಸಂಶುದ್ಧೇ ದುಃಖಂ ತತ್ರ ನ ದೃಶ್ಯತೇ ।**
**ಅತೋ ದುಃಖಾದಿಕಂ ಸರ್ವಂ ಬುದ್ಧೇರೇವ ನ ಸಂಶಯಃ ॥ ೪೯ ॥**
**ರಾಮಃ ಪರಾತ್ಮಾ ಪುರುಷಃ ಪುರಾಣೋ**
**ನಿತ್ಯೋದಿತೋ ನಿತ್ಯಸುಖೋ ನಿರೀಹಃ ।**
**ತಥಾಪಿ ಮಾಯಾಗುಣಸಂಗತೋಽಸೌ**
**ಸುಖೀವ ದುಃಖೀವ ವಿಭಾವ್ಯತೇಽಬುಧೈಃ ॥ ೫೦ ॥**

೪೮-೫೦. ದೇಹವು ತಾನೆಂದುಕೊಂಡಿರುವವನಿಗೆ ದುಃಖವೇ ಹೊರತು ದೇಹಕ್ಕಾಗಲಿ, ಚಿದಾತ್ಮನಿಗಾಗಲಿ ಅಲ್ಲ. ಏಕೆಂದರೆ ಸುಷುಪ್ತಿಯಲ್ಲಿ ದೇಹವಾಗಲಿ, ದೇಹಾಭಿಮಾನಿಯಾಗಲಿ, ಇಲ್ಲವಾಗಲು ಸುಖವೊಂದೇ ಕಂಡುಬರುತ್ತಿದೆ. ಅಲ್ಲಿ ಬುದ್ಧ್ಯಾದಿಗಳು ಯಾವವೂ ಇಲ್ಲವಾದ್ದರಿಂದ ಸಂಶುದ್ಧ ಆತ್ಮನಲ್ಲಿ ಅಲ್ಲಿ ದುಃಖ ಏರುವದಿಲ್ಲ. ಆದ್ದರಿಂದ ದುಃಖಾದಿಗಳೆಲ್ಲವೂ ಬುದ್ಧಿಯ (ಗುಣ)ಗಳೇ ಹೊರತು ಬೇರೆಯಲ್ಲ. ಈ ಬಗ್ಗೆ ಸಂಶಯವಿಲ್ಲ. ರಾಮನು ಪರಾತ್ಮನೂ ಪುರಾಣಪುರುಷನೂ ನಿತ್ಯನೂ (ಸಂಸಾರಧರ್ಮಗಳಿಂದ) ಮೇಲೆದ್ದವನೂ ನಿತ್ಯಸುಖಿಯೂ ಆಶಾರಹಿತನೂ ಆಗಿರುವನು. ಹೀಗಿದ್ದರೂ ಮಾಯೆಯ ಗುಣಗಳ ಸಂಬಂಧದಿಂದ ಸುಖಿಯಂತೆಯೂ ದುಃಖಿಯಂತೆಯೂ ಕಂಡುಬರುತ್ತಿರುವನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ಪ್ರಥಮಃ ಸರ್ಗಃ**

----------

# ಎರಡನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಲಂಕಾಯಾಂ ರಾವಣೋ ದೃಷ್ಟ್ವಾ ಕೃತಂ ಕರ್ಮ ಹನೂಮತಾ ।**
**ದುಷ್ಕರಂ ದೈವತೈರ್ವಾಪಿ ಹ್ರಿಯಾ ಕಿಂಚಿದವಾಙ್ಮುಖಃ ॥ ೧ ॥**
**ಆಹೂಯ ಮಂತ್ರಿಣಃ ಸರ್ವಾನ್ ಇದಂ ವಚನಮಬ್ರವೀತ್ ।**
**ಹನೂಮತಾ ಕೃತಂ ಕರ್ಮ ಭವದ್ಭಿಃ ದೃಷ್ಟಮೇವ ತತ್ ॥ ೨ ॥**
**ಪ್ರವಿಶ್ಯ ಲಂಕಾಂ ದುರ್ಧರ್ಷಾಂ ದೃಷ್ಟ್ವಾ ಸೀತಾಂ ದುರಾಸದಾಮ್ ।**
**ಹತ್ವಾ ಚ ರಾಕ್ಷಸಾನ್ ವೀರಾನ್ ಅಕ್ಷಂ ಮಂದೋದರೀಸುತಮ್ ॥ ೩ ॥**
**ದಗ್ಧ್ವಾ ಲಂಕಾಮಶೇಷೇಣ ಲಂಘಯಿತ್ವಾ ಚ ಸಾಗರಮ್ ।**
**ಯುಷ್ಮಾನ್ ಸರ್ವಾನತಿಕ್ರಮ್ಯ ಸ್ವಸ್ಥೋಽಗಾತ್ ಪುನರೇವ ಸಃ ॥ ೪ ॥**

೧-೪. ಶ್ರೀ ಮಹಾದೇವನಿಂತೆಂದನು : ರಾವಣನು ಲಂಕೆಯಲ್ಲಿ ಹನುಮಂತನು ಮಾಡಿದ, ದೇವತೆಗಳಿಗೂ ಅಸಾಧ್ಯವಾದಂಥ ಕೆಲಸವನ್ನು ಕಂಡು ಎಲ್ಲಾ ಮಂತ್ರಿಗಳನ್ನೂ ಬರಮಾಡಿಕೊಂಡವನಾಗಿ ನಾಚಿಕೆಯಿಂದ ಸ್ವಲ್ಪ ತಲೆ ತಗ್ಗಿಸಿದವನಾಗಿ ಹೀಗೆಂದು ಹೇಳಿದನು : ''ನೀವೆಲ್ಲರೂ ಹನುಮಂತನು ಮಾಡಿದ

ಕೆಲಸವನ್ನು ನೋಡಿರುತ್ತೀರಿ. ಸುಲಭವಾಗಿ ಬರಲಾಗದಂಥ ಲಂಕೆಯನ್ನು ಹೊಕ್ಕು ನೋಡಲಸಾಧ್ಯಳಾದ ಸೀತೆಯನ್ನು ಕಂಡು ವೀರರಾದ ರಾಕ್ಷಸರನ್ನೂ ಮಂಡೋದರಿಯ ಮಗನಾದ ಅಕ್ಷಕುಮಾರನನ್ನೂ ಕೊಂದು ಲಂಕೆಯೆಲ್ಲವನ್ನೂ ಸುಟ್ಟು ಸಮುದ್ರವನ್ನು ದಾಟಿ ನಿಮ್ಮೆಲ್ಲರನ್ನೂ (ವಂಚಿಸಿ) ಮೀರಿ ಸುಖವಾಗಿ ಮತ್ತೆ ಹೊರಟುಹೋಗಿರುತ್ತಾನೆ.

**ಕಿಂ ಕರ್ತವ್ಯಮಿತೋಽಸ್ಮಾಭಿರ್ಯೂಯಂ ಮಂತ್ರವಿಶಾರದಾಃ ।**
**ಮಂತ್ರಯಧ್ವಂ ಪ್ರಯತ್ನೇನ ಯತ್ಕೃತಂ ಮೇ ಹಿತಂ ಭವೇತ್ ॥ ೫ ॥**

೫. ''ಈಗ ನಾವು ಮಾಡತಕ್ಕದ್ದೇನು ? ನೀವುಗಳು ಮಂತ್ರಾಲೋಚನೆಗಳಲ್ಲಿ ಜಾಣರಾಗಿದ್ದೀರಿ. ಈಗ ಏನು ಮಾಡಿದರೆ ನಮಗೆ ಹಿತವಾದೀತೋ ಅದನ್ನು ಪ್ರಯತ್ನಪೂರ್ವಕವಾಗಿ ಚಿಂತಿಸಿ ನಿಶ್ಚಯಮಾಡಿರಿ.''

**ರಾವಣಸ್ಯ ವಚಃ ಶ್ರುತ್ವಾ ರಾಕ್ಷಸಾಃ ತಮಥಾಬ್ರುವನ್ ।**
**ದೇವ ಶಂಕಾ ಕುತೋ ರಾಮಾತ್ ತವ ಲೋಕಜಿತೋ ರಣೇ ॥ ೬ ॥**
**ಇಂದ್ರಸ್ತು ಬದ್ಧ್ವಾ ನಿಕ್ಷಿಪ್ತಃ ಪುತ್ರೇಣ ತವ ಪತ್ತನೇ ।**
**ಜಿತ್ವಾ ಕುಬೇರಮಾನೀಯ ಪುಷ್ಪಕಂ ಭುಜ್ಯತೇ ತ್ವಯಾ ॥ ೭ ॥**
**ಯಮೋ ಜಿತಃ ಕಾಲದಂಡಾತ್ ಭಯಂ ನಾಭೂತ್ತವ ಪ್ರಭೋ ।**
**ವರುಣೋ ಹುಂಕೃತೇನೈವ ಜಿತಃ ಸರ್ವೇಽಪಿ ರಾಕ್ಷಸಾಃ ॥ ೮ ॥**
**ಮಯೋ ಮಹಾಸುರೋ ಭೀತ್ಯಾ ಕನ್ಯಾಂ ದತ್ವಾ ಸ್ವಯಂ ತವ ।**
**ತ್ವದ್ವಶೇ ವರ್ತತೇಽದ್ಯಾಪಿ ಕಿಮುತಾನ್ಯೇ ಮಹಾಸುರಾಃ ॥ ೯ ॥**

೬-೯. ರಾವಣನ ಮಾತನ್ನು ಕೇಳಿ ರಾಕ್ಷಸರು ಅವನನ್ನು ಕುರಿತು ಹೀಗೆಂದರು: 'ಸ್ವಾಮಿ, ರಾಮನಿಂದ ತಮಗೆ (ಪರಾಜಯದ) ಸಂಶಯವೇಕೆ ? ಯುದ್ಧದಲ್ಲಿ ಎಲ್ಲರನ್ನೂ ಗೆದ್ದಿರುವ ತಮಗೆ ಯಾರೂ ಸಮಾನರಿಲ್ಲ. ನಿಮ್ಮ ಮಗನಿಂದ ದೇವೇಂದ್ರನು ಸೆರೆಹಿಡಿಯಲ್ಪಟ್ಟು ನಿಮ್ಮ ಪಟ್ಟಣದಲ್ಲಿಯೇ ಬಂಧಿಸಲ್ಪಟ್ಟನು. ನೀವು ಕುಬೇರನನ್ನು ಜಯಿಸಿ ಪುಷ್ಪಕವಿಮಾನವನ್ನು ವಶಪಡಿಸಿಕೊಂಡು ಸುಖಿಸುತ್ತಿದ್ದೀರಿ. ಕಾಲದಂಡದಿಂದ ಯಮನೂ ಸೋಲಿಸಲ್ಪಟ್ಟಿರುವನು. ತಮಗೆ ಭಯವೆಂದಿಗೂ ಇಲ್ಲ. ವರುಣನು ತಮ್ಮ ಹುಂಕಾರದಿಂದಲೇ ಸೋತಿದ್ದಾನೆ. ಎಲ್ಲಾ ರಾಕ್ಷಸರೂ ಪರಾಜಿತರಾಗಿ ನಿಮಗೆ ಅಧೀನರಾಗಿದ್ದಾರೆ. ಮಹಾರಾಕ್ಷಸನಾದ ಮಯನು ಕೂಡ ಹೆದರಿಕೆಯಿಂದ ತಾನೇ ಖುದ್ದಾಗಿ ತನ್ನ ಮಗಳನ್ನು ನಿಮಗೆ ಕೊಟ್ಟು ಈಗಲೂ ನಿಮ್ಮ ಅಧೀನದಲ್ಲಿಯೇ ಇದ್ದುಕೊಂಡಿರುವನು. ಇನ್ನುಳಿದ ರಾಕ್ಷಸರ ಪಾಡೇನು ?

**ಹನೂಮದ್ಧರ್ಷಣಂ ಯತ್ತು ತದವಜ್ಞಾಕೃತಂ ಚ ನಃ ।**
**ವಾನರೋಽಯಂ ಕಿಮಸ್ಮಾಕಮಸ್ಮಿನ್ ಪೌರುಷದರ್ಶನೇ ॥ ೧೦ ॥**
**ಇತ್ಯುಪೇಕ್ಷಿತಮಸ್ಮಾಭಿಃ ಧರ್ಷಣಂ ತೇನ ಕಿಂ ಭವೇತ್ ।**
**ವಯಂ ಪ್ರಮತ್ತಾಃ ಕಿಂ ತೇನ ವಂಚಿತಾಃ ಸ್ಮೋ ಹನೂಮತಾ ॥ ೧೧ ॥**
**ಜಾನೀಮೋ ಯದಿ ತಂ ಸರ್ವೇ ಕಥಂ ಜೀವನ್ ಗಮಿಷ್ಯತಿ ।**
**ಆಜ್ಞಾಪಯ ಜಗತ್ಕೃತ್ಸ್ನಮವಾನರಮಮಾನುಷಮ್ ॥ ೧೨ ॥**
**ಕೃತ್ವಾ ಯಾಸ್ಯಾಮಹೇ ಸರ್ವೇ ಪ್ರತ್ಯೇಕಂ ವಾ ನಿಯೋಜಯ ।**

೧೦-೧೨. ಹನುಮಂತನ ಧಾಳಿಯೇನಿದೆಯೋ ಅದು ನಾವು ಉಪೇಕ್ಷೆ ಮಾಡಿದ್ದರ ಫಲವಾಗಿದೆ. 'ಇವನೊಬ್ಬ ಕಪಿ ; ಇವನ ಮುಂದೆ ನಾವೇಕೆ ಬಲವನ್ನು ತೋರಿಸಬೇಕು ?' ಎಂದುಕೊಂಡು (ಅವನ) ಹಾವಳಿಯ ಬಗ್ಗೆ ಉದಾಸೀನ ರಾದೆವು. ಹಾಗೂ 'ಅವನಿಂದೇನಾದೀತು ?' ಎಂದುಕೊಂಡು ನಾವು ಕೊಬ್ಬಿದವರಾಗಿ ಸುಮ್ಮನಾದೆವು. ಹೀಗಾಗಿ ಹನುಮಂತನಿಂದ ಮೋಸಗೊಳಿಸಲ್ಪಟ್ಟೆವು. ನಾವೆಲ್ಲರೂ ಅವನ ಧಾರ್ಷ್ಟ್ಯವನ್ನು ತಿಳಿದವರಾಗಿದ್ದಿದ್ದರೆ ಅವನು ಹೇಗೆ ತಾನೆ (ನಮ್ಮಗಳ ಕೈಯಿಂದ) ಬದುಕಿಹೋಗುತ್ತಿದ್ದನು ? ಈಗ ನೀನು ಅಪ್ಪಣೆಯನ್ನು ನೀಡುವವ ನಾಗು. ಇಡಿಯ ಜಗತ್ತನ್ನೆಲ್ಲ ಒಂದು ಕಪಿಯಾಗಲಿ ಮನುಷ್ಯನಾಗಲಿ ಉಳಿಯದಂತೆ ಖಾಲಿಮಾಡಿ ಹಿಂದಿರುಗುವೆವು. ಎಲ್ಲರನ್ನೂ ಒಟ್ಟಿಗೆ ಅಥವಾ ಬಿಡಿಬಿಡಿಯಾಗಿಯೇ ಆಜ್ಞೆಮಾಡಿ ಕಳುಹಿಸುವವನಾಗು.

**ಕುಂಭಕರ್ಣಸ್ತದಾ ಪ್ರಾಹ ರಾವಣಂ ರಾಕ್ಷಸೇಶ್ವರಮ್ ।**
**ಆರಬ್ಧಂ ಯತ್ತ್ವಯಾ ಕರ್ಮ ಸ್ವಾತ್ಮನಾಶಾಯ ಕೇವಲಮ್ ॥ ೧೩ ॥**
**ನ ದೃಷ್ಟೋಽಸಿ ತದಾ ಭಾಗ್ಯಾತ್ ತ್ವಂ ರಾಮೇಣ ಮಹಾತ್ಮನಾ ।**
**ಯದಿ ಪಶ್ಯತಿ ರಾಮಸ್ತ್ವಾಂ ಜೀವನ್ನಾಯಾಸಿ ರಾಕ್ಷಸ ॥ ೧೪ ॥**
**ರಾಮೋ ನ ಮಾನುಷೋ ದೇವಃ ಸಾಕ್ಷಾನ್ನಾರಾಯಣೋಽವ್ಯಯಃ ।**
**ಸೀತಾ ಭಗವತೀ ಲಕ್ಷ್ಮೀ ರಾಮಪತ್ನೀ ಯಶಸ್ವಿನೀ ॥ ೧೫ ॥**
**ರಾಕ್ಷಸಾನಾಂ ವಿನಾಶಾಯ ತ್ವಯಾನೀತಾ ಸುಮಧ್ಯಮಾ ॥**

೧೩-೧೫. ಆಗ ಕುಂಭಕರ್ಣನು ರಾಕ್ಷಸೇಶ್ವರನಾದ ರಾವಣನನ್ನು ಕುರಿತು ಹೀಗೆಂದನು : 'ನೀನು ಪ್ರಾರಂಭಿಸಿರುವ ಕೆಲಸವೇನಿದೆಯೋ ಅದು ಕೇವಲ ನಿನ್ನ ನಾಶಕ್ಕಾಗಿಯೇ ಸರಿ ; ಆಗ್ಗೆ ನೀನು ಪುಣ್ಯವಶದಿಂದ ರಾಮನ ಕಣ್ಣಿಗೆ ಬೀಳದೆ ಹೋಗಿದ್ದೀಯೆ : ರಾಮನೇನಾದರೂ ನಿನ್ನನ್ನು ಕಂಡಿದ್ದರೆ ಎಲೈ ರಾಕ್ಷಸನೆ, ನೀನು ಬದುಕಿಬರುತ್ತಿರಲಿಲ್ಲ. ರಾಮನು ಮನುಷ್ಯನಲ್ಲ ; ಸಾಕ್ಷಾದ್ ದೇವನಾದ ಅವ್ಯಯ

ನಾದ ನಾರಾಯಣನೇ ಆಗಿರುತ್ತಾನೆ. ರಾಮಪತ್ನಿಯಾದ ಯಶೋವಂತಳಾದ ಸೀತೆಯು ಪೂಜ್ಯಳಾದ ಲಕ್ಷ್ಮಿಯು. ರಾಕ್ಷಸರ ನಾಶಕ್ಕಾಗಿ ಆ ಸುಮಧ್ಯಮೆಯು ನಿನ್ನಿಂದ ತರಲ್ಪಟ್ಟಿರುತ್ತಾಳೆ.

**ವಿಷಪಿಂಡಮಿವಾಗೀರ್ಯ ಮಹಾಮೀನೋ ಯಥಾ ತಥಾ ।**
**ಆನೀತಾ ಜಾನಕೀ ಪಶ್ಚಾತ್ ತ್ವಯಾ ಕಿಂ ವಾ ಭವಿಷ್ಯತಿ ॥ ೧೬ ॥**
**ಯದ್ಯಪ್ಯನುಚಿತಂ ಕರ್ಮ ತ್ವಯಾ ಕೃತಮಜಾನತಾ ।**
**ಸರ್ವಂ ಸಮಂ ಕರಿಷ್ಯಾಮಿ ಸ್ವಸ್ಥಚಿತ್ತೋ ಭವ ಪ್ರಭೋ ॥ ೧೭ ॥**

೧೬-೧೭. ದೊಡ್ಡಮೀನೊಂದು ವಿಷದ ಉಂಡೆಯನ್ನು ನುಂಗಿದರೆ ಹೇಗೋ ಹಾಗೆ ಸೀತೆಯು ನಿನ್ನಿಂದ ತರಲ್ಪಟ್ಟಿರುವಳು. ಅನಂತರ ನಿನ್ನಿಂದ ಇನ್ನೇನಾ-ದೀತು? ಒಂದು ವೇಳೆ ಅರಿಯದೆ ಈಗ ನೀನು ಮಾಡಿರುವ ಕೆಲಸವು ಅಯೋಗ್ಯ ವಾಗಿದ್ದರೂ ನಾನು ಎಲ್ಲವನ್ನೂ ಸರಿಪಡಿಸುವೆನು. ಪ್ರಭುವೆ, ಸ್ವಸ್ಥಚಿತ್ತನಾಗು.'

**ಕುಂಭಕರ್ಣವಚಃ ಶ್ರುತ್ವಾ ವಾಕ್ಯಮಿಂದ್ರಜಿದಬ್ರವೀತ್ ।**
**ದೇಹಿ ದೇವ ಮಮಾನುಜ್ಞಾಂ ಹತ್ವಾ ರಾಮಂ ಸಲಕ್ಷ್ಮಣಮ್ ॥ ೧೮ ॥**
**ಸುಗ್ರೀವಂ ವಾನರಾಂಶ್ಚೈವ ಪುನರ್ಯಾಸ್ಯಾಮಿ ತೇಽನ್ತಿಕಮ್ ।**

೧೮. ಕುಂಭಕರ್ಣನ ಮಾತನ್ನು ಕೇಳಿ ಇಂದ್ರಜಿತ್ತು ಹೀಗೆಂದನು 'ದೇವನೆ, ನನಗೆ ಅಪ್ಪಣೆಯನ್ನು ಕೊಡು ; ಲಕ್ಷ್ಮಣಸಹಿತನಾದ ರಾಮನನ್ನೂ ಸುಗ್ರೀವನನ್ನೂ ಕಪಿಗಳನ್ನೂ ಕೊಂದು ಪುನಃ ನಿನ್ನ ಬಳಿಗೆ ಬರುವೆನು.'

**ತತ್ರಾಗತೋ ಭಾಗವತಪ್ರಧಾನೋ**
**ವಿಭೀಷಣೋ ಬುದ್ಧಿಮತಾಂ ವರಿಷ್ಠಃ ।**
**ಶ್ರೀರಾಮಪಾದದ್ವಯ ಏಕತಾನಃ**
**ಪ್ರಣಮ್ಯ ದೇವಾರಿಮುಪೋಪವಿಷ್ಟಃ ॥ ೧೯ ॥**
**ವಿಲೋಕ್ಯ ಕುಂಭಶ್ರವಣಾದಿದೈತ್ಯಾನ್**
**ಮತ್ತಪ್ರಮತ್ತಾನತಿವಿಸ್ಮಯೇನ ।**
**ವಿಲೋಕ್ಯ ಕಾಮಾತುರಮಪ್ರಮತ್ತೋ**
**ದಶಾನನಂ ಪ್ರಾಹ ವಿಶುದ್ಧಬುದ್ಧಿಃ ॥ ೨೦ ॥**
**ನ ಕುಂಭಕರ್ಣೇಂದ್ರಜಿತೌ ಚ ರಾಜನ್ ।**
**ತಥಾ ಮಹಾಪಾರ್ಶ್ವಮಹೋದರೌ ತೌ ।**
**ನಿಕುಂಭಕುಂಭೌ ಚ ತಥಾತಿಕಾಯಃ ।**
**ಸ್ಥಾತುಂ ನ ಶಕ್ತಾ ಯುಧಿ ರಾಘವಸ್ಯ ॥ ೨೧ ॥**

೧೯-೨೧. ಅಲ್ಲಿಗೆ ಭಾಗವತೋತ್ತಮನೂ ಬುದ್ಧಿವಂತರಲ್ಲಿ ಶ್ರೇಷ್ಠನೂ ಶ್ರೀರಾಮನ ಪಾದದ್ವಯಗಳೇ ಆಶ್ರಯವಾಗಿ ಉಳ್ಳವನೂ ಆದ ವಿಭೀಷಣನು ಬಂದನು. ದೇವಶತ್ರುವಾದ (ರಾವಣನಿಗೆ ನಮಸ್ಕರಿಸಿ ಸಮೀಪದಲ್ಲಿ ಕುಳಿತನು. ಹಾಗೆಯೇ ಮೈಮರೆತವರೂ ಅತಿಯಾಗಿ ಕೊಬ್ಬಿದವರೂ ಆದ ಕುಂಭಕರ್ಣನೇ ಮೊದಲಾದ ರಾಕ್ಷಸರನ್ನು ಕಂಡು ಬಹಳ ಆಶ್ಚರ್ಯಗೊಂಡವನಾಗಿ ಆ ಶುದ್ಧ ಬುದ್ಧಿಯಾದ (ಆತನು) ಕಾಮಾತುರನಾದ ರಾವಣನನ್ನು ಕುರಿತು ಎಚ್ಚರದಿಂದ ಹೀಗೆಂದನು : 'ಎಲೈ ರಾಜನೆ, ಕುಂಭಕರ್ಣ, ಇಂದ್ರಜಿತ್ತುಗಳಾಗಲಿ, ಮಹಾ ಪಾರ್ಶ್ವಮಹೋದರರುಗಳಾಗಲಿ, ಕುಂಭ ನಿಕುಂಭರಾಗಲಿ, ಅತಿಕಾಯನಾಗಲಿ ಯುದ್ಧದಲ್ಲಿ ಶ್ರೀರಾಮನ ಎದುರಿಗೆ ನಿಲ್ಲಲು ಸಮರ್ಥರಲ್ಲ.

**ಸೀತಾಭಿಧಾನೇನ ಮಹಾಗ್ರಹೇಣ**
**ಗ್ರಸ್ತೋಽಸಿ ರಾಜನ್ ನ ಚ ತೇ ವಿಮೋಕ್ಷಃ ।**
**ತಾಮೇವ ಸತ್ಕೃತ್ಯ ಮಹಾಧನೇನ**
**ದತ್ವಾಭಿರಾಮಾಯ ಸುಖೀ ಭವ ತ್ವಮ್ ॥ ೨೨ ॥**
**ಯಾವನ್ನ ರಾಮಸ್ಯ ಶಿತಾಃ ಶಿಲೀಮುಖಾಃ**
**ಲಂಕಾಮಭಿವ್ಯಾಪ್ಯ ಶಿರಾಂಸಿ ರಕ್ಷಸಾಮ್ ।**
**ಛಿಂದಂತಿ ತಾವದ್ ರಘುನಾಯಕಸ್ಯ ಭೋ**
**ತಾಂ ಜಾನಕೀಂ ತ್ವಂ ಪ್ರತಿದಾತುಮರ್ಹಸಿ ॥ ೨೩ ॥**
**ಯಾವನ್ನಗಾಭಾಃ ಕಪಯೋ ಮಹಾಬಲಾಃ**
**ಹರೀಂದ್ರತುಲ್ಯಾ ನಖದಂಷ್ಟ್ರಯೋಧಿನಃ ।**
**ಲಂಕಾಂ ಸಮಾಕ್ರಮ್ಯ ವಿನಾಶಯಂತಿ ತೇ**
**ತಾವದ್ ದ್ರುತಂ ದೇಹಿ ರಘೂತ್ತಮಾಯ ತಾಮ್ ॥ ೨೪ ॥**
**ಜೀವನ್ನ ರಾಮೇಣ ವಿಮೋಕ್ಷ್ಯಸೇ ತ್ವಂ**
**ಗುಪ್ತಃ ಸುರೇಂದ್ರೈರಪಿ ಶಂಕರೇಣ ।**
**ನ ದೇವರಾಜಾಂಕಗತೋ ನ ಮೃತ್ಯೋಃ**
**ಪಾತಾಲಲೋಕಾನಪಿ ಸಂಪ್ರವಿಷ್ಟಃ ॥ ೨೫ ॥**

೨೨-೨೫. ಎಲೈ ರಾಜನೆ, ಸೀತೆಯೆಂಬ ಹೆಸರಿನ ದೊಡ್ಡ ಮೊಸಳೆಯಿಂದ ನೀನು ನುಂಗಲ್ಪಟ್ಟಿರುವೆ. ನಿನಗೆ ಇನ್ನು ಬಿಡುಗಡೆಯಿಲ್ಲ. (ಆದರೆ) ಆಕೆಯನ್ನೇ ಹೆಚ್ಚಿನ ಧನರಾಶಿಯಿಂದ ಪೂಜಿಸಿ ರಾಮನಿಗೆ ಅರ್ಪಿಸಿ ಸುಖಿಯಾಗು. ತೀಕ್ಷ್ಣವಾದ ರಾಮಬಾಣಗಳು ಲಂಕೆಯನ್ನು ಸುತ್ತುವರೆದು ರಾಕ್ಷಸರ ತಲೆಗಳನ್ನು ಕತ್ತರಿಸುವದ

ರೊಳಗೆ ಎಲೈ ರಾವಣನೆ, ನೀನು ರಾಮನಿಗೆ ಜಾನಕಿಯನ್ನು ಕೊಟ್ಟುಬಿಡುವವನಾಗು. ಸಿಂಹಪರಾಕ್ರಮಿಗಳಾದ ಬೆಟ್ಟದಂಥ ಆಕಾರದ, ಬಹಳ ಬಲಶಾಲಿಗಳಾದ ಹಾಗೂ ಉಗುರು, ಹಲ್ಲುಗಳಿಂದಲೇ ಕಾದಾಡುವಂಥ ಕಪಿಗಳು ಲಂಕೆಯನ್ನು ಮುತ್ತಿ ನಾಶ ಮಾಡು ವದರೊಳಗಾಗಿ ಜಾಗ್ರತೆಯಾಗಿ ರಘೂತ್ತಮನಿಗೆ ಆಕೆಯನ್ನು ಒಪ್ಪಿಸುವವ ನಾಗು. ದೇವೇಂದ್ರಾದಿಗಳಿಂದಾಗಲಿ ಮಹಾದೇವನಿಂದಾಗಲಿ ನೀನು ರಕ್ಷಿಸಲ್ಪಟ್ಟರೂ, ದೇವೇಂದ್ರನ ತೊಡೆಯಮೇಲೆಯೇ ಆಶ್ರಯವನ್ನು ಪಡೆದಿದ್ದರೂ ಮೃತ್ಯುವಿನ ಆಶ್ರಯವನ್ನೇ ಹೊಂದಿದ್ದರೂ ಪಾತಾಲಲೋಕವನ್ನೇ ಹೊಕ್ಕಿದ್ದರೂ ನೀನು ಜೀವಂತನಾಗಿ ರಾಮನಿಂದ ಬಿಡುಗಡೆಹೊಂದಲಾರೆ.

**ಶುಭಂ ಹಿತಂ ಪವಿತ್ರಂ ಚ ವಿಭೀಷಣವಚಃ ಖಲಃ ।**
**ಪ್ರತಿಜಗ್ರಾಹ ನೈವಾಸೌ ಮ್ರಿಯಮಾಣ ಇವೌಷಧಮ್ ॥ ೨೬ ॥**
**ಕಾಲೇನ ನೋದಿತೋ ದೈತ್ಯೋ ವಿಭೀಷಣಮಥಾಬ್ರವೀತ್ ।**
**ಮದ್ದತ್ತಭೋಗೈಃ ಪುಷ್ಟಾಂಗೋ ಮತ್ಸಮೀಪೇ ವಸನ್ನಪಿ ॥ ೨೭ ॥**
**ಪ್ರತೀಪಮಾಚರತ್ಯೇಷ ಮಮೈವ ಹಿತಕಾರಿಣಃ ।**
**ಮಿತ್ರಭಾವೇನ ಶತ್ರುರ್ಮೇ ಜಾತೋ ನಾಸ್ತ್ಯತ್ರ ಸಂಶಯಃ ॥ ೨೮ ॥**

೨೬-೨೮. ಶುಭಕರವಾಗಿಯೂ ಹಿತವಾಗಿಯೂ ಪವಿತ್ರವಾಗಿಯೂ ಇದ್ದ ವಿಭೀಷಣವಾಕ್ಯವನ್ನು - ಸಾಯುವವನು ಔಷಧಿಯನ್ನು ಸ್ವೀಕರಿಸದೆ ಇರುವಂತೆ - ಈ ದುಷ್ಟನು ತೆಗೆದುಕೊಳ್ಳದೆ ಹೋದನು. ಕಾಲಪ್ರೇರಿತನಾದ ಆ ರಾಕ್ಷಸನು ವಿಭೀಷಣನನ್ನು ಕುರಿತು ಇಂತೆಂದನು : ''ನಾನು ಕೊಟ್ಟ ಭೋಗಸಾಮಗ್ರಿಗಳಿಂದ ಬೆಳೆದವನಾಗಿ ನನ್ನ ಹತ್ತಿರದಲ್ಲಿಯೇ ಇದ್ದುಕೊಂಡಿದ್ದೂ ಈತನು - ಹಿತವನ್ನು ಮಾಡಿದ ನನಗೇ ವಿರುದ್ಧವಾದದ್ದನ್ನು ಮಾಡುತ್ತಿದ್ದಾನೆ. ಈತನು ಮಿತ್ರನ ನೆಪದಿಂದ ಹುಟ್ಟಿರುವ ಶತ್ರುವೇ ಸರಿ. ಈ ಬಗ್ಗೆ ಸಂಶಯವಿಲ್ಲ.

**ಅನಾರ್ಯೇಣ ಕೃತಘ್ನೇನ ಸಂಗತಿರ್ಮೇ ನ ಯುಜ್ಯತೇ ।**
**ವಿನಾಶಮಭಿಕಾಂಕ್ಷಂತಿ ಜ್ಞಾತೀನಾಂ ಜ್ಞಾತಯಃ ಸದಾ ॥ ೨೯ ॥**
**ಯೋಽನ್ಯಸ್ತ್ವೇವಂವಿಧಂ ಬ್ರೂಯಾತ್ ವಾಕ್ಯಮೇಕಂ ನಿಶಾಚರಃ ।**
**ಹನ್ಮಿ ತಸ್ಮಿನ್ ಕ್ಷಣೇ ಏವ ಧಿಕ್ ತ್ವಾಂ ರಕ್ಷಃಕುಲಾಧಮಮ್ ॥ ೩೦ ॥**

೨೯-೩೦. ಉಪಕಾರಸ್ಮರಣೆಯಿಲ್ಲದ ಅಯೋಗ್ಯನಾದ ಈತನೊಡನೆ ನನಗೆ ಸಹವಾಸವು ತಕ್ಕದ್ದಲ್ಲ. ದಾಯಾದಿಗಳು ಯಾವಾಗಲೂ ತಮ್ಮ ದಾಯಾದಿಗಳ ಹಾಳಾಗುವದನ್ನೇ ಬಯಸುತ್ತಿರುವರು. ಬೇರೊಬ್ಬ ರಾಕ್ಷಸನು ಯಾವನಾದರೂ ಹೀಗೆ

ಒಂದು ಮಾತನ್ನಾದರೂ ಹೇಳಿದನಾದರೆ ಆ ಕ್ಷಣದಲ್ಲಿಯೇ ಅವನನ್ನು ಕೊಂದು ಬಿಡುವೆನು. ಇದೊ, ರಾಕ್ಷಸವಂಶಕ್ಕೆ ಅಧಮನೆನಿಸಿದ ನಿನಗೆ ಧಿಕ್ಕಾರವಿರಲಿ'' !

**ರಾವಣೇನೈಮುಕ್ತಃ ಸನ್ ಪರುಷಂ ಸ ವಿಭೀಷಣಃ ।**
**ಉತ್ಪಪಾತ ಸಭಾಮಧ್ಯಾತ್ ಗದಾಪಾಣಿರ್ಮಹಾಬಲಃ ॥ ೩೧ ॥**
**ಚತುರ್ಭಿಃ ಮಂತ್ರಿಭಿಃ ಸಾರ್ಧಂ ಗಗನಸ್ಥೋಽಬ್ರವೀದ್ವಚಃ ।**
**ಕ್ರೋಧೇನ ಮಹತಾವಿಷ್ಟೋ ರಾವಣಂ ದಶಕಂಧರಮ್ ॥ ೩೨ ॥**
**ಮಾ ವಿನಾಶಮುಪೈಹಿ ತ್ವಂ ಪ್ರಿಯವಾದಿನಮೇವ ಮಾಮ್ ।**
**ಧಿಕ್ಕರೋಷಿ ತಥಾಪಿ ತ್ವಂ ಜ್ಯೇಷ್ಠೋ ಭ್ರಾತಾ ಪಿತುಃ ಸಮಃ ॥ ೩೩ ॥**

೩೧-೩೩. ರಾವಣನಿಂದ ಹೀಗ ಕಠಿನವಾಗಿ ಹೇಳಲ್ಪಟ ಮಹಾಬಲಿಷ್ಠನಾದ ಆ ವಿಭೀಷಣನು ಗದೆಯನ್ನು ಕೈಯಲ್ಲಿ ಧರಿಸಿ ಸಭಾಮಧ್ಯದಿಂದಲೇ ನಾಲ್ಕು ಜನ ಮಂತ್ರಿಗಳೊಡಗೂಡಿ (ಆಕಾಶಕ್ಕೆ)ಹಾರಿದನು. ಆಕಾಶದಲ್ಲಿ ನಿಂತು ಹೆಚ್ಚಿನ ಕೋಪದಿಂದ ಕೂಡಿದವನಾಗಿ ದಶಕಂಠನಾದ ರಾವಣನನ್ನು ಕುರಿತು ಹೀಗೆಂದನು : 'ಅಯ್ಯಾ, ನೀನು ಹಾಳಾಗಬೇಡ. ನಿನಗೆ ಪ್ರಿಯವಾದದ್ದನ್ನೇ ಹೇಳಿದ್ದರೂ ನನ್ನನ್ನು ತಿರಸ್ಕರಿಸಿರುವೆ. ಹಾಗಾದರೂ ನೀನು ಹಿರಿಯಣ್ಣನು. ತಂದೆಗೆ ಸಮಾನನು.

**ಕಾಲೋ ರಾಘವರೂಪೇಣ ಜಾತೋ ದಶರಥಾಲಯೇ ।**
**ಕಾಲೀ ಸೀತಾಭಿಧಾನೇನ ಜಾತಾ ಜನಕನಂದಿನೀ ॥ ೩೪ ॥**
**ತಾವುಭಾವಾಗತಾವತ್ರ ಭೂಮೇರ್ಭಾರಾಪನುತ್ತಯೇ ।**
**ತೇನೈವ ಪ್ರೇರಿತಸ್ತ್ವಂ ತು ನ ಶೃಣೋಷಿ ಹಿತಂ ಮಮ ॥ ೩೫ ॥**
**ಶ್ರೀರಾಮಃ ಪ್ರಕೃತೇಃ ಸಾಕ್ಷಾದ್ ಪರಸ್ತಾತ್ ಸರ್ವದಾ ಸ್ಥಿತಃ ।**
**ಬಹಿರಂತಶ್ಚ ಭೂತಾನಾಂ ಸಮಃ ಸರ್ವತ್ರ ಸಂಸ್ಥಿತಃ ॥ ೩೬ ॥**

೩೪-೩೬. ಮೃತ್ಯುವೇ ರಾಮನ ರೂಪದಿಂದ ದಶರಥನ ಮನೆಯಲ್ಲಿ ಹುಟ್ಟಿರುವನು. ಕಾಳಿ (ಸಂಹಾರಶಕ್ತಿ)ಯೇ ಸೀತೆಯೆಂಬ ಹೆಸರಿನಿಂದ ಜನಕನ ಮಗಳಾಗಿ ಅವತರಿಸಿರುವಳು. ಅವರಿಬ್ಬರೂ ಭೂಭಾರಹರಣಕ್ಕಾಗಿ ಇಲ್ಲಿಗೆ ಬಂದಿರುವರು. ಆ(ಕಾಲನಿಂದ)ಪ್ರೇರಿತನಾಗಿಯೇ ನೀನು ನನ್ನ ಹಿತವಾಕ್ಯಗಳನ್ನು ಕೇಳುತ್ತಿಲ್ಲ. ಶ್ರೀರಾಮನಾದರೊ, ಪ್ರಕೃತಿಯನ್ನು ಮೀರಿದ ಸಾಕ್ಷಾತ್ ಬ್ರಹ್ಮನಾಗಿರುವನು. ಪ್ರಾಣಿಗಳ ಒಳಗೂ ಹೊರಗೂ ವ್ಯಾಪಿಸಿಕೊಂಡು ಸಮನಾಗಿ ಎಲ್ಲೆಲ್ಲಿಯೂ ಇದ್ದುಕೊಂಡಿರುವನು.

**ನಾಮರೂಪಾದಿಭೇಧೇನ ತತ್ತನ್ಮಯ ಇವಾಮಲಃ ।**
**ಯಥಾ ನಾನಾಪ್ರಕಾರೇಷು ವೃಕ್ಷೇಷ್ವೇಕೋ ಮಹಾನಲಃ ॥ ೩೭ ॥**
**ತತ್ತದಾಕೃತಿಭೇದೇನ ಭಿದ್ಯತೇಽಜ್ಞಾನಚಕ್ಷುಷಾಮ್ ।**
**ಪಂಚಕೋಶಾದಿಭೇದೇನ ತತ್ತನ್ಮಯ ಇವಾಬಭೌ ॥ ೩೮ ॥**
**ನೀಲಪೀತಾದಿಯೋಗೇನ ನಿರ್ಮಲಃ ಸ್ಫಟಿಕೋ ಯಥಾ ।**

೩೭-೩೮. ನಾಮರೂಪಾದಿಗಳ ಭೇದದಿಂದ -ಹೇಗೆ ಬೆಂಕಿಯು ಒಂದೇ ಆಗಿದ್ದರೂ ನಾನಾರೀತಿಯಾದ ಮರಗಳನ್ನಾಶ್ರಯಿಸಿ ತೋರಿಕೊಳ್ಳುವಾಗ ನಾನಾ ಆಕಾರಗಳಿಂದ ಕೂಡಿರುವಂತೆ ಕಂಡುಬರುವದೋ - ಹಾಗೆ ಪರಿಶುದ್ಧನೇ ಆದ ಭಗವಂತನು ನಾನಾ (ನಾಮರೂಪಗಳಿಂದ) ಅಜ್ಞಾನಿಗಳಿಗೆ ತೋರುತ್ತಿರುವನು. ಮತ್ತು ಹೇಗೆ ಸ್ವಚ್ಛವಾದ ಸ್ಫಟಿಕವು ಕಪ್ಪು ಹಳದಿ- ಮುಂತಾದ ಬಣ್ಣಗಳಿಂದ ಸಮಿಾಪಿಸಲ್ಪಟ್ಟಾಗ ಆಯಾ ಬಣ್ಣವುಳ್ಳದ್ದರಂತೆ ಕಂಡುಬರುವದೋ ಹಾಗೆ - ಪಂಚಕೋಶಗಳ ಉಪಾಧಿಭೇದ ದಿಂದ ಆಯಾ ಉಪಾಧಿಮಯನಾಗಿ ಕಂಡು ಬರುತ್ತಿರುವನು.

**ಸ ಏವ ನಿತ್ಯಮುಕ್ತೋಽಪಿ ಸ್ವಮಾಯಾಗುಣಬಿಂಬಿತಃ ।**
**ಕಾಲಃ ಪ್ರಧಾನಂ ಪುರುಷೋಽವ್ಯಕ್ತಂ ಚೇತಿ ಚತುರ್ವಿಧಃ ॥ ೩೯ ॥**
**ಪ್ರಧಾನಪುರುಷಾಭ್ಯಾಂ ಚ ಜಗತ್ ಕೃತ್ಸ್ನಂ ಸೃಜತ್ಯಜಃ ।**
**ಕಾಲರೂಪೇಣ ಕಲನಾಂ ಜಗತಃ ಕುರುತೇಽವ್ಯಯಃ ॥ ೪೦ ॥**
**ಕಾಲರೂಪೀ ಸ ಭಗವಾನ್ ರಾಮರೂಪೇಣ ಮಾಯಯಾ ।**
**ಬ್ರಹ್ಮಣಾ ಪ್ರಾರ್ಥಿತೋ ದೇವಸ್ತ್ವದ್ವಧಾರ್ಥಮಿಹಾಗತಃ ॥ ೪೧ ॥**

೩೭-೪೧. ಅವನೇ ನಿತ್ಯಮುಕ್ತನಾಗಿದ್ದರೂ ತನ್ನ ಮಾಯಾಗುಣಗಳಿಂದ ಪ್ರತಿಬಿಂಬಿತನಾಗಿ ಕಾಲ- ಪ್ರಕೃತಿ- ಪುರುಷ- ಅವ್ಯಾಕೃತ ಎಂಬೀ ರೀತಿಯಲ್ಲಿ ನಾಲ್ಕು ರೂಪನಾಗಿ ಪ್ರಕೃತಿಪುರುಷರೊಡಗೂಡಿ ಇಡಿಯ ಪ್ರಪಂಚವನ್ನೆಲ್ಲ ಉಂಟು ಮಾಡುತ್ತಿರುವನು. ಅವ್ಯಯನಾದ ಆತನು ಕಾಲರೂಪದಿಂದ ಜಗತ್ತಿನ ಆಯುಸ್ಸನ್ನು ಅಳೆಯುತ್ತಿರುವನು. ಅದೇ ಕಾಲರೂಪನಾದ ಭಗವಂತನು ರಾಮನಾಗಿ ಮಾಯೆ ಯಿಂದ ಅವತರಿಸಿ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ನಿನ್ನನ್ನು ಕೊಲ್ಲುವದಕ್ಕಾಗಿ ಇಲ್ಲಿಗೆ ಬಂದಿರುವನು.

**ತದನ್ಯಥಾ ಕಥಂ ಕುರ್ಯಾತ್ ಸತ್ಯಸಂಕಲ್ಪ ಈಶ್ವರಃ ।**
**ಹನಿಷ್ಯತಿ ತ್ವಾಂ ರಾಮಸ್ತು ಸಪುತ್ರಬಲವಾಹನಮ್ ॥ ೪೨ ॥**

ಹನ್ಯಮಾನಂ ನ ಶಕ್ನೋಮಿ ದ್ರಷ್ಟುಂ ರಾಮೇಣ ರಾವಣ ।
ತ್ವಾಂ ರಾಕ್ಷಸಕುಲಂ ಕೃತ್ಸ್ನಂ ತತೋ ಗಚ್ಛಾಮಿ ರಾಘವಮ್ ॥ ೪೩ ॥
ಮಯಿ ಯಾತೇ ಸುಖೀ ಭೂತ್ವಾ ರಮಸ್ವ ಭವನೇ ಚಿರಮ್ ।
ವಿಭೀಷಣೋ ರಾವಣವಾಕ್ಯತಃ ಕ್ಷಣಾದ್
ವಿಸೃಜ್ಯ ಸರ್ವಂ ಸಪರಿಚ್ಛದಂ ಗೃಹಮ್ ।
ಜಗಾಮ ರಾಮಸ್ಯ ಪದಾರವಿಂದಯೋಃ
ಸೇವಾಭಿಕಾಂಕ್ಷೀ ಪರಿಪೂರ್ಣಮಾನಸಃ ॥ ೪೪ ॥

೪೨-೪೪. 'ಸತ್ಯಸಂಕಲ್ಪನಾದ ಆ ಪ್ರಭುವು ಅದನ್ನು ಹೇಗೆ ತಾನೆ ಬದಲಾಯಿಸಿಯಾನು ? ರಾಮನಾದರೊ, ಮಕ್ಕಳು, ಸೈನ್ಯ, ವಾಹನಾದಿಗಳ ಸಮೇತನಾದ ನಿನ್ನನ್ನು ಕೊಲ್ಲಲಿರುವನು. ಎಲೈ ರಾವಣನೆ, ರಾಮನು ನಿನ್ನನ್ನೂ ಇಡಿಯ ರಾಕ್ಷಸವಂಶವನ್ನೂ ವಿನಾಶಮಾಡುತ್ತಿರುವಲ್ಲಿ ನಾನು ನೋಡಲಾರೆನು. ಆದ್ದರಿಂದ ರಾಮನ ಬಳಿಗೆ ಹೋಗುವೆನು. ನಾನು ಹೊರಟುಹೋಗಲಾಗಿ ನೀನು ಸುಖಿಯಾಗಿ ಚಿರಕಾಲವೂ ಅರಮನೆಯಲ್ಲಿದ್ದುಕೊಂಡಿರು.' ಹೀಗೆಂದು ನುಡಿದು ವಿಭೀಷಣನು ರಾವಣನ ಮಾತಿನಿಂದ (ಬಹಳ ನೊಂದವನಾಗಿ) ಸಮಸ್ತಭೋಗೋಪಕರಣಗಳಿಂದ ಕೂಡಿದ್ದ ತನ್ನ ಮನೆಯನ್ನು ಬಿಟ್ಟು ಶ್ರೀರಾಮನ ಪಾದಾರವಿಂದಗಳಿಗೆ (ಶರಣಾಗಿ) ಪೂರ್ಣವಾದ ಮನಸ್ಸಿನಿಂದ ಆತನ ಸೇವೆಯನ್ನು ಬಯಸಿ ಹೊರಟನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ದ್ವಿತೀಯಃ ಸರ್ಗಃ**

---------

## ಮೂರನೆಯ ಸರ್ಗ

**ಶ್ರೀಮಹಾದೇವ ಉವಾಚ-**

ವಿಭೀಷಣೋ ಮಹಾಭಾಗಶ್ಚತುರ್ಭಿಃ ಮಂತ್ರಿಭಿಃ ಸಹ ।
ಆಗತ್ಯ ಗಗನೇ ರಾಮಸಂಮುಖೇ ಸಮವಸ್ಥಿತಃ ॥ ೧ ॥
ಉಚ್ಚೈರುವಾಚ ಭೋ ಸ್ವಾಮಿನ್ ರಾಮ ರಾಜೀವಲೋಚನ ।
ರಾವಣಸ್ಯಾನುಜೋಽಹಂ ತೇ ದಾರಹರ್ತುರ್ವಿಭೀಷಣಃ ॥ ೨ ॥
ನಾಮ್ನಾ ಭ್ರಾತ್ರಾ ನಿರಸ್ತೋಽಹಂ ತ್ವಾಮೇವ ಶರಣಂ ಗತಃ ।

೧-೨. ಶ್ರೀಮಹಾದೇವನಿಂತೆಂದನು : ಮಹಾತ್ಮನಾದ ವಿಭೀಷಣನು ತನ್ನ ನಾಲ್ವರು ಮಂತ್ರಿಗಳೊಡನೆ ಬಂದು ರಾಮನ ಎದುರಿಗೇ ಆಕಾಶದಲ್ಲಿ ನಿಂತವನಾಗಿ ಗಟ್ಟಿಯಾಗಿ ಹೀಗೆಂದನು : 'ಪ್ರಭುವೆ, ಕಮಲನೇತ್ರನಾದ ರಾಮನೆ, ನಿನ್ನ ಹೆಂಡತಿಯನ್ನ ಪಹರಿಸಿದ ರಾವಣನ ಸಹೋದರನೇ ನಾನು. ನನ್ನ ಹೆಸರು ವಿಭೀಷಣನೆಂದಿರುವದು. ಅಣ್ಣನಿಂದ ಓಡಿಸಲ್ಪಟ್ಟವನಾಗಿ ನಿನ್ನನ್ನೇ ಮೊರೆಹೊಕ್ಕಿರುವೆನು.

**ಹಿತಮುಕ್ತಂ ಮಯಾ ದೇವ ತಸ್ಯ ಚಾವಿದಿತಾತ್ಮನಃ ।**
**ಸೀತಾಂ ರಾಮಾಯ ವೈದೇಹೀಂ ಪ್ರೇಷಯೇತಿ ಪುನಃ ಪುನಃ ॥ ೩ ॥**
**ಉಕ್ತೋಽಪಿ ನ ಶೃಣೋತ್ಯೇವ ಕಾಲಪಾಶವಶಂಗತಃ ।**
**ಹಂತುಂ ಮಾಂ ಖಡ್ಗಮಾದಾಯ ಪ್ರಾದ್ರವದ್ ರಾಕ್ಷಸಾಧಮಃ ॥ ೪ ॥**
**ತತೋಽಚಿರೇಣ ಸಚಿವೈಶ್ಚತುರ್ಭಿಃ ಸಹಿತೋ ಭಯಾತ್ ।**
**ತ್ವಾಮೇವ ಭವಮೋಕ್ಷಾಯ ಮುಮುಕ್ಷುಃ ಶರಣಂ ಗತಃ ॥ ೫ ॥**

೩-೫. ಆ ಮೂರ್ಖನಿಗೆ ನಾನು ವೈದೇಹಿಯಾದ ಸೀತೆಯನ್ನು ರಾಮನಿಗೆ ಅರ್ಪಿಸು'-ಎಂದು ಮತ್ತೆ ಮತ್ತೆ ಹಿತವಚನವನ್ನುಹೇಳಿದೆನು. ಕಾಲಪಾಶಕ್ಕೆ ತುತ್ತಾಗಿರುವ ಆತನು ನಾನು ಹೇಳಿದಮೇಲೂ ಕೇಳಲೊಲ್ಲನು. ಆ ರಾಕ್ಷಸಾಧಮನು ಕತ್ತಿಯನ್ನು ತೆಗೆದುಕೊಂಡು ನನ್ನನ್ನು ಕೊಲ್ಲುವದಕ್ಕಾಗಿ ಓಡಿಬಂದನು. ಆಗ ನಾನು ಭಯದಿಂದ ಕೂಡಲೆ ನಾಲ್ಕು ಮಂತ್ರಿಗಳೊಡನೆ (ಹಾರಿಬಂದು) ಮುಮುಕ್ಷುವಾಗಿ ಸಂಸಾರದಿಂದ ಬಿಡುಗಡೆಹೊಂದುವ ಸಲುವಾಗಿ ನಿನ್ನನ್ನೇ ಶರಣುಹೊಂದಿರುತ್ತೇನೆ.

**ವಿಭೀಷಣವಚಃ ಶ್ರುತ್ವಾ ಸುಗ್ರೀವೋ ವಾಕ್ಯಮಬ್ರವೀತ್ ।**
**ವಿಶ್ವಾಸಾರ್ಹೋ ನ ತೇ ರಾಮ ಮಾಯಾವೀ ರಾಕ್ಷಸಾಧಮಃ ॥ ೬ ॥**
**ಸೀತಾಹರ್ತುರ್ವಿಶೇಷೇಣ ರಾವಣಸ್ಯಾನುಜೋ ಬಲೀ ।**
**ಮಂತ್ರಿಭಿಃ ಸಾಯುಧೈರಸ್ಮಾನ್ ವಿವರೇ ನಿಹನಿಷ್ಯತಿ ॥ ೭ ॥**
**ತದಾಜ್ಞಾಪಯ ಮೇ ದೇವ ವಾನರೈರ್ಹನ್ಯತಾಮಯಮ್**
**ಮಮೈವಂ ಭಾತಿ ತೇ ರಾಮ ಬುದ್ಧ್ಯಾ ಕಿಂ ನಿಶ್ಚಿತಂ ವದ ॥ ೮ ॥**

೬-೮. ವಿಭೀಷಣನ ಮಾತನ್ನು ಕೇಳಿ ಸುಗ್ರೀವನು ಹೀಗೆಂದನು : 'ಎಲೈ ರಾಮನೆ, ಈ ಮಾಯಾವಿಯಾದ ರಾಕ್ಷಸಾಧಮನು ನಂಬಲು ತಕ್ಕವನಲ್ಲ ; ಅದರಲ್ಲಿಯೂ ವಿಶೇಷವಾಗಿ ಬಲಿಷ್ಠನೂ ಸೀತಾಪಹಾರಿಯಾದ ರಾವಣನ ಸೋದರನೂ ಆಗಿದ್ದಾನೆ. ಇವನು ಆಯುಧಸಹಿತರಾದ ಮಂತ್ರಿಗಳೊಡಗೂಡಿ ಸಮಯವನ್ನು ಸಾಧಿಸಿ ನಮ್ಮನ್ನು ಕೊಲ್ಲಲಿದ್ದಾನೆ. ಆದ್ದರಿಂದ ಸ್ವಾಮಿ, ಅಪ್ಪಣೆಯನ್ನು ಕೊಡು. ಕಪಿಗಳು ಇವನನ್ನು ಸಂಹರಿಸಲಿ ; ನನಗೇನೋ ಹೀಗೆ ತೋರುತ್ತಿದೆ. ನೀನು ಏನು ನಿಶ್ಚಯಮಾಡುವೆಯೋ ಅದನ್ನು ಹೇಳು.'

**ಶ್ರುತ್ವಾ ಸುಗ್ರೀವವಚನಂ ರಾಮಃ ಸಸ್ಮಿತಮಬ್ರವೀತ್ ।**
**ಯದೀಚ್ಛಾಮಿ ಕಪಿಶ್ರೇಷ್ಠ ಲೋಕಾನ್ ಸರ್ವಾನ್ ಮಹೇಶ್ವರಾನ್ ॥ ೯ ॥**
**ನಿಮಿಷಾರ್ಧೇನ ಸಂಹನ್ಯಾಂ ಸೃಜಾಮಿ ನಿಮಿಷಾರ್ಧತಃ ।**
**ಅತೋ ಮಯಾಽಭಯಂ ದತ್ತಂ ಶೀಘ್ರಮಾನಯ ರಾಕ್ಷಸಮ್ ॥ ೧೦ ॥**
**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ ವ್ರತಂ ಮಮ ॥ ೧೧ ॥**

೯-೧೧. ಸುಗ್ರೀವನ ಮಾತನ್ನು ಕೇಳಿ ರಾಮನು ಮುಗುಳುನಗೆಯಿಂದ ಕೂಡಿ ಹೀಗೆಂದನು : 'ಎಲೈ ಕಪಿಶ್ರೇಷ್ಠನೆ, ನಾನು ಬಯಸುವೆನಾದರೆ ಒಡೆಯರುಗಳ ಸಮೇತವಾದ ಎಲ್ಲಾ ಲೋಕಗಳನ್ನೂ ಅರ್ಧನಿಮಿಷದಲ್ಲಿ ನಾಶಮಾಡಬಲ್ಲೆನು. ಹಾಗೆಯೇ ಅರ್ಧನಿಮಿಷದಲ್ಲಿ ಸೃಷ್ಟಿಸಲೂ ಬಲ್ಲೆನು. ಆದ್ದರಿಂದ ನಾನು(ಅವನಿಗೆ) ಅಭಯಪ್ರದಾನಮಾಡಿರುವೆನು. ಬೇಗನೆ ಆ ರಾಕ್ಷಸನನ್ನು ಕರೆತರುವವನಾಗು. 'ನಾನು ನಿನ್ನವನು - ಎಂದು ಒಮ್ಮೆ ಮಾತ್ರ ಹೇಳಿ ಶರಣಾಗತನಾಗಿ ಬೇಡುವ ಯಾವನಿಗಾದರೂ ಸರಿ, ಎಲ್ಲಾ ಪ್ರಾಣಿಗಳಿಗೂ ನಾನು ಅಭಯವನ್ನು ನೀಡುವೆನು. ಇದು ನನ್ನ ವ್ರತವು' (ಎಂದನು).

**ರಾಮಸ್ಯ ವಚನಂ ಶ್ರುತ್ವಾ ಸುಗ್ರೀವೋ ಹೃಷ್ಟಮಾನಸಃ ।**
**ವಿಭೀಷಣಮಥಾನಾಯ್ಯ ದರ್ಶಯಾಮಾಸ ರಾಘವಮ್ ॥ ೧೨ ॥**
**ವಿಭೀಷಣಸ್ತು ಸಾಷ್ಟಾಂಗಂ ಪ್ರಣಿಪತ್ಯ ರಘೂತ್ತಮಮ್ ।**
**ಹರ್ಷಗದ್ಗದಯಾ ವಾಚಾ ಭಕ್ತ್ಯಾ ಚ ಪರಯಾನ್ವಿತಃ ॥ ೧೩ ॥**
**ರಾಮಂ ಶ್ಯಾಮಂ ವಿಶಾಲಾಕ್ಷಂ ಪ್ರಸನ್ನಮುಖಪಂಕಜಮ್ ।**
**ಧನುರ್ಬಾಣಧರಂ ಶಾಂತಂ ಲಕ್ಷ್ಮಣೇನ ಸಮನ್ವಿತಮ್ ॥ ೧೪ ॥**
**ಕೃತಾಂಜಲಿಪುಟೋ ಭೂತ್ವಾ ಸ್ತೋತುಂ ಸಮುಪಚಕ್ರಮೇ ।**

೧೨-೧೪. ರಾಮನ ಮಾತನ್ನು ಕೇಳಿ ಸುಗ್ರೀವನು ಸಂತುಷ್ಟನಾಗಿ ವಿಭೀಷಣನನ್ನು ಕರೆತಂದು ರಾಮನ ದರ್ಶನವನ್ನು ಮಾಡಿಸಿದನು. ವಿಭೀಷಣನಾದರೊ, ಆ ರಘುಶ್ರೇಷ್ಠನಿಗೆ ಸಾಷ್ಟಾಂಗಪ್ರಣಾಮಗಳನ್ನರ್ಪಿಸಿ ಹೆಚ್ಚಿನ ಭಕ್ತಿಯಿಂದ ಕೂಡಿದವನಾಗಿ ನೀಲಮೇಘಶ್ಯಾಮನೂ ವಿಶಾಲನೇತ್ರನೂ ಪ್ರಸನ್ನವಾದ ಮುಖಕಮಲವುಳ್ಳವನೂ ಆದ, ಧನುರ್ಬಾಣಗಳನ್ನು ಧರಿಸಿರುವ, ಶಾಂತನಾದ ಲಕ್ಷ್ಮಣಯುತನಾದ ರಾಮನನ್ನು ಕೈಮುಗಿದುಕೊಂಡು ಸ್ತೋತ್ರಮಾಡಲಾರಂಭಿಸಿದನು.

**ವಿಭೀಷಣ ಉವಾಚ-**

**ನಮಸ್ತೇ ರಾಮರಾಜೇಂದ್ರ ನಮಃ ಸೀತಾಮನೋರಮ ।**
**ನಮಸ್ತೇ ಚಂಡಕೋದಂಡ ನಮಸ್ತೇ ಭಕ್ತವತ್ಸಲ ॥ ೧೫ ॥**
**ನಮೋಽನಂತಾಯ ಶಾಂತಾಯ ರಾಮಾಯಾಮಿತತೇಜಸೇ ।**
**ಸುಗ್ರೀವಮಿತ್ರಾಯ ಚ ತೇ ರಘೂಣಾಂ ಪತಯೇ ನಮಃ ॥ ೧೬ ॥**
**ಜಗದುತ್ಪತ್ತಿನಾಶಾನಾಂ ಕಾರಣಾಯ ಮಹಾತ್ಮನೇ ।**
**ತ್ರೈಲೋಕ್ಯಗುರವೇಽನಾದಿಗೃಹಸ್ಥಾಯ ನಮೋನಮಃ ॥ ೧೭ ॥**
**ತ್ವಮಾದಿರ್ಜಗತಾಂ ರಾಮ ತ್ವಮೇವ ಸ್ಥಿತಿಕಾರಣಮ್ ।**
**ತ್ವಮಂತೇ ನಿಧನಸ್ಥಾನಂ ಸ್ವೇಚ್ಛಾಚಾರಸ್ತ್ವಮೇವ ಹಿ ॥ ೧೮ ॥**

೧೫-೧೮. ವಿಭೀಷಣನಿಂತೆಂದನು : 'ರಾಜೇಂದ್ರರಾಮನೆ, ನಿನಗೆ ನಮಸ್ಕಾರವು. ಸೀತಾಮನೋರಮನೆ, ನಿನಗೆ ವಂದನೆಗಳು. ಭಯಂಕರವಾದ ಕೋದಂಡಧಾರಿಯೆ, ಭಕ್ತವತ್ಸಲನೆ, ಅನಂತನೂ, ಶಾಂತನೂ, ಅಪಾರ ತೇಜಸ್ಸುಳ್ಳವನೂ, ಸುಗ್ರೀವನ ಸ್ನೇಹಿತನೂ ರಘುವಂಶದವರಿಗೆ ಒಡೆಯನೂ ಆದ ನಿನಗೆ ನಮಸ್ಕಾರವು. ಪ್ರಪಂಚದ ಉತ್ಪತ್ತಿನಾಶಗಳಿಗೆ ಕಾರಣನೂ ಮಹಾತ್ಮನೂ ಮೂರು ಲೋಕಗಳಿಗೂ ಗುರುವೂ ಆದ ಅನಾದಿಗೃಹಸ್ಥನಾದ ನಿನಗೆ ನಮಸ್ಕಾರಗಳು. ಎಲೈ ರಾಮನೆ, ನೀನು ಜಗತ್ತಿಗೆ ಆದಿಯು ; ನೀನೇ ಸ್ಥಿತಿಕಾರಣನು ; ಕಡೆಯಲ್ಲಿ ನೀನೇ ಲಯಸ್ಥಾನನು. ಇಷ್ಟಾನುಸಾರವಾಗಿ ಸ್ವತಂತ್ರವಾಗಿ ನಡೆಯುವವನು ನೀನೇ.

**ಚರಾಚರಾಣಾಂ ಭೂತಾನಾಂ ಬಹಿರಂತಶ್ಚ ರಾಘವ ।**
**ವ್ಯಾಪ್ಯವ್ಯಾಪಕರೂಪೇಣ ಭವಾನ್ ಭಾತಿ ಜಗನ್ಮಯಃ ॥ ೧೯ ॥**
**ತ್ವನ್ಮಾಯಯಾ ಹೃತಜ್ಞಾನಾ ನಷ್ಟಾತ್ಮಾನೋ ವಿಚೇತಸಃ ।**
**ಗತಾಗತಂ ಪ್ರಪದ್ಯಂತೇ ಪಾಪಪುಣ್ಯವಶಾತ್ ಸದಾ ॥ ೨೦ ॥**
**ತಾವತ್ ಸತ್ಯಂ ಜಗದ್ ಭಾತಿ ಶುಕ್ತಿಕಾರಜತಂ ಯಥಾ ।**
**ಯಾವನ್ನ ಜ್ಞಾಯತೇ ಜ್ಞಾನಚೇತಸಾ ನಾನ್ಯಗಾಮಿನಾ ॥ ೨೧ ॥**
**ತ್ವದಜ್ಞಾನಾತ್ ಸದಾ ಯುಕ್ತಾಃ ಪುತ್ರದಾರಗೃಹಾದಿಷು ।**
**ರಮಂತೇ ವಿಷಯಾನ್ ಸರ್ವಾನಂತೇ ದುಃಖಪ್ರದಾನ್ ವಿಭೋ ॥ ೨೨ ॥**

೧೯-೨೨. ಎಲೈ ರಾಮನೆ, ಸ್ಥಾವರಜಂಗಮಾತ್ಮಕವಾದ ಎಲ್ಲಾ ಭೂತಗಳ ಒಳಗೂ ಹೊರಗೂ ವ್ಯಾಪ್ಯವ್ಯಾಪಕರೂಪದಿಂದ ನೀನೇ ಪ್ರಪಂಚವನ್ನೆಲ್ಲ ವ್ಯಾಪಿಸಿ ಇದ್ದುಕೊಂಡಿರುವೆ. ನಿನ್ನ ಮಾಯೆಯಿಂದ ಮರೆಮಾಡಲ್ಪಟ್ಟ ತಿಳಿವಳಿಕೆಯ, ನಷ್ಟಾತ್ಮರಾದ, ಮಂದಮತಿಗಳು ಯಾವಾಗಲೂ ಪಾಪಪುಣ್ಯಗಳ ನಿಮಿತ್ತವಾಗಿ (ಸಂಸಾರಕ್ಕೆ)

ಬಂದೂ ಹೋಗೀ ಮಾಡುತ್ತಿರುವರು. ಬೇರೊಂದು ಕಡೆಗೆ ಹರಿಯದಿರುವ ಜ್ಞಾನ ಯುಕ್ತವಾದ ಅಂತಃಕರಣದಿಂದ ನಿನ್ನ ತತ್ತ್ವವು ಎಲ್ಲಿಯವರೆಗೆ ಅರಿಯಲ್ಪಡುವ ದಿಲ್ಲವೋ ಅಲ್ಲಿಯವರೆಗೆ - ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿಯು ಕಂಡಂತೆ - ಪ್ರಪಂಚವು ಸತ್ಯವಾಗಿ ಕಂಡುಬರುತ್ತಿರುವದು. ಎಲೈ ವಿಭುವೆ, ನಿನ್ನನ್ನು ಅರಿಯದೆ ಇರುವದರ ನಿಮಿತ್ತ (ಜನರು) ಯಾವಾಗಲೂ ಮಗ, ಹೆಂಡತಿ, ಮನೆ-ಮುಂತಾದವುಗಳಲ್ಲಿ ಆಸಕ್ತರಾಗಿ, ಕಡೆಯಲ್ಲಿ ದುಃಖವನ್ನುಂಟುಮಾಡುವ ವಿಷಯಗಳಲ್ಲಿಯೇ ಮುಳುಗಿರುತ್ತಾರೆ.

**ತ್ವಮಿಂದ್ರೋಽಗ್ನಿರ್ಯಮೋ ರಕ್ಷೋ ವರುಣಶ್ಚ ತಥಾಽನಿಲಃ ।**
**ಕುಬೇರಶ್ಚ ತಥಾ ರುದ್ರಸ್ತ್ವಮೇವ ಪುರುಷೋತ್ತಮ ॥ ೨೩ ॥**
**ತ್ವಮಣೋರಪ್ಯಣೀಯಾಂಶ್ಚ ಸ್ಥೂಲಾತ್ ಸ್ಥೂಲತರಃ ಪ್ರಭೋ ।**
**ತ್ವಂ ಪಿತಾ ಸರ್ವಲೋಕಾನಾಂ ಮಾತಾ ಧಾತಾ ತ್ವಮೇವ ಹಿ ॥ ೨೪ ॥**
**ಆದಿಮಧ್ಯಾಂತರಹಿತಃ ಪರಿಪೂರ್ಣೋಽಚ್ಯುತೋಽವ್ಯಯಃ ।**
**ತ್ವಂ ಪಾಣಿಪಾದರಹಿತಃ ಚಕ್ಷುಃಶ್ರೋತ್ರವಿವರ್ಜಿತಃ ॥ ೨೫ ॥**
**ಶ್ರೋತಾ ದ್ರಷ್ಟಾ ಗ್ರಹೀತಾ ಚ ಜವನಸ್ತ್ವಂ ಖರಾಂತಕ ।**
**ಕೋಶೇಭ್ಯೋ ವ್ಯತಿರಿಕ್ತಸ್ತ್ವಂ ನಿರ್ಗುಣೋ ನಿರುಪಾಶ್ರಯಃ ॥ ೨೬ ॥**
**ನಿರ್ವಿಕಲ್ಪೋ ನಿರ್ವಿಕಾರೋ ನಿರಾಕಾರೋ ನಿರೀಶ್ವರಃ ।**
**ಷಡ್ಭಾವರಹಿತೋಽನಾದಿಃ ಪುರುಷಃ ಪ್ರಕೃತೇಃ ಪರಃ ॥ ೨೭ ॥**

೨೩-೨೭. ನೀನೇ ಇಂದ್ರನು, ಅಗ್ನಿಯು, ಯಮನು, ನಿಋುಋುತಿಯು ವರುಣನು, ಹಾಗೂ ವಾಯುವು. ಎಲೈ ಪುರುಷೋತ್ತಮನೆ, ನೀನೇ ಕುಬೇರನು, ರುದ್ರನು (ಈಶಾನನು) ಆಗಿರುವೆ. ಪ್ರಭುವೆ, ನೀನು ಚಿಕ್ಕದಕ್ಕಿಂತ ಅತಿಚಿಕ್ಕದಾಗಿರು ವವನೂ ದೊಡ್ಡದಕ್ಕಿಂತ ಅತಿದೊಡ್ಡದಾಗಿರುವನೂ ಆಗಿರುವೆ. ನೀನೇ ಎಲ್ಲಾ ಲೋಕಗಳಿಗೂ ತಾಯಿ, ಒಡೆಯನು, ಎಲ್ಲವೂ ಆಗಿರುವೆ. ಆದಿ-ಮಧ್ಯ- ಅಂತ್ಯ ಗಳಿಲ್ಲದವನೂ ಪರಿಪೂರ್ಣನೂ, ಅವ್ಯಯನೂ ಆಗಿರುತ್ತೀಯೆ. ನೀನು ಕೈಕಾಲು ಗಳಿಲ್ಲದವನು ; ಕಣ್ಣು ಕಿವಿಗಳಿಲ್ಲದವನು ; ಆದರೇನು ? ಕೇಳುವವನೂ, ನೋಡು ವವನೂ, ತೆಗೆದುಕೊಳ್ಳು ವವನೂ ವೇಗವಾಗಿ ನಡೆಯುವವನೂ ಎಲೈ ಖರ ಸಂಹಾರಕನೆ, ನೀನಾಗಿರುವೆ. (ಐದು) ಕೋಶಗಳಿಗಿಂತ ವಿಲಕ್ಷಣನೂ ನಿರ್ಗುಣನೂ ಆಧಾರರಹಿತನೂ ನಿರ್ವಿಕಲ್ಪನೂ ನಿರ್ವಿಕಾರನೂ, ನಿರಾಕಾರನೂ ನಿನಗೆ ಬೇರೊಬ್ಬ ಒಡೆಯನಿಲ್ಲದವನೂ (ಜನ್ಮಾದಿ) ಆರು ಭಾವವಿಕಾರಗಳಿಲ್ಲದವನೂ ಆದ, ಪ್ರಕೃತಿ ಯನ್ನು ಮೀರಿದ ಅನಾದಿಪುರುಷನಾಗಿರುವೆ.

**ಮಾಯಯಾ ಗೃಹ್ಯಮಾಣಸ್ತ್ವಂ ಮನುಷ್ಯ ಇವ ಭಾವ್ಯಸೇ ।**
**ಜ್ಞಾತ್ವಾ ತ್ವಾಂ ನಿರ್ಗುಣಮಜಂ ವೈಷ್ಣವಾ ಮೋಕ್ಷಗಾಮಿನಃ ॥ ೨೮ ॥**
**ಅಹಂ ತ್ವತ್ಪಾದಸದ್ಭಕ್ತಿನಿಃಶ್ರೇಣೀಂ ಪ್ರಾಪ್ಯ ರಾಘವ ।**
**ಇಚ್ಛಾಮಿ ಜ್ಞಾನಯೋಗಾಖ್ಯಂ ಸೌಧಮಾರೋಢುಮೀಶ್ವರ ॥ ೨೯ ॥**
**ನಮಃ ಸೀತಾಪತೇ ರಾಮ ನಮಃ ಕಾರುಣಿಕೋತ್ತಮ ।**
**ರಾವಣಾರೇ ನಮಸ್ತುಭ್ಯಂ ತ್ರಾಹಿ ಮಾಂ ಭವಸಾಗರಾತ್ ॥ ೩೦ ॥**
**ತತಃ ಪ್ರಸನ್ನಃ ಪ್ರೋವಾಚ ಶ್ರೀರಾಮೋ ಭಕ್ತವತ್ಸಲಃ ।**
**ವರಂ ವೃಣೀಷ್ವ ಭದ್ರಂ ತೇ ವಾಂಛಿತಂ ವರದೋಽಸ್ಮ್ಯಹಮ್ ॥ ೩೧ ॥**

೨೮-೩೧. ಮಾಯೆಯ (ಕಣ್ಣಿನಿಂದ) ನೋಡಿದಾಗ ನೀನು ಮನುಷ್ಯನಂತೆ ಕಂಡುಬರುವೆ. ವೈಷ್ಣವರು ನಿನ್ನನ್ನು ನಿರ್ಗುಣನೆಂದೂ ಜನ್ಮವಿಲ್ಲದವನೆಂದೂ ಅರಿತವರಾಗಿ ಮುಕ್ತಿಯನ್ನು ಹೊಂದುವರು. ರಾಘವನೆ, ಒಡೆಯನೆ, ನಾನು ನಿನ್ನ ಪಾದಕಮಲ ಭಕ್ತಿಯೆಂಬ ಮೆಟ್ಟಿಲುಸರಣಿಯನ್ನು ಪಡೆದು ಆ ಮೂಲಕ ಜ್ಞಾನ ಯೋಗವೆಂಬ ಉಪ್ಪರಿಗೆಯನ್ನು ಏರಲು ಬಯಸುತ್ತಿರುವೆನು. ಸೀತಾಪತಿಯಾದ ರಾಮನೆ, ಕಾರುಣ್ಯಪೂರ್ಣನೆ, ರಾವಣವೈರಿಯೆ, ನಿನಗೆ ನಮಸ್ಕಾರ ; ನನ್ನನ್ನು ಸಂಸಾರಸಮುದ್ರದಿಂದ ಕಾಪಾಡು.' ಎಂದು ಸ್ತೋತ್ರಮಾಡಿದನು. ಭಕ್ತವತ್ಸಲನಾದ ಶ್ರೀರಾಮನು ಆಗ ಪ್ರಸನ್ನನಾಗಿ ಹೀಗೆಂದನು : 'ಎಲೈ (ಭಕ್ತನೆ), ನಿನಗೆ ಮಂಗಳವಾಗಲಿ ; ನಿನ್ನ ಇಷ್ಟಾರ್ಥವನ್ನು ಕೊಡಲು ನಾನು ವರದನಾಗಿ ಸಿದ್ಧನಾಗಿರುವೆನು.

**ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಕೃತಕಾರ್ಯೋಽಸ್ಮಿ ರಾಘವ ।**
**ತ್ವತ್ಪಾದದರ್ಶನಾದೇವ ವಿಮುಕ್ತೋಽಸ್ಮಿ ನ ಸಂಶಯಃ ॥ ೩೨ ॥**
**ನಾಸ್ತಿ ಮತ್ಸದೃಶೋ ಧನ್ಯೋ ನಾಸ್ತಿ ಮತ್ಸದೃಶಃ ಶುಚಿಃ ।**
**ನಾಸ್ತಿ ಮತ್ಸದೃಶೋ ಲೋಕೇ ರಾಮ ತ್ವನ್ಮೂರ್ತಿದರ್ಶನಾತ್ ॥ ೩೩ ॥**
**ಕರ್ಮಬಂಧವಿನಾಶಾಯ ತ್ವತ ಜ್ಞಾನಂ ಭಕ್ತಿಲಕ್ಷಣಮ್ ।**
**ತ್ವದ್ಧ್ಯಾನಂ ಪರಮಾರ್ಥಂ ಚ ದೇಹಿ ಮೇ ರಘುನಂದನ ॥ ೩೪ ॥**
**ನ ಯಾಚೇ ರಾಮ ರಾಜೇಂದ್ರ ಸುಖಂ ವಿಷಯಸಂಭವಮ್ ।**
**ತ್ವತ್ಪಾದಕಮಲೇ ಸಕ್ತಾ ಭಕ್ತಿರೇವ ಸದಾಽಸ್ತು ಮೇ ॥ ೩೫ ॥**

೩೨-೩೫. ವಿಭೀಷಣನಿಂತೆಂದನು ; 'ರಾಘವನೆ, ನಾನು ಧನ್ಯನಾದೆನು ; ಕೃತಕೃತ್ಯನಾದೆನು ; ಕೃತಾರ್ಥನಾದೆನು; ನಿನ್ನ ಪಾದಕಮಲಗಳ ದರ್ಶನಮಾತ್ರದಿಂದ (ಸಂಸಾರದಿಂದ) ಬಿಡುಗಡೆಹೊಂದಿದೆನು. ಇನ್ನು ಲೋಕದಲ್ಲಿ ನನಗೆ ಸಮಾನನಾದ ಧನ್ಯನಿಲ್ಲ. ಶುಚಿಯಾದವನಿಲ್ಲ ; ರಾಮನೆ, ನಿನ್ನ ದಿವ್ಯರೂಪವನ್ನು ದರ್ಶನಮಾಡಿದ್ದರಿಂದ ನನಗಿಂತ ಲೋಕದಲ್ಲಿ ಮಿಗಿಲಾದವರಿಲ್ಲ. ಕರ್ಮಬಂಧವನ್ನು ಕಳೆದು

ಕೊಳ್ಳುವದಕ್ಕಾಗಿ ಭಕ್ತಿರೂಪವಾದ ನಿನ್ನ ಜ್ಞಾನವನ್ನೂ ನಿನ್ನ ಪರಮಾರ್ಥಸ್ವರೂಪದ ಚಿಂತನೆಯನ್ನೂ ಎಲೈ ರಘುನಂದನನೆ, ನನಗೆ ನೀಡುವವನಾಗು; ರಾಜೇಂದ್ರನಾದ ರಾಮನೆ, ವಿಷಯಗಳಿಂದಾಗುವ ಸುಖವನ್ನು ನಾನು ಬೇಡುವದಿಲ್ಲ ; ಆದರೆ ಯಾವಾಗಲೂ ನಿನ್ನ ಪಾದಕಮಲಗಳಲ್ಲಿ ಅನುರಕ್ತವಾದ ಭಕ್ತಿಯೊಂದೇ ನನಗಿರಲಿ.'

**ಓಮಿತ್ಯುಕ್ತ್ವಾ ಪುನಃ ಪ್ರೀತೋ ರಾಮಃ ಪ್ರೋವಾಚ ರಾಕ್ಷಸಮ್ ।**
**ಶೃಣು ವಕ್ಷ್ಯಾಮಿ ತೇ ಭದ್ರ ರಹಸ್ಯಂ ಮಮ ನಿಶ್ಚಿತಮ್ ॥ ೩೬ ॥**
**ಮದ್ಭಕ್ತಾನಾಂ ಪ್ರಶಾಂತಾನಾಂ ಯೋಗಿನಾಂ ವೀತರಾಗಿಣಾಮ್ ।**
**ಹೃದಯೇ ಸೀತಯಾ ನಿತ್ಯಂ ವಸಾಮ್ಯತ್ರ ನ ಸಂಶಯಃ ॥ ೩೭ ॥**
**ತಸ್ಮಾತ್ ತ್ವಂ ಸರ್ವದಾ ಶಾಂತಃ ಸರ್ವಕಲ್ಮಷವರ್ಜಿತಃ ।**
**ಮಾಂ ಧ್ಯಾತ್ವಾ ಮೋಕ್ಷಸೇ ನಿತ್ಯಂ ಘೋರಸಂಸಾರಸಾಗರಾತ್ ॥ ೩೮ ॥**
**ಸ್ತೋತ್ರಮೇವತ್ ಪಠೇದ್ಯಸ್ತು ಲಿಖೇದ್ಯಃ ಶೃಣುಯಾದಪಿ ।**
**ಮತ್ ಪ್ರೀತಯೇ ಮಮಾಭೀಷ್ಟಂ ಸಾರೂಪ್ಯಂ ಸಮವಾಪ್ನುಯಾತ್ ॥**

೩೬-೩೯. ಹಾಗೆಯೇ ಆಗಲಿ, ಎಂದು ಹೇಳಿ ಮತ್ತೆ ರಾಮನು ರಾಕ್ಷಸನನ್ನು ಕುರಿತು ಹೀಗೆಂದನು : ಎಲೈ ಮಂಗಳನೆ, ಕೇಳು. ನನ್ನ ಗುಟ್ಟನ್ನೂ ಅಭಿಪ್ರಾಯವನ್ನೂ ಹೇಳುವೆನು. ಯಾರು ಆಶೆಗಳಿಲ್ಲದವರಾಗಿ ಪ್ರಶಾಂತಚಿತ್ತರಾಗಿ ಯೋಗಿಗಳಾಗಿ ನನ್ನ ಭಕ್ತರಾಗಿರುವರೋ ಅಂಥವರ ಹೃದಯದಲ್ಲಿ ನಾನು ಸೀತೆಯೊಡನೆ ಯಾವಾಗಲೂ ವಾಸವಾಗಿರುವೆನು. ಈ ಬಗ್ಗೆ ಸಂಶಯವಿಲ್ಲ. ಆದ್ದರಿಂದ ನೀನು ಯಾವಾಗಲೂ ಶಾಂತನಾಗಿಯೂ ಪಾಪಗಳಿಲ್ಲದವನಾಗಿಯೂ ಇದ್ದುಕೊಂಡು ನನ್ನನ್ನು ಧ್ಯಾನಮಾಡುವೆಯಾದರೆ ಭಯಂಕರವಾದ ಈ ಸಂಸಾರಸಾಗರವನ್ನು ದಾಟುವೆ. ನೀನು ಮಾಡಿರುವ ಈ ಸ್ತೋತ್ರವನ್ನು ಯಾವನು ಬರೆಯುವನೋ ಅಥವಾ ಕೇಳುವನೋ ಅವನು ನನ್ನ ಪ್ರೀತಿಯನ್ನು ಸಂಪಾದಿಸಿದವನಾಗಿ ನನಗೆ ಇಷ್ಟವಾದ ಸಾರೂಪ್ಯಮುಕ್ತಿಯನು ಹೊಂದುವನು.

**ಇತ್ಯುಕ್ತ್ವಾ ಲಕ್ಷ್ಮಣಂ ಪ್ರಾಹ ಶ್ರೀರಾಮೋ ಭಕ್ತಭಕ್ತಿಮಾನ್ ।**
**ಪಶ್ಯತ್ವಿದಾನೀಮೇವೈಷ ಮಮ ಸಂದರ್ಶನೇ ಫಲಮ್ ॥ ೪೦ ॥**
**ಲಂಕಾರಾಜ್ಯೇಽಭಿಷೇಕ್ಷ್ಯಾಮಿ ಜಲಮಾನಯ ಸಾಗರಾತ್ ।**
**ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥ ೪೧ ॥**
**ಯಾವನ್ಮಮ ಕಥಾ ಲೋಕೇ ತಾವದ್ರಾಜ್ಯಂ ಕರೋತ್ವಸೌ ।**
**ಇತ್ಯುಕ್ತ್ವಾ ಲಕ್ಷ್ಮಣೇನಾಂಬು ಹ್ಯಾನಾಯ್ಯ ಕಲಶೇನ ತಮ್ ॥ ೪೨ ॥**
**ಲಂಕಾರಾಜ್ಯಾಧಿಪತ್ಯಾರ್ಥಂ ಅಭಿಷೇಕಂ ರಮಾಪತಿಃ ।**
**ಕಾರಯಾಮಾಸ ಸಚಿವೈಃ ಲಕ್ಷ್ಮಣೇನ ವಿಶೇಷತಃ ॥ ೪೩ ॥**

೪೦-೪೩. ಹೀಗೆಂದು ಹೇಳಿ ಭಕ್ತರಲ್ಲಿ ಪ್ರೇಮವುಳ್ಳ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು : 'ಈತನು ಈಗಲೇ ನನ್ನ ದರ್ಶನದ ಫಲವೇನೆಂಬುದನ್ನು ಕಂಡುಕೊಳ್ಳಲಿ ! ಇದೊ, ಇವನನ್ನು ಲಂಕಾರಾಜ್ಯಕ್ಕೆ ಒಡೆಯನನ್ನಾಗಿ ಅಭಿಷೇಕ ಮಾಡುವೆನು. ಸಮುದ್ರದಿಂದ ನೀರನ್ನು ತೆಗೆದುಕೊಂಡು ಬಾ. ಎಲ್ಲಿಯವರೆಗೆ ಸೂರ್ಯಚಂದ್ರರೂ ಭೂಮಿಯೂ ಇದ್ದುಕೊಂಡಿರುವರೋ ಎಲ್ಲಿಯವರೆಗೆ ನನ್ನ ಕಥೆಯು ಜಗತ್ತಿನಲ್ಲಿ ಕೊಂಡಾಡಲ್ಪಡುತ್ತಿರುವದೋ ಅಲ್ಲಿಯವರೆಗೂ ಈತನು ರಾಜ್ಯಭಾರಮಾಡಲಿ.' ಹೀಗೆಂದು ಹೇಳಿ ಲಕ್ಷ್ಮಣನ ಮೂಲಕ ಕಲಶದಿಂದ ನೀರನ್ನು ತರಿಸಿ ಅವನನ್ನು ಲಂಕಾರಾಜ್ಯದ ಒಡೆಯನಾಗಿ ರಮಾಪತಿಯಾದ ರಾಮನು ಮಂತ್ರಿಗಳಿಂದಲೂ ವಿಶೇಷವಾಗಿ ಲಕ್ಷ್ಮಣನಿಂದಲೂ ಅಭಿಷೇಕಮಾಡಿಸಿದನು.

**ಸಾಧು ಸಾಧ್ವಿತಿ ತೇ ಸರ್ವೇ ವಾನರಾಸ್ತುಷ್ಟುವುರ್ಭೃಶಮ್ ।**
**ಸುಗ್ರೀವೋಽಪಿ ಪರಿಷ್ವಜ್ಯ ವಿಭೀಷಣಮಥಾಬ್ರವೀತ್ ॥ ೪೪ ॥**
**ವಿಭೀಷಣ ವಯಂ ಸರ್ವೇ ರಾಮಸ್ಯ ಪರಮಾತ್ಮನಃ ।**
**ಕಿಂಕರಾಸ್ತತ್ರ ಮುಖ್ಯಸ್ತ್ವಂ ಭಕ್ತ್ಯಾ ರಾಮಪರಿಗ್ರಹಾತ್ ॥ ೪೫ ॥**
**ರಾವಣಸ್ಯ ವಿನಾಶೇ ತ್ವಂ ಸಾಹಾಯ್ಯಂ ಕರ್ತುಮರ್ಹಸಿ ।**

೪೪-೪೫. ಸಾಧು-ಬಹಳ ಸಂತೋಷ - ಎಂದು ಕಪಿಗಳೆಲ್ಲರೂ ಬಹಳವಾಗಿ ಕೊಂಡಾಡಿದರು. ಸುಗ್ರೀವನುಕೂಡ ವಿಭೀಷಣನನ್ನು ಅಪ್ಪಿಕೊಂಡು ಹೀಗೆಂದನು : 'ಎಲೈ ವಿಭೀಷಣನೆ, ನಾವೆಲ್ಲರೂ ಪರಮಾತ್ಮನಾದ ರಾಮನ ಸೇವಕರು. ನೀನಾದರೊ, ಭಕ್ತಿಯಿಂದ ರಾಮನಿಂದ ಸ್ವೀಕರಿಸಲ್ಪಟ್ಟಿರುವದರಿಂದ (ನಮ್ಮ ನಡುವೆ) ಮುಖ್ಯನು. ರಾವಣನನನ್ನು ಸಂಹಾಮಾಡುವ ಬಗ್ಗೆ ಸಹಾಯ ಮಾಡುವವನಾಗಬೇಕು.

**ವಿಭೀಷಣ ಉವಾಚ-**

**ಅಹಂ ಕಿಯಾನ್ ಸಹಾಯತ್ವೇ ರಾಮಸ್ಯ ಪರಮಾತ್ಮನಃ ।**
**ಕಿಂ ತು ದಾಸ್ಯಂ ಕರಿಷ್ಯೇಽಹಂ ಭಕ್ತ್ಯಾ ಶಕ್ತ್ಯಾ ಹ್ಯಮಾಯಯಾ ॥ ೪೬ ॥**

೪೬. ವಿಭೀಷಣನಿಂತೆಂದನು : 'ಪರಮಾತ್ಮನಾದ ರಾಮನಿಗೆ ಸಹಾಯ ಮಾಡುವದಕ್ಕೆ ನಾನು ಎಷ್ಟರವನು ? ಆದರೆ ಭಕ್ತಿಯಿಂದ, ಶಕ್ತಿಯಿದ್ದಷ್ಟು ಮಟ್ಟಿಗೂ ನಿರ್ವಂಚನೆಯಿಂದ ಸೇವೆಯನ್ನು ಮಾಡುವೆನು.'

**ದಶಗ್ರೀವೇಣ ಸಂದಿಷ್ಟಃ ಶುಕೋ ನಾಮ ಮಹಾಸುರಃ ।**
**ಸಂಸ್ಥಿತೋ ಹ್ಯಂಬರೇ ವಾಕ್ಯಂ ಸುಗ್ರೀವಮಿದಮಬ್ರವೀತ್ ॥ ೪೭ ॥**

**ತ್ವಾಮಾಹ ರಾವಣೋ ರಾಜಾ ಭ್ರಾತರಂ ರಾಕ್ಷಸಾಧಿಪಃ ।**
**ಮಹಾಕುಲಪ್ರಸೂತಸ್ತ್ವಂ ರಾಜಾಸಿ ವನಚಾರಿಣಾಮ್ ॥ ೪೮ ॥**
**ಮಮ ಭ್ರಾತೃಸಮಾನಸ್ತ್ವಂ ತವ ನಾಸ್ತ್ಯರ್ಥವಿಪ್ಲವಃ ।**
**ಅಹಂ ಯದಹರಂ ಭಾರ್ಯಾಂ ರಾಜಪುತ್ರಸ್ಯ ಕಿಂ ತವ ॥ ೪೯ ॥**
**ಕಿಷ್ಕಿಂಧಾಂ ಯಾಹಿ ಹರಿಭಿರ್ಲಂಕಾ ಶಕ್ಯಾ ನ ದೈವತೈಃ ।**
**ಪ್ರಾಪ್ತುಂ ಕಿಂ ಮಾನವೈರಲ್ಪಸತ್ತ್ವೈಃ ವಾನರಯೂಥಪೈಃ ॥ ೫೦ ॥**

೪೭-೫೦. ರಾವಣನಿಂದ ಹೇಳಿ ಕಳುಹಿಸಲ್ಪಟ್ಟ ಶುಕನೆಂಬ ರಾಕ್ಷಸನು ಆಕಾಶದಲ್ಲಿ ನಿಂತುಕೊಂಡು ಸುಗ್ರೀವನನ್ನು ಕುರಿತು ಹೀಗಂದನು : 'ಎಲೈ, ರಾಕ್ಷಸಾಧಿಪನಾದ ರಾವಣನೆಂಬ ರಾಜನು ಸೋದರನಾದ ನಿನಗೆ ಹೀಗೆ ಹೇಳುತ್ತಿರುವನು. ಏನೆಂದರೆ : ನೀನು ಉತ್ತಮವಂಶದಲ್ಲಿ ಹುಟ್ಟಿರುವೆ. ಕಪಿಗಳಿಗೆ ರಾಜನಾಗಿರುವೆ. ನನಗೆ ಸೋದರಸಮಾನನಾಗಿರುವೆ ನಿನಗೇನೂ ಈಗ ಧನಹಾನಿಯಾಗಿರುವದಿಲ್ಲ. (ಕಷ್ಟವು ಬಂದಿಲ್ಲ). ರಾಜಪುತ್ರನಾದ (ರಾಮನ) ಹೆಂಡತಿಯನ್ನು ನಾನು ಕದ್ದುತಂದಿರುವ ವಿಚಾರವನ್ನು ಕಟ್ಟಿಕೊಂಡು ನಿನಗೇನು ? ಈಗ ನೀನು ಕಪಿಗಳೊಡನೆ ಕಿಷ್ಕಿಂಧೆಗೆ ಹಿಂದಿರುಗುವವನಾಗು. ಲಂಕೆಯನ್ನು ಜಯಿಸುವದು ದೇವತೆಗಳಿಂದಲೂ ಆಗಲಾರದು. ಹೀಗಿರುವಲ್ಲಿ ಅಲ್ಪರಾದ ಮನುಷ್ಯರಿಂದಲೂ ಕಪಿಗಳ ಹಿಂಡಿನಿಂದಲೂ ಸಾಧ್ಯವಾದೀತೇನು ?'

**ತಂ ಪ್ರಾಪಯಂತಂ ವಚನಂ ತೂರ್ಣಮುತ್ಪ್ಲುತ್ಯ ವಾನರಾಃ ।**
**ಪ್ರಾಪದ್ಯಂತ ತದಾ ಕ್ಷಿಪ್ರಂ ನಿಹಂತುಂ ದೃಢಮುಷ್ಟಿಭಿಃ ॥ ೫೧ ॥**
**ವಾನರೈರ್ಹನ್ಯಮಾನಸ್ತು ಶುಕೋ ರಾಮಮಥಾಬ್ರವೀತ್ ।**
**ನ ದೂತಾನ್ ಘ್ನಂತಿ ರಾಜೇಂದ್ರ ವಾನರಾನ್ ವಾರಯ ಪ್ರಭೋ ॥ ೫೨ ॥**
**ರಾಮಃ ಶ್ರುತ್ವಾ ತದಾ ವಾಕ್ಯಂ ಶುಕಸ್ಯ ಪರಿದೇವಿತಮ್ ।**
**ಮಾ ವಧಿಷ್ಟೇತಿ ರಾಮಸ್ತಾನ್ ವಾರಯಾಮಾಸ ವಾನರಾನ್ ॥ ೫೩ ॥**

೫೧-೫೩. ಹೀಗೆ (ಸಂದೇಶದ)ಮಾತನ್ನು ಮುಟ್ಟಿಸುತ್ತಿರುವ ಅವನನ್ನು ಕಪಿಗಳು ಬೇಗನೆ ನೆಗೆದು ಹಿಡಿದರು. ತಮ್ಮ ಗಟ್ಟಿಯಾದ ಗುದ್ದುಗಳಿಂದ ಕೂಡಲೆ ಹೊಡೆಯಲೆಳಸಿದರು. ಆಗ ಕಪಿಗಳಿಂದ ಏಟುತಿನ್ನುತ್ತಿದ್ದ ಶುಕನು ರಾಮನನ್ನು ಕುರಿತು ಹೀಗೆಂದನು : 'ಎಲೈ ರಾಜೇಂದ್ರನೆ, ಯಾವಾಗಲೂ ದೂತರನ್ನು (ಯಾರೂ) ಕೊಲ್ಲುವದಿಲ್ಲ. ಪ್ರಭುವೆ, ಕಪಿಗಳನ್ನು ತಡೆಯುವವನಾಗು.' ಆಗ ರಾಮನು ಆ ಮಾತನ್ನು ಕೇಳಿ ಹಾಗೂ ಶುಕನ ಗೋಳನ್ನು ನೋಡಿ ಆ ಕಪಿಗಳನ್ನು ಕುರಿತು 'ಕೊಲ್ಲಬೇಡಿರಿ' ಎಂದು ತಡೆದನು.

**ಪುನರಂಬರಮಾಸಾದ್ಯ ಶುಕಃ ಸುಗ್ರೀವಮಬ್ರವೀತ್ ।**
**ಬ್ರೂಹಿ ರಾಜನ್ ದಶಗ್ರೀವಂ ಕಿಂ ವಕ್ಷ್ಯಾಮಿ ವ್ರಜಾಮ್ಯಹಮ್ ॥ ೫೪ ॥**

**ಸುಗ್ರೀವ ಉವಾಚ-**

**ಯಥಾ ವಾಲೀ ಮಮ ಭ್ರಾತಾ ತಥಾ ತ್ವಂ ರಾಕ್ಷಸಾಧಮ ।**
**ಹಂತವ್ಯಸ್ತ್ವಂ ಮಯಾ ಯತ್ನಾತ್ ಸಪುತ್ರಬಲವಾಹನಃ ॥ ೫೫ ॥**
**ಬ್ರೂಹಿ ಮೇ ರಾಮಚಂದ್ರಸ್ಯ ಭಾರ್ಯಾಂ ಹೃತ್ವಾ ಕ್ವ ಯಾಸ್ಯಸಿ ।**
**ತತೋ ರಾಮಾಜ್ಞಯಾ ಧೃತ್ವಾ ಶುಕಂ ಬದ್ಧ್ವಾನ್ವರಕ್ಷಯತ್ ॥ ೫೬ ॥**

೫೪-೫೬. ಮತ್ತೆ ಆಕಾಶಕ್ಕೆ ಹಾರಿ ಶುಕನು ಸುಗ್ರೀವನನ್ನು ಕುರಿತು ಹೀಗೆಂದನು : 'ಎಲೈ ರಾಜನೆ, ನಾನು ಹೊರಟಿರುವೆನು ; ರಾವಣನಿಗೆ ಏನು ಹೇಳಲಿ? ಹೇಳು'. ಆಗ ಸುಗ್ರೀವನಿಂತೆಂದನು : 'ಹೇಗೆ ನನ್ನ ಸೋದರನಾದ ವಾಲಿಯು (ರಾಮನಿಂದ ಹತನಾದನೋ ಹಾಗೆ) ಎಲೈ ರಾಕ್ಷಸಾಧಮನೆ, ನೀನು ಮಕ್ಕಳು, ಸೇನೆ, ವಾಹನಗಳೊಡನೆ ನನ್ನಿಂದ ಪ್ರಯತ್ನಪೂರ್ವಕವಾಗಿ ಕೊಲ್ಲಲ್ಪಡ ಬೇಕಾಗಿದೆ. ನನ್ನ ಮಾತನ್ನು (ರಾವಣನಿಗೆ ಹೇಳು); ರಾಮಚಂದ್ರನ ಧರ್ಮ ಪತ್ನಿಯನ್ನು ಕದ್ದು ಎಲ್ಲಿಗೆ ಹೋದೀಯೆ?' (ಎಂದು ತಿಳಿಸಿದನು). ಅನಂತರ ರಾಮನ ಅಪ್ಪಣೆಯಂತೆ ಶುಕನನ್ನು ಹಿಡಿದು ಬಂಧಿಸಿ ಕಾಪಾಡಿಟ್ಟನು.

**ಶಾರ್ದೂಲೋಽಪಿ ತತಃ ಪೂರ್ವಂ ದೃಷ್ಟ್ವಾ ಕಪಿಬಲಂ ಮಹತ್ ।**
**ಯಥಾವತ್ ಕಥಯಾಮಾಸ ರಾವಣಾಯ ಸ ರಾಕ್ಷಸಃ ॥ ೫೭ ॥**
**ದೀರ್ಘಚಿಂತಾಪರೋ ಭೂತ್ವಾ ನಿಃಶ್ವಸನ್ನಾಸ ಮಂದಿರೇ ।**

೫೭. ಶಾರ್ದೂಲನೆಂಬ (ರಾಕ್ಷಸನು) ಕೂಡ ಮುಂಚೆಯೇ ಆ ದೊಡ್ಡ ಕಪಿಬಲವನ್ನು ಕಂಡು ರಾವಣನಿಗೆ ಇದ್ದದ್ದು ಇದ್ದಂತೆ ತಿಳಿಸಿದನು. ಆಗ ರಾವಣನು ಬಹಳವಾಗಿ ಚಿಂತಿಸುತ್ತಾ ನಿಟ್ಟುಸಿರುಬಿಡುತ್ತಾ ಮನೆಯಲ್ಲಿ ಇದ್ದುಕೊಂಡನು.

**ತತಃ ಸಮುದ್ರಮಾವೇಕ್ಷ್ಯ ರಾಮೋ ರಕ್ತಾಂತಲೋಚನಃ ।**
**ಪಶ್ಯ ಲಕ್ಷ್ಮಣ ದುಷ್ಟೋಽಸೌ ವಾರಿಧಿರ್ಮಾಮುಪಾಗತಮ್ ॥ ೫೮ ॥**
**ನಾಭಿನಂದತಿ ದುಷ್ಟಾತ್ಮಾ ದರ್ಶನಾರ್ಥಂ ಮಮಾನಘ ।**
**ಜಾನಾತಿ ಮಾನುಷೋಽಯಂ ಮೇ ಕಿಂ ಕರಿಷ್ಯತಿ ವಾನರೈಃ ॥ ೫೯ ॥**
**ಅದ್ಯ ಪಶ್ಯ ಮಹಾಬಾಹೋ ಶೋಷಯಿಷ್ಯಾಮಿ ವಾರಿಧಿಮ್ ।**
**ಪಾದೇನೈವ ಗಮಿಷ್ಯಂತಿ ವಾನರಾ ವಿಗತಜ್ವರಾಃ ॥ ೬೦ ॥**

೫೮-೬೦. ಅನಂತರ ಸಮುದ್ರವನ್ನು ನೋಡಿ ಕೆಂಪಾದ ಕಣ್ಣುಗಳುಳ್ಳ ರಾಮನು ಹೀಗೆಂದನು : 'ಎಲೈ ಲಕ್ಷ್ಮಣನೆ, ಈ ದುಷ್ಟನಾದ ಸಮುದ್ರರಾಜನು ತನ್ನ ಬಳಿಗೆ ಬಂದಿರುವ ನನ್ನನ್ನು ಗೌರವಿಸುತ್ತಿಲ್ಲ. ಎಲೈ ಪಾಪರಹಿತನೆ, ಈ ದುರಾತ್ಮನು ನನ್ನ ದರ್ಶನಕ್ಕಾಗಿ ಬಂದಿಲ್ಲ.' ಈ(ರಾಮನು) ಮನುಷ್ಯನು ; ಕಪಿಗಳೊಡಗೂಡಿ ನನ್ನನ್ನು ಏನು ಮಾಡಿಯಾನು ? ಎಂದು ತಿಳಿದಿರುವನು. ಎಲೈ ಮಹಾಬಾಹುವೆ, ಇದೊ, ನೋಡುತ್ತಿರು ; ಸಮುದ್ರವನ್ನು ಒಣಗಿಸಲಿರುವೆನು ; ಏನೊಂದೂ ಸಂಶಯ ವಿಲ್ಲದೆ ಕಪಿಗಳು ಕಾಲುನಡಿಗೆಯಿಂದಲೇ ಹೋಗಲಿರುವರು' (ಎಂದನು)

**ಇತ್ಯುಕ್ತ್ವಾ ಕ್ರೋಧತಾಮ್ರಾಕ್ಷ ಆರೋಪಿತಧನುರ್ಧರಃ ।**
**ತೂಣೀರಾದ್ ಬಾಣಮಾದಾಯ ಕಾಲಾಗ್ನಿಸದೃಶಪ್ರಭಮ್ ॥ ೬೧ ॥**
**ಸಂಧಾಯ ಚಾಪಮಾಕೃಷ್ಯ ರಾಮೋ ವಾಕ್ಯಮಥಾಬ್ರವೀತ್ ।**
**ಪಶ್ಯಂತು ಸರ್ವಭೂತಾನಿ ರಾಮಸ್ಯ ಶರವಿಕ್ರಮಮ್ ॥ ೬೨ ॥**
**ಇದಾನೀಂ ಭಸ್ಮಸಾತ್ ಕುರ್ಯಾಂ ಸಮುದ್ರಂ ಸರಿತಾಂ ಪತಿಮ್ ।**
**ಏವಂ ಬ್ರುವತಿ ರಾಮೇ ತು ಸಶೈಲವನಕಾನನಾ ॥ ೬೩ ॥**
**ಚಚಾಲ ವಸುಧಾ ದ್ಯೌಶ್ಚ ದಿಶಶ್ಚ ತಮಸಾವೃತಾಃ ।**

೬೧-೬೩. ಹೀಗೆಂದು ಹೇಳುತ್ತಾ ಕೋಪದಿಂದ ಕೆಂಪಾದ ಕಣ್ಣು ಗಳುಳ್ಳವನಾಗಿ ಬಿಲ್ಲನ್ನು ಹೆದೆಯೇರಿಸಿ ಪ್ರಲಯಕಾಲದ ಬೆಂಕಿಗೆ ಸಮಾನವಾದ ಕಾಂತಿಯುಳ್ಳ ಒಂದು ಬಾಣವನ್ನು ಬತ್ತಳಿಕೆಯಿಂದ ಹೊರತೆಗೆದು ಜೋಡಿಸಿ ಅದನ್ನು ಸೆಳೆದು ರಾಮನು ಹೀಗೆಂದನು : 'ಇದೊ, ಎಲ್ಲಾ ಪ್ರಾಣಿಗಳೂ ರಾಮನ ಬಾಣಪ್ರತಾಪವನ್ನು ನೋಡಲಿ ; ನದಿಗಳೊಡೆಯನಾದ ಸಮುದ್ರರಾಜನನ್ನು ಈಗ ಬೂದಿಗೈಯುವೆನು.' ಹೀಗೆ ರಾಮನು ಹೇಳುತ್ತಿರಲು ಬೆಟ್ಟ ಕಾಡುಗಳಿಂದ ಕೂಡಿದ ಭೂಮಿಯೂ ಹಾಗೆಯೇ ಅಂತರಿಕ್ಷವೂ ದಿಕ್ಕುಗಳೂ ನಡುಗಿಬಿಟ್ಟವು. ಕಗ್ಗತ್ತಲೆ ಯಿಂದಾವೃತವಾದವು.

**ಚುಕ್ಷುಭೇ ಸಾಗರೋ ವೇಲಾಂ ಭಯಾದ್ ಯೋಜನಮತ್ಯಗಾತ್ ।**
**ತಿಮಿನಕ್ರಝಷಾ ಮೀನಾಃ ಪ್ರತಪ್ತಾಃ ಪರಿತತ್ರಸುಃ ॥ ೬೪ ॥**
**ಏತಸ್ಮಿನ್ನಂತರೇ ಸಾಕ್ಷಾತ್ ಸಾಗರೋ ದಿವ್ಯರೂಪಧೃಕ್ ।**
**ದಿವ್ಯಾಭರಣಸಂಪನ್ನಃ ಸ್ವಭಾಸಾ ಭಾಸಯನ್ ದಿಶಃ ॥ ೬೫ ॥**
**ಸ್ವಾಂತಃಸ್ಥದಿವ್ಯರತ್ನಾನಿ ಕರಾಭ್ಯಾಂ ಪರಿಗೃಹ್ಯ ಸಃ ।**
**ಪಾದಯೋಃ ಪುರತಃ ಕ್ಷಿಪ್ತ್ವಾ ರಾಮಸ್ಯೋಪಾಯನಂ ಬಹು ॥ ೬೬ ॥**
**ದಂಡವತ್ ಪ್ರಣಿಪತ್ಯಾಹ ರಾಮಂ ರಕ್ತಾಂತಲೋಚನಮ್ ।**

೬೪-೬೬. ಸಮುದ್ರರಾಜನು ಅಳ್ಳಾಡಿಹೋದನು. ಹೆದರಿಕೆಯಿಂದ ಒಂದು ಯೋಜನದೂರ ದಡದಿಂದ ಮುಂದಕ್ಕೆ ಸರಿದನು. (ಉಕ್ಕಿ ಹರಿದನು). ತಿಮಿಂಗಿಲಗಳು, ಮೊಸಳೆಗಳು, ಮೀನುಗಳು- ಎಲ್ಲವೂ ಬೇಗೆಯಿಂದ ಬಳಲಿ ತತ್ತರಿಸಿದವು. ಇಷ್ಟರಲ್ಲಿ ಸಮುದ್ರರಾಜನು ತಾನೇ ಖುದ್ದಾಗಿ ದಿವ್ಯರೂಪವನ್ನು ಧರಿಸಿ ದಿವ್ಯಾಭರಣಗಳಿಂದ ಅಲಂಕೃತನಾಗಿ ತನ್ನ ಕಾಂತಿಯಿಂದ ದಿಕ್ಕುಗಳನ್ನೆಲ್ಲ ಬೆಳಗುತ್ತಾ ತನ್ನಲ್ಲಿ ಅಡಗಿದ್ದ ದಿವ್ಯರತ್ನಗಳನ್ನು ಎರಡೂ ಕೈಗಳಿಂದ ತುಂಬಿಕೊಂಡು ರಾಮನ ಎರಡು ಪಾದಗಳ ಮುಂದೆ ಸುರಿದು ಬಹಳವಾದ ಕಾಣಿಕೆಗಳನ್ನರ್ಪಿಸಿ ದೀರ್ಘದಂಡ ನಮಸ್ಕಾರವನ್ನು ಮಾಡಿ ಕೆಂಪಾದ ಕಣ್ಣುಗಳುಳ್ಳ ರಾಮನನ್ನು ಕುರಿತು ಹೀಗೆಂದನು :

**ತ್ರಾಹಿ ತ್ರಾಹಿ ಜಗನ್ನಾಥ ರಾಮ ತ್ರೈಲೋಕ್ಯರಕ್ಷಕ ।**
**ಜಡೋಽಹಂ ರಾಮ ತೇ ಸೃಷ್ಟಃ ಸೃಜತಾ ನಿಖಿಲಂ ಜಗತ್ ॥ ೬೭ ॥**
**ಸ್ವಭಾವಮನ್ಯಥಾಕರ್ತುಂ ಕಃ ಶಕ್ತೋ ದೇವನಿರ್ಮಿತಮ್ ।**
**ಸ್ಥೂಲಾನಿ ಪಂಚಭೂತಾನಿ ಜಡಾನ್ಯೇವ ಸ್ವಭಾವತಃ ॥ ೬೮ ॥**
**ಸೃಷ್ಟಾನಿ ಭವತೈತಾನಿ ತ್ವದಾಜ್ಞಾಂ ಲಂಘಯಂತಿ ನ ।**
**ತಾಮಸಾದಹಮೋ ರಾಮ ಭೂತಾನಿ ಪ್ರಭವಂತಿ ಹಿ ॥ ೬೯ ॥**
**ಕಾರಣಾನುಗಮಾತ್ತೇಷಾಂ ಜಡತ್ವಂ ತಾಮಸಂ ಸ್ವತಃ ।**

೬೭-೬೯. ಎಲೈ ಜಗನ್ನಾಥನೆ, ರಾಮನೆ, ತ್ರೈಲೋಕ್ಯಪಾಲಕನೆ, ನನ್ನನ್ನು ಕಾಪಾಡು, ಕಾಪಾಡು. ನಾನು ನಿನ್ನಿಂದ ಇಡಿಯ ಪ್ರಪಂಚವೆಲ್ಲವೂ ಸೃಷ್ಟಿಸಲ್ಪಡುವ ಕಾಲಕ್ಕೆ ಜಡವಾಗಿ ಸೃಷ್ಟಿಸಲ್ಪಟ್ಟೆನು. ಪ್ರಭುವಿನಿಂದಲೇ ನಿರ್ಮಿಸಲ್ಪಟ್ಟ ಸ್ವಭಾವವನ್ನು ಬೇರೊಂದು ರೀತಿಯಾಗಿ ಮಾಡಲು ಯಾವನು ತಾನೆ ಸಮರ್ಥನಾದಾನು ? ಸ್ಥೂಲವಾದ ಪಂಚಮಹಾಭೂತಗಳು ಸ್ವಭಾವದಿಂದಲೇ ಜಡವಾಗಿರುವವು. ನಿನ್ನಿಂದ ಉಂಟುಮಾಡಲ್ಪಟ್ಟಿರುವ ಇವುಗಳು ನಿನ್ನಪ್ಪಣೆಯನ್ನು ಮೀರಲಾರವು. ತಾಮಸವಾದ ಅಹಂಕಾರದಿಂದ ಪಂಚಭೂತಗಳು ಹುಟ್ಟುವವು. ಅವುಗಳಿಗೆ ತಮ್ಮ ಕಾರಣದ್ರವ್ಯವನ್ನು ಅನುಕರಿಸುವ ಸ್ವಭಾವವಿರುವದರಿಂದ ತಾವು ಜಡವಾಗಿಯೇ ಇರುವವು.

**ನಿರ್ಗುಣಸ್ತ್ವಂ ನಿರಾಕಾರೋ ಯದಾ ಮಾಯಾಗುಣಾನ್ ಪ್ರಭೋ ।**
**ಲೀಲಯಾಂಗೀಕರೋಷಿ ತ್ವಂ ಸದಾ ವೈರಾಜನಾಮವಾನ್ ॥ ೭೦ ॥**
**ಗುಣಾತ್ಮನೋ ವಿರಾಜಶ್ಚ ಸತ್ತ್ವಾದ್ ದೇವಾ ಬಭೂವಿರೇ ।**
**ರಜೋಗುಣಾತ್ ಪ್ರಜೇಶಾದ್ಯಾ ಮನ್ಯೋರ್ಭೂತಪತಿಸ್ತವ ॥ ೭೧ ॥**
**ತ್ವಾಮಹಂ ಮಾಯಯಾ ಛನ್ನಂ ಲೀಲಯಾ ಮಾನುಷಾಕೃತಿಮ್ ।**
**ಜಡಬುದ್ಧಿರ್ಜಡೋ ಮೂರ್ಖಃ ಕಥಂ ಜಾನಾಮಿ ನಿರ್ಗುಣಮ್ ॥ ೭೨ ॥**

೨೦-೨೨. ನೀನು ಸ್ವತಃ ನಿರ್ಗುಣನು ; ನಿರಾಕಾರನು ; ಪ್ರಭುವೆ, ನೀನು ಯಾವಾಗ ಮಾಯಾಗುಣಗಳನ್ನು ಲೀಲೆಯಿಂದ ಸ್ವೀಕರಿಸುವೆಯೋ ಆಗ ವಿರಾಟ್ ಪುರುಷನೆನಿಸುವೆ. ಗುಣಾತ್ಮಕನಾದ ವಿರಾಟ್‌ಪುರುಷನ ಸತ್ತ್ವಗುಣಾಂಶದಿಂದ ದೇವತೆಗಳು ಹುಟ್ಟಿರುತ್ತಾರೆ. ರಜೋಗುಣಾಂಶದಿಂದ ಪ್ರಜಾಪತಿಗಳೇ ಮುಂತಾದವರೂ ನಿನ್ನ ಕೋಪದಿಂದ ಪರಮೇಶ್ವರನೂ ಹುಟ್ಟಿರುವರು. ಹೀಗೆ ಮಾಯೆಯಿಂದ ಮುಚ್ಚಲ್ಪಟ್ಟಿರುವ ಹಾಗೂ ಲೀಲೆಯಿಂದ ಮನುಷ್ಯವೇಷವನ್ನು ಧರಿಸಿರುವ - ನಿರ್ಗುಣನಾದ ನಿನ್ನನ್ನು ಜಡನೂ ಮಂದಬುದ್ಧಿಯೂ ಮೂರ್ಖನೂ ಆಗಿರುವ ನಾನು ಹೇಗೆ ತಾನೆ ತಿಳಿಯಬಲ್ಲೆನು ?

**ದಂಡ ಏವ ಹಿ ಮೂರ್ಖಾಣಾಂ ಸನ್ಮಾರ್ಗಪ್ರಾಪಕಃ ಪ್ರಭೋ ।**
**ಭೂತಾನಾಮಮರಶ್ರೇಷ್ಠ ಪಶೂನಾಂ ಲಗುಡೋ ಯಥಾ ॥ ೨೩ ॥**
**ಶರಣಂ ತೇ ವ್ರಜಾಮೀಶ ಶರಣ್ಯಂ ಭಕ್ತವತ್ಸಲ ।**
**ಅಭಯಂ ದೇಹಿ ಮೇ ರಾಮ ಲಂಕಾಮಾರ್ಗಂ ದದಾಮಿ ತೇ ॥ ೨೪ ॥**

೨೩-೨೪. ಪ್ರಭುವೆ, ಮೂರ್ಖರಿಗೆ ದಂಡವೊಂದೇ ಒಳ್ಳೆಯಮಾರ್ಗಕ್ಕೆ ತರುವ ಉಪಾಯವಾಗಿರುವದು. ಎಲೈ ದೇವಶ್ರೇಷ್ಠನೆ, ಪ್ರಾಣಿಗಳಿಗೆ (ದಂಡವು) - ದನಗಳಿಗೆ ದೊಣ್ಣೆಯಂತೆ -(ಮಾರ್ಗದರ್ಶಕವು). ಈಶನೆ, ನಿನಗೆ ನಾನು ಶರಣಾಗಿರುವೆನು. ಭಕ್ತವತ್ಸಲನೆ, ನೀನು ಶರಣ್ಯನು ;ರಾಮನೆ, ನನಗೆ ಅಭಯವನ್ನು ಕೊಡು. ನಿನಗೆ ಲಂಕೆಗೆ ದಾರಿಯನ್ನು ಬಿಟ್ಟುಕೊಡುವೆನು.

**ಶ್ರೀರಾಮ ಉವಾಚ-**

**ಅಮೋಘೋಽಯಂ ಮಹಾಬಾಣಃ ಕಸ್ಮಿನ್ ದೇಶೇ ನಿಪಾತ್ಯತಾಮ್ ।**
**ಲಕ್ಷ್ಯಂ ದರ್ಶಯ ಮೇ ಶೀಘ್ರಂ ಬಾಣಸ್ಯಾಮೋಘಪಾತಿನಃ ॥ ೨೫ ॥**
**ರಾಮಸ್ಯ ವಚನಂ ಶ್ರುತ್ವಾ ಕರೇ ದೃಷ್ಟ್ವಾ ಮಹಾಶರಮ್ ।**
**ಮಹೋದಧಿರ್ಮಹಾತೇಜಾ ರಾಘವಂ ವಾಕ್ಯಮಬ್ರವೀತ್ ॥ ೨೬ ॥**
**ರಾಮೋತ್ತರಪ್ರದೇಶೇ ತು ದ್ರುಮಕುಲ್ಯ ಇತಿ ಶ್ರುತಃ ।**
**ಪ್ರದೇಶಸ್ತತ್ರ ಬಹವಃ ಪಾಪಾತ್ಮಾನೋ ದಿವಾನಿಶಮ್ ॥ ೨೭ ॥**
**ಬಾಧಂತೇ ಮಾಂ ರಘುಶ್ರೇಷ್ಠ ತತ್ರ ತೇ ಪಾತ್ಯತಾಂ ಶರಃ ।**

೨೫-೨೭. ಶ್ರೀರಾಮನಿಂತೆಂದನು : 'ಇದೊ, ಈ ಬಾಣವು ಅಮೋಘ ವಾದದ್ದು, ಇದನ್ನು ಯಾವ ಜಾಗದಲ್ಲಿ ಕೆಡವಲಿ ? ಅಮೋಘವಾದ ಪರಿಣಾಮವುಳ್ಳ ಈ ನನ್ನ ಬಾಣಕ್ಕೆ ಬೇಗನೆ ಗುರಿಯನ್ನು ತೋರಿಸು.' ಹೀಗೆಂದ ರಾಮನ ಮಾತಿಗೆ ಉತ್ತರವಾಗಿ ಮಹಾತೇಜಸ್ವಿಯಾದ ಸಮುದ್ರರಾಜನು (ರಾಮನ) ಕೈಯಲ್ಲಿದ್ದ

ಮಹಾಬಾಣವನ್ನು ಕಂಡು 'ರಾಮನೆ, ಈ ಸಮುದ್ರದ ಉತ್ತರದಿಕ್ಕಿನ ಸ್ಥಳಗಳಲ್ಲಿ 'ದ್ರುಮಕುಲ್ಯ' ಎಂದು ಪ್ರಸಿದ್ಧವಾದ ಒಂದು ಜಾಗವಿದೆ. ಅಲ್ಲಿ ಬಹಳ ಜನರು ಪಾಪಾತ್ಮರು ವಾಸಿಸುತ್ತಿದ್ದು ನನಗೆ ತೊಂದರೆಕೊಡುತ್ತಿರುವರು. ರಘುಶ್ರೇಷ್ಠನೆ, ನಿನ್ನ ಬಾಣವನ್ನು ಅಲ್ಲಿಗೆ ಪ್ರಯೋಗಿಸು' ಎಂದನು.

**ರಾಮೇಣ ಸೃಷ್ಟೋ ಬಾಣಸ್ತು ಕ್ಷಣಾದಾಭೀರಮಂಡಲಮ್ ।**
**ಹತ್ವಾ ಪುನಃ ಸಮಾಗತ್ಯ ತೂಣೀರೇ ಪೂರ್ವವತ್ ಸ್ಥಿತಃ ॥ ೭೮ ॥**
**ತತೋಽಬ್ರವೀದ್ ರಘುಶ್ರೇಷ್ಠಂ ಸಾಗರೋ ವಿನಯಾನ್ವಿತಃ ।**
**ನಲಃ ಸೇತುಂ ಕರೋತ್ವಸ್ಮಿನ್ ಜಲೇ ಮೇ ವಿಶ್ವಕರ್ಮಣಃ ॥ ೭೯ ॥**
**ಸುತೋ ಧೀಮಾನ್ ಸಮರ್ಥೋಽಸ್ಮಿನ್ ಕಾರ್ಯೇ ಲಬ್ಧವರೋ ಹರಿಃ ।**
**ಕೀರ್ತಿಂ ಜಾನಂತು ತೇ ಲೋಕಾಃ ಸರ್ವಲೋಕಮಲಾಪಹಾಮ್ ॥ ೮೦ ॥**

೭೮-೮೦. ರಾಮನಿಂದ ಬಿಡಲ್ಪಟ್ಟ ಆ ಬಾಣವಾದರೊ, ಕ್ಷಣಮಾತ್ರದಲ್ಲಿ ಆ ದ್ರುಮಕುಲ್ಯವೆಂಬ ಹಳ್ಳಿಯ ಪ್ರದೇಶಕ್ಕೆ ಹೋಗಿ ದುಷ್ಟರನ್ನು ಕೊಂದು ಮತ್ತೆ ಬಂದು ಹಿಂದಿನಂತೆಯೇ ಬತ್ತಳಿಕೆಯಲ್ಲಿ ಸೇರಿಕೊಂಡಿತು. ಅನಂತರ ಸಮುದ್ರರಾಜನು ರಾಮನನ್ನು ಕುರಿತು ವಿನಯದಿಂದ ಹೀಗೆಂದನು : ಈ ನನ್ನ ಜಲಧಿಯ ಮೇಲೆ ವಿಶ್ವಕರ್ಮನ ಮಗನಾದ ನಳನು ಸೇತುವೆಯನ್ನು ನಿರ್ಮಿಸಲಿ! ಈ ಕೆಲಸದಲ್ಲಿ ಆತನು ಜಾಣನೂ ವರವನ್ನು ಪಡೆದ ಕಪಿಯೂ ಆಗಿರುವನು. ಈ ಮೂಲಕ ನಿನ್ನ ಸಕಲ ಲೋಕಗಳ ಪಾಪಗಳನ್ನೂ ಕಳೆಯುವ ಕೀರ್ತಿಯನ್ನು ಎಲ್ಲ ಪ್ರಜೆಗಳೂ ಅರಿತು ಕೊಳ್ಳಲಿ!

**ಇತ್ಯುಕ್ತ್ವಾ ರಾಘವಂ ನತ್ವಾ ಯಯೌ ಸಿಂಧುರದೃಶ್ಯತಾಮ್ ।**
**ತತೋ ರಾಮಸ್ತು ಸುಗ್ರೀವಲಕ್ಷ್ಮಣಾಭ್ಯಾಂ ಸಮನ್ವಿತಃ ॥ ೮೧ ॥**
**ನಲಮಾಜ್ಞಾಪಯತ್ ಶೀಘ್ರಂ ವಾನರೈಃ ಸೇತುಬಂಧನೇ ।**
**ತತೋಽತಿಹೃಷ್ಟಃ ಪ್ಲವಗೇಂದ್ರಯೂಥಪೈಃ**
**ಮಹಾನಗೇಂದ್ರಪ್ರತಿಮೈರ್ಯುತೋ ನಲಃ ।**
**ಬಬಂಧ ಸೇತುಂ ಶತಯೋಜನಾಯತಂ**
**ಸುವಿಸ್ತೃತಂ ಪರ್ವತಪಾದಪೈರ್ದೃಢಮ್ ॥ ೮೨ ॥**

೮೧-೮೨. ಹೀಗೆಂದು ಹೇಳಿ ರಾಮನಿಗೆ ನಮಸ್ಕರಿಸಿ ಸಮುದ್ರರಾಜನು ಮರೆಯಾದನು. ಅನಂತರ ರಾಮನು ಸುಗ್ರೀವ ಲಕ್ಷ್ಮಣರೊಡನೆ ಕೂಡಿ ನಲನಿಗೆ ವಾನರರ ಸಹಾಯದೊಡನೆ ಬೇಗನೆ ಸೇತುವೆಯನ್ನು ಕಟ್ಟಲು ಅಪ್ಪಣೆಮಾಡಿದನು. ಅನಂತರ ಬಹಳ ಸಂತೋಷಗೊಂಡ, ದೊಡ್ಡಬೆಟ್ಟದಂಥ ಬೃಹದಾಕಾರದ ಶರೀರವುಳ್ಳ ನಳನು

ಕಪಿಶ್ರೇಷ್ಠರೊಡಗೂಡಿ ನೂರು ಯೋಜನಗಳ ದೂರವುಳ್ಳ ಹಾಗೂ ಬೆಟ್ಟಗಳು ಮರಗಳಿಂದ ಬಿಗಿಯಾಗಿ ರಚಿಸಲ್ಪಟ್ಟ ವಿಸ್ತಾರವಾದ ಸೇತುವೆಯನ್ನು ಕಟ್ಟಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ತೃತೀಯಃ ಸರ್ಗಃ**

----------

# ನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಸೇತುಮಾರಭಮಾಣಸ್ತು ತತ್ರ ರಾಮೇಶ್ವರಂ ಶಿವಮ್ ।**
**ಸಂಸ್ಥಾಪ್ಯ ಪೂಜಯಿತ್ವಾಹ ರಾಮೋ ಲೋಕಹಿತಾಯ ಚ ॥ ೧ ॥**
**ಪ್ರಣಮೇತ್ ಸೇತುಬಂಧಂ ಯೋ ದೃಷ್ಟ್ವಾ ರಾಮೇಶ್ವರಂ ಶಿವಮ್ ।**
**ಬ್ರಹ್ಮಹತ್ಯಾದಿಪಾಪೇಭ್ಯೋ ಮುಚ್ಯತೇ ಮದನುಗ್ರಹಾತ್ ॥ ೨ ॥**
**ಸೇತುಬಂಧೇ ನರಃ ಸ್ನಾತ್ವಾ ದೃಷ್ಟ್ವಾ ರಾಮೇಶ್ವರಂ ಹರಮ್ ।**
**ಸಂಕಲ್ಪನಿಯತೋ ಭೂತ್ವಾ ಗತ್ವಾ ವಾರಾಣಸೀಂ ನರಃ ॥ ೩ ॥**
**ಆನೀಯ ಗಂಗಾಸಲಿಲಂ ರಾಮೇಶಮಭಿಷಿಚ್ಯ ಚ ।**
**ಸಮುದ್ರೇ ಕ್ಷಿಪ್ತತದ್ಭಾರೋ ಬ್ರಹ್ಮ ಪ್ರಾಪ್ನೋತ್ಯಸಂಶಯಮ್ ॥ ೪ ॥**

೧-೪. ಶ್ರೀ ಮಹಾದೇವನಿಂತೆಂದನು : ಸೇತುವನ್ನು ಕಟ್ಟಲಾರಂಭಿಸಿದ ರಾಮನು ಲೋಕದ ಹಿತಕ್ಕಾಗಿ ಅಲ್ಲಿ ರಾಮೇಶ್ವರನಾದ ಶಿವನನ್ನು ಪ್ರತಿಷ್ಠೆಮಾಡಿ ಪೂಜಿಸಿ ಹೀಗೆಂದನು: 'ಯಾವನು ರಾಮೇಶ್ವರಶಿವನ ದರ್ಶನವನ್ನು ಮಾಡಿ ಸೇತು ಬಂಧನಕ್ಕೆ ನಮಸ್ಕರಿಸುವನೋ ಅವನು ನನ್ನ ಅನುಗ್ರಹದಿಂದ ಬ್ರಹ್ಮಹತ್ಯಾದಿ ದೋಷಗಳಿಂದ ಬಿಡುಗಡೆಹೊಂದುತ್ತಾನೆ. ಸೇತುಬಂಧ (ತೀರ್ಥ) ದಲ್ಲಿ ಮನುಷ್ಯನು ಸ್ನಾನಮಾಡಿ ಪಾಪಹರನಾದ ರಾಮೇಶ್ವರನನ್ನು ಕಂಡು ಅನಂತರ ಸಂಕಲ್ಪಮಾಡಿ ವಾರಾಣಸೀಕ್ಷೇತ್ರಕ್ಕೆ ಹೋಗಿ ಅಲ್ಲಿಂದ ಗಂಗೆಯ ನೀರನ್ನು ತಂದು ರಾಮೇಶ್ವರನಿಗೆ ಅಭಿಷೇಕಮಾಡಿ ಸಮುದ್ರದಲ್ಲಿ ಆ ಪುಣ್ಯಕರವಾದ ತೀರ್ಥಯಾತ್ರಾ ಫಲವನ್ನು ಅರ್ಪಿಸಿದಲ್ಲಿ ಸಂಶಯವಿಲ್ಲದೆ ಬ್ರಹ್ಮವನ್ನು ಪಡೆಯುವನು.'

**ಕೃತಾನಿ ಪ್ರಥಮೇನಾಹ್ನಾ ಯೋಜನಾನಿ ಚತುರ್ದಶ ।**
**ದ್ವಿತೀಯೇನ ತಥಾ ಚಾಹ್ನಾ ಯೋಜನಾನಿ ತು ವಿಂಶತಿಃ ॥ ೫ ॥**

**ತೃತೀಯೇನ ತಥಾ ಚಾಹ್ನಾ ಯೋಜನಾನ್ಯೇಕವಿಂಶತಿಃ ।**
**ಚತುರ್ಥೇನ ತಥಾ ಚಾಹ್ನಾ ದ್ವಾವಿಂಶತಿರಿತಿ ಶ್ರುತಮ್ ॥ ೬ ॥**
**ಪಂಚಮೇನ ತ್ರಯೋವಿಂಶದ್ ಯೋಜನಾನಿ ಸಮಂತತಃ ।**
**ಬಬಂಧ ಸಾಗರೇ ಸೇತುಂ ನಲೋ ವಾನರಸತ್ತಮಃ ॥ ೭ ॥**

೫-೭. ಮೊದಲನೆಯ ದಿನ ಹದಿನಾಲ್ಕು ಯೋಜನಗಳ ದೂರದ ಸೇತುವೆಯು ನಿರ್ಮಿಸಲ್ಪಟ್ಟಿತು. ಎರಡನೆಯ ದಿನ ಇಪ್ಪತ್ತುಯೋಜನಗಳೂ ಮೂರನೆಯ ದಿನ ಇಪ್ಪತ್ತೊಂದು ಯೋಜನಗಳೂ ನಾಲ್ಕನೆಯದಿನ ಇಪ್ಪತ್ತೆರಡು ಯೋಜನಗಳೂ ಕಟ್ಟಲ್ಪಟ್ಟವೆಂದು ತಿಳಿದುಬಂದಿದೆ. ಕಡೆಗೆ ಐದನೆಯದಿನ ಇಪ್ಪತ್ತು ಮೂರು ಯೋಜನಗಳ ಉದ್ದ ವಾದ ಸೇತುವೆಯನ್ನು ಕಪಿಶ್ರೇಷ್ಠನಾದ ನಲನು ಸಮುದ್ರದಲ್ಲಿ ನಿರ್ಮಿಸಿದವನಾದನು.

**ತೇನೈವ ಜಗ್ಮುಃ ಕಪಯೋ ಯೋಜನಾನಾಂ ಶತಂ ದ್ರುತಮ್ ।**
**ಅಸಂಖ್ಯಾತಾಃ ಸುವೇಲಾದ್ರಿಂ ರುರುಧುಃ ಪ್ಲವಗೋತ್ತಮಾಃ ॥ ೮ ॥**
**ಆರುಹ್ಯ ಮಾರುತಿಂ ರಾಮೋ ಲಕ್ಷ್ಮಣೋಽಪ್ಯಂಗದಂ ತಥಾ ।**
**ದಿದೃಶೂ ರಾಘವೋ ಲಂಕಾಮಾರುರೋಹಾಚಲಂ ಮಹತ್ ॥ ೯ ॥**
**ದೃಷ್ಟ್ವಾ ಲಂಕಾಂ ಸುವಿಸ್ತೀರ್ಣಾಂ ನಾನಾಚಿತ್ರಧ್ವಜಾಕುಲಾಮ್ ।**
**ಚಿತ್ರಪ್ರಾಸಾದಸಂಬಾಧಾಂ ಸ್ವರ್ಣಪ್ರಾಕಾರತೋರಣಾಮ್ ॥ ೧೦ ॥**
**ಪರಿಖಾಭಿಃ ಶತಘ್ನೀಭಿಃ ಸಂಕ್ರಮೈಶ್ಚ ವಿರಾಜಿತಾಮ್ ।**

೮-೧೦. ಆ ಸೇತುವೆಯ ಮೂಲಕವೇ ಕಪಿಗಳು ಬೇಗನೆ ಒಂದುನೂರು ಯೋಜನಗಳನ್ನು ದಾಟಿದರು. ಲೆಕ್ಕವಿಲ್ಲದಷ್ಟು ಕಪಿಮುಖ್ಯರು ಸುವೇಲವೆಂಬ ಬೆಟ್ಟವನ್ನೇರಿ (ಲಂಕೆಯನ್ನು) ಮುತ್ತಿದರು. ರಾಮನು ಹನುಮಂತನನ್ನೂ ಲಕ್ಷ್ಮಣನು ಅಂಗದನನ್ನೂ ಏರಿದವರಾಗಿ ಲಂಕೆಯನ್ನು ನೋಡಲಿಚ್ಛಿಸಿ (ಸಮುದ್ರವನ್ನು ದಾಟಿದರು). ಆಗ ರಾಮನು ದೊಡ್ಡ ಪರ್ವತವೊಂದನ್ನೇರಿದನು. ಅಲ್ಲಿಂದ ವಿಸ್ತಾರವಾದ ಲಂಕೆಯನ್ನು ಕಂಡನು. ಅದು ನಾನಾರೀತಿಯ ಚಿತ್ರವಿಚಿತ್ರವಾದ ಧ್ವಜ ಗಳಿಂದ ತುಂಬಿದ್ದು ಉಪ್ಪರಿಗೆಗಳಿಂದ ಆವೃತವಾಗಿದ್ದು ಚಿನ್ನದ ದ್ವಾರ-ಕೋಟೆ ಗಳಿಂದಲೂ ತೋರಣಗಳಿಂದಲೂ ಅಗಳು (ನೀರಿನ ಕಾಲುವೆ)ಗಳಿಂದಲೂ ಶತಘ್ನೀ ಮುಂತಾದ ಆಯುಧಗಳ ಗುಂಪಿನಿಂದಲೂ ವಿರಾಜಮಾನವಾಗಿತ್ತು.

**ಪ್ರಾಸಾದೋಪರಿವಿಸ್ತೀರ್ಣಪ್ರದೇಶೇ ದಶಕಂಧರಃ ।**
**ಮಂತ್ರಿಭಿಃ ಸಹಿತೋ ವೀರೈಃ ಕಿರೀಟದಶಕೋಜ್ವಲಃ ॥ ೧೧ ॥**

**ನೀಲಾದ್ರಿಶಿಖರಾಕಾರಃ ಕಾಲಮೇಘಸಮಪ್ರಭಃ ।**
**ರತ್ನದಂಡೈಃ ಸಿತಚ್ಛತ್ರೈಃ ಅನೇಕೈಃ ಪರಿಶೋಭಿತಃ ॥ ೧೨ ॥**
**ಏತಸ್ಮಿನ್ನಂತರೇ ಬದ್ಧೋ ಮುಕ್ತೋ ರಾಮೇಣ ವೈ ಶುಕಃ ।**
**ವಾನರೈಸ್ತಾಡಿತಃ ಸಮ್ಯಕ್ ದಶಾನನಮುಪಾಗತಃ ॥ ೧೩ ॥**

೧೧-೧೩. (ಲಂಕೆಯಲ್ಲಿ) ಉಪ್ಪರಿಗೆಯ ಮೇಲ್ಭಾಗದ ಅಗಲವಾದ ಜಾಗದಲ್ಲಿ ವೀರರಾದ ಮಂತ್ರಿಗಳೊಡಗೂಡಿ, ಹತ್ತುಕಿರೀಟಗಳನ್ನು ಧರಿಸಿ, ನೀಲಪರ್ವತದ ಶಿಖರದಂತೆ ಆಕಾರವುಳ್ಳ, ಕಾಲಮೇಘಕ್ಕೆ ಸಮಾನವಾದ ಕಾಂತಿಯುಳ್ಳ ಮತ್ತು ರತ್ನದ ದಂಡಗಳಿಂದಲೂ ಅನೇಕ ಬಿಳಿಯ ಛತ್ರಿಗಳಿಂದಲೂ ಅಲಂಕೃತನಾದ ರಾವಣನು (ಕುಳಿತಿದ್ದನು). ಈ ನಡುವೆ (ವಾನರರಿಂದ) ಬಂಧಿಸಲ್ಪಟ್ಟಿದ್ದು ಅನಂತರ ರಾಮನಿಂದ ಬಿಡುಗಡೆಮಾಡಲ್ಪಟ್ಟ ಶುಕನೆಂಬ ರಾಕ್ಷಸನು ಕಪಿಗಳಿಂದ ಚೆನ್ನಾಗಿ ಹೊಡೆಯಲ್ಪಟ್ಟವನಾಗಿ ರಾವಣನ ಬಳಿಗೆ ಬಂದನು.

**ಪ್ರಹಸನ್ ರಾವಣಃ ಪ್ರಾಹ ಪೀಡಿತಃ ಕಿಂ ಪರೈಃ ಶುಕ ।**
**ರಾವಣಸ್ಯ ವಚಃ ಶ್ರುತ್ವಾ ಶುಕೋ ವಚನಮಬ್ರವೀತ್ ॥ ೧೪ ॥**
**ಸಾಗರಸ್ಯೋತ್ತರೇ ತೀರೇಽಬ್ರುವಂ ತೇ ವಚನಂ ಯಥಾ ।**
**ತತ ಉತ್ಪ್ಲುತ್ಯ ಕಪಯೋ ಗೃಹೀತ್ವಾ ಮಾಂ ಕ್ಷಣಾತ್ತತಃ ॥ ೧೫ ॥**
**ಮುಷ್ಟಿಭಿರ್ನಖದಂತೈಶ್ಚ ಹಂತುಂ ಲೋಕಂ ಪ್ರಚಕ್ರಮುಃ ।**
**ತತೋ ಮಾಂ ರಾಮ ರಕ್ಷೇತಿ ಕ್ರೋಶಂತಂ ರಘುಪುಂಗವಃ ॥ ೧೬ ॥**
**ವಿಸೃಜ್ಯತಾಮಿತಿ ಪ್ರಾಹ ವಿಸೃಷ್ಟೋಽಹಂ ಕಪೀಶ್ವರೈಃ ।**
**ತತೋಽಹಮಾಗತೋ ಭೀತ್ಯಾ ದೃಷ್ಟ್ವಾ ತದ್ವಾನರಂ ಬಲಮ್ ॥ ೧೭ ॥**

೧೪-೧೭. ರಾವಣನು ನಗುತ್ತಾ 'ಎಲೈ ಶುಕನೆ, ಶತ್ರುಗಳಿಂದ ಪೀಡಿಸಲ್ಪಟ್ಟೆಯೇನು ?' ಎಂದನು. ರಾವಣನ ಮಾತನ್ನು ಕೇಳಿ ಶುಕನು ಹೀಗೆಂದನು: 'ಸಮುದ್ರದ ಉತ್ತರತೀರಕ್ಕೆ ಹೋಗಿ ನೀನು ಹೇಳಿದ್ದಂತೆಯೇ ಮಾತನ್ನಾಡಿದೆನು. ಅನಂತರ ಕಪಿಗಳು ನೆಗೆದು ಕ್ಷಣಮಾತ್ರದಲ್ಲಿ ನನ್ನನ್ನು ಹಿಡಿದುಕೊಂಡು ಮುಷ್ಟಿ ಪ್ರಹಾರಗಳಿಂದಲೂ ಉಗುರುಹಲ್ಲುಗಳಿಂದಲೂ ಕೊಲ್ಲುವದಕ್ಕೆ ಪ್ರಾರಂಭಿಸಿದವು. ಅನಂತರ ನಾನು 'ರಾಮ, ಕಾಪಾಡು' - ಎಂದು ಕೂಗಿದೆನು. ಹಾಗೆ ಕೂಗುತ್ತಿದ್ದ ನನ್ನನ್ನು ನೋಡಿ ರಘುಶ್ರೇಷ್ಠನಾದ ರಾಮನು 'ಬಿಟ್ಟುಬಿಡಿ' ಎಂದನು. ಕಪಿಶ್ರೇಷ್ಠರಿಂದ ಬಿಡುಗಡೆಹೊಂದಿದ ನಾನು ಆ ವಾನರಸೈನ್ಯವನ್ನು ನೋಡಿ ಹೆದರಿ ಬಂದವನಾಗಿರುವೆನು.

**ರಾಕ್ಷಸಾನಾಂ ಬಲೌಘಸ್ಯ ವಾನರೇಂದ್ರಬಲಸ್ಯ ಚ ।**
**ನೈತಯೋರ್ವಿದ್ಯತೇ ಸಂಧಿರ್ದೇವದಾನವಯೋರಿವ ॥ ೧೮ ॥**
**ಪುರಪ್ರಾಕಾರಮಾಯಾಂತಿ ಕ್ಷಿಪ್ರಮೇಕತರಂ ಕುರು ।**
**ಸೀತಾಂ ವಾಸ್ಮೈ ಪ್ರಯಚ್ಛಾಶು ಯುದ್ಧಂ ವಾ ದೀಯತಾಂ ಪ್ರಭೋ ॥ ೧೯ ॥**

೧೮-೧೯. ರಾಕ್ಷಸರ ಸೈನ್ಯಬಲಕ್ಕೂ ವಾನರೇಂದ್ರನಾದ (ಸುಗ್ರೀವನ) ಸೈನ್ಯಕ್ಕೂ ದೇವತೆಗಳ ಹಾಗೂ ರಾಕ್ಷಸರ ಸೈನ್ಯದಂತೆ ಸಂಧಿಯಾಗುವ ಸಂಭವವೇ ಇಲ್ಲ. (ವಾನರರು) ಈಗಾಗಲೇ ಪಟ್ಟಣದ ಕೋಟೆಯೊಳಕ್ಕೆ ಬರುತ್ತಿರುವರು. ಎಲೈ ಪ್ರಭುವೆ, ಜಾಗ್ರತೆಯಾಗಿ ಈಗ ಸೀತೆಯನ್ನಾದರೂ ಬಿಟ್ಟುಕೊಡುವವನಾಗು ; ಇಲ್ಲವೆ, ಯುದ್ಧವನ್ನಾದರೂ ಮಾಡುವವನಾಗು ; ಅಂತೂ ಎರಡರಲ್ಲಿ ಒಂದನ್ನು ಜಾರಿಗೊಳಿಸುವನಾಗು.

**ಮಾಮಾಹ ರಾಮಸ್ತ್ವಂ ಬ್ರೂಹಿ ರಾವಣಂ ಮದ್ವಚಃ ಶುಕ ।**
**ಯದ್ಬಲಂ ಚ ಸಮಾಶ್ರಿತ್ಯ ಸೀತಾಂ ಮೇ ಹೃತವಾನಸಿ ॥ ೨೦ ॥**
**ತದ್ದರ್ಶಯ ಯಥಾಕಾಮಂ ಸಸೈನ್ಯಃ ಸಹಬಾಂಧವಃ ।**
**ಶ್ವಃ ಕಾಲೇ ನಗರೀಂ ಲಂಕಾಂ ಸಪ್ರಾಕಾರಾಂ ಸತೋರಣಾಮ್ ॥ ೨೧ ॥**
**ರಾಕ್ಷಸಂ ಚ ಬಲಂ ಪಶ್ಯ ಶರೈರ್ವಿಧ್ವಂಸಿತಂ ಮಯಾ ।**
**ಘೋರರೋಷಮಹಂ ಮೋಕ್ಷ್ಯೇ ಬಲಂ ಧಾರಯ ರಾವಣ ॥ ೨೨ ॥**
**ಇತ್ಯುಕ್ತ್ವೋಪರರಾಮಾಥ ರಾಮಃ ಕಮಲಲೋಚನಃ ।**

೨೦-೨೨. ರಾಮನು ನನ್ನನ್ನು ಕುರಿತು ಹೀಗೆಂದನು : 'ಎಲೈ ಶುಕನೆ, ನೀನು ರಾವಣನಿಗೆ ನನ್ನ ಈ ಮಾತನ್ನು ಹೇಳು. ಏನೆಂದರೆ ; ಯಾವ ಸೈನ್ಯ ಬಲವನ್ನು ನೆಚ್ಚಿಕೊಂಡು ನನ್ನ (ಪತ್ನಿಯಾದ) ಸೀತೆಯನ್ನು ನೀನು ಅಪಹರಿಸಿರುವೆಯೋ, ಈಗ ಬಂಧುಗಳೊಡನೆಯೂ ಸೇನಾಸಮೇತನಾಗಿಯೂ ಆ ಬಲವನ್ನು ಪ್ರದರ್ಶಿಸುವವನಾಗು ; ನಾಳೆ ಬೆಳಗಿನ ವೇಳೆಯಲ್ಲಿ ಪ್ರಾಕಾರತೋರಣಗಳಿಂದ ಕೂಡಿದ ಲಂಕೆಯನ್ನೂ ಹಾಗೂ ರಾಕ್ಷಸಬಲವನ್ನೂ ನಾಶವಾಗುವದನ್ನು ಮೆಲ್ಲನೆ ನೋಡು. ನಾನು ಭಯಂಕರವಾದ ಕೋಪವನ್ನು ಪ್ರಕಟಿಸಲಿರುವೆನು. ರಾವಣನೆ, ನೀನು ಬಲವನ್ನಾಶ್ರಯಿಸಿ (ಎದುರಿಸು);' ಹೀಗೆಂದು ತಿಳಿಸುವಂತೆ ಹೇಳಿ ಕಮಲಲೋಚನನಾದ ರಾಮನು ಸುಮ್ಮನಾದನು.

**ಏಕಸ್ಥಾನಗತಾ ಯತ್ರ ಚತ್ವಾರಃ ಪುರುಷರ್ಷಭಾಃ ।**
**ಶ್ರೀರಾಮೋ ಲಕ್ಷ್ಮಣಶ್ಚೈವ ಸುಗ್ರೀವಶ್ಚ ವಿಭೀಷಣಃ ॥ ೨೩ ॥**

**ಏತ ಏವ ಸಮರ್ಥಾಸ್ತೇ ಲಂಕಾಂ ನಾಶಯಿತುಂ ಪ್ರಭೋ ।**
**ಉತ್ಪಾಟ್ಯ ಭಸ್ಮೀಕರಣೇ ಸರ್ವೇ ತಿಷ್ಠಂತು ವಾನರಾಃ ॥ ೨೪ ॥**
**ತಸ್ಯ ಯಾದೃಗ್ ಬಲಂ ದೃಷ್ಟಂ ರೂಪಂ ಪ್ರಹರಣಾನಿ ಚ ।**
**ವಧಿಷ್ಯತಿ ಪುರಂ ಸರ್ವಮೇಕಸ್ತಿಷ್ಠಂತು ತೇ ತ್ರಯಃ ॥ ೨೫ ॥**

೨೩-೨೫. ಪುರುಷಶ್ರೇಷ್ಠರಾದ ರಾಮ, ಲಕ್ಷ್ಮಣ, ಸುಗ್ರೀವ, ವಿಭೀಷಣರುಗಳು ನಾಲ್ವರು ಒಂದೇ ಜಾಗದಲ್ಲಿ ಕೂಡಿರುವವರಾದರೆ ಲಂಕೆಯನ್ನು ನಾಶಗೊಳಿಸುವದಕ್ಕೆ ಇವರುಗಳೇ ಸಮರ್ಥರಾಗಿರುವರು. ಹಾಗೂ ಕಪಿಗಳು ಲಂಕೆಯನ್ನು ಕಿತ್ತು ಸುಟ್ಟು ಹಾಕುವದಕ್ಕೂ ಸಿದ್ಧರಾಗಿ ನಿಂತಿರುವರು. ಅಥವಾ ಆ ಮೂವರು ಒಂದು ಕಡೆ ಇರಲಿ ! (ಶ್ರೀರಾಮನೊಬ್ಬನೇ) ಸಾಕು. ಅವನ ಬಲ, ರೂಪ, ಆಯುಧಗಳನ್ನು ನಾನು ಕಂಡದ್ದಾಯಿತು. ಇಡಿಯ ಲಂಕೆಯನ್ನೆಲ್ಲ ಅವನೊಬ್ಬನೇ ನಾಶ ಗೊಳಿಸಬಲ್ಲವನಾಗಿರುವನು.

**ಪಶ್ಯ ವಾನರಸೇನಾಂ ತಾಮಸಂಖ್ಯಾತಾಂ ಪ್ರಪೂರಿತಾಮ್ ।**
**ಗರ್ಜಂತಿ ವಾನರಾಸ್ತತ್ರ ಪಶ್ಯ ಪರ್ವತಸನ್ನಿಭಾಃ ॥ ೨೬ ॥**
**ನ ಶಕ್ಯಾಸ್ತೇ ಗಣಯಿತುಂ ಪ್ರಾಧಾನ್ಯೇನ ಬ್ರವೀಮಿ ತೇ ।**
**ಏಷ ಯೋಽಭಿಮುಖೋ ಲಂಕಾಂ ನದಂಸ್ತಿಷ್ಠತಿ ವಾನರಃ ॥ ೨೭ ॥**
**ಯೂಥಪಾನಾಂ ಸಹಸ್ರಾಣಾಂ ಶತೇನ ಪರಿವಾರಿತಃ ।**
**ಸುಗ್ರೀವಸೇನಾಧಿಪತಿರ್ನೀಲೋ ನಾಮಾಗ್ನಿನಂದನಃ ॥ ೨೮ ॥**

೨೬-೨೮. (ಎಲೈ ರಾವಣನೆ) ಇದೊ, ಲೆಕ್ಕವಿಲ್ಲದಷ್ಟು ತುಂಬಿತುಳುಕುತ್ತಿರುವ ಕಪಿಸೈನ್ಯವನ್ನು ನೋಡು. ಅಲ್ಲಿ ಬೆಟ್ಟಗಳಂತಿರುವ ಕಪಿಗಳು ಘರ್ಜಿಸುತ್ತಿರುವರು.ಅವರನ್ನೆಲ್ಲ ಎಣಿಸಲು ಸಾಧ್ಯವಿಲ್ಲ. ನಿನಗೆ ಮುಖ್ಯರಾದ ಕೆಲವರನ್ನು ತಿಳಿಸುವೆನು. ಯಾವ ಕಪಿಯು ಇದೊ, ಲಂಕೆಗೆ ಎದುರಾಗಿ ಕಿರುಚುತ್ತಾ ನಿಂತುಕೊಂಡಿರುವನೋ ಹಾಗೂ ಇವನೊಡನೆ ಸಾವಿರಾರು ಯೂಥಪತಿಗಳು ಸುತ್ತುವರಿದಿರುವರೋ ಇವನು ಸುಗ್ರೀವಸೇನಾಪತಿಯಾದ ಹಾಗೂ ಅಗ್ನಿದೇವನ ಮಗನಾದ ನೀಲನೆಂಬವನು.

**ಏಷ ಪರ್ವತಶೃಂಗಾಭಃ ಪದ್ಮಕಿಂಜಲ್ಕಸನ್ನಿಭಃ ।**
**ಸ್ಫೋಟಯತ್ಯಭಿಸಂರಬ್ಧೋ ಲಾಂಗೂಲಂ ಚ ಪುನಃ ಪುನಃ ॥ ೨೯ ॥**
**ಯುವರಾಜೋಽಙ್ಗದೋ ನಾಮ ವಾಲಿಪುತ್ರೋಽತಿವೀರ್ಯವಾನ್ ।**

೨೯. ಪರ್ವತದ ಶಿಖರದಂತೆ ಎತ್ತರವಾಗಿರುವವನಾಗಿ ಕಮಲದ ಕುಸುರಿಯಂತೆ ಕಾಂತಿಯುಳ್ಳವನಾಗಿ ಮತ್ತೆ ಮತ್ತೆ ಕಾರ್ಯಾಭಿಮುಖನಾಗಿ ಬಾಲವನ್ನು

ಬಡಚುತ್ತಾ ಇರುವನಲ್ಲ, ಇವನು ವಾಲಿಯ ಮಗನಾದ ಯುವರಾಜನಾದ ಬಹಳ ಬಲಶಾಲಿಯಾದ ಅಂಗದನೆಂಬವನು.

**ಯೇನ ದೃಷ್ಟಾ ಜನಕಜಾ ರಾಮಸ್ಯಾತೀವ ವಲ್ಲಭಾ ।**
**ಹನೂಮಾನೇಷ ವಿಖ್ಯಾತೋ ಹತೋ ಯೇನ ತವಾತ್ಮಜಃ ॥ ೩೦ ॥**
**ಶ್ವೇತೋ ರಜತಸಂಕಾಶೋ ಮಹಾಬುದ್ಧಿಪರಾಕ್ರಮಃ ।**
**ತೂರ್ಣಂ ಸುಗ್ರೀವಮಾಗಮ್ಯ ಪುನರ್ಗಚ್ಛತಿ ವಾನರಃ ॥ ೩೧ ॥**
**ಯಸ್ತ್ವೇಷ ಸಿಂಹಸಂಕಾಶಃ ಪಶ್ಯತ್ಯತುಲವಿಕ್ರಮಃ ।**
**ರಂಭೋ ನಾಮ ಮಹಾಸತ್ತ್ವೋ ಲಂಕಾಂ ನಾಶಯಿತುಂ ಕ್ಷಮಃ ॥**

೩೦-೩೨. ಯಾವನಿಂದ - ರಾಮನಿಗೆ ಅತಿ ಪ್ರೀತಿಪಾತ್ರಳಾದ ಸೀತೆಯು ನೋಡಲ್ಪಟ್ಟಳೋ, ನಿನ್ನ ಮಗನು (ಅಕ್ಷಕುಮಾರನು) ಯಾವನಿಂದ ಕೊಲ್ಲಲ್ಪಟ್ಟನೋ - ಆ ಇವನೇ ಪ್ರಖ್ಯಾತನಾದ ಹನುಮಂತನು. ಇನ್ನು ಬಿಳುಪಾದವನಾದ, ಬೆಳ್ಳಿಯಂತೆ ಹೊಳೆಯುವ, ಮಹಾಬುದ್ಧಿಶಾಲಿಯೂ ಆಗಾಗ್ಗೆ ಸುಗ್ರೀವನ ಬಳಿಗೆ ಹೋಗೀ ಬಂದೂ ಮಾಡುತ್ತಲೂ ಇರುವ ಸಿಂಹಪರಾಕ್ರಮನಾದ ಅಪರಿಮಿತಬಲಶಾಲಿಯಾದ ರಂಭನೆಂಬ ಮಹಾಕಪಿಯು ಲಂಕೆಯನ್ನು ನಾಶಗೊಳಿಸಿಬಿಡಲು ಸಮರ್ಥನಿರುವನು.

**ಏಷ ಪಶ್ಯತಿ ವೈ ಲಂಕಾಂ ದಿಧಕ್ಷನ್ನಿವ ವಾನರಃ ।**
**ಶರಭೋ ನಾಮ ರಾಜೇಂದ್ರ ಕೋಟಿಯೂಥಪನಾಯಕಃ ॥ ೩೩ ॥**
**ಪನಸಶ್ಚ ಮಹಾವೀರ್ಯೋ ಮೈಂದಶ್ಚ ದ್ವಿವಿದಸ್ತಥಾ ।**
**ನಲಶ್ಚ ಸೇತುಕರ್ತಾಽಸೌ ವಿಶ್ವಕರ್ಮಸುತೋ ಬಲೀ ॥ ೩೪ ॥**
**ವಾನರಾಣಾಂ ವರ್ಣನೇ ವಾ ಸಂಖ್ಯಾನೇ ವಾ ಕ ಈಶ್ವರಃ ।**
**ಶೂರಾಃ ಸರ್ವೇ ಮಹಾಕಾಯಾಃ ಸರ್ವೇ ಯುದ್ಧಾಭಿಕಾಂಕ್ಷಿಣಃ ॥ ೩೫ ॥**

೩೩-೩೫. ಎಲೈ ರಾಜೇಂದ್ರನೆ, ಲಂಕೆಯನ್ನು ಸುಟ್ಟುಬಿಡುವವನಂತೆ ನೋಡುತ್ತಿರುವ ಈತನೇ ಕೋಟಿಯೂಥಪರಿಗೆ ನಾಯಕನಾದ ಶರಭನೆಂಬವನು. ಹಾಗೆಯೇ ಮಹಾವೀರ್ಯಶಾಲಿಯಾದ ಪನಸ, ಮೈಂದ, ದ್ವಿವಿದ, ಸೇತುವಯನ್ನು ಕಟ್ಟಿದ ವಿಶ್ವಕರ್ಮನ ಮಗನಾದ ಬಲಶಾಲಿಯಾದ ನಳ, (ಇವರೆಲ್ಲರೂ ಕಂಡುಬರುತ್ತಿರುವರು)- ಕಪಿಗಳನ್ನು ವರ್ಣಿಸುವದಕ್ಕಾಗಲಿ, ಎಣಿಸುವದಕ್ಕಾಗಲಿ ಯಾವನು ತಾನೆ ಸಮರ್ಥ ನಾದಾನು? ಮಹಾಶರೀರಿಗಳಾದ ಈ ಎಲ್ಲರೂ ಶೂರರೂ ಯುದ್ಧವನ್ನು ಬಯಸುವವರೂ ಆಗಿರುವರು.

**ಶಕ್ತಾಃ ಸರ್ವೇ ಚೂರ್ಣಯಿತುಂ ಲಂಕಾಂ ರಕ್ಷೋಗಣೈಃ ಸಹ ।**
**ಏತೇಷಾಂ ಬಲಸಂಖ್ಯಾನಂ ಪ್ರತ್ಯೇಕಂ ವಚ್ಮಿ ತೇ ಶೃಣು ॥ ೩೬ ॥**
**ಏಷಾಂ ಕೋಟಿಸಹಸ್ರಾಣಿ ನವ ಪಂಚ ಚ ಸಪ್ತ ಚ ।**
**ತಥಾ ಶಂಖಸಹಸ್ರಾಣಿ ತಥಾರ್ಬುದಶತಾನಿ ಚ ॥ ೩೭ ॥**
**ಸುಗ್ರೀವಸಚಿವಾನಾಂ ತೇ ಬಲಮೇತತ್ ಪ್ರಕೀರ್ತಿತಮ್ ।**
**ಅನ್ಯೇಷಾಂ ತು ಬಲಂ ನಾಹಂ ವಕ್ತುಂ ಶಕ್ತೋಽಸ್ಮಿ ರಾವಣ ॥ ೩೮ ॥**

೩೬-೩೮. ರಾಕ್ಷಸರ ಸಮೇತವಾದ ಲಂಕೆಯನ್ನು ಈ ಎಲ್ಲರೂ ಕೂಡಿ ಪುಡಿ ಮಾಡಿಬಿಡಲು ಸಮರ್ಥರಾಗಿರುವರು. ಇವರುಗಳ ಸೈನ್ಯದ ಲೆಕ್ಕವನ್ನು ಬೇರೆ ಬೇರೆಯಾಗಿ ಹೇಳುವೆನು ; ಕೇಳು. ಸುಗ್ರೀವನ ಜೊತೆಗಾರರಾದ ಈ ಕೋಟಿ ಸಹಸ್ರಸಂಖ್ಯಾಕರಾದ ಕಪಿಗಳು ಲೆಕ್ಕಮಾಡಲಾಗಿ ಇಪ್ಪತ್ತೊಂದುಸಹಸ್ರ ಕೋಟಿ ಗಳಾದಾರು. ಇನ್ನೂ ಉಳಿದವರು ನೂರಾರು ಶಂಖ-ಅರ್ಬುದ- ಎಂಬಿವುಗಳ ಸಾವಿರಸಂಖ್ಯೆಗಳನ್ನು ಮುಟ್ಟಿರುವರು ಇನ್ನುಳಿದ ಕಪಿಗಳ ಬಲವನ್ನು ಎಲೈ ರಾವಣನೆ, ನಾನು ಹೇಳಲು ಸಮರ್ಥನಲ್ಲ.

**ರಾಮೋ ನ ಮಾನುಷಃ ಸಾಕ್ಷಾದಾದಿನಾರಾಯಣಃ ಪರಃ ।**
**ಸೀತಾ ಸಾಕ್ಷಾಜ್ಜಗದ್ಧೇತುಶ್ಚಿಚ್ಛಕ್ತಿರ್ಜಗದಾತ್ಮಿಕಾ ॥ ೩೯ ॥**
**ತಾಭ್ಯಾಮೇವ ಸಮುತ್ಪನ್ನಂ ಜಗತ್ ಸ್ಥಾವರಜಂಗಮಮ್ ।**
**ತಸ್ಮಾದ್ರಾಮಶ್ಚ ಸೀತಾ ಚ ಜಗತಸ್ತಸ್ಥುಷಶ್ಚ ತೌ ॥ ೪೦ ॥**
**ಪಿತರೌ ಪೃಥಿವೀಪಾಲ ತಯೋರ್ವೈರೀ ಕಥಂ ಭವೇತ್ ।**
**ಅಜಾನತಾ ತ್ವಯಾಽಽನೀತಾ ಜಗನ್ಮಾತೈವ ಜಾನಕೀ ॥ ೪೧ ॥**

೩೯-೪೦. ಎಲೈ ಭೂಪಾಲನೆ, ರಾಮನು ಮನುಷ್ಯನಲ್ಲ ; ಆತನು ಪ್ರಭು ವಾದ ಆದಿನಾರಾಯಣನು. ಸೀತೆಯಾದರೊ, ಜಗದ್ವ್ಯಾಪಿನಿಯಾದ ಜಗತ್ಕಾರಣ ಳಾದ ಚಿಚ್ಛಕ್ತಿರೂಪಳು. ಇವರಿಬ್ಬರಿಂದಲೇ ಸ್ಥಾವರಜಂಗಮಾತ್ಮಕ (ಚೇತನಾಚೇತನ) ವಾದ ಪ್ರಪಂಚವೆಲ್ಲವೂ ಉಂಟಾಗಿರುವದು. ಆದ್ದರಿಂದ ರಾಮನೂ ಸೀತೆಯೂ ಈ ಜಡ- ಜೀವಾತ್ಮಕರಾದ ಎಲ್ಲಾ ಭೂತಗಳಿಗೂ ತಂದೆತಾಯಿಯಾಗಿರುವರು. ಇವರಿಗೆ ಶತ್ರುವಾಗುವದಾದರೂ ಹೇಗಾದೀತು ? ನೀನಾದರೊ, ಈ ವಿಷಯವನ್ನರಿಯದೆ ಲೋಕಮಾತೆಯಾದ ಸೀತೆಯನ್ನು ಕದ್ದು ತಂದಿರುವೆ.

**ಕ್ಷಣನಾಶಿನಿ ಸಂಸಾರೇ ಶರೀರೇ ಕ್ಷಣಭಂಗುರೇ ।**
**ಪಂಚಭೂತಾತ್ಮಕೇ ರಾಜನ್ ಚತುರ್ವಿಂಶತಿತತ್ತ್ವಕೇ ॥ ೪೨ ॥**

**ಮಲಮಾಂಸಾಸ್ಥಿದುರ್ಗಂಧಭೂಯಿಷ್ಠೇಽಹಂಕೃತಾಲಯೇ ।**
**ಕೈವಾಸ್ಥಾ ವ್ಯತಿರಿಕ್ತಸ್ಯ ಕಾಯೇ ತವ ಜಡಾತ್ಮಕೇ ॥ ೪೩ ॥**
**ಯತ್ಕೃತೇ ಬ್ರಹ್ಮಹತ್ಯಾದಿಪಾತಕಾನಿ ಕೃತಾನಿ ತೇ ।**
**ಭೋಗಭೋಕ್ತಾ ತು ಯೋ ದೇಹಃ ಸ ದೇಹೋಽತ್ರ ಪತಿಷ್ಯತಿ ॥ ೪೪ ॥**

೪೩-೪೪. ಕ್ಷಣಕಾಲವಿದ್ದು ಮರೆಯಾಗುವ ಈ ಸಂಸಾರದಲ್ಲಿ ಕ್ಷಣ ಭಂಗುರವೂ ಪಂಚಭೂತಾತ್ಮಕವೂ ಇಪ್ಪತ್ತು ನಾಲ್ಕು ತತ್ತ್ವರೂಪವೂ, ಮಲ, ಮಾಂಸ, ಎಲುಬು, ದುರ್ವಾಸನೆ, ಇವುಗಳಿಂದ ಕೂಡಿದ ಅಹಂಕಾರಾಶ್ರಯವಾದ ಜಡರೂಪವಾದ ನಿನ್ನ ದೇಹದಲ್ಲಿ ನಂಬಿಕೆಯಾದರೂ ಏನಿದ್ದೀತು ? ಯಾವ ದೇಹ (ಸುಖ)ಕ್ಕಾಗಿ ಬ್ರಹ್ಮಹತ್ಯೆಯೇ ಮುಂತಾದ ಪಾಪಗಳನ್ನು ಮಾಡಿರುವೆಯೋ ಭೋಗ ವನ್ನನುಭವಿಸುವ ಯಾವ ಶರೀರವಿದೆಯೋ ಅದು ಇಲ್ಲಿಯೇ ಬಿದ್ದು ಹೋಗಲಿದೆ.

**ಪುಣ್ಯಪಾಪೇ ಸಮಾಯಾತೋ ಜೀವೇನ ಸುಖದುಃಖಯೋಃ ।**
**ಕಾರಣೇ ದೇಹಯೋಗಾದಿ ನಾತ್ಮನಃ ಕುರುತೋಽನಿಶಮ್ ॥ ೪೫ ॥**
**ಯಾವದ್ದೇಹೋಽಸ್ಮಿ ಕರ್ತಾಸ್ಮೀತ್ಯಾತ್ಮಾಹಂಕುರುತೇಽವಶಃ ।**
**ಅಧ್ಯಾಸಾತ್ತಾವದೇವ ಸ್ಯಾಜ್ಜನ್ಮನಾಶಾದಿ ಸಂಭವಃ ॥ ೪೬ ॥**
**ತಸ್ಮಾತ್ತ್ವಂ ತ್ಯಜ ದೇಹಾದಾವಭಿಮಾನಂ ಮಹಾಮತೇ ।**

೪೫-೪೬. ಸುಖದುಃಖಗಳಿಗೆ ಕಾರಣವಾದ ಪುಣ್ಯಪಾಪಗಳು ಮಾತ್ರ ಜೀವನೊಡನೆ ಬರುವವು ; ದೇಹಾದಿಗಳನ್ನುಂಟುಮಾಡುವದಕ್ಕೆ ಕಾರಣಗಳಾಗಿ ಯಾವಾಗಲೂ (ಹಿಂಬಾಲಿಸುವವು). ಆದರೆ ಆತ್ಮನಿಗೆ (ಹೀಗೆ ಜನ್ಮಾಂತರ ಲೋಕಾಂತರಗಳಿಲ್ಲ.) ಅವಿದ್ಯೆಗೆ ಬದ್ಧನಾಗಿ ಎಲ್ಲಿಯವರೆಗೆ ನಾನು ದೇಹವು - ಎಂದೂ ನಾನು ಕರ್ತೃವೆಂದೂ ಆತ್ಮನು ಅಹಂಕಾರವಿಶಿಷ್ಟನಾಗಿರುವನೋ ಆ ದೇಹಾತ್ಮಾಧ್ಯಾಸದಿಂದಲೇ ಜನ್ಮಮರಣಗಳು ಅಷ್ಟುಕಾಲದವರೆಗೂ ಸಂಭವಿಸುತ್ತಿರು ವವು. ಆದ್ದರಿಂದ ಎಲೈ ಬುದ್ಧಿ ಶಾಲಿಯೆ, ದೇಹಾದಿಗಳಲ್ಲಿ ಅಭಿಮಾನವನ್ನು ನೀನು ಬಿಡುವವನಾಗು.

**ಆತ್ಮಾಽತಿನಿರ್ಮಲಃ ಶುದ್ಧೋ ವಿಜ್ಞಾನಾತ್ಮಾಽಚಲೋಽವ್ಯಯಃ ।**
**ಸ್ವಾಜ್ಞಾನವಶತೋ ಬಂಧಂ ಪ್ರತಿಪದ್ಯ ವಿಮುಹ್ಯತಿ ॥ ೪೭ ॥**
**ತಸ್ಮಾತ್ ತ್ವಂ ಶುದ್ಧಭಾವೇನ ಜ್ಞಾತ್ವಾತ್ಮಾನಂ ಸದಾ ಸ್ಮರ ।**
**ವಿರತಿಂ ಭಜ ಸರ್ವತ್ರ ಪುತ್ರದಾರಗೃಹಾದಿಷು ॥ ೪೮ ॥**
**ನಿರಯೇಷ್ವಪಿ ಭೋಗಃ ಸ್ಯಾತ್ ಶ್ವಸೂಕರತನಾವಪಿ ।**
**ದೇಹಂ ಲಬ್ಧ್ವಾ ವಿವೇಕಾಢ್ಯಂ ದ್ವಿಜತ್ವಂ ಚ ವಿಶೇಷತಃ ॥ ೪೯ ॥**

೪೭-೪೯. ಆದ್ದರಿಂದ ನೀನು ಶುದ್ಧಭಾವದಿಂದ ಆತ್ಮನನ್ನರಿತುಕೊಂಡು ಯಾವಾಗಲೂ ಚಿಂತಿಸುವವನಾಗು. ಮಗ, ಹೆಂಡತಿ, ಮನೆ-ಮುಂತಾದವುಗಳಲ್ಲಿ ವೈರಾಗ್ಯವನ್ನು ಹೊಂದುವವನಾಗು. (ಪಾಪ) ಭೋಗವಾದರೊ, ನರಕಗಳಲ್ಲಿಯೂ, (ವಿಷಯಭೋಗವು) ನಾಯಿ ಹಂದಿಗಳ ಜನ್ಮಗಳಲ್ಲಿಯೂ ದೊರಕೀತು. ಆದರೆ ಈಗ ನೀನು ವಿವೇಕಯುತವಾದ ದೇಹವನ್ನೂ ಅದರಲ್ಲಿಯೂ ಬ್ರಾಹ್ಮಣ್ಯವನ್ನೂ ವಿಶೇಷ ವಾಗಿ ಪಡೆದಿರುವೆ.

**ತತ್ರಾಪಿ ಭಾರತೇ ವರ್ಷೇ ಕರ್ಮಭೂಮೌ ಸುದುರ್ಲಭಮ್ ।**
**ಕೋ ವಿದ್ವಾನಾತ್ಮಸಾತ್ಕೃತ್ವಾ ದೇಹಂ ಭೋಗಾನುಗೋ ಭವೇತ್ ॥ ೫೦ ॥**
**ಅತಸ್ತ್ವಂ ಬ್ರಾಹ್ಮಣೋ ಭೂತ್ವಾ ಪೌಲಸ್ತ್ಯತನಯಶ್ಚ ಸನ್ ।**
**ಅಜ್ಞಾನೀವ ಸದಾ ಭೋಗಾನನುಧಾವಸಿ ಕಿಂ ಮುಧಾ ॥ ೫೧ ॥**
**ಇತಃ ಪರಂ ವಾ ತ್ಯಕ್ತ್ವಾ ತ್ವಂ ಸರ್ವಸಂಗಂ ಸಮಾಶ್ರಯ ।**
**ರಾಮಮೇವ ಪರಾತ್ಮಾನಂ ಭಕ್ತಿಭಾವೇನ ಸರ್ವದಾ ॥ ೫೨ ॥**
**ಸೀತಾಂ ಸಮರ್ಪ್ಯ ರಾಮಾಯ ತತ್ಪಾದಾನುಚರೋ ಭವ ।**

೫೦-೫೨. ಅದರಲ್ಲಿಯೂ ಭರತಖಂಡದಲ್ಲಿ ಕರ್ಮಭೂಮಿಯಲ್ಲಿ ದುರ್ಲಭವಾಗಿರುವ ದೇಹವನ್ನು ಪಡೆದುಕೊಂಡ ಯಾವ ಜಾಣನು ತಾನೆ ಭೋಗದ ಬೆನ್ನುಹತ್ತಿಯಾನು ? ಆದ್ದರಿಂದ ನೀನು ಬ್ರಾಹ್ಮಣನಾಗಿದ್ದುಕೊಂಡು ಜೊತೆಗೆ ಪುಲಸ್ತ್ಯ ಬ್ರಹ್ಮನ ಮಗನ ಮಗನಾಗಿದ್ದು ಅಜ್ಞಾನಿಯಂತೆ ಯಾವಾಗಲೂ ಭೋಗಗಳನ್ನೇ ಅನು ಸರಿಸಿಕೊಂಡು ವ್ಯರ್ಥವಾಗಿ ಏಕೆ ಕಾಲಕಳೆಯುವೆ ? ಇನ್ನು ಮುಂದೆಯಾದರೂ ನೀನು ಎಲ್ಲಾ ಆಸಕ್ತಿಗಳನ್ನೂ ಬಿಟ್ಟು ಪರಮಾತ್ಮನಾದ ರಾಮನನ್ನೇ ಭಕ್ತಿಭಾವದಿಂದ ಆಶ್ರಯಿಸುವವನಾಗು. ರಾಮನಿಗೆ ಸೀತೆಯನ್ನೊಪ್ಪಿಸಿ ಅವನ ಪಾದಸೇವಕನಾಗಿ (ಬದುಕುವವ)ನಾಗು.

**ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕಂ ಪ್ರಯಾಸ್ಯಸಿ ।**
**ನೋ ಚೇದ್ ಗಮಿಷ್ಯಸೇಽಧೋಽಧಃ ಪುನರಾವೃತ್ತಿವರ್ಜಿತಃ ॥ ೫೩ ॥**
**ಅಂಗೀಕುರುಷ್ವ ಮದ್ವಾಕ್ಯಂ ಹಿತಮೇವ ವದಾಮಿ ತೇ ।**
**ಸತ್ಸಂಗತಿಂ ಕುರು ಭಜಸ್ವ ಹರಿಂ ಶರಣ್ಯಂ ।**
**ಶ್ರೀರಾಘವಂ ಮರಕತೋಪಲಕಾಂತಿಕಾಂತಮ್ ॥**
**ಸೀತಾಸಮೇತಮನಿಶಂ ಧೃತಚಾಪಬಾಣಂ**
**ಸುಗ್ರೀವಲಕ್ಷ್ಮಣವಿಭೀಷಣಸೇವಿತಾಂಘ್ರಿಮ್ ॥ ೫೪ ॥**

೫೩-೫೪. ಸಮಸ್ತಪಾಪಗಳಿಂದಲೂ ಬಿಡಲ್ಪಟ್ಟವನಾಗಿ ವಿಷ್ಣುಲೋಕಕ್ಕೆ ಹೋಗಲಿರುವೆ. ಹಾಗಿಲ್ಲವಾದರೆ ಸದ್ಗತಿಗೆ ಹಿಂದಿರುಗದ ಸ್ಥಿತಿಯಲ್ಲಿ ಕೆಳಕೆಳಕ್ಕೆ ಹೋಗಿಬಿಡುವೆ. ನನ್ನ ಮಾತನ್ನು ಒಪ್ಪಿಕೊ. ನಿನಗೆ ಹಿತವನ್ನೇ ಹೇಳುತ್ತಿರುವೆನು. ಸತ್ಸಂಗವನ್ನು ಮಾಡು. ಹಾಗೂ ನೀಲವಜ್ರದಂತೆ ಕಾಂತಿಯುಳ್ಳ ಸೀತಾಸಮೇತನಾದ, ಧನುರ್ಬಾಣಗಳನ್ನು ಧರಿಸಿರುವ, ಸುಗ್ರೀವ, ಲಕ್ಷ್ಮಣ, ವಿಭೀಷಣರುಗಳಿಂದ ಸೇವಿಸಲ್ಪಟ್ಟ ಪಾದಗಳುಳ್ಳ ಶರಣ್ಯನಾದ ಹರಿಯನ್ನು (ಶ್ರೀರಾಮನನ್ನು) ಯಾವಾಗಲೂ ಭಜಿಸುವವನಾಗು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ಚತುರ್ಥಃ ಸರ್ಗಃ**

---------

## ಐದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಶ್ರುತ್ವಾ ಶುಕಮುಖೋದ್ಗೀತಂ ವಾಕ್ಯಮಜ್ಞಾನನಾಶನಮ್ ।**
**ರಾವಣಃ ಕ್ರೋಧತಾಮ್ರಾಕ್ಷಃ ದಹನ್ನಿವ ತಮಬ್ರವೀತ್ ॥ ೧ ॥**
**ಅನುಜೀವ್ಯ ಸುದುರ್ಬುದ್ಧೇ ಗುರುವದ್ ಭಾಷಸೇ ಕಥಮ್ ।**
**ಶಾಸಿತಾಹಂ ತ್ರಿಜಗತಾಂ ತ್ವಂ ಮಾಂ ಶಿಕ್ಷನ್ ನ ಲಜ್ಜಸೇ ॥ ೨ ॥**
**ಇದಾನೀಮೇವ ಹನ್ಮಿ ತ್ವಾಂ ಕಿಂ ತು ಪೂರ್ವಕೃತಂ ತವ ।**
**ಸ್ಮರಾಮಿ ತೇನ ರಕ್ಷಾಮಿ ತ್ವಾಂ ಯದ್ಯಪಿ ವಧೋಚಿತಮ್ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಶುಕನ ಮುಖದಿಂದ ಹೊರಬಂದ ಅಜ್ಞಾನನಾಶಕವಾದ ಮಾತನ್ನು ಕೇಳಿ ರಾವಣನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಸುಡುವವನಂತೆ ನೋಡುತ್ತಾ ಹೀಗೆಂದನು : 'ಎಲವೊ, ದುರ್ಬುದ್ಧಿಯೆ, ನನ್ನನ್ನು ಆಶ್ರಯಿಸಿ ಬದುಕಿದ್ದು ಈಗ ಗುರುವಿನಂತೆ ಮಾತನಾಡುವೆಯಲ್ಲವೆ ? ಇದು ಹೇಗೆ ? ನಾನು ಮೂರು ಲೋಕಗಳಿಗೂ ಒಡೆಯನು. ನೀನು ನನಗೆ ಬುದ್ಧಿ ಹೇಳಲು ನಾಚಿಕೆಯಾಗುವದಿಲ್ಲವೆ ? ನಿನ್ನನ್ನು ಈಗಲೆ ನಾನು ಕೊಲ್ಲುತ್ತಿದ್ದೆನು. ಆದರೆ ನೀನು ಹಿಂದೆ ಮಾಡಿದ (ಉಪಕಾರವನ್ನು) ನೆನೆಸಿ ವಧಾರ್ಹನಾಗಿರುವೆಯಾದರೂ ಕಾಪಾಡಿರುವೆನು.

**ಇತೋ ಗಚ್ಛ ವಿಮೂಢ ತ್ವಮೇವಂ ಶ್ರೋತುಂ ನ ಮೇ ಕ್ಷಮಮ್ ।**
**ಮಹಾಪ್ರಸಾದ ಇತ್ಯುಕ್ತ್ವಾ ವೇಪಮಾನೋ ಗೃಹಂ ಯಯೌ ॥ ೪ ॥**

೪. 'ಎಲೈ ಮೂಢನೆ, ಇಲ್ಲಿಂದ ತೊಲಗು ; ಹೀಗೆಲ್ಲ ಹರಟುವ ನಿನ್ನ ಮಾತು ನನಗೆ ಕೇಳಲು ತಕ್ಕದ್ದಾಗಿರುವದಿಲ್ಲ' ಎಂದನು. ಆಗ ಅವನು 'ಮಹಾಪ್ರಸಾದ' ಎಂದು ಹೇಳುವವನಾಗಿ ನಡುಗುತ್ತಾ ಮನೆಗೆ ಹೋದನು.

**ಶುಕೋಽಪಿ ಬ್ರಾಹ್ಮಣಃ ಪೂರ್ವಂ ಬ್ರಹ್ಮಿಷ್ಠೋ ಬ್ರಹ್ಮವಿತ್ತಮಃ ।**
**ವಾನಪ್ರಸ್ಥವಿಧಾನೇನ ವನೇ ತಿಷ್ಠನ್ ಸ್ವಕರ್ಮಕೃತ್ ॥ ೫ ॥**
**ದೇವಾನಾಮಭಿವೃದ್ಧ್ಯರ್ಥಂ ವಿನಾಶಾಯ ಸುರದ್ವಿಷಾಮ್ ।**
**ಚಕಾರ ಯಜ್ಞವಿತತಿಮವಿಚ್ಛಿನ್ನಾಂ ಮಹಾಮತಿಃ ॥ ೬ ॥**
**ರಾಕ್ಷಸಾನಾಂ ವಿರೋಧೋಽಭೂತ್ ಶುಕೋ ದೇವಹಿತೋದ್ಯತಃ ।**
**ವಜ್ರದಂಷ್ಟ್ರ ಇತಿ ಖ್ಯಾತಃ ತತ್ರೈಕೋ ರಾಕ್ಷಸೋ ಮಹಾನ್ ॥ ೭ ॥**
**ಅಂತರಂ ಪ್ರೇಪ್ಸುರಾತಿಷ್ಠತ್ ಶುಕಾಪಕರಣೋದ್ಯತಃ ।**

೫-೭. ಮಹಾಮತಿಯಾದ ಶುಕನು ಕೂಡ ಬ್ರಹ್ಮ(ವೇದ)ನಿಷ್ಠನಾದ ಬ್ರಹ್ಮವನ್ನು ಬಲ್ಲ ಬ್ರಾಹ್ಮಣನಾಗಿದ್ದನು. ವಾನಪ್ರಸ್ಥಾಶ್ರಮದಲ್ಲಿದ್ದುಕೊಂಡು ಕಾಡಿನಲ್ಲಿ ತನ್ನ ಕಾರ್ಯಗಳನ್ನು ನೆರವೇರಿಸುತ್ತಾ ರಾಕ್ಷಸರ ವಿನಾಶಕ್ಕೂ ದೇವತೆಗಳ ಪುರೋಭಿವೃದ್ಧಿಗೂ ಸಾಲುಸಾಲಾಗಿ ಯಜ್ಞಗಳನ್ನು ಮಾಡುತ್ತಿದ್ದನು. ಶುಕನು ಹೀಗೆ ದೇವತೆಗಳಿಗೆ ಅನುಕೂಲನಾಗಿರುವ ವಿಷಯವು ರಾಕ್ಷಸರೊಡನೆ ವಿರೋಧಕ್ಕೆ ಕಾರಣವಾಗಿಬಿಟ್ಟಿತು. ಆಗ ರಾಕ್ಷಸರಲ್ಲೊಬ್ಬನಾದ ವಜ್ರದಂಷ್ಟ್ರನೆಂದು ಪ್ರಸಿದ್ಧನಾದವನು ಈ ಶುಕನಿಗೆ ಅಪಕಾರವನ್ನೆಸಗಲು ಸಮಯವನ್ನು ಕಾಯ್ದುಕೊಂಡಿದ್ದನು.

**ಕದಾಚಿದಾಗತೋಽಗಸ್ತ್ಯಃ ತಸ್ಯಾಶ್ರಮಪದಂ ಮುನೇಃ ।**
**ತೇನ ಸಂಪೂಜಿತೋಽಗಸ್ತ್ಯೋ ಭೋಜನಾರ್ಥಂ ನಿಮಂತ್ರಿತಃ ॥ ೮ ॥**
**ಗತೇ ಸ್ನಾತುಂ ಮುನೌ ಕುಂಭಸಂಭವೇ ಪ್ರಾಪ್ಯ ಚಾಂತರಮ್ ।**
**ಅಗಸ್ತ್ಯರೂಪಧೃಕ್ ಸೋಽಪಿ ರಾಕ್ಷಸಃ ಶುಕಮಬ್ರವೀತ್ ॥ ೯ ॥**
**ಯದಿ ದಾಸ್ಯಸಿ ಮೇ ಬ್ರಹ್ಮನ್ ಭೋಜನಂ ದೇಹಿ ಸಾಮಿಷಮ್ ।**
**ಬಹುಕಾಲಂ ನ ಭುಕ್ತಂ ಮೇ ಮಾಂಸಂ ಛಾಗಾಂಗಸಂಭವಮ್ ॥ ೧೦ ॥**

೮-೧೦. ಒಮ್ಮೆ ಆ (ಶುಕ)ಮುನಿಯ ಆಶ್ರಮಕ್ಕೆ ಅಗಸ್ತ್ಯನು ಬಂದನು. ಅವನಿಂದ ಪೂಜಿಸಲ್ಪಟ್ಟ ಅಗಸ್ತ್ಯನು ಊಟಕ್ಕೆ ಆಹ್ವಾನಿಸಲ್ಪಟ್ಟನು. ಆ ಅಗಸ್ತ್ಯಮುನಿಯು ಸ್ನಾನಕ್ಕೆ ಹೋಗಿರಲಾಗಿ ಸಮಯವನ್ನು ಸಾಧಿಸಿ ಆ ರಾಕ್ಷಸನು ಅಗಸ್ತ್ಯರ

ರೂಪವನ್ನು ಧರಿಸಿ ಬಂದು ಶುಕನನ್ನು ಕುರಿತು ಹೀಗೆಂದನು : 'ಎಲೈ ಬ್ರಾಹ್ಮಣನೆ, ನಾನು ಬಹಳಕಾಲದಿಂದ ಹೋತದ ಮಾಂಸವನ್ನು ಊಟಮಾಡಿಲ್ಲ. ಆದ್ದರಿಂದ ಮಾಂಸಸಹಿತವಾದ ಊಟವನ್ನು ಕೊಡುವವನಾಗು.'

**ತಥೇತಿ ಕಾರಯಾಮಾಸ ಮಾಂಸಭೋಜ್ಯಂ ಸುವಿಸ್ತರಮ್ ।**
**ಉಪವಿಷ್ಟೇ ಮುನೌ ಭೋಕ್ತುಂ ರಾಕ್ಷಸೋಽತೀವಸುಂದರಮ್ ॥ ೧೧ ॥**
**ಶುಕಭಾರ್ಯಾವಪುರ್ಧೃತ್ವಾ ತಾಂ ಚಾಂತರ್ಮೋಹಯನ್ ಖಲಃ ।**
**ನರಮಾಂಸಂ ದದೌ ತಸ್ಮೈ ಸುಪಕ್ವಂ ಬಹು ವಿಸ್ತರಮ್ ॥ ೧೨ ॥**
**ದತ್ತ್ವೈವಾಂತರ್ದಧೇ ರಕ್ಷಃ ತತೋ ದೃಷ್ಟ್ವಾ ಚುಕೋಪ ಸಃ ।**

೧೧-೧೨. ಹಾಗೆಯೇ ಆಗಲೆಂದು ಬಗೆಬಗೆಯ ಮಾಂಸಾಹಾರಗಳನ್ನು ಮಾಡಿಸಿದನು. (ಅಗಸ್ತ್ಯ)ಮುನಿಯು ಊಟಮಾಡಲು ಕುಳಿತಾಗ ರಾಕ್ಷಸನು ಸುಂದರವಾದ ಶರೀರದಿಂದ ಶುಕನ ಹೆಂಡತಿಯ ವೇಷವನ್ನು ಧರಿಸಿ ಆಕೆಯನ್ನೂ ಒಳಗೆ ವಂಚಿಸಿ ರುಚಿಯಾದ ಬಗೆಬಗೆಯ ಊಟದ ಜೊತೆಯಲ್ಲಿ ಮನುಷ್ಯ ಮಾಂಸವನ್ನು ಕೊಟ್ಟನು. ಹಾಗೆಯೇ ಕೊಟ್ಟ ಕೂಡಲೆ ರಾಕ್ಷಸನು ಕಣ್ಮರೆಯಾಗಿ ಬಿಟ್ಟನು. ಅನಂತರ ಅದನ್ನು ಕಂಡು ಅಗಸ್ತ್ಯನು ಕೋಪಗೊಂಡನು.

**ಅಮೇಧ್ಯಂ ಮಾನುಷಂ ಮಾಂಸಮಗಸ್ತ್ಯಃ ಶುಕಮಬ್ರವೀತ್ ।**
**ಅಭಕ್ಷ್ಯಂ ಮಾನುಷಂ ಮಾಂಸಂ ದತ್ತವಾನಸಿ ದುರ್ಮತೇ ॥ ೧೩ ॥**
**ಮಹ್ಯಂ ಸ ರಾಕ್ಷಸೋ ಭೂತ್ವಾ ತಿಷ್ಠ ತ್ವಂ ಮಾನುಷಾಶನಃ ।**
**ಇತಿ ಶಪ್ತಃ ಪುರೋ ಭೀತ್ಯಾ ಪ್ರಾಹಾಗಸ್ತ್ಯಂ ಮುನೇ ತ್ವಯಾ ॥ ೧೪ ॥**
**ಇದಾನೀಂ ಭಾಷಿತಂ ಮೇಽದ್ಯ ಮಾಂಸಂ ದೇಹೀತಿ ವಿಸ್ತರಮ್ ।**
**ತಥೈವ ದತ್ತಂ ಮೇ ದೇವ ಕಿಂ ಮೇ ಶಾಪಂ ಪ್ರದಾಸ್ಯಸಿ ॥ ೧೫ ॥**

೧೩-೧೫. ಅಪವಿತ್ರವಾದ ಮನುಷ್ಯಮಾಂಸವನ್ನು ಕಂಡು (ಕೋಪಗೊಂಡು) ಅಗಸ್ತ್ಯನು ಶುಕನನ್ನು ಕುರಿತು ಹೀಗೆಂದನು : 'ಎಲೈ ದುರ್ಬುದ್ಧಿಯೆ, ತಿನ್ನಲು ಅಯೋಗ್ಯವಾದ ಮನುಷ್ಯಮಾಂಸವನ್ನು ನೀನು ಕೊಟ್ಟಿರುವೆ. ಆದ್ದರಿಂದ ಆ ನೀನು ರಾಕ್ಷಸನಾಗಿ ಹುಟ್ಟಿ ನರರನ್ನು ತಿನ್ನುವವನಾಗು.' ಹೀಗೆಂದು ಶಪಿಸಲ್ಪಟ್ಟ ನಾನು ಭಯದಿಂದ ಹೀಗೆಂದೆನು : 'ಮುನಿಯೆ, ನೀನು ಈಗತಾನೆ ಮಾಂಸವನ್ನು ಕೊಡು-ಎಂದು ಹೇಳಿದವನಾಗಿದ್ದು ಆಮೇಲೆ ನಾನು ಕೊಟ್ಟದ್ದರಿಂದ ಮತ್ತೆ ನನಗೇ ಶಾಪವನ್ನೇಕೆ ಕೊಡುವೆ?' (ಎಂದನು).

**ಶ್ರುತ್ವಾ ಶುಕಸ್ಯ ವಚನಂ ಮುಹೂರ್ತಂ ಧ್ಯಾನಮಾಸ್ಥಿತಃ ।**
**ಜ್ಞಾತ್ವಾ ರಕ್ಷಃ ಕೃತಂ ಸರ್ವಂ ತತಃ ಪ್ರಾಹ ಶುಕಂ ಸುಧೀಃ ॥ ೧೬ ॥**

**ತವಾಪಕಾರಿಣಾ ಸರ್ವಂ ರಾಕ್ಷಸೇನ ಕೃತಂ ತ್ವಿದಮ್ ।**
**ಅವಿಚಾರ್ಯೈವ ಮೇ ದತ್ತಃ ಶಾಪಸ್ತೇ ಮುನಿಸತ್ತಮ ॥ ೧೭ ॥**
**ತಥಾಪಿ ಮೇ ವಚೋಽಮೋಘಮೇವಮೇವ ಭವಿಷ್ಯತಿ ।**

೧೬-೧೭. ಶುಕನ ಮಾತನ್ನು ಕೇಳಿ (ಆಗಸ್ತ್ಯನು) ಒಂದು ಮುಹೂರ್ತ ಕಾಲ ಅಂತರ್ಮುಖನಾಗಿ ಚಿಂತಿಸಿ ರಾಕ್ಷಸನು ಮಾಡಿದ (ಮೋಸವನ್ನು) ಅರಿತವನಾಗಿ ಆ ಮುನಿಯು ಶುಕನಿಗೆ ಹೀಗೆನ್ನೊದನು : 'ನಿನಗೆ ಕೆಟ್ಟದ್ದನ್ನು ಮಾಡುವ ಉದ್ದೇಶವುಳ್ಳ ರಾಕ್ಷಸನಿಂದ ಇದೆಲ್ಲವೂ ಮಾಡಲ್ಪಟ್ಟಿತು. ನಾನಾದರೊ, ವಿಚಾರಮಾಡದೆಯೇ ಎಲೈ ಮುನಿಶ್ರೇಷ್ಠನೆ, ನಿನಗೆ ಶಾಪವನ್ನು ಕೊಟ್ಟುಬಿಟ್ಟೆನು. ಆದರೂ ನನ್ನ ಮಾತು ವ್ಯರ್ಥ ವಾಗಲಾರದು. ಅದು ಹಾಗೆಯೇ ಆಗಲಿದೆ.

**ರಾಕ್ಷಸಂ ವಪುರಾಸ್ಥಾಯ ರಾವಣಸ್ಯ ಸಹಾಯಕೃತ್ ।**
**ತಿಷ್ಠ ತಾವದ್ಯದಾ ರಾಮೋ ದಶಾನನವಧಾಯ ಹಿ ।**
**ಆಗಮಿಷ್ಯತಿ ಲಂಕಾಯಾಃ ಸಮೀಪಂ ವಾನರೈಃ ಸಹ ॥ ೧೮ ॥**
**ಪ್ರೇಷಿತೋ ರಾವಣೇನ ತ್ವಂ ಚಾರೋ ಭೂತ್ವಾ ರಘೂತ್ತಮಮ್ ।**
**ದೃಷ್ಟ್ವಾ ಶಾಪಾದ್ ವಿನಿರ್ಮುಕ್ತೋ ಬೋಧಯಿತ್ವಾ ಚ ರಾವಣಮ್ ॥ ೧೯ ॥**
**ತತ್ತ್ವಜ್ಞಾನಂ ತತೋ ಮುಕ್ತಃ ಪರಂ ಪದಮವಾಪ್ಸ್ಯಸಿ ।**
**ಇತ್ಯುಕ್ತೋಽಗಸ್ತ್ಯಮುನಿನಾ ಶುಕೋ ಬ್ರಾಹ್ಮಣಸತ್ತಮಃ ॥ ೨೦ ॥**
**ಬಭೂವ ರಾಕ್ಷಸಃ ಸದ್ಯೋ ರಾವಣಂ ಪ್ರಾಪ್ಯ ಸಂಸ್ಥಿತಃ ।**

೧೮-೨೦. ನೀನು ರಾಕ್ಷಸಶರೀರವನ್ನು ಧರಿಸಿ ರಾವಣನಿಗೆ ಸಹಾಯಕ ನಾಗಿದ್ದುಕೊಂಡಿರು. ಯಾವಾಗ ಶ್ರೀರಾಮನು ರಾವಣಸಂಹಾರಕ್ಕಾಗಿ ಕಪಿಗಳೊಡ ಗೂಡಿ ಲಂಕೆಯ ಸಮೀಪಕ್ಕೆ ಬರುವನೋ ಆಗ ನೀನು (ಗೂಢ)ಚಾರನಾಗಿ ರಾವಣ ನಿಂದ ಕಳುಹಿಸಲ್ಪಟ್ಟವನಾಗಿ ರಾಮನ ಬಳಿಗೆ ಬಂದು ಆತನನ್ನು ಕಂಡು ಶಾಪದಿಂದ ಬಿಡುಗಡೆಹೊಂದಿದವನಾಗಿ ರಾವಣನನ್ನು ಕುರಿತು ತತ್ತ್ವಬೋಧೆಯನ್ನು ಮಾಡಿದವ ನಾಗಿ ಅವನಿಂದ ಬಿಡುಗಡೆಹೊಂದಿ ಪರಮಪದವಿಯನ್ನು ಸೇರುವೆ - ಹೀಗೆಂದು ಬ್ರಾಹ್ಮಣಶ್ರೇಷ್ಠನಾದ ಶುಕನು ಅಗಸ್ತ್ಯನಿಂದ ಹೇಳಲ್ಪಟ್ಟವನಾಗಿ ಕೂಡಲೆ ರಾಕ್ಷಸನಾಗಿ ರಾವಣನನ್ನು ಬಂದು ಸೇರಿದನು.

**ಇದಾನೀಂ ಚಾರರೂಪೇಣ ದೃಷ್ಟ್ವಾ ರಾಮಂ ಸಹಾನುಜಮ್ ।**
**ರಾವಣಂ ತತ್ತ್ವವಿಜ್ಞಾನಂ ಬೋಧಯಿತ್ವಾ ಪುನರ್ದ್ರುತಮ್ ॥ ೨೧ ॥**
**ಪೂರ್ವವದ್ ಬ್ರಾಹ್ಮಣೋ ಭೂತ್ವಾ ಸ್ಥಿತೋ ವೈಖಾನಸೈಃ ಸಹ ।**

೨೧. ಈಗ ಗೂಢಚಾರವೇಷದಿಂದ ಬಂದು ಸೋದರಸಹಿತನಾದ ಶ್ರೀರಾಮನನ್ನು ಕಂಡು ಅಲ್ಲಿಂದ ಹಿಂದಿರುಗಿ ರಾವಣನಲ್ಲಿಗೆ ಬಂದು ಅವನಿಗೆ ತತ್ತ್ವಜ್ಞಾನವನ್ನುಪದೇಶಿಸಿ ಮತ್ತೆ ಜಾಗ್ರತೆಯಾಗಿ ಅಲ್ಲಿಂದ ಹೊರಟು ಹಿಂದಿನಂತೆಯೇ ಬ್ರಾಹ್ಮಣನಾಗಿ ತಪಸ್ವಿಗಳೊಡನೆ ಇದ್ದುಕೊಂಡಿರುವನು.

**ತತಃ ಸಮಾಗಮದ್ ವೃದ್ಧೋ ಮಾಲ್ಯವಾನ್ ರಾಕ್ಷಸೋ ಮಹಾನ್ ।**
**ಬುದ್ಧಿಮಾನ್ನೀತಿನಿಪುಣೋ ರಾಜ್ಞೋ ಮಾತುಃ ಪ್ರಿಯಃ ಪಿತಾ ॥ ೨೨ ॥**
**ಪ್ರಾಹ ತಂ ರಾಕ್ಷಸಂ ವೀರಂ ಪ್ರಶಾಂತೇನಾಂತರಾತ್ಮನಾ ।**
**ಶೃಣು ರಾಜನ್ ವಚೋऽ ಮೇऽದ್ಯ ಶ್ರುತ್ವಾ ಕುರು ಯಥೇಪ್ಸಿತಮ್ ॥ ೨೩ ॥**
**ಯದಾ ಪ್ರವಿಷ್ಟಾ ನಗರೀಂ ಜಾನಕೀ ರಾಮವಲ್ಲಭಾ ।**
**ತದಾದಿ ಪುರ್ಯಾಂ ದೃಶ್ಯನ್ತೇ ನಿಮಿತ್ತಾನಿ ದಶಾನನ ॥ ೨೪ ॥**

೨೨-೨೪. ಅನಂತರ ವೃದ್ಧನೂ ಬುದ್ಧಿವಂತನೂ ನೀತಿನಿಪುಣನೂ ರಾಜನಾದ (ರಾವಣನ) ತಾಯಿಯ ತಂದೆಯೂ ಆದ ಮಾಲ್ಯವಂತನೆಂಬ ರಾಕ್ಷಸನು ವೀರನಾದ ರಾಕ್ಷಸ(ರಾವಣ)ನನ್ನು ಕುರಿತು ಸಮಾಧಾನಚಿತ್ತದಿಂದ ಹೀಗೆಂದನು : 'ಎಲೈ ರಾಜನೆ, ನನ್ನ ಈ ಮಾತನ್ನು ಕೇಳು. ಕೇಳಿದ ಅನಂತರ ನಿನಗೆ ಇಷ್ಟಬಂದಂತೆ ನಡೆದುಕೊ. ರಾಮನ ಹೆಂಡತಿಯಾದ ಸೀತೆಯು ಯಾವಾಗ ಲಂಕೆಗೆ ಬಂದಳೋ ಆಗಿನಿಂದ ಈ ಪಟ್ಟಣದಲ್ಲಿ (ಕೆಟ್ಟ) ಶಕುನಗಳು ಕಂಡುಬರುತ್ತಿವೆ.

**ಘೋರಾಣಿ ನಾಶಹೇತೂನಿ ತಾನಿ ಮೇ ವದತಃ ಶೃಣು ।**
**ಖರಸ್ತನಿತನಿರ್ಘೋಷಾ ಮೇಘಾ ಅತಿಭಯಂಕರಾಃ ॥ ೨೫ ॥**
**ಶೋಣಿತೇನಾಭಿವರ್ಷಂತಿ ಲಂಕಾಮುಷ್ಣೇನ ಸರ್ವದಾ ।**
**ರುದಂತಿ ದೇವಲಿಂಗಾನಿ ಸ್ವಿದ್ಯಂತಿ ಪ್ರಚಲಂತಿ ಚ ॥ ೨೬ ॥**
**ಕಾಳಿಕಾ ಪಾಂಡುರೈರ್ದಂತೈಃ ಪ್ರಹಸತ್ಯಗ್ರತಃ ಸ್ಥಿತಾ ।**
**ಖರಾ ಗೋಷು ಪ್ರಜಾಯಂತೇ ಮೂಷಕಾ ನಕುಲೈಃ ಸಹ ॥ ೨೭ ॥**

೨೫-೨೭. ಭಯಂಕರವಾದ ಹಾಗೂ (ರಾಕ್ಷಸರ) ವಿನಾಶಕ್ಕೆ ಕಾರಣವಾದ ಅಂಥವುಗಳನ್ನು ಕೇಳು. ಬಹಳ ಹೆದರಿಕೆಯನ್ನುಂಟುಮಾಡುವ ಮೋಡಗಳು ಕತ್ತೆಗಳು ಕಿರಿಚಿದ ಧ್ವನಿಯಂತೆ ಶಬ್ದಮಾಡುತ್ತಾ ಯಾವಾಗಲೂ ಬಿಸಿಯಾದ ರಕ್ತ (ವರ್ಣದ ನೀರಿನಿಂದ) ಲಂಕೆಯಮೇಲೆ ಮಳೆಗರೆಯುತ್ತಿವೆ. ದೇವಚಿಹ್ನೆಗಳು (ವಿಗ್ರಹ-ಮೂರ್ತ್ಯಾದಿಗಳು) ಕಣ್ಣೀರುಹಾಕುತ್ತಿವೆ. ಬೆವರುತ್ತಿವೆ. ಸ್ಥಳದಿಂದ ಅಳ್ಳಾಡುತ್ತಿವೆ. ಕಾಳಿದೇವತೆಯು ತನ್ನ ಬಿಳುಪಾದ ಹಲ್ಲುಗಳಿಂದ ಎದುರುಗೊಂಡವಳಾಗಿ ನಿಂತು ನಗುತ್ತಿರುವಳು. ಗೋವುಗಳು ಕತ್ತೆಮರಿಗಳನ್ನು ಹಡೆಯುತ್ತಿವೆ. ಇಲಿಗಳು ಮುಂಗುಸಿಗಳೊಡನೆ ಹೊಡೆದಾಡುತ್ತಿವೆ.

**ಮಾರ್ಜಾರೇಣ ತು ಯುಧ್ಯಂತಿ ಪನ್ನಗಾ ಗರುಡೇನ ತು ।**
**ಕರಾಲೋ ವಿಕಟೋ ಮುಂಡಃ ಪುರುಷಃ ಕೃಷ್ಣಪಿಂಗಲಃ ॥ ೨೮ ॥**
**ಕಾಲೋ ಗೃಹಾಣಿ ಸರ್ವೇಷಾಂ ಕಾಲೇ ಕಾಲೇ ತ್ವವೇಕ್ಷತೇ ।**
**ಏತಾನ್ಯನ್ಯಾನಿ ದೃಶ್ಯಂತೇ ನಿಮಿತ್ತಾನ್ಯುದ್ಭವಂತಿ ಚ ॥ ೨೯ ॥**
**ಅತಃ ಕುಲಸ್ಯ ರಕ್ಷಾರ್ಥಂ ಶಾಂತಿಂ ಕುರು ದಶಾನನ ।**
**ಸೀತಾಂ ಸತ್ಕೃತ್ಯ ಸಧನಾಂ ರಾಮಾಯಾಶು ಪ್ರಯಚ್ಛ ಭೋಃ ॥ ೩೦ ॥**

೨೮-೩೦. ಹಾಗೆಯೇ (ಇಲಿಗಳು) ಬೆಕ್ಕುಗಳೊಡನೆಯೂ ಹಾವುಗಳು ಗರುಡಪಕ್ಷಿಯೊಡನೆಯೂ ಬಡಿದಾಡುತ್ತಿವೆ. ವಿಕಾರರೂಪನಾದ, ವಕ್ರನೂ, ಬೋಳನೂ, ಕೆಂಗಣ್ಣುಗಳುಳ್ಳವನೂ ಆದ ಕಾಲಪುರುಷನು ಆಗಾಗ್ಗೆ ಎಲ್ಲರ ಮನೆಗಳನ್ನೂ ಕಣ್ಣಿಟ್ಟು ನೋಡುತ್ತಿರುವನು. ಇವೇ ಮುಂತಾದ ಶಕುನಗಳು ಕಂಡುಬರುತ್ತಿವೆ ಹಾಗೂ ಉಂಟಾಗುತ್ತಿವೆ. ಆದ್ದರಿಂದ ಎಲೈ ರಾವಣನೆ, ರಾಕ್ಷಸಕುಲವನ್ನು ಕಾಪಾಡಲು ಧನಸಹಿತಳಾದ ಸೀತೆಯನ್ನು ಗೌರವಿಸಿ ಜಾಗ್ರತೆಯಾಗಿ ರಾಮನಿಗೆ ಅರ್ಪಿಸಿಬಿಡು. ಆ ಮೂಲಕ ಶಾಂತಿಯನ್ನು ಆಚರಿಸುವವನಾಗು.

**ರಾಮಂ ನಾರಾಯಣಂ ವಿದ್ಧಿ ವಿದ್ವೇಷಂ ತ್ಯಜ ರಾಘವೇ ।**
**ಯತ್ಪಾದಪೋತಮಾಶ್ರಿತ್ಯ ಜ್ಞಾನಿನೋ ಭವಸಾಗರಮ್ ॥ ೩೧ ॥**
**ತರಂತಿ ಭಕ್ತಿಪೂತಾಂತಾಸ್ತತೋ ರಾಮೋ ನ ಮಾನುಷಃ ।**
**ಭಜಸ್ವ ಭಕ್ತಿಭಾವೇನ ರಾಮಂ ಸರ್ವಹೃದಾಲಯಮ್ ॥ ೩೨ ॥**
**ಯದ್ಯಪಿ ತ್ವಂ ದುರಾಚಾರೋ ಭಕ್ತ್ಯಾ ಪೂತೋ ಭವಿಷ್ಯಸಿ ।**
**ಮದ್ವಾಕ್ಯಂ ಕುರು ರಾಜೇಂದ್ರ ಕುಲಕೌಶಲಹೇತವೇ ॥ ೩೩ ॥**

೩೧-೩೩. ರಾಮನನ್ನು ನಾರಾಯಣನೆಂದು ತಿಳಿ. ರಾಘವನಲ್ಲಿ ವೈರತನವನ್ನು ಬಿಡು. ಯಾವಾತನ ಪಾದಗಳೆಂಬ ತೆಪ್ಪವನ್ನಾಶ್ರಯಿಸಿ ಜ್ಞಾನಿಗಳು ಭವಸಾಗರವನ್ನು ದಾಟುವರೋ, ಭಕ್ತಿಯಿಂದ ಪರಿಶುದ್ಧವಾದ ಅಂತಃಕರಣವುಳ್ಳವರಾಗುವರೋ ಅಂಥ ರಾಮನು ಎಂದೆಂದಿಗೂ ಮನುಷ್ಯಮಾತ್ರನಲ್ಲ. ಎಲ್ಲರ ಹೃದಯದೇಶವನ್ನೇ ಮನೆಯಾಗಿ ಮಾಡಿಕೊಂಡಿರುವ ರಾಮನನ್ನು ಭಕ್ತಿಯಿಂದ ಸೇವಿಸು. ಒಂದುವೇಳೆ ಕೆಟ್ಟನಡತೆಯವನಾಗಿದ್ದರೂ ಭಕ್ತಿಯಿಂದ ಪವಿತ್ರನಾಗುವೆ. ಎಲೈ ರಾಜೇಂದ್ರನೆ, ಕುಲದ ಕ್ಷೇಮಕ್ಕಾಗಿ ನನ್ನ ಮಾತನ್ನು ನಡೆಯಿಸುವವನಾಗು.

**ತತ್ತು ಮಾಲ್ಯವತೋ ವಾಕ್ಯಂ ಹಿತಮುಕ್ತಂ ದಶಾನನಃ ।**
**ನ ಮರ್ಷಯತಿ ದುಷ್ಟಾತ್ಮಾ ಕಾಲಸ್ಯ ವಶಮಾಗತಃ ॥ ೩೪ ॥**

**ಮಾನವಂ ಕೃಪಣಂ ರಾಮಮೇಕಂ ಶಾಖಾಮೃಗಾಶ್ರಯಮ್ ।**
**ಸಮರ್ಥಂ ಮನ್ಯಸೇ ಕೇನ ಹೀನಂ ಪಿತ್ರಾ ಮುನಿಪ್ರಿಯಮ್ ॥ ೩೫ ॥**
**ರಾಮೇಣ ಪ್ರೇಷಿತೋ ನೂನಂ ಭಾಷಸೇ ತ್ವಮನರ್ಗಲಮ್ ।**
**ಗಚ್ಛ ವೃದ್ಧೋಽಸಿ ಬಂಧುಸ್ತ್ವಂ ಸೋಢಂ ಸರ್ವಂ ತ್ವಯೋದಿತಮ್॥ ೩೬ ॥**
**ಇತೋ ಮತ್ಕರ್ಣಪದವೀಂ ದಹತ್ಯೇತದ್ವಚಸ್ತವ**
**ಇತ್ಯುಕ್ತ್ವಾ ಸರ್ವಸಚಿವೈಃ ಸಹಿತಃ ಪ್ರಸ್ಥಿತಸ್ತದಾ ॥ ೩೭ ॥**

೩೪-೩೭. ಆ ಮಾಲ್ಯವಂತನ ಹಿತವಾದ ವಾಕ್ಯವನ್ನು ರಾವಣನು ಕಾಲ ವಶನಾಗಿದ್ದುದರಿಂದ ಸಹಿಸಲಾರದಾದನು. ''ಕೃಪಣನೂ ಮನುಷ್ಯ ಮಾತ್ರನೂ ಏಕಾಕಿಯೂ, ಕಪಿಗಳ ಸಹಾಯವುಳ್ಳವನೂ ತಂದೆಯಿಲ್ಲದವನೂ ಋಷಿಗಳಿಗೆ ಪ್ರಿಯನೂ ಆದ ರಾಮನನ್ನು ಬಹಳ ಗಟ್ಟಿಗನೆಂದು ನಂಬಿರುವೆಯಲ್ಲವೆ ? ಅದು ಹೇಗೆ ? ನೀನಾದರೊ, ನಿಜವಾಗಿಯೂ ರಾಮನಿಂದ ಕಳುಹಿಸಲ್ಪಟ್ಟವನಂತೆಯೇ ಅಡೆ ತಡೆಯಿಲ್ಲದೆ ಮಾತನಾಡುತ್ತಿರುವೆ. ನೀನು ಮುದುಕನಾಗಿರುವೆ ; ನನ್ನ ಬಂಧುವೂ ಹೌದು. ಆದ್ದರಿಂದ ನೀನು ಹೇಳಿದ್ದನ್ನೆಲ್ಲ ಸಹಿಸಿಕೊಂಡೆನು. ಇನ್ನುಮುಂದೆ ಮಾತನಾಡಿದೆಯಾದರೆ ನನ್ನ ಕಿವಿಗಳಿಗೆ ಸುಡುವಂತಾಗುತ್ತದೆ. ಆದ್ದರಿಂದ ಇಲ್ಲಿಂದ ಹೊರಡು''. ಹೀಗೆಂದು ಹೇಳಿ ಎಲ್ಲಾ ಮಂತ್ರಿಗಳೊಡನೆ ಕೂಡಿದವನಾಗಿ (ರಾವಣನು) ಹೊರಟುಬಿಟ್ಟನು.

**ಪ್ರಾಸಾದಾಗ್ರೇ ಸಮಾಸೀನಃ ಪಶ್ಯನ್ ವಾನರಸೈನಿಕಾನ್ ।**
**ಯುದ್ಧಾಯಾಯೋಜಯತ್ ಸರ್ವರಾಕ್ಷಸಾನ್ ಸಮುಪಸ್ಥಿತಾನ್ ॥ ೩೮ ॥**

೩೮. ಉಪ್ಪರಿಗೆಯ ಮೇಲುಭಾಗದಲ್ಲಿ ಕುಳಿತವನಾಗಿ ವಾನರರ ಸೈನ್ಯವನ್ನು ನೋಡುತ್ತಾ ಸನ್ನದ್ಧರಾಗಿದ್ದ ಎಲ್ಲಾ ರಾಕ್ಷಸರನ್ನೂ ಯುದ್ಧಕ್ಕೆ ಪ್ರೇರಿಸಿದನು.

**ರಾಮೋಽಪಿ ಧನುರಾದಾಯ ಲಕ್ಷ್ಮಣೇನ ಸಮಾಹೃತಮ್ ।**
**ದೃಷ್ಟ್ವಾ ರಾವಣಮಾಸೀನಂ ಕೋಪೇನ ಕಲುಷೀಕೃತಃ ॥ ೩೯ ॥**
**ಕಿರೀಟಿನಂ ಸಮಾಸೀನಂ ಮಂತ್ರಿಭಿಃ ಪರಿವೇಷ್ಟಿತಮ್ ।**
**ಶಶಾಂಕಾರ್ಧನಿಭೇನೈವ ಬಾಣೇನೈಕೇನ ರಾಘವಃ ॥ ೪೦ ॥**
**ಶ್ವೇತಚ್ಛತ್ರಸಹಸ್ರಾಣಿ ಕಿರೀಟದಶಕಂ ತಥಾ ।**
**ಚಿಚ್ಛೇದ ನಿಮಿಷಾರ್ಧೇನ ತದದ್ಭುತಮಿವಾಭವತ್ ॥ ೪೧ ॥**

೩೯-೪೧. ಶ್ರೀರಾಮನೂ ಲಕ್ಷ್ಮಣನು ತಂದುಕೊಟ್ಟ ಧನುಸ್ಸನ್ನು ಕೈಗೆ ತೆಗೆದುಕೊಂಡು ಉಪ್ಪರಿಗೆಯಮೇಲೆ ಮಂತ್ರಿಗಳೊಡಗೂಡಿ ಕಿರೀಟಧಾರಿಯಾಗಿ ಕುಳಿತಿದ್ದ ರಾವಣನನ್ನು ಕಂಡು ಕೋಪದಿಂದ ಕದಡಿದ ಮನಸ್ಸುಳ್ಳವನಾಗಿ ಅರ್ಧ

ಚಂದ್ರಾಕಾರವಾದ ಒಂದು ಬಾಣದಿಂದ ಆ ರಾವಣನ ಸಾವಿರಸಂಖ್ಯೆಯ ಬಿಳಿಯ ಛತ್ರಿಗಳ ಸಮೂಹವನ್ನೂ ಹತ್ತು ಕಿರೀಟಗಳನ್ನೂ ಅರ್ಧನಿಮಿಷದಲ್ಲಿ ಕತ್ತರಿಸಿ ಹಾಕಿಬಿಟ್ಟನು. ಅದೊಂದು ಅದ್ಭುತ ವಾದ ಕಾರ್ಯವಾಗಿ ಪರಿಣಮಿಸಿತು.

**ಲಜ್ಜಿತೋ ರಾವಣಸ್ತೂರ್ಣಂ ವಿವೇಶ ಭವನಂ ಸ್ವಕಮ್ ।**
**ಆಹೂಯ ರಾಕ್ಷಸಾನ್ ಸರ್ವಾನ್ ಪ್ರಹಸ್ತಪ್ರಮುಖಾನ್ ಖಲಃ ॥ ೪೨ ॥**
**ವಾನರೈಃ ಸಹ ಯುದ್ಧಾಯ ನೋದಯಾಮಾಸ ಸತ್ವರಃ ।**
**ತತೋ ಭೇರೀಮೃದಂಗಾದ್ಯೈಃ ಪಣವಾನಕಗೋಮುಖೈಃ ॥ ೪೩ ॥**
**ಮಹಿಷೋಷ್ಟ್ರೈಃ ಖರೈಃ ಸಿಂಹೈಃ ದ್ವೀಪಿಭಿಃ ಕೃತವಾಹನಾಃ ।**
**ಖಡ್ಗಶೂಲಧನುಃಪಾಶಯಷ್ಟಿತೋಮರಶಕ್ತಿಭಿಃ ॥ ೪೪ ॥**
**ಲಕ್ಷಿತಾಃ ಸರ್ವತೋ ಲಂಕಾಂ ಪ್ರತಿದ್ವಾರಮುಪಾಯಯುಃ ।**

೪೨-೪೪. ನಾಚಿಕೊಂಡ ರಾವಣನು ಕೂಡಲೆ ತನ್ನ ಅರಮನೆಗೆ ಹಿಂದಿರುಗಿ ಬಿಟ್ಟನು. ಪ್ರಹಸ್ತನೇ ಮುಂತಾದ ಎಲ್ಲಾ ರಾಕ್ಷಸರನ್ನೂ ಕರೆಯಿಸಿ ಆ ದುಷ್ಟನು ಅವರೆಲ್ಲ ರನ್ನೂ ಕಪಿಗಳೊಡನೆ ಯುದ್ಧಮಾಡಲು ಪ್ರೇರೇಪಿಸಿದನು. ಅನಂತರ ಭೇರಿ, ಮೃದಂಗ, ಕಹಳೆ, ನಗಾರಿ, ಗೋಮುಖ - ಮುಂತಾದ ವಾದ್ಯಘೋಷ ಗಳೊಡನೆ, ಕೋಣ, ಒಂಟೆ, ಕತ್ತೆ, ಸಿಂಹ, ಆನೆಗಳನ್ನು ವಾಹನಗಳಾಗಿ ಮಾಡಿಕೊಂಡ ಯೋಧರುಗಳು ಕತ್ತಿ, ಭರ್ಜಿ, ಬಿಲ್ಲು, ಹಗ್ಗ, ಕೋಲು, ತೋಮರ, ಶಕ್ತಿ -ಮುಂತಾದ ಆಯುಧಗಳಿಂದ ಕೂಡಿದವರಾಗಿ ಲಂಕೆಯ ಎಲ್ಲಾ ಕಡೆಗೂ ಪ್ರತಿ ಯೊಂದು ಬಾಗಿಲಿಗೂ ಬಂದು ಸೇರಿದರು.

**ತತ್ಪೂರ್ವಮೇವ ರಾಮೇಣ ನೋದಿತಾ ವಾನರರ್ಷಭಾಃ ।**
**ಉದ್ಯಮ್ಯ ಗಿರಿಶೃಂಗಾಣಿ ಶಿಖರಾಣಿ ಮಹಾಂತಿ ಚ ॥ ೪೫ ॥**
**ತರೂಂಶ್ಚೋತ್ಪಾಟ್ಯ ವಿವಿಧಾನ್ ಯುದ್ಧಾಯ ಹರಿಯೂಥಪಾಃ ।**
**ಪ್ರೇಕ್ಷಮಾಣಾ ರಾವಣಸ್ಯ ತಾನ್ಯನೀಕಾನಿ ಭಾಗಶಃ ॥ ೪೬ ॥**
**ರಾಘವಪ್ರಿಯಕಾಮಾರ್ಥಂ ಲಂಕಾಮಾರುರುಹುಸ್ತದಾ ।**

೪೫-೪೬. ಅದಕ್ಕೆ ಮುಂಚೆಯೇ ರಾಮನಿಂದ ಪ್ರೇರಿತರಾದ ವಾನರ ಶ್ರೇಷ್ಠರು ಬೆಟ್ಟದ ಚೂರುಗಳನ್ನೂ ದೊಡ್ಡ ಶಿಖರಗಳನ್ನೂ ಎತ್ತಿಕೊಂಡು ಹಾಗೂ ನಾನಾ ವಿಧವಾದ ಮರಗಳನ್ನೆಲ್ಲ ಮುರಿದುಕೊಂಡು ಯುದ್ಧಸನ್ನದ್ಧರಾಗಿ ಆ ರಾವಣನ ಸೈನ್ಯವನ್ನು ವಿಂಗಡಿಸಿವಿಂಗಡಿಸಿ ನೋಡಿಕೊಂಡು (ನುಗ್ಗಿದರು). ಶ್ರೀರಾಮನಿಗೆ ಸಂತೋಷ ವುಂಟುಮಾಡುವದಕ್ಕಾಗಿ ಲಂಕೆಯನ್ನು ಏರಿದರು.

ತೇ ದ್ರುಮೈಃ ಪರ್ವತಾಗ್ರೈಶ್ಚ ಮುಷ್ಟಿಭಿಶ್ಚ ಪ್ಲವಂಗಮಾಃ ।
ತತಃ ಸಹಸ್ರಯೂಥಾಶ್ಚ ಕೋಟಿಯೂಥಾಶ್ಚ ಯೂಥಪಾಃ ॥ ೪೭ ॥
ಕೋಟೀಶತಯುತಾಶ್ಚಾನ್ಯೇ ರುರುಧುರ್ನಗರಂ ಭೃಶಮ್ ।
ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ॥ ೪೮ ॥
ಜಯತ್ಯತಿಬಲೋ ರಾಮಃ ಲಕ್ಷ್ಮಣಶ್ಚ ಮಹಾಬಲಃ ।
ರಾಜಾ ಜಯತಿ ಸುಗ್ರೀವೋ ರಾಘವೇಣಾನುಪಾಲಿತಃ ॥ ೪೯ ॥
ಇತ್ಯೇವಂ ಘೋಷಯಂತಶ್ಚ ಸಮಂ ಯುಯುಧಿರೇಽರಿಭಿಃ ।

೪೭-೪೯. ಅವರುಗಳು ಮರಗಳಿಂದಲೂ ಬೆಟ್ಟದ ತುದಿಗಳಿಂದಲೂ ಕಪಿ ಮುಷ್ಟಿಗಳಿಂದಲೂ (ಯುದ್ಧಮಾಡುತ್ತಿದ್ದರು); ಸಾವಿರ (ಕಪಿ)ಸೈನ್ಯದವರು, ಕೋಟಿ (ಕಪಿ)ಸೈನ್ಯದವರು, ನೂರುಕೋಟಿ (ಕಪಿ) ಸೈನ್ಯದವರು ಹೀಗೆ - ನಾನಾ ರೀತಿಯಾಗಿ ಕೂಡಲೆ (ಲಂಕಾ)ನಗರಿಯನ್ನು ಮುತ್ತಿದರು. ಆ ಕಪಿಗಳು ಹಾರುತ್ತಾ, ನೆಗೆಯುತ್ತಾ, ಘರ್ಜಿಸುತ್ತಾ ''ಅತಿಬಲಿಷ್ಠನಾದ ರಾಮನು ಜಯಿಸುತ್ತಾನೆ ; ಮಹಾಬಲನಾದ ಲಕ್ಷ್ಮಣನೂ ಸುಗ್ರೀವನೂ ರಾಮನಿಂದ ರಕ್ಷಿಸಲ್ಪಟ್ಟವರಾಗಿ ವಿಜಯಿಗಳಾಗಿದ್ದಾರೆ'' ಎಂದು ಘೋಷಿಸುತ್ತಾ ಶತ್ರುಗಳೊಡನೆ ಸಮಜೋಡಿಯಾಗಿ ಯುದ್ಧಮಾಡಿದರು.

ಹನೂಮಾನಂಗದಶ್ಚೈವ ಕುಮುದೋ ನೀಲ ಏವ ಚ ।
ನಲಶ್ಚ ಶರಭಶ್ಚೈವ ಮೈಂದೋ ದ್ವಿವಿದ ಏವ ಚ ॥ ೫೦ ॥
ಜಾಂಬವಾನ್ ದಧಿವಕ್ತ್ರಶ್ಚ ಕೇಸರೀ ತಾರ ಏವ ಚ ।
ಅನ್ಯೇ ಚ ಬಲಿನಃ ಸರ್ವೇ ಯೂಥಪಾಶ್ಚ ಪ್ಲವಂಗಮಾಃ ॥ ೫೧ ॥
ದ್ವಾರಾಣ್ಯುತ್ಪ್ಲುತ್ಯ ಲಂಕಾಯಾಃ ಸರ್ವತೋ ರುರುಧುರ್ಭೃಶಮ್ ॥

೫೦-೫೧. ಹನುಮಂತನು, ಅಂಗದನು, ಹಾಗೂ ಕುಮುದ, ನೀಲ, ನಲ, ಶರಭ, ಮೈಂದ, ದ್ವಿವಿದ, ಜಾಂಬವಂತ, ದಧಿವಕ್ತ್ರ, ಕೇಸರಿ, ತಾರ, ಇನ್ನೂ ಬೇರೆಯ ಬಲಿಷ್ಠರಾದ ಯೂಥಾಧಿಪತಿಗಳಾದ ವಾನರಶ್ರೇಷ್ಠರು ಲಂಕೆಯ ಬಾಗಿಲುಗಳನ್ನು ನೆಗೆದು ಎಲ್ಲಾ ದಿಕ್ಕುಗಳಿಂದಲೂ ನಗರಿಯನ್ನು ಮುತ್ತಿದರು.

ತದಾ ವೃಕ್ಷೈರ್ಮಹಾಕಾಯಾಃ ಪರ್ವತಾಗ್ರೈಶ್ಚ ವಾನರಾಃ ।
ನಿಜಘ್ನುಸ್ತಾನಿ ರಕ್ಷಾಂಸಿ ನಖೈರ್ದಂತೈಶ್ಚ ವೇಗಿತಾಃ ॥ ೫೨ ॥
ರಾಕ್ಷಸಾಶ್ಚ ತದಾ ಭೀಮಾ ದ್ವಾರೇಭ್ಯಃ ಸರ್ವತೋ ರುಷಾ ।
ನಿರ್ಗತ್ಯ ಭಿಂದಿಪಾಲೈಶ್ಚ ಖಡ್ಗೈಃ ಶೂಲೈಃ ಪರಶ್ವಧೈಃ ॥ ೫೩ ॥
ನಿರ್ಜಘ್ನುರ್ವಾನರಾನೀಕಂ ಮಹಾಕಾಯಾ ಮಹಾಬಲಾಃ ।
ರಾಕ್ಷಸಾಂಶ್ಚ ತಥಾ ಜಘ್ನುರ್ವಾನರಾ ಜಿತಕಾಶಿನಃ ॥ ೫೪ ॥

೫೨-೫೪. ಆಗ ಮಹಾಶರೀರಿಗಳಾದ ವಾನರರು ಮರಗಳಿಂದಲೂ ಉಗುರು ಹಲ್ಲುಗಳಿಂದಲೂ ಆ ರಾಕ್ಷಸರನ್ನು ಚೆನ್ನಾಗಿ ಹೊಡೆದು ಪರಚಿ ಕಚ್ಚಿದರು. ಆಗ ಕೋಪಾವಿಷ್ಟರಾದ ಭಯಂಕರರಾದ ಹಾಗೂ ಮಹಾಕಾಯರೂ ಬಲಶಾಲಿಗಳೂ ಆದ ರಾಕ್ಷಸರು ಕೂಡ ಬಾಗಿಲುಗಳಿಂದ ಹೊರಬಂದು ಭಿಂದಿಪಾಲ, ಕತ್ತಿ, ಭರ್ಜಿ, ಕೊಡಲಿ - ಮುಂತಾದ ಆಯುಧಗಳಿಂದ ವಾನರಸೈನ್ಯವನ್ನು ಬಡಿದರು. ಮತ್ತೆ ತೇಜೋವಂತರಾದ ಕಪಿಗಳು ರಾಕ್ಷಸರನ್ನೂ ಹೊಡೆದರು.

**ತದಾ ಬಭೂವ ಸಮರೋ ಮಾಂಸಶೋಣಿತಕರ್ದಮಃ ।**
**ರಕ್ಷಸಾಂ ವಾನರಾಣಾಂ ಚ ಸಂಬಭೂವಾದ್ಭುತೋಪಮಃ ॥ ೫೫ ॥**
**ಹಯೈಶ್ಚೈವ ಗಜೈಶ್ಚೈವ ರಥೈಃ ಕಾಂಚನಸನ್ನಿಭೈಃ ।**
**ರಕ್ಷೋವ್ಯಾಘ್ರಾ ಯುಯುಧಿರೇ ನಾದಯಂತೋ ದಿಶೋ ದಶ ॥ ೫೬ ॥**
**ರಾಕ್ಷಸಾಶ್ಚ ಕಪೀಂದ್ರಾಶ್ಚ ಪರಸ್ಪರಜಯೈಷಿಣಃ ।**
**ರಾಕ್ಷಸಾನ್ ವಾನರಾ ಜಘ್ನುರ್ವಾನರಾಂಶ್ಚೈವ ರಾಕ್ಷಸಾಃ ॥ ೫೭ ॥**

೫೫-೫೭. ಆಗ ಮಾಂಸರಕ್ತಗಳ ಕೆಸರಿನಿಂದ ಕೂಡಿದ ಯುದ್ಧವು ನಡೆಯಿತು. ರಾಕ್ಷಸರಿಗೂ ಕಪಿಗಳಿಗೂ ನಡೆದ ಆ ಯುದ್ಧವು ಅತ್ಯದ್ಭುತವಾಗಿತ್ತು. ಹತ್ತು ದಿಕ್ಕುಗಳಲ್ಲಿಯೂ ಧ್ವನಿಮಾಡುತ್ತಾ ಕುದುರೆಗಳು, ಆನೆಗಳು, ಚಿನ್ನದಂತೆ ಹೊಳೆಯುವ ರಥಗಳು - ಇವುಗಳಿಂದ ಆ ರಾಕ್ಷಸಶ್ರೇಷ್ಠರು ಯುದ್ಧಮಾಡಿದರು. ರಾಕ್ಷಸರೂ ಕಪಿಗಳೂ ಒಬ್ಬರನ್ನೊಬ್ಬರು ಜಯಿಸಲಿಚ್ಛೆಯಿಂದ ಹೊಡೆದಾಡುತ್ತಾ ರಾಕ್ಷಸರನ್ನು ಕಪಿಗಳೂ, ಕಪಿಗಳನ್ನು ರಾಕ್ಷಸರೂ ಕೊಲ್ಲುತ್ತಿದ್ದರು.

**ರಾಮೇಣ ವಿಷ್ಣುನಾ ದೃಷ್ಟ್ವಾ ಹರಯೋ ದಿವಿಜಾಂಶಜಾಃ ।**
**ಬಭೂವುರ್ಬಲಿನೋ ಹೃಷ್ಟಾಸ್ತದಾ ಪೀತಾಮೃತಾ ಇವ ॥ ೫೮ ॥**
**ಸೀತಾಭಿಮರ್ಶಪಾಪೇನ ರಾವಣೇನಾಭಿಪಾಲಿತಾನ್ ।**
**ಹತಶ್ರೀಕಾನ್ ಹತಬಲಾನ್ ರಾಕ್ಷಸಾನ್ ಜಘ್ನುರೋಜಸಾ ॥ ೫೯ ॥**
**ಚತುರ್ಥಾಂಶಾವಶೇಷೇಣ ನಿಹತಂ ರಾಕ್ಷಸಂ ಬಲಮ್ ।**

೫೮-೫೯. ವಿಷ್ಣುರೂಪನಾದ ರಾಮನಿಂದ ನೋಡಲ್ಪಟ್ಟ (ಅನುಗ್ರಹಿಸಲ್ಪಟ್ಟ) ದೇವಾಂಶಸಂಭೂತರಾದ ಕಪಿಗಳು ಆಗ ಅಮೃತವನ್ನು ಕುಡಿದವರಂತೆ ಹರ್ಷಗೊಂಡವರೂ ಬಲಿಷ್ಠರೂ ಆದರು. ಸೀತಾದೇವಿಯನ್ನು ಮುಟ್ಟಿದ ಪಾಪದಿಂದ ಕೂಡಿದ ರಾವಣನಿಂದ ಕಾಪಾಡಲ್ಪಟ್ಟ ನಷ್ಟವಾದ ಐಶ್ವರ್ಯ- ಬಲಗಳುಳ್ಳ ರಾಕ್ಷಸರನ್ನು ತಮ್ಮ ತೇಜಸ್ಸಿನ (ಸಹಾಯದಿಂದ) ಚೆನ್ನಾಗಿ ಹೊಡೆದರು. ಹೀಗೆ ರಾಕ್ಷಸರ ಬಲವು ನಾಲ್ಕನೆಯ ಒಂದು ಭಾಗದಷ್ಟು ಮಾತ್ರ ಉಳಿದುಕೊಂಡು ಮಿಕ್ಕದ್ದೆಲ್ಲ ನಾಶಗೊಳಿಸಲ್ಪಟ್ಟಿತು.

**ಸ್ವಸೈನ್ಯಂ ನಿಹತಂ ದೃಷ್ಟ್ವಾ ಮೇಘನಾದೋಽಥ ದುಷ್ಟಧೀಃ ।**
**ಬ್ರಹ್ಮದತ್ತವರಃ ಶ್ರೀಮಾನಂತರ್ಧಾನಂ ಗತೋಽಸುರಃ ॥ ೬೦ ॥**
**ಸರ್ವಾಸ್ತ್ರಕುಶಲೀ ವ್ಯೋಮ್ನಿ ಬ್ರಹ್ಮಾಸ್ತ್ರೇಣ ಸಮಂತತಃ**
**ನಾನಾವಿಧಾನಿ ಶಸ್ತ್ರಾಣಿ ವಾನರಾನೀಕಮರ್ದಯನ್ ॥ ೬೧ ॥**
**ವವರ್ಷ ಶರಜಾಲಾನಿ ತದದ್ಭುತಮಿವಾಭವತ್ ।**

೬೦-೬೧. ದುರ್ಬುದ್ಧಿಯವನಾದ ಇಂದ್ರಜಿತನು ತನ್ನ ಸೈನ್ಯವು ನಾಶವಾದುದನ್ನು ಕಂಡು ಬ್ರಹ್ಮನಿಂದ ವರವನ್ನು ಪಡೆದುಕೊಂಡಿದ್ದ ಆ ಶ್ರೀಮಂತನಾದ ಅಸುರನು ಮಾಯವಾದನು. ಮತ್ತು ಸರ್ವಾಸ್ತ್ರಪ್ರಯೋಗಗಳಲ್ಲಿಯೂ ಜಾಣನಾದ ಅವನು ಬ್ರಹ್ಮಾಸ್ತ್ರದಿಂದ ಆಕಾಶದಲ್ಲಿ ಸುತ್ತಲೂ ನಾನಾವಿಧವಾದ ಶಸ್ತ್ರಗಳ ಹಾಗೂ ಬಾಣಗಳ ಮಳೆಯನ್ನೇ ಕರೆದವನಾಗಿ ಕಪಿಸೈನ್ಯವನ್ನೆಲ್ಲ ದಮನ ಮಾಡುತ್ತಿದ್ದನು. ಅದೊಂದು ಅದ್ಭುತವಾಗಿ ಪರಿಣಮಿಸಿತು.

**ರಾಮೋಽಪಿ ಮಾನಯನ್ ಬ್ರಾಹ್ಮಮಸ್ತ್ರಮಸ್ತ್ರವಿದಾಂ ವರಃ ।**
**ಕ್ಷಣಂ ತೂಷ್ಣೀಮುವಾಸಾಥ ದದರ್ಶ ಪತಿತಂ ಬಲಮ್ ॥ ೬೨ ॥**
**ವಾನರಾಣಾಂ ರಘುಶ್ರೇಷ್ಠಃ ಚುಕೋಪಾನಲಸನ್ನಿಭಃ ।**
**ಚಾಪಮಾನಯ ಸೌಮಿತ್ರೇ ಬ್ರಹ್ಮಾಸ್ತ್ರೇಣಾಸುರಂ ಕ್ಷಣಾತ್ ॥ ೬೩ ॥**
**ಭಸ್ಮೀಕರೋಮಿ ಮೇ ಪಶ್ಯ ಬಲಮದ್ಯ ರಘೂತ್ತಮ ।**
**ಮೇಘನಾದೋಽಪಿ ತಚ್ಛ್ರುತ್ವಾ ರಾಮವಾಕ್ಯಮತಂದ್ರಿತಃ ॥ ೬೪ ॥**
**ತೂರ್ಣಂ ಜಗಾಮ ನಗರಂ ಮಾಯಯಾ ಮಾಯಿಕೋಽಸುರಃ ।**

೬೨-೬೪. ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ ಶ್ರೀರಾಮನೂ ಕೂಡ ಬ್ರಹ್ಮಾಸ್ತ್ರವನ್ನು ಗೌರವಿಸಿದವನಾಗಿ ಬಿದ್ದುಹೋದ (ವಾನರ) ಬಲವನ್ನು ಕಂಡು ಕ್ಷಣಕಾಲ ಸುಮ್ಮನೆ ಇದ್ದುಕೊಂಡಿದ್ದನು. ಅನಂತರ ಕಪಿಗಳ (ಸ್ಥಿತಿಯನ್ನು) ಕಂಡು ಬೆಂಕಿಗೆ ಸಮಾನವಾದ ತೇಜಸ್ಸುಳ್ಳ ಆತನು ಕೋಪಗೊಂಡನು. 'ಎಲೆವೊ, ಲಕ್ಷ್ಮಣ, ನನ್ನ ಬಿಲ್ಲನು ತೆಗೆದುಕೊಂಡು ಬಾ, ಕ್ಷಣಮಾತ್ರದಲ್ಲಿ ಬ್ರಹ್ಮಾಸ್ತ್ರದಿಂದ ಈ ರಾಕ್ಷಸನನ್ನು ಸುಟ್ಟು ಬೂದಿಗೈಯುವೆನು, ಎಲೈ ರಘುವೀರನೆ, ನನ್ನ ಬಲವನ್ನು ನೋಡಲಿ !' ಎಂದನು. ಮಾಯಾವಿಯಾದ ರಾಕ್ಷಸನಾದ ಆ ಇಂದ್ರಜಿತನು ರಾಮನ ಆ ಮಾತನ್ನು ಕೇಳಿ ಸ್ವಲ್ಪವೂ ಆಲಸ್ಯಮಾಡದೆ ಬೇಗನೆ ಲಂಕಾನಗರಿಗೆ ಹೊರಟುಹೋದನು.

**ಪತಿತಂ ವಾನರಾನೀಕಂ ದೃಷ್ಟ್ವಾ ರಾಮೋಽತಿದುಃಖಿತಃ ।**
**ಉವಾಚ ಮಾರುತಿಂ ಶೀಘ್ರಂ ಗತ್ವಾ ಕ್ಷೀರಮಹೋದಧಿಮ್ ॥ ೬೫ ॥**

**ತತ್ರದ್ರೋಣಗಿರಿರ್ನಾಮ ದಿವ್ಯೌಷಧಿಸಮುದ್ಭವಃ ।**
**ತಮಾನಯ ದ್ರುತಂ ಗತ್ವಾ ಸಂಜೀವಯ ಮಹಾಮತೇ ॥ ೬೬ ॥**
**ವಾನರೌಘಾನ್ ಮಹಾಸತ್ವಾನ್ ಕೀರ್ತಿಸ್ತೇ ಸುಸ್ಥಿರಾ ಭವೇತ್ ।**

೬೫-೬೬. ಕೆಳಗೆ ಬಿದ್ದುಹೋದ ವಾನರಸೈನ್ಯವನ್ನು ಕಂಡು ರಾಮನು ಬಹಳವಾಗಿ ಸಂಕಟಪಟ್ಟವನಾಗಿ ಹನುಮಂತನನ್ನು ಕುರಿತು'' ಜಾಗ್ರತೆಯಾಗಿ ನೀನು ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿರುವ ದ್ರೋಣಗಿರಿ ಎಂಬ ದಿವ್ಯವಾದ ಔಷಧಿಗಳ ಭಂಡಾರವಾದ ಬೆಟ್ಟವನ್ನು ಎಲೈ ಬುದ್ಧಿಶಾಲಿಯೆ, ಜಾಗ್ರತೆಯಾಗಿ ತರುವವನಾಗು ; ಮಹಾಬಲಿಷ್ಠರಾದ ಈ ಕಪಿಗಳ ಗುಂಪನ್ನೆಲ್ಲ ಬದುಕಿಸುವವನಾಗು. ನಿನ್ನ ಕೀರ್ತಿಯು ಶಾಶ್ವತವಾಗಿ ಉಳಿಯುವದು'' ಎಂದನು.

**ಆಜ್ಞಾ ಪ್ರಮಾಣಮಿತ್ಯುಕ್ತ್ವಾ ಜಗಾಮಾನಿಲನಂದನಃ ।**
**ಆನೀಯ ಚ ಗಿರಿಂ ಸರ್ವಾನ್ ವಾನರಾನ್ ವಾನರರ್ಷಭಃ ॥ ೬೭ ॥**
**ಜೀವಯಿತ್ವಾ ಪುನಸ್ತತ್ರ ಸ್ಥಾಪಯಿತ್ವಾ ಯಯೌ ದ್ರುತಮ್ ।**
**ಪೂರ್ವವದ್ ಭೈರವಂ ನಾದಂ ವಾನರಾಣಾಂ ಬಲೌಘತಃ ॥ ೬೮ ॥**
**ಶ್ರುತ್ವಾ ವಿಸ್ಮಯಮಾಪನ್ನೋ ರಾವಣೋ ವಾಕ್ಯಮಬ್ರವೀತ್ ।**

೬೭-೬೮. 'ತಮ್ಮ ಅಪ್ಪಣೆಯು ಪಾಲನೀಯವು' ಎಂದು ಹೇಳಿ ಹನುಮಂತನು ಹೊರಟನು. ಬೆಟ್ಟವನ್ನು ತೆಗೆದುಕೊಂಡುಬಂದು ಆ ಕಪಿಶ್ರೇಷ್ಠನು ಎಲ್ಲಾ ಕಪಿಗಳನ್ನೂ ಬದುಕಿಸಿದವನಾಗಿ ಮತ್ತೆ ಆ ಬೆಟ್ಟವನ್ನು ಸ್ವಸ್ಥಾನದಲ್ಲಿರಿಸಿ ಬೇಗನೆ ಬಂದನು. ಹಿಂದಿನಂತೆಯೇ ಭಯಂಕರವಾಗಿ ಶಬ್ದಮಾಡುತ್ತಾ ಇರುವ ಕಪಿಗಳ ಬಲಸಮೂಹದ ಧ್ವನಿಯಿಂದ ರಾವಣನು ಆಶ್ಚರ್ಯಗೊಂಡನು. ಅನಂತರ ಹೀಗೆಂದನು :

**ರಾಘವೋ ಮೇ ಮಹಾನ್ ಶತ್ರುಃ ಪ್ರಾಪ್ತೋ ದೇವವಿನಿರ್ಮಿತಃ ।**
**ಹಂತುಂ ತಂ ಸಮರೇ ಶೀಘ್ರಂ ಗಚ್ಛಂತು ಮಮ ಯೂಥಪಾಃ ॥ ೬೯ ॥**
**ಮಂತ್ರಿಣೋ ಬಾಂಧವಾಃ ಶೂರಾಃ ಯೇ ಚ ಮತ್ಪ್ರಿಯಕಾಂಕ್ಷಿಣಃ ।**
**ಸರ್ವೇ ಗಚ್ಛಂತು ಯುದ್ಧಾಯ ತ್ವರಿತಂ ಮಮ ಶಾಸನಾತ್ ॥ ೭೦ ॥**
**ಯೇ ನ ಗಚ್ಛಂತಿ ಯುದ್ಧಾಯ ಭೀರವಃ ಪ್ರಾಣವಿಪ್ಲವಾನ್ ।**
**ತಾನ್ ಹನಿಷ್ಯಾಮ್ಯಹಂ ಸರ್ವಾನ್ ಮಚ್ಛಾಸನಪರಾಙ್ಮುಖಾನ್ ॥ ೭೧ ॥**

೬೯-೭೧. ರಾಮನು ನನಗೆ ದೊಡ್ಡಶತ್ರುವು. ದೇವತೆಗಳಿಂದ ಸೃಷ್ಟಿಸಲ್ಪಟ್ಟು ಇಲ್ಲಿಗೆ ಬಂದಿರುವನು. ಯುದ್ಧದಲ್ಲಿ ಅವನನ್ನು ಸಂಹಾರಮಾಡುವದಕ್ಕಾಗಿ ನನ್ನ ಸೇನಾಪತಿಗಳೆಲ್ಲರೂ ಬೇಗನೆ ಹೊರಡತಕ್ಕದ್ದು. ಮಂತ್ರಿಗಳು, ನನ್ನ ಬಂಧುಗಳು

ಹಾಗೂ ನನಗೆ ಪ್ರಿಯವನ್ನು ಬಯಸುವ ಯಾವ ಶೂರರೇ ಆಗಲಿ, ಎಲ್ಲರೂ ನನ್ನ ಆಜ್ಞೆಯಂತೆ ಯುದ್ಧಕ್ಕೆ ಹೋಗತಕ್ಕದ್ದು. ಯಾರು ಪ್ರಾಣಭಯದಿಂದ ಹೆದರಿದವರಾಗಿ ಯುದ್ಧಕ್ಕೆ ಹೋಗುವದಿಲ್ಲವೋ, ನನ್ನ ಆಜ್ಞೆಯನ್ನು ತಿರಸ್ಕರಿಸುವ ಅಂಥವರೆಲ್ಲರನ್ನೂ ನಾನು ನಾಶಗೊಳಿಸುವೆನು.

**ತಚ್ಛ್ರುತ್ವಾ ಭಯಸಂತ್ರಸ್ತಾ ನಿರ್ಜಗ್ಮೂ ರಣಕೋವಿದಾಃ ।**
**ಅತಿಕಾಯಃ ಪ್ರಹಸ್ತಶ್ಚ ಮಹಾನಾದಮಹೋದರೌ ॥ ೭೨ ॥**
**ದೇವಶತ್ರುರ್ನಿಕುಂಭಶ್ಚ ದೇವಾಂತಕನರಾಂತಕೌ ।**
**ಅಪರೇ ಬಲಿನಃ ಸರ್ವೇ ಯಯುರ್ಯುದ್ಧಾಯ ವಾನರೈಃ ॥ ೭೩ ॥**
**ಏತೇ ಚಾನ್ಯೇ ಚ ಬಹವಃ ಶೂರಾ ಶತಸಹಸ್ರಶಃ ।**
**ಪ್ರವಿಶ್ಯ ವಾನರಂ ಸೈನ್ಯಂ ಮಮಂಥುರ್ಬಲದರ್ಪಿತಾಃ ॥ ೭೪ ॥**

೭೨-೭೪. ಆ ಮಾತನ್ನು ಕೇಳಿ ಹೆದರಿದವರಾಗಿ ಯುದ್ಧಕುಶಲರಾದ ಅತಿಕಾಯ, ಪ್ರಹಸ್ತ, ಮಹಾನಾದ, ಮಹೋದರ, ದೇವಶತ್ರು, ನಿಕುಂಭ, ದೇವಾಂತಕ, ನರಾಂತಕ, ಇನ್ನೂ ಬೇರೆಯ ಕೆಲವು ಬಲಿಷ್ಠರು ಕಪಿಗಳೊಡನೆ ಯುದ್ಧಮಾಡುವದಕ್ಕಾಗಿ ಹೊರಟುಬಂದರು. ಇವರುಗಳಲ್ಲದೆ ಬಲದಿಂದ ಕೊಬ್ಬಿದ ನೂರಾರು-ಸಾವಿರಾರು ಗಟ್ಟಲೆಯ ಶೂರರು ವಾನರರ ಸೈನ್ಯವನ್ನು ಪ್ರವೇಶಿಸಿ ಕಪಿಗಳನ್ನು ಹಿಸುಕಿಹಾಕಿದರು.

**ಭುಶುಂಡೀಭಿಂದಿಪಾಲೈಶ್ಚ ಬಾಣೈಃ ಖಡ್ಗೈಃ ಪರಶ್ವಧೈಃ ।**
**ಅನ್ಯೈಶ್ಚ ವಿವಿಧೈರಸ್ತ್ರೈರ್ನಿಜಘ್ನುರ್ಹರಿಯೂಥಪಾನ್ ॥ ೭೫ ॥**
**ತೇ ಪಾದಪೈಃ ಪರ್ವತಾಗ್ರೈರ್ನಖದಂಷ್ಟ್ರೈಶ್ಚ ಮುಷ್ಟಿಭಿಃ ।**
**ಪ್ರಾಣೈರ್ವಿಮೋಚಯಾಮಾಸುಸ್ಸರ್ವರಾಕ್ಷಸಯೂಥಪಾನ್ ॥ ೭೬ ॥**
**ರಾಮೇಣ ನಿಹತಾಃ ಕೇಚಿತ್ ಸುಗ್ರೀವೇಣ ತಥಾಽಪರೇ ।**
**ಹನೂಮತಾ ಚಾಂಗದೇನ ಲಕ್ಷ್ಮಣೇನ ಮಹಾತ್ಮನಾ ॥ ೭೭ ॥**

೭೫-೭೭. ಭುಶುಂಡಿ, ಭಿಂದಿಪಾಲ, ಬಾಣ, ಕತ್ತಿ, ಕೊಡಲಿ- ಇನ್ನೂ ನಾನಾವಿಧವಾದ ಅಸ್ತ್ರಗಳು ಇವುಗಳಿಂದ ಕಪಿಶ್ರೇಷ್ಠರನ್ನು ಹೊಡೆದರು. ಆ ಕಪಿಗಳಾದರೊ, ಮರಗಳು ಬೆಟ್ಟದ ಶಿಖರಗಳು ಉಗುರು, ಹಲ್ಲುಗಳಿಂದಲೂ ಕೈಮುಷ್ಟಿಗಳಿಂದಲೂ ಎಲ್ಲಾ ರಾಕ್ಷಸಸೇನಾಪತಿಗಳನ್ನೂ ಕೊಂದುಹಾಕಿದರು. ಕೆಲವರು ರಾಮನಿಂದಲೂ ಕೆಲವರು ಸುಗ್ರೀವನಿಂದಲೂ ಮತ್ತೆ ಕೆಲವರು ಹನುಮಂತ, ಅಂಗದರುಗಳಿಂದಲೂ ಮಹಾತ್ಮನಾದ ಲಕ್ಷ್ಮಣನಿಂದಲೂ ಹತರಾದರು.

**ಯೂಥಪೈರ್ವಾನರಾಣಾಂ ತೇ ನಿಹತಾಃ ಸರ್ವರಾಕ್ಷಸಾಃ ।**
**ರಾಮತೇಜಃಸಮಾವಿಶ್ಯ ವಾನರಾ ಬಲಿನೋಽಭವನ್ ॥ ೭೮ ॥**
**ರಾಮಶಕ್ತಿವಿಹೀನಾನಾಮೇವಂ ಶಕ್ತಿಃ ಕುತೋ ಭವೇತ್ ।**
**ಸರ್ವೇಶ್ವರಃ ಸರ್ವಮಯೋ ವಿಧಾತಾ**
**ಮಾಯಾಮನುಷ್ಯತ್ವವಿಡಂಬನೇನ ॥**
**ಸದಾ ಚಿದಾನಂದಮಯೋಽಪಿ ರಾಮೋ**
**ಯುದ್ಧಾದಿ ಲೀಲಾಂ ವಿತನೋತಿ ಮಾಯಾಮ್ ॥ ೭೯ ॥**

೭೮-೭೯. ಆ ಎಲ್ಲಾ ರಾಕ್ಷಸರೂ ಕಪಿಗಳ ಸೇನಾಪತಿಗಳಿಂದ ನಾಶಗೊಳಿಸಲ್ಪಟ್ಟರು. ರಾಮನ ಶಕ್ತಿಯನ್ನು ಆಶ್ರಯಿಸಿಕೊಂಡ ಕಪಿಗಳು ಬಹಳ ಬಲಶಾಲಿಗಳಾಗಿದ್ದರು. ರಾಮನ ಶಕ್ತಿಯು ಇಲ್ಲದವರಿಗೆ ಇಂಥ ಪರಾಕ್ರಮವು ಎಲ್ಲಿಂದ ಬಂದೀತು ? ಸರ್ವೇಶ್ವರನೂ ಸರ್ವಮಯನೂ ಸೃಷ್ಟಿಕರ್ತನೂ ಆದ ಹಾಗೂ ಯಾವಾಗಲೂ ಚಿದಾನಂದಸ್ವರೂಪನಾದ ರಾಮನು ಮಾಯಾಮನುಷ್ಯನಾಗಿ ತೋರಿಕೊಂಡವನಾಗಿ ಯುದ್ಧವೇ ಮುಂತಾದ ಲೀಲೆಯ ್ನ ಮಾಯೆಯಿಂದ ಹರಡಿರುವನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ಪಂಚಮಃ ಸರ್ಗಃ**

-------------

## ಆರನೆಯ ಸರ್ಗ

**ಶ್ರೀಮಹಾದೇವ ಉವಾಚ-**

**ಶ್ರುತ್ವಾ ಯುದ್ಧೇ ಬಲಂ ನಷ್ಟಮತಿಕಾಯಮುಖಂ ಮಹತ್।**
**ರಾವಣೋ ದುಃಖಸಂತಪ್ತಃ ಕ್ರೋಧೇನ ಮಹತಾ ವೃತಃ ॥ ೧ ॥**
**ನಿಧಾಯೇಂದ್ರಜಿತಂ ಲಂಕಾರಕ್ಷಣಾರ್ಥಂ ಮಹಾದ್ಯುತಿಃ ।**
**ಸ್ವಯಂ ಜಗಾಮ ಯುದ್ಧಾಯ ರಾಮೇಣ ಸಹ ರಾಕ್ಷಸಃ ॥ ೨ ॥**
**ದಿವ್ಯಸ್ಯಂದನಮಾರುಹ್ಯ ಸರ್ವಶಸ್ತ್ರಾಸ್ತ್ರಸಂಯುತಮ್ ।**
**ರಾಮಮೇವಾಭಿದುದ್ರಾವ ರಾಕ್ಷಸೇಂದ್ರೋ ಮಹಾಬಲಃ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಯುದ್ಧದಲ್ಲಿ ಅತಿಕಾಯನೇ ಮುಂತಾದವರ ಸಮೇತವಾದ ಸೈನ್ಯವು ನಷ್ಟವಾದದ್ದನ್ನು ಕೇಳಿ ರಾವಣನು

ಸಂಕಟದಿಂದ ಬಳಲಿದವನಾಗಿ ಬಹಳ ಕೋಪದಿಂದ ಕೂಡಿ, ಲಂಕೆಯನ್ನು ರಕ್ಷಿಸುವ ದಕ್ಕೆ ಇಂದ್ರಜಿತ್ತನನ್ನು ನಿಯಮಿಸಿ ಮಹಾತೇಜಸ್ವಿಯಾದ ಆ ರಾಕ್ಷಸನು ತಾನೇ ಖುದ್ದಾಗಿ ರಾಮನೊಡನೆ ಯುದ್ಧಮಾಡಲು ಹೊರಟನು. ಮಹಾಬಲಿಷ್ಠನಾದ ಆ ರಾಕ್ಷಸೇಂದ್ರನು ಸಕಲವಿಧವಾದ ಶಸ್ತ್ರಾಸ್ತ್ರಗಳಿಂದ ಸಜ್ಜಾದ ದಿವ್ಯವಾದ ರಥವನ್ನೇರಿ ರಾಮನನ್ನೇ ಎದುರಿಸಿ ನಿಂತನು.

**ವಾನರಾನ್ ಬಹುಶೋ ಹತ್ವಾ ಬಾಣೈರಾಶೀವಿಷೋಪಮೈಃ ।**
**ಪಾತಯಾಮಾಸ ಸುಗ್ರೀವಪ್ರಮುಖಾನ್ ಯೂಥನಾಯಕಾನ್ ॥ ೪ ॥**
**ಗದಾಪಾಣಿಂ ಮಹಾಸತ್ವಂ ತತ್ರ ದೃಷ್ಟ್ವಾ ವಿಭೀಷಣಮ್ ।**
**ಉತ್ಸಸರ್ಜ ಮಹಾಶಕ್ತಿಂ ಮಯದತ್ತಾಂ ವಿಭೀಷಣೇ ॥ ೫ ॥**
**ತಾಮಾಪತಂತೀಮಾಲೋಕ್ಯ ವಿಭೀಷಣವಿಘಾತಿನೀಮ್ ।**
**ದತ್ತಾಭಯೋಽಯಂ ರಾಮೇಣ ವಧಾರ್ಹೋ ನಾಯಮಾಸುರಃ ॥ ೬ ॥**
**ಇತ್ಯುಕ್ತ್ವಾ ಲಕ್ಷ್ಮಣೋ ಭೀಮಂ ಚಾಪಮಾದಾಯ ವೀರ್ಯವಾನ್ ।**
**ವಿಭೀಷಣಸ್ಯ ಪುರತಃ ಸ್ಥಿತೋಽಕಂಪ ಇವಾಚಲಃ ॥ ೭ ॥**

೪-೭. ಬಹಳಸಂಖ್ಯೆಯ ಕಪಿಗಳನ್ನು ಕೊಂದು ಹಾವುಗಳಂಥ (ಕ್ರೂರವಾದ) ಬಾಣಗಳಿಂದ ಸುಗ್ರೀವನೇ ಮುಂತಾದ ಪ್ರಮುಖರಾದ, ಸೇನಾನಾಯಕರಾದ ವಾನರರನ್ನು ಕೆಡವಿದನು. ಆಗ ಅಲ್ಲಿದ್ದ ಗದಾಪಾಣಿಯಾದ ವಿಭೀಷಣನನ್ನು ಕಂಡು (ಅವನನ್ನು ಸಂಹರಿಸುವ ಇಚ್ಛೆಯಿಂದ) ಮಯನಿಂದ ಕೊಡಲ್ಪಟ್ಟಿದ್ದ ಮಹಾ ಶಕ್ತ್ಯಾಯುಧವನ್ನು ವಿಭೀಷಣನ ಮೇಲೆ ಬಿಟ್ಟನು. ವಿಭೀಷಣನನ್ನು ನಾಶಗೊಳಿಸಲಿ ರುವ ಆ ಆಯುಧವು ಮೇಲೆ ಬೀಳುತ್ತಿರುವದನ್ನು ಕಂಡ ಲಕ್ಷ್ಮಣನು 'ಆಹಾ ! ಈತನು ರಾಮನಿಂದ ಅಭಯದಾನವನ್ನು ಪಡೆದಿರುವನು. ಆದ್ದರಿಂದ ಇವನು ಸಾಯಲು ತಕ್ಕವನಲ್ಲ ' ಎಂದು ಹೇಳುತ್ತಾ ವೀರನಾದ ಆತನು ಭಯಂಕರವಾದ ಬಿಲ್ಲನ್ನು ತೆಗೆದುಕೊಂಡು ವಿಭೀಷಣನ ಮುಂಭಾಗದಲ್ಲಿ ಅಳ್ಳಾಡದೆ ಇರುವ ಬೆಟ್ಟ ದಂತೆ ನಿಂತುಬಿಟ್ಟನು.

**ಸಾ ಶಕ್ತಿರ್ಲಕ್ಷ್ಮಣತನುಂ ವಿವೇಶಾಮೋಘಶಕ್ತಿತಃ ।**
**ಯಾವನ್ತ್ಯಃ ಶಕ್ತಯೋ ಲೋಕೇ ಮಾಯಾಯಾಃ ಸಂಭವಂತಿ ಹಿ ॥ ೮ ॥**
**ತಾಸಾಮಾಧಾರಭೂತಸ್ಯ ಲಕ್ಷ್ಮಣಸ್ಯ ಮಹಾತ್ಮನಃ ।**
**ಮಾಯಾಶಕ್ತ್ಯಾ ಭವೇತ್ ಕಿಂ ವಾ ಶೇಷಾಂಶಸ್ಯ ಹರೇಸ್ತನೋಃ ॥ ೯ ॥**
**ತಥಾಪಿ ಮಾನುಷಂ ಭಾವಮಾಪನ್ನಸ್ತದನುವ್ರತಃ ।**
**ಮೂರ್ಛಿತಃ ಪತಿತೋ ಭೂಮೌ ತಮಾದಾತುಂ ದಶಾನನಃ ॥ ೧೦ ॥**
**ಹಸ್ತೈಸ್ತೋಲಯಿತುಂ ಶಕ್ತೋ ನ ಬಭೂವಾತಿವಿಸ್ಮಿತಃ ।**

೮-೧೦. ಆ ಶಕ್ತ್ಯಾಯುಧವು ಅಮೋಘವಾದದ್ದಾದ್ದರಿಂದ ಲಕ್ಷ್ಮಣನ ಶರೀರವನ್ನೇ ಪ್ರವೇಶಿಸಿತು. ಲೋಕದಲ್ಲಿ ಮಾಯಾಶಕ್ತಿಗಳೆಂಬಿವು ಎಷ್ಟೆಷ್ಟು ಇವೆಯೋ ಅವುಗಳಿಗೆಲ್ಲ ಆಧಾರನಾದ, ಮಹಾತ್ಮನಾದ, ಹಾಗೂ ಶ್ರೀ ಹರಿಯ ಶರೀರನೂ ಆದಿಶೇಷನ ಅಂಶನೂ ಆದ ಲಕ್ಷ್ಮಣನಿಗೆ ಮಾಯಾಶಕ್ತಿಯಿಂದ ಏನಾದೀತು ? ಆದರೂ ಮನುಷ್ಯಭಾವವನ್ನು ಹೊಂದಿ ಅದಕ್ಕೆ ತಕ್ಕಂತೆ ನಡೆಯುವವನಾಗಿ (ಲಕ್ಷ್ಮಣನು) ಮೂರ್ಛೆಯನ್ನು ಹೊಂದಿ ನೆಲದಮೇಲೆ ಬಿದ್ದನು. ರಾವಣನು ಅವನನ್ನು ಎತ್ತಿ ತೆಗೆದುಕೊಂಡು ಹೋಗಲು ತನ್ನ ಕೈಗಳಿಂದ ಅಲ್ಲಾಡಿಸಿದನಾದರೂ ಶಕ್ತನಾಗಲಿಲ್ಲವಾಗಿ ತಾನೇ ಆಶ್ಚರ್ಯಗೊಂಡನು.

**ಸರ್ವಸ್ಯ ಜಗತಃ ಸಾರಂ ವಿರಾಜಂ ಪರಮೇಶ್ವರಮ್ ।**
**ಕಥಂ ಲೋಕಾಶ್ರಯಂ ವಿಷ್ಣುಂ ತೋಲಯೇಲ್ಲಘುರಾಕ್ಷಸಃ ॥ ೧೧ ॥**
**ಗ್ರಹೀತುಕಾಮಂ ಸೌಮಿತ್ರಿಂ ರಾವಣಂ ವೀಕ್ಷ್ಯ ಮಾರುತಿಃ ।**
**ಆಜಘಾನೋರಸಿ ಕ್ರುದ್ಧೋ ವಜ್ರಕಲ್ಪೇನ ಮುಷ್ಟಿನಾ ॥ ೧೨ ॥**
**ತೇನ ಮುಷ್ಟಿಪ್ರಹಾರೇಣ ಜಾನುಭ್ಯಾಮಪತದ್ ಭುವಿ ।**
**ಆಸ್ಯೈಶ್ಚ ನೇತ್ರಶ್ರವಣೈರುದ್ವಮನ್ ರುಧಿರಂ ಬಹು ॥ ೧೩ ॥**
**ವಿಘೂರ್ಣಮಾನನಯನೋ ರಥೋಪಸ್ಥ ಉಪಾವಿಶತ್ ।**

೧೧-೧೨. ಸಕಲಜಗತ್ತಿನ ಸಾರನೂ ಪರಮೇಶ್ವರನಾದ ವಿರಾಟ್ ಪುರುಷನೂ ಲೋಕಾಧಾರನೂ ವಿಷ್ಣುವೂ ಆದ (ಲಕ್ಷ್ಮಣನನ್ನು) ಆ ಲಘುವಾದ ರಾಕ್ಷಸನು ಹೇಗೆತಾನೆ ಅಲ್ಲಾಡಿಸಿಯಾನು ? ಲಕ್ಷ್ಮಣನನ್ನು ಸೆರೆಹಿಡಿದು ತೆಗೆದು ಕೊಂಡುಹೋಗಲಿಚ್ಛಿಸಿದ ರಾವಣನನ್ನು ನೋಡಿದ ಹನುಮಂತನು ಕುಪಿತನಾಗಿ ವಜ್ರದಂಥ ತನ್ನ ಮುಷ್ಟಿಯಿಂದ ಎದೆಗೆ ಬಲವಾಗಿ ಗುದ್ದಿದನು. ಆ ಮುಷ್ಟಿಪ್ರಹಾರ ದಿಂದ (ಖಿನ್ನನಾದ ರಾವಣನು) ಮುಖಗಳಿಂದಲೂ, ಕಣ್ಣುಕಿವಿಗಳಿಂದಲೂ ಬಹಳ ವಾಗಿ ರಕ್ತವನ್ನು ಕಾರುತ್ತಾ ಮಂಡಿಗಳನ್ನೂರಿ ನೆಲದಲ್ಲಿ ಬಿದ್ದನು. ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಅವನ್ನು ತಿರುಗಿಸುತ್ತಾ ರಥದ ಹತ್ತಿರ ಕುಳಿತನು.

**ಅಥ ಲಕ್ಷ್ಮಣಮಾದಾಯ ಹನೂಮಾನ್ ರಾವಣಾರ್ದಿತಮ್ ।**
**ಆನಯದ್ ರಾಮಸಾಮೀಪ್ಯಂ ಬಾಹುಭ್ಯಾಂ ಪರಿಗೃಹ್ಯ ತಮ್ ॥ ೧೪ ॥**
**ಹನೂಮತಃ ಸುಹೃತ್ತ್ವೇನ ಭಕ್ತ್ಯಾ ಚ ಪರಮೇಶ್ವರಃ ।**
**ಲಘುತ್ವಮಗಮದ್ದೇವೋ ಗುರೂಣಾಂ ಗುರುರಪ್ಯಜಃ ॥ ೧೫ ॥**
**ಸಾ ಶಕ್ತಿರಪಿ ತಂ ತ್ಯಕ್ತ್ವಾ ಜ್ಞಾತ್ವಾ ನಾರಾಯಣಾಂಶಜಮ್ ।**
**ರಾವಣಸ್ಯ ರಥಂ ಪ್ರಾಗಾದ್ ರಾವಣೋಽಪಿ ಶನೈಸ್ತತಃ ॥ ೧೬ ॥**
**ಸಂಜ್ಞಾಮವಾಪ್ಯ ಜಗ್ರಾಹ ಬಾಣಾಸನಮಥೋ ರುಷಾ ।**

೧೪-೧೬. ಅನಂತರ ರಾವಣನಿಂದ ಬೀಳಿಸಲ್ಪಟ್ಟ ಲಕ್ಷ್ಮಣನನ್ನು ಎತ್ತಿಕೊಂಡು ಮಾರುತಿಯು ತನ್ನ ಎರಡೂ ಕೈಗಳಿಂದ ಹಿಡಿದುಕೊಂಡು ರಾಮನ ಸಮೀಪಕ್ಕೆ ಕರೆತಂದನು. ಹನುಮಂತನಿಗೆ ಸ್ನೇಹಿತನೂ ಆತನ ಭಕ್ತಿಗೆ ಒಲಿದವನೂ ಆದ ಆ ಪರಮೇಶ್ವರನಾದ ಹಾಗೂ ಭಾರವಾದವುಗಳಲ್ಲೆಲ್ಲ ಅತ್ಯಂತ ಭಾರನಾದ ಅಜನಾದ ಲಕ್ಷ್ಮಣನು ಹಗುರವಾಗಿಬಿಟ್ಟನು. ಆ ಶಕ್ತ್ಯಾಯುಧವು ಕೂಡ (ಲಕ್ಷ್ಮಣನು) ನಾರಾಯಣಾಂಶನೆಂಬುದನ್ನು ಕಂಡುಕೊಂಡು ಅವನನ್ನು ಬಿಟ್ಟು ರಾವಣನ ರಥಕ್ಕೇ ಬಂದು ಸೇರಿಕೊಂಡಿತು. ರಾವಣನೂ ಮೆಲ್ಲನೆ ಎಚ್ಚತ್ತವನಾಗಿ ಕೋಪದಿಂದ ಬಾಣ ಬತ್ತಳಿಕೆಗಳನ್ನು ಹಿಡಿದನು.

**ರಾಮಮೇವಾಭಿದುದ್ರಾವ ದೃಷ್ಟ್ವಾ ರಾಮೋಽಪಿ ತಂ ಕ್ರುಧಾ ।**
**ಆರುಹ್ಯ ಜಗತಾಂ ನಾಥೋ ಹನೂಮಂತಂ ಮಹಾಬಲಮ್ ॥ ೧೭ ॥**
**ರಥಸ್ಥಂ ರಾವಣಂ ದೃಷ್ಟ್ವಾ ಅಭಿದುದ್ರಾವ ರಾಘವಃ ।**
**ಜ್ಯಾಶಬ್ದಮಕರೋತ್ತೀವ್ರಂ ವಜ್ರನಿಷ್ಪೇಷನಿಷ್ಠುರಮ್ ॥ ೧೮ ॥**
**ರಾಮೋ ಗಂಭೀರಯಾ ವಾಚಾ ರಾಕ್ಷಸೇಂದ್ರಮುವಾಚ ಹ ।**

೧೭-೧೮. ರಾವಣನು ರಾಮನನ್ನೇ ಕುರಿತು ಮುನ್ನಡೆದನು. ರಾಮನು ಕೂಡ ಕೋಪದಿಂದ ಅವನನ್ನು ಎದುರಿಸುವವನಾಗಿ ಬಲಶಾಲಿಯಾದ ಹನುಮಂತನನ್ನೇರಿ ಜಗನ್ನಾಥನಾದ ಆ ರಾಘವನು ರಥದಲ್ಲಿದ್ದ ರಾವಣನನ್ನುಕಂಡು ಮುನ್ನುಗ್ಗಿ ವಜ್ರಗಳ ಘರ್ಷಣೆಯಂತೆ ಇರುವ ಬಹಳ ತೀವ್ರವಾದಂಥ ಶಬ್ದವುಳ್ಳ ಧನುಸ್ಸಿನ ಹಗ್ಗದ ಧ್ವನಿ ಮಾಡಿದನು. ರಾಕ್ಷಸೇಂದ್ರನಾದ ರಾವಣನನ್ನು ಕುರಿತು ರಾಮನು ಗಂಭೀರವಾದ ಮಾತಿನಿಂದ ಹೀಗೆಂದನು :

**ರಾಕ್ಷಸಾಧಮ ತಿಷ್ಠಾದ್ಯ ಕ್ವ ಗಮಿಷ್ಯಸಿ ಮೇ ಪುರಃ ।**
**ಕೃತ್ವಾಪರಾಧಮೇವಂ ಮೇ ಸರ್ವತ್ರ ಸಮದರ್ಶಿನಃ ॥ ೧೯ ॥**
**ಯೇನ ಬಾಣೇನ ನಿಹತಾ ರಾಕ್ಷಸಾಸ್ತೇ ಜನಾಲಯೇ ।**
**ತೇನೈವ ತ್ವಾಂ ಹನಿಷ್ಯಾಮಿ ತಿಷ್ಠಾದ್ಯ ಮಮ ಗೋಚರೇ ॥ ೨೦ ॥**

೧೯-೨೦. ಎಲೈ ರಾಕ್ಷಸಾಧಮನೆ, ನನ್ನ ಎದುರಿಗೆ ನಿಲ್ಲು. ಎಲ್ಲಿಗೆ ಹೋಗುವೆ? ಎಲ್ಲೆಲ್ಲೂ ಸಮದರ್ಶಿಯಾದ ನನಗೆ ಈ ರೀತಿಯಾದ ಅಪಕಾರವನ್ನು ಎಸಗಿರುವೆ. ಜನಸ್ಥಾನದಲ್ಲಿ ನಿನ್ನ ಕಡೆಯ ರಾಕ್ಷಸರು ಯಾವ ಬಾಣದಿಂದ ನಾಶಗೊಳಿಸಲ್ಪಟ್ಟರೋ ಅದರಿಂದಲೇ ನಿನ್ನನ್ನು ಕೊಲ್ಲುವೆನು. ನನ್ನೆದುರಿಗೆ ಕಾಣಿಸಿಕೊಳ್ಳುವವನಾಗಿ ನಿಲ್ಲು.

**ಶ್ರೀರಾಮಸ್ಯ ವಚಃ ಶ್ರುತ್ವಾ ರಾವಣೋ ಮಾರುತಾತ್ಮಜಮ್ ।**
**ವಹಂತಂ ರಾಘವಂ ಸಂಖ್ಯೇ ಶರೈಸ್ತೀಕ್ಷ್ಣೈರತಾಡಯತ್ ॥ ೨೧ ॥**

**ಹತಸ್ಯಾಪಿ ಶರೈಸ್ತೀಕ್ಷ್ಣೈಃ ವಾಯುಸೂನೋಃ ಸ್ವತೇಜಸಾ ।**
**ವ್ಯವರ್ಧತ ಪುನಸ್ತೇಜೋ ನನರ್ದ ಚ ಮಹಾಕಪಿಃ ॥ ೨೨ ॥**

೨೧-೨೨. ಶ್ರೀರಾಮನ ಮಾತನ್ನು ಕೇಳಿ ರಾವಣನು ಯುದ್ಧದಲ್ಲಿ ರಾಮನನ್ನು ಹೊತ್ತು ತಿರುಗುತ್ತಿದ್ದ ಹನುಮಂತನನ್ನು ಬಲವಾದ ಬಾಣಗಳಿಂದ ಹೊಡೆದನು. ಹೀಗೆ ತೀಕ್ಷ್ಣವಾದ ಬಾಣಗಳಿಂದ ಹೊಡೆಯಲ್ಪಟ್ಟಾಗ್ಯೂ ವಾಯುಪುತ್ರನಾದ ಹನುಮಂತನ ಕಾಂತಿಯು ಆತನ ಆತ್ಮತೇಜಸ್ಸಿನಿಂದ ಮತ್ತಷ್ಟು ಹೆಚ್ಚೇ ಆಯಿತು. ಆ ಮಹಾಕಪಿಯು ಜೋರಾಗಿ ಘರ್ಜನೆಮಾಡಿದನು.

**ತತೋ ದೃಷ್ಟ್ವಾ ಹನೂಮಂತಂ ಸವ್ರಣಂ ರಘುಸತ್ತಮಃ ।**
**ಕ್ರೋಧಮಾಹಾರಯಾಮಾಸ ಕಾಲರುದ್ರ ಇವಾಪರಃ ॥ ೨೩ ॥**
**ಸಾಶ್ವಂ ರಥಂ ಧ್ವಜಂ ಸೂತಂ ಶಸ್ತ್ರೌಘಂ ಧನುರಂಜಸಾ ।**
**ಛತ್ರಂ ಪತಾಕಾಂ ತರಸಾ ಚಿಚ್ಛೇದ ಶಿತಸಾಯಕೈಃ ॥ ೨೪ ॥**
**ತತೋ ಮಹಾಶರೇಣಾಶು ರಾವಣಂ ರಘುಸತ್ತಮಃ ।**
**ವಿವ್ಯಾಧ ವಜ್ರಕಲ್ಪೇನ ಪಾಕಾರಿರಿವ ಪರ್ವತಮ್ ॥ ೨೫ ॥**
**ರಾಮಬಾಣಹತೋ ವೀರಶ್ಚಚಾಲ ಚ ಮುಮೋಹ ಚ ।**

೨೩-೨೫. ಅನಂತರ ಗಾಯಗೊಂಡ ಹನುಮಂತನನ್ನು ನೋಡಿ ಶ್ರೀರಾಮನು ಕಾಲರುದ್ರನಂತೆ ಕೋಪಾವಿಷ್ಟನಾದನು ; ಮತ್ತು ತೀಕ್ಷ್ಣವಾದ ಬಾಣಗಳಿಂದ (ರಾವಣನ) ಕುದುರೆ, ರಥ, ಧ್ವಜ, ಸಾರಥಿ, ಶಸ್ತ್ರಗಳ ಸಮೂಹ, ಬಿಲ್ಲು, ಛತ್ರಿ, ಬಾವುಟಗಳನ್ನೆಲ್ಲ ಬೇಗಬೇಗನೆ ಕತ್ತರಿಸಿದನು. ಅನಂತರ ವಜ್ರಾಯುಧದಂತೆ ಬಹಳ ಅಮೋಘವನಾದ ದೊಡ್ಡಬಾಣದಿಂದ ರಘುವೀರನಾದ (ರಾಮನು) ರಾವಣನನ್ನು -ದೇವೇಂದ್ರನು ಬೆಟ್ಟವನ್ನು ಹೇಗೋ ಹಾಗೆ - ಹೊಡೆದನು. ಆಗ ಆ ವೀರನಾದ (ರಾವಣನು) ರಾಮಬಾಣದಿಂದ ಹೊಡೆಯಲ್ಪಟ್ಟವನಾಗಿ ಅಳ್ಳಾಡಿಹೋದನು. ಹಾಗೂ ಮೂರ್ಛೆಹೋದನು.

**ಹಸ್ತಾನ್ನಿಪತಿತಶ್ಚಾಪಃ ತಂ ಸಮೀಕ್ಷ್ಯ ರಘೂತ್ತಮಃ ।**
**ಅರ್ಧಚಂದ್ರೇಣ ಚಿಚ್ಛೇದ ತತ್ಕಿರೀಟಂ ರವಿಪ್ರಭಮ್ ॥ ೨೬ ॥**
**ಅನುಜಾನಾಮಿ ಗಚ್ಛ ತ್ವಮಿದಾನೀಂ ಬಾಣಪೀಡಿತಃ ।**
**ಪ್ರವಿಶ್ಯ ಲಂಕಾಮಾಶ್ವಾಸ್ಯ ಶ್ವಃ ಪಶ್ಯಸಿ ಬಲಂ ಮಮ ॥ ೨೭ ॥**
**ರಾಮಬಾಣೇನ ಸಂವಿದ್ಧೋ ಹತದರ್ಪೋಽಥ ರಾವಣಃ ।**
**ಮಹತ್ಯಾ ಲಜ್ಜಯಾ ಯುಕ್ತೋ ಲಂಕಾಂ ಪ್ರಾವಿಶದಾತುರಃ ॥ ೨೮ ॥**

೨೬-೨೮. ಬಿಲ್ಲು (ರಾವಣನ) ಕೈಯಿಂದ ಕೆಳಗೆ ಬಿತ್ತು. ಅದನ್ನು ನೋಡಿ ರಾಮನು ಸೂರ್ಯನಂತೆ ಹೊಳೆಯುತ್ತಿದ್ದ ಆ ರಾವಣನ ಕಿರೀಟವನ್ನು ಅರ್ಧಚಂದ್ರಾಕಾರವಾದ ಬಾಣದಿಂದ ಕತ್ತರಿಸಿದನು. (ಮತ್ತು ಹೀಗೆಂದನು ): 'ಎಲೈ, ನಿನಗೆ ಈಗ ಹಿಂದಿರುಗಲು ಅಪ್ಪಣೆಕೊಟ್ಟಿದ್ದೇನೆ. ಹೀಗೆ ಬಾಣಪೀಡಿತನಾಗಿರುವ ನೀನು ಲಂಕೆಯನ್ನು ಹೊಕ್ಕು ಎಲ್ಲರನ್ನೂ ಸಮಾಧಾನಗೊಳಿಸುವವನಾಗು. ನನ್ನ ಬಲಪರಾಕ್ರಮಗಳನ್ನು ನಾಳೆಯ ದಿನ ನೋಡುವೆಯಂತೆ'- (ಎಂದನು). ಆಗ ರಾಮಬಾಣಪೀಡಿತನೂ ಕೊಬ್ಬು ಮುರಿಯಲ್ಪಟ್ಟವನೂ ಆದ ರಾವಣನು ಬಹಳ ನಾಚಿಕೆಯಿಂದ ಕೂಡಿದವನಾಗಿ ಅವಸರದಿಂದ ಲಂಕೆಯನ್ನು ಹೊಕ್ಕನು.

**ರಾಮೋऽಪಿ ಲಕ್ಷ್ಮಣಂ ದೃಷ್ಟ್ವಾ ಮೂರ್ಛಿತಂ ಪತಿತಂ ಭುವಿ ।**
**ಮಾನುಷತ್ವಮುಪಾಶ್ರಿತ್ಯ ಲೀಲಯಾನು ಶುಶೋಚ ಹ ॥ ೨೯ ॥**
**ತತಃ ಪ್ರಾಹ ಹನೂಮಂತಂ ವತ್ಸ ಜೀವಯ ಲಕ್ಷ್ಮಣಮ್ ।**
**ಮಹೌಷಧೀಃ ಸಮಾನೀಯ ಪೂರ್ವವದ್ವಾನರಾನಪಿ ॥ ೩೦ ॥**
**ತಥೇತಿ ರಾಘವೇಣೋಕ್ತೋ ಜಗಾಮಾಶು ಮಹಾಕಪಿಃ ।**
**ಹನೂಮಾನ್ ವಾಯುವೇಗೇನ ಕ್ಷಣಾತ್ತೀರ್ತ್ವಾ ಮಹೋದಧಿಮ್ ॥ ೩೧ ॥**

೨೯-೩೧. ರಾಮನು ಕೂಡ ಮೂರ್ಛಿತನಾಗಿ ನೆಲದಮೇಲೆ ಬಿದ್ದಿದ್ದ ಲಕ್ಷ್ಮಣನನ್ನು ಕಂಡು ಮಾನುಷಭಾವವನ್ನು ಹೊಂದಿದವನಾಗಿ ಲೋಕಾಭಿರಾಮವಾಗಿ ದುಃಖಿಸಿದನು. ಅನಂತರ ಮತ್ತೆ ಹನುಮಂತನನ್ನು ಕುರಿತು 'ಮಗು, ಲಕ್ಷ್ಮಣನನ್ನು ಬದುಕಿಸಪ್ಪ ; ಹಿಂದಿನಂತೆಯೇ ಕಪಿಗಳನ್ನು ಕೂಡ ಮಹೌಷಧಿಗಳನ್ನು ತಂದು(ಎಬ್ಬಿಸು)' ಎಂದನು. ಹಾಗೆಯೇ ಆಗಲಿ-ಎಂದು ಆ ರಾಮನಿಂದಾಜ್ಞಪ್ತನಾದ ಮಹಾಕಪಿಯಾದ ಹನುಮಂತನು ವಾಯುವೇಗದಿಂದ ಹೊರಟು ಕ್ಷಣಮಾತ್ರದಲ್ಲಿ ಮಹಾಸಮುದ್ರವನ್ನು ದಾಟಿ ನಡೆದನು.

**ಏತಸ್ಮಿನ್ನಂತರೇ ಚಾರಾ ರಾವಣಾಯ ನ್ಯವೇದಯನ್ ।**
**ರಾಮೇಣ ಪ್ರೇಷಿತೋ ದೇವ ಹನೂಮಾನ್ ಕ್ಷೀರಸಾಗರಮ್ ॥ ೩೨ ॥**
**ಗತೋ ನೇತುಂ ಲಕ್ಷ್ಮಣಸ್ಯ ಜೀವನಾರ್ಥಂ ಮಹೌಷಧೀಃ ।**
**ಶ್ರುತ್ವಾ ತಚ್ಚಾರವಚನಂ ರಾಜಾ ಚಿಂತಾಪರೋऽಭವತ್ ॥ ೩೩ ॥**
**ಜಗಾಮ ರಾತ್ರಾವೇಕಾಕೀ ಕಾಲನೇಮಿಗೃಹಂ ಪ್ರತಿ ।**

೩೨-೩೩. ಈ ನಡುವೆ ಚಾರರು ರಾವಣನಿಗೆ ಹೀಗೆ ವರದಿಮಾಡಿದರು : 'ಪ್ರಭೋ, ಹನುಮಂತನು ಲಕ್ಷ್ಮಣನನ್ನು ಬದುಕಿಸುವ ಸಲುವಾಗಿ ಮಹೌಷಧಿಗಳನ್ನು ತರಲು ಕ್ಷೀರಸಮುದ್ರಕ್ಕೆ ಹೊರಟನು'. ಚಾರರ ಈ ಮಾತನ್ನು ಕೇಳಿ

ರಾಜನಾದ ರಾವಣನು ಚಿಂತಾಕ್ರಾಂತನಾದನು. ರಾತ್ರೆಯಲ್ಲಿ ತಾನೊಬ್ಬನೇ ಕಾಲನೇಮಿಯ ಮನೆಗೆ ಹೋದನು.

**ಗೃಹಾಗತಂ ಸಮಾಲೋಕ್ಯ ರಾವಣಂ ವಿಸ್ಮಯಾನ್ವಿತಃ ।**
**ಕಾಲನೇಮಿರುವಾಚೇದಂ ಪ್ರಾಂಜಲಿರ್ಭಯವಿಹ್ವಲಃ ॥ ೩೪ ॥**
**ಅರ್ಘ್ಯಾದಿಕಂ ತತಃ ಕೃತ್ವಾ ರಾವಣಸ್ಯಾಗ್ರತಃ ಸ್ಥಿತಃ ।**
**ಕಿಂ ತೇ ಕರೋಮಿ ರಾಜೇಂದ್ರ ಕಿಮಾಗಮನಕಾರಣಮ್ ॥ ೩೫ ॥**
**ಕಾಲನೇಮಿಮುವಾಚೇದಂ ರಾವಣೋ ದುಃಖಪೀಡಿತಃ ।**

೩೪-೩೫. ಮನೆಗೆ ಬಂದ ರಾವಣನನ್ನು ಕಂಡು ಆಶ್ಚರ್ಯಗೊಂಡವನಾದ ಕಾಲನೇಮಿಯು ರಾವಣನಿಗೆ ಅರ್ಘ್ಯಾದ್ಯುಪಚಾರಗಳನ್ನು ಕೊಟ್ಟು ರಾವಣನ ಮುಂದೆ ನಿಂತು ಕೈಮುಗಿದುಕೊಂಡು ಹೆದರಿದವನಾಗಿ ಹೀಗೆಂದನು : 'ಎಲೈ ರಾಜೇಂದ್ರನೆ, ನಿನಗೆ ಏನು (ಸೇವೆಯನ್ನು) ಮಾಡಲಿ ? ನೀನು ಬಂದುದರ ಉದ್ದೇಶವೇನು ?' ಎನ್ನಲು ದುಃಖಪೀಡಿತನಾದ ರಾವಣನು ಕಾಲನೇಮಿಯನ್ನು ಕುರಿತು ಇಂತೆಂದನು.

**ಮಮಾಪಿ ಕಾಲವಶತಃ ಕಷ್ಟಮೇತದುಪಸ್ಥಿತಮ್ ।**
**ಮಯಾ ಶಕ್ತ್ಯಾ ಹತೋ ವೀರಃ ಲಕ್ಷ್ಮಣಃ ಪತಿತೋ ಭುವಿ ॥ ೩೬ ॥**
**ತಂ ಜೀವಯಿತುಮಾನೇತುಮೋಷಧೀರ್ಹನುಮಾನ್ ಗತಃ ।**
**ಯಥಾ ತಸ್ಯ ಭವೇದ್ ವಿಘ್ನಂ ತಥಾ ಕುರು ಮಹಾಮತೇ ॥ ೩೭ ॥**
**ಮಾಯಯಾ ಮುನಿವೇಷೇಣ ಮೋಹಯಸ್ವ ಮಹಾಕಪಿಮ್ ।**
**ಕಾಲಾತ್ಯಯೋ ಯಥಾ ಭೂಯಾತ್ ತಥಾ ಕೃತ್ವೈಹಿ ಮಂದಿರೇ ॥ ೩೮ ॥**

೩೬-೩೮. 'ನನಗೂ ಕಾಲಗತಿಯಿಂದ ಇದೊಂದು ಕಷ್ಟವು ಬಂದಿದೆ (ಕೇಳು). ನಾನು ಶಕ್ತ್ಯಾಯುಧದಿಂದ ವೀರನಾದ ಲಕ್ಷ್ಮಣನನ್ನು ಭೂಮಿಯಲ್ಲಿ ಕೆಡವಿದೆನು. ಅವನನ್ನು ಬದುಕಿಸುವದಕ್ಕಾಗಿ (ಸಂಜೀವಿನ್ಯಾದಿ) ಔಷಧಿಗಳನ್ನು ತರಲು ಹನುಮಂತನು ಹೋಗಿರುತ್ತಾನೆ. ಎಲೈ ಬುದ್ಧಿಶಾಲಿಯೆ, ಆತನಿಗೆ ಅಡ್ಡಿಯಾಗುವಂತೆ ಮಾಯೆಯಿಂದ ಋಷಿಯ ವೇಷವನ್ನು ತಾಳಿ ನೀನು ಆ ಕಪಿಯನ್ನು ವಂಚಿಸುವವನಾಗು. ಹಾಗೆ ಮಾಡು. ಮತ್ತು ಕಾಲವು ಮೀರಿ ಹೋಗುವಂತೆ ಮಾಡಿ ಮನೆಗೆ ಬರುವವನಾಗು.

**ರಾವಣಸ್ಯ ವಚಃ ಶ್ರುತ್ವಾ ಕಾಲನೇಮಿರುವಾಚ ತಮ್ ।**
**ರಾವಣೇಶ ವಚೋ ಮೇಽದ್ಯ ಶೃಣು ಧಾರಯ ತತ್ತ್ವತಃ ॥ ೩೯ ॥**

**ಪ್ರಿಯಂ ತೇ ಕರವಾಣ್ಯೇವ ನ ಪ್ರಾಣಾನ್ ಧಾರಯಾಮ್ಯಹಮ್ ।**
**ಮಾರೀಚಸ್ಯ ಯಥಾರಣ್ಯೇ ಪುರಾಽಭೂನ್ಮೃಗರೂಪಿಣಃ ॥ ೪೦ ॥**
**ತಥೈವ ಮೇ ನ ಸಂದೇಹೋ ಭವಿಷ್ಯತಿ ದಶಾನನ ।**
**ಹತಾಃ ಪುತ್ರಾಶ್ಚ ಪೌತ್ರಾಶ್ಚ ಬಾಂಧವಾ ರಾಕ್ಷಸಾಶ್ಚ ತೇ ॥ ೪೧ ॥**
**ಘಾತಯಿತ್ವಾಽಸುರಕುಲಂ ಜೀವಿತೇನಾಪಿ ಕಿಂ ತವ ।**

೩೯-೪೧. ರಾವಣನ ಮಾತನ್ನು ಕೇಳಿ ಕಾಲನೇಮಿಯು ಅವನನ್ನು ಕುರಿತು ಹೀಗೆಂದನು : 'ಎಲೈ ರಾವಣೇಶ್ವರನೆ, ಈ ನನ್ನ ಮಾತನ್ನು ಕೇಳು ; ಹಾಗೂ ನಿಜವನ್ನು ಕಂಡುಕೊಳ್ಳುವವನಾಗು. ನಿನಗೆ ನಾನು ಪ್ರಿಯವನ್ನೇನೋ ಮಾಡುವೆನು. ಆದರೆ ಬದುಕಿರಲಾರೆನು. ಎಲೈ ದಶಕಂಠನೆ, ಮೃಗರೂಪಿಯಾಗಿದ್ದ ಮಾರೀಚನಿಗೆ ಕಾಡಿನಲ್ಲಿ ಹಿಂದೆ ಯಾವ ಗತಿಯಾಯಿತೋ ಹಾಗೆಯೇ ನನಗೂ ಆಗಲಿದೆ. ಈ ವಿಷಯದಲ್ಲಿ ಸಂಶಯವಿಲ್ಲ. ನಿನ್ನ ಮಕ್ಕಳು, ಮೊಮ್ಮಕ್ಕಳು, ಬಂಧುಗಳಾದ ರಾಕ್ಷಸರು ಎಲ್ಲರೂ ನಾಶವಾದರು. ರಾಕ್ಷಸಕುಲವನ್ನೇ ನಾಶಗೊಳಿಸಿದನಂತರ ನೀನು ಬದುಕಿದ್ದೇನಾಗ ಬೇಕಾಗಿದೆ ?

**ರಾಜ್ಯೇನ ವಾ ಸೀತಯಾ ವಾ ಕಿಂ ದೇಹೇನ ಜಡಾತ್ಮನಾ ।**
**ಸೀತಾಂ ಪ್ರಯಚ್ಛ ರಾಮಾಯ ರಾಜ್ಯಂ ದೇಹಿ ವಿಭೀಷಣೇ ॥ ೪೨ ॥**
**ವನಂ ಯಾಹಿ ಮಹಾಬಾಹೋ ರಮ್ಯಂ ಮುನಿಗಣಾಶ್ರಯಮ್ ।**
**ಸ್ನಾತ್ವಾ ಪ್ರಾತಃ ಶುಭಜಲೇ ಕೃತ್ವಾ ಸಂಧ್ಯಾದಿಕಾಃ ಕ್ರಿಯಾಃ ॥ ೪೩ ॥**
**ತತ ಏಕಾಂತಮಾಶ್ರಿತ್ಯ ಸುಖಾಸನಪರಿಗ್ರಹಃ ।**
**ವಿಸೃಜ್ಯ ಸರ್ವತಃ ಸಂಗಂ ಇತರಾನ್ ವಿಷಯಾನ್ ಬಹಿಃ ॥ ೪೪ ॥**
**ಬಹಿಃ ಪ್ರವೃತ್ತಾಕ್ಷಗಣಂ ಶನೈಃ ಪ್ರತ್ಯಕ್ ಪ್ರವಾಹಯ ॥**

೪೨-೪೪. ರಾಜ್ಯದಿಂದಲಾಗಲಿ, ಸೀತೆಯಿಂದಾಗಲಿ, ಜಡವಾದ ಈ ದೇಹದಿಂದಾಗಲಿ ಏನು ? ಸೀತೆಯನ್ನು ರಾಮನಿಗೆ ಒಪ್ಪಿಸಿಬಿಡು. ವಿಭೀಷಣನಿಗೆ ರಾಜ್ಯವನ್ನು ಕೊಡು. ಮುನಿಗಳ ಗುಂಪಿಗೆ ಆಶ್ರಯವಾಗಿರುವ ರಮ್ಯವಾದ ಕಾಡಿಗೆ ಹೋಗು. ಶುಭವಾದ ನೀರಿನಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಸಂಧ್ಯಾವಂದನಾದಿಗಳನ್ನು ಮುಗಿಸಿ ಅನಂತರ ಏಕಾಂತದಲ್ಲಿ ಸುಖಾಸನದಲ್ಲಿ ಕುಳಿತು ಎಲ್ಲಾ ವಿಷಯ ಸಂಗವನ್ನೂ ತ್ಯಾಗಮಾಡಿ ಹೊರಗಿನ ವಿಷಯಗಳನ್ನು ಕುರಿತು ನುಗ್ಗುತ್ತಿರುವ ಇಂದ್ರಿಯಗಳ ಗುಂಪನ್ನು ಮೆಲ್ಲನೆ ಒಳಒಳಕ್ಕೆ ಸೆಳೆಯುವವನಾಗು.

**ಪ್ರಕೃತೇರ್ಭಿನ್ನಮಾತ್ಮಾನಂ ವಿಚಾರಯ ಸದಾನಘ ।**
**ಚರಾಚರಂ ಜಗತ್ ಕೃತ್ಸ್ನಂ ದೇಹಬುದ್ಧೀಂದ್ರಿಯಾದಿಕಮ್ ॥ ೪೫ ॥**

**ಆ ಬ್ರಹ್ಮಸ್ತಂಬಪರ್ಯಂತಂ ದೃಶ್ಯತೇ ಶ್ರೂಯತೇ ಚ ಯತ್ ।**
**ಸೈಷಾ ಪ್ರಕೃತಿರಿತ್ಯುಕ್ತಾ ಸೈವ ಮಾಯೇತಿ ಕೀರ್ತಿತಾ ॥ ೪೬ ॥**
**ಸರ್ಗಸ್ಥಿತಿವಿನಾಶಾನಾಂ ಜಗದ್ವೃಕ್ಷಸ್ಯ ಕಾರಣಮ್ ।**
**ಲೋಹಿತಃ ಶ್ವೇತಕೃಷ್ಣಾದಿಪ್ರಜಾಃ ಸೃಜತಿ ಸರ್ವದಾ ॥ ೪೭ ॥**

೪೫-೪೭. ಎಲೈ ಪಾಪರಹಿತನೆ, ಆತ್ಮನು ಪ್ರಕೃತಿಗಿಂತ ಬೇರೆ ಎಂದು ವಿಚಾರ ಮಾಡು. ಇಡಿಯ ಈ ಚೇತನಾಚೇತನಾತ್ಮಕವಾದ, ಬ್ರಹ್ಮನಿಂದ ಹಿಡಿದು ಒಂದು ಸಣ್ಣಹುಳುವಿನವರೆಗಿನ ಈ ಜಗತ್ತೇನಿದೆಯೋ - ಎಂದರೆ ಕಂಡುಬರುವ ಹಾಗೂ ಕೇಳಬರುವದೆಲ್ಲವೂ, ಮತ್ತು (ಆಧ್ಯಾತ್ಮಿಕವಾದ) ದೇಹೇಂದ್ರಿಯಪ್ರಾಣ ಮನೋಬುದ್ಧಿಗಳೂ ಕೂಡ ಸೇರಿ ಈ ಎಲ್ಲವೂ ಪ್ರಕೃತಿಯೆನಿಸುವದು. ಇದನ್ನೇ ಮಾಯೆಯೆನ್ನುವರು. ಇದು ಸೃಷ್ಟಿಸ್ಥಿತಿಲಯಗಳೆಂಬ ವಿಕಾರವನ್ನು ಹೊಂದುವ ಪ್ರಪಂಚವೆಂಬ ವೃಕ್ಷಕ್ಕೆ ಕಾರಣವು. ಇದು ಯಾವಾಗಲೂ ಕೆಂಪು, ಬಿಳುಪು, ಕಪ್ಪು ಬಣ್ಣದ ಪ್ರಜೆಗಳನ್ನು ಹಡೆಯುತ್ತಿರುವದು.

**ಕಾಮಕ್ರೋಧಾದಿಪುತ್ರಾದ್ಯಾನ್ ಹಿಂಸಾತೃಷ್ಣಾದಿಕನ್ಯಕಾಃ ।**
**ಮೋಹಯಂತ್ಯನಿಶಂ ದೇವಮಾತ್ಮಾನಂ ಸ್ವೈರ್ಗುಣೈರ್ವಿಭುಮ್ ॥ ೪೮ ॥**
**ಕರ್ತೃತ್ವಭೋಕ್ತೃತ್ವಮುಖಾನ್ ಸ್ವಗುಣಾನಾತ್ಮನೀಶ್ವರೇ ।**
**ಆರೋಪ್ಯ ಸ್ವವಶಂ ಕೃತ್ವಾ ತೇನ ಕ್ರೀಡತಿ ಸರ್ವದಾ ॥ ೪೯ ॥**
**ಶುದ್ಧೋಽಪ್ಯಾತ್ಮಾ ಯಯಾ ಯುಕ್ತಃ ಪಶ್ಯತೀವ ಸದಾ ಬಹಿಃ ।**
**ವಿಸ್ಮೃತ್ಯ ಚ ಸ್ವಮಾತ್ಮಾನಂ ಮಾಯಾಗುಣವಿಮೋಹಿತಃ ॥ ೫೦ ॥**

೪೮-೫೦. ಕಾಮಕ್ರೋಧಗಳೇ ಮುಂತಾದ ಗಂಡುಮಕ್ಕಳನ್ನೂ ಹಿಂಸೆ, ಆಸೆ-ಮುಂತಾದ ಹೆಣ್ಣುಮಕ್ಕಳನ್ನೂ (ಪ್ರಕೃತಿಯು ಹಡೆದಿರುವದು). ಈ ಮಕ್ಕಳು ತಮ್ಮ ಗುಣಗಳಿಂದ ವಿಭುವಾದ ದೇವನಾದ ಆತ್ಮನನ್ನು ಯಾವಾಗಲೂ ಮೋಹಗೊಳಿಸುತ್ತಿರುವವು. ಮಾಯೆಯಾದರೊ, ಕರ್ತೃತ್ವಭೋಕ್ತೃತ್ವವೇ ಮುಂತಾದ ತನ್ನ ಗುಣಗಳನ್ನು ಈಶ್ವರನಾದ ಆತ್ಮನಲ್ಲಿ ಆರೋಪಿಸಿ ತನ್ನ ವಶಗೊಳಿಸಿಕೊಂಡು ಆತನೊಡನೆ ಯಾವಾಗಲೂ ಆಟವಾಡುತ್ತಿರುವದು. ಆತ್ಮನು ಶುದ್ಧನಾಗಿದ್ದರೂ ಯಾವ ಈ ಪ್ರಕೃತಿಯೊಡನೆ ಕೂಡಿದವನಾಗಿ ಯಾವಾಗಲೂ ಹೊರಮುಖನಾಗಿದ್ದುಕೊಂಡು ಮಾಯಾಗುಣಗಳಿಂದ ವಿಮೋಹಿತನಾಗಿ ತನ್ನನ್ನು ತಾನು ಮರೆತಿರುವನು.

**ಯದಾ ಸದ್ಗುರುಣಾ ಯುಕ್ತೋ ಬೋಧ್ಯತೇ ಬೋಧರೂಪಿಣಾ ।**
**ನಿವೃತ್ತದೃಷ್ಟಿರಾತ್ಮಾನಂ ಪಶ್ಯತ್ಯೇವ ಸದಾಸ್ಫುಟಮ್ ॥ ೫೧ ॥**

**ಜೀವನ್ಮುಕ್ತಃ ಸದಾ ದೇಹೀ ಮುಚ್ಯತೇ ಪ್ರಾಕೃತೈರ್ಗುಣೈಃ**
**ತ್ವಮಪ್ಯೇವಂ ಸದಾತ್ಮಾನಂ ವಿಚಾರ್ಯ ನಿಯತೇಂದ್ರಿಯಃ ।**
**ಪ್ರಕೃತೇರನ್ಯಮಾತ್ಮಾನಂ ಜ್ಞಾತ್ವಾ ಮುಕ್ತೋ ಭವಿಷ್ಯಸಿ ॥ ೫೨ ॥**

೫೧-೫೨. ಯಾವಾಗ ಸದ್ಗುರುವಿನ ಸಂಗವನ್ನು ಹೊಂದಿ ಜ್ಞಾನರೂಪಿಯಾದ ಆತನಿಂದ ಬೋಧಿಸಲ್ಪಡುವನೋ ಆಗ ಹಿಂದಿರುಗಿದ ದೃಷ್ಟಿಯುಳ್ಳವನಾಗಿ ತನ್ನನ್ನು ಸ್ಫುಟವಾಗಿ ಕಂಡೇ ಕಂಡುಕೊಳ್ಳುವನು. ಪ್ರಾಕೃತಗುಣಗಳಿಂದ ಬದುಕಿರುವಾಗಲೇ ಮುಕ್ತನಾಗಿ ಈ ದೇಹಿಯು ಬಿಡುಗಡೆಹೊಂದುವನು. ನೀನು ಕೂಡ ಯಾವಾಗಲೂ ಇಂದ್ರಿಯನಿಗ್ರಹಸಂಪನ್ನನಾಗಿ ವಿಚಾರಮಾಡಿ ಆತ್ಮನು ಪ್ರಕೃತಿಗಿಂತಲೂ ಬೇರೆಯವನು - ಎಂದು ತಿಳಿದವನಾದರೆ ಮುಕ್ತಿಯನ್ನು ಹೊಂದಲಿರುವೆ.

**ಧ್ಯಾತುಂ ಯದ್ಯಸಮರ್ಥೋಽಸಿ ಸಗುಣಂ ದೇವಮಾಶ್ರಯ ।**
**ಹೃತ್ಪದ್ಮಕರ್ಣಿಕೇ ಸ್ವರ್ಣಪೀಠೇ ಮಣಿಗಣಾನ್ವಿತೇ ॥ ೫೩ ॥**
**ಮೃದು ಶ್ಲಕ್ಷ್ಣತರೇ ತತ್ರ ಜಾನಕ್ಯಾ ಸಹ ಸಂಸ್ಥಿತಮ್ ।**
**ವೀರಾಸನಂ ವಿಶಾಲಾಕ್ಷಂ ವಿದ್ಯುತ್ ಪುಂಜನಿಭಾಂಬರಮ್ ॥ ೫೪ ॥**
**ಕಿರೀಟಹಾರಕೇಯೂರಕೌಸ್ತುಭಾದಿಭಿರನ್ವಿತಮ್ ।**
**ನೂಪುರೈಃ ಕಟಕೈರ್ಭಾಂತಂ ತಥೈವ ವನಮಾಲಯಾ ॥ ೫೫ ॥**

೫೩-೫೫. (ನಿರ್ಗುಣನಾದ ಆತ್ಮನನ್ನು) ಒಂದು ವೇಳೆ ಧ್ಯಾನಮಾಡಲು ಅಸಮರ್ಥನಾದರೆ ಸಗುಣನಾದ ದೇವನನ್ನು ಆಶ್ರಯಿಸುವವನಾಗು. ಹೃದಯಪದ್ಮದ ಕರ್ಣಿಕೆಯ ಮೇಲೆ ಮಣಿಗಳಿಂದ ಕೂಡಿ ಮೃದುವಾಗಿ ಹಸನಾಗಿರುವ ಚಿನ್ನದ ಪೀಠದಲ್ಲಿ, ಸೀತಾಸಮೇತನಾಗಿ ವೀರಾಸನದಲ್ಲಿ ಕುಳಿತಿರುವವನಾದ, ವಿಶಾಲವಾದ ಕಂಗಳುಳ್ಳವನಾದ, ವಿದ್ಯುತ್ತಿನ ಸಮೂಹದಂತೆ ಮಿಂಚುವ ವಸ್ತ್ರಗಳನ್ನು ಧರಿಸಿರುವ ಹಾಗೂ ಕಿರೀಟ, ಹಾರ, ತೋಳುಬಳೆ, ಕೌಸ್ತುಭರತ್ನಾದಿಗಳಿಂದ ಕೂಡಿ ಕಾಲುಗೆಜ್ಜೆ, ಕಡಗಗಳಿಂದಲೂ ವನಮಾಲೆ ಯಿಂದಲೂ ಹೊಳೆಯುತ್ತಿರುವ (ದೇವನನ್ನು ಭಜಿಸು).

**ಲಕ್ಷ್ಮಣೇನ ಧನುರ್ದ್ವಂದ್ವಕರೇಣ ಪರಿಸೇವಿತಮ್ ।**
**ಏವಂ ಧ್ಯಾತ್ವಾ ಸದಾತ್ಮಾನಂ ರಾಮಂ ಸರ್ವಹೃದಿ ಸ್ಥಿತಮ್ ॥ ೫೬ ॥**
**ಭಕ್ತ್ಯಾ ಪರಮಯಾ ಯುಕ್ತೋ ಮುಚ್ಯತೇ ನಾತ್ರ ಸಂಶಯಃ ।**
**ಶೃಣು ವೈ ಚರಿತಂ ತಸ್ಯ ಭಕ್ತೈರ್ನಿತ್ಯಮನನ್ಯಧೀಃ ॥ ೫೭ ॥**
**ಏವಂ ಚೇತ್ ಕೃತಪೂರ್ವಾಣಿ ಪಾಪಾನಿ ಚ ಮಹಾಂತ್ಯಪಿ ।**
**ಕ್ಷಣಾದೇವ ವಿನಶ್ಯಂತಿ ಯಥಾಗ್ನೇಸ್ತೂಲರಾಶಯಃ ॥ ೫೮ ॥**

೫೬-೫೮. ಎರಡು ಧನುಸ್ಸುಗಳನ್ನು ಧರಿಸಿರುವ ಕೈಯುಳ್ಳ ಲಕ್ಷ್ಮಣನಿಂದ ಸೇವಿತನಾಗಿಯೂ ಇರುವ ಸರ್ವರ ಹೃದಯನಿವಾಸಿಯಾದ ಸದಾತ್ಮನಾದ ರಾಮನನ್ನು ಹೆಚ್ಚಿನ ಭಕ್ತಿಯಿಂದ ಧ್ಯಾನಮಾಡುತ್ತಾ ಇರುವವನು ಮುಕ್ತಿಯನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ. ಆತನ ಚರಿತ್ರೆಯನ್ನು ನಿತ್ಯವೂ ಭಕ್ತರ ಮೂಲಕ ಅನನ್ಯ ಮನಸ್ಕನಾಗಿ ಕೇಳುವವನಗು. ಹೀಗಾದರೆ ಹಿಂದೆ ಮಾಡಿದ್ದ ಮಹಾಪಾಪಗಳೂ ಕೂಡ - ಹೇಗೆ ಬೆಂಕಿಯಿಂದ ಹತ್ತಿಯ ರಾಶಿಗಳು ಸುಡಲ್ಪಡು ವವೋ ಹಾಗೆ ಕ್ಷಣ ಮಾತ್ರದಲ್ಲಿ ನಾಶವಾಗುವವು.

**ಭಜಸ್ವ ರಾಮಂ ಪರಿಪೂರ್ಣಮೇಕಂ**
**ವಿಹಾಯ ವೈರಂ ನಿಜಭಕ್ತಿಯುಕ್ತಃ ।**
**ಹೃದಾ ಸದಾ ಭಾವಿತಭಾವರೂಪಂ**
**ಅನಾಮರೂಪಂ ಪುರುಷಂ ಪುರಾಣಮ್ ॥ ೫೯ ॥**

೫೯. ಪರಿಪೂರ್ಣನೂ ಏಕನೂ ಯಾವಾಗಲೂ ಹೃದಯದಲ್ಲಿ ಭಾವನೆ ಮಾಡಿಕೊಂಡಂತೆಯೇ ಕಂಡುಬರುವ ಸ್ವರೂಪವುಳ್ಳವನೂ ನಾಮರೂಪಗಳಿಲ್ಲದವನೂ ಪುರಾಣಪುರುಷನೂ ಆದ ಶ್ರೀರಾಮನನ್ನು ವೈರವನ್ನು ಬಿಟ್ಟು ನಿಜವಾದ ಭಕ್ತಿಯಿಂದ ಕೂಡಿದವನಾಗಿ ಭಜಿಸುವವನಾಗು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಷಷ್ಠಃ ಸರ್ಗಃ**

---

ಈ ಅಧ್ಯಾಯವು ರಾವಣ- ಕಾಲನೇಮಿಸಂವಾದದ ನೆಪದಿಂದ ಅಧ್ಯಾತ್ಮವಿಚಾರವನ್ನು ಒಳಗೊಂಡ ಮನನೀಯವಾದ ಭಾಗವಾಗಿದೆ. ಕಾಲನೇಮಿಯಂಥ ರಾಕ್ಷಸನು ಕೂಡ ತತ್ತ್ವವನ್ನು ಬಲ್ಲವನಾಗಿದ್ದುದು ವಿಶೇಷವೇ ಸರಿ. ಆದರೆ ಅದನ್ನು ಅನುಷ್ಠಾನದಲ್ಲಿಟ್ಟುಕೊಳ್ಳದೆ ಕೇವಲ ಪರೋಪದೇಶಕ್ಕಾಗಿ ಅವನು ಬಳಸಿಕೊಂಡನಾದ್ದರಿಂದ ತಾನು ರಾಕ್ಷಸನಾಗಿಯೇ ಉಳಿದುಕೊಂಡನು. ಈ ವಿಚಾರವು ಆತನ ಕಥೆಯಲ್ಲಿ ಮುಂದೆ ಗೊತ್ತಾಗುವದು. ಆದ್ದರಿಂದ ಯಾರೇ ಆಗಲಿ, ಅಧ್ಯಾತ್ಮತತ್ತ್ವವನ್ನು ತಮ್ಮ ಸ್ವಂತ ಉಪಯೋಗಕ್ಕೆ ಮಾಡಿಕೊಳ್ಳದೆ ಹೋದರೆ ಅಸುರರೆನಿಸುವದು ಖಂಡಿತವೇ ಆಗಿರುತ್ತದೆ.

ಆತ್ಮನನ್ನು ಅರಿಯದೆ ಇರುವ ಮೂಢರನ್ನೆಲ್ಲ ಉಪನಿಷತ್ತುಗಳಲ್ಲಿ ಅಸುರರೆಂದೇ ಕರೆದಿರುತ್ತದೆ. ಇಲ್ಲಿಯೂ ಅಸುರನ ಬಾಯಿಂದ ತತ್ತ್ವವಿಚಾರವನ್ನು ಹೊರಗೆಡವಿರುವದರ ಉದ್ದೇಶವೇನೆಂದರೆ : ವೇದಾಂತವು ಕೇವಲ ಪ್ರವಚನಕ್ಕಾಗಿ ಅಲ್ಲ, ಅದು ತನ್ನ ಅನುಸಂಧಾನಕ್ಕಾಗಿ - ಎಂಬುದನ್ನು ವ್ಯತಿರೇಕನ್ಯಾಯದಿಂದ ತಿಳಿಸುವದಕ್ಕೇ ಆಗಿರುತ್ತದೆ. ಯಾವನು ಅನುಷ್ಠಾನತತ್ಪರನಲ್ಲವೋ ಅಂಥವನ ಬೋಧೆಯು ಪರಿಣಾಮಕಾರಿಯಾಗಲಾರದು - ಎಂಬುದೂ ಇಲ್ಲಿ ಕಂಡುಬಂದಿರುತ್ತದೆ. ಕಾಲನೇಮಿಯ ಉಪದೇಶವನ್ನು ರಾವಣನು ಸ್ವಲ್ಪವೂ ಸ್ವೀಕರಿಸಲಿಲ್ಲವೆಂಬುದೇ ಇದಕ್ಕೆ ಸಾಕ್ಷಿಯಾಗಿದೆ. **ಅಂತೂ ಈ ಸಂದರ್ಭದಿಂದ ನಾವು ತತ್ತ್ವಶ್ರವಣ- ಬೋಧನೆಗಳ ವಿಷಯಕ್ಕೆ ಬ್ರಹ್ಮನಿಷ್ಠರಾದ ಸದ್ಗುರುಗಳ ಮೂಲಕವೇ ಪ್ರಯತ್ನಿಸಬೇಕೆಂದೂ ಕೇವಲ ಶಾಸ್ತ್ರಜ್ಞರ ಉಪದೇಶಗಳು ಕಾರ್ಯಕಾರಿಯಾಗಲಾರ ವೆಂದೂ ತಿಳಿಯಬಹುದಾಗಿದೆ.**

-----------

## ಏಳನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಕಾಲನೇಮಿವಚಃ ಶ್ರುತ್ವಾ ರಾವಣೋಽಮೃತಸನ್ನಿಭಮ್ ।**
**ಜಜ್ವಾಲ ಕ್ರೋಧತಾಮ್ರಾಕ್ಷಃ ಸರ್ಪಿರದ್ಭಿರಿವಾಗ್ನಿಮತ್ ॥ ೧ ॥**
**ನಿಹನ್ಮಿ ತ್ವಾಂ ದುರಾತ್ಮಾನಂ ಮಚ್ಛಾಸನಪರಾಙ್ಮುಖಮ್ ।**
**ಪರೈಃ ಕಿಂಚಿದ್ ಗೃಹೀತ್ವಾ ತ್ವಂ ಭಾಷಸೇ ರಾಮಕಿಂಕರಃ ॥ ೨ ॥**
**ಕಾಲನೇಮಿರುವಾಚೇದಂ ರಾವಣಂ ದೇವ ಕಿಂ ಕ್ರುಧಾ ।**
**ನ ರೋಚತೇ ಮೇ ವಚನಂ ಯದಿ ಗತ್ವಾ ಕರೋಮಿ ತತ್ ॥ ೩ ॥**
**ಇತ್ಯುಕ್ತ್ವಾ ಪ್ರಯಯೌ ಶೀಘ್ರಂ ಕಾಲನೇಮಿರ್ಮಹಾಸುರಃ ।**
**ನೋದಿತೋ ರಾವಣೇನೈವ ಹನೂಮದ್ವಿಘ್ನಕಾರಣಾತ್ ॥ ೪ ॥**

೧-೪. ಶ್ರೀಮಹಾದೇವನಿಂತೆಂದನು : ರಾವಣನು ಅಮೃತಕ್ಕೆ ಸಮಾನವಾದ ಕಾಲನೇಮಿಯ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಂಗಳುಳ್ಳವನಾಗಿ - ಬೆಂಕಿಯಲ್ಲಿ ಉರಿಯುವ ತುಪ್ಪವು ನೀರು ಸೇರಿದ್ದರೆ ಹೇಗೋ ಹಾಗೆ - ಉರಿದು ಬಿದ್ದನು. 'ದುರಾತ್ಮನೂ ನನ್ನ ಅಪ್ಪಣೆಯನ್ನು ತಿರಸ್ಕರಿಸುವವನೂ ಆದ ನಿನ್ನನ್ನು ಈಗಲೆ ಕೊಲ್ಲುವೆನು. ರಾಮಸೇವಕನಾದ ನೀನು ಬೇರೊಬ್ಬರಿಂದ ಸ್ವಲ್ಪವೇ ತಿಳಿದವನಾಗಿ (ಅಪ್ರಿಯವಾದ) ಮಾತನಾಡುತ್ತಿರುವೆ'- ಎಂದನು. ಆಗ ಕಾಲನೇಮಿಯು ರಾವಣನನ್ನು ಕುರಿತು 'ಪ್ರಭೋ, ಕೋಪವೇಕೆ ? ನನ್ನ ಮಾತು ರುಚಿಸದೆಹೋದರೆ ನೀವು ಹೇಳಿದಂತೆ ಹೋಗಿ ಆ ಕೆಲಸವನ್ನು ಕೈಗೊಳ್ಳುವೆನು'- ಎಂದು ಹೇಳಿ ಬೇಗನೆ ಹೊರಟವನಾಗಿ ಆ ಮಹಾಸುರನು ರಾವಣನಿಂದ ಪ್ರೇರಿತನಾಗಿ ಹನುಮಂತನಿಗೆ ವಿಘ್ನವನ್ನು ಮಾಡುವದಕ್ಕೆ ಸಿದ್ಧನಾದನು.

**ಸ ಗತ್ವಾ ಹಿಮವತ್ ಪಾರ್ಶ್ವಂ ತಪೋವನಮಕಲ್ಪಯತ್ ।**
**ತತ್ರ ಶಿಷ್ಯೈಃ ಪರಿವೃತೋ ಮುನಿವೇಷಧರಃ ಖಲಃ ॥ ೫ ॥**
**ಗಚ್ಛತೋ ಮಾರ್ಗಮಾಸಾದ್ಯ ವಾಯುಸೂನೋರ್ಮಹಾತ್ಮನಃ ।**

೫. ಅವನು ಹಿಮವತ್ಪರ್ವತದ ಸಮೀಪಕ್ಕೆ ಹೋಗಿ ತಪೋವನವನ್ನು ನಿರ್ಮಿಸಿದನು. ಅಲ್ಲಿ ಆ ದುಷ್ಟನು ಶಿಷ್ಯರೊಡಗೂಡಿ ಮುನಿಗಳ ವೇಷವನ್ನು ಧರಿಸಿ ಮಹಾತ್ಮನಾದ ವಾಯುಪುತ್ರನು ಹೋಗಲಿರುವ ದಾರಿಯನ್ನು ಸಮೀಪಿಸಿ (ಕುಳಿತನು).

**ತತೋ ಗತ್ವಾ ದದರ್ಶಾಥ ಹನುಮಾನಾಶ್ರಮಂ ಶುಭಮ್ ।**
**ಚಿಂತಯಾಮಾಸ ಮನಸಾ ಶ್ರೀಮಾನ್ ಪವನನಂದನಃ ॥ ೬ ॥**
**ಪುರಾ ನ ದೃಷ್ಟಮೇತನ್ಮೇ ಮುನಿಮಂಡಲಮುತ್ತಮಮ್ ।**
**ಮಾರ್ಗೋ ವಿಭ್ರಂಶಿತೋ ವಾ ಮೇ ಭ್ರಮೋ ವಾ ಚಿತ್ತಸಂಭವಃ ॥ ೭ ॥**
**ಯದ್ವಾವಿಶ್ಯಾಶ್ರಮಪದಂ ದೃಷ್ಟ್ವಾ ಮುನಿಮಶೇಷತಃ ।**
**ಪೀತ್ವಾ ಜಲಂ ತತೋ ಯಾಮಿ ದ್ರೋಣಾಚಲಮನುತ್ತಮಮ್ ॥ ೮ ॥**
**ಇತ್ಯುಕ್ತ್ವಾ ಪ್ರವಿವೇಶಾಥ ಸರ್ವತೋ ಯೋಜನಾಯತಮ್ ।**

೬-೮. ಅನಂತರ ಶ್ರೀಯುಕ್ತನಾದ ವಾಯುವಿನ ಪುತ್ರನಾದ ಹನುಮಂತನು ಹೊರಟವನಾಗಿ ಶುಭಾವಹವಾದ ಆಶ್ರಮವನ್ನು ಹಾದಿಯಲ್ಲಿ ಕಂಡವನಾಗಿ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. 'ಈ ಹಿಂದೆ ನಾನು ಮುನಿಗಳ ಸಮೂಹವುಳ್ಳ (ಈ ಆಶ್ರಮವನ್ನು) ನೋಡಿರಲಿಲ್ಲವಲ್ಲ ! ದಾರಿಯೇನಾದರೂ ತಪ್ಪಿಹೋಯಿತೊ ? ಅಥವಾ ಮನಸ್ಸಿನಲ್ಲಿ ನನಗೆ ಉಂಟಾದ ಭ್ರಮೆಯೊ ? ಹೇಗಾದರೂ ಇರಲಿ ; ಈ ಆಶ್ರಮವನ್ನು ಹೊಕ್ಕು ಎಲ್ಲಾ ಮುನಿಗಳನ್ನೂ ಭೇಟಿಮಾಡಿ (ಒಂದಿಷ್ಟು) ನೀರು ಕುಡಿದು ಅನಂತರ ಶ್ರೇಷ್ಠವಾದ ದ್ರೋಣಾಚಲಕ್ಕೆ ಹೊರಡುವೆನು' ಎಂದುಕೊಂಡು ಎಲ್ಲಾ ಕಡೆಗೂ ಯೋಜನದಷ್ಟಗಲವಾಗಿ ಹರಡಿರುವ (ಆಶ್ರಮವನ್ನು) ಹೊಕ್ಕನು.

**ಆಶ್ರಮಂ ಕದಲೀಶಾಲಖರ್ಜೂರಪನಸಾದಿಭಿಃ ।**
**ಸಮಾವೃತಂ ಪಕ್ವಫಲೈರ್ನಮ್ರಶಾಖೈಶ್ಚ ಪಾದಪೈಃ ॥ ೯ ॥**
**ವೈರಭಾವವಿನಿರ್ಮುಕ್ತಂ ಶುದ್ಧಂ ನಿರ್ಮಲಲಕ್ಷಣಮ್ ।**
**ತಸ್ಮಿನ್ ಮಹಾಶ್ರಮೇ ರಮ್ಯೇ ಕಾಲನೇಮಿಃ ಸ ರಾಕ್ಷಸಃ ॥ ೧೦ ॥**
**ಇಂದ್ರಯೋಗಂ ಸಮಾಸ್ಥಾಯ ಚಕಾರ ಶಿವಪೂಜನಮ್ ।**

೯-೧೦. ಅದು ಬಾಳೆ, ಶಾಲ, ಖರ್ಜೂರ, ಹಲಸು, ಮುಂತಾದ ಹಣ್ಣಾದ ಫಲಗಳಿಂದ ಬಗ್ಗಿಹೋಗಿರುವ ರೆಂಬೆಗಳುಳ್ಳ ಮರಗಳಿಂದಲೂ ವೈರಭಾವ ವಿಲ್ಲದ ಪ್ರಾಣಿಸಮೂಹಗಳಿಂದಲೂ ಕೂಡಿದ್ದು ಸ್ವಚ್ಛವಾಗಿ ನಿರ್ಮಲವಾಗಿತ್ತು. ಆ ರಮ್ಯ ವಾದ ಮಹಾಶ್ರಮದಲ್ಲಿ ಕಾಲನೇಮಿರಾಕ್ಷಸನು ಇಂದ್ರಯೋಗವನ್ನು ಧರಿಸಿ ಶಿವ ಪೂಜೆಯನ್ನು ಮಾಡುತ್ತಿದ್ದನು.

**ಹನೂಮಾನಭಿವಾದ್ಯಾಹ ಗೌರವೇಣ ಮಹಾಸುರಮ್ ।**
**ಭಗವನ್ ರಾಮದೂತೋಽಹಂ ಹನೂಮಾನ್ನಾಮ ನಾಮತಃ ॥ ೧೧ ॥**
**ರಾಮಕಾರ್ಯೇಣ ಮಹತಾ ಕ್ಷೀರಾಬ್ಧಿಂ ಗಂತುಮುದ್ಯತಃ ।**
**ತೃಷಾ ಮಾಂ ಬಾಧತೇ ಬ್ರಹ್ಮನ್ ಉದಕಂ ಕುತ್ರ ವಿದ್ಯತೇ ॥ ೧೨ ॥**
**ಯಥೇಚ್ಛಂ ಪಾತುಮಿಚ್ಛಾಮಿ ಕಥ್ಯತಾಂ ಮೇ ಮುನೀಶ್ವರ ।**

೧೧-೧೨. ಹನುಮಂತನು ಗೌರವಪೂರ್ವಕವಾಗಿ ನಮಸ್ಕರಿಸಿ ರಾಕ್ಷಸನನ್ನು ಕುರಿತು ಹೀಗೆಂದನು : 'ಪೂಜ್ಯರೆ, ನಾನು ಹನುಮಂತನೆಂಬ ಹೆಸರಿನ ರಾಮ ದೂತನು. ಶ್ರೀರಾಮನ ಮಹತ್ತಾದ ಒಂದು ಕೆಲಸಕ್ಕಾಗಿ ಕ್ಷೀರಸಮುದ್ರಕ್ಕೆ ಹೋಗಲು ಪ್ರಯತ್ನಿಸುತ್ತಿರುವೆನು. ನನಗೆ ಬಾಯಾರಿಕೆಯಾಗಿದೆ. ಇಲ್ಲಿ ನೀರೆಲ್ಲಿದೆ ? ಮುನಿ ವರ್ಯರೆ, ನಾನು ಸಮೃದ್ಧಿಯಾಗಿ ನೀರುಕುಡಿಯಲಿಚ್ಛಿಸುವೆನು. ದಯಪಿಟ್ಟು ಹೇಳೋಣವಾಗಲಿ.'

**ತಚ್ಛ್ರುತ್ವಾ ಮಾರುತೇರ್ವಾಕ್ಯಂ ಕಾಲನೇಮಿಸ್ತಮಬ್ರವೀತ್ ।**
**ಕಮಂಡಲುಗತಂ ತೋಯಂ ಮಮ ತ್ವಂ ಪಾತುಮರ್ಹಸಿ ॥ ೧೩ ॥**
**ಭುಂಕ್ಷ್ವ ಚೇಮಾನಿ ಪಕ್ವಾನಿ ಫಲಾನಿ ತದನಂತರಮ್ ।**
**ನಿವಸಸ್ವ ಸುಖೇನಾತ್ರ ನಿದ್ರಾಮೇಹಿ ತ್ವರಾಸ್ತು ಮಾ ॥ ೧೪ ॥**
**ಭೂತಂ ಭವ್ಯಂ ಭವಿಷ್ಯಂ ಚ ಜಾನಾಮಿ ತಪಸಾ ಸ್ವಯಮ್ ।**
**ಉತ್ಥಿತೋ ಲಕ್ಷ್ಮಣಃ ಸರ್ವೇ ವಾನರಾ ರಾಮವೀಕ್ಷಿತಾಃ ॥ ೧೫ ॥**

೧೩-೧೫. ಮಾರುತಿಯ ಆ ಮಾತನ್ನು ಕೇಳಿ ಕಾಲನೇಮಿಯು ಅವನನ್ನು ಕುರಿತು ಹೀಗೆಂದನು : 'ನೀನು ನನ್ನ ಕಮಂಡಲುವಿನಲ್ಲಿರುವ ನೀರನ್ನು ಕುಡಿಯ ಬಹುದು. ಅನಂತರ ಈ ಹಣ್ಣಾಗಿರುವ ಫಲಗಳನ್ನು ತಿನ್ನುವವನಾಗು. ಇಲ್ಲಿ ಸುಖ ವಾಗಿ ಇದ್ದುಕೊಂಡಿರು. ನಿದ್ರೆ ಮಾಡು. ಆತುರಪಟ್ಟುಕೊಳ್ಳಬೇಡ. ನಾನು ತಪಸ್ಸಿನ ಮಹಿಮೆಯಿಂದ ಹಿಂದಿನ, ಮುಂದಿನ, ಈಗಿನ ಎಲ್ಲಾ ವಿಷಯಗಳನ್ನೂ ಬಲ್ಲೆನು. ಲಕ್ಷ್ಮಣನು ಎದ್ದಿರುವನು. ರಾಮನಿಂದ ನೋಡಲ್ಪಟ್ಟ ವಾನರರೆಲ್ಲರೂ ಎದ್ದಿದ್ದಾರೆ.

**ತಚ್ಛ್ರುತ್ವಾ ಹನುಮಾನಾಹ ಕಮಂಡಲುಜಲೇನ ಮೇ ।**
**ನಾಶಾಮ್ಯತ್ಯಧಿಕಾ ತೃಷ್ಣಾ ತತೋ ದರ್ಶಯ ಮೇ ಜಲಮ್ ॥ ೧೬ ॥**
**ತಥೇತ್ಯಾಜ್ಞಾಪಯಾಮಾಸ ಬಟುಂ ಮಾಯಾವಿಕಲ್ಪಿತಮ್ ।**
**ಬಟೋ ದರ್ಶಯ ವಿಸ್ತೀರ್ಣಂ ವಾಯುಸೂನೋರ್ಜಲಾಶಯಮ್ ॥ ೧೭ ॥**
**ನಿಮೀಲ್ಯ ಚಾಕ್ಷಿಣೀ ತೋಯಂ ಪೀತ್ವಾ ಗಚ್ಛ ಮಮಾಂತಿಕಮ್ ।**
**ಉಪದೇಕ್ಷ್ಯಾಮಿ ತೇ ಮಂತ್ರಂ ಯೇನ ದ್ರಕ್ಷ್ಯಸಿ ಚೌಷಧೀಃ ॥ ೧೮ ॥**

೧೬-೧೮. ಅದನ್ನು ಕೇಳಿ ಹನುಮಂತನಿಂತೆಂದನು : 'ಕಮಂಡಲುವಿನ ನೀರಿ ನಿಂದ ನನ್ನ ಹೆಚ್ಚಿನ ಬಾಯಾರಿಕೆಯು ಹೋಗುವಂತಿಲ್ಲ. ಆದ್ದರಿಂದ ನೀರಿರುವ (ಜಾಗವನ್ನು) ತೋರಿಸು.' ಹೀಗೆನ್ನಲು ಹಾಗೆಯೇ ಆಗಲೆಂದು ಮಾಯೆಯಿಂದ ನಿರ್ಮಿಸಲ್ಪಟ್ಟ ಬ್ರಹ್ಮಚಾರಿಯನ್ನು ಕುರಿತು 'ಎಲೈ ವಟುವೆ' ವಾಯುಪುತ್ರನಿಗೆ ವಿಸ್ತೀರ್ಣವಾದ ಜಲಾಶಯವನ್ನು ತೋರಿಸು.' ಎಂದು ಹೇಳಿ ಮತ್ತೆ

(ಹನುಮಂತನನ್ನು ಕುರಿತು) 'ಅಯ್ಯಾ, ಕಣ್ಣುಗಳನ್ನು ಮುಚ್ಚಿಕೊಂಡು ನೀರನ್ನು ಕುಡಿದು ನನ್ನ ಹತ್ತಿರಕ್ಕೆ ಬಾ. ನಿನಗೆ ಔಷಧಿಗಳು ಕಾಣಿಸಿಕೊಳ್ಳುವಂಥ ಮಂತ್ರವನ್ನು ಉಪದೇಶಮಾಡುತ್ತೇನೆ' ಎಂದನು.

**ತಥೇತಿ ದರ್ಶಿತಂ ಶೀಘ್ರಂ ಬಟುನಾ ಸಲಿಲಾಶಯಮ್ ।**
**ಪ್ರವಿಶ್ಯ ಹನುಮಾಂಸ್ತೋಯಮಪಿಬನ್ಮೀಲಿತೇಕ್ಷಣಃ ॥ ೧೯ ॥**
**ತತಶ್ಚಾಗತ್ಯ ಮಕರೀ ಮಹಾಮಾಯಾ ಮಹಾಕಪಿಮ್ ।**
**ಅಗ್ರಸತ್ ತನ್ಮಹಾವೇಗಾನ್ಮಾರುತಿಂ ಘೋರರೂಪಿಣೀ ॥ ೨೦ ॥**
**ತತೋ ದದರ್ಶ ಹನುಮಾನ್ ಗ್ರಸಂತೀಂ ಮಕರೀಂ ರುಷಾ ।**
**ದಾರಯಾಮಾಸ ಹಸ್ತಾಭ್ಯಾಂ ವದನಂ ಸಾ ಮಮಾರ ಹ ॥ ೨೧ ॥**

೧೯-೨೧. ಹಾಗೆಯೇ ಆಗಲೆಂದು ಬ್ರಹ್ಮಚಾರಿಯು ಕೆರೆಯನ್ನು ತೋರಿಸಿದನು. ಹನುಮಂತನು ಅದನ್ನು ಹೊಕ್ಕು ಕಣ್ಣನ್ನು ಮುಚ್ಚಿಕೊಂಡು ನೀರನ್ನು ಕುಡಿದನು. ಅನಂತರ ಮಹಾಮಾಯಾರೂಪಿಣಿಯಾದ ಭಯಂಕರವಾದ ಒಂದು ಹೆಣ್ಣು ಮೊಸಳೆಯು ಬಹಳ ವೇಗದಿಂದ ಬಂದು ಮಹಾಕಪಿಯಾದ (ಹನುಮಂತನನ್ನು) ನುಂಗತೊಡಗಿತು. ಆಗ ಹನುಮಂತನು ಹಾಗೆ ನುಂಗಲು ಬರುತ್ತಿದ್ದ ಮೊಸಳೆಯನ್ನು ಕೋಪದಿಂದ ನೋಡಿದವನಾಗಿ ಎರಡೂ ಕೈಗಳಿಂದ ಅದರ ಮುಖವನ್ನು (ಹಿಡಿದು) ಸೀಳಿಹಾಕಿದನು. ಆಕೆಯಾದರೋ ಸತ್ತುಬಿದ್ದಳು.

**ತತೋಽನ್ತರಿಕ್ಷೇ ದದೃಶೇ ದಿವ್ಯರೂಪಧರಾಂಗನಾ ।**
**ಧಾನ್ಯಮಾಲೀತಿ ವಿಖ್ಯಾತಾ ಹನುಮಂತಮಥಾಬ್ರವೀತ್ ॥ ೨೨ ॥**
**ತ್ವತ್ಪ್ರಸಾದಾದಹಂ ಶಾಪಾದ್ ವಿಮುಕ್ತಾಸ್ಮಿ ಕಪೀಶ್ವರ ।**
**ಶಪ್ತಾಹಂ ಮುನಿನಾ ಪೂರ್ವಮಪ್ಸರಾ ಕಾರಣಾಂತರೇ ॥ ೨೩ ॥**
**ಆಶ್ರಮೇ ಯಸ್ತು ತೇ ದೃಷ್ಟಃ ಕಾಲನೇಮಿರ್ಮಹಾಸುರಃ ।**
**ರಾವಣಪ್ರಹಿತೋ ಮಾರ್ಗೇ ವಿಘ್ನಂ ಕರ್ತುಂ ತವಾನಘ ॥ ೨೪ ॥**
**ಮುನಿವೇಷಧರೋ ನಾಸೌ ಮುನಿರ್ವಿಪ್ರವಿಹಿಂಸಕಃ ।**
**ಜಹಿ ದುಷ್ಟಂ ಗಚ್ಛ ಶೀಘ್ರಂ ದ್ರೋಣಾಚಲಮನುತ್ತಮಮ್ ॥ ೨೫ ॥**
**ಗಚ್ಛಾಮ್ಯಹಂ ಬ್ರಹ್ಮಲೋಕಂ ತ್ವತ್ಸ್ಪರ್ಶಾದ್ ಹತಕಲ್ಮಷಾ ।**
**ಇತ್ಯುಕ್ತ್ವಾ ಸಾ ಯಯೌ ಸ್ವರ್ಗಂ ಹನೂಮಾನಪ್ಯಥಾಶ್ರಮಮ್ ॥ ೨೬ ॥**

೨೨-೨೬. ಅನಂತರ ಆಕಾಶದಲ್ಲಿ ದಿವ್ಯರೂಪವನ್ನು ಧರಿಸಿದ್ದ ಧಾನ್ಯಮಾಲಿನಿಯೆಂಬ ಒಬ್ಬ ಸುಂದರ ಯುವತಿಯು ಕಾಣಿಸಿಕೊಂಡು ಹನುಮಂತನನ್ನು ಕುರಿತು ಹೀಗೆಂದಳು : 'ಎಲೈ ಕಪೀಶ್ರೇಷ್ಠನೆ, ನಿನ್ನ ಕೃಪೆಯಿಂದ ನಾನು ಶಾಪದಿಂದ

ಈಗ ಬಿಡುಗಡೆಹೊಂದಿರುವೆನು. ನಾನೊಬ್ಬಳು ಅಪ್ಸರೆಯು. ಕಾರಣಾಂತರದಿಂದ ಒಬ್ಬ ಋಷಿಯ ಶಾಪಕ್ಕೊಳಗಾಗಿದ್ದೆನು. ಇರಲಿ ; ಎಲೈ ಪಾಪರಹಿತನೆ, ನೀನು ಆಶ್ರಮದಲ್ಲಿ ನೋಡಿದವನು ರಾವಣನಿಂದ ಕಳುಹಿಸಲ್ಪಟ್ಟ ಕಾಲನೇಮಿಯೆಂಬ ಮಹಾರಾಕ್ಷಸನು. ಅವನು ನಿನಗೆ ದಾರಿಯಲ್ಲಿ ವಿಘ್ನವನ್ನುಂಟುಮಾಡುವದಕ್ಕಾಗಿ ಕುಳಿತಿರುವನು. ಅವನು ಋಷಿವೇಷವನ್ನು ಧರಿಸಿದ್ದಾನೆ. ಆದರೆ ಋಷಿಯಲ್ಲ. ಮುನಿಗಳನ್ನೂ ಬ್ರಾಹ್ಮಣರನ್ನೂ ಹಿಂಸಿಸುತ್ತಿರುವ ಆ ದುಷ್ಟನನ್ನು ಬೇಗನೆ ಕೊಂದುಬಿಡು. ಅನಂತರ ದ್ರೋಣಾಚಲವನ್ನು ಹೊಕ್ಕು (ಮೂಲಿಕೆಗಳನ್ನು) ಒಯ್ಯುವವನಾಗು. ನಿನ್ನ ಸ್ಪರ್ಶದಿಂದ ಪಾಪಗಳನ್ನು ಕಳೆದುಕೊಂಡ ನಾನು ಬ್ರಹ್ಮಲೋಕಕ್ಕೆ ಹೋಗುವೆನು'- ಹೀಗೆಂದು ಹೇಳಿ ಆಕೆಯು ಸ್ವರ್ಗಕ್ಕೆ ಹೊರಟುಹೋದಳು. ಹನುಮಂತನು ಆಶ್ರಮಕ್ಕೆ ಬಂದನು.

**ಆಗತಂ ತಂ ಸಮಾಲೋಕ್ಯ ಕಾಲನೇಮಿರಭಾಷತ ।**
**ಕಿಂ ವಿಲಂಬೇನ ಮಹತಾ ತವ ವಾನರಸತ್ತಮ ॥ ೨೭ ॥**
**ಗೃಹಾಣ ಮತ್ತೋ ಮಂತ್ರಾಂಸ್ತ್ವಂ ದೇಹಿ ಮೇ ಗುರುದಕ್ಷಿಣಾಮ್ ।**
**ಇತ್ಯುಕ್ತೋ ಹನುಮಾನ್ ಮುಷ್ಟಿಂ ದೃಢಂ ಬದ್ಧ್ವಾಹ ರಾಕ್ಷಸಮ್ ॥ ೨೮ ॥**
**ಗೃಹಾಣ ದಕ್ಷಿಣಾಮೇತಾಮಿತ್ಯುಕ್ತ್ವಾ ನಿಜಘಾನ ತಮ್ ।**

೨೭-೨೮. ಹಿಂದಿರುಗಿ ಬಂದ ಆತನನ್ನು ಕಂಡು ಕಾಲನೇಮಿಯು ಹೀಗೆಂದನು : 'ಎಲೈ ವಾನರಶ್ರೇಷ್ಠನೆ, ಹೆಚ್ಚುಕಾಲ ತಡವೇಕಾಯಿತು ? ಇದೊ, ನನ್ನಿಂದ ಮಂತ್ರೋಪದೇಶವನ್ನು ಸ್ವೀಕರಿಸು. ನನಗೆ ಗುರುದಕ್ಷಿಣೆಯನ್ನು ಕೊಡು.' ಹೀಗೆನ್ನಲು ಹನುಮಂತನು ಗಟ್ಟಿಯಾಗಿ ಮುಷ್ಟಿಮಾಡಿಕೊಂಡು 'ದಕ್ಷಿಣೆಯನ್ನು ತೆಗೆದುಕೊ'' ಎಂದು ಹೇಳಿ ಬಲವಾಗಿ ಗುದ್ದಿದನು.

**ವಿಸೃಜ್ಯ ಮುನಿವೇಷಂ ಸ ಕಾಲನೇಮಿರ್ಮಹಾಸುರಃ ।**
**ಯುಯುಧೇ ವಾಯುಪುತ್ರೇಣ ನಾನಾಮಾಯಾವಿಧಾನತಃ ॥ ೨೯ ॥**
**ಮಹಾಮಾಯಿಕದೂತೋಽಸೌ ಹನೂಮಾನ್ ಮಾಯಿನಾಂ ರಿಪುಃ ।**
**ಜಘಾನ ಮುಷ್ಟಿನಾ ಶೀರ್ಷ್ಣಿ ಭಗ್ನಮೂರ್ಧಾ ಮಮಾರ ಸಃ ॥ ೩೦ ॥**

೨೯-೩೦. ಮಹಾಸುರನಾದ ಕಾಲನೇಮಿಯು ಮುನಿವೇಷವನ್ನು ಬಿಟ್ಟು ಅನೇಕ ಮಾಯಾವಿಧಾನಗಳಿಂದ ಹನುಮಂತನೊಡನೆ ಯುದ್ಧಮಾಡಿದನು. ಆದರೆ ಮಹಾಮಾಯಾವಿಯಾದ (ಭಗವಾನ್ ಶ್ರೀರಾಮನ) ಸೇವಕನೂ ಮಾಯಾವಿಗಳಾದ ರಾಕ್ಷಸರಿಗೆ ಶತ್ರುವೂ ಆದ ಹನುಮಂತನು ಮುಷ್ಟಿಯಿಂದ ರಾಕ್ಷಸನ ತಲೆಯಮೇಲೆ ಹೊಡೆದನು. ಆಗ ಅವನು ತಲೆಯೊಡೆದು ಸತ್ತುಬಿದ್ದನು.

**ತತಃ ಕ್ಷೀರನಿಧಿಂ ಗತ್ವಾ ದೃಷ್ಟ್ವಾ ದ್ರೋಣಂ ಮಹಾಗಿರಿಮ್ ।**
**ಅದೃಷ್ಟ್ವಾ ಚೌಷಧೀಃ ತತ್ರ ಗಿರಿಮುತ್ಪಾಟ್ಯ ಸತ್ವರಃ ॥ ೩೧ ॥**
**ಗೃಹೀತ್ವಾ ವಾಯುವೇಗೇನ ಗತ್ವಾ ರಾಮಸ್ಯ ಸನ್ನಿಧಿಮ್**
**ಉವಾಚ ಹನುಮಾನ್ ರಾಮಮಾನೀತೋಽಯಂ ಮಹಾಗಿರಿಃ ॥ ೩೨ ॥**
**ಯದ್ಯುಕ್ತಂ ಕುರು ದೇವೇಶ ವಿಲಂಬೋ ನಾತ್ರ ಯುಜ್ಯತೇ ।**

೩೧-೩೨. ಅನಂತರ ಹನುಮಂತನು ಕ್ಷೀರಸಮುದ್ರಕ್ಕೆ ಹೋಗಿ ದ್ರೋಣ ಪರ್ವತವನ್ನು ಕಂಡು ಅಲ್ಲಿ ಔಷಧಿ (ಗಿಡಮೂಲಿಕೆ)ಗಳನ್ನು ಕಾಣದೆ ಹೋದನು. ಆಗ ಬೆಟ್ಟವನ್ನೇ ಕಿತ್ತು ತಂದು ವಾಯುವೇಗದಿಂದ ರಾಮನ ಸನ್ನಿಧಿಗೆ ಬಂದು 'ಬೆಟ್ಟವು ತರಲ್ಪಟ್ಟಿದೆ. ಎಲೈ ದೇವಶ್ರೇಷ್ಠನೆ, ಯಾವದು ತಕ್ಕದ್ದೋ ಅದನ್ನು ಮಾಡು ; ವಿಳಂಬವು ಯೋಗ್ಯವಲ್ಲ' - ಎಂದುರಾಮನನ್ನು ಕುರಿತು ಹೇಳಿದನು :

**ಶ್ರುತ್ವಾ ಹನುಮತೋ ವಾಕ್ಯಂ ರಾಮಃ ಸಂತುಷ್ಟಮಾನಸಃ ।**
**ಗೃಹೀತ್ವಾ ಚೌಷಧೀಃ ಶೀಘ್ರಂ ಸುಷೇಣೇನ ಮಹಾಮತಿಃ ॥ ೩೩ ॥**
**ಚಿಕಿತ್ಸಾಂ ಕಾರಯಾಮಾಸ ಲಕ್ಷ್ಮಣಾಯ ಮಹಾತ್ಮನೇ ।**
**ತತಃ ಸುಪ್ತೋತ್ಥಿತ ಇವ ಬುದ್ಧ್ವಾ ಪ್ರೋವಾಚ ಲಕ್ಷ್ಮಣಃ ॥ ೩೪ ॥**
**ತಿಷ್ಠ ತಿಷ್ಠ ಕ್ವ ಗಂತಾಸಿ ಹನ್ಮೀದಾನೀಂ ದಶಾನನ ।**
**ಇತಿ ಬ್ರುವಂತಮಾಲೋಕ್ಯ ಮೂರ್ಧ್ನ್ಯವಘ್ರಾಯ ರಾಘವಃ ॥ ೩೫ ॥**
**ಮಾರುತಿಂ ಪ್ರಾಹ ವತ್ಸಾದ್ಯ ತ್ವತ್ ಪ್ರಸಾದಾನ್ಮಹಾಕಪೇ ।**
**ನಿರಾಮಯಂ ಪ್ರಪಶ್ಯಾಮಿ ಲಕ್ಷ್ಮಣಂ ಭ್ರಾತರಂ ಮಮ ॥ ೩೬ ॥**
**ಇತ್ಯುಕ್ತ್ವಾ ವಾನರೈಃ ಸಾರ್ಧಂ ಸುಗ್ರೀವೇಣ ಸಮನ್ವಿತಃ ।**
**ವಿಭೀಷಣಮತೇನೈವ ಯುದ್ಧಾಯ ಸಮವಸ್ಥಿತಃ ॥ ೩೭ ॥**

೩೩-೩೭. ಹನುಮಂತನ ಮಾತನ್ನು ಕೇಳಿ ಸಂತುಷ್ಟನಾದ ಮಹಾಮತಿಯಾದ ರಾಮನು ಔಷಧಿಗಳನ್ನು ತೆಗೆದುಕೊಂಡು ಸುಷೇಣನಿಂದ ಜಾಗ್ರತೆಯಾಗಿ ಮಹಾತ್ಮನಾದ ಲಕ್ಷ್ಮಣನಿಗೆ ಚಿಕಿತ್ಸೆ ಮಾಡಿಸಿದನು. ಅನಂತರ ಮಲಗಿದ್ದವನು ಏಳುವಂತೆ ಲಕ್ಷ್ಮಣನು ಎಚ್ಚತ್ತವನಾಗಿ 'ಎಲೈ ರಾವಣನೆ, ನಿಲ್ಲು, ನಿಲ್ಲು - ಎಲ್ಲಿಗೆ ಹೋಗುವೆ ?' ಎನ್ನುತ್ತಿರಲು ಅವನನ್ನು ರಾಮನು (ಪ್ರೀತಿಯಿಂದ) ನೆತ್ತಿಯಲ್ಲಿ ಮೂಸಿ ಮಾರುತಿಯನ್ನು ಕುರಿತು 'ಅಪ್ಪಾ, ಕಪಿಶ್ರೇಷ್ಠನೆ, ನಿನ್ನ ದಯೆಯಿಂದ ನನ್ನ ಸೋದರನಾದ ಲಕ್ಷ್ಮಣನು ಆರೋಗ್ಯವನ್ನು ಹೊಂದಿದ್ದನ್ನು ಕಾಣುತ್ತಿದ್ದೇನೆ' - ಎಂದನು. ಹೀಗೆ ಹೇಳಿ ಅನಂತರ ಕಪಿಗಳೊಡಗೂಡಿ ಸುಗ್ರೀವನೊಡನೆ ವಿಭೀಷಣನ ಸೂಚನೆಗೆ ತಕ್ಕಂತೆ ಯುದ್ಧಕ್ಕಾಗಿ ಸಿದ್ಧನಾದನು.

**ಪಾಷಾಣೈಃ ಪಾದಪೈಶ್ಚೈವ ಪರ್ವತಾಗ್ರೈಶ್ಚ ವಾನರಾಃ ।**
**ಯುದ್ಧಾಯಾಭಿಮುಖಾ ಭೂತ್ವಾ ಯಯುಃ ಸರ್ವೇ ಯುಯುತ್ಸವಃ ॥ ೩೮ ॥**
**ರಾವಣೋ ವಿವ್ಯಥೇ ರಾಮಬಾಣೈರ್ವಿದ್ಧೋ ಮಹಾಸುರಃ ।**
**ಮಾತಂಗ ಇವ ಸಿಂಹೇನ ಗರುಡೇನೇವ ಪನ್ನಗಃ ॥ ೩೯ ॥**
**ಅಭಿಭೂತೋಽಗಮದ್ ರಾಜಾ ರಾಘವೇಣ ಮಹಾತ್ಮನಾ ।**

೩೮-೩೯. ಕಪಿಗಳು ಕಲ್ಲುಗಳು, ಮರಗಳು, ಪರ್ವತಶಿಖರಗಳು - ಮುಂತಾದವುಗಳಿಂದ ಕೂಡಿ ಯುದ್ಧಮಾಡುವ ಇಚ್ಛೆಯಿಂದ ಎಲ್ಲವೂ ಯುದ್ಧ ರಂಗಕ್ಕೆ ಹೊರಟವು. ಮಹಾಸುರನಾದ ರಾಜನಾದ ರಾವಣನಾದರೊ, ರಾಮಬಾಣ ಗಳಿಂದ ಹೊಡೆಯಲ್ಪಟ್ಟು ಪೀಡಿತನಾಗಿ ಸಿಂಹದಿಂದ ಹಿಮ್ಮೆಟ್ಟಿಸಲ್ಪಟ್ಟ ಆನೆ ಯಂತೆಯೂ ಗರುಡನಿಂದ ಹಿಂಸಿಸಲ್ಪಟ್ಟ ಹಾವಿನಂತೆಯೂ (ದುಃಖಿತನಾಗಿ) ಮಹಾತ್ಮನಾದ ರಾಘವನಾದ ರಾಮನಿಂದ (ಸೋತವನಾಗಿ) ಹಿಂದಿರುಗಿದನು.

**ಸಿಂಹಾಸನೇ ಸಮಾವಿಶ್ಯ ರಾಕ್ಷಸಾನಿದಮಬ್ರವೀತ್ ।**
**ಮಾನುಷೇಣೈವ ಮೇ ಮೃತ್ಯುಮಾಹ ಪೂರ್ವಂ ಪಿತಾಮಹಃ ॥ ೪೦ ॥**
**ಮಾನುಷೋ ಹಿ ನ ಮಾಂ ಹಂತುಂ ಶಕ್ತೋಽಸ್ತಿ ಭುವಿ ಕಶ್ಚನ ।**
**ತತೋ ನಾರಾಯಣಃ ಸಾಕ್ಷಾತ್ ಮಾನುಷೋಽಭೂನ್ನ ಸಂಶಯಃ ॥ ೪೧॥**
**ರಾಮೋ ದಾಶರಥಿರ್ಭೂತ್ವಾ ಮಾಂ ಹಂತುಂ ಸಮುಪಸ್ಥಿತಃ ।**

೪೦-೪೧. ಸಿಂಹಾಸನದಲ್ಲಿ ಕುಳಿತು ರಾಕ್ಷಸರನ್ನು ಕುರಿತು ಹೀಗೆಂದನು : 'ಹಿಂದೆ ಬ್ರಹ್ಮನು ನನಗೆ ಮನುಷ್ಯನಿಂದಲೇ ಸಾವು ಬರಲಿದೆ - ಎಂದು ಹೇಳಿದ್ದನು. ಆದರೆ ಈಗ ಭೂಲೋಕದಲ್ಲಿರುವ ಯಾವ ಮನುಷ್ಯನೂ ನನ್ನನು ಕೊಲ್ಲಲು ಸಮರ್ಥನಾಗಿಲ್ಲ. ಆದ್ದರಿಂದ ಸಾಕ್ಷಾನ್ನಾರಾಯಣನೇ ದಾಶರಥಿರಾಮನೆಂಬ ಮನುಷ್ಯನಾಗಿರುವ ನೆಂಬುದರಲ್ಲಿ ಸಂಶಯವಿಲ್ಲ. ಹೀಗೆ ಅವನು ನನ್ನನ್ನು ಕೊಲ್ಲಲು ಬಂದಿರುವನು.'

**ಅನರಣ್ಯೇನ ಯತ್ಪೂರ್ವಂ ಶಪ್ತೋಽಹಂ ರಾಕ್ಷಸೇಶ್ವರಃ ।**
**ಉತ್ಪತ್ಸ್ಯತೇ ಚ ಮದ್ವಂಶೇ ಪರಮಾತ್ಮಾ ಸನಾತನಃ ॥ ೪೨ ॥**
**ತೇನ ತ್ವಂ ಪುತ್ರಪೌತ್ರೈಶ್ಚ ಬಾಂಧವೈಶ್ಚ ಸಮನ್ವಿತಃ ।**
**ಹನಿಷ್ಯಸೇ ನ ಸಂದೇಹ ಇತ್ಯುಕ್ತ್ವಾ ಮಾಂ ದಿವಂಗತಃ ॥ ೪೩ ॥**
**ಸ ಏವ ರಾಮಃ ಸಂಜಾತೋ ಮದರ್ಥೇ ಮಾಂ ಹನಿಷ್ಯತಿ ।**

೪೨-೪೩. ರಾಕ್ಷಸರಾಜನಾದ ನಾನು ಅನರಣ್ಯನೆಂಬ ರಾಜನಿಂದ ಹಿಂದೆ ಹೀಗೆ ಶಪಿಸಲ್ಪಟ್ಟಿದ್ದೆನು. ಹೇಗೆಂದರೆ : 'ಸನಾತನನಾದ ಪರಮಾತ್ಮನು ಮುಂದೆ ನನ್ನ

ವಂಶದಲ್ಲಿ ಹುಟ್ಟಲಿರುವನು ;ಅವನಿಂದ ನೀನು ಪುತ್ರಪೌತ್ರಬಂಧುಗಳೊಡಗೂಡಿ ಕೊಲ್ಲಲ್ಪಡುವೆ ; ಈ ಬಗ್ಗೆ ಸಂಶಯವಿಲ್ಲ'ಎಂದು ಹೇಳಿ ಆತನು ಸ್ವರ್ಗಕ್ಕೆ ಹೊರಟು ಹೋದನು. ಈಗ ಆ (ನಾರಾಯಣ)ನೇ ನನ್ನ ನಿಮಿತ್ತವಾಗಿ ರಾಮನಾಗಿ ಹುಟ್ಟಿರುವನು ; ನನ್ನನ್ನು ಕೊಲ್ಲಲಿರುವನು.

**ಕುಂಭಕರ್ಣಸ್ತು ಮೂಢಾತ್ಮಾ ಸದಾ ನಿದ್ರಾವಶಂ ಗತಃ ।**
**ತಂ ವಿಬೋಧ್ಯ ಮಹಾಸತ್ವಮಾನಯಂತು ಮಮಾಂತಿಕಮ್ ॥ ೪೪ ॥**
**ಇತ್ಯುಕ್ತಾಸ್ತೇ ಮಹಾಕಾಯಾಸ್ತೂರ್ಣಂ ಗತ್ವಾ ತು ಯತ್ನತಃ ।**
**ವಿಬೋಧ್ಯ ಕುಂಭಶ್ರವಣಂ ನಿನ್ಯೂ ರಾವಣಸನ್ನಿಧಿಮ್ ॥ ೪೫ ॥**
**ನಮಸ್ಕೃತ್ಯ ಸ ರಾಜಾನಮಾಸನೋಪರಿ ಸಂಸ್ಥಿತಃ ।**

೪೪-೪೫. ಮೂಢನಾದ ಕುಂಭಕರ್ಣನಾದರೊ, ಯಾವಾಗಲೂ ನಿದ್ರಾ ಪರವಶನಾಗಿರುವನು. ಬಹಳ ಬಲಶಾಲಿಯಾದ ಅವನನ್ನು ಎಚ್ಚರಿಸಿ ನನ್ನ ಹತ್ತಿರಕ್ಕೆ ಕರೆತನ್ನಿರಿ. ಹೀಗೆ ಹೇಳಲ್ಪಟ್ಟ ಆ ಮಹಾಬಲರಾದ ರಾಕ್ಷಸರು ಜಾಗ್ರತೆಯಾಗಿ ಹೋಗಿ ಪ್ರಯತ್ನಮಾಡಿ ಕುಂಭಕರ್ಣನನ್ನು ಎಬ್ಬಿಸಿ ರಾವಣನ ಸನ್ನಿಧಿಗೆ ಕರೆತಂದರು. ಅವನು ರಾಜನಿಗೆ ನಮಸ್ಕಾರಮಾಡಿ ಆಸನದ ಮೇಲೆ ಕುಳಿತನು.

**ತಮಾಹ ರಾವಣೋ ರಾಜಾ ಭ್ರಾತರಂ ದೀನಯಾ ಗಿರಾ ।**
**ಕುಂಭಕರ್ಣ ನಿಬೋಧ ತ್ವಂ ಮಹತ್ ಕಷ್ಟಮುಪಸ್ಥಿತಮ್ ॥ ೪೬ ॥**
**ರಾಮೇಣ ನಿಹತಾಃ ಶೂರಾಃ ಪುತ್ರಾಃ ಪೌತ್ರಾಶ್ಚ ಬಾಂಧವಾಃ ।**
**ಕಿಂ ಕರ್ತವ್ಯಮಿದಾನೀಂ ಮೇ ಮೃತ್ಯುಕಾಲ ಉಪಸ್ಥಿತೇ ॥ ೪೭ ॥**
**ಏಷ ದಾಶರಥೀ ರಾಮಃ ಸುಗ್ರೀವಸಹಿತೋ ಬಲೀ ।**
**ಸಮುದ್ರಂ ಸಬಲಸ್ತೀರ್ತ್ವಾ ಮೂಲಂ ನಃ ಪರಿಕೃಂತತಿ ॥ ೪೮ ॥**

೪೬-೪೮. ರಾಜನಾದ ರಾವಣನು ಸಹೋದರನಾದ ಆತನನ್ನು ಕುರಿತು ಹೀಗೆಂದನು : 'ಎಲೈ ಕುಂಭಕರ್ಣನೆ, ನೀನು ಕೇಳು. (ನನಗೆ) ದೊಡ್ಡ ಕಷ್ಟವು ಬಂದುಬಿಟ್ಟಿದೆ. ರಾಮನಿಂದ ಶೂರರಾದ (ನನ್ನ)ಪುತ್ರರೂ ಮೊಮ್ಮಕ್ಕಳೂ ಬಂಧುಗಳೂ ಕೊಲ್ಲಲ್ಪಟ್ಟಿರುವರು. ಈಗ ನನಗೆ ಮರಣಕಾಲವು ಒದಗಿದೆಯಾಗಿ ಏನು ಮಾಡಲಿ ? ಈ ದಶರಥಪುತ್ರನಾದ ಬಲಶಾಲಿಯಾದ ರಾಮನು ಸುಗ್ರೀವ ನೊಡಗೂಡಿ ಸೇನಾಸಮೇತನಾಗಿ ಸಮುದ್ರವನ್ನು ದಾಟಿಬಂದು ನಮ್ಮ ಬುಡ (ವಂಶ)ವನ್ನೇ ಕತ್ತರಿಸುತ್ತಿರುವನು.

**ಯೇ ರಾಕ್ಷಸಾ ಮುಖ್ಯತಮಾಸ್ತೇ ಹತಾ ವಾನರೈರ್ಯುಧಿ ।**
**ವಾನರಾಣಾಂ ಕ್ಷಯಂ ಯುದ್ಧೇ ನ ಪಶ್ಯಾಮಿ ಕದಾಚನ ॥ ೪೯ ॥**

**ನಾಶಯಸ್ವ ಮಹಾಬಾಹೋ ಯದರ್ಥಂ ಪರಿಬೋಧಿತಃ ।**
**ಭ್ರಾತುರರ್ಥೇ ಮಹಾಸತ್ತ್ವ ಕುರು ಕರ್ಮ ಸುದುಷ್ಕರಮ್ ॥ ೫೦ ॥**

೪೯-೫೦. ಮುಖ್ಯಮುಖ್ಯರಾದ ಯಾವಯಾವ ರಾಕ್ಷಸರಿದ್ದರೋ ಅವರೆಲ್ಲರೂ ಕಪಿಗಳಿಂದ ಸಾಯಿಸಲ್ಪಟ್ಟರು. ಆದರೆ ಕಪಿಗಳು ನಾಶವಾಗುವದನ್ನು ನಾನು ಯುದ್ಧದಲ್ಲಿ ನೋಡಲೇ ಇಲ್ಲ. ಆದ್ದರಿಂದ ಎಲೈ ಮಹಾಬಾಹುವೆ, ಮಹಾಬಲಿಷ್ಠನೆ, ನೀನು ಸಹೋದರನಿಗಾಗಿ ಅತ್ಯಂತಕಷ್ಟಸಾಧ್ಯವಾದ ಕೆಲಸವನ್ನು ಕೈಗೊಳ್ಳುವವನಾಗು. ಅದಕ್ಕಾಗಿಯೇ ಎಬ್ಬಿಸಲ್ಪಟ್ಟಿರುವೆಯಲ್ಲವೆ ?

**ಶ್ರುತ್ವಾ ತದ್ರಾವಣೇಂದ್ರಸ್ಯ ವಚನಂ ಪರಿದೇವಿತಮ್ ।**
**ಕುಂಭಕರ್ಣೋ ಜಹಾಸೋಚ್ಚೈಃ ವಚನಂ ಚೇದಮಬ್ರವೀತ್ ॥ ೫೧ ॥**
**ಪುರಾ ಮಂತ್ರವಿಚಾರೇ ತೇ ಗದಿತಂ ಯನ್ಮಯಾ ನೃಪ ।**
**ತದದ್ಯ ತ್ವಾಮುಪಗತಂ ಫಲಂ ಪಾಪಸ್ಯ ಕರ್ಮಣಃ ॥ ೫೨ ॥**
**ಪೂರ್ವಮೇವ ಮಯಾ ಪ್ರೋಕ್ತೋ ರಾಮೋ ನಾರಾಯಣಃ ಪರಃ ।**
**ಸೀತಾ ಚ ಯೋಗಮಾಯೇತಿ ಬೋಧಿತೋಽಪಿ ನ ಬುಧ್ಯಸೇ ॥ ೫೩ ॥**

೫೧-೫೩. ಕುಂಭಕರ್ಣನು ಆ ರಾವಣೇಂದ್ರನ ಶೋಕಾವಿಷ್ಟವಾದ ಮಾತನ್ನು ಕೇಳಿ ಗಟ್ಟಿಯಾಗಿ ನಕ್ಕು ಹೀಗೆಂದನು : 'ಎಲೈ ರಾಜನೆ, ಹಿಂದೆ ಮಂತ್ರಾಲೋಚನ ಸಮಯದಲ್ಲಿ ನಿನಗೆ ನಾನು ಹೇಳಿದ್ದು ಈಗ ನಿನಗೆ (ಅನುಭವಕ್ಕೆ) ಬರುತ್ತಿದೆ. ಇದು ಪಾಪಕರ್ಮದ ಫಲವೇ ಸರಿ. ನಾನು ಈ ಹಿಂದೆಯೇ ಪರಮಾತ್ಮನಾದ ನಾರಾಯಣನೇ ರಾಮನೆಂದೂ ಯೋಗಮಾಯೆಯೇ ಸೀತೆಯೆಂದೂ ತಿಳಿಸಿದೆನಾದರೂ ನೀನು ಅರಿತುಕೊಳ್ಳಲಿಲ್ಲ.

**ಏಕದಾಹಂ ವನೇ ಸಾನೌ ವಿಶಾಲಾಯಾಂ ಸ್ಥಿತೋ ನಿಶಿ ।**
**ದೃಷ್ಟೋ ಮಯಾ ಮುನಿಃ ಸಾಕ್ಷಾತ್ ನಾರದೋ ದಿವ್ಯದರ್ಶನಃ ॥ ೫೪ ॥**
**ತಮಬ್ರುವಂ ಮಹಾಭಾಗ ಕುತೋ ಗಂತಾಸಿ ಮೇ ವದ ।**
**ಇತ್ಯುಕ್ತೋ ನಾರದಃ ಪ್ರಾಹ ದೇವಾನಾಂ ಮಂತ್ರಣೇ ಸ್ಥಿತಃ ॥ ೫೫ ॥**
**ತತ್ರೋತ್ಪನ್ನಮುದಂತಂ ತೇ ವಕ್ಷ್ಯಾಮಿ ಶೃಣು ತತ್ತ್ವತಃ ।**

೫೪-೫೫. ಒಮ್ಮೆ ನಾನು ವಿಶಾಲಾ ಎಂಬ ಕಾಡಿನ ತಪ್ಪಲುಪ್ರದೇಶದಲ್ಲಿ ರಾತ್ರಿಯ ವೇಳೆಯಲ್ಲಿ ನಿಂತಿದ್ದೆನು. ದಿವ್ಯರೂಪನಾದ ನಾರದಮುನಿಯು ಆಗ ನನಗೆ ಎದುರಿಗೆ ಕಾಣಿಸಿಕೊಂಡನು. 'ಮಹಾತ್ಮನೆ, ಎಲ್ಲಿಗೆ ಹೋಗುತ್ತಿರುವೆ ? ನನಗೆ ಹೇಳು' ಎಂದು ನಾನು ಕೇಳಿದೆನು. ಹೀಗೆ ಕೇಳಲ್ಪಟ್ಟ ನಾರದನು ದೇವತೆಗಳ ಆಲೋಚನಾ (ಸಭೆ) ಯಲ್ಲಿ (ಕೇಳಿದ್ದನ್ನು) ತಿಳಿದವನಾಗಿದ್ದುದರಿಂದ ಹೇಳಿದನು. ಅಲ್ಲಿ ನಡೆದದ್ದೇನೆಂದರೆ ಆ ವೃತ್ತಾಂತವನ್ನು ಕೇಳು.

**ಯುವಾಭ್ಯಾಂ ಪೀಡಿತಾ ದೇವಾಃ ಸರ್ವೇ ವಿಷ್ಣುಮುಪಾಗತಾಃ ।**
**ಊಚುಸ್ತೇ ದೇವದೇವೇಶಂ ಸ್ತುತ್ವಾ ಭಕ್ತ್ಯಾ ಸಮಾಹಿತಾಃ ॥ ೫೬ ॥**
**ಜಹಿ ರಾವಣಮಕ್ಷೋಭ್ಯಂ ದೇವ ತ್ರೈಲೋಕ್ಯಕಂಟಕಮ್ ।**
**ಮಾನುಷೇಣ ಮೃತಿಸ್ತಸ್ಯ ಕಲ್ಪಿತಾ ಬ್ರಹ್ಮಣಾ ಪುರಾ ॥ ೫೭ ॥**
**ಅತಸ್ತ್ವಂ ಮಾನುಷೋ ಭೂತ್ವಾ ಜಹಿ ರಾವಣಕಂಟಕಮ್ ।**
**ತಥೇತ್ಯಾಹ ಮಹಾವಿಷ್ಣುಃ ಸತ್ಯಸಂಕಲ್ಪ ಈಶ್ವರಃ ॥ ೫೮ ॥**

೫೬-೫೮. (ನಾರದನು ಹೀಗೆಂದನು) : ನಿಮ್ಮಿಬ್ಬರಿಂದ ತೊಂದರೆಗೊಳಗಾಗಿರುವ ದೇವತೆಗಳೆಲ್ಲರೂ ವಿಷ್ಣುವಿನ ಬಳಿಗೆ ಬಂದು ದೇವದೇವನಾದ ಆತನನ್ನು ಭಕ್ತಿಯಿಂತ ಸಮಾಧಾನಚಿತ್ತರಾಗಿ ಸ್ತೋತ್ರಮಾಡಿ 'ಎಲೈ ದೇವನೆ, ಮೂರು ಲೋಕಗಳಿಗೂ ಅಹಿತಕರನಾಗಿರುವ ಸಹಿಸಲಸಾಧ್ಯನಾದ ರಾವಣನನ್ನು ನಾಶಗೊಳಿಸುವವನಾಗು. ಹಿಂದೆ ಬ್ರಹ್ಮನು ಆತನಿಗೆ ಮನುಷ್ಯನಿಂದಲೇ ಮರಣವುಂಟಾಗಲೆಂದು ಏರ್ಪಡಿಸಿರುವನು. ಆದ್ದರಿಂದ ನೀನು ಮಾನವನಾಗಿ ಅವತರಿಸಿ ರಾವಣನೆಂಬ ಆ ದುಷ್ಟನನ್ನು ಕೊಲ್ಲುವವನಾಗು '- ಎಂದು (ಬೇಡಿಕೊಂಡರು). ಸತ್ಯಸಂಕಲ್ಪನೂ ಈಶ್ವರನೂ ಆದ ಮಹಾವಿಷ್ಣುವು ಹಾಗೆಯೇ ಆಗಲಿ ! ಎಂದನು.

**ಜಾತೋ ರಘುಕುಲೇ ದೇವೋ ರಾಮ ಇತ್ಯಭಿವಿಶ್ರುತಃ ।**
**ಸ ಹನಿಷ್ಯತಿ ವಃ ಸರ್ವಾನಿತ್ಯುಕ್ತ್ವಾ ಪ್ರಯಯೌ ಮುನಿಃ ॥ ೫೯ ॥**
**ಅತೋ ಜಾನೀಹಿ ರಾಮಂ ತ್ವಂ ಪರಂ ಬ್ರಹ್ಮ ಸನಾತನಮ್ ।**
**ತ್ಯಜ ವೈರಂ ಭಜಸ್ವಾದ್ಯ ಮಾಯಾಮಾನುಷವಿಗ್ರಹಮ್ ॥ ೬೦ ॥**
**ಭಜತೋ ಭಕ್ತಿಭಾವೇನ ಪ್ರಸೀದತಿ ರಘೂತ್ತಮಃ ।**
**ಭಕ್ತಿರ್ಜನಿತ್ರೀ ಜ್ಞಾನಸ್ಯ ಭಕ್ತಿರ್ಮೋಕ್ಷಪ್ರದಾಯಿನೀ ॥ ೬೧ ॥**

೫೯-೬೧. 'ರಘುವಂಶದಲ್ಲಿ ಆ ದೇವನು ರಾಮನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಹುಟ್ಟಿರುವನು. ಅವನು ನಿಮ್ಮೆಲ್ಲರನ್ನೂ ಸಂಹರಿಸಲಿರುವನು' ಎಂದು ಹೇಳಿ ಆ ಋಷಿಯು ಹೊರಟುಹೋದನು. ಆದ್ದರಿಂದ ಮಾಯೆಯಿಂದ ಮನುಷ್ಯ ಶರೀರವನ್ನು ಪಡೆದಿರುವ ರಾಮನನ್ನು ಸನಾತನನಾದ ಪರಬ್ರಹ್ಮನೆಂದೇ ತಿಳಿಯುವನಾಗು. ದ್ವೇಷವನ್ನು ಬಿಟ್ಟು ಭಜಿಸುವವನಾಗು. ಭಕ್ತಿಭಾವದಿಂದ ಸೇವಿಸಿದವರಿಗೆ ಆ ರಘುಶ್ರೇಷ್ಠನು ಪ್ರಸನ್ನನಾಗುವನು. ಭಕ್ತಿಯು ಜ್ಞಾನವನ್ನುಂಟು ಮಾಡಿ ಮೋಕ್ಷವನ್ನು ಕೊಡತಕ್ಕದ್ದಾಗಿರುವದು.

**ಭಕ್ತಿಹೀನೇನ ಯತ್ಕಿಂಚಿತ್ ಕೃತಂ ಸರ್ವಮಸತ್ಸಮಮ್ ।**
**ಅವತಾರಾಃ ಸುಬಹವೋ ವಿಷ್ಣೋರ್ಲೀಲಾನುಕಾರಿಣಃ ॥ ೬೨ ॥**

**ತೇಷಾಂ ಸಹಸ್ರಸದೃಶೋ ರಾಮೋ ಜ್ಞಾನಮಯಃ ಶಿವಃ ।**
**ರಾಮಂ ಭಜಂತಿ ನಿಪುಣಾ ಮನಸಾ ವಚಸಾಽನಿಶಮ್ ॥ ೬೩ ॥**
**ಅನಾಯಾಸೇನ ಸಂಸಾರಂ ತೀರ್ತ್ವಾ ಯಾಂತಿ ಹರೇಃ ಪದಮ್ ।**
**ಯೇ ರಾಮಮೇವ ಸತತಂ ಭುವಿ ಶುದ್ಧಸತ್ತ್ವಾ**
**ಧ್ಯಾಯಂತಿ ತಸ್ಯ ಚರಿತಾನಿ ಪಠಂತಿ ಸಂತಃ ।**
**ಮುಕ್ತಾಸ್ತ ಏವ ಭವಭೋಗಮಹಾಹಿಪಾಶೈಃ**
**ಸೀತಾಪತೇಃ ಪದಮನಂತಸುಖಂ ಪ್ರಯಾಂತಿ ॥ ೬೪ ॥**

೬೨-೬೪. ಭಕ್ತಿಯಿಲ್ಲದವನಾಗಿ ಏನನ್ನು ಮಾಡಿದರೂ ಅದು ಮಾಡಿದಂತಲ್ಲ. ಲೀಲಾಕಾರ್ಯಗಳನ್ನು ನಿರ್ವಹಿಸುವ ಅವತಾರಗಳನ್ನೆತ್ತುವ ವಿಷ್ಣುವಿನ ಸಾವಿರಾರು ಮಹಿಮೆಗಳಿಗೆ ಸಮಾನನಾದ ರಾಮನು ಮಂಗಳಕರನಾದ ಜ್ಞಾನರೂಪನೇ ಆಗಿರುವನು. ಮಾತಿನಿಂದಲೂ ಮನಸ್ಸಿನಿಂದಲೂ ಯಾವಾಗಲೂ ರಾಮನನ್ನೇ ಸೇವಿಸುವವರು ಜಾಣರೆನಿಸಿ ಆಯಾಸವಿಲ್ಲದೆ ಸಂಸಾರವನ್ನು ದಾಟಿದವರಾಗಿ ಶ್ರೀಹರಿಯ ಪದವಿಯನ್ನು ಸೇರುವರು. ಯಾವ ಸಜ್ಜನರು ಶುದ್ಧಮನಸ್ಕರಾಗಿ ಸತತವೂ ರಾಮನನ್ನೇ ಧ್ಯಾನಮಾಡುತ್ತಾ ಆತನ ಚರಿತ್ರೆಗಳನ್ನು ಓದುತ್ತಾ ಇರುವರೋ ಅವರೇ ಸಂಸಾರಭೋಗವೆಂಬ ದೊಡ್ಡ ಸರ್ಪದ ಕಟ್ಟಿನಿಂದ ಬಿಡುಗಡೆಯನ್ನು ಹೊಂದಿದವರಾಗಿ ಅಪರಿಮಿತಾನಂದ ರೂಪವಾದ ಸೀತಾಪತಿಯ ಪದವಿಯನ್ನು ಸೇರುವರು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಸಪ್ತಮಃ ಸರ್ಗಃ**

-----------

## ಎಂಟನೆಯ ಸರ್ಗ

**ಶ್ರೀಮಹಾದೇವ ಉವಾಚ -**

**ಕುಂಭಕರ್ಣವಚಃ ಶ್ರುತ್ವಾ ಭ್ರುಕುಟೀವಿಕಟಾನನಃ ।**
**ದಶಗ್ರೀವೋ ಜಗಾದೇದಮಾಸನಾದುತ್ಪತನ್ನಿವ ॥ ೧ ॥**
**ತ್ವಮಾನೀತೋ ನ ಮೇ ಜ್ಞಾನಬೋಧನಾಯ ಸುಬುದ್ಧಿಮಾನ್ ।**
**ಮಯಾ ಕೃತಂ ಸಮೀಕೃತ್ಯ ಯುಧ್ಯಸ್ವ ಯದಿ ರೋಚತೇ ॥ ೨ ॥**
**ನೋ ಚೇದ್ ಗಚ್ಛ ಸುಷುಪ್ತ್ಯರ್ಥಂ ನಿದ್ರಾ ತ್ವಾಂ ಬಾಧತೇಽಧುನಾ ॥**

೧-೨. ಶ್ರೀ ಮಹಾದೇವನಿಂತೆಂದನು : ಕುಂಭಕರ್ಣನ ಮಾತನ್ನು ಕೇಳಿ ದಶಕಂಠನು ಹುಬ್ಬುಗಳನ್ನು ಗಂಟಿಕ್ಕಿದವನಾಗಿ ತನ್ನ ಪೀಠದಿಂದ ನೆಗೆಯುವಂತೆ

(ಆರ್ಭಟಿಸುತ್ತಾ) ಹೀಗೆಂದನು :''ಬುದ್ಧಿವಂತನಾದ ನೀನು ಈಗ ನನಗೆ ಜ್ಞಾನೋಪದೇಶಕ್ಕಾಗಿ ಕರೆತರಲ್ಪಟ್ಟಿಲ್ಲ. ನಿನಗೆ ಇಷ್ಟವಾದರೆ ನಾನು ಮಾಡಿರುವದನ್ನು (ಅರಿತು) ಹೊಂದಿಕೊಂಡು ಯುದ್ಧ ಮಾಡುವವನಾಗು. ಹಾಗಿಲ್ಲವಾದರೆ ಈಗ ನಿದ್ರೆಯು ನಿನಗೆ ಪೀಡಿಸುತ್ತಿದೆಯಾದ್ದರಿಂದ. ಗಾಢನಿದ್ರೆ ಮಾಡಲು ಇಲ್ಲಿಂದ ಹೊರಡು'' (ಎಂದನು).

**ರಾವಣಸ್ಯ ವಚಃ ಶ್ರುತ್ವಾ ಕುಂಭಕರ್ಣೋ ಮಹಾಬಲಃ ।**
**ರುಷ್ಟೋಽಯಮಿತಿ ವಿಜ್ಞಾಯ ತೂರ್ಣಂ ಯುದ್ಧಾಯ ನಿರ್ಯಯೌ ॥ ೩ ॥**
**ಸ ಲಂಘಯಿತ್ವಾ ಪ್ರಾಕಾರಂ ಮಹಾಪರ್ವತಸನ್ನಿಭಃ ।**
**ನಿರ್ಯಯೌ ನಗರಾತ್ ತೂರ್ಣಂ ಭೀಷಯನ್ ಹರಿಸೈನಿಕಾನ್ ॥ ೪ ॥**
**ಸ ನನಾದ ಮಹಾನಾದಂ ಸಮುದ್ರಮಭಿನಾದಯನ್ ।**
**ವಾನರಾನ್ ಕಾಲಯಾಮಾಸ ಬಾಹುಭ್ಯಾಂ ಭಕ್ಷಯನ್ ರುಷಾ ॥ ೫ ॥**

೩-೫. ರಾವಣನ ಮಾತನ್ನು ಕೇಳಿ ಮಹಾಬಲಶಾಲಿಯಾದ ಕುಂಭಕರ್ಣನು 'ಓಹೋ, ಇವನು ಸಿಟ್ಟಾಗಿದ್ದಾನೆ' ಎಂದು ತಿಳಿದು ಬೇಗನೆ ಯುದ್ಧಕ್ಕೆ ಹೊರಟನು. ದೊಡ್ಡಬೆಟ್ಟದಂತಿರುವ ಅವನು (ಲಂಕೆಯ) ಪ್ರಾಕಾರವನ್ನು ದಾಟಿ ಊರಿನಿಂದ ಹೊರಬಿದ್ದು ಕಪಿಸೈನ್ಯಕ್ಕೆಲ್ಲ ಭಯವನ್ನುಂಟುಮಾಡುತ್ತಾ ನಡೆದನು. ಮತ್ತು ಅವನು ಸಮುದ್ರವು ಪ್ರತಿಧ್ವನಿಗೊಡುವಷ್ಟು ಮಟ್ಟಿಗೆ ಗಟ್ಟಿಯಾಗಿ ಕಿರುಚಿದನು. ಕೋಪದಿಂದ ಕಪಿಗಳನ್ನು ತೋಳುಗಳಿಂದ ಕೂಡಿಹಾಕಿ ತಿನ್ನುತ್ತಿದ್ದನು.

**ಕುಂಭಕರ್ಣಂ ತದಾ ದೃಷ್ಟ್ವಾ ಸಪಕ್ಷಮಿವ ಪರ್ವತಮ್ ।**
**ದುದ್ರುವುರ್ವಾನರಾಃ ಸರ್ವೇ ಕಾಲಾಂತಕಮಿವಾಖಿಲಾಃ ॥ ೬ ॥**
**ಭ್ರಮಂತಂ ಹರಿವಾಹಿನ್ಯಾಂ ಮುದ್ಗರೇಣ ಮಹಾಬಲಮ್ ।**
**ಕಾಲಯಂತಂ ಹರೀನ್ ವೇಗಾದ್ ಭಕ್ಷಯಂತಂ ಸಮಂತತಃ ॥ ೭ ॥**
**ಚೂರ್ಣಯಂತಂ ಮುದ್ಗರೇಣ ಪಾಣಿಪಾದೈರನೇಕಧಾ ।**

೬-೭. ರೆಕ್ಕೆಗಳುಳ್ಳ ಪರ್ವತದಂತಿರುವ ಹಾಗೂ ಕಾಲಯಮನಂತಿರುವ ಕುಂಭಕರ್ಣನನ್ನು ಆಗ ಕಂಡು ಎಲ್ಲಾ ಸಮಸ್ತಕಪಿಗಳೂ ಓಡಿಹೋದರು. ಮಹಾಬಲ ಶಾಲಿಯಾದ ಹಾಗೂ ಮುದ್ಗರವೆಂಬ ಆಯುಧವನ್ನು ಹಿಡಿದು ಕಪಿಸೈನ್ಯದಲ್ಲಿ ತಿರುಗುತ್ತಿರುವ ಮತ್ತು ಕಪಿಗಳನ್ನು ಸುತ್ತಲೂ ಕೂಡಿಹಾಕುತ್ತಾ ಬೇಗನೆ ತಿನ್ನುತ್ತಿರುವ, ಮತ್ತು ಮುದ್ಗರದಿಂದಲೂ ಕೈಕಾಲುಗಳಿಂದಲೂ ನಾನಾಪ್ರಕಾರವಾಗಿ (ಕಪಿಗಳನ್ನು) ಪುಡಿ ಮಾಡುತ್ತಿರುವ (ಅವನನ್ನು ಕಂಡು ಓಡಿದರು)

**ಕುಂಭಕರ್ಣಂ ತದಾ ದೃಷ್ಟ್ವಾ ಗದಾಪಾಣಿರ್ವಿಭೀಷಣಃ ।**
**ನನಾಮ ಚರಣಂ ತಸ್ಯ ಭ್ರಾತುರ್ಜ್ಯೇಷ್ಠಸ್ಯ ಬುದ್ಧಿಮಾನ್ ॥ ೮ ॥**
**ವಿಭೀಷಣೋಽಹಂ ಭ್ರಾತುರ್ಮೇ ದಯಾಂ ಕುರು ಮಹಾಮತೇ ।**
**ರಾವಣಸ್ತು ಮಯಾ ಭ್ರಾತಃ ಬಹುಧಾ ಪರಿಬೋಧಿತಃ ॥ ೯ ॥**
**ಸೀತಾಂ ದೇಹೀತಿ ರಾಮಾಯ ರಾಮಃ ಸಾಕ್ಷಾಜ್ಜನಾರ್ದನಃ ।**
**ನ ಶೃಣೋತಿ ಚ ಮಾಂ ಹಂತುಂ ಖಡ್ಗಮುದ್ಯಮ್ಯ ಚೋಕ್ತವಾನ್ ॥ ೧೦ ॥**
**ಧಿಕ್ ತ್ವಾ ಗಚ್ಛೇತಿ ಮಾಂ ಹತ್ವಾ ಪದಾ ಪಾಪಿಭಿರಾವೃತಃ ।**
**ಚತುರ್ಭಿಃ ಮಂತ್ರಿಭಿಃ ಸಾರ್ಧಂ ರಾಮಂ ಶರಣಮಾಗತಃ ॥ ೧೧ ॥**

೮-೧೧. ಗದಾಧಾರಿಯಾದ ಬುದ್ಧಿವಂತನಾದ ವಿಭೀಷಣನು ಆ ಕುಂಭಕರ್ಣನನ್ನು ಕಂಡು ಆ ಹಿರಿಯಣ್ಣನ ಪಾದಗಳಿಗೆ ನಮಸ್ಕರಿಸಿದನು. 'ನಾನು ವಿಭೀಷಣನು ; ಎಲೈ ಮಹಾಮತಿಯೆ, ಸೋದರನಾದ ನನ್ನ ಮೇಲೆ ದಯೆಯನ್ನಿಡು. ಸೋದರನೆ, ಪಾಪಿಗಳ ಗುಂಪಿನಿಂದ ಕೂಡಿದ ರಾವಣನು ನನ್ನಿಂದ ಬಹಳವಾಗಿ ಎಚ್ಚರಿಸಲ್ಪಟ್ಟನು. ಹೇಗೆಂದರೆ : ರಾಮನು ಸಾಕ್ಷಾತ್ ಮಹಾವಿಷ್ಣುವು. ಅವನಿಗೆ ಸೀತೆಯನ್ನು ಕೊಟ್ಟುಬಿಡು - ಎಂದು ನಾನು ಹೇಳಿದಾಗ ನನ್ನ ಮಾತನ್ನು ಕೇಳಲಿಲ್ಲ. ಮತ್ತು ಕತ್ತಿಯನ್ನೆತ್ತಿ 'ನಿನಗೆ ಧಿಕ್ಕಾರವಿರಲಿ ! ಹೊರಡು ಇಲ್ಲಿಂದ'- ಎಂದು ಗದರಿಸಿ ಕಾಲಿನಿಂದ ಒದ್ದುಬಿಟ್ಟನು. ಆಗ ನಾನು ನಾಲ್ವರು ಮಂತ್ರಿಗಳೊಡನೆ ರಾಮನಿಗೆ ಶರಣುಬಂದೆನು.

**ತಚ್ಛ್ರುತ್ವಾ ಕುಂಭಕರ್ಣೋಽಪಿ ಜ್ಞಾತ್ವಾ ಭ್ರಾತರಮಾಗತಮ್ ।**
**ಸಮಾಲಿಂಗ್ಯ ಚ ವತ್ಸ ತ್ವಂ ಜೀವ ರಾಮಪದಾಶ್ರಯಾತ್ ॥ ೧೨ ॥**
**ಕುಲಸಂರಕ್ಷಣಾರ್ಥಾಯ ರಾಕ್ಷಸಾನಾಂ ಹಿತಾಯ ಚ ।**
**ಮಹಾಭಾಗವತೋಽಸಿ ತ್ವಂ ಪುರಾ ಮೇ ನಾರದಾತ್ ಶ್ರುತಮ್ ॥ ೧೩ ॥**
**ಗಚ್ಛ ತಾತ ಮಮೇದಾನೀಂ ದೃಶ್ಯತೇ ನ ಚ ಕಿಂಚನ ।**
**ಮದೀಯೋ ವಾ ಪರೋ ವಾಪಿ ಮದಮತ್ತವಿಲೋಚನಃ ॥ ೧೪ ॥**
**ಇತ್ಯುಕ್ತೋಽಶ್ರುಮುಖೋ ಭ್ರಾತುಶ್ಚರಣಾವಭಿವಂದ್ಯ ಸಃ ।**
**ರಾಮಪಾರ್ಶ್ವಮುಪಾಗತ್ಯ ಚಿಂತಾಪರ ಉಪಸ್ಥಿತಃ ॥ ೧೫ ॥**

೧೨-೧೫. (ಹೀಗೆಂದು ವಿಭೀಷಣನು ಹೇಳಿದ್ದನ್ನು) ಕೇಳಿ ಕುಂಭಕರ್ಣನೂ ಸಹ ತನ್ನ ಬಳಿಗೆ ಬಂದಿದ್ದ ಸಹೋದರನನ್ನು ಗುರುತಿಸಿ ಆಲಿಂಗಿಸಿಕೊಂಡು 'ಮಗು ರಾಮನ ಪಾದಗಳನ್ನು ಆಶ್ರಯಿಸಿರುವ ನೀನು ಚೆನ್ನಾಗಿ ಬದುಕು. ರಾಕ್ಷಸಕುಲವನ್ನು ಕಾಪಾಡುವದಕ್ಕೂ ಅವರ ಹಿತಕ್ಕೂ ಕಾರಣನಾಗಿ ಬಾಳು. ನೀನು ಮಹಾಭಾಗವತನೆಂದು ಹಿಂದೆ ನಾನು ನಾರದರಿಂದ ಕೇಳಿದ್ದೆನು. ಈಗಲಾದರೊ, ಅಪ್ಪ , ಹೊರಡು.

ನನಗೆ ಮದವೇರಿದ ಕಣ್ಣುಗಳ ದೆಸೆಯಿಂದ ನನ್ನವನೆಂದಾಗಲಿ, ಬೇರೊಬ್ಬನೆಂದಾಗಲಿ ಏನೂ ಕಾಣುತ್ತಿಲ್ಲ' ಎಂದನು. ಹೀಗೆಂದು ಹೇಳಲ್ಪಟ್ಟ ವಿಭೀಷಣನು ಕಣ್ಣೀರು ತುಂಬಿದ ಮುಖವುಳ್ಳವನಾಗಿ ಸೋದರನ ಪಾದಗಳಿಗೆ ನಮಸ್ಕರಿಸಿ ರಾಮನ ಸಮೀಪಕ್ಕೆ ಬಂದು ಚಿಂತಾಪರನಾಗಿ ನಿಂತನು.

**ಕುಂಭಕರ್ಣೋऽಪಿ ಹಸ್ತಾಭ್ಯಾಂ ಪಾದಾಭ್ಯಾಂ ಪೇಷಯನ್ ಹರೀನ್ ।**
**ಚಚಾರ ವಾನರೀಂ ಸೇನಾಂ ಕಾಲಯನ್ ಗಂಧಹಸ್ತಿವತ್ ॥ ೧೬ ॥**
**ದೃಷ್ಟ್ವಾ ತಂ ರಾಘವಃ ಕ್ರುದ್ಧೋ ವಾಯುವ್ಯಂ ಶಸ್ತ್ರಮಾದರಾತ್ ।**
**ಚಿಕ್ಷೇಪ ಕುಂಭಕರ್ಣಾಯ ತೇನ ಚಿಚ್ಛೇದ ರಕ್ಷಸಃ ॥ ೧೭ ॥**
**ಸಮುದ್ಗರಂ ದಕ್ಷಹಸ್ತಂ ತೇನ ಘೋರಂ ನನಾದ ಸಃ ।**

೧೬-೧೭. ಕುಂಭಕರ್ಣನಾದರೊ, ಎರಡು ಕೈಗಳಿಂದಲೂ ಕಾಲುಗಳಿಂದಲೂ ಕಪಿಗಳನ್ನು ಅರೆದುಹಾಕುತ್ತಾ ಕೊಬ್ಬಿದ ಆನೆಯಂತೆ ಕಪಿಸೈನ್ಯವನ್ನೆಲ್ಲ ಹೊಕ್ಕು ನಾಶ ಮಾಡುತ್ತಾ ತಿರುಗಿದನು. ರಾಮನು ಅವನನ್ನು ಕಂಡು ಕೋಪಗೊಂಡವನಾಗಿ ವಾಯವ್ಯ ವೆಂಬ ಶಸ್ತ್ರವನ್ನು ತೆಗೆದುಕೊಂಡು ಸಂಭ್ರಮದಿಂದ ಕುಂಭಕರ್ಣನ ಮೇಲೆ ಎಸೆದನು. ಅದು ರಾಕ್ಷಸನ ಮುದ್ಗರಾಯುಧದಿಂದ ಕೂಡಿದ್ದ ಬಲಗೈಯನ್ನು ಕತ್ತರಿಸಿತು. ಇದರಿಂದ ಅವನು ಗಟ್ಟಿಯಾಗಿ ಕಿರಿಚಿಕೊಂಡನು.

**ಸ ಹಸ್ತಃ ಪತಿತೋ ಭೂಮೌ ಅನೇಕಾನರ್ದಯನ್ ಕಪೀನ್ ।**
**ಪರ್ಯಂತಮಾಶ್ರಿತಾಃ ಸರ್ವೇ ವಾನರಾ ಭಯವೇಪಿತಾಃ ॥ ೧೮ ॥**
**ರಾಮರಾಕ್ಷಸಯೋರ್ಯುದ್ಧಂ ಪಶ್ಯಂತಃ ಪರ್ಯವಸ್ಥಿತಾಃ ।**
**ಕುಂಭಕರ್ಣಶ್ಛಿನ್ನಹಸ್ತಃ ಶಾಲಮುದ್ಯಮ್ಯ ವೇಗತಃ ॥ ೧೯ ॥**
**ಸಮರೇ ರಾಘವಂ ಹಂತುಂ ದುದ್ರಾವ ತಮಥೋऽಚ್ಛಿನತ್ ।**
**ಶಾಲೇನ ಸಹಿತಂ ವಾಮಹಸ್ತಮೈಂದ್ರೇಣ ರಾಘವಃ ॥ ೨೦ ॥**

೧೮-೨೦. ಆ ಕತ್ತರಿಸಲ್ಪಟ್ಟ ಕೈಯು ಅನೇಕ ಕಪಿಗಳನ್ನು ಮರ್ದನಮಾಡುತ್ತ ನೆಲದಮೇಲೆ ಬಿದ್ದಿತು. ಭಯದಿಂದ ನಡುಗುತ್ತಾ ಕಪಿಗಳೆಲ್ಲರೂ ದಿಕ್ಕುಗಳ ಕೊನೆಗೆ ಓಡಿಹೋಗಿ ರಾಮನಿಗೂ ರಾಕ್ಷಸನಿಗೂ ನಡೆಯುತ್ತಿದ್ದ ಯುದ್ಧವನ್ನು ನೋಡುತ್ತಾ ನಿಂತುಕೊಂಡರು. ಕತ್ತರಿಸಿದ ಕೈಯುಳ್ಳ ಕುಂಭಕರ್ಣನು ಸಾಲುಮರಗಳನ್ನೆತ್ತಿಕೊಂಡು ವೇಗದಿಂದ ರಾಮನನ್ನು ಕೊಲ್ಲಲು ಯುದ್ಧರಂಗದಲ್ಲಿ ಓಡಿದನು. ಅನಂತರ ಆ ಮರಸಹಿತವಾದ ಎಡಗೈಯನ್ನೂ ರಾಮನು ಐಂದ್ರಾಸ್ತ್ರದಿಂದ ಕತ್ತರಿಸಿದನು.

**ಭಿನ್ನಬಾಹುಮಥಾಯಂತರ ನರ್ದಂತಂ ವೀಕ್ಷ್ಯ ರಾಘವಃ ।**
**ದ್ವಾವರ್ಧಚಂದ್ರೌ ನಿಶಿತಾವಾದಾಯಾಸ್ಯ ಪದದ್ವಯಮ್ ॥ ೨೧ ॥**

**ಚಿಚ್ಛೇದ ಪತಿತೌ ಪಾದೌ ಲಂಕಾದ್ವಾರಿ ಮಹಾಸ್ವನೌ ।**
**ನಿಕೃತ್ತಪಾಣಿಪಾದೋऽಪಿ ಕುಂಭಕರ್ಣೋऽತಿಭೀಷಣಃ ॥ ೨೨ ॥**
**ವಡವಾಮುಖವದ್ ವಕ್ತ್ರಂ ವ್ಯಾದಾಯ ರಘುನಂದನಮ್।**
**ಅಭಿದುದ್ರಾವ ನಿನದನ್ ರಾಹುಶ್ಚಂದ್ರಮಸಂ ಯಥಾ ॥ ೨೩ ॥**

೨೧-೨೩. ಕತ್ತರಿಸಲ್ಪಟ್ಟ ತೋಳುಗಳುಳ್ಳ ಆ ರಾಕ್ಷಸನು ಘರ್ಜನೆ ಮಾಡುತ್ತಾ ಬರುತ್ತಿರುವದನ್ನು ಕಂಡು ರಾಮನು ತೀಕ್ಷ್ಣವಾದ ಎರಡು ಅರ್ಧ ಚಂದ್ರಾಕಾರದ ಬಾಣ ಗಳನ್ನು ತೆಗೆದುಕೊಂಡು ಅವನ ಎರಡು ಕಾಲುಗಳನ್ನೂ ಕತ್ತರಿಸಿಬಿಟ್ಟನು. ಆ ಕಾಲುಗಳು ಕತ್ತರಿಸಲ್ಪಟ್ಟವನಾದರೂ ಭಯಂಕರನಾಗಿದ್ದ ಕುಂಭಕರ್ಣನು ಬಡಬಾಗ್ನಿಯಂತೆ ಬಾಯನ್ನು ತೆರೆದುಕೊಂಡು ರಾಮನನ್ನು ಎದುರಿಸಿ ಸಿಂಹನಾದಮಾಡುತ್ತಾ - ರಾಹುವು ಚಂದ್ರನನ್ನು ಹೇಗೋ ಹಾಗೆ - ನುಗ್ಗಿ ಬರುತ್ತಿದ್ದನು.

**ಅಪೂರಯತ್ ಸಿತಾಗ್ರೈಶ್ಚ ಸಾಯಕೈಸ್ತದ್ರಘೂತ್ತಮಃ ।**
**ಶರಪೂರಿತವಕ್ತ್ರೋऽಸೌ ಚುಕ್ರೋಶಾತಿಭಯಂಕರಃ ॥ ೨೪ ॥**
**ಅಥ ಸೂರ್ಯಪ್ರತೀಕಾಶಂ ಐಂದ್ರಂ ಶರಮನುತ್ತಮಮ್ ।**
**ವಜ್ರಾಶನಿಸಮಂ ರಾಮಶ್ಚಿಕ್ಷೇಪಾಸುರಮೃತ್ಯವೇ ॥ ೨೫ ॥**
**ಸ ತತ್ಪರ್ವತಸಂಕಾಶಂ ಸ್ಫುರತ್ಕುಂಡಲದಂಷ್ಟ್ರಕಮ್**
**ಚಕರ್ತ ರಕ್ಷೋऽಧಿಪತೇಃ ಶಿರೋ ವೃತ್ರಮಿವಾಶನಿಃ ॥ ೨೬ ॥**
**ತಚ್ಛಿರಃ ಪತಿತಂ ಲಂಕಾದ್ವಾರಿ ಕಾಯೋ ಮಹೋದಧೌ ।**
**ಶಿರೋऽಸ್ಯ ರೋಧಯನ್ ದ್ವಾರಂ ಕಾಯೋ ನಕ್ರಾದ್ಯಚೂರ್ಣಯತ್॥ ೨೭ ॥**

೨೪-೨೭. ಆ ತೆರೆದ ಬಾಯನ್ನು ಶ್ರೀರಾಮನು ಚೂಪಾದ ತುದಿಗಳುಳ್ಳ ಬಾಣ ಗಳಿಂದ ತುಂಬಿದನು. ಬಾಣಗಳಿಂದ ಗಿಡಗಾಯಿಸಿಕೊಂಡ ಮುಖವುಳ್ಳ ಆ ರಾಕ್ಷಸನು ಅತಿ ಭಯಂಕರವಾಗಿ ಕೂಗಿದನು. ಅನಂತರ ಸೂರ್ಯನಂತೆ ಹೊಳೆಯುವ ಅಮೋಘವಾದ ವಜ್ರಾಯುಧಸಮಾನವಾದ ಐಂದ್ರಬಾಣವನ್ನು ರಾಮನು ರಾಕ್ಷಸ ನೆಂಬ ಆ ಮೃತ್ಯುವಿನ ಮೇಲೆ ಎಸೆದನು. ಅದು ಪರ್ವತಕ್ಕೆ ಸಮಾನವಾದ ಹಾಗೂ ಹೊಳೆಯುತ್ತಿರುವ ಕುಂಡಲಗಳಿಂದ ಅಲಂಕೃತವಾದ ಮತ್ತು ಕೋರೆದಾಡೆಗಳಿಂದ ಕೂಡಿದ ರಾಕ್ಷಸಾಧಿಪತಿಯ ತಲೆಯನ್ನು - ವಜ್ರಾಯುಧವು ವೃತ್ರಾಸುರನ ತಲೆಯನ್ನು ಹೇಗೋ ಹಾಗೆ- ಕತ್ತರಿಸಿಬಿಟ್ಟಿತು. ಆ ತಲೆಯು ಲಂಕೆಯ ಬಾಗಿಲಲ್ಲಿಯೂ ಶರೀರವು ಸಮುದ್ರದಲ್ಲಿಯೂ ಬಿದ್ದಿತು. ತಲೆಯು ಲಂಕೆಯ ಬಾಗಿಲನ್ನೇ ಮುಚ್ಚಿತು. ಶರೀರವು ಸಮುದ್ರದಲ್ಲಿದ್ದ ಮೊಸಳೆ-ತಿಮಿಂಗಿಲಗಳನ್ನು ಪುಡಿಪುಡಿ ಮಾಡಿತು.

ತತೋ ದೇವಾಃ ಸಋಷಯೋ ಗಂಧರ್ವಾಃ ಪನ್ನಗಾಃ ಖಗಾಃ ।
ಸಿದ್ಧಾ ಯಕ್ಷಾ ಗುಹ್ಯಕಾಶ್ಚ ಅಪ್ಸರೋಭಿಶ್ಚ ರಾಘವಮ್ ॥ ೨೮ ॥
ಈಡಿರೇ ಕುಸುಮಾಸಾರೈಃ ವರ್ಷಂತಶ್ಚಾಭಿನಂದಿತಾಃ ।

೨೮. ಅನಂತರ ಋಷಿಗಳು, ಗಂಧರ್ವರು, ಪನ್ನಗರು, ಪಕ್ಷಿಗಳು, ಸಿದ್ಧ ಯಕ್ಷ ಗುಹ್ಯಕರುಗಳು, ಅಪ್ಸರಸ್ತ್ರೀಯರು - ಇವರುಗಳೊಡನೆ ದೇವತೆಗಳು ಬಂದು ಹೂ ಮಳೆಗಳಿಂದ ಅಭಿನಂದಿಸುತ್ತಾ ರಾಮನನ್ನು ಸ್ತೋತ್ರ ಮಾಡಿದರು.

ಆಜಗಾಮ ತದಾ ರಾಮಂ ದ್ರುಷ್ಟುಂ ದೇವಮುನೀಶ್ವರಃ ।
ನಾರದೋ ಗಗನಾತ್ ತೂರ್ಣಂ ಸ್ವಭಾಸಾ ಭಾಸಯನ್ ದಿಶಃ ॥ ೨೯ ॥
ರಾಮಮಿಂದೀವರಶ್ಯಾಮಮುದಾರಾಂಗಂ ಧನುರ್ಧರಮ್ ।
ಈಷತ್ತಾಮ್ರವಿಶಾಲಾಕ್ಷಮೈಂದ್ರಾಸ್ತ್ರಾಂಚಿತಬಾಹುಕಮ್ ॥ ೩೦ ॥
ದಯಾರ್ದ್ರದೃಷ್ಟ್ಯಾ ಪಶ್ಯಂತಂ ವಾನರಾನ್ ಶರಪೀಡಿತಾನ್ ।
ದೃಷ್ಟ್ವಾ ಗದ್ಗದಯಾ ವಾಚಾ ಭಕ್ತ್ಯಾ ಸ್ತೋತುಂ ಪ್ರಚಕ್ರಮೇ ॥ ೩೧ ॥

೨೯-೩೧. ಆಗ ದೇವಮುನಿಶ್ರೇಷ್ಠನಾದ ನಾರದನು ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತಾ ಬೇಗನೆ ಆಕಾಶದಿಂದ(ಇಳಿದು) ಬಂದನು. ಕನ್ನೈದಿಲೆ ಯಂತೆ ನೀಲವರ್ಣನೂ ಧನುರ್ಧಾರಿಯೂ ಸ್ವಲ್ಪ ಕೆಂಪಾದ ಅಗಲವಾದ ಕಣ್ಣು ಗಳುಳ್ಳವನೂ ಆದ, ಐಂದ್ರಾಸ್ತ್ರವನ್ನು ಹಿಡಿದಿರುವ ತೋಳಿನಿಂದ ಕೂಡಿದ ಹಾಗೂ ಕರುಣೆಯಿಂದ ಒದ್ದೆಯಾದ ದೃಷ್ಟಿಯಿಂದ ಬಾಣಪೀಡಿತರಾದ ಕಪಿಗಳನ್ನು ನೋಡುತ್ತಿರುವ ರಾಮನನ್ನು ಕಂಡು ಗದ್ಗದಯುಕ್ತವಾದ ಮಾತಿನಿಂದ ಭಕ್ತಿಪೂರ್ವಕವಾಗಿ ಸ್ತುತಿಸಲಾರಂಭಿಸಿದನು.

### ನಾರದ ಉವಾಚ-

ದೇವ ದೇವ ಜಗನ್ನಾಥ ಪರಮಾತ್ಮನ್ ಸನಾತನ ।
ನಾರಾಯಣಾಖಿಲಾಧಾರ ವಿಶ್ವಸಾಕ್ಷಿನ್ ನಮೋಽಸ್ತು ತೇ ॥ ೩೨ ॥
ವಿಶುದ್ಧಜ್ಞಾನರೂಪೋಽಸಿ ತ್ವಂ ಲೋಕಾನತಿವಂಚಯನ್ ।
ಮಾಯಯಾ ಮನುಜಾಕಾರಃ ಸುಖದುಃಖಾದಿಮಾನಿವ ॥ ೩೩ ॥
ತ್ವಂ ಮಾಯಯಾ ಗೂಹ್ಯಮಾನಃ ಸರ್ವೇಷಾಂ ಹೃದಿ ಸಂಸ್ಥಿತಃ ।
ಸ್ವಯಂಜ್ಯೋತಿಃಸ್ವಭಾವಸ್ತ್ವಂ ವ್ಯಕ್ತ ಏವಾಮಲಾತ್ಮನಾಮ್ ॥ ೩೪ ॥
ಉನ್ಮೀಲಯನ್ ಸೃಜಸ್ಯೇತನ್ನೇತ್ರೇ ರಾಮ ಜಗತ್ ತ್ರಯಮ್ ।
ಉಪಸಂಹ್ರಿಯತೇ ಸರ್ವಂ ತ್ವಯಾ ಚಕ್ಷುರ್ನಿಮಿಲನಾತ್ ॥ ೩೫ ॥

೩೨-೩೫. ನಾರದನಿಂತೆಂದನು : ಎಲೈ ದೇವದೇವನೆ, ಜಗನ್ನಾಯಕನೆ, ಪರಮಾತ್ಮನೆ, ಸನಾತನನೆ, ನಾರಾಯಣನೆ, ಅಖಿಲಾಧಾರನೆ, ವಿಶ್ವಸಾಕ್ಷಿಯೆ, ನಿನಗೆ ನಮಸ್ಕಾರ ! ನೀನು ಪರಿಶುದ್ಧಜ್ಞಾನಸ್ವರೂಪನಾಗಿರುವೆ; ಆದರೂ ಲೋಕ(ಜನ)ಗಳನ್ನು ಬಹಳವಾಗಿ ಮೋಹಗೊಳಿಸುತ್ತಾ ಮಾಯೆಯಿಂದ ಮನುಷ್ಯರೂಪವನ್ನು ಧರಿಸಿ ಸುಖದುಃಖಾದಿಗಳುಳ್ಳವನಂತೆ ತೋರಿಕೊಳ್ಳುವೆ. ಮಾಯೆಯಿಂದ ಬಚ್ಚಿಡಲ್ಪಟ್ಟವನಾಗಿ ಎಲ್ಲರ ಹೃದಯದಲ್ಲಿಯೂ ಇದ್ದುಕೊಂಡಿರುವೆ. ಪರಿಶುದ್ಧಹೃದಯರಿಗೆ ನೀನು ಸ್ವಯಂ ಜ್ಯೋತಿಃಸ್ವಭಾವದವನೆಂದು ಚೆನ್ನಾಗಿ ತಿಳಿದೇ ಇದೆ. ಎಲೈ ರಾಮನೆ, ನೀನು ರೆಪ್ಪೆಗಳನ್ನು ಅರಳಿಸಿ ಈ (ಪ್ರಪಂಚವನ್ನು) ಸೃಷ್ಟಿಸುವೆ. ಹಾಗೆಯೇ ನೀನು ಕಣ್ಣುಮುಚ್ಚಿಕೊಂಡೆಯಾದರೆ ಎಲ್ಲವೂ ನಿನ್ನಲ್ಲಿ ಅಡಕವಾಗಿಬಿಡುವದು.

**ಯಸ್ಮಿನ್ ಸರ್ವಮಿದಂ ಭಾತಿ ಯತಶ್ಚೈತಚ್ಚರಾಚರಮ್ ।**
**ಯಸ್ಮಾನ್ನ ಕಿಂಚಿಲ್ಲೋಕೇಽಸ್ಮಿನ್ ತಸ್ಮೈ ತೇ ಬ್ರಹ್ಮಣೇ ನಮಃ ॥ ೩೬ ॥**
**ಪ್ರಕೃತಿಂ ಪುರುಷಂ ಕಾಲಂ ವ್ಯಕ್ತಾವ್ಯಕ್ತ ಸ್ವರೂಪಿಣಮ್ ।**
**ಯಂ ಜಾನಂತಿ ಮುನಿಶ್ರೇಷ್ಠಾಸ್ತಸ್ಮೈ ರಾಮಾಯ ತೇ ನಮಃ ॥ ೩೭ ॥**
**ವಿಕಾರರಹಿತಂ ಶುದ್ಧಂ ಜ್ಞಾನರೂಪಂ ಶ್ರುತಿರ್ಜಗೌ ।**
**ತ್ವಾಂ ಸರ್ವಜಗದಾಕಾರಮೂರ್ತಿಂ ಚಾಪ್ಯಾಹ ಸಾ ಶ್ರುತಿಃ ॥ ೩೮ ॥**
**ವಿರೋಧೋ ದೃಶ್ಯತೇ ದೇವ ವೈದಿಕೋ ವೇದವಾದಿನಾಮ್ ।**
**ನಿಶ್ಚಯಂ ನಾಧಿಗಚ್ಛಂತಿ ತ್ವತ್ಪ್ರಸಾದಂ ವಿನಾ ಬುಧಾಃ ॥ ೩೯ ॥**

೩೬-೩೯. ಈ ಜಗತ್ತೆಲ್ಲವೂ ಯಾವನಲ್ಲಿ ತೋರುತ್ತಿರುವದೋ ಚರಾಚರಾತ್ಮಕವಾದ ಇದೆಲ್ಲವೂ ಯಾವನಿಂದ ಹೊರಬಂದಿದೆಯೋ ಈ ಲೋಕದಲ್ಲಿ ಯಾವದೊಂದು ಸಣ್ಣ ವಸ್ತುವೂ ಯಾವನಿಗಿಂತ ಬೇರೆಯಿಲ್ಲವೋ ಅಂಥ ಬ್ರಹ್ಮನಾದ ನಿನಗೆ ನಮಸ್ಕಾರವು. ಮುನಿಶ್ರೇಷ್ಠರು ಯಾವ ನಿನ್ನನ್ನು ಪ್ರಕೃತಿ, ಪುರುಷ, ಕಾಲ, ವ್ಯಕ್ತ, ಅವ್ಯಕ್ತ, ಹೀಗೆ ಎಲ್ಲಾ ಸ್ವರೂಪಗಳಿಂದಲೂ (ಕಂಡುಬರುವವನೆಂದು) ಅರಿತುಕೊಂಡಿರುವರೋ, ಶ್ರೀರಾಮ ನಾದ ನಿನಗೆ ನಮಸ್ಕಾರವು. ವೇದವು ನಿನ್ನನ್ನು ವಿಕಾರರಹಿತನೆಂದೂ, ಶುದ್ಧಜ್ಞಾನರೂಪನೆಂದೂ, ಹೊಗಳುತ್ತಿದೆ. ಹಾಗೆಯೇ ನೀನು ಸರ್ವಜಗತ್ತುಗಳ ಸ್ವರೂಪನೆಂದೂ ಅದೇ ಹೇಳುತ್ತಿದೆ. ಹೀಗೆ ವೇದವಾದಿಗಳಿಗೂ (ನೀನು ಜಗದಾಕಾರನೊ, ನಿರಾಕಾರನೊ, ಎಂಬ ವಿಷಯಕ್ಕೆ) ವಿರೋಧವು ಕಂಡುಬರುತ್ತಿದೆ. ಆದ್ದರಿಂದ ನಿನ್ನ ಅನುಗ್ರಹವಿಲ್ಲದೆ ವಿದ್ವಜ್ಜನರು ಈ ಬಗ್ಗೆ ನಿಶ್ಚಯವನ್ನು ಹೊಂದಲಾರರು.

**ಮಾಯಯಾ ಕ್ರೀಡತೋ ದೇವ ನ ವಿರೋಧೋ ಮನಾಗಪಿ ।**
**ರಶ್ಮಿಜಾಲಂ ರವೇರ್ಯದ್ವತ್ ದೃಶ್ಯತೇ ಜಲವದ್ ಭ್ರಮಾತ್ ॥ ೪೦ ॥**
**ಭ್ರಾಂತಿಜ್ಞಾನಾತ್ ತಥಾ ರಾಮ ತ್ವಯಿ ಸರ್ವಂ ಪ್ರಕಲ್ಪ್ಯತೇ ।**
**ಮನಸೋಽವಿಷಯೋ ದೇವ ರೂಪಂ ತೇ ನಿರ್ಗುಣಂ ಪರಮ್ ॥ ೪೧ ॥**
**ಕಥಂ ದೃಶ್ಯಂ ಭವೇದ್ದೇವ ದೃಶ್ಯಾಭಾವೇ ಭಜೇತ್ ಕಥಮ್ ।**

೪೦-೪೧. ಎಲೈ ಸ್ವಾಮಿಯೆ, ಮಾಯೆಯಿಂದ ಲೀಲೆಯನ್ನು ನಿರ್ವಹಿಸುವ ನಿನ್ನ ಸ್ವರೂಪದಲ್ಲಿ ಸ್ವಲ್ಪವೂ ವಿರೋಧವಿಲ್ಲ. ಭ್ರಾಂತಿಯಿಂದ ಸೂರ್ಯನ ಕಿರಣಗಳು ನೀರಿನಂತೆ ಹೇಗೆ ತೋರುವವೋ ಹಾಗೆ ಭ್ರಾಂತಿಬುದ್ಧಿಯ ನಿಮಿತ್ತವಾಗಿ ಎಲ್ಲವೂ ನಿನ್ನಲ್ಲಿ ಕಲ್ಪಿತವಾಗಿರುವದು. ನಿನ್ನ ನಿರ್ಗುಣರೂಪವಾದರೊ, ಎಲೈ ದೇವನೆ, ಮನಸ್ಸಿಗೆ ಅದು ಅಗೋಚರವು. ಹೀಗಿರುವಲ್ಲಿ ಅದು ಹೇಗೆ ತಾನೆ ಕಂಡುಬಂದೀತು? ಕಾಣದೆ ಇರುವಾಗ ಭಜಿಸುವದಾದರೂ ಹೇಗಾದೀತು ?

**ಅತಸ್ತವಾವತಾರೇಷು ರೂಪಾಣಿ ನಿಪುಣಾ ಭುವಿ ।**
**ಭಜಂತಿ ಬುದ್ಧಿಸಂಪನ್ನಾಸ್ತರಂತ್ಯೇವ ಭವಾರ್ಣವಮ್ ॥ ೪೨ ॥**
**ಕಾಮಕ್ರೋಧಾದಯಸ್ತತ್ರ ಬಹವಃ ಪರಿಪಂಥಿನಃ ।**
**ಭೀಷಯಂತಿ ಸದಾ ಚೇತೋ ಮಾರ್ಜಾರಾ ಮೂಷಕಂ ಯಥಾ ॥ ೪೩ ॥**
**ತ್ವನ್ನಾಮ ಸ್ಮರತಾಂ ನಿತ್ಯಂ ತ್ವದ್ರೂಪಮಪಿ ಮಾನಸೇ ।**
**ತ್ವತ್ಪೂಜಾನಿರತಾನಾಂ ತೇ ಕಥಾಮೃತಪರಾತ್ಮನಾಮ್ ॥ ೪೪ ॥**
**ತ್ವದ್ಭಕ್ತಸಂಗಿನಾಂ ರಾಮ ಸಂಸಾರೋ ಗೋಷ್ಪದಾಯತೇ ।**

೪೨-೪೪. ಆದ್ದರಿಂದ ನಿನ್ನ ಅವತಾರಗಳಲ್ಲಿ (ಕಂಡುಬರುವ) ರೂಪಗಳನ್ನು ಜಾಣರೂ ಹಾಗೂ ಬುದ್ಧಿವಂತರೂ ಆದವರು ಭಜಿಸುತ್ತಾ ಸಂಸಾರಸಮುದ್ರವನ್ನು ದಾಟಿಯೇ ತೀರುವರು. (ಸಂಸಾರದಲ್ಲಿ) ಕಾಮಕ್ರೋಧಗಳೇ ಮುಂತಾದ ಬಹಳ ರೀತಿಯ ಶತ್ರುಗಳು - ಹೇಗೆ ಬೆಕ್ಕುಗಳು ಇಲಿಗಳನ್ನು ಬೆದರಿಸುವವೋ ಹಾಗೆ ಹೆದರಿಸು ತ್ತಿರುವವು. ಆದರೆ ನಿನ್ನ ನಾಮವನ್ನು ಯಾವಾಗಲೂ ಸ್ಮರಿಸುವ ಮತ್ತು ಮನಸ್ಸಿನಲ್ಲಿ ನಿನ್ನ ರೂಪವನ್ನು ಚಿಂತಿಸುವ ಹಾಗೂ ನಿನ್ನ ಪೂಜಾನಿರತರಾಗಿ ನಿನ್ನ ಅಮೃತಕಥೆಗಳನ್ನು ಕೇಳುತ್ತಿರುವ ನಿನ್ನ ಭಕ್ತರ ಸಂಗವನ್ನು ಮಾಡುವವರಿಗೆ ಸಂಸಾರ ವೆಂಬುದು ಗೋವಿನ ಕಾಲಿನ ಗುಂಡಿಯಷ್ಟು (ಕಿರಿದಾಗಿಬಿಡುವದು) .

**ಅತಸ್ತೇ ಸಗುಣಂ ರೂಪಂ ಧ್ಯಾತ್ವಾಹಂ ಸರ್ವದಾ ಹೃದಿ ।**
**ಮುಕ್ತಶ್ಚರಾಮಿ ಲೋಕೇಷು ಪೂಜ್ಯೋಽಹಂ ಸರ್ವದೈವತೈಃ ॥ ೪೫ ॥**
**ರಾಮ ತ್ವಯಾ ಮಹತ್ಕಾರ್ಯಂ ಕೃತಂ ದೇವಹಿತೇಚ್ಛಯಾ ।**
**ಕುಂಭಕರ್ಣವಧೇನಾದ್ಯ ಭೂಭಾರೋಽಯಂ ಗತಃ ಪ್ರಭೋ ॥ ೪೬ ॥**

೪೫-೪೬. ಆದ್ದರಿಂದ ನಾನು ನಿನ್ನ ಸಗುಣರೂಪವನ್ನೇ ಯಾವಾಗಲೂ ಧ್ಯಾನಮಾಡುತ್ತಾ (ಬಂಧ) ಮುಕ್ತನಾಗಿ, ಲೋಕಗಳಲ್ಲಿ ಸಂಚರಿಸುತ್ತಿರುವೆನು. ಎಲೈ ರಾಮನೆ, ದೇವತೆಗಳಿಗೆ ಹಿತವನ್ನುಂಟುಮಾಡಬೇಕೆಂಬ ಇಚ್ಛೆಯಿಂದ ನಿನ್ನಿಂದ ದೊಡ್ಡ ಕೆಲಸವು ಮಾಡಲ್ಪಟ್ಟಿತು. ಪ್ರಭುವೆ, ಈಗ ಕುಂಭಕರ್ಣನ ವಧೆಯಿಂದ ಭೂಭಾರವು ಕಡಿಮೆಯಾಯಿತು.

**ಶ್ವೋ ಹನಿಷ್ಯತಿ ಸೌಮಿತ್ರಿರಿಂದ್ರಜೇತಾರಮಾಹವೇ ।**
**ಹನಿಷ್ಯಸೇಽಥ ರಾಮ ತ್ವಂ ಪರಶ್ವೋ ದಶಕಂಧರಮ್ ॥ ೪೭ ॥**
**ಪಶ್ಯಾಮಿ ಸರ್ವಂ ದೇವೇಶ ಸಿದ್ಧೈಃ ಸಹ ನಭೋ ಗತಃ**
**ಅನುಗೃಹ್ಣೀಷ್ವ ಮಾಂ ದೇವ ಗಮಿಷ್ಯಾಮಿ ಸುರಾಲಯಮ್ ॥ ೪೮ ॥**
**ಇತ್ಯುಕ್ತ್ವಾ ರಾಮಮಾಮಂತ್ರ್ಯ ನಾರದೋ ಭಗವಾನೃಷಿಃ**
**ಯಯೌ ದೇವೈಃ ಪೂಜ್ಯಮಾನೋ ಬ್ರಹ್ಮಲೋಕಮಕಲ್ಮಷಮ್ ॥ ೪೯ ॥**

೪೭-೪೯. ಲಕ್ಷ್ಮಣನು ನಾಳೆಯದಿನ ಇಂದ್ರಜಿತನನ್ನು ಕೊಲ್ಲಲಿರುವನು. ಎಲೈ ರಾಮನೆ, ನೀನು ನಾಡಿದ್ದು ರಾವಣನನ್ನು ಕೊಲ್ಲಲಿರುವೆ. ದೇವೇಶನೆ, ನಾನು ಸಿದ್ಧರು ಗಳೊಡಗೂಡಿ ಆಕಾಶದಲ್ಲಿ ನಿಂತು ಎಲ್ಲವನ್ನೂ ನೋಡುತ್ತೇನೆ. ದೇವನೆ, ನನಗೆ ಅನುಗ್ರಹ ಮಾಡು. ದೇವಲೋಕಕ್ಕೆ ಹೋಗಲಿರುವೆನು'' ಹೀಗೆಂದು ರಾಮನನ್ನು ಬೀಳ್ಕೊಟ್ಟು ಪೂಜ್ಯನಾದ ನಾರದಋಷಿಯು ದೇವತೆಗಳಿಂದ ಗೌರವಿಸಲ್ಪಟ್ಟವನಾಗಿ ಪವಿತ್ರವಾದ ಬ್ರಹ್ಮ ಲೋಕಕ್ಕೆ ಹೊರಟುಹೋದನು.

**ಭ್ರಾತರಂ ನಿಹತಂ ಶ್ರುತ್ವಾ ಕುಂಭಕರ್ಣಂ ಮಹಾಬಲಮ್ ।**
**ಮೂರ್ಛಿತಃ ಪತಿತೋ ಭೂಮೌ ಉತ್ಥಾಯ ವಿಲಲಾಪ ಹ ॥ ೫೦ ॥**
**ಪಿತೃವ್ಯಂ ನಿಹತಂ ಶ್ರುತ್ವಾ ಪಿತರಂ ಚಾತಿವಿಹ್ವಲಮ್ ।**
**ಇಂದ್ರಜಿತ್ ಪ್ರಾಹ ಶೋಕಾರ್ತಂ ತ್ಯಜ ಶೋಕಂ ಮಹಾಮತೇ ॥ ೫೧ ॥**
**ಮಯಿ ಜೀವತಿ ರಾಜೇಂದ್ರ ಮೇಘನಾದೇ ಮಹಾಬಲೇ ।**
**ದುಃಖಸ್ಯಾವಸರಃ ಕುತ್ರ ದೇವಾಂತಕ ಮಹಾಮತೇ**
**ವ್ಯೇತು ತೇ ದುಃಖಮಖಿಲಂ ಸ್ವಸ್ಥೋ ಭವ ಮಹೀಪತೇ ॥ ೫೨ ॥**

೫೦-೫೨. ಮಹಾಬಲಶಾಲಿಯಾದ ಸೋದರನಾದ ಕುಂಭಕರ್ಣನು ಹತ ನಾದುದನ್ನು ಕೇಳಿ (ರಾವಣನು) ಮೂರ್ಛೆಹೊಂದಿ ನೆಲದಮೇಲೆ ಬಿದ್ದು ಮತ್ತೆ ಮೇಲಕ್ಕೆದ್ದು ಅಳುತ್ತಿದ್ದನು. ಆಗ ಇಂದ್ರಜಿತನು ಚಿಕ್ಕಪ್ಪನು ಮರಣಹೊಂದಿದ್ದನ್ನೂ ತಂದೆಯು ಬಹಳ ಶೋಕಾವಿಷ್ಟನಾಗಿರುವದನ್ನೂ ಕೇಳಿ ಹೀಗೆಂದನು : 'ಎಲೈ ಮಹಾ ಬುದ್ಧಿಶಾಲಿಯೆ, ಶೋಕವನ್ನು ಬಿಡು. ರಾಜೇಂದ್ರನೆ, ನಾನು ಎಂದರೆ ಮಹಾಬಲಿ

ಯಾದ ಮೇಘನಾದನು ಬದುಕಿರಲಾಗಿ ದುಃಖಕ್ಕೆ ಅವಕಾಶವಾದರೂ ಎಲ್ಲಿದ್ದೀತು? ಎಲೈ ಬುದ್ಧಿಶಾಲಿಯಾದ ದೇವಶತ್ರುವೆ, ನಿನ್ನ ದುಃಖವೆಲ್ಲವೂ ನೀಗಲಿ, ಮಹಾ ರಾಜನೆ, ಸಮಾಧಾನವನ್ನು ಹೊಂದು.

**ಸರ್ವಂ ಸಮೀಕರಿಷ್ಯಾಮಿ ಹನಿಷ್ಯಾಮಿ ಚ ವೈ ರಿಪೂನ್ ।**
**ಗತ್ವಾ ನಿಕುಂಭಿಲಾಂ ಸದ್ಯಸ್ತರ್ಪಯಿತ್ವಾ ಹುತಾಶನಮ್ ॥ ೫೩ ॥**
**ಲಬ್ಧ್ವಾ ರಥಾದಿಕಂ ತಸ್ಮಾದಜೇಯೋಽಹಂ ಭವಾಮ್ಯರೇಃ ।**
**ಇತ್ಯುಕ್ತ್ವಾ ತ್ವರಿತಂ ಗತ್ವಾ ನಿರ್ದಿಷ್ಟಂ ಹವನಸ್ಥಲಮ್ ॥ ೫೪ ॥**
**ರಕ್ತಮಾಲ್ಯಾಂಬರಧರೋ ರಕ್ತಗಂಧಾನುಲೇಪನಃ ।**
**ನಿಕುಂಭಿಲಾಸ್ಥಲೇ ಮೌನೀ ಹವನಾಯೋಪಚಕ್ರಮೇ ॥ ೫೫ ॥**

೫೩-೫೫. ಎಲ್ಲವನ್ನೂ ಸರಿಪಡಿಸುವೆನು. ಶತ್ರುಗಳನ್ನೂ ಕೊಲ್ಲುವೆನು. ಈಗ ನಿಕುಂಭಿಳೆಗೆ ಹೋಗಿ ಅಗ್ನಿದೇವನನ್ನು ತೃಪ್ತಿಗೊಳಿಸಿ ರಥವೇ ಮುಂತಾದವುಗಳನ್ನು ಪಡೆದುಕೊಂಡು ಅದರಿಂದ ಶತ್ರುವಿಗೆ ಜಯಿಸಲಸಾಧ್ಯನಾಗಿಬಿಡುವೆನು.'' ಹೀಗೆಂದು ಹೇಳಿ ಹೋಮಮಾಡುವ ಗೊತ್ತಾದ ಸ್ಥಲಕ್ಕೆ ಹೋಗಿ ಕೆಂಪಾದ ಹೂಮಾಲೆ ಬಟ್ಟೆಗಳನ್ನು ಧರಿಸಿ ಕೆಂಪುಗಂಧವನ್ನು ಲೇಪಿಸಿಕೊಂಡವನಾಗಿ ಕುಳಿತು ಹೋಮ ಮಾಡಲಾರಂಭಿಸಿದನು.

**ವಿಭೀಷಣೋಽಥ ತಚ್ಛ್ರುತ್ವಾ ಮೇಘನಾದಸ್ಯ ಚೇಷ್ಟಿತಮ್ ।**
**ಪ್ರಾಹ ರಾಮಾಯ ಸಕಲಂ ಹೋಮಾರಂಭಂ ದುರಾತ್ಮನಃ ॥ ೫೬ ॥**
**ಸಮಾಪ್ಯತೇ ಚೇದ್ ಹೋಮೋಽಯಂ ಮೇಘನಾದಸ್ಯ ದುರ್ಮತೇಃ ।**
**ತದಾಽಜೇಯೋ ಭವೇದ್ ರಾಮ ಮೇಘನಾದಃ ಸುರಾಸುರೈಃ ॥ ೫೭ ॥**
**ಅತಃ ಶೀಘ್ರಂ ಲಕ್ಷ್ಮಣೇನ ಘಾತಯಿಷ್ಯಾಮಿ ರಾವಣಿಮ್ ।**
**ಆಜ್ಞಾಪಯ ಮಯಾ ಸಾರ್ಧಂ ಲಕ್ಷ್ಮಣಂ ಬಲಿನಾಂ ವರಮ್ ॥ ೫೮ ॥**
**ಹನಿಷ್ಯತಿ ನ ಸಂದೇಹೋ ಮೇಘನಾದಂ ತವಾನುಜಃ ।**

೫೬-೫೮. ಅನಂತರ ವಿಭೀಷಣನು ಆ ವಿಚಾರವನ್ನು ಕೇಳಿ ಮೇಘನಾದನ ಎಲ್ಲಾ ಪ್ರಯತ್ನಗಳ ವಿವರವನ್ನೂ - ಎಂದರೆ ಆ ದುರಾತ್ಮನು ಹೋಮಾರಂಭ ಮಾಡಿರುವದನ್ನೂ -ರಾಮನಿಗೆ ಹೇಳಿದನು. ಮತ್ತೂ ಹೀಗೆಂದನು : ''ಎಲೈ ರಾಮನೆ, ದುರ್ಬುದ್ಧಿಯಾದ ಆ ಇಂದ್ರಜಿತನ ಹೋಮವೇನಾದರೂ ಪೂರೈಸಿದ್ದೇ ಆದರೆ ಆಗ ಅವನು ದೇವಾಸುರರುಗಳಿಗೆ ಅಜೇಯನಾಗಿಬಿಡುವನು. ಆದ್ದರಿಂದ ಬೇಗನೆ ಆ ರಾವಣಪುತ್ರನನ್ನು ಲಕ್ಷ್ಮಣನಿಂದ ಕೊಲ್ಲಿಸುವೆನು. ಬಲಶಾಲಿಗಳಲ್ಲಿ ಶ್ರೇಷ್ಠನಾದ ಲಕ್ಷ್ಮಣನಿಗೆ ನನ್ನೊಡನೆ ಸೇರಿ ಈ ಕಾರ್ಯವನ್ನು ಕೈಗೊಳ್ಳುವಂತೆ

ಅಪ್ಪಣೆ ಮಾಡು. ನಿನ್ನ ತಮ್ಮನು ಮೇಘನಾದನನ್ನು ಖಂಡಿತ ಸಂಹಾರ ಮಾಡಲಿರುವನು.''

**ಶ್ರೀರಾಮಚಂದ್ರ ಉವಾಚ -**

**ಅಹಮೇವಾಗಮಿಷ್ಯಾಮಿ ಹಂತುಮಿಂದ್ರಜಿತಂ ರಿಪುಮ್ ।**
**ಆಗ್ನೇಯೇನ ಮಹಾಸ್ತ್ರೇಣ ಸರ್ವರಾಕ್ಷಸಘಾತಿನಾ ॥ ೫೯ ॥**
**ವಿಭೀಷಣೋಽಪಿ ತಂ ಪ್ರಾಹ ನಾಸಾವನ್ಯೈರ್ನಿಹನ್ಯತೇ ।**
**ಯಸ್ತು ದ್ವಾದಶವರ್ಷಾಣಿ ನಿದ್ರಾಹಾರವಿವರ್ಜಿತಃ ॥ ೬೦ ॥**
**ತೇನೈವ ಮೃತ್ಯುರ್ನಿರ್ದಿಷ್ಟೋ ಬ್ರಹ್ಮಣಾಸ್ಯ ದುರಾತ್ಮನಃ ।**
**ಲಕ್ಷ್ಮಣಸ್ತು ಅಯೋಧ್ಯಾಯಾ ನಿರ್ಗಮ್ಯಾಯಾತ್ತ್ವಯಾ ಸಹ ॥ ೬೧ ॥**
**ತದಾದಿ ನಿದ್ರಾಹಾರಾದೀನ್ ನ ಜಾನಾತಿ ರಘೂತ್ತಮ ।**
**ಸೇವಾರ್ಥಂ ತವ ರಾಜೇಂದ್ರ ಜ್ಞಾತಂ ಸರ್ವಮಿದಂ ಮಯಾ ॥ ೬೨ ॥**

೫೯-೬೨. ಶ್ರೀರಾಮನಿಂತೆಂದನು : ಎಲ್ಲಾ ರಾಕ್ಷಸರನ್ನೂ ಸಂಹರಿಸುವ ಆಗ್ನೇಯಾಸ್ತ್ರದಿಂದ ಶತ್ರುವಾದ ಇಂದ್ರಜಿತನನ್ನು ಸಂಹಾರಮಾಡಲು ನಾನೇ ಬರುವೆನು ; (ಹೀಗೆನ್ನಲು) ಅವನನ್ನು ಕುರಿತು ವಿಭೀಷಣನಿಂತೆಂದನು : 'ಎಲೈ ರಘುಶ್ರೇಷ್ಠನೆ, ಅವನು (ಲಕ್ಷ್ಮಣನ ಹೊರತು) ಬೇರೆ ಯಾರಿಂದಲೂ ಕೊಲ್ಲಲ್ಪಡುವದಿಲ್ಲ - ಏಕೆಂದರೆ : ಆ ದುರಾತ್ಮನಿಗೆ ಬ್ರಹ್ಮನಿಂದ ವರವು ಕೊಡಲ್ಪಟ್ಟಾಗ 'ಯಾವನು ಹನ್ನೆರಡು ವರ್ಷಗಳ ಕಾಲ ನಿದ್ರಾಹಾರಗಳಿಲ್ಲದೆ ಬದುಕಿರುವನೋ ಅಂಥವನಿಂದಲೇ ಸಾವು ಬರಲಿ' ಎಂದು ಗೊತ್ತು ಮಾಡಲ್ಪಟ್ಟಿದೆ. ಲಕ್ಷ್ಮಣನಾದರೊ, ನಿನ್ನೊಡನೆ ಅಯೋಧ್ಯೆಯಿಂದ ಹೊರಟ ಮೇಲೆ ಆಗಿನಿಂದಲೂ ನಿದ್ರಾಹಾರಗಳನ್ನು ಸೇವಿಸಿರುವದಿಲ್ಲ. ಎಲೈ ರಾಜೇಂದ್ರನೆ, ನಿನ್ನ ಸೇವೆಗಾಗಿ ಆತನು ಎಚ್ಚರವಾಗಿದ್ದು ಕೊಂಡಿರುವನು. ಇದೆಲ್ಲವೂ ನನಗೆ ಗೊತ್ತು.

**ತದಾಜ್ಞಾಪಯ ದೇವೇಶ ಲಕ್ಷ್ಮಣಂ ತ್ವರಯಾ ಮಯಾ ।**
**ಹನಿಷ್ಯತಿ ನ ಸಂದೇಹಃ ಶೇಷಃ ಸಾಕ್ಷಾದ್ಧರಾಧರಃ ॥ ೬೩ ॥**
**ತ್ವಮೇವ ಸಾಕ್ಷಾಜ್ಜಗತಾಮಧೀಶೋ**
**ನಾರಾಯಣೋ ಲಕ್ಷ್ಮಣ ಏವ ಶೇಷಃ ।**
**ಯುವಾಂ ಧರಾಭಾರನಿವಾರಣಾರ್ಥಂ**
**ಜಾತೌ ಜಗನ್ನಾಟಕಸೂತ್ರಧಾರೌ ॥ ೬೪ ॥**

೬೩-೬೪. ಆದ್ದರಿಂದ ಎಲೈ ದೇವೇಶನೆ, ಬೇಗನೆ ನನ್ನೊಡನೆ ಲಕ್ಷ್ಮಣನಿಗೆ ಅಪ್ಪಣೆಯನ್ನು ನೀಡುವವನಾಗು. ಭೂಮಿಯನ್ನು ಹೊತ್ತಿರುವ ಸಾಕ್ಷಾತ್ ಆದಿಶೇಷ

ನಾದ ಆತನು (ಇಂದ್ರಜಿತನನ್ನು) ಖಂಡಿತ ಕೊಲ್ಲುವನು. ಜಗತ್ತಿಗೆಲ್ಲ ಒಡೆಯನಾದ ಸಾಕ್ಷಾನ್ನಾರಾಯಣನೇ ನೀನು. ಆದಿಶೇಷನೇ ಲಕ್ಷ್ಮಣನು. ಭೂಭಾರವನ್ನು ಕಳೆಯುವದಕ್ಕಾಗಿ ನೀವಿಬ್ಬರೂ ಜಗತ್ತೆಂಬ ನಾಟಕದ ಸೂತ್ರಧಾರಿಗಳಾಗಿ ಅವತರಿಸಿರುವಿರಿ.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಅಷ್ಟಮಃ ಸರ್ಗ**

---

## ಒಂಭತ್ತನೆಯ ಸರ್ಗ

**ಶ್ರೀ ಮಹಾದೇವ ಉವಾಚ -**

**ವಿಭೀಷಣವಚಃ ಶ್ರುತ್ವಾ ರಾಮೋ ವಾಕ್ಯಮಥಾಬ್ರವೀತ್ ।**
**ಜಾನಾಮಿ ತಸ್ಯ ರೌದ್ರಸ್ಯ ಮಾಯಾಂ ಕೃತ್ಸ್ನಾಂ ವಿಭೀಷಣ ॥ ೧ ॥**
**ಸ ಹಿ ಬ್ರಹ್ಮಾಸ್ತ್ರವಿತ್ ಶೂರೋ ಮಾಯಾವೀ ಚ ಮಹಾಬಲಃ ।**
**ಜಾನಾಮಿ ಲಕ್ಷ್ಮಣಸ್ಯಾಪಿ ಸ್ವರೂಪಂ ಮಮ ಸೇವನಮ್ ॥ ೨ ॥**
**ಜ್ಞಾತ್ವೈವಾಸಮಹಂ ತೂಷ್ಣೀಂ ಭವಿಷ್ಯತ್ಕಾರ್ಯಗೌರವಾತ್।**
**ಇತ್ಯುಕ್ತ್ವಾ ಲಕ್ಷ್ಮಣಂ ಪ್ರಾಹ ರಾಮೋ ಜ್ಞಾನವತಾಂ ವರಃ ॥ ೩ ॥**

೧-೩. ಶ್ರೀಮಹಾದೇವನಿಂತೆದನು : ವಿಭೀಷಣನ ಮಾತನ್ನು ಕೇಳಿ ರಾಮನು ಹೀಗೆ ಹೇಳಿದನು : ''ಎಲೈ ವಿಭೀಷಣನೆ, ಆ ಭಯಂಕರನಾದ ರಾಕ್ಷಸನ ಸಮಸ್ತ ಮಾಯೆಯನ್ನೂ ನಾನು ಬಲ್ಲೆನು. ಅವನಾದರೊ, ಬ್ರಹ್ಮಾಸ್ತ್ರವನ್ನು ಬಲ್ಲವನು. ಶೂರನು ಮತ್ತು ಮಹಾ ಬಲಿಷ್ಠನೂ ಮಾಯಾವಿಯೂ ಆಗಿರುವನು. ಹಾಗೆಯೇ ಲಕ್ಷ್ಮಣನ ಸ್ವರೂಪವನ್ನೂ ನನ್ನನ್ನು ಸೇವಿಸುವದನ್ನೂ ತಿಳಿದಿರುವೆನು. ನಾನು ಮುಂದೆ ನಡೆಯಬೇಕಾಗಿರುವ ಕಾರ್ಯ ವಿಶೇಷಗಳ ನಿಮಿತ್ತವಾಗಿಯೇ ತಿಳಿದೂ ಸುಮ್ಮನಿರುವೆನು.'' ಹೀಗೆಂದು ಹೇಳಿ ಲಕ್ಷ್ಮಣನನ್ನು ಕುರಿತು ಜ್ಞಾನಿಗಳಲ್ಲಿ ಶ್ರೇಷ್ಠನಾದ ರಾಮನು ಹೀಗೆಂದನು.

**ಗಚ್ಛ ಲಕ್ಷ್ಮಣ ಸೈನ್ಯೇನ ಮಹತಾ ಜಹಿ ರಾವಣಿಮ್ ।**
**ಹನೂಮತ್ ಪ್ರಮುಖೈಸ್ಸರ್ವೈರ್ಯೂಥಪೈಃ ಸಹ ಲಕ್ಷ್ಮಣ ॥ ೪ ॥**
**ಜಾಂಬವಾನೃಕ್ಷರಾಜೋಽಯಂ ಸಹ ಸೈನ್ಯೇನ ಸಂವೃತಃ ।**
**ವಿಭೀಷಣಶ್ಚ ಸಚಿವೈಃ ಸಹ ತ್ವಮಭಿಯಾಸ್ಯತಿ**
**ಅಭಿಜ್ಞಸ್ತಸ್ಯ ದೇಹಸ್ಯ ಜಾನಾತಿ ವಿವರಾಣಿ ಸಃ ॥ ೫ ॥**

೪-೫. 'ಎಲೈ ಲಕ್ಷ್ಮಣನೆ, ಮಹತ್ತಾದ ಸೇನೆಯೊಡನೆ ಹನುಮಂತನೇ ಮೊದಲಾದ ಮುಖ್ಯಸೇನಾನಾಯಕರಿಂದ ಕೂಡಿ ಹೊರಡು. ರಾವಣಿಯನ್ನು ಸಂಹಾರಮಾಡು. ಈ ಕರಡಿಗಳ ರಾಜನಾದ ಜಾಂಬವಂತನು ಸೈನ್ಯದೊಡಗೂಡಿದವ ನಾಗಿ, ಮಂತ್ರಿಗಳೊಡಗೂಡಿದವನಾಗಿ ವಿಭೀಷಣನೂ ನಿನ್ನೊಡನೆ ಹೊರಟು ಬರಲಿರುವರು. ಅವನಾದರೊ, ಆ ರಾಕ್ಷಸನ ದೇಹದ ಚ್ಛಿದ್ರ (ಮರ್ಮಸ್ಥಾನ)ವನ್ನು ಚೆನ್ನಾಗಿ ಬಲ್ಲವ ನಾಗಿರುವನು.

**ರಾಮಸ್ಯ ವಚನಂ ಶ್ರುತ್ವಾ ಲಕ್ಷ್ಮಣಃ ಸವಿಭೀಷಣಃ ।**
**ಜಗ್ರಾಹ ಕಾರ್ಮುಕಂ ಶ್ರೇಷ್ಠಮನ್ಯದ್ ಭೀಮಪರಾಕ್ರಮಃ ॥ ೬ ॥**
**ರಾಮಪಾದಾಂಬುಜಂ ಸ್ಪೃಶ್ಯ ಹೃಷ್ಟಃ ಸೌಮಿತ್ರಿರಬ್ರವೀತ್ ।**
**ಅದ್ಯ ಮತ್ಕಾರ್ಮುಕಾನ್ಮುಕ್ತಾಃ ಶರಾ ನಿರ್ಭಿದ್ಯ ರಾವಣಿಮ್ ॥ ೭ ॥**
**ಗಮಿಷ್ಯಂತಿ ಹಿ ಪಾತಾಲಂ ಸ್ನಾತುಂ ಭೋಗವತೀಜಲೇ ।**
**ಏವಮುಕ್ತ್ವಾ ಸ ಸೌಮಿತ್ರಿಃ ಪರಿಕ್ರಮ್ಯ ಪ್ರಣಮ್ಯ ತಮ್ ॥ ೮ ॥**
**ಇಂದ್ರಜನ್ನಿಧನಾಕಾಂಕ್ಷೀ ಯಯೌ ತ್ವರಿತವಿಕ್ರಮಃ**

೬-೮. ರಾಮನ ಮಾತನ್ನು ಕೇಳಿ ವಿಭೀಷನೊಡಗೂಡಿದ ಭೀಮಪರಾಕ್ರಮ ನಾದ ಲಕ್ಷ್ಮಣನು ಬೇರೊಂದು ಶ್ರೇಷ್ಠವಾದ ಬಿಲ್ಲನ್ನು ತೆಗೆದುಕೊಂಡನು. ರಾಮನ ಪಾದಾರವಿಂದಗಳನ್ನು ಮುಟ್ಟಿ ಸಂತೋಷಗೊಂಡ ಲಕ್ಷ್ಮಣನು ಹೀಗೆಂದನು. : ''ಈಗ ನನ್ನ ಬಿಲ್ಲಿನಿಂದ ಹೊರಬಿದ್ದ ಬಾಣಗಳು ಇಂದ್ರಜಿತನನ್ನು ಸೀಳಿ ಪಾತಾಳ ದಲ್ಲಿರುವ ಭೋಗವತೀನದಿಯ ನೀರಿನಲ್ಲಿ ಸ್ನಾನಮಾಡಲು ಹೋಗಲಿವೆ.'' ಹೀಗೆಂದು ಹೇಳಿ ಆ ವೇಗಗಾಮಿಯಾದ ಲಕ್ಷ್ಮಣನು ಪ್ರದಕ್ಷಿಣೆಮಾಡಿ ಆ (ರಾಮನಿಗೆ) ನಮಸ್ಕಾರಮಾಡಿ ಇಂದ್ರಜಿತನನ್ನು ಸಂಹಾರಮಾಡುವ ಇಚ್ಛೆಯಿಂದ ಹೊರಟನು.

**ವಾನರೈರ್ಬಹುಸಾಹಸ್ರೈಃ ಹನೂಮಾನ್ ಪೃಷ್ಠತೋಽನ್ವಗಾತ್ ।**
**ವಿಭೀಷಣಶ್ಚ ಸಹಿತೋ ಮಂತ್ರಿಭಿಸ್ತ್ವರಿತಂ ಯಯೌ ॥ ೯ ॥**
**ಜಾಂಬವತ್ ಪ್ರಮುಖಾ ಋಕ್ಷಾಃ ಸೌಮಿತ್ರಿಂ ತ್ವರಯಾನ್ವಯುಃ ।**
**ಗತ್ವಾ ನಿಕುಂಭಿಲಾದೇಶಂ ಲಕ್ಷ್ಮಣೋ ವಾನರೈಃ ಸಹ ॥ ೧೦ ॥**
**ಅಪಶ್ಯದ್ ಬಲಸಂಘಾತಂ ದೂರಾದ್ ರಾಕ್ಷಸಸಂಕುಲಮ್**

೯-೧೦. ಅನೇಕ ಸಹಸ್ರ ಕಪಿಗಳೊಡನೆ ಹನುಮಂತನು ಹಿಂಬಾಲಿಸಿ ಹೊರಟನು. ಮಂತ್ರಿಗಳೊಡನೆ ವಿಭೀಷಣನೂ ಬೇಗನೆ ಹೊರಟನು. ಜಾಂಬವನೇ ಮುಂತಾದ ಮುಖ್ಯ ವಾದ ಕರಡಿಗಳೂ ಲಕ್ಷ್ಮಣನನ್ನು ಹಿಂಬಾಲಿಸಿ ಹೋದರು. ಹೀಗೆ

ವಾನರರೊಡನೆ ಲಕ್ಷ್ಮಣನು ನಿಕುಂಭಿಲೆಯ ಪ್ರದೇಶಕ್ಕೆ ಹೋಗಿ ರಾಕ್ಷಸರಿಂದ ತುಂಬಿಹೋಗಿದ್ದ ಬಲ ಸಮೂಹವನ್ನು ದೂರದಿಂದಲೇ ಕಂಡನು.

**ಧನುರಾಯಮ್ಯ ಸೌಮಿತ್ರಿರ್ಯತ್ತೋಽಭೂದ್ ಭೂರಿವಿಕ್ರಮಃ ।**
**ಅಂಗದೇನ ಚ ವೀರೇಣ ಜಾಂಬವಾನ್ ರಾಕ್ಷಸಾಧಿಪಃ ॥ ೧೧ ॥**
**ತದಾ ವಿಭೀಷಣಃ ಪ್ರಾಹ ಸೌಮಿತ್ರಿಂ ಪಶ್ಯ ರಾಕ್ಷಸಾನ್ ।**
**ಯದೇತದ್ ರಾಕ್ಷಸಾನೀಕಂ ಮೇಘಶ್ಯಾಮಂ ವಿಲೋಕ್ಯತೇ ॥ ೧೨ ॥**
**ಅಸ್ಯಾನೀಕಸ್ಯ ಮಹತೋ ಭೇದನೇ ಯತ್ನವಾನ್ ಭವ**
**ರಾಕ್ಷಸೇಂದ್ರಸುತೋಽಪ್ಯಸ್ಮಿನ್ ಭಿನ್ನೇ ದೃಶ್ಯೋ ಭವಿಷ್ಯತಿ ॥ ೧೩ ॥**
**ಅಭಿದ್ರವಾಶು ಯಾವದ್ವೈ ನೈತತ್ ಕರ್ಮ ಸಮಾಪ್ಯತೇ ।**
**ಜಹಿ ವೀರ ದುರಾತ್ಮಾನಂ ಹಿಂಸಾಪರಮಧಾರ್ಮಿಕಮ್ ॥ ೧೪ ॥**

೧೧-೧೪. ಹೆಚ್ಚಿನ ಪರಾಕ್ರಮಿಯಾದ ಲಕ್ಷ್ಮಣನು ಧನುಸ್ಸನ್ನೆತ್ತಿ ಸನ್ನದ್ಧನಾಗಿದ್ದನು. ಜಾಂಬವಂತನು ಅಂಗದನೊಡಗೂಡಿ (ಯುದ್ಧಕ್ಕೆ) ಸಿದ್ಧನಾದನು. ಆಗ ರಾಕ್ಷಸಾಧಿಪತಿಯಾದ ವಿಭೀಷಣನು ಲಕ್ಷ್ಮಣನನ್ನು ಕುರಿತು 'ಅಯ್ಯ ಈ ರಾಕ್ಷಸರನ್ನು ನೋಡು. ಇದೊ, ಈ ನೀಲಮೇಘದ ಬಣ್ಣದ ರಾಕ್ಷಸರ ಗುಂಪು ಕಾಣ ಬರುತ್ತಿದೆಯಲ್ಲ, ಈ ದೊಡ್ಡ ಗುಂಪನ್ನು ಚೆದುರಿಸುವದರಲ್ಲಿ ನೀನು ಉದ್ಯುಕ್ತನಾಗು. ಇದು ಬೇಧಿಸಲ್ಪಡಲು ರಾಕ್ಷಸೇಂದ್ರನಾದ (ರಾವಣನ) ಮಗನೂ ಕಂಡು ಬರುವನು. ಈ (ರಾಕ್ಷಸನ ಆಭಿಚಾರಿಕ) ಕರ್ಮವು ಪೂರೈಸುವದರೊಳಗೆ ನೀನು ಬೇಗನೆ ನುಗ್ಗುವವನಾಗು. ಮತ್ತು ಹಿಂಸೆಯನ್ನೇ ಮುಖ್ಯಧರ್ಮವಾಗಿ ಹೊಂದಿರುವ ಈ ದುರಾತ್ಮನನ್ನು ಎಲೈ ವೀರನೆ, ನಾಶಗೊಳಿಸುವ ವನಾಗು.

**ವಿಭೀಷಣವಚಃ ಶ್ರುತ್ವಾ ಲಕ್ಷ್ಮಣಃ ಶುಭಲಕ್ಷಣಃ ।**
**ವವರ್ಷ ಶರವರ್ಷಾಣಿ ರಾಕ್ಷಸೇಂದ್ರಸುತಂ ಪ್ರತಿ ॥ ೧೫ ॥**
**ಪಾಷಾಣೈಃ ಪರ್ವತಾಗ್ರೈಶ್ಚ ವೃಕ್ಷೈಶ್ಚ ಹರಿಯೂಥಪಾಃ ।**
**ನಿರ್ಜಘ್ನುಃ ಸರ್ವತೋ ದೈತ್ಯಾನ್ ತೇಽಪಿ ವಾನರಯೂಥಪಾನ್ ॥ ೧೬ ॥**
**ಪರಶ್ವಧೈಃ ಶಿತೈರ್ಬಾಣೈರಸಿಭಿರ್ಯಷ್ಟಿತೋಮರೈಃ ।**
**ನಿರ್ಜಘ್ನುರ್ವಾನರಾನೀಕಂ ತದಾ ಶಬ್ದೋ ಮಹಾನಭೂತ್ ॥ ೧೭ ॥**

೧೫-೧೭. ವಿಭೀಷನ ಮಾತನ್ನು ಕೇಳಿ ಶುಭಲಕ್ಷಣನಾದ ಲಕ್ಷ್ಮಣನು ರಾಕ್ಷಸೇಂದ್ರ ಪುತ್ರನಾದ ಇಂದ್ರಜಿತನ ಕಡೆಗೆ ಬಾಣದ ಮಳೆಯನ್ನು ಸುರಿಸಿದನು. ಕಪಿನಾಯಕರುಗಳು ಕಲ್ಲುಗಳು, ಪರ್ವತಶಿಖರಗಳು, ಮರಗಳನ್ನೆತ್ತಿಕೊಂಡು ಎಲ್ಲೆಲ್ಲಿಯೂ ರಾಕ್ಷಸರನ್ನು ಸದೆ ಬಡಿದರು. ಆ ರಾಕ್ಷಸರೂ ಕಪಿಗಳ ಸೇನಾಪತಿಗಳನ್ನು

ಹೊಡೆದರು. ಹರಿತವಾದ ಬಾಣಗಳಿಂದಲೂ, ಕೋಲು, ತೋಮರ, ಪರಶ್ವಧಗ ಳೆಂಬ ಆಯುಧವಿಶೇಷಗಳಿಂದಲೂ ಕಪಿಗಳ ಸಮೂಹವನ್ನು ಸಂಹರಿಸುತ್ತಿದ್ದರು. ಆಗ ಬಹಳ ಗದ್ದಲವಾಯಿತು.

**ಸ ಸಂಪ್ರಹಾರಸ್ತುಮುಲಃ ಸಂಜಜ್ಞೇ ಹರಿರಕ್ಷಸಾಮ್ ।**
**ಇಂದ್ರಜಿತ್ ಸ್ವಬಲಂ ಸರ್ವಮರ್ದ್ಯಮಾನಂ ವಿಲೋಕ್ಯ ಸಃ ॥ ೧೮ ॥**
**ನಿಕುಂಭಿಲಾಂ ಚ ಹೋಮಂ ಚ ತ್ಯಕ್ತ್ವಾ ಶೀಘ್ರಂ ವಿನಿರ್ಗತಃ ।**
**ರಥಮಾರುಹ್ಯ ಸಧನುಃ ಕ್ರೋಧೇನ ಮಹತಾಽಗಮತ್ ॥ ೧೯ ॥**
**ಸಮಾಹ್ವಯಿತ್ವಾ ಸೌಮಿತ್ರಿಂ ಯುದ್ಧಾಯ ರಣಮೂರ್ಧನಿ ।**
**ಸೌಮಿತ್ರೇ ಮೇಘನಾದೋಽಹಂ ಮಯಾ ಜೀವನ್ನ ಮೋಕ್ಷ್ಯಸೇ ॥ ೨೦ ॥**

೧೮-೨೦. ಆ ಯುದ್ಧವು ಬಹಳ ಬಿಗಡಾಯಿಸಿಕೊಂಡು ಕಪಿಗಳಿಗೂ ರಾಕ್ಷಸ ರಿಗೂ ನಷ್ಟವು ಸಂಭವಿಸಿಬಿಟ್ಟಿತು. ಆಗ ಇಂದ್ರಜಿತನು ತನ್ನ ಸೈನ್ಯವೆಲ್ಲವೂ ನಾಶ ವಾಗುತ್ತಿರುವದನ್ನು ಕಂಡು ನಿಕುಂಭಿಲೆಯನ್ನೂ ಹೋಮವನ್ನೂ ಬಿಟ್ಟು ಬೇಗನೆ ಹೊರಬಂದನು. ಬಹಳ ಸಿಟ್ಟಿನಿಂದ ಕೂಡಿ ರಥವನ್ನೇರಿ ಧನುಸ್ಸನ್ನು ಹಿಡಿದು ಬಂದನು. ರಣರಂಗದಲ್ಲಿ ಲಕ್ಷ್ಮಣನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ 'ಎಲವೊ, ಲಕ್ಷ್ಮಣನೆ, ನಾನು ಮೇಘನಾದನು ; ನನ್ನಿಂದ ನೀನು ಜೀವಸಹಿತ ತಪ್ಪಿಸಿಕೊಂಡು ಹೋಗಲಾರೆ' - ಎಂದನು.

**ತತ್ರ ದೃಷ್ಟ್ವಾ ಪಿತೃವ್ಯಂ ಸ ಪ್ರಾಹ ನಿಷ್ಠುರಭಾಷಿಣಮ್ ।**
**ಇಹೈವ ಜಾತಃ ಸಂವೃದ್ಧಃ ಸಾಕ್ಷಾದ್ ಭ್ರಾತಾ ಪಿತುರ್ಮಮ ॥ ೨೧ ॥**
**ಯಸ್ತ್ವಂ ಸ್ವಜನಮುತ್ಸೃಜ್ಯ ಪರಭೃತ್ಯತ್ವಮಾಗತಃ ।**
**ಕಥಂ ದ್ರುಹ್ಯಸಿ ಪುತ್ರಾಯ ಪಾಪೀಯಾನಸಿ ದುರ್ಮತಿಃ ॥ ೨೨ ॥**
**ಇತ್ಯುಕ್ತ್ವಾ ಲಕ್ಷ್ಮಣಂ ದೃಷ್ಟ್ವಾ ಹನೂಮತ್ ಪೃಷ್ಠತಃ ಸ್ಥಿತಮ್ ।**
**ಉದ್ಯದಾಯುಧನಿಸ್ತ್ರಿಂಶೇ ರಥೇ ಮಹತಿ ಸಂಸ್ಥಿತಃ ॥ ೨೩ ॥**

೨೧-೨೩. ಅವನು ಅಲ್ಲಿ ನಿಷ್ಠುರವಾಗಿ ಮಾತನಾಡುತ್ತಿದ್ದ ಚಿಕ್ಕಪ್ಪನನ್ನು ಕಂಡು ಹೀಗೆಂದನು ; 'ಇಲ್ಲಿಯೇ ಹುಟ್ಟಿ ಬೆಳೆದ, ನನ್ನ ತಂದೆಯ ಒಡಹುಟ್ಟಿದ ತಮ್ಮನಾಗಿದ್ದು ಯಾವ ನೀನು ಸ್ವಜನರನ್ನು ಕೈ ಬಿಟ್ಟು ಬೇರೊಬ್ಬನಿಗೆ ದಾಸನಾಗಿರುವೆ ಯಲ್ಲವೆ ? ನೀನು ಹೇಗೆ ತಾನೆ ಮಗನಿಗೆ ದ್ರೋಹಮಾಡಲು ಇಚ್ಛಿಸಿದೆ ? ನೀನು ದುರ್ಬುದ್ಧಿಯವನೂ ಪಾಪಿಯೂ ಆಗಿರುವೆ.'' ಹೀಗೆಂದು ಹೇಳುತ್ತಾ ಹನುಮಂತನ ಹಿಂಭಾಗದಲ್ಲಿದ್ದ ಲಕ್ಷ್ಮಣ ನನ್ನು ಕಂಡು ಸನ್ನದ್ಧವಾದ ಆಯುಧಗಳುಳ್ಳ ದೊಡ್ಡ ರಥವನ್ನೇರಿ ನಿಂತನು.

**ಮಹಾಪ್ರಮಾಣಮುದ್ಯಮ್ಯ ಘೋರಂ ವಿಸ್ಫಾರಯನ್ ಧನುಃ ।**
**ಅದ್ಯ ವೋ ಮಾಮಕಾ ಬಾಣಾಃ ಪ್ರಾಣಾನ್ ಪಾಸ್ಯಂತಿ ವಾನರಾಃ ॥ ೨೪ ॥**
**ತತಃ ಶರಂ ದಾಶರಥಿಃ ಸಂಧಾಯಾಮಿತ್ರಕರ್ಶನಃ ।**
**ಸಸರ್ಜ ರಾಕ್ಷಸೇಂದ್ರಾಯ ಕ್ರುದ್ಧಃ ಸರ್ಪ ಇವ ಶ್ವಸನ್ ॥ ೨೫ ॥**
**ಇಂದ್ರಜಿತ್ ರಕ್ತನಯನೋ ಲಕ್ಷ್ಮಣಂ ಸಮುದೈಕ್ಷತ ।**

೨೪-೨೫. ಬಹಳ ದೊಡ್ಡಪ್ರಮಾಣದ ಭಯಂಕರವಾದ ಬಿಲ್ಲನ್ನು ಟಂಕಾರ ಮಾಡುವವನಾಗಿ, 'ಎಲೈ ಕಪಿಗಳಿರಾ, ಈಗ ನನ್ನ ಬಾಣಗಳು ನಿಮ್ಮ ಪ್ರಾಣಗಳನ್ನು ಕುಡಿಯಲಿರುವವು'-ಎಂದನು. ಅನಂತರ ಶತ್ರುನಾಶಕನಾದ ಲಕ್ಷ್ಮಣನು ಬಾಣವನ್ನು ಹೂಡಿ ಕೋಪಗೊಂಡ ಹಾವಿನಂತೆ ಬುಸುಗುಟ್ಟುತ್ತಾ ರಾಕ್ಷಸೇಂದ್ರನಾದ (ಇಂದ್ರಜಿತ್ತಿನ ಕಡೆಗೆ) ಬಾಣವನ್ನು ಎಸೆದನು. ಆಗ ಇಂದ್ರಜಿತನು ಕೆಂಪಾದ ಕಣ್ಣುಗಳಿಂದ ಲಕ್ಷ್ಮಣನನ್ನು ನೋಡಿದನು.

**ಶಕ್ರಾಶನಿಸಮಸ್ಪರ್ಶೈಃ ಲಕ್ಷ್ಮಣೇನಾಹತಃ ಶರೈಃ ।**
**ಮುಹೂರ್ತಮಭವತ್ ಮೂಢಃ ಪುನಃ ಪ್ರತ್ಯಾಹೃತೇಂದ್ರಿಯಃ ॥ ೨೬ ॥**
**ದದರ್ಶಾವಸ್ಥಿತಂ ವೀರಂ ವೀರೋ ದಶರಥಾತ್ಮಜಮ್ ।**
**ಸೋಽಭಿಚಕ್ರಾಮ ಸೌಮಿತ್ರಿಂ ಕ್ರೋಧಸಂರಕ್ತಲೋಚನಃ ॥ ೨೭ ॥**
**ಶರಾನ್ ಧನುಷಿ ಸಂಧಾಯ ಲಕ್ಷ್ಮಣಂ ಚೇದಮಬ್ರವೀತ್ ।**

೨೬-೨೭. ದೇವೇಂದ್ರನ ವಜ್ರಾಯುಧದ ಹೊಡೆತಕ್ಕೆ ಸಮಾನವಾದ ಲಕ್ಷ್ಮಣನ ಬಾಣಘಾತಗಳಿಂದ ಒಂದು ಮುಹೂರ್ತಕಾಲದವರೆಗೆ ಮೂಢನಾಗಿ ಬಿಟ್ಟನು. ಪುನಃ ಎಚ್ಚರಿಸಲ್ಪಟ್ಟ ಪ್ರಜ್ಞೆಯುಳ್ಳವನಾಗಿ ಎದುರಿಗೆ ನಿಂತಿದ್ದ ದಶರಥ ಪುತ್ರನಾದ (ಲಕ್ಷ್ಮಣ)ನನ್ನು ಕಂಡನು. ಮತ್ತು ಕೋಪದಿಂದ ಕೆಂಪಾದ ಕಂಗಳುಳ್ಳವನಾಗಿ ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಲಕ್ಷ್ಮಣನನ್ನು ಕುರಿತು ಹೀಗೆಂದನು.

**ಯದಿ ತೇ ಪ್ರಥಮೇ ಯುದ್ಧೇ ನ ದೃಷ್ಟೋ ಮೇ ಪರಾಕ್ರಮಃ ।**
**ಅದ್ಯ ತ್ವಾಂ ದರ್ಶಯಿಷ್ಯಾಮಿ ತಿಷ್ಠೇದಾನೀಂ ವ್ಯವಸ್ಥಿತಃ ॥ ೨೮ ॥**
**ಇತ್ಯುಕ್ತ್ವಾ ಸಪ್ತಭಿರ್ಬಾಣೈರಭಿವಿವ್ಯಾಧ ಲಕ್ಷ್ಮಣಮ್ ।**
**ದಶಭಿಶ್ಚ ಹನೂಮಂತಂ ತೀಕ್ಷ್ಣಧಾರೈಶ್ಶರೋತ್ತಮೈಃ ॥ ೨೯ ॥**
**ತತಃ ಶರಶತೇನೈವ ಸಂಪ್ರಯುಕ್ತೇನ ವೀರ್ಯವಾನ್ ।**
**ಕ್ರೋಧಾದ್ ದ್ವಿಗುಣಸಂರಬ್ಧೋ ನಿರ್ಬಿಭೇದ ವಿಭೀಷಣಮ್ ॥ ೩೦ ॥**

೨೮-೩೦. "ಒಂದು ವೇಳೆ ನಿನಗೆ ಮೊದಲನೆಯ ಯುದ್ಧದಲ್ಲಿ ನನ್ನ ಪರಾಕ್ರಮವು ಕಂಡುಬರಲಿಲ್ಲವಾದರೆ ಈಗ ನಿನಗೆ ತೋರಿಸುವೆನು. ಈಗ ಸರಿಯಾಗಿ

ನಿಲ್ಲು'' ಹೀಗೆಂದು ಹೇಳಿ ಏಳು ಬಾಣಗಳಿಂದ ಲಕ್ಷ್ಮಣನನ್ನು ಹೊಡೆದನು. ಚೂಪಾದ ಅಲಗುಳ್ಳ ಉತ್ತಮವಾದ ಹತ್ತುಬಾಣಗಳಿಂದ ಹನುಮಂತನನ್ನು ಹೊಡೆದನು. ಅನಂತರ ವೀರ್ಯಶಾಲಿಯಾದ ಅವನು ಕೋಪದಿಂದ ಎರಡರಷ್ಟು ಕೆರಳಿದವನಾಗಿ ಒಂದು ನೂರುಬಾಣಗಳಿಂದ ವಿಭೀಷಣನನ್ನು ಹೊಡೆದನು.

**ಲಕ್ಷ್ಮಣೋಽಪಿ ತಥಾ ಶತ್ರುಂ ಶರವರ್ಷೈರವಾಕಿರತ್ ।**
**ತಸ್ಯ ಬಾಣೈಃ ಸುಸಂವಿದ್ಧಂ ಕವಚಂ ಕಾಂಚನಪ್ರಭಮ್ ॥ ೩೧ ॥**
**ವ್ಯಶೀರ್ಯತ ರಥೋಪಸ್ಥೇ ತಿಲಶಃ ಪತಿತಂ ಭುವಿ ।**
**ತತಃ ಶರಸಹಸ್ರೇಣ ಸಂಕ್ರುದ್ಧೋ ರಾವಣಾತ್ಮಜಃ ॥ ೩೨ ॥**
**ಬಿಭೇದ ಸಮರೇ ವೀರಂ ಲಕ್ಷ್ಮಣಂ ಭೀಮವಿಕ್ರಮಮ್ ।**
**ವ್ಯಶೀರ್ಯತಾಪತದ್ದಿವ್ಯಂ ಕವಚಂ ಲಕ್ಷ್ಮಣಸ್ಯ ಚ ॥ ೩೩ ॥**

೩೧-೩೩. ಲಕ್ಷ್ಮಣನು ಕೂಡ ಹಾಗೆಯೇ ಶತ್ರುವನ್ನು ಬಾಣದ ಮಳೆಯಿಂದ ಆವರಿಸಿಬಿಟ್ಟನು. ಅವನ ಬಾಣಗಳಿಂದ (ಇಂದ್ರಜಿತನ) ಚಿನ್ನದಂತೆ ಹೊಳೆಯುತ್ತಿದ್ದ ಹಾಗೂ ಚೆನ್ನಾಗಿ ತೊಡಿಸಲ್ಪಟ್ಟಿದ್ದ ಕವಚವು ರಥದ ಒಳಗೇ ಹರಿದು ಬಿದ್ದು ನುಚ್ಚುನೂರಾಯಿತು. ಅನಂತರ ಕುಪಿತನಾದ ರಾವಣಪುತ್ರನು ಸಾವಿರಾರು ಬಾಣಗಳಿಂದ ಭಯಂಕರ ಪರಾಕ್ರಮಿಯಾದ ವೀರನಾದ ಲಕ್ಷ್ಮಣನನ್ನು ಹೊಡೆದನು. ಆಗ ಲಕ್ಷ್ಮಣನ ದಿವ್ಯಕವಚವೂ ಹರಿದು ಬಿದ್ದು ಹೋಯಿತು.

**ಕೃತಪ್ರತಿಕೃತಾನ್ಯೋನ್ಯಂ ಬಭೂವತುರಭಿದ್ರುತೌ ।**
**ಅಭೀಕ್ಷ್ಣಂ ನಿಃಶ್ವಸಂತೌ ತೌ ಯುಧ್ಯೇತಾಂ ತುಮುಲಂ ಪುನಃ ॥ ೩೪ ॥**
**ಶರಸಂವೃತಸರ್ವಾಂಗೌ ಸರ್ವತೋ ರುಧಿರೋಕ್ಷಿತೌ ।**
**ಸುದೀರ್ಘಕಾಲಂ ತೌ ವೀರಾವನ್ಯೋನ್ಯಂ ನಿಶಿತೈಃ ಶರೈಃ ॥ ೩೫ ॥**
**ಅಯುಧ್ಯೇತಾಂ ಮಹಾಸತ್ತ್ವೌ ಜಯಾಜಯವಿವರ್ಜಿತೌ ।**

೩೪-೩೫. ಮುನ್ನುಗ್ಗಿದ ಇಬ್ಬರೂ ಒಬ್ಬರಿಗೊಬ್ಬರು ಪ್ರತೀಕಾರ ಮಾಡುತ್ತಾ ಮತ್ತೆ ಮತ್ತೆ ನಿಟ್ಟುಸಿರುಬಿಡುತ್ತಾ ನಿಬಿಡವಾಗಿ ಯುದ್ಧಮಾಡಿದರು. ಮೈಯಲ್ಲೆಲ್ಲ ಬಾಣಗಳು ಚುಚ್ಚಿಕೊಂಡವರಾಗಿ ಎಲ್ಲೆಲ್ಲಿಯೂ ರಕ್ತದಿಂದ ತೋಯ್ದುಹೋದವರಾಗಿ ಬಹುದೀರ್ಘಕಾಲ ಬಹಳ ಬಲಶಾಲಿಗಳಾದ ಆ ವೀರರುಗಳು ಪರಸ್ಪರವಾಗಿ ಹರಿತವಾದ ಬಾಣಗಳಿಂದ ಕಾದಾಡುತ್ತಾ ಜಯಪರಾಜಯಗಳಿಲ್ಲದೆ ಹೋರಾಡುತ್ತಿದ್ದರು.

**ಏತಸ್ಮಿನ್ನಂತರೇ ವೀರೋ ಲಕ್ಷ್ಮಣಃ ಪಂಚಭಿಃ ಶರೈಃ ।**
**ರಾವಣೇಃ ಸಾರಥಿಂ ಸಾಶ್ವಂ ರಥಂ ಚ ಸಮಚೂರ್ಣಯತ್ ॥ ೩೬ ॥**

**ಚಿಚ್ಛೇದ ಕಾರ್ಮುಕಂ ತಸ್ಯ ದರ್ಶಯನ್ ಹಸ್ತಲಾಘವಮ್ ।**
**ಸೋಽನ್ಯತ್ತು ಕಾರ್ಮುಕಂ ಭದ್ರಂ ಸಜ್ಯಂ ಚಕ್ರೇ ತ್ವರಾನ್ವಿತಃ ॥ ೩೭ ॥**
**ತಚ್ಚಾಪಮಪಿ ಚಿಚ್ಛೇದ ಲಕ್ಷ್ಮಣಸ್ತ್ರಿಭಿರಾಶುಗೈಃ ।**
**ತಮೇವ ಛಿನ್ನಧನ್ವಾನಂ ವಿವ್ಯಾಧಾನೇಕಸಾಯಕೈಃ ॥ ೩೮ ॥**

೩೬-೩೮. ಈ ನಡುವೆ ವೀರನಾದ ಲಕ್ಷ್ಮಣನು ಐದು ಬಾಣಗಳಿಂದ ರಾವಣನ ಪುತ್ರನ ರಥ, ಕುದುರೆ, ಸಾರಥಿ - ಎಲ್ಲವನ್ನೂ ಪುಡಿಮಾಡಿದನು. ತನ್ನ ಕೈಚಳಕವನ್ನು ಪ್ರದರ್ಶಿಸುತ್ತಾ (ಇಂದ್ರಜಿತನ ಕೈಯಲ್ಲಿದ್ದ) ಬಿಲ್ಲನ್ನು ಕತ್ತರಿಸಿದನು. ಅವನು ಬೇಗನೆ ಬೇರೊಂದು ಗಟ್ಟಿಯಾದ ಬಿಲ್ಲನ್ನು ಸಿದ್ಧಗೊಳಿಸಿಕೊಂಡನು. ಲಕ್ಷ್ಮಣನು ಆ ಬಿಲ್ಲನ್ನೂ ವೇಗವಾದ ಮೂರು ಬಾಣಗಳಿಂದ ಕತ್ತರಿಸಿದನು. ಹಾಗೆಯೇ ಮುರಿದ ಧನುಸ್ಸುಳ್ಳ ಅವನನ್ನು ಅನೇಕಬಾಣಗಳಿಂದ ಹೊಡೆದನು.

**ಪುನರನ್ಯತ್ ಸಮಾದಾಯ ಕಾರ್ಮುಕಂ ಭೀಮವಿಕ್ರಮಃ ।**
**ಇಂದ್ರಜಿಲ್ಲಕ್ಷ್ಮಣಂ ಬಾಣೈಃ ಶಿತೈರಾದಿತ್ಯಸಂನಿಭೈಃ ॥ ೩೯ ॥**
**ಬಿಭೇದ ವಾನರಾನ್ ಸರ್ವಾನ್ ಬಾಣೈರಾಪೂರಯನ್ ದಿಶಃ ।**

೩೯. ಭಯಂಕರವಾದ ಪರಾಕ್ರಮಿಯಾದ ಇಂದ್ರಜಿತನು ಬೇರೊಂದು ಬಿಲ್ಲನ್ನು ಹಿಡಿದು ಸೂರ್ಯನಂತೆ ಹೊಳೆಯುವ ಬಾಣಗಳಿಂದ ಲಕ್ಷ್ಮಣನನ್ನೂ ಎಲ್ಲಾ ಕಪಿಗಳನ್ನೂ ಹೊಡೆದನು. ದಿಕ್ಕುಗಳನ್ನೆಲ್ಲ ಬಾಣಗಳಿಂದ ತುಂಬಿದನು.

**ತತ ಐಂದ್ರಂ ಸಮಾದಾಯ ಲಕ್ಷ್ಮಣೋ ರಾವಣಿಂ ಪ್ರತಿ ।**
**ಸಂಧಾಯಾಕೃಷ್ಯ ಕರ್ಣಾಂತಂ ಕಾರ್ಮುಕಂ ದೃಢನಿಷ್ಠುರಮ್ ॥ ೪೦ ॥**
**ಉವಾಚ ಲಕ್ಷಣೋ ವೀರಃ ಸ್ಮರನ್ ರಾಮಪದಾಂಬುಜಮ್ ।**
**ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ॥ ೪೧ ॥**
**ತ್ರಿಲೋಕ್ಯಾಮಪ್ರತಿದ್ವಂದ್ವಃ ತದೇನಂ ಜಹಿ ರಾವಣಿಮ್ ।**
**ಇತ್ಯುಕ್ತ್ವಾ ಬಾಣಮಾಕರ್ಣಾದ್ ವಿಕೃಷ್ಯ ತಮಜಿಹ್ಮಗಮ್ ॥ ೪೨ ॥**
**ಲಕ್ಷ್ಮಣಃ ಸಮರೇ ವೀರಃ ಸಸರ್ಜೇಂದ್ರಜಿತಂ ಪ್ರತಿ ।**

೪೦-೪೨. ಅನಂತರ ಲಕ್ಷ್ಮಣನು ಇಂದ್ರಜಿತನನ್ನು ಕುರಿತು ಐಂದ್ರಾಸ್ತ್ರವನ್ನು ತೆಗೆದುಕೊಂಡು ಜೋಡಿಸಿ ಗಟ್ಟಿಯಾಗಿಯೂ ಒರಟಾಗಿಯೂ ಇದ್ದ ಬಿಲ್ಲನ್ನು ಕಿವಿಯ ತುದಿಗಳವರೆಗೂ ಜಗ್ಗಿದವನಾಗಿ ಶ್ರೀರಾಮನ ಪಾದಾರವಿಂದಗಳನ್ನು ನೆನೆಯುತ್ತಾ ವೀರನಾದ ಲಕ್ಷ್ಮಣನು ಹೀಗೆಂದನು. ''ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಮೂರುಲೋಕಗಳಲ್ಲಿಯೂ ಎದುರಾಳಿಯಿಲ್ಲದವನೂ ಆದವನಾಗಿದ್ದರೆ ಎಲೈ ಬಾಣವೆ, ಈ ರಾವಣಪುತ್ರನನ್ನು ಕೊಲ್ಲು'' ಎಂದು ಹೇಳಿ

ಸಾರ್ಥಕವಾದ (ಅಮೋಘವಾದ) ಆ ಬಾಣವನ್ನು ಎಳೆದು ವೀರನಾದ ಲಕ್ಷ್ಮಣನು ಯುದ್ಧದಲ್ಲಿ ಇಂದ್ರಜಿತನೆಡೆಗೆ ಬಿಟ್ಟನು.

**ಸ ಶರಃ ಸಶಿರಸ್ತ್ರಾಣಂ ಶ್ರೀಮಜ್ಜ್ವಲಿತಕುಂಡಲಮ್ ।**
**ಪ್ರಮಥ್ಯೇಂದ್ರಜಿತಃ ಕಾಯಾತ್ ಪಾತಯಾಮಾಸ ಭೂತಲೇ ॥ ೪೩ ॥**
**ತತಃ ಪ್ರಮುದಿತಾ ದೇವಾಃ ಕೀರ್ತಯಂತೋ ರಘೂತ್ತಮಮ್ ।**
**ವವರ್ಷುಃ ಪುಷ್ಪವರ್ಷಾಣಿ ಸ್ತುವಂತಶ್ಚ ಮುಹುರ್ಮುಹುಃ ॥ ೪೪ ॥**
**ಜಹರ್ಷ ಶಕ್ರೋ ಭಗವಾನ್ ಸಹ ದೇವೈರ್ಮಹರ್ಷಿಭಿಃ ।**
**ಆಕಾಶೇಽಪಿ ಚ ದೇವಾನಾಂ ಶುಶ್ರುವೇ ದುಂದುಭಿಸ್ವನಃ ॥ ೪೫ ॥**
**ವಿಮಲಂ ಗಗನಂ ಚಾಸೀತ್ ಸ್ಥಿರಾಭೂದ್ ವಿಶ್ವಧಾರಿಣೀ ।**

೪೩-೪೫. ಆ ಬಾಣವು ಹೊಳೆಯುತ್ತಿರುವ ಕರ್ಣಾಭರಣಗಳುಳ್ಳ ಕಿವಿಗಳುಳ್ಳ ಹಾಗೂ ತಲೆಯ ರಕ್ಷಾಕವಚವುಳ್ಳ ಶ್ರೀಮಂತವಾದ ಇಂದ್ರಜಿತನ ಶಿರಸ್ಸನ್ನು ಶರೀರದಿಂದ ತುಂಡರಿಸಿ ನೆಲದಮೇಲೆ ಕೆಡವಿಬಿಟ್ಟಿತು. ಅನಂತರ ಸಂತುಷ್ಟರಾದ ದೇವತೆಗಳು ಶ್ರೀರಾಮಾನುಜನನ್ನು ಸ್ತುತಿಸುತ್ತಾ ಮತ್ತೆ ಮತ್ತೆ ಹೊಗಳುತ್ತಾ ಹೂವಿನ ಮಳೆಯನ್ನು ಸುರಿಸಿದರು. ಪೂಜ್ಯನಾದ ದೇವೇಂದ್ರನು ಋಷಿಗಳು ಹಾಗೂ ದೇವತೆಗಳೊಡಗೂಡಿ ಸಂತೋಷಗೊಂಡನು. ಆಕಾಶದಲ್ಲಿಯೂ ದೇವತೆಗಳಿಂದ ನಗಾರಿಯು ಬಾರಿಸಲ್ಪಟ್ಟ ಶಬ್ದವು ಕೇಳಿಸಿತು. ಆಕಾಶವೆಲ್ಲವೂ ನಿರ್ಮಲವಾಯಿತು. ಭೂದೇವಿಯು ಅಚಲಳಾಗಿ ನಿಂತಳು.

**ನಿಹತಂ ರಾವಣಿಂ ದೃಷ್ಟ್ವಾ ಜಯಜಲ್ಪಸಮನ್ವಿತಃ ।**
**ಗತಶ್ರಮಃ ಸಸೌಮಿತ್ರಿಃ ಶಂಖಮಾಪೂರಯದ್ ರಣೇ ॥ ೪೬ ॥**
**ಸಿಂಹನಾದಂ ತತಃ ಕೃತ್ವಾ ಜ್ಯಾಶಬ್ದಮಕರೋದ್ ವಿಭುಃ ।**
**ತೇನ ನಾದೇನ ಸಂತುಷ್ಟಾ ವಾನರಾಶ್ಚ ಗತಶ್ರಮಾಃ ॥ ೪೭ ॥**
**ವಾನರೇಂದ್ರೈಶ್ಚ ಸಹಿತಃ ಸ್ತುವದ್ಭಿಃ ಹೃಷ್ಟಮಾನಸೈಃ ।**
**ಲಕ್ಷ್ಮಣಃ ಪರಿತುಷ್ಟಾತ್ಮಾ ದದರ್ಶಾಭ್ಯೇತ್ಯ ರಾಘವಮ್ ॥ ೪೮ ॥**
**ಹನೂಮದ್ರಾಕ್ಷಸಾಭ್ಯಾಂ ಚ ಸಹಿತೋ ವಿನಯಾನ್ವಿತಃ ।**

೪೬-೪೮. ಇಂದ್ರಜಿತನು ನಿಧನನಾದುದನ್ನು ಕಂಡು ಜಯಶಬ್ದಗಳಿಂದ ಕೂಡಿದ ಲಕ್ಷ್ಮಣನು ಶ್ರಮವಿಲ್ಲದವನಾಗಿ ಆ ಯುದ್ಧರಂಗದಲ್ಲಿ ಶಂಖವನ್ನು ಊದಿದನು. ಅನಂತರ ಸಿಂಹನಾದವನ್ನು ಮಾಡಿ ಬಿಲ್ಲಿನ ಹಗ್ಗವನ್ನು ಸದ್ದುಮಾಡಿದನು. ಆ ಧ್ವನಿಯಿಂದ ಸಂತುಷ್ಟರಾದ ಕಪಿಗಳು ಕೂಡ ಆಯಾಸಪರಿಹಾರವನ್ನು ಹೊಂದಿದವರಾಗಿಬಿಟ್ಟರು. ಹೊಗಳುತ್ತಾ, ತೃಪ್ತಿಯಿಂದ ಕೂಡಿದ ಮನಸ್ಸುಳ್ಳವರಾದ ಕಪಿಶ್ರೇಷ್ಠ

ರಿಂದ ಕೂಡಿದ ಲಕ್ಷ್ಮಣನು ಆತ್ಮಸಂತೋಷಯುಕ್ತನಾಗಿ, ವಿನಯದಿಂದ ಕೂಡಿ, ವಿಭೀಷಣ, ಹನುಮಂತ- ಇವರೊಡನೆ ಹೊರಟುಬಂದು ಶ್ರೀರಾಮನನ್ನು ಕಂಡನು.

**ವವಂದೇ ಭ್ರಾತರಂ ರಾಮಂ ಜ್ಯೇಷ್ಠಂ ನಾರಾಯಣಂ ವಿಭುಮ್ ।**
**ತ್ವತ್ಪ್ರಸಾದಾದ್ ರಘುಶ್ರೇಷ್ಠ ಹತೋ ರಾವಣಿರಾಹವೇ ॥ ೪೯ ॥**
**ಶ್ರುತ್ವಾ ತಲ್ಲಕ್ಷ್ಮಣಾದ್ ಭಕ್ತ್ಯಾ ತಮಾಲಿಂಗ್ಯ ರಘೂತ್ತಮಃ ।**
**ಮೂರ್ಧ್ನ್ಯವಘ್ರಾಯ ಮುದಿತಃ ಸಸ್ನೇಹಮಿದಮಬ್ರವೀತ್ ॥ ೫೦ ॥**
**ಸಾಧು ಲಕ್ಷ್ಮಣ ತುಷ್ಟೋಽಸ್ಮಿ ಕರ್ಮ ತೇ ದುಷ್ಕರಂ ಕೃತಮ್ ।**
**ಮೇಘನಾದಸ್ಯ ನಿಧನೇ ಜಿತಂ ಸರ್ವಮರಿಂದಮ ॥ ೫೧ ॥**

೪೯-೫೧. ಹಿರಿಯನೂ ವ್ಯಾಪಕನಾದ ನಾರಾಯಣನ ಸ್ವರೂಪನೂ ಆದ ಸಹೋದರನಾದ ರಾಮನನ್ನು ನಮಸ್ಕರಿಸಿದನು. ''ಎಲೈ ರಘುಶ್ರೇಷ್ಠನೆ, ನಿನ್ನ ಅನುಗ್ರಹದ ಬಲದಿಂದ ರಾವಣಿಯು ಯುದ್ಧದಲ್ಲಿ ಕೊಲ್ಲಲ್ಪಟ್ಟನು'' ಎಂದನು. ಲಕ್ಷ್ಮಣನಿಂದ ಭಕ್ತಿಪೂರ್ವಕವಾಗಿ ಹೇಳಲ್ಪಟ್ಟ ಆ ಮಾತನ್ನು ಕೇಳಿ ರಘುರಾಮನು ಅವನನ್ನು ಆಲಿಂಗಿಸಿಕೊಂಡು ನೆತ್ತಿಯನ್ನು ಮೂಸಿ ಸಂತೋಷಯುಕ್ತನಾಗಿ ಪ್ರೇಮದಿಂದ ಹೀಗೆಂದನು: ''ಲಕ್ಷ್ಮಣನೆ, ಒಳ್ಳೆಯದು ಮಾಡಿದೆಯಪ್ಪ ! ಬಹಳ ದುಸ್ಸಾಧ್ಯವಾದ ಕೆಲಸವನ್ನು ಮಾಡಿರುವೆ. ನಾನು ಬಹಳ ಸಂತೋಷಗೊಂಡಿರುವೆನು. ಇಂದ್ರಜಿತನನ್ನು ಕೊಂದದ್ದರಿಂಗ ಎಲೈ ಶತ್ರುನಾಶಕನೆ, ಎಲ್ಲರನ್ನೂ ಗೆದ್ದಂತಾಗಿದೆ.''

**ಅಹೋರಾತ್ರೈಸ್ತ್ರಿಭಿರ್ವೀರಃ ಕಥಂಚಿತ್ ವಿನಿಪಾತಿತಃ ।**
**ನಿಃಸಪತ್ನಃ ಕೃತೋಽಸ್ಮ್ಯದ್ಯ ನಿರ್ಯಾಸ್ಯತಿ ಹಿ ರಾವಣಃ ॥ ೫೨ ॥**
**ಪುತ್ರಶೋಕಾನ್ಮಯಾ ಯೋದ್ಧುಂ ತಂ ಹನಿಷ್ಯಾಮಿ ರಾವಣಮ್ ।**

೫೨. '' ಮೂರು ಹಗಲು, ಮೂರು ರಾತ್ರೆಗಳ ಕಾಲದ ನಿರಂತರ ಯುದ್ಧ ದಿಂದ ಆ ವೀರನು ಹೇಗೋ ಕಷ್ಟದಿಂದ ಕೆಡವಲ್ಪಟ್ಟನು. ಈಗ ನಾನು ಶತ್ರುವಿಲ್ಲದವನಾದೆನು. ಇನ್ನು ಮುಂದೆ ಪುತ್ರಶೋಕದಿಂದ ಕೂಡಿದ ರಾವಣನು ನನ್ನೊಡನೆ ಯುದ್ಧಮಾಡುವದಕ್ಕೆ ಬರಲಿರುವನು. ಆ ರಾವಣನನ್ನು ಕೊಲ್ಲಲಿರು ವೆನು.''

**ಮೇಘನಾದಂ ಹತಂ ಶ್ರುತ್ವಾ ಲಕ್ಷ್ಮಣೇನ ಮಹಾಬಲಮ್।**
**ರಾವಣಃ ಪತಿತೋ ಭೂಮೌ ಮೂರ್ಛಿತಃ ಪುನರುತ್ಥಿತಃ ॥ ೫೩ ॥**
**ವಿಲಲಾಪಾತಿದೀನಾತ್ಮಾ ಪುತ್ರಶೋಕೇನ ರಾವಣಃ ।**
**ಪುತ್ರಸ್ಯ ಗುಣಕರ್ಮಾಣಿ ಸಂಸ್ಮರನ್ ಪರ್ಯದೇವಯತ್ ॥ ೫೪ ॥**

**ಅದ್ಯ ದೇವಗಣಾಃ ಸರ್ವೇ ಲೋಕಪಾಲಾ ಮಹರ್ಷಯಃ ।**
**ಹತಮಿಂದ್ರಜಿತಂ ಜ್ಞಾತ್ವಾ ಸುಖಂ ಸ್ವಪ್ಸ್ಯಂತಿ ನಿರ್ಭಯಾಃ ।**
**ಇತ್ಯಾದಿ ಬಹುಶಃ ಪುತ್ರಲಾಲಸೋ ವಿಲಲಾಪ ಹ ॥ ೫೫ ।**

೫೩ - ೫೫. ಮೇಘನಾದ (ಇಂದ್ರಜಿತ್)ನು ಲಕ್ಷ್ಮಣನಿಂದ ಹತನಾದ ಸುದ್ಧಿಯನ್ನು ಕೇಳಿ ರಾವಣನು ಮೂರ್ಛಿತನಾಗಿ ನೆಲದಲ್ಲಿ ಬಿದ್ದು ಮತ್ತೆ ಮೇಲೆದ್ದನು. ಬಹಳವಾಗಿ ದೈನ್ಯದಿಂದ ಕೂಡಿದವನಾಗಿ ರಾವಣನು ಪುತ್ರಶೋಕದಿಂದ ತುಂಬಿದವನಾಗಿ ಅವನ ಗುಣಗಳನ್ನೂ ಕಾರ್ಯಗಳನ್ನೂ ನೆನೆಯುತ್ತಾ ಅತ್ತನು. 'ಇನ್ನು ಮುಂದೆ ದೇವಗಣಗಳೂ ಮಹರ್ಷಿಗಳೂ ಲೋಕಪಾಲಕರುಗಳೂ ಇಂದ್ರಜಿತನು ಸತ್ತದ್ದನ್ನು ತಿಳಿದು ಹೆದರಿಕೆಯಿಲ್ಲದೆ ಸುಖವಾಗಿ ನಿದ್ರಿಸಲಿರುವರು.' ಹೀಗೆಲ್ಲ ರೀತಿಯಿಂದ ಪುತ್ರ ಪ್ರೇಮದಿಂದ ತುಂಬಿದವನಾಗಿ ದುಃಖಿಸಿದನು.

**ತತಃ ಪರಮಸಂಕ್ರುದ್ಧೋ ರಾವಣೋ ರಾಕ್ಷಸಾಧಿಪಃ ।**
**ಉವಾಚ ರಾಕ್ಷಸಾನ್ ಸರ್ವಾನ್ ವಿನಾಶಯಿಷುರಾಹವೇ ॥ ೫೬ ।**
**ಸ ಪುತ್ರವಧಸಂತಪ್ತಃ ಶೂರಃ ಕ್ರೋಧವಶಂ ಗತಃ ।**
**ಸಂವೀಕ್ಷ್ಯ ರಾವಣೋ ಬುದ್ಧ್ಯಾ ಹಂತುಂ ಸೀತಾಂ ಪ್ರದುದ್ರುವೇ ॥ ೫೭ ।**
**ಖಡ್ಗಪಾಣಿಮಥಾಯಾಂತಂ ಕ್ರುದ್ಧಂ ದೃಷ್ಟ್ವಾ ದಶಾನನಮ್ ।**
**ರಾಕ್ಷಸೀಮಧ್ಯಗಾ ಸೀತಾ ಭಯಶೋಕಾಕುಲಾಽಭವತ್ ॥ ೫೮ ॥**

೫೬-೫೮. ಅನಂತರ ಬಹಳವಾಗಿ ಸಿಟ್ಟಿಗೆದ್ದ ರಾಕ್ಷಸಾಧಿಪತಿಯಾದ ರಾವಣನು ಯುದ್ಧದಲ್ಲಿ ಎಲ್ಲ ಶತ್ರುಗಳನ್ನೂ ನಾಶಗೊಳಿಸಿಬಿಡುವ ಹಟದಿಂದ ಎಲ್ಲ ರಾಕ್ಷಸರನ್ನೂ (ಯುದ್ಧಮಾಡಲು) ಹೇಳಿದನು. ಶೂರನಾದ ಅವನು ಪುತ್ರವಧೆಯಿಂದ ದುಃಖಿತನಾಗಿ ಕೋಪಕ್ಕೆ ವಶನಾಗಿ ಅದೇ ಬುದ್ಧಿಯಿಂದಾಲೋಚಿಸಿ ಸೀತೆಯನ್ನು ಕೊಲ್ಲಲು ವೇಗದಿಂದ ಹೊರಟನು. ಕತ್ತಿಯನ್ನು ಹಿಡಿದು ತನ್ನ ಕಡೆಗೆ ಬರುತ್ತಿರುವ ಕುಪಿತನಾದ ರಾವಣನನ್ನು ಕಂಡು ರಾಕ್ಷಸಿಯರ ನಡುವೆಯಿದ್ದ ಸೀತೆಯು ಭಯದಿಂದಲೂ, ದುಃಖದಿಂದಲೂ ವ್ಯಾಕುಲಚಿತ್ತಳಾದಳು.

**ಏತಸ್ಮಿನ್ನಂತರೇ ತಸ್ಯ ಸಚಿವೋ ಬುದ್ಧಿಮಾನ್ ಶುಚಿಃ ।**
**ಸುಪಾರ್ಶ್ವೋ ನಾಮ ಮೇಧಾವೀ ರಾವಣಂ ವಾಕ್ಯಮಬ್ರವೀತ್ ॥ ೫೯ ॥**
**ನನು ನಾಮ ದಶಗ್ರೀವ ಸಾಕ್ಷಾದ್ ವೈಶ್ರವಣಾನುಜಃ ।**
**ವೇದವಿದ್ಯಾವ್ರತಸ್ನಾತಃ ಸ್ವಕರ್ಮಪರಿನಿಷ್ಠಿತಃ ॥ ೬೦ ॥**
**ಅನೇಕಗುಣಸಂಪನ್ನಃ ಕಥಂ ಸ್ತ್ರೀವಧಮಿಚ್ಛಸಿ ।**

೫೯- ೬೦. ಈ ನಡುವೆ ಬುದ್ಧಿವಂತನೂ ಜಾಣನೂ ಆದ (ರಾವಣನ) ಒಬ್ಬ ಮಂತ್ರಿಯಾದ ಸುಪಾರ್ಶ್ವನೆಂಬ ಮೇಧಾವಿಯು ರಾವಣನನ್ನು ಕುರಿತು ಇಂತೆಂದನು :

''ಎಲೈ ದಶಕಂಠನೆ, ನೀನಾದರೊ, ಕುಬೇರನ ತಮ್ಮನಾಗಿದ್ದು ವೇದವಿದ್ಯೆಗಳನ್ನು ಕಲಿತು ನಿಷ್ಣಾತನಾಗಿದ್ದು ನಿನ್ನ ಕರ್ಮಗಳಲ್ಲಿ ನಿಷ್ಠನಾಗಿರುವವನಾಗಿ ಅನೇಕ ಗುಣಗಳಿಂದ ಕೂಡಿದವನಾಗಿರುವೆಯಲ್ಲವೆ ? ಹೀಗಿರುವಲ್ಲಿ ಸ್ತ್ರೀವಧೆಯನ್ನು ಹೇಗೆ ತಾನೆ ಮಾಡಲಿಚ್ಛಿಸುವೆ ?

**ಅಸ್ಮಾಭಿಃ ಸಹಿತೋ ಯುದ್ಧೇ ಹತ್ವಾ ರಾಮಂ ಚ ಲಕ್ಷ್ಮಣಮ್ ।**
**ಪ್ರಾಪ್ಸ್ಯಸೇ ಜಾನಕೀಂ ಶೀಘ್ರಮಿತ್ಯುಕ್ತಃ ಸ ನ್ಯವರ್ತತ ॥ ೬೧ ॥**
**ತತೋ ದುರಾತ್ಮಾ ಸುಹೃದಾ ನಿವೇದಿತಂ**
**ವಚಃ ಸುಧರ್ಮ್ಯಂ ಪರಿಗೃಹ್ಯ ರಾವಣಃ ।**
**ಗೃಹಂ ಜಗಾಮಾಶು ಶುಚಾ ವಿಮೂಢಧೀಃ**
**ಪುನಃ ಸಭಾಂ ಚ ಪ್ರಯಯೌ ಸುಹೃದ್ವೃತಃ ॥ ೬೨ ॥**

೬೧-೬೨. ನಮ್ಮೊಡನೆ ಕೂಡಿದವನಾಗಿ ಯುದ್ಧದಲ್ಲಿ ರಾಮನನ್ನೂ ಲಕ್ಷ್ಮಣನನ್ನೂ ಕೊಂದು ಬೇಗನೆ ಸೀತೆಯನ್ನು ಪಡೆಯಲಿರುವೆ'' ಹೀಗೆಂದು ಹೇಳಿ ಅವನು ಹಿಂದಿರುಗಿದನು. ಅನಂತರ ದುರಾತ್ಮನಾದ ರಾವಣನು ಸ್ನೇಹಿತನಿಂದ ತಿಳಿಸಲ್ಪಟ್ಟ ಧರ್ಮ ಬದ್ಧವಾದ ಒಳ್ಳೆಯ ಮಾತನ್ನು ಸ್ವೀಕರಿಸಿ ಬೇಗನೆ ಮನೆಗೆ ಬಂದನು. ಮತ್ತೆ ಶೋಕದಿಂದ ದಿಕ್ಕುತೋಚದವನಾಗಿ ಸ್ನೇಹಿತರೊಡನೆ ಮಂತ್ರಾಲೋಚನಸಭೆಯನ್ನು ಪ್ರವೇಶಿಸಿದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ನವಮಃ ಸರ್ಗಃ**

-----------

## ಹತ್ತನೆಯ ಸರ್ಗ

**ಶ್ರೀಮಹಾದೇವ ಉವಾಚ -**

**ಸ ವಿಚಾರ್ಯ ಸಭಾಮಧ್ಯೇ ರಾಕ್ಷಸೈಃ ಸಹ ಮಂತ್ರಿಭಿಃ ।**
**ನಿರ್ಯಯೌ ಯೇಽವಶಿಷ್ಟಾಸ್ತೈಃ ರಾಕ್ಷಸೈಃ ಸಹ ರಾಘವಮ್ ॥ ೧ ॥**
**ಶಲಭಃ ಶಲಭೈರ್ಯುಕ್ತಃ ಪ್ರಜ್ವಲಂತಮಿವಾನಲಮ್ ।**
**ತತೋ ರಾಮೇಣ ನಿಹತಾಃ ಸರ್ವೇ ತೇ ರಾಕ್ಷಸಾ ಯುಧಿ ॥ ೨ ॥**
**ಸ್ವಯಂ ರಾಮೇಣ ನಿಹತಃ ತೀಕ್ಷ್ಣಬಾಣೇನ ವಕ್ಷಸಿ ।**
**ವ್ಯಥಿತಃ ತ್ವರಿತಂ ಲಂಕಾಂ ಪ್ರವಿವೇಶ ದಶಾನನಃ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು : ಅವನು ಸಭೆಯಲ್ಲಿ ವಿಚಾರಮಾಡಿದ ಮೇಲೆ ಯಾವ ರಾಕ್ಷಸರುಗಳು ಉಳಿದುಕೊಂಡಿದ್ದರೋ ಅವರೊಡಗೂಡಿ ಬೆಂಕಿಯ ಹುಳುವು ಉಳಿದ ಹುಳುಗಳೊಡಗೂಡಿ ಉರಿಯುವ ಬೆಂಕಿಯೊಡನೆ ಯುದ್ಧಕ್ಕೆ

ಹೊರಟಂತೆ ರಾಮನೊಡನೆ ಯುದ್ಧಮಾಡಲು ಹೊರಟನು. ಅನಂತರ ಯುದ್ಧದಲ್ಲಿ ರಾಮನಿಂದ ಹೊಡೆಯಲ್ಪಟ್ಟ ಎಲ್ಲಾ ರಾಕ್ಷಸರೂ ಹಿಮ್ಮೆಟ್ಟಿದರು. ತಾನೇ ಸ್ವತಃ ಹರಿತವಾದ ಬಾಣದಿಂದ ರಾಮನಿಂದ ಎದೆಯಲ್ಲಿ ಹೊಡೆಯಲ್ಪಟ್ಟು ಬಹಳ ನೋವುಂಟಾದವನಾಗಿ ರಾವಣನು ಬೇಗನೆ ಲಂಕೆಯನ್ನು ಪ್ರವೇಶಿಸಿಬಿಟ್ಟನು.

**ದೃಷ್ಟ್ವಾ ರಾಮಸ್ಯ ಬಹುಶಃ ಪೌರುಷಂ ಚಾಪ್ಯಮಾನುಷಮ್ ।**
**ರಾವಣೋ ಮಾರುತೇಶ್ಚೈವ ಶೀಘ್ರಂ ಶುಕ್ರಾಂತಿಕಂ ಯಯೌ ॥ ೪ ॥**
**ನಮಸ್ಕೃತ್ಯ ದಶಗ್ರೀವಃ ಶುಕ್ರಂ ಪ್ರಾಂಜಲಿರಬ್ರವೀತ್ ।**
**ಭಗವನ್ ರಾಘವೇಣೈವಂ ಲಂಕಾ ರಾಕ್ಷಸಯೂಥಪೈಃ ॥ ೫ ॥**
**ವಿನಾಶಿತಾ ಮಹಾದೈತ್ಯಾಃ ನಿಹತಾಃ ಪುತ್ರಬಾಂಧವಾಃ ।**
**ಕಥಂ ಮೇ ದುಃಖಸಂದೋಹಸ್ತ್ವಯಿ ತಿಷ್ಠತಿ ಸದ್ಗುರೌ ॥ ೬ ॥**

೪-೬. ಶ್ರೀರಾಮನ ಹಾಗೂ ಹನುಮಂತನ ಹೆಚ್ಚಿನ ಅಮಾನುಷವಾದ ಪರಾಕ್ರಮವನ್ನು ಕಂಡು ಬೇಗನೆ ಶುಕ್ರಾಚಾರ್ಯನ ಸಮಿಪಕ್ಕೆ ಹೋದನು. ರಾವಣನು ಶುಕ್ರನಿಗೆ ನಮಸ್ಕರಿಸಿ ಕೈಮುಗಿದುಕೊಂಡು ಹೀಗೆಂದನು : 'ಪೂಜ್ಯನೆ, ರಾಮನಿಂದ ಲಂಕೆಯೂ ಮಹಾದೈತ್ಯರುಗಳೂ ರಾಕ್ಷಸಸೇನಾಪತಿಗಳ ಸಮೇತ ನಾಶಗೊಳಿಸಲ್ಪಟ್ಟಿತು. ನನ್ನ ಮಕ್ಕಳೂ ನೆಂಟರುಗಳೂ ಹಾಳಾದರು. ಸದ್ಗುರುವಾದ ನೀನಿರಲಾಗಿ ನನಗೆ ಹೇಗೆ ತಾನೆ ಈ ದುಃಖ ಸಮೂಹವು ಬಂದೊದಗಿತು ?

**ಇತಿ ವಿಜ್ಞಾಪಿತೋ ದೈತ್ಯಗುರುಃ ಪ್ರಾಹ ದಶಾನನಮ್ ।**
**ಹೋಮಂ ಕುರು ಪ್ರಯತ್ನೇನ ರಹಸಿ ತ್ವಂ ದಶಾನನ ॥ ೭ ॥**
**ಯದಿ ವಿಘ್ನೋ ನ ಚೇತ್ ಹೋಮೇ ತರ್ಹಿ ಹೋಮಾನಲೋತ್ಥಿತಃ ।**
**ಮಹಾನ್ ರಥಶ್ಚ ವಾಹಾಶ್ಚ ಚಾಪಸೂತ್ತೇಣೀರಸಾಯಕಾಃ ॥ ೮ ॥**
**ಸಂಭವಿಷ್ಯಂತಿ ತೆರ್ಯುಕ್ತಸ್ತ್ವಮಜೇಯೋ ಭವಿಷ್ಯಸಿ ।**
**ಗೃಹಾಣ ಮಂತ್ರಾನ್ ಮದ್ದತ್ತಾನ್ ಗಚ್ಛ ಹೋಮಂ ಕುರು ದ್ರುತಮ್॥ ೯ ॥**

೭-೯. ಹೀಗೆ ವಿಜ್ಞಾಪಿಸಲ್ಪಟ್ಟ ಆ ದೈತ್ಯಗುರುವು ರಾವಣನನ್ನು ಕುರಿತು ಹೀಗೆಂದನು. 'ಎಲೈ ದಶಾನನನೆ, ನೀನು ಗುಟ್ಟಾಗಿ ಒಂದು ಹೋಮವನ್ನು ಮಾಡು. ಒಂದು ವೇಳೆ ಹೋಮದಲ್ಲಿ ವಿಘ್ನವು ಬಾರದಿದ್ದಲ್ಲಿ ಆಗ ಹೋಮದ ಅಗ್ನಿಯಿಂದ ಎದ್ದು ಬರಲಿರುವ ದೊಡ್ಡ ರಥ, ಕುದುರೆಗಳು, ಧನುಸ್ಸು, ಬಾಣಬತ್ತಳಿಕೆಗಳು-ಇವುಗಳನ್ನು ಪಡೆದುಕೊ. ಈ ಶಸ್ತ್ರಾಸ್ತ್ರಗಳಿಂದ ಕೂಡಿದ ನೀನು ಯಾರಿಗೂ ಸೋಲದವನಾಗುವೆ. ಇಗೊ, ನಾನು ಉಪದೇಶಿಸುವ ಮಂತ್ರಗಳನ್ನು ಸ್ವೀಕರಿಸು. ಬೇಗನೆ ಹೋಗಿ ಹೋಮ ವನ್ನು ಮಾಡುವವನಾಗು.'

**ಇತ್ಯುಕ್ತಸ್ತ್ವರಿತಂ ಗತ್ವಾ ರಾವಣೋ ರಾಕ್ಷಸಾಧಿಪಃ ।**
**ಗುಹಾಂ ಪಾತಾಲಸದೃಶೀಂ ಮಂದಿರೇ ಸ್ವೇ ಚಕಾರ ಹ ॥ ೧೦ ॥**
**ಲಂಕಾದ್ವಾರಕಪಾಟಾದಿ ಬದ್ಧ್ವಾ ಸರ್ವತ್ರ ಯತ್ನತಃ ।**
**ಹೋಮದ್ರವ್ಯಾಣಿ ಸಂಪಾದ್ಯ ಯಾನ್ಯುಕ್ತಾನ್ಯಾಭಿಚಾರಿಕೇ ॥ ೧೧ ॥**
**ಗುಹಾಂ ಪ್ರವಿಶ್ಯ ಚೈಕಾಂತೇ ಮೌನೀ ಹೋಮಂ ಪ್ರಚಕ್ರಮೇ ।**

೧೦-೧೧. ಹೀಗೆಂದು ಹೇಳಲ್ಪಟ್ಟ ರಾಕ್ಷಸಾಧಿಪನಾದ ರಾವಣನು ಜಾಗ್ರತೆ ಹೊರಟು ತನ್ನ ಮನೆಗೆ ಹೋಗಿ ಅಲ್ಲಿ ಪಾತಾಳದಂಥ ಆಳವಾದ ಗುಹೆಯನ್ನು ಮಾಡಿದನು. ಲಂಕೆಯ ಹೆಬ್ಬಾಗಿಲು - ಅಗುಳಿಗಳನ್ನು ಎಲ್ಲಾ ಕಡೆಗಳಲ್ಲಿಯೂ ಭದ್ರಗೊಳಿಸಿ ಆಭಿಚಾರಿಕ (ಶತ್ರುನಾಶಕ) ಹೋಮಕ್ಕೆ ಬೇಕಾದ ಪದಾರ್ಥಗಳನ್ನು ಕೂಡಿಸಿಕೊಂಡು ಗುಹೆಯನ್ನು ಹೊಕ್ಕು ಒಂಟಿಯಾಗಿ ಮೌನವನ್ನು ಧರಿಸಿ ತಾನೊಬ್ಬನೇ ಹೋಮವನ್ನಾರಂಭಿಸಿದನು.

**ಉತ್ಥಿತಂ ಧೂಮಮಾಲೋಕ್ಯ ಮಹಾಂತಂ ರಾವಣಾನುಜಃ ।**
**ರಾಮಾಯ ದರ್ಶಯಾಮಾಸ ಹೋಮಧೂಮಂ ಭಯಾಕುಲಃ ॥ ೧೨ ॥**
**ಪಶ್ಯ ರಾಮ ದಶಗ್ರೀವೋ ಹೋಮಂ ಕರ್ತುಂ ಸಮಾರಭತ್ ।**
**ಯದಿ ಹೋಮಃ ಸಮಾಪ್ತಃ ಸ್ಯಾತ್ ತದಾಜೇಯೋ ಭವಿಷ್ಯತಿ ॥ ೧೩ ॥**
**ಅತೋ ವಿಘ್ನಾಯ ಹೋಮಸ್ಯ ಪ್ರೇಷಯಾಶು ಹರೀಶ್ವರಾನ್ ।**
**ತಥೇತಿ ರಾಮಃ ಸುಗ್ರೀವಸಮ್ಮತೇನಾಂಗದಂ ಕಪಿಮ್ ॥ ೧೪ ॥**
**ಹನೂಮತ್ ಪ್ರಮುಖಾನ್‌ವೀರಾನಾದಿದೇಶ ಮಹಾಬಲಾನ್ ॥**

೧೨-೧೪. ಮೇಲೆದ್ದ ದೊಡ್ಡ ಹೊಗೆಯನ್ನು ನೋಡಿ ವಿಭೀಷಣನು ಭಯದಿಂದ ಕೂಡಿದವನಾಗಿ ಆ ಹೋಮದ ಹೊಗೆಯನ್ನು ರಾಮನಿಗೆ ತೋರಿಸಿದನು. 'ಎಲೈ ರಾಮನೆ, ರಾವಣನು ಹೋಮವನ್ನು ಮಾಡಲಾರಂಭಿಸಿದ್ದಾನೆ. ನೋಡು. ಒಂದು ವೇಳೆ ಹೋಮವು ಪೂರೈಸಿದುದೇ ಆದರೆ ಆಗ (ಅವನು) ಜಯಿಸಲಸಾಧ್ಯನಾಗಿಬಿಡುವನು. ಆದ್ದರಿಂದ ಹೋಮದ ವಿಘ್ನಕ್ಕಾಗಿ ಬೇಗನೆ ಕಪಿಶ್ರೇಷ್ಠರುಗಳನ್ನು ಕಳುಹಿಸುವವನಾಗು'- ಎಂದನು. ಹಾಗೆಯೇ ಆಗಲೆಂದು ರಾಮನು ಸುಗ್ರೀವನ ಅನುಮತಿಯಂತೆ ಅಂಗದನೆಂಬ ಕಪಿಗೂ, ಮಹಾಬಲಿಷ್ಠರಾದ ಹನುಮಂತನೇ ಮೊದಲಾದವರಿಗೂ ಅಪ್ಪಣೆ ಮಾಡಿದನು.

**ಪ್ರಾಕಾರಂ ಲಂಘಯಿತ್ವಾ ತೇ ಗತ್ವಾ ರಾವಣಮಂದಿರಮ್ ।**
**ದಶಕೋಟ್ಯಃ ಪ್ಲವಂಗಾನಾಂ ಗತ್ವಾ ಮಂದಿರರಕ್ಷಕಾನ್ ॥ ೧೫ ॥**
**ಚೂರ್ಣಯಾಮಾಸುರಶ್ವಾಂಶ್ಚ ಗಜಾಂಶ್ಚ ನ್ಯಹನನ್ ಕ್ಷಣಾತ್ ।**
**ತತಶ್ಚ ಸರಮಾ ನಾಮ ಪ್ರಭಾತೇ ಹಸ್ತಸಂಜ್ಞಯಾ ॥ ೧೬ ॥**

**ವಿಭೀಷಣಸ್ಯ ಭಾರ್ಯಾ ಸಾ ಹೋಮಸ್ಥಾನಮಸೂಚಯತ್ ।**
**ಗುಹಾಪಿಧಾನಪಾಷಾಣಮಂಗದಃ ಪಾದಘಟ್ಟನೈಃ ॥ ೧೭ ॥**
**ಚೂರ್ಣಯಿತ್ವಾ ಮಹಾಸತ್ತ್ವಃ ಪ್ರವಿವೇಶ ಮಹಾಗುಹಾಮ್ ॥**

೧೫-೧೭. ಅವರುಗಳು ಲಂಕೆಯ ಕೋಟೆಯನ್ನು ನೆಗೆದವರಾಗಿ ರಾವಣನ ಅರಮನೆಗೆ ನುಗ್ಗಿದರು. ಹತ್ತುಕೋಟಿಸಂಖ್ಯೆಯ ಆ ಕಪಿಗಳು ಅಲ್ಲಿದ್ದ ಅರಮನೆಯ ಕಾವಲುಗಾರರನ್ನೆಲ್ಲ ಪುಡಿಮಾಡಿದರು. ಕ್ಷಣಮಾತ್ರದಲ್ಲಿ ಉಳಿದ ಆನೆ-ಕುದುರೆಗಳನ್ನೂ ಕೊಂದರು. ಅನಂತರ ವಿಭೀಷಣನ ಹೆಂಡತಿಯಾದ ಸರಮೆಯೆಂಬವಳು ಕೈಸನ್ನೆಯಿಂದ ಹೋಮಮಾಡುವ ಜಾಗವನ್ನು ತೋರಿಸಿದಳು. ಆಗ ಮಹಾಬಲಶಾಲಿಯಾದ ಅಂಗದನು ಗುಹೆಯನ್ನು ಮುಚ್ಚಿದ್ದ ದೊಡ್ಡ ಬಂಡೆಯನ್ನು ಕಾಲಿನ ಒದೆತದಿಂದ ಪುಡಿಮಾಡಿ ಆ ಮಹಾ ಗುಹೆಯನ್ನು ಹೊಕ್ಕನು.

**ದೃಷ್ಟ್ವಾ ದಶಾನನಂ ತತ್ರ ಮೀಲಿತಾಕ್ಷಂ ದೃಢಾಸನಮ್ ।**
**ತತೋಂಗದಾಜ್ಞಯಾ ಸರ್ವೇ ವಾನರಾ ವಿವಿಶುರ್ದ್ರುತಮ್ ॥ ೧೮ ॥**
**ತತ್ರ ಕೋಲಾಹಲಂ ಚಕ್ರುಸ್ತಾಡಯಂತಶ್ಚ ಸೇವಕಾನ್ ।**
**ಸಂಭಾರಾನ್ ಚಿಕ್ಷಿಪುಸ್ತಸ್ಯ ಹೋಮಕುಂಡೇ ಸಮಂತತಃ ॥ ೧೯ ॥**
**ಸ್ರುವಮಾಚ್ಛಿದ್ಯ ಹಸ್ತಾಚ್ಚ ರಾವಣಸ್ಯ ಬಲಾದ್ರುಷಾ ।**
**ತೇನೈವ ಸಂಜಘಾನಾಶು ಹನುಮಾನ್ ಪ್ಲವಗಾಗ್ರಣೀಃ ॥ ೨೦ ॥**
**ಘ್ನಂತಿ ದಂತೈಶ್ಚ ಕಾಷ್ಠೈಶ್ಚ ವಾನರಾಸ್ತಮಿತಸ್ತತಃ ।**
**ನ ಜಹೌ ರಾವಣೋ ಧ್ಯಾನಂ ಹತೋಽಪಿ ವಿಜಿಗೀಷಯಾ ॥ ೨೧ ॥**

೧೮-೨೧. ಅಲ್ಲಿ ಕಣ್ಣುಮುಚ್ಚಿಕೊಂಡು ದೃಢವಾದ ಆಸನದಲ್ಲಿ ಕುಳಿತಿದ್ದ ರಾವಣನನ್ನು ಅಂಗದನ ಅಪ್ಪಣೆಯಂತೆ ಎಲ್ಲಾ ಕಪಿಗಳೂ ಸುತ್ತುವರೆದರು. ಸೇವಕರನ್ನೆಲ್ಲ ಹೊಡೆದು ಗಲಾಟೆಮಾಡಿದರು. ಹೋಮದ್ರವ್ಯಗಳನ್ನೆಲ್ಲ ಎತ್ತಿ ಕುಂಡದಲ್ಲಿ ಹಾಕಿಬಿಟ್ಟರು. ಕುಪಿತನಾದ ಹನುಮಂತನು ರಾವಣನ ಕೈಯಲ್ಲಿದ್ದ ಸ್ರುವ (ಹೋಮ ಮಾಡಲು ಉಪಯೋಗಿಸುವ ಸೌಟು)ವನ್ನು ಕಿತ್ತುಕೊಂಡು ಅದರಿಂದಲೇ ಆ ಕಪಿಶ್ರೇಷ್ಠನು (ರಾವಣನಿಗೆ) ಹೊಡೆದನು. ಉಳಿದ ಕಪಿಗಳು ಕೋಲುಗಳಿಂದಲೂ ಹಲ್ಲುಗಳಿಂದಲೂ ಅತ್ತಿತ್ತ ಅವನಿಗೆ ಗಾಯಮಾಡಿದರು. ಆದರೂ ರಾವಣನು (ರಾಮನನ್ನು) ಗೆಲ್ಲುವ ಸಂಕಲ್ಪ ಉಳ್ಳವನಾಗಿದ್ದು ಧ್ಯಾನವನ್ನು ಬಿಡಲಿಲ್ಲ.

**ಪ್ರವಿಶ್ಯಾಂತಃಪುರೇ ವೇಶ್ಮನ್ಯಂಗದೋ ವೇಗವತ್ತರಃ ।**
**ಸಮಾನಯತ್ ಕೇಶಬಂಧೇ ಧೃತ್ವಾ ಮಂಡೋದರೀಂ ಶುಭಾಮ್ ॥ ೨೨ ॥**

**ರಾವಣಸ್ಯೈವ ಪುರತೋ ವಿಲಪಂತೀಮನಾಥವತ್**
**ವಿದದಾರಾಂಗದಸ್ತಸ್ಯಾಃ ಕಂಚುಕಂ ರತ್ನಭೂಷಿತಮ್ ॥ ೨೩ ॥**
**ಮುಕ್ತಾ ವಿಮುಕ್ತಾಃ ಪತಿತಾಃ ಸಮಂತಾದ್ ರತ್ನಸಂಚಯೈಃ ।**
**ಶ್ರೋಣೀಸೂತ್ರಂ ನಿಪತಿತಂ ತ್ರುಟಿತಂ ರತ್ನಚಿತ್ರಿತಮ್ ॥ ೨೪ ॥**
**ಕಟಿಪ್ರದೇಶಾದ್‌ವಿಸ್ರಂಸ್ತಾ ನೀವೀ ತಸ್ಯೈವ ಪಶ್ಯತಃ ।**
**ಭೂಷಣಾನಿ ಚ ಸರ್ವಾಣಿ ಪತಿತಾನಿ ಸಮಂತತಃ ॥ ೨೫ ॥**
**ದೇವಗಂಧರ್ವಕನ್ಯಾಶ್ಚ ನೀತಾ ಹೃಷ್ಟೈಃ ಪ್ಲವಂಗಮೈಃ ।**

೨೨-೨೫. ವೇಗಶಾಲಿಯಾದ ಅಂಗದನು (ರಾವಣನ) ಅಂತಃಪುರವನ್ನು ಹೊಕ್ಕು ಶುಭಳಾದ ಮಂಡೋದರಿಯನ್ನು ತಲೆಗೂದಲನ್ನು ಹಿಡಿದು ಎಳೆದು ತಂದನು. ರಾವಣನ ಎದುರಿಗೇ ಅನಾಥಳಂತೆ ಅಳುತ್ತಿದ್ದ ಆಕೆಯ ರತ್ನಭೂಷಿತವಾದ ಕುಪ್ಪಸವನ್ನು ಹರಿದು ಬಿಟ್ಟನು. ರತ್ನಗಳೊಡನೆ ಮುತ್ತುಗಳು ಕಳಚಿಬಿದ್ದು ಎಲ್ಲೆಲ್ಲಿಯೂ ಹರಡಿದವು. ಸೊಂಟದ ರತ್ನಖಚಿತವಾದ ಒಡ್ಯಾಣವು ಜಾರಿಬಿತ್ತು. ಹಾಗೆಯೇ ಉಟ್ಟಿದ್ದ ವಸ್ತ್ರದ ಗಂಟು ಕಳಚಿ ಹೋಯಿತು. ಎಲ್ಲೆಲ್ಲೂ ಒಡವೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದವು. ಉಳಿದ ಕಪಿಗಳು ಇನ್ನೂ ಅನೇಕ ದೇವಗಂಧರ್ವ ಕನ್ಯೆಯರನ್ನು ಎಳೆದು ತಂದರು.

**ಮಂಡೋದರೀ ರುರೋದಾಥ ರಾವಣಸ್ಯಾಗ್ರತೋ ಭೃಶಮ್ ।**
**ಕ್ರೋಶಂತೀ ಕರುಣಂ ದೀನಾ ಜಗಾದ ದಶಕಂಧರಮ್ ॥ ೨೬ ॥**
**ನಿರ್ಲಜ್ಜೋಽಸಿ ಪರೈರೇವಂ ಕೇಶಪಾಶೇ ವಿಕೃಷ್ಯತೇ ।**
**ಭಾರ್ಯಾ ತವೈವ ಪುರತಃ ಕಿಂ ಜುಹೋಷಿ ನ ಲಜ್ಜಸೇ ॥ ೨೭ ॥**
**ಹನ್ಯತೇ ಪಶ್ಯತೋ ಯಸ್ಯ ಭಾರ್ಯಾ ಪಾಪೈಶ್ಚ ಶತ್ರುಭಿಃ ।**
**ಮರ್ತವ್ಯಂ ತೇನ ತತ್ರೈವ ಜೀವಿತಾನ್ಮರಣಂ ವರಮ್ ॥ ೨೮ ॥**
**ಹಾ ಮೇಘನಾದ ತೇ ಮಾತಾ ಕ್ಲಿಶ್ಯತೇ ಬತ ವಾನರೈಃ ।**
**ತ್ವಯಿ ಜೀವತಿ ಮೇ ದುಃಖಂ ಈದೃಶಂ ಚ ಕಥಂ ಭವೇತ್ ॥ ೨೯ ॥**
**ಭಾರ್ಯಾ ಲಜ್ಜಾ ಚ ಸಂತ್ಯಕ್ತಾ ಭರ್ತ್ರಾ ಮೇ ಜೀವಿತಾಶಯಾ ।**

೨೬-೨೯. ಮಂಡೋದರಿಯು ರಾವಣನ ಮುಂದೆ ಬಹಳವಾಗಿ ಅತ್ತಳು. ದೀನಳಾಗಿ ಕರುಣೆಯುಂಟಾಗುವಂತೆ ಕೂಗುತ್ತಾ ರಾವಣನನ್ನು ಕುರಿತು ಹೀಗೆಂದಳು: 'ನೀನು ನಾಚಿಕೆಗೆಟ್ಟವನಾಗಿರುವೆ. ಏಕೆಂದರೆ ನಿನ್ನ ಹೆಂಡತಿಯೇ ಬೇರೊಬ್ಬರಿಂದ ತಲೆ ಗೂದಲು ಹಿಡಿದೆಳೆಯಲ್ಪಟ್ಟರೂ ನಾಚದೆ ಏನು ಹೋಮಮಾಡುತ್ತಿರುವೆ ?

ಯಾವ ಹೆಂಡತಿಯು ಪಾಪಿಯಾದ ಶತ್ರುಗಳಿಂದ (ಪೀಡಿತಳಾಗಿ) ಕೊಲ್ಲಲ್ಪಡುವಳೋ ಅಂಥವನು ಬದುಕಿರುವದಕ್ಕಿಂತ ಸಾಯುವದೇ ಲೇಸು. ಅಯ್ಯೋ, ಮೇಘನಾದನೆ, ನಿನ್ನ ತಾಯಿಯು ಕಪಿಗಳಿಂದ ಹಿಂಸಿಸಲ್ಪಡುತ್ತಿರುವಳು. ನೀನು ಬದುಕಿದ್ದೆಯಾದರೆ ನನಗೆ ಇಂಥ ದುಃಖವಾದರೂ ಹೇಗೆ ಬರಲು ಸಾಧ್ಯವಾಗುತ್ತಿತ್ತು ? ಬದುಕುವ ಆಸೆಯಿಂದ ನನ್ನ ಗಂಡನು ಹೆಂಡತಿಯನ್ನೂ ನಾಚಿಕೆಯನ್ನೂ ಕೈಬಿಟ್ಟನು.'

**ಶ್ರುತ್ವಾ ತದ್ದೇವಿತಂ ರಾಜಾ ಮಂದೋದರ್ಯಾ ದಶಾನನಃ ।**
**ಉತ್ತಸ್ಥೌ ಖಡ್ಗಮಾದಾಯ ತ್ಯಜ ದೇವೀಮಿತಿ ಬ್ರುವನ್ ॥ ೩೦ ॥**
**ಜಘಾನಾಂಗದಮವ್ಯಗ್ರಃ ಕಟಿದೇಶೇ ದಶಾನನಃ ।**
**ತದೋತ್ಸೃಜ್ಯ ಯಯುಃ ಸರ್ವೇ ವಿಸ್ರಂಸ್ಯ ಹವನಂ ಮಹತ್ ॥ ೩೧ ॥**
**ರಾಮಪಾರ್ಶ್ವಮುಪಾಗಮ್ಯ ತಸ್ಥುಃ ಸರ್ವೇ ಪ್ರಹರ್ಷಿತಾಃ ।**

೩೦-೩೧. ರಾವಣನು ಆ ಮಂಡೋದರಿಯ ಅಳುವನ್ನು ಕೇಳಿ 'ದೇವಿಯನ್ನು ಬಿಡು' ಎಂದು ಹೇಳುತ್ತಾ ಕತ್ತಿಯನ್ನೆತ್ತಿ ಎದ್ದುನಿಂತನು. ಆ ದಶಾನನನು ಎಚ್ಚರಿಕೆಯಿಂದ ಅಂಗದನಿಗೆ ಸೊಂಟದ ಭಾಗಕ್ಕೆ ಹೊಡೆದನು. ಆಗ ಆ ದೊಡ್ಡ ಹೋಮವನ್ನು ಬಿಟ್ಟು ಎಲ್ಲರೂ ಹೊರಟುಹೋದರು. ರಾಮನ ಬಳಿಗೆ ಬಂದವರಾಗಿ ಎಲ್ಲರೂ ಸಂತೋಷದಿಂದ ನಿಂತರು.

**ರಾವಣಸ್ತು ತತೋ ಭಾರ್ಯಾಮುವಾಚ ಪರಿಸಾಂತ್ವಯನ್ ।**
**ದೈವಾಧೀನಮಿದಂ ಭದ್ರೇ ಜೀವತಾ ಕಿಂ ನ ದೃಶ್ಯತೇ ॥ ೩೨ ॥**
**ತ್ಯಜ ಶೋಕಂ ವಿಶಾಲಾಕ್ಷಿ ಜ್ಞಾನಮಾಲಂಬ್ಯ ನಿಶ್ಚಿತಮ್ ।**
**ಅಜ್ಞಾನಪ್ರಭವಃ ಶೋಕಃ ಶೋಕೋ ಜ್ಞಾನವಿನಾಶಕೃತ್ ॥ ೩೩ ॥**
**ಅಜ್ಞಾನಪ್ರಭವಾಹಂಧೀಃ ಶರೀರಾದಿಷ್ವನಾತ್ಮಸು ।**
**ತನ್ಮೂಲಃ ಪುತ್ರದಾರಾದಿಸಂಬಂಧಃ ಸಂಸೃತಿಸ್ತತಃ ॥ ೩೪ ॥**
**ಹರ್ಷಶೋಕಭಯಕ್ರೋಧಲೋಭಮೋಹಸ್ಪೃಹಾದಯಃ ।**
**ಅಜ್ಞಾನಪ್ರಭವಾ ಹ್ಯೇತೇ ಜನ್ಮಮೃತ್ಯುಜರಾದಯಃ ॥ ೩೫ ॥**

೩೨-೩೫. ರಾವಣನಾದರೊ, ಅನಂತರ ಹೆಂಡತಿಯನ್ನು ಸಮಾಧಾನಗೊಳಿಸುತ್ತಾ ಹೀಗೆಂದನು : 'ಮಂಗಳರೂಪಳೆ, ಇದೆಲ್ಲವೂ ದೈವಾಧೀನವು. ಬದುಕಿರುವವನು ಏಕೆ ತಿಳಿಯುವದಿಲ್ಲ ? ಎಲೌ ವಿಶಾಲಾಕ್ಷಿ, ನಿಶ್ಚಯವಾದ ಜ್ಞಾನವನ್ನಾಶ್ರಯಿಸಿ ಶೋಕವನ್ನು ಬಿಡು. ದುಃಖವಾದರೊ, ಅಜ್ಞಾನದಿಂದ ಉಂಟಾದದ್ದು. ಅದು ಜ್ಞಾನವನ್ನು ಹಾಳು ಮಾಡುತ್ತದೆ. ಶರೀರವೇ ಮುಂತಾದ

ಅನಾತ್ಮಗಳಲ್ಲಿ ಅಜ್ಞಾನದಿಂದಲೇ ನಾನು - ಎಂಬ ಬುದ್ಧಿಯುಂಟಾಗಿರುವದು. ಆ ಮೂಲಕವೇ ಹೆಂಡತಿ, ಮಕ್ಕಳು - ಮುಂತಾದ ಸಂಬಂಧವೂ ಸಂಸಾರವೂ ನಿನಗೆ ಉಂಟಾಗಿದೆ. ಹಾಗೆಯೇ ಸಂತೋಷ, ದುಃಖ, ಭಯ, ಸಿಟ್ಟು, ಜಿಪುಣತನ, ಅವಿವೇಕ, ಆಶೆ- ಇವುಗಳೂ ಹುಟ್ಟು, ಸಾವು-ಮುಂತಾದವುಗಳೂ ಅಜ್ಞಾನದಿಂದಲೇ ಹುಟ್ಟಿದವುಗಳಾಗಿವೆ.

**ಆತ್ಮಾ ತು ಕೇವಲಃ ಶುದ್ಧಃ ವ್ಯತಿರಿಕ್ತೋ ಹ್ಯಲೇಪಕಃ ।**
**ಆನಂದರೂಪೋ ಜ್ಞಾನಾತ್ಮಾ ಸರ್ವಭಾವವಿವರ್ಜಿತಃ ॥ ೩೬ ॥**
**ನ ಸಂಯೋಗೋ ವಿಯೋಗೋ ವಾ ವಿದ್ಯತೇ ಕೇನಚಿತ್ ಸತಃ।**
**ಏವಂ ಜ್ಞಾತ್ವಾ ಸ್ವಮಾತ್ಮಾನಂ ತ್ಯಜ ಶೋಕಮನಿಂದಿತೇ ॥ ೩೭ ॥**

೩೬-೩೭. ಆತ್ಮನಾದರೊ, ಕೇವಲನೂ, ಶುದ್ಧನೂ, (ದೇಹಾದಿಗಳಿಗಿಂತ) ವ್ಯತಿರಿಕ್ತನೂ ಸಂಗರಹಿತನೂ ಆನಂದರೂಪನೂ ಜ್ಞಾನಾತ್ಮನೂ ಎಲ್ಲಾ ವಿಧವಾದ ವಸ್ತುಗಳ ಧರ್ಮದಿಂದ ದೂರನೂ ಆಗಿರುವನು. ಅವನಿಗೆ ಕೂಡುವಿಕೆಯಾಗಲಿ, ಅಗಲುವಿಕೆಯಾಗಲಿ, ಯಾವದರೊಡನೆಯೂ ಇರುವದಿಲ್ಲ. ಈ ರೀತಿಯಾಗಿ ನಿನ್ನ ಆತ್ಮನನ್ನು ಅರಿತುಕೊಂಡವಳಾಗಿ ದುಃಖವನ್ನು ಬಿಡು.

**ಇದಾನೀಮೇವ ಗಚ್ಛಾಮಿ ಹತ್ವಾ ರಾಮಂ ಸಲಕ್ಷ್ಮಣಮ್ ।**
**ಆಗಮಿಷ್ಯಾಮಿ ನೋ ಚೇನ್ಮಾಂ ದಾರಯಿಷ್ಯತಿ ಸಾಯಕೈಃ ॥ ೩೮ ॥**
**ಶ್ರೀರಾಮೋ ವಜ್ರಕಲ್ಪೈಶ್ಚ ತತೋ ಗಚ್ಛಾಮಿ ತತ್ಪದಮ್ ।**
**ತದಾ ತ್ವಯಾ ಮೇ ಕರ್ತವ್ಯಾ ಕ್ರಿಯಾ ಮಚ್ಛಾಸನಾತ್ ಪ್ರಿಯೇ ॥ ೩೯ ॥**
**ಸೀತಾಂ ಹತ್ವಾ ಮಯಾ ಸಾರ್ಧಂ ತ್ವಂ ಪ್ರವೇಕ್ಷ್ಯಸಿ ಪಾವಕಮ್ ।**

೩೮-೩೯. ನಾನು ಈಗಲೇ ಹೋಗಿ ರಾಮನನ್ನೂ ಲಕ್ಷ್ಮಣನನ್ನೂ ಕೊಂದು ಹಿಂದಿರುಗುವೆನು. ಹಾಗಿಲ್ಲವಾದರೆ ರಾಮನೇ ವಜ್ರದಂಥ ಬಾಣಗಳಿಂದ ನನ್ನನ್ನು ಸೀಳಿ ಬಿಡುವನು. ಅನಂತರ ಅವನ ಪದವಿಯನ್ನೇ ಸೇರಿಬಿಡುವೆನು. ಎಲೌ ಪ್ರಿಯಳೆ, ಆಗ ನೀನು ನನ್ನ ಅಪ್ಪಣೆಯಂತೆ ಸೀತೆಯನ್ನು ಕೊಂದುಹಾಕಿ ನನ್ನೊಡನೆ ಅಗ್ನಿಯಲ್ಲಿ ಸಹಗಮನ ಮಾಡುವವಳಾಗು.'

**ಏವಂ ಶ್ರುತ್ವಾ ವಚಸ್ತಸ್ಯ ರಾವಣಸ್ಯಾತಿದುಃಖಿತಾ ।**
**ಉವಾಚ ನಾಥ ಮೇ ವಾಕ್ಯಂ ಶೃಣು ಸತ್ಯಂ ತಥಾ ಕುರು ॥ ೪೦ ॥**
**ಶಕ್ಯೋ ನ ರಾಘವೋ ಜೇತುಂ ತ್ವಯಾ ಚಾನ್ಯೈಃ ಕದಾಚನ ।**
**ರಾಮೋ ದೇವವರಃ ಸಾಕ್ಷಾತ್ ಪ್ರಧಾನಪುರುಷೇಶ್ವರಃ ॥ ೪೧ ॥**

**ಮತ್ಸ್ಯೋ ಭೂತ್ವಾ ಪುರಾ ಕಲ್ಪೇ ಮನುಂ ವೈವಸ್ವತಂ ಪ್ರಭುಃ ।**
**ರರಕ್ಷ ಸಕಲಾಪದ್ಭ್ಯೋ ರಾಘವೋ ಭಕ್ತವತ್ಸಲಃ ॥ ೪೨ ॥**

೪೦-೪೨. ರಾವಣನ ಈ ರೀತಿಯಾದ ಮಾತುಗಳನ್ನು ಕೇಳಿ ಬಹಳ ಸಂಕಟಪಟ್ಟವಳಾದ ಆಕೆಯು ಹೀಗೆಂದಳು : 'ಸ್ವಾಮಿ, ನನ್ನ ಮಾತನ್ನು ಕೇಳಿರಿ. ಇದು ನಿಜ. ಹಾಗೆಯೇ ನಡೆದುಕೊಳ್ಳಿರಿ. ನಿಮ್ಮಿಂದಾಗಲಿ, ಬೇರೊಬ್ಬನಿಂದಾಗಲಿ ರಾಮನನ್ನು ಜಯಿಸುವದು ಆಗಲಾರದು. ರಾಮನಾದರೋ ದೇವಶ್ರೇಷ್ಠನು. ಪ್ರಕೃತಿಪುರುಷರಿಗೆ ಸಾಕ್ಷಾತ್ ಒಡೆಯನು. ಹಿಂದಿನ ಕಲ್ಪದಲ್ಲಿ ಆ ಪ್ರಭುವು ಮೀನಿನ ಅವತಾರವನ್ನು ತಾಳಿ ವೈವಸ್ವತಮನುವನ್ನು ಎಲ್ಲಾ ವಿಧವಾದ ಕಷ್ಟಪರಂಪರೆಗಳಿಂದ ಭಕ್ತವತ್ಸಲನಾದ ಆ ಶ್ರೀರಾಮನು ಕಾಪಾಡಿದನು.

**ರಾಮಃ ಕೂರ್ಮೋಽಭವೇತ್ ಪೂರ್ವಂ ಲಕ್ಷಯೋಜನವಿಸ್ತೃತಃ ।**
**ಸಮುದ್ರಮಥನೇ ಪೃಷ್ಠೇ ದಧಾರ ಕನಕಾಚಲಮ್ ॥ ೪೩ ॥**
**ಹಿರಣ್ಯಾಕ್ಷೋಽತಿದುರ್ವೃತ್ತೋ ಹತೋಽನೇನ ಮಹಾತ್ಮನಾ ।**
**ಕ್ರೋಡರೂಪೇಣ ವಪುಷಾ ಕ್ಷೋಣೀಮುದ್ಧರತಾ ಕ್ವಚಿತ್ ॥ ೪೪ ॥**
**ತ್ರಿಲೋಕಕಂಟಕಂ ದೈತ್ಯಂ ಹಿರಣ್ಯಕಶಿಪುಂ ಪುರಾ ।**
**ಹತವಾನ್ ನಾರಸಿಂಹೇನ ವಪುಷಾ ರಘುನಂದನಃ ॥ ೪೫ ॥**

೪೩-೪೫. ರಾಮನು ಹಿಂದೆ ಲಕ್ಷಯೋಜನದಷ್ಟಗಲವಾದ (ಬೆನ್ನುಳ್ಳ) ಆಮೆಯಾಗಿ ಅವತಾರಮಾಡಿ ಸಮುದ್ರವನ್ನು ಕಡೆಯುವ ಕಾಲಕ್ಕೆ ಕನಕ (ಮಂದರ) ಪರ್ವತವನ್ನೂ ಬೆನ್ನಿನ ಮೇಲೆ ಧರಿಸಿದನು. ಒಮ್ಮೆ ಈ ಮಹಾತ್ಮನಿಂದ ವರಾಹರೂಪದಿಂದ ಭೂಮಿಯನ್ನೆತ್ತಿ ತರುವ ವೇಳೆಗೆ ಅತ್ಯಂತ ದುಷ್ಟನಾದ ಹಿರಣ್ಯಾಕ್ಷನೆಂಬ ರಾಕ್ಷಸನು ಕೊಲ್ಲಲ್ಪಟ್ಟನು. ಹಾಗೆಯೇ ಹಿಂದೆ ಮೂರು ಲೋಕಗಳನ್ನೂ ಪೀಡಿಸುತ್ತಿದ್ದ ದೈತ್ಯನಾದ ಹಿರಣ್ಯಕಶಿಪುವನ್ನು ಈ ರಘುನಂದನನು ನರಸಿಂಹಶರೀರವನ್ನು ತಾಳಿ ಸಂಹಾರ ಮಾಡಿದನು.

**ವಿಕ್ರಮ್ಯೈಸ್ತ್ರಿಭಿರೇವಾಸೌ ಬಲಿಂ ಬದ್ಧ್ವಾ ಜಗತ್ತ್ರಯಮ್ ।**
**ಆಕ್ರಮ್ಯಾದಾತ್ ಸುರೇಂದ್ರಾಯ ಭೃತ್ಯಾಯ ರಘುಸತ್ತಮಃ ॥ ೪೬ ॥**
**ರಾಕ್ಷಸಾಃ ಕ್ಷತ್ರಿಯಾಕಾರಾ ಜಾತಾ ಭೂಮೇರ್ಭರಾವಹಾಃ ।**
**ತಾನ್ ಹತ್ವಾ ಬಹುಶೋ ರಾಮೋ ಭುವಂ ಜಿತ್ವಾ ಹ್ಯದಾನ್ಮುನೇಃ ॥ ೪೭ ॥**
**ಸ ಏವ ಸಾಂಪ್ರತಂ ಜಾತೋ ರಘುವಂಶೇ ಪರಾತ್ಪರಃ ।**
**ಭವದರ್ಥೇ ರಘುಶ್ರೇಷ್ಠೋ ಮಾನುಷತ್ವಮುಪಾಗತಃ ॥ ೪೮ ॥**

೪೬-೪೮. ಈ ರಘುಶ್ರೇಷ್ಠನು ತನ್ನ ಮೂರುಪಾದಕ್ರಮಣಗಳಿಂದಲೇ ಬಲಿರಾಜನನ್ನು ನಿಗ್ರಹಿಸಿ ಮೂರುಲೋಕಗಳನ್ನೂ ಆಕ್ರಮಿಸಿಕೊಂಡು ಸೇವಕನಾದ ದೇವೇಂದ್ರನಿಗೆ ಕೊಟ್ಟನು. ಕ್ಷತ್ರಿಯರೂಪವನ್ನು ತಾಳಿದ್ದ ಬಹುಜನ ರಾಕ್ಷಸರು ಭೂಮಿಗೆ ಭಾರವಾಗಿದ್ದರು. ಬಹಳಮಟ್ಟಿಗೆ ಅವರನ್ನೆಲ್ಲ (ಪರಶು) ರಾಮನು ಕೊಂದು ಭೂಮಿಯನ್ನು ಗೆದ್ದು ಋಷಿಗೆ ಕೊಟ್ಟನು. ಆ ಈ ಪರಾತ್ಪರನಾದ ರಘುಶ್ರೇಷ್ಠನೇ ಈಗ ರಘುವಂಶದಲ್ಲಿ ಹುಟ್ಟಿದವನಾಗಿ ನಿನ್ನ (ವಧೆಗಾಗಿ) ಮನುಷ್ಯರೂಪವನ್ನು ಧರಿಸಿರುವನು.

**ತಸ್ಯ ಭಾರ್ಯಾ ಕಿಮರ್ಥಂ ವಾ ಹೃತಾ ಸೀತಾ ವನಾದ್ ಬಲಾತ್ ।**
**ಮಮ ಪುತ್ರವಿನಾಶಾರ್ಥಂ ಸ್ವಸ್ಯಾಪಿ ನಿಧನಾಯ ಚ ॥ ೪೯ ॥**
**ಇತಃ ಪರಂ ವಾ ವೈದೇಹೀಂ ಪ್ರೇಷಯಸ್ವ ರಘೂತ್ತಮೇ ।**
**ವಿಭೀಷಣಾಯ ರಾಜ್ಯಂ ತು ದತ್ವಾ ಗಚ್ಛಾಮಹೇ ವನಮ್ ॥ ೫೦ ॥**

೪೯-೫೦. ಆತನ ಹೆಂಡತಿಯಾದ ಸೀತೆಯು ಯಾವ ಕಾರಣಕ್ಕಾಗಿ ನಿನ್ನಿಂದ ಬಲಪ್ರಯೋಗದಿಂದ ಅಪಹರಿಸಲ್ಪಟ್ಟಳು ? ನನ್ನ ಮಗನ ನಾಶಕ್ಕಾಗಿ ಹಾಗೂ ನಿನ್ನ ಆತ್ಮನಾಶಕ್ಕಾಗಿಯೇ ಇರಬಹುದಲ್ಲವೆ ? ಇನ್ನು ಮುಂದಾದರೂ ಸೀತೆಯನ್ನು ರಾಮನ ಬಳಿಗೆ ಕಳುಹಿಸುವವನಾಗು. (ನಾವು) ವಿಭೀಷಣನಿಗೆ ರಾಜ್ಯದಾನವನ್ನು ಮಾಡಿ ಕಾಡಿಗೆ ಹೊರಡೋಣ.

**ಮಂದೋದರೀವಚಃ ಶ್ರುತ್ವಾ ರಾವಣೋ ವಾಕ್ಯಮಬ್ರವೀತ್ ।**
**ಕಥಂ ಭದ್ರೇ ರಣೇ ಪುತ್ರಾನ್ ಭ್ರಾತೄನ್ ರಾಕ್ಷಸಮಂಡಲಮ್ ॥ ೫೧ ॥**
**ಘಾತಯಿತ್ವಾ ರಾಘವೇಣ ಜೀವಾಮಿ ವನಗೋಚರಃ ।**
**ರಾಮೇಣ ಸಹ ಯೋತ್ಸ್ಯಾಮಿ ರಾಮಬಾಣೈಃ ಸುಶೀಘ್ರಗೈಃ ॥ ೫೨ ॥**
**ವಿದಾರ್ಯಮಾಣೋ ಯಾಸ್ಯಾಮಿ ತದ್ವಿಷ್ಣೋಃ ಪರಮಂ ಪದಮ್ ।**

೫೧-೫೨. ಮಂಡೋದರಿಯ ಮಾತನ್ನು ಕೇಳಿ ರಾವಣನಿಂತೆಂದನು : 'ಎಲೌ ಕಲ್ಯಾಣಿ, ಯುದ್ಧದಲ್ಲಿ ಮಕ್ಕಳನ್ನೂ ಸಹೋದರರನ್ನೂ ರಾಕ್ಷಸರ ಸಮೂಹವನ್ನೂ ರಾಮನಿಂದ ಕೊಲ್ಲಿಸಿದಮೇಲೆ ಕಾಡುತಪಸ್ವಿಯಾಗಿ ಹೇಗೆ ಬದುಕಿರಲಿ ? ಆದ್ದರಿಂದ ರಾಮನೊಡನೆ ಯುದ್ಧಮಾಡುವೆನು. ವೇಗವಾದ ರಾಮಬಾಣಗಳಿಂದ ಸೀಳಲ್ಪಟ್ಟು ಆ ವಿಷ್ಣುವಿನ ಪರಮಪದವಿಗೆ ಹೋಗಲಿರುವೆನು.

**ಜಾನಾಮಿ ರಾಘವಂ ವಿಷ್ಣುಂ ಲಕ್ಷ್ಮೀಂ ಜಾನಾಮಿ ಜಾನಕೀಮ್ ।**
**ಜ್ಞಾತ್ವೈವ ಜಾನಕೀ ಸೀತಾ ಮಯಾಽಽನೀತಾ ವನಾದ್ ಬಲಾತ್ ॥ ೫೩ ॥**

**ರಾಮೇಣ ನಿಧನಂ ಪ್ರಾಪ್ಯ ಯಾಸ್ಯಾಮೀತಿ ಪರಂ ಪದಮ್ ।**
**ವಿಮುಚ್ಯ ತ್ವಾಂ ತು ಸಂಸಾರಾತ್ ಗಮಿಷ್ಯಾಮಿ ಸಹ ಪ್ರಿಯೇ ॥ ೫೪ ॥**

೫೩-೫೪. ರಾಮನನ್ನು ವಿಷ್ಣುವೆಂದೂ ಸೀತೆಯನ್ನು ಲಕ್ಷ್ಮಿಯೆಂದೂ ತಿಳಿದಿರುವೆನು. ಸೀತೆಯ (ತತ್ತ್ವವನ್ನು) ತಿಳಿದೇ ಆಕೆಯನ್ನು ಬಲಾತ್ಕಾರವಾಗಿ ತಂದಿರುವೆನು. ರಾಮನಿಂದ ಸಾವನ್ನು ಹೊಂದಿ ಪರಮಪದವಿಯನ್ನು ಸೇರಲಿರುವೆನು - ಎಂದೇ ಭಾವಿಸಿದ್ದೇನೆ. ಎಲೌ ಪ್ರಿಯಳೆ, ನಿನ್ನನ್ನು ಕೈಬಿಟ್ಟು ಸಂಸಾರದಿಂದ ಬಿಡುಗಡೆ ಹೊಂದಲಿರುವೆನು.

**ಪರಾನಂದಮಯೀ ಶುದ್ಧಾ ಸೇವ್ಯತೇ ಯಾ ಮುಮುಕ್ಷುಭಿಃ ।**
**ತಾಂ ಗತಿಂ ತು ಗಮಿಷ್ಯಾಮಿ ಹತೋ ರಾಮೇಣ ಸಂಯುಗೇ ॥ ೫೫ ॥**
**ಪ್ರಕ್ಷಾಲ್ಯ ಕಲ್ಮಷಾಣೀಹ ಮುಕ್ತಿಂ ಯಾಸ್ಯಾಮಿ ದುರ್ಲಭಾಮ್ ।**
**ಕ್ಲೇಶಾದಿಪಂಚಕತರಂಗಯುತಂ ಭ್ರಮಾಢ್ಯಂ**
**ದಾರಾತ್ಮಜಾಪ್ತಧನಬಂಧುಝಷಾಭಿಯುಕ್ತಮ್ ।**
**ಔರ್ವಾನಲಾಭನಿಜರೋಷಮನಂಗಜಾಲಂ**
**ಸಂಸಾರಸಾಗರಮತೀತ್ಯ ಹರಿಂ ವ್ರಜಾಮಿ ॥ ೫೬ ॥**

೫೫-೫೬. ಮುಮುಕ್ಷುಗಳಾದವರು ಪರಮಾನಂದಸ್ವರೂಪವಾದ ಯಾವ ಸ್ಥಿತಿಯನ್ನು ಸೇವಿಸುವರೋ ಅಂಥ ಗತಿಯನ್ನು - ರಾಮನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟ ನಾನು ಪಡೆಯಲಿರುವೆನು. ಇಲ್ಲಿಯೇ ಪಾಪಗಳನ್ನು ತೊಳೆದುಕೊಂಡು ದುರ್ಲಭವಾದ ಮುಕ್ತಿಯನ್ನು ಹೊಂದುವೆನು. ರಾಗಾದಿ ಐದು ಕ್ಲೇಶಗಳೆಂಬ ಅಲೆಗಳಿಂದಲೂ ಭ್ರಮೆ ಯಿಂದಲೂ ಕೂಡಿರುವ, ಹಾಗೂ ಹೆಂಡತಿ - ಮಗ- ಸ್ನೇಹಿತ - ಹಣ - ನೆಂಟ- ಮುಂತಾದ ತಿಮಿಂಗಿಲಗಳುಳ್ಳ ಕಾಡುಗಿಚ್ಚಿನಂತಿರುವ ತನ್ನಲ್ಲಿಯೇ ಹುದುಗಿರುವ ಕೋಪ-ಕಾಮಗಳೆಂಬ ದೋಷಗಳುಳ್ಳ ಸಂಸಾರವೆಂಬ ಮಹಾಸಾಗರವನ್ನು ದಾಟಿ ಶ್ರೀಹರಿಯನ್ನು ಶರಣಾಗತವಾಗುವೆನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ದಶಮಃ ಸರ್ಗಃ**

------------

# ಹನ್ನೊಂದನೆಯ ಸರ್ಗ

**ಶ್ರೀಮಹಾದೇವ ಉವಾಚ -**

**ಇತ್ಯುಕ್ತ್ವಾ ವಚನಂ ಪ್ರೇಮ್ಣಾ ರಾಜ್ಞೀಂ ಮಂದೋದರೀಂ ತದಾ ।**
**ರಾವಣಃ ಪ್ರಯಯೌ ಯೋದ್ಧುಂ ರಾಮೇಣ ಸಹ ಸಂಯುಗೇ ॥ ೧ ॥**
**ದೃಢಂ ಸ್ಯಂದನಮಾಸ್ಥಾಯ ವೃತೋ ಘೋರೈರ್ನಿಶಾಚರೈಃ ।**
**ಚಕ್ರೈಃ ಷೋಡಶಭಿರ್ಯುಕ್ತಂ ಸವರೂಥಂ ಸಕೂಬರಮ್ ॥ ೨ ॥**
**ಪಿಶಾಚವದನೈರ್ಘೋರೈಃ ಖರೈರ್ಯುಕ್ತಂ ಭಯಾವಹಮ್ ।**
**ಸರ್ವಾಸ್ತ್ರಶಸ್ತ್ರಸಹಿತಂ ಸರ್ವೋಪಸ್ಕರಸಂಯುತಮ್ ॥ ೩ ॥**
**ನಿಶ್ಚಕ್ರಾಮಾಥ ಸಹಸಾ ರಾವಣೋ ಭೀಷಣಾಕೃತಿಃ ॥**

೧-೩. ಶ್ರೀ ಮಹಾದೇವನಿಂತೆಂದನು : ರಾವಣನು ಮಹಾರಾಣಿಯಾದ ಮಂದೋದರಿಗೆ ಪ್ರೀತಿಯಿಂದ ಈ ರೀತಿಯಾದ ಮಾತುಗಳನ್ನು ಹೇಳಿ ರಾಮನೊಡನೆ ಯುದ್ಧದಲ್ಲಿ ಕಾದಾಡುವದಕ್ಕಾಗಿ ಹೊರಟನು. ಅವನು ಭದ್ರವಾದ ರಥವನ್ನೇರಿದನು. ಅದು ಹದಿನಾರು ಚಕ್ರಗಳಿಂದಲೂ ವರೂಥ - ಕೂಬರಗಳಿಂದ ಕೂಡಿದ್ದಾಗಿದ್ದು ಭಯಂಕರವಾದ ಹಾಗೂ ಪಿಶಾಚಿಗಳಂತೆ ಮುಖಗಳುಳ್ಳ ಕತ್ತೆಗಳಿಂದ ಕಟ್ಟಲ್ಪಟ್ಟು ಸಕಲವಿಧವಾದ ಶಸ್ತ್ರಾಸ್ತ್ರಗಳಿಂದಲೂ ಸೌಕರ್ಯವಿಶೇಷಗಳಿಂದಲೂ ಸಜ್ಜಾಗಿತ್ತು. ಆಗ ಭಯಂಕರಾಕಾರನಾದ ರಾವಣನು ಘೋರರಾದ ರಾಕ್ಷಸರೊಡಗೂಡಿ ಕೂಡಲೆ ಹೊರಬಿದ್ದನು.

**ಆಯಾಂತಂ ರಾವಣಂ ದೃಷ್ಟ್ವಾ ಭೀಷಣಂ ರಣಕರ್ಕಶಮ್ ।**
**ಸಂತ್ರಸ್ತಾಭೂತ್ ತದಾ ಸೇನಾ ವಾನರೀ ರಾಮಪಾಲಿತಾ ॥ ೪ ॥**
**ಹನೂಮಾನಥ ಚೋತ್ಪ್ಲುತ್ಯ ರಾವಣಂ ಯೋದ್ಧುಮಾಯಯೌ ।**
**ಆಗತ್ಯ ಹನುಮಾನ್ ರಕ್ಷೋವಕ್ಷಸ್ಯತುಲವಿಕ್ರಮಃ ॥ ೫ ॥**
**ಮುಷ್ಟಿಬಂಧಂ ದೃಢಂ ಬಧ್ವಾ ತಾಡಯಾಮಾಸ ವೇಗತಃ ।**
**ತೇನ ಮುಷ್ಟಿಪ್ರಹಾರೇಣ ಜಾನುಭ್ಯಾಮಪತದ್ ರಥೇ ॥ ೬ ॥**

೪-೬. ಭಯಂಕರನೂ ರಣಕರ್ಕಶನೂ ಆದ ರಾವಣನು ಬರುತ್ತಿರುವದನ್ನು ಕಂಡು ರಾಮನಿಂದ ಕಾಪಾಡಲ್ಪಟ್ಟಿದ್ದ ವಾನರಸೈನ್ಯವು ಬೆದರಿಹೋಯಿತು. ಆಗ ಹನುಮಂತನು ನೆಗೆದವನಾಗಿ ರಾವಣನೊಡನೆ ಯುದ್ಧಕ್ಕೆ ಹೊರಟನು. ಮತ್ತು (ರಾವಣನ ಬಳಿಗೆ) ಬಂದು ಅತಿಪರಾಕ್ರಮಶಾಲಿಯಾದ ಆತನು ರಾಕ್ಷಸನ ಎದೆಗೆ ದೃಢವಾಗಿ ಮುಷ್ಟಿ ಯನ್ನು ಬಿಗಿದು ವೇಗದಿಂದ ಗುದ್ದಿದನು. ಆ ಮುಷ್ಟಿಯ ಹೊಡೆತದಿಂದ ಮುಂಗಾಲು ಚಾಚಿಕೊಂಡು ರಾವಣನು ರಥದಲ್ಲೇ ಬಿದ್ದನು.

**ಮೂರ್ಛಿತೋಽಥ ಮುಹೂರ್ತೇನ ರಾವಣಃ ಪುನರುತ್ಥಿತಃ ।**
**ಉವಾಚ ಚ ಹನೂಮಂತಂ ಶೂರೋಽಸಿ ಮಮ ಸಂಮತಃ ॥ ೭ ॥**
**ಹನೂಮಾನಾಹ ತಂ ಧಿಙ್ ಮಾಂ ಯಸ್ತ್ವಂ ಜೀವಸಿ ರಾವಣ ।**
**ತ್ವಂ ತಾವನ್ಮುಷ್ಟಿನಾ ವಕ್ಷೋ ಮಮ ತಾಡಯ ರಾವಣ ।**
**ಪಶ್ಚಾನ್ಮಯಾ ಹತಃ ಪ್ರಾಣಾನ್ ಮೋಕ್ಷ್ಯಸೇ ನಾತ್ರ ಸಂಶಯಃ ॥ ೮ ॥**

೭-೮. ಅನಂತರ ಮುಹೂರ್ತಕಾಲ ಮೂರ್ಛೆಹೊಂದಿದ ರಾವಣನು ಮತ್ತೆ ಮೇಲೆದ್ದವನಾಗಿ ಹನುಮಂತನನ್ನು ಕುರಿತು ಹೀಗೆಂದನು : 'ನೀನು ಶೂರನೇ ಸರಿ, ನನ್ನ ಮೆಚ್ಚುಗೆಗೆ ಪಾತ್ರನಾಗಿರುವೆ.' ಆಗ ಹನುಮಂತನಿಂತೆದನು : 'ಅಯ್ಯೋ ನನಗೆ ಧಿಕ್ಕಾರವಿರಲಿ ! ಎಲೈ ರಾವಣನೆ, ನಾನು (ಗುದ್ದಿದ ಮೇಲೂ) ಇನ್ನೂ ನೀನು ಬದುಕಿಯೇ ಇರುವೆಯಲ್ಲ ? ಇರಲಿ ; ರಾವಣನೆ, ನೀನಾದರೋ ಈಗ ನನ್ನ ಎದೆಗೆ ಗುದ್ದುವವನಾಗು ; ಅನಂತರ ನಾನು ನಿನಗೆ ಗುದ್ದಲಾಗಿ ಕೆಡವಲ್ಪಟ್ಟವನಾಗಿ ಪ್ರಾಣಗಳನ್ನು ಕಳೆದುಕೊಳ್ಳುವೆ ; ಇದರಲ್ಲಿ ಸಂಶಯವಿಲ್ಲ.' (ಎಂದನು).

**ತಥೇತಿ ಮುಷ್ಟಿನಾ ವಕ್ಷೋ ರಾವಣೇನಾಪಿ ತಾಡಿತಃ ।**
**ವಿಘೂರ್ಣಮಾನನಯನಃ ಕಿಂಚಿತ್ ಕಶ್ಮಲಮಾಯಯೌ ॥ ೯ ॥**
**ಸಂಜ್ಞಾಮವಾಪ್ಯ ಕಪಿರಾಟ್ ರಾವಣಂ ಹಂತುಮುದ್ಯತಃ।**
**ತತೋಽನ್ಯತ್ರ ಗತೋ ಭೀತ್ಯಾ ರಾವಣೋ ರಾಕ್ಷಸಾಧಿಪಃ ॥ ೧೦ ॥**

೯-೧೦. ಹಾಗೆಯೇ ಆಗಲಿ - ಎಂದು ರಾವಣನು ಕೂಡ ಮುಷ್ಟಿಯಿಂದ ಹನುಮಂತನ ಎದೆಯಲ್ಲಿ ಗುದ್ದಿದನು. ಕಣ್ಣು ಕತ್ತಲಾಗಿ ತಲೆ ತಿರುಗಿದ ಹನುಮಂತನು ಸ್ವಲ್ಪಮಟ್ಟಿಗೆ ವಿಷಾದವನ್ನು ಹೊಂದಿದನು. ಅನಂತರ ಚೇತರಿಸಿಕೊಂಡವನಾಗಿ ಆ ಕಪಿಶ್ರೇಷ್ಠನು ರಾವಣನನ್ನು ಕೊಲ್ಲಲು ಹೊರಟನು. ಆ ವೇಳೆಗೆ ರಾಕ್ಷಸಾಧಿಪನಾದ ರಾವಣನು ಭಯದಿಂದ ಬೇರೊಂದು ಕಡೆಗೆ ಹೊರಟು ಹೋದನು.

**ಹನೂಮಾನಂಗದಶ್ಚೈವ ನಲೋ ನೀಲಸ್ತಥೈವ ಚ ।**
**ಚತ್ವಾರಃ ಸಮವೇತಾಗ್ರೇ ದೃಷ್ಟ್ವಾ ರಾಕ್ಷಸಪುಂಗವಾನ್ ॥ ೧೧ ॥**
**ಅಗ್ನಿವರ್ಣಂ ತಥಾ ಸರ್ಪರೋಮಾಣಂ ಖಡ್ಗರೋಮಕಮ್ ।**
**ತಥಾ ವೃಶ್ಚಿಕರೋಮಾಣಂ ನಿರ್ಜಘ್ನುಃ ಕ್ರಮಶೋಽಸುರಾನ್ ॥ ೧೨ ॥**
**ಚತ್ವಾರಶ್ಚತುರೋ ಹತ್ವಾ ರಾಕ್ಷಸಾನ್ ಭೀಮವಿಕ್ರಮಾನ್ ।**
**ಸಿಂಹನಾದಂ ಪೃಥಕ್ ಕೃತ್ವಾ ರಾಮಪಾರ್ಶ್ವಮುಪಾಗತಾಃ ॥ ೧೩ ॥**

೧೧-೧೩. ಹನುಮಂತ, ಅಂಗದ, ನಳ, ನೀಲ- ಈ ನಾಲ್ವರು ಕೂಡಿ ಮುಂದಾಳುಗಳಾಗಿ ಹೊರಟು ರಾಕ್ಷಸರನ್ನು ಕಂಡರು. ಅಗ್ನಿವರ್ಣ, ಸಪ್ತರೋಮ, ಖಡ್ಗರೋಮ, ವೃಶ್ಚಿಕರೋಮ- ಎಂಬ ಹೆಸರಿನ ರಾಕ್ಷಸರನ್ನು ಕ್ರಮವಾಗಿ ಕೊಂದರು. ಈ ನಾಲ್ವರು ಭಯಂಕರಪರಾಕ್ರಮಿಗಳಾದ ನಾಲ್ವರು ರಾಕ್ಷಸರನ್ನು ಕೊಂದು ಬೇರೆ ಬೇರೆಯಾಗಿ ಸಿಂಹನಾದಮಾಡುತ್ತಾ ಶ್ರೀರಾಮನ ಸಮೀಪಕ್ಕೆ ಬಂದರು.

**ತತಃ ಕ್ರುದ್ಧೋ ದಶಗ್ರೀವಃ ಸಂದಶ್ಯ ದಶನಚ್ಛದಮ್ ।**
**ವಿವೃತ್ಯ ನಯನೇ ಕ್ರೂರೋ ರಾಮಮೇವಾನ್ವಧಾವತ ॥ ೧೪ ॥**
**ದಶಗ್ರೀವೋ ರಥಸ್ಥಸ್ತು ರಾಮಂ ವಜ್ರೋಪಮೈಃ ಶರೈಃ ।**
**ಆಜಘಾನ ಮಹಾಘೋರೈರ್ಧಾರಾಭಿರಿವ ತೋಯದಃ ॥ ೧೫ ॥**
**ರಾಮಸ್ಯ ಪುರತಃ ಸರ್ವಾನ್ ವಾನರಾನಪಿ ವಿವ್ಯಥೇ ।**

೧೪ - ೧೫. ಅನಂತರ ಕುಪಿತನಾದ ರಾವಣನು ಹಲ್ಲುಗಳನ್ನು ಕಡಿಯುತ್ತಾ ಕಣ್ಣುಗಳನ್ನು ಅಗಲವಾಗಿ ತೆರೆದುಕೊಂಡು ರಾಮನನ್ನೇ ಕುರಿತು ನುಗ್ಗಿದನು. ಆ ರಥದಲ್ಲಿದ್ದ ದಶಗ್ರೀವನು ವಜ್ರಕ್ಕೆ ಸಮಾನವಾದ ಮಹಾಘೋರವಾದ ಬಾಣಗಳಿಂದ - ಮೋಡವು ತನ್ನ ಜಲಧಾರೆಗಳನ್ನು ಸುರಿಸುವಂತೆ ರಾಮನ ಮುಂದೆಯೇ ಎಲ್ಲಾ ಕಪಿಗಳನ್ನೂ ಪೀಡಿಸಿದನು.

**ತತಃ ಪಾವಕಸಂಕಾಶೈಃ ಶರೈಃ ಕಾಂಚನಭೂಷಣೈಃ ।**
**ಅಭ್ಯವರ್ಷದ್ ರಣೇ ರಾಮೋ ದಶಗ್ರೀವಂ ಸಮಾಹಿತಃ ॥ ೧೬ ॥**
**ರಥಸ್ಥಂ ರಾವಣಂ ದೃಷ್ಟ್ವಾ ಭೂಮಿಷ್ಠಂ ರಘುನಂದನಮ್ ।**
**ಆಹೂಯ ಮಾತಲಿಂ ಶಕ್ರೋ ವಚನಂ ಚೇದಮಬ್ರವೀತ್ ॥ ೧೭ ॥**
**ರಥೇನ ಮಮ ಭೂಮಿಷ್ಠಂ ಶೀಘ್ರಂ ಯಾಹಿ ರಘೂತ್ತಮಮ್ ।**
**ತ್ವರಿತಂ ಭೂತಲಂ ಗತ್ವಾ ಕುರು ಕಾರ್ಯಂ ಮಮಾನಘ ॥ ೧೮ ॥**

೧೬-೧೮. ಅನಂತರ ಬೆಂಕಿಯಂತೆ ಹೊಳೆಯುತ್ತಿರುವ ಸುವರ್ಣಾಲಂಕೃತವಾದ ಬಾಣಗಳಿಂದ ರಾಮನು ಯುದ್ಧದಲ್ಲಿ ರಾವಣನ ಮೇಲೆ ಧಾಳಿಮಾಡಿದನು. ಆಗ ರಾವಣನು ರಥದಲ್ಲಿರುವದನ್ನೂ ರಾಮನು ನೆಲದಮೇಲಿರುವದನ್ನೂ ನೋಡಿ ದೇವೇಂದ್ರನು ಮಾತಲಿಯನ್ನು ಕರೆದು ಈ ಮಾತನ್ನು ಹೇಳಿದನು. 'ಎಲೈ ಪಾಪರಹಿತನೆ, ನನ್ನ ರಥದೊಡನೆ ನೀನು ಭೂಮಿಯಲ್ಲಿರುವ ರಘುಶ್ರೇಷ್ಠನಾದ (ರಾಮನನ್ನು) ಸೇರುವವನಾಗು. ಬೇಗನೆ ಭೂಲೋಕಕ್ಕೆ ಹೋಗಿ ಈ ಕಾರ್ಯವನ್ನು ಕೈಗೊಳ್ಳುವವನಾಗು.'

**ಏವಮುಕ್ತೋಽಥ ತಂ ನತ್ವಾ ಮಾತಲಿರ್ದೇವಸಾರಥಿಃ ।**
**ತತೋ ಹಯೈಶ್ಚ ಸಂಯೋಜ್ಯ ಹರಿತೈಃ ಸ್ಯಂದನೋತ್ತಮಮ್ ॥ ೧೯ ॥**
**ಸ್ವರ್ಗಾಜ್ಜಯಾರ್ಥಂ ರಾಮಸ್ಯ ಹ್ಯುಪಚಕ್ರಾಮ ಮಾತಲಿಃ ।**

೧೯. ಈ ರೀತಿಯಾಗಿ ಹೇಳಲ್ಪಟ್ಟ ಆ ದೇವಸಾರಥಿಯಾದ ಮಾತಲಿಯು ಅವನಿಗೆ ನಮಸ್ಕರಿಸಿ ಅನಂತರ ಹಸಿರುಬಣ್ಣದ ಕುದುರೆಗಳಿಂದ ರಥವನ್ನು ಹೂಡಿದವನಾಗಿ ಸ್ವರ್ಗಲೋಕದಿಂದ ಶ್ರೀರಾಮನ ಜಯಕ್ಕಾಗಿ ಹೊರಟನು.

**ಪ್ರಾಂಜಲಿರ್ದೇವರಾಜೇನ ಪ್ರೇಷಿತೋಽಸ್ಮಿ ರಘೂತ್ತಮ ।**
**ರಥೋಽಯಂ ದೇವರಾಜಸ್ಯ ವಿಜಯಾಯ ತವ ಪ್ರಭೋ ॥ ೨೦ ॥**
**ಪ್ರೇಷಿತಶ್ಚ ಮಹಾರಾಜ ಧನುರೈಂದ್ರಂ ಚ ಭೂಷಿತಮ್ ।**
**ಅಭೇದ್ಯಂ ಕವಚಂ ಖಡ್ಗಂ ದಿವ್ಯತೂಣೀಯುಗಂ ತಥಾ ॥ ೨೧ ॥**
**ಆರುಹ್ಯ ಚ ರಥಂ ರಾಮ ರಾವಣಂ ಜಹಿ ರಾಕ್ಷಸಮ್ ।**
**ಮಯಾ ಸಾರಥಿನಾ ದೇವ ವೃತ್ರಂ ದೇವಪತಿರ್ಯಥಾ ॥ ೨೨ ॥**

೨೦-೨೨. ಆತನು ಕೈಮುಗಿದುಕೊಂಡವನಾಗಿ - 'ರಘುಶ್ರೇಷ್ಠನೆ, ಈ ರಥವು ದೇವರಾಜನದು. ಪ್ರಭುವೆ, ನಿನ್ನ ವಿಜಯಕ್ಕಾಗಿ ಇಂದ್ರಧನುಸ್ಸು, ಅಭೇದ್ಯವಾದ ಕವಚ, ಕತ್ತಿ, ದಿವ್ಯವಾದ ಎರಡು ಬತ್ತಳಿಕೆಗಳು- ಇವುಗಳೊಡನೆ ಕಳುಹಿಸಲ್ಪಟ್ಟಿದೆ. ರಾಮನೆ, ರಥವನ್ನೇರಿ ರಾಕ್ಷಸನಾದ ರಾವಣನನ್ನು ಕೊಲ್ಲುವವನಾಗು. ಹೇಗೆ ದೇವೇಂದ್ರನು ವೃತ್ರಾಸುರನನ್ನು ಸಂಹರಿಸಿದನೋ ಹಾಗೆ - ಸಾರಥಿಯಾಗಿ ನನ್ನೊಡಗೂಡಿ (ರಾವಣ ಸಂಹಾರವನ್ನು) ಮಾಡುವವನಾಗು.'

**ಇತ್ಯುಕ್ತಸ್ತಂ ಪರಿಕ್ರಮ್ಯ ನಮಸ್ಕೃತ್ಯ ರಥೋತ್ತಮಮ್ ।**
**ಆರುರೋಹ ರಥಂ ರಾಮೋ ಲೋಕಾನ್ ಲಕ್ಷ್ಮ್ಯಾನಿಯೋಜಯನ್॥ ೨೩॥**
**ತತೋಽಭವನ್ಮಹಾಯುದ್ಧಂ ಭೈರವಂ ರೋಮಹರ್ಷಣಮ್ ।**
**ಮಹಾತ್ಮನೋ ರಾಘವಸ್ಯ ರಾವಣಸ್ಯ ಚ ಧೀಮತಃ ॥ ೨೪ ॥**
**ಆಗ್ನೇಯೇನ ಚ ಆಗ್ನೇಯಂ ದೈವಂ ದೈವೇನ ರಾಘವಃ ।**
**ಅಸ್ತ್ರಂ ರಾಕ್ಷಸರಾಜಸ್ಯ ಜಘಾನ ಪರಮಾಸ್ತ್ರವಿತ್ ॥ ೨೫ ॥**

೨೩-೨೫. ಹೀಗೆ ಹೇಳಲ್ಪಟ್ಟ ರಾಮನು ಆ ಶ್ರೇಷ್ಠವಾದ ರಥಕ್ಕೆ ನಮಸ್ಕರಿಸಿ ಜಗತ್ತಿಗೆಲ್ಲ ಕ್ಷೇಮವುಂಟುಮಾಡುವದಕ್ಕಾಗಿ ಆ ರಥವನ್ನೇರಿದನು. ಅನಂತರ ಭಯಂಕರವೂ ರೋಮಾಂಚವುಂಟುಮಾಡುವಂಥದೂ ಆದ, ಮಹಾತ್ಮನಾದ ರಾಮನ ಹಾಗೂ ಬುದ್ಧಿಶಾಲಿಯಾದ ರಾವಣನ ನಡುವಿನ ಮಹಾಯುದ್ಧವು ನಡೆಯಿತು. ಪರಮಾಸ್ತ್ರಜ್ಞನಾದ ರಾಮನು ತನ್ನ ಆಗ್ನೇಯಾಸ್ತ್ರದಿಂದ ರಾವಣನ ಆಗ್ನೇಯಾಸ್ತ್ರವನ್ನೂ ದೇವಾಸ್ತ್ರದಿಂದ ದೇವಾಸ್ತ್ರವನ್ನೂ ಹೊಡೆದನು.

**ತತಸ್ತು ಸಸೃಜೇ ಘೋರಂ ರಾಕ್ಷಸಂ ಚಾಸ್ತ್ರಮಸ್ತ್ರವಿತ್ ।**
**ಕ್ರೋಧೇನ ಮಹತಾವಿಷ್ಟೋ ರಾಮಸ್ಯೋಪರಿ ರಾವಣಃ ॥ ೨೬ ॥**
**ರಾವಣಸ್ಯ ಧನುರ್ಮುಕ್ತಾಃ ಸರ್ಪಾ ಭೂತ್ವಾ ಮಹಾವಿಷಾಃ ।**
**ಶರಾಃ ಕಾಂಚನಪುಂಖಾಭಾ ರಾಘವಂ ಪರಿತೋಽಪತನ್ ॥ ೨೭ ॥**

೨೬-೨೭. ಅನಂತರ ಅಸ್ತ್ರಜ್ಞನಾದ ರಾವಣನು ಬಹಳವಾದ ಕೋಪದಿಂದ ಕೂಡಿದವನಾಗಿ ಭಯಂಕರವಾದ ರಾಕ್ಷಸಾಸ್ತ್ರವನ್ನು ರಾಮನಿಗೆ ಎದುರಾಗಿ ಸೃಷ್ಟಿಸಿದನು. ರಾವಣನ ಬಿಲ್ಲಿನಿಂದ ಹೊರಟ ಚಿನ್ನದ ಗರಿಗಳುಳ್ಳ ಕಾಂತಿಯುಕ್ತವಾದ ಬಾಣಗಳು ಮಹಾವಿಷವುಳ್ಳ ಹಾವುಗಳಾಗಿ ರಾಮನನ್ನು ಸುತ್ತುವರಿದು ಉದುರಿದವು.

**ತೈಶ್ಶರೈಃ ಸರ್ಪವದನೈರ್ವಮದ್ಭಿರನಲಂ ಮುಖೈಃ ।**
**ದಿಶಶ್ಚ ವಿದಿಶಶ್ಚೈವ ವ್ಯಾಪ್ತಾಸ್ತತ್ರ ತದಾಽಭವನ್ ॥ ೨೮ ॥**
**ರಾಮಃ ಸರ್ಪಾನ್ ತತೋ ದೃಷ್ಟ್ವಾ ಸಮಂತಾತ್ ಪರಿಪೂರಿತಾನ್ ।**
**ಸೌಪರ್ಣಮಸ್ತ್ರಂ ತದ್ ಘೋರಂ ಪುರಃ ಪ್ರಾವರ್ತಯದ್ ರಣೇ ॥ ೨೯ ॥**
**ರಾಮೇಣ ಮುಕ್ತಾಸ್ತೇ ಬಾಣಾ ಭೂತ್ವಾ ಗರುಡರೂಪಿಣಃ ।**
**ಚಿಚ್ಛಿದುಃ ಸರ್ಪಬಾಣಾಂಸ್ತಾನ್ ಸಮಂತಾತ್ ಸರ್ಪಶತ್ರವಃ ॥ ೩೦ ॥**

೨೮-೩೦. ಹಾವಿನ ಮುಖದ ಆ ಬಾಣಗಳಿಂದ ಹೊರಬಿದ್ದ ಬೆಂಕಿಯಿಂದ ಆಗ ದಿಕ್ಕುಗಳೂ ವಿದಿಕ್ಕುಗಳೂ ವ್ಯಾಪಿಸಲ್ಪಟ್ಟವು. ಆಗ ರಾಮನು ಸುತ್ತಲೂ ತುಂಬಿಹೋಗಿದ್ದ ಹಾವುಗಳನ್ನು ಕಂಡು ಭಯಂಕರವಾದ ಗರುಡಾಸ್ತ್ರವನ್ನು ಯುದ್ಧದಲ್ಲಿ ಮುಂದುವರೆದು ಪ್ರಯೋಗಮಾಡಿದನು. ರಾಮನಿಂದ ಬಿಡಲ್ಪಟ್ಟ ಸರ್ಪವೈರಿಗಳಾದ ಆ ಬಾಣಗಳು ಗರುಡನ ಆಕಾರವನ್ನು ಧರಿಸಿದವುಗಳಾಗಿ ಸುತ್ತಲೂ ತಮ್ಮ ಸ್ಪರ್ಶಮಾತ್ರದಿಂದ ಸರ್ಪ ಬಾಣಗಳನ್ನು ಕತ್ತರಿಸಿಹಾಕಿದವು.

**ಅಸ್ತ್ರೇ ಪ್ರತಿಹತೇ ಯುದ್ಧೇ ರಾಮೇಣ ದಶಕಂಧರಃ ।**
**ಅಭ್ಯವರ್ಷತ್ ತತೋ ರಾಮಂ ಘೋರಾಭಿಃ ಶರವೃಷ್ಟಿಭಿಃ ॥ ೩೧ ॥**
**ತತಃ ಪುನಃ ಶರಾನೀಕೈಃ ರಾಮಮಕ್ಲಿಷ್ಟಕಾರಿಣಮ್ ।**
**ಅರ್ದಯಿತ್ವಾ ತು ಘೋರೇಣ ಮಾತಲಿಂ ಪ್ರತ್ಯವಿಧ್ಯತ ॥ ೩೨ ॥**
**ಪಾತಯಿತ್ವಾ ರಥೋಪಸ್ಥೇ ರಥಕೇತುಂ ಚ ಕಾಂಚನಮ್ ।**
**ಐಂದ್ರಾನಶ್ವಾನಭ್ಯಹನತ್ ರಾವಣಃ ಕ್ರೋಧಮೂರ್ಛಿತಃ ॥ ೩೩ ॥**

೩೧-೩೩. ಯುದ್ಧದಲ್ಲಿ ರಾಮನಿಂದ ಅಸ್ತ್ರವು ಹಿಮ್ಮೆಟ್ಟಿಸಲ್ಪಡಲಾಗಿ ರಾವಣನು ಅನಂತರ ಭಯಂಕರವಾದ ಬಾಣದ ಮಳೆಯಿಂದ ರಾಮನನನ್ನು ತುಂಬಿಬಿಟ್ಟನು. ಅನಂತರ ಮತ್ತೆ ಬಾಣಗಳ ಸಮೂಹಗಳಿಂದ ಪರಾಕ್ರಮಿಯಾದ

ರಾಮನನ್ನು ಚೆನ್ನಾಗಿ ಹೊಡೆದು ಘೋರವಾದ ಬಾಣವೊಂದರಿಂದ ಮಾತಲಿಯನ್ನು ಪ್ರಹಾರಮಾಡಿದನು. ಮತ್ತು ಇಂದ್ರರಥದ ಚಿನ್ನದ ಧ್ವಜವನ್ನು ಸಹ ಕೆಡವಿದವನಾಗಿ ರಥದ ಮುಂದಿದ್ದ ಇಂದ್ರನ ಕುದುರೆಗಳನ್ನೂ ಕ್ರೋಧಾವಿಷ್ಟನಾದ ರಾವಣನು ಹೊಡೆದನು.

**ವಿಷೇದುರ್ದೇವಗಂಧರ್ವಾಃ ಚಾರಣಾಃ ಪಿತರಸ್ತಥಾ ।**
**ಆರ್ತಾಕಾರಂ ಹರಿಂ ದೃಷ್ಟ್ವಾ ವ್ಯಥಿತಾಶ್ಚ ಮಹರ್ಷಯಃ ॥ ೩೪ ॥**
**ವ್ಯಥಿತಾ ವಾನರೇಂದ್ರಾಶ್ಚ ಬಭೂವುಃ ಸವಿಭೀಷಣಾಃ ।**
**ದಶಾಸ್ಯೋ ವಿಂಶತಿಭುಜಃ ಪ್ರಗೃಹೀತಶರಾಸನಃ ॥ ೩೫ ॥**
**ದದೃಶೇ ರಾವಣಸ್ತತ್ರ ಮೈನಾಕ ಇವ ಪರ್ವತಃ ।**

೩೪-೩೫. ದೇವತೆಗಳೂ ಗಂಧರ್ವರೂ ಚಾರಣರೂ ಪಿತೃಗಳೂ ಮಹರ್ಷಿಗಳೂ ಬಳಲಿಹೋದ ರಾಮನನ್ನು ಕಂಡು ದುಃಖಗೊಂಡರು. ವಿಭೀಷಣನೊಡಗೂಡಿದ ಕಪಿಗಳೂ ವಿಷಾದಹೊಂದಿದರು. ಹತ್ತುತಲೆಗಳಿಂದಲೂ ಇಪ್ಪತ್ತು ತೋಳುಗಳಿಂದಲೂ ಕೂಡಿದ ಹಾಗೂ ಕೈಗಳಲ್ಲಿ ಬಾಣಗಳನ್ನು ಹಿಡಿದಿರುವ ರಾವಣನು ಆ ರಣರಂಗದಲ್ಲಿ ಮೈನಾಕಪರ್ವತದಂತೆ ಕಂಡುಬಂದನು.

**ರಾಮಸ್ತು ಭ್ರುಕುಟಿಂ ಬದ್ಧ್ವಾ ಕ್ರೋಧಸಂರಕ್ತಲೋಚನಃ ।**
**ಕೋಪಂ ಚಕಾರ ಸದೃಶಂ ನಿರ್ದಹನ್ನಿವ ರಾಕ್ಷಸಮ್ ॥ ೩೬ ॥**
**ಧನುರಾದಾಯ ದೇವೇಂದ್ರಧನುರಾಕಾರಮದ್ಭುತಮ್ ।**
**ಗೃಹೀತ್ವಾ ಪಾಣಿನಾ ಬಾಣಂ ಕಾಲಾನಲಸಮಪ್ರಭಮ್ ॥ ೩೭॥**
**ನಿರ್ದಹನ್ನಿವ ಚಕ್ಷುರ್ಭ್ಯಾಂ ದದೃಶೇ ರಿಪುಮಂತಿಕೇ ।**
**ಪರಾಕ್ರಮಂ ದರ್ಶಯಿತುಂ ತೇಜಸಾ ಪ್ರಜ್ವಲನ್ನಿವ ॥ ೩೮ ॥**
**ಪ್ರಚಕ್ರಮೇ ಕಾಲರೂಪೀ ಸರ್ವಲೋಕಸ್ಯ ಪಶ್ಯತಃ ।**

೩೬-೩೮. ಶ್ರೀರಾಮನಾದರೊ, ಹುಬ್ಬುಗಂಟಿಕ್ಕಿದವನಾಗಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ರಾಕ್ಷಸನನ್ನು ಸುಟ್ಟುಬಿಡುವಂತೆ ಸಿಟ್ಟಾದನು. ದೇವೇಂದ್ರನ ಬಿಲ್ಲಿನಂತಿದ್ದ ಬೇರೊಂದು ಬಿಲ್ಲನ್ನು ತೆಗೆದುಕೊಂಡು ಪ್ರಲಯಾಗ್ನಿಯಂತಿದ್ದ ಬಾಣವನ್ನೂ ಕೈಯಲ್ಲಿ ಹಿಡಿದು ಕಣ್ಣುಗಳಿಂದ ಹತ್ತಿರವೇ ಇದ್ದ ಶತ್ರುವನ್ನು ದಹಿಸುವವನಂತೆ ನೋಡುತ್ತಾ, ತೇಜಸ್ಸಿನಿಂದ ಬಿಸಿಯೇರಿದವನಂತೆ - ಪರಾಕ್ರಮವನ್ನು ಪ್ರಕಟಿಸುವದಕ್ಕಾಗಿ- ಲೋಕದ ಜನರೆಲ್ಲರೂ ನೋಡುತ್ತಿರಲಾಗಿ ಕಾಲರೂಪಿಯಾದ ಆತನು ಮುನ್ನುಗ್ಗಿದನು.

**ವಿಕೃಷ್ಯ ಚಾಪಂ ರಾಮಸ್ತು ರಾವಣಂ ಪ್ರತಿವಿಧ್ಯ ಚ ।**
**ಹರ್ಷಯನ್ ವಾನರಾನೀಕಂ ಕಾಲಾಂತಕ ಇವಾಬಭೌ ॥ ೩೯ ॥**
**ಕ್ರುದ್ಧಂ ರಾಮಸ್ಯ ವದನಂ ದೃಷ್ಟ್ವಾ ಶತ್ರುಂ ಪ್ರಧಾವತಃ ।**
**ತತ್ರಸುಃ ಸರ್ವಭೂತಾನಿ ಚಚಾಲ ಚ ವಸುಂಧರಾ ॥ ೪೦ ॥**
**ರಾಮಂ ದೃಷ್ಟ್ವಾ ಮಹಾರೌದ್ರಮುತ್ಪಾತಾಂಶ್ಚ ಸುದಾರುಣಾನ್।**
**ತ್ರಸ್ತಾನಿ ಸರ್ವಭೂತಾನಿ ರಾವಣಂ ಚಾವಿಶದ್ಭಯಮ್ ॥ ೪೧ ॥**
**ವಿಮಾನಸ್ಥಾಃ ಸುರಗಣಾಃ ಸಿದ್ಧಗಂಧರ್ವಕಿನ್ನರಾಃ**
**ದದೃಶುಃ ಸುಮಹಾಯುದ್ಧಂ ಲೋಕಸಂವರ್ತಕೋಪಮಮ್ ॥ ೪೨ ॥**

೩೯-೪೨. ಶ್ರೀರಾಮನಾದರೊ, ಬಾಣವನ್ನೆಳೆದು ರಾವಣನನ್ನು ಪ್ರತಿಯಾಗಿ ಹೊಡೆದು ಕಪಿಸಮೂಹಕ್ಕೆಲ್ಲ ಆನಂದವನ್ನುಂಟುಮಾಡುತ್ತಾ ಕಾಲಯಮನಂತೆ ಪ್ರಕಾಶಿಸುತ್ತಿದ್ದನು. ಕುಪಿತನಾದ ರಾಮನ ಮುಖವನ್ನು ನೋಡಿ, ಹಾಗೂ ಓಡುತ್ತಿರುವ ಶತ್ರುವನ್ನೂ ಕಂಡು ಎಲ್ಲಾ ಭೂತಗಳೂ ನಡುಗಿದವು. ಭೂಮಿಯು ಅಳ್ಳಾಡಿತು. ಮಹಾಭಯಂಕರನಾದ ರಾಮನನ್ನೂ ದಾರುಣವಾದ ಉತ್ಪಾತಗಳನ್ನೂ ಕಂಡು ಎಲ್ಲಾ ಪ್ರಾಣಿಗಳೂ ತತ್ತರಿಸಿದವು. ರಾವಣನಿಗೆ ಭಯವುಂಟಾಯಿತು. ವಿಮಾನದಲ್ಲಿ ಕುಳಿತಿದ್ದ ದೇವತೆಗಳೂ ಸಿದ್ಧಗಂಧರ್ವಕಿನ್ನರರೂ ಲೋಕಪ್ರಲಯಕ್ಕೆ ಸಮಾನವಾದ ಮಹಾ ಯುದ್ಧವನ್ನು ನೋಡುತ್ತಿದ್ದರು.

**ಐಂದ್ರಮಸ್ತ್ರಂ ಸಮಾದಾಯ ರಾವಣಸ್ಯ ಶಿರೋಽಚ್ಛಿನತ್ ।**
**ಮೂರ್ಧಾನೋ ರಾವಣಸ್ಯಾಥ ಬಹವೋ ರುಧಿರೋಕ್ಷಿತಾಃ ॥ ೪೩ ॥**
**ಗಗನಾತ್ ಪ್ರಪತಂತಿ ಸ್ಮ ತಾಲಾದಿವ ಫಲಾನಿ ಹಿ ।**
**ನ ದಿನಂ ನ ಚ ವೈ ರಾತ್ರಿಃ ನ ಸಂಧ್ಯಾ ನ ದಿಶೋಽಪಿ ವಾ ॥ ೪೪ ॥**
**ಪ್ರಕಾಶಂತೇ ನ ತದ್ರೂಪಂ ದೃಶ್ಯತೇ ತತ್ರ ಸಂಗರೇ ।**

೪೩-೪೪. ಶ್ರೀರಾಮನು ಐಂದ್ರಾಸ್ತ್ರವನ್ನು ತೆಗೆದುಕೊಂಡು ರಾವಣನ ತಲೆಯನ್ನು ಕತ್ತರಿಸಿದನು. ರಾವಣನ ಅನೇಕ ತಲೆಗಳು ರಕ್ತದಿಂದ ತೋಯ್ದವುಗಳಾಗಿ - ತಾಳೆಯ ಮರದಿಂದ ಹಣ್ಣುಗಳು ಹೇಗೋ ಹಾಗೆ ಆಕಾಶದಿಂದ ಬೀಳುತ್ತಿದ್ದವು. ಹಗಲಾಗಲಿ, ರಾತ್ರಿಯಾಗಲಿ, ಸಂಧ್ಯಾಕಾಲವಾಗಲಿ, ದಿಕ್ಕುಗಳಾಗಲಿ ಆಯಾ ಪದಾರ್ಥಗಳ ರೂಪವಾಗಲಿ ಆ ಯುದ್ಧದಲ್ಲಿ ಕಾಣಿಸುತ್ತಿರಲಿಲ್ಲ.

**ತತೋ ರಾಮೋ ಬಭೂವಾಥ ವಿಸ್ಮಯಾವಿಷ್ಟಮಾನಸಃ ।**
**ಶತಮೇಕೋತ್ತರಂ ಛಿನ್ನಂ ಶಿರಸಾಂ ಚೈಕವರ್ಚಸಾಮ್ ॥ ೪೫ ॥**

**ನ ಚೈವ ರಾವಣಃ ಶಾಂತೋ ದೃಶ್ಯತೇ ಜೀವಿತಕ್ಷಯಾತ್ ।**
**ತತಃ ಸರ್ವಾಸ್ತ್ರವಿದ್ಧೀರಃ ಕೌಸಲ್ಯಾನಂದವರ್ಧನಃ ॥ ೪೬ ॥**
**ಅಸ್ತ್ರೈಶ್ಚ ಬಹುಭಿರ್ಯುಕ್ತಶ್ಚಿಂತಯಾಮಾಸ ರಾಘವಃ ।**
**ಯೈರ್ಯೈರ್ಬಾಣೈರ್ಹತಾ ದೈತ್ಯಾ ಮಹಾಸತ್ವಪರಾಕ್ರಮಾಃ ॥ ೪೭ ॥**
**ತ ಏತೇ ನಿಷ್ಫಲಂ ಯಾತಾ ರಾವಣಸ್ಯ ನಿಪಾತನೇ ।**

೪೫-೪೭. ರಾಮನು ಒಂದೇ ರೀತಿಯ ಕಾಂತಿಯುಳ್ಳ ನೂರೊಂದು ರಾವಣನ ತಲೆಗಳು ಕತ್ತರಿಸಲ್ಪಟ್ಟರೂ ರಾವಣನು ಪ್ರಾಣವನ್ನು ಕಳೆದುಕೊಂಡು ನಿಶ್ಚೇಷ್ಟನಾಗಿ ಮಲಗಲಿಲ್ಲವೆಂದು ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವನಾದನು. ಅನಂತರ ಸರ್ವಾಸ್ತ್ರಗಳ ತಿಳಿವಳಿಕೆಯುಳ್ಳ ಧೀರನಾದ ಕೌಸಲ್ಯಾನಂದವರ್ಧನನಾದ ರಾಘವನು ಬಹಳವಾದ ಅಸ್ತ್ರಗಳಿಂದ ಕೂಡಿದ್ದವನಾದರೂ ಹೀಗೆ ಚಿಂತಿಸಲಾರಂಭಿಸಿದನು. ''ಮಹಾಬಲಪರಾಕ್ರಮಶಾಲಿಗಳಾದ ದೈತ್ಯರುಗಳು ಯಾವ ಯಾವ ಬಾಣಗಳಿಂದ ಕೊಲ್ಲಲ್ಪಟ್ಟರೋ ಆ ಬಾಣಗಳು ರಾವಣನನ್ನು ಕೆಡಹುವದರಲ್ಲಿ ವ್ಯರ್ಥವಾಗಿ ಬಿಟ್ಟವಲ್ಲ?'' (ಎಂದು ಚಿಂತಿಸಿದನು. )

**ಇತಿ ಚಿಂತಾಕುಲೇ ರಾಮೇ ಸಮೀಪಸ್ಥೋ ವಿಭೀಷಣಃ ।**
**ಉವಾಚ ರಾಘವಂ ವಾಕ್ಯಂ ಬ್ರಹ್ಮದತ್ತವರೋ ಹ್ಯಸೌ ॥ ೪೮ ॥**
**ವಿಚ್ಛಿನ್ನಾ ಬಾಹವೋಽಪ್ಯಸ್ಯ ವಿಚ್ಛಿನ್ನಾನಿ ಶಿರಾಂಸಿ ಚ ।**
**ಉತ್ಪತ್ಸ್ಯಂತಿ ಪುನಃ ಶೀಘ್ರಮಿತ್ಯಾಹ ಭಗವಾನಜಃ ॥ ೪೯ ॥**
**ನಾಭಿದೇಶೇಽಮೃತಂ ತಸ್ಯ ಕುಂಡಲಾಕಾರಸಂಸ್ಥಿತಮ್ ।**
**ತಚ್ಛೋಷಯಾನಲಾಸ್ತ್ರೇಣ ತಸ್ಯ ಮೃತ್ಯುಸ್ತತೋ ಭವೇತ್ ॥ ೫೦ ॥**

೪೮-೫-. ಹೀಗೆ ರಾಮನು ಚಿಂತಾಕುಲನಾಗಿರಲಾಗಿ ಹತ್ತಿರದಲ್ಲಿದ್ದ ವಿಭೀಷಣನು ರಾಮನನ್ನು ಕುರಿತು ಹೀಗೆಂದನು : ''ಪ್ರಭೋ, ಈತನು ಬ್ರಹ್ಮನಿಂದ ವರವನ್ನು ಪಡೆದಿ ದ್ದಾನೆ. ಅದರಂತೆ ಕತ್ತರಿಸಲ್ಪಟ್ಟ ಈತನ ತೋಳುಗಳೂ, ತಲೆಗಳೂ ಮತ್ತೆ ಬೇಗನೆ ಹುಟ್ಟಲಿರುವವು ; ಆದ್ದರಿಂದ ಇವನ ಹೊಕ್ಕಳು ಪ್ರದೇಶದಲ್ಲಿ ದುಂಡಗೆ ಇರುವ ಅಮೃತ ವನ್ನು ಆಗ್ನೇಯಾಸ್ತ್ರದಿಂದ ಒಣಗಿಸಿಬಿಡುವವನಾಗು. ಅನಂತರ ಅವನಿಗೆ ಸಾವು ಸಂಭವಿಸಲಿದೆ'' (ಎಂದನು).

**ವಿಭೀಷಣವಚಃ ಶ್ರುತ್ವಾ ರಾಮಃ ಶೀಘ್ರಪರಾಕ್ರಮಃ ।**
**ಪಾವಕಾಸ್ತ್ರೇಣ ಸಂಯೋಜ್ಯ ನಾಭಿಂ ವಿವ್ಯಾಧ ರಕ್ಷಸಃ ॥ ೫೧ ॥**
**ಅನಂತರಂ ಚ ಚಿಚ್ಛೇದ ಶಿರಾಂಸಿ ಚ ಮಹಾಬಲಃ ।**
**ಬಾಹೂನಪಿ ಚ ಸಂರಬ್ಧೋ ರಾವಣಸ್ಯ ರಘೂತ್ತಮಃ ॥ ೫೨ ॥**

೫೧ - ೫೨. ವಿಭೀಷಣನ ಮಾತನ್ನು ಕೇಳಿ ಶೀಘ್ರಪರಾಕ್ರಮನಾದ ರಾಮನು ಪಾವಕಾಸ್ತ್ರವನ್ನು ಹೂಡಿ ರಾಕ್ಷಸನ ಹೊಕ್ಕಳಿಗೆ ಹೊಡೆದನು. ಅನಂತರ ಆ ಮಹಾಬಲ ಶಾಲಿಯು ತಲೆಗಳನ್ನು ಕತ್ತರಿಸಿದನು. ಮತ್ತು ಮುಂದುವರೆದವನಾಗಿ ಆ ರಘು ಶ್ರೇಷ್ಠನು ರಾವಣನ ತೋಳುಗಳನ್ನೂ ತುಂಡುಮಾಡಿದನು.

**ತತೋ ಘೋರಾಂ ಮಹಾಶಕ್ತಿಮಾದಾಯ ದಶಕಂಧರಃ ।**
**ವಿಭೀಷಣವಧಾರ್ಥಾಯ ಚಿಕ್ಷೇಪ ಕ್ರೋಧವಿಹ್ವಲಃ ॥ ೫೩ ॥**
**ಚಿಚ್ಛೇದ ರಾಘವೋ ಬಾಣೈಃ ತಾಂ ಶಿತೈರ್ಹೇಮಭೂಷಿತೈಃ ।**
**ದಶಗ್ರೀವಶಿರಚ್ಛೇದಾತ್ ತದಾ ತೇಜೋ ವಿನಿರ್ಗತಮ್ ॥ ೫೪ ॥**
**ಗ್ಲಾನರೂಪೋ ಬಭೂವಾಥ ಛಿನ್ನೈಃ ಶೀರ್ಷೈಃ ಭಯಂಕರೈಃ ।**
**ಏಕೇನ ಮುಖ್ಯಶಿರಸಾ ಬಾಹುಭ್ಯಾಂ ರಾವಣೋ ಬಭೌ ॥ ೫೫ ॥**

೫೩-೫೫. ಅನಂತರ ಭಯಂಕರವಾದ ಮಹಾಶಕ್ತ್ಯಾಯುಧವನ್ನೆತ್ತಿ ರಾವಣನು ವಿಭೀಷಣನನ್ನು ಕೊಲ್ಲುವದಕ್ಕಾಗಿ ಕೋಪಭರಿತನಾಗಿ ಎಸೆದನು. ರಾಮನು ಆ ಶಕ್ತಿಯನ್ನು ಹರಿತವಾದ ಸುವರ್ಣಾಲಂಕೃತವಾದ ಬಾಣಗಳಿಂದ ಕತ್ತರಿಸಿಬಿಟ್ಟನು. ಆಗ ರಾವಣನ ಉಳಿದ ತಲೆಗಳ ಕತ್ತರಿಸುವಿಕೆಯಿಂದ ಒಂದು ಬೆಳಕು ಹೊರಬಿದ್ದಿತು. ಕತ್ತರಿಸಲ್ಪಟ್ಟ ಭಯಂಕರವಾದ ತಲೆಗಳಿಂದ ರಾವಣನು ಬಳಲಿದವನಾದನು. ಮುಖ್ಯವಾದ ಒಂದೇ ತಲೆಯೂ ಹಾಗೂ ಎರಡು ತೋಳುಗಳೂ ಉಳಿಯಲಾಗಿ ರಾವಣನು ಅವುಗಳಿಂದಲೇ ಪ್ರಕಾಶಿಸುತ್ತಿದ್ದನು.

**ರಾವಣಸ್ತು ಪುನಃ ಕ್ರುದ್ಧೋ ನಾನಾಶಸ್ತ್ರಾಸ್ತ್ರವೃಷ್ಟಿಭಿಃ ।**
**ವವರ್ಷ ರಾಮಂ ತಂ ರಾಮಃ ತಥಾ ಬಾಣೈರ್ವವರ್ಷ ಚ ॥ ೫೬ ॥**
**ತತೋ ಯುದ್ಧಮಭೂದ್ ಘೋರಂ ತುಮುಲಂ ರೋಮಹರ್ಷಣಮ್ ।**

೫೬. ರಾವಣನಾದರೊ, ಮತ್ತೆ ಕುಪಿತನಾಗಿ ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಮಳೆಗರೆಯುತ್ತಾ ರಾಮನನ್ನು ತೋಯಿಸಿದನು. ರಾಮನು ಅವನನ್ನೂ ಹಾಗೆಯೇ ಬಾಣಗಳಿಂದ ತೋಯಿಸಿದನು. ಮತ್ತೆ ಭಯಂಕರವಾದ ಯುದ್ಧವು ರೋಮಾಂಚ ವುಂಟು ಮಾಡುವಂಥದ್ದಾಗಿ ಬಿರುಸಾಗಿ ಸಾಗಿತು.

**ಅಥ ಸಂಸ್ಮಾರಯಾಮಾಸ ಮಾತಲೀ ರಾಘವಂ ತದಾ ।**
**ವಿಸೃಜಾಸ್ತ್ರಂ ವಧಾಯಾಸ್ಯ ಬ್ರಾಹ್ಮಂ ಶೀಘ್ರಂ ರಘೂತ್ತಮ ॥ ೫೭ ॥**
**ವಿನಾಶಕಾಲಃ ಪ್ರಥಿತೋ ಯಃ ಸುರೈಃ ಸೋಽದ್ಯ ವರ್ತತೇ ।**
**ಉತ್ತಮಾಂಗಂ ನ ಚೈತಸ್ಯ ಛೇತ್ತವ್ಯಂ ರಾಘವ ತ್ವಯಾ ॥ ೫೮ ॥**
**ನೈವ ಶೀರ್ಷ್ಣಿ ಪ್ರಭೋ ವಧ್ಯೋ ವಧ್ಯ ಏವ ಹಿ ಮರ್ಮಣಿ ।**

೫೭-೫೮. ಅನಂತರ ಮಾತಲಿಯು ರಾಮನಿಗೆ ನೆನಪುಕೊಡುತ್ತಾ 'ಎಲೈ ರಘುಶ್ರೇಷ್ಠನೆ, ಇವನ ಸಂಹಾರಕ್ಕಾಗಿ ಬೇಗನೆ ಬ್ರಹ್ಮಾಸ್ತ್ರವನ್ನು ಬಿಡುವವನಾಗು; ದೇವತೆಗಳು ಗೊತ್ತುಮಾಡಿದ್ದಂತೆ ಈತನ ವಿನಾಶಕಾಲವು ಈಗ ಒದಗಿರುತ್ತದೆ. ಎಲೈ ರಾಘವನೆ, ನೀನು ಈತನ ತಲೆಯನ್ನು ಕತ್ತರಿಸಬಾರದು. ಪ್ರಭೋ, ಇವನನ್ನು ತಲೆಯ ಪ್ರದೇಶದಲ್ಲಿ ಹೊಡೆಯಬೇಡಿರಿ. ಮರ್ಮಸ್ಥಾನದಲ್ಲಿಯೇ ಹೊಡೆದು (ನಾಶಮಾಡ ಬೇಕು)' ಎಂದನು.

**ತತಃ ಸಂಸ್ಮಾರಿತೋ ರಾಮಸ್ತೇನ ವಾಕ್ಯೇನ ಮಾತಲೇಃ ।**
**ಜಗ್ರಾಹ ಸಶರಂ ದೀಪ್ತಂ ನಿಃಶ್ವಸಂತಮಿವೋರಗಮ್ ॥ ೫೯ ॥**
**ಯಸ್ಯ ಪಾರ್ಶ್ವೇ ತು ಪವನಃ ಫಲೇ ಭಾಸ್ಕರಪಾವಕೌ ।**
**ಶರೀರಮಾಕಾಶಮಯಂ ಗೌರವೇ ಮೇರುಮಂದರೌ ॥ ೬೦ ॥**
**ಪರ್ವಸ್ವಪಿ ಚ ವಿನ್ಯಸ್ತಾ ಲೋಕಪಾಲಾ ಮಹೌಜಸಃ ।**
**ಜಾಜ್ವಲ್ಯಮಾನಂ ವಪುಷಾ ಭಾಂತಂ ಭಾಸ್ಕರವರ್ಚಸಾ ॥ ೬೧ ॥**

೫೯-೬೧. ಅನಂತರ ಆ ಮಾತಲಿಯ ಮಾತಿನಿಂದ ನೆನಪುಮಾಡಲ್ಪಟ್ಟ ರಾಮನು ಬುಸುಗುಟ್ಟುತ್ತಿರುವ ಹಾವಿನಂತಿರುವ ಹೊಳೆಯುತ್ತಿರುವ ಬಾಣಸಮೇತ ವಾದ ಅಸ್ತ್ರವನ್ನು ತೆಗೆದುಕೊಂಡನು. ಅದರ ಅಕ್ಕಪಕ್ಕಗಳಲ್ಲಿ ವಾಯುವೂ ಚರ್ಮ ಭಾಗದಲ್ಲಿ ಸೂರ್ಯಾಗ್ನಿಗಳೂ ಶರೀರದಲ್ಲಿ ಆಕಾಶವೂ ಭಾರದಲ್ಲಿ ಮೇರುಮಂದರ ಗಳೂ ಗೆಣ್ಣುಗಳಲ್ಲಿ ಮಹಾತೇಜಸ್ವಿಗಳಾದ ಲೋಕಪಾಲಕರೂ ಇದ್ದರು. ಅದು ಸ್ವರೂಪದಿಂದ ಬಹಳವಾಗಿ ಹೊಳೆಯುತ್ತಾ ಸೂರ್ಯನಂತೆ ಕಾಂತಿಯಿಂದ ಕೂಡಿದ್ದಾ ಗಿತ್ತು.

**ತಮುಗ್ರಮಸ್ತ್ರಂ ಲೋಕಾನಾಂ ಭಯನಾಶನಮದ್ಭುತಮ್ ।**
**ಅಭಿಮಂತ್ರ್ಯ ತತೋ ರಾಮಃ ತಂ ಮಹೇಷುಂ ಮಹಾಭುಜಃ ॥ ೬೨ ॥**
**ವೇದಪ್ರೋಕ್ತೇನ ವಿಧಿನಾ ಸಂದಧೇ ಕಾರ್ಮುಕೇ ಬಲೀ ।**
**ತಸ್ಮಿನ್ ಸಂಧೀಯಮಾನೇ ತು ರಾಘವೇಣ ಶರೋತ್ತಮೇ ॥ ೬೩ ॥**
**ಸರ್ವಭೂತಾನಿ ವಿತ್ರೇಸುಶ್ಚಚಾಲ ಚ ವಸುಂಧರಾ ।**
**ಸ ರಾವಣಾಯ ಸಂಕ್ರುದ್ಧೋ ಭೃಶಮಾನಮ್ಯ ಕಾರ್ಮುಕಮ್ ॥ ೬೪ ॥**
**ಚಿಕ್ಷೇಪ ಪರಮಾಯತ್ತಸ್ತಮಸ್ತ್ರಂ ಮರ್ಮಘಾತಿನಮ್ ।**

೬೨-೬೪. ಆ ಕ್ರೂರವಾದ ಹಾಗೂ ಲೋಕಗಳ ಭಯವನ್ನು ನಾಶಮಾಡುವ ಅದ್ಭುತವಾದ ಅಸ್ತ್ರವನ್ನು ಮಹಾಭುಜನಾದ, ಬಲಿಷ್ಠನಾದ ರಾಮನು ವೇದೋಕ್ತ

ರೀತಿಯಿಂದ ಅಭಿಮಂತ್ರಿಸಿ ಆ ಮಹಾಬಾಣವನ್ನು ಬಿಲ್ಲಿನಲ್ಲಿ ಜೋಡಿಸಿದನು. ಆ ಬಾಣವು ರಾಘವನಿಂದ ಶ್ರೇಷ್ಠವಾದ ಬಿಲ್ಲಿನಲ್ಲಿ ಹೂಡಲ್ಪಡುತ್ತಿರಲು ಎಲ್ಲಾ ಭೂತಗಳೂ ನಡುಗಿದವು. ಭೂಮಿಯೂ ಕಂಪಿಸಿದಳು. ಕುಪಿತನಾದ ಆ (ರಾಮನು) ಧನುಸ್ಸನ್ನು ಚೆನ್ನಾಗಿ ಬಗ್ಗಿಸಿ ಹೆಚ್ಚಿನ ಸಾಹಸದಿಂದ ಮರ್ಮಘಾತಿಯಾದ ಆ ಅಸ್ತ್ರವನ್ನು (ರಾವಣನ ಮೇಲೆ) ಎಸೆದನು.

**ಸ ವಜ್ರ ಇವ ದುರ್ಧರ್ಷೋ ವಜ್ರಪಾಣಿವಿಸರ್ಜಿತಃ ।**
**ಕೃತಾಂತ ಇವ ಘೋರಾಸ್ಯೋ ನ್ಯಪತದ್ ರಾವಣೋರಸಿ ॥ ೬೫ ॥**
**ಸ ನಿಮಗ್ನೋ ಮಹಾಘೋರಃ ಶರೀರಾಂತಕರಃ ಶರಃ ।**
**ಬಿಭೇದ ಹೃದಯಂ ತೂರ್ಣಂ ರಾವಣಸ್ಯ ಮಹಾತ್ಮನಃ ॥ ೬೬ ॥**

೬೫-೬೬. ದೇವೇಂದ್ರನಿಂದ ಬಿಡಲ್ಪಟ್ಟ ವಜ್ರಾಯುಧದಂತೆ ಇದ್ದ ಸಹಿಸಲಸಾಧ್ಯವಾದ ಹಾಗೂ ಯಮನಂತೆ ಭಯಂಕರ ಮುಖವುಳ್ಳ ಆ ಬಾಣವು ರಾವಣನ ಎದೆಯನ್ನು ಹೊಕ್ಕಿತು. ಮಹಾಘೋರವಾದ ಹೆಚ್ಚಿನ (ಶಕ್ತಿವಿಶಿಷ್ಟವಾದ) ಶರೀರವನ್ನು ಕೊನೆಗೊಳಿಸುವ ಆ (ಬಾಣವು) ಮಹಾತ್ಮನಾದ ರಾವಣನ ಹೃದಯವನ್ನು ಬೇಗನೆ ಸೀಳಿಬಿಟ್ಟಿತು.

**ರಾವಣಸ್ಯಾಹರತ್ ಪ್ರಾಣಾನ್ವಿವೇಶ ಧರಣೀತಲೇ ।**
**ಸ ಶರೋ ರಾವಣಂ ಹತ್ವಾ ರಾಮತೂಣೀರಮಾವಿಶತ್ ॥ ೬೭ ॥**
**ತಸ್ಯ ಹಸ್ತಾತ್ ಪಪಾತಾಶು ಸಶರಂ ಕಾರ್ಮುಕಂ ಮಹತ್ ।**
**ಗತಾಸುರ್ಭ್ರಮಿವೇಗೇನ ರಾಕ್ಷಸೇಂದ್ರೋಽಪತತ್ ಭುವಿ ॥ ೬೮ ॥**
**ತಂ ದೃಷ್ಟ್ವಾ ಪತಿತಂ ಭೂಮೌ ಹತಶೇಷಾಶ್ಚ ರಾಕ್ಷಸಾಃ ।**
**ಹತನಾಥಾ ಭಯತ್ರಸ್ತಾ ದುದ್ರುವುಃ ಸರ್ವತೋ ದಿಶಮ್ ॥ ೬೯ ॥**
**ದಶಗ್ರೀವಸ್ಯ ನಿಧನಂ ವಿಜಯಂ ರಾಘವಸ್ಯ ಚ ।**
**ತತೋ ವಿನೇದುಃ ಸಂಹೃಷ್ಟಾ ವಾನರಾ ಜಿತಕಾಶಿನಃ ॥ ೭೦ ॥**

೬೭-೭೦. (ಅದು) ರಾವಣನ ಪ್ರಾಣಗಳನ್ನು ಅಪಹರಿಸಿಬಿಟ್ಟಿತು. ರಾವಣನನ್ನು ಕೊಂದು ಪಾತಾಲವನ್ನು ಹೊಕ್ಕು ಆ ಬಾಣವು ಮತ್ತೆ ರಾಮನ ಬತ್ತಳಿಕೆಯನ್ನು ಪ್ರವೇಶಿಸಿತು. ಆ ರಾವಣನ ಕೈಯಿಂದ ಕೂಡಲೆ ಬಾಣದಿಂದ ಕೂಡಿದ ದೊಡ್ಡ ಬಿಲ್ಲು ಕೆಳಗೆ ಬಿದ್ದಿತು. ರಾಕ್ಷಸೇಂದ್ರನಾದ ರಾವಣನು ಚಕ್ರದಂತೆ ತಿರುಗಿ ಪ್ರಾಣತ್ಯಾಗಮಾಡಿ ಭೂಮಿಯ ಮೇಲೆ ಬಿದ್ದುಬಿಟ್ಟನು. ಅವನು ಕೆಳಗೆ ಬಿದ್ದುದನ್ನು ನೋಡಿ ಅಳಿದುಳಿದಿದ್ದ ರಾಕ್ಷಸರು ಒಡೆಯ ನಿಲ್ಲದವರಾಗಿ ಭೀತಿಗೊಂಡವರಾಗಿ

ದಿಕ್ಕಾಪಾಲಾಗಿ ಓಡಿಹೋದರು. ರಾವಣನ ಮರಣವನ್ನೂ ಶ್ರೀರಾಮನ ವಿಜಯವನ್ನೂ ಕಂಡು ಸಂತುಷ್ಟರಾದ ತೇಜಸ್ವಿಗಳಾದ ಕಪಿಗಳು ಆಗ (ಜಯ) ಧ್ವನಿ ಮಾಡಿದರು.

**ವದಂತೋ ರಾಮವಿಜಯಂ ರಾವಣಸ್ಯ ಚ ತದ್ವಧಮ್ ।**
**ಅಥಾಂತರಿಕ್ಷೇ ವ್ಯನದತ್ ಸೌಮ್ಯಸ್ತ್ರಿದಶದುಂದುಭಿಃ ॥ ೭೧ ॥**
**ಪಪಾತ ಪುಷ್ಪವೃಷ್ಟಿಶ್ಚ ಸಮಂತಾದ್ರಾಘವೋಪರಿ ।**
**ತುಷ್ಟುವುರ್ಮುನಯಃ ಸಿದ್ಧಾಶ್ಚಾರಣಾಶ್ಚ ದಿವೌಕಸಃ ॥ ೭೨ ॥**
**ಅಥಾಂತರಿಕ್ಷೇ ನನೃತುಃ ಸರ್ವತೋಽಪ್ಸರಸೋ ಮುದಾ ।**
**ರಾವಣಸ್ಯ ಚ ದೇಹೋತ್ಥಂ ಜ್ಯೋತಿರಾದಿತ್ಯವತ್ ಸ್ಫುರತ್ ॥ ೭೩ ॥**
**ಪ್ರವಿವೇಶ ರಘುಶ್ರೇಷ್ಠಂ ದೇವಾನಾಂ ಪಶ್ಯತಾಂ ಸತಾಮ್ ।**

೭೧-೭೩. ಶ್ರೀರಾಮನ ವಿಜಯವನ್ನೂ ಅವನಿಂದ ರಾವಣನ ವಧೆಯಾದದ್ದನ್ನೂ ಮಾತನಾಡಿಕೊಳ್ಳುತ್ತಿದ್ದರು. ಅನಂತರ ಆಕಾಶದಲ್ಲಿ ಇಂಪಾದ ಹಿತವಾದ ದೇವಲೋಕದ ನಗಾರಿಯು ನುಡಿಯಿತು. ಶ್ರೀರಾಮನ ಮೇಲೆ ಹೂವಿನ ಮಳೆಯು ಸುರಿಯಿತು. ಮುನಿಗಳು, ಸಿದ್ಧರು, ಚಾರಣರು, ದೇವತೆಗಳು - ಸಹ ಸ್ತುತಿಸಿದರು. ಅನಂತರ ಆಕಾಶದಲ್ಲಿ ಎಲ್ಲೆಲ್ಲಿಯೂ ಸಂತೋಷದಿಂದ ಅಪ್ಸರೆಯರು ನಲಿದಾಡಿದರು. ರಾವಣನ ಶರೀರದಿಂದ ಹೊರಬಿದ್ದ ಬೆಳಕೊಂದು ಸೂರ್ಯನಂತೆ ಹೊಳೆಯುತ್ತಾ ದೇವತೆಗಳು ನೋಡುತ್ತಿರುವಂತೆಯೇ ಶ್ರೀರಾಮನನ್ನು ಹೊಕ್ಕಿತು.

**ದೇವಾ ಊಚುರಹೋ ಭಾಗ್ಯಂ ರಾವಣಸ್ಯ ಮಹಾತ್ಮನಃ**
**ವಯಂ ತು ಸಾತ್ತ್ವಿಕಾ ದೇವಾ ವಿಷ್ಣೋಃ ಕಾರುಣ್ಯಭಾಜನಾಃ ॥ ೭೪ ॥**
**ಭಯದುಃಖಾದಿಭಿರ್ವ್ಯಾಪ್ತಾಃ ಸಂಸಾರೇ ಪರಿವರ್ತಿನಃ ।**
**ಅಯಂ ತು ರಾಕ್ಷಸಃ ಕ್ರೂರೋ ಬ್ರಹ್ಮಹಾತೀವ ತಾಮಸಃ ॥ ೭೫ ॥**
**ಪರದಾರರತೋ ವಿಷ್ಣುದ್ವೇಷೀ ತಾಪಸಹಿಂಸಕಃ ।**
**ಪಶ್ಯತ್ಸು ಸರ್ವಭೂತೇಷು ರಾಮಮೇವ ಪ್ರವಿಷ್ಟವಾನ್ ॥ ೭೬ ॥**

೭೪-೭೬. ದೇವತೆಗಳಿಂತೆಂದರು : ಓಹೋ, ಮಹಾತ್ಮನಾದ ರಾವಣನ ಸೌಭಾಗ್ಯವೆಂಥದ್ದು ? ನಾವಾದರೊ, ವಿಷ್ಣುವಿನ ಕರುಣೆಗೆ ಪಾತ್ರರಾದ ಸಾತ್ವಿಕರಾದ ದೇವತೆಗಳೇ ಸರಿ. ಆದರೂ ಭಯದುಃಖಗಳಿಂದ ವ್ಯಾಪ್ತರಾಗಿ ಸಂಸಾರದಲ್ಲಿ ತಿರುಗುತ್ತಿರುವೆವು. ಈ ರಾಕ್ಷಸನಾದರೊ, ಅತಿತಾಮಸನು, ಕ್ರೂರನು; ಬ್ರಹ್ಮಹತ್ಯೆಯನ್ನು ಮಾಡಿದವನು. ಪರಸ್ತ್ರೀಸಕ್ತನಾಗಿದ್ದವನೂ ವಿಷ್ಣುದ್ವೇಷಿಯೂ ತಪಸ್ವಿಗಳ

ಹಿಂಸಕನೂ ಆಗಿದ್ದನು. ಹೀಗಿದ್ದರೂ ಎಲ್ಲರೂ ನೋಡುತ್ತಿರುವಂತೆಯೇ ಶ್ರೀರಾಮ ನಲ್ಲಿಯೇ ಹೊಕ್ಕುಬಿಟ್ಟನಲ್ಲವೆ ?

**ಏವಂ ಬ್ರುವತ್ಸು ದೇವೇಷು ನಾರದಃ ಪ್ರಾಹ ಸುಸ್ಮಿತಃ ।**
**ಶೃಣುತಾತ್ರ ಸುರಾ ಯೂಯಂ ಧರ್ಮತತ್ತ್ವವಿಚಕ್ಷಣಾಃ ॥ ೭೭ ॥**
**ರಾವಣೋ ರಾಘವದ್ವೇಷಾದನಿಶಂ ಹೃದಿ ಭಾವಯನ್ ।**
**ಭೃತ್ಯೈಃ ಸಹ ಸದಾ ರಾಮಚರಿತಂ ದ್ವೇಷಸಂಯುತಃ ॥ ೭೮ ॥**
**ಶ್ರುತ್ವಾ ರಾಮಾತ್ ಸ್ವನಿಧನಂ ಭಯಾತ್ಸರ್ವತ್ರ ರಾಘವಮ್ ।**
**ಪಶ್ಯನ್ನನುದಿನಂ ಸ್ವಪ್ನೇ ರಾಮಮೇವಾನುಪಶ್ಯತಿ ॥ ೭೯ ॥**

೭೭-೭೯. ಹೀಗೆ ದೇವತೆಗಳು ಆಡಿಕೊಳ್ಳುತ್ತಿರಲಾಗಿ ಮುಗುಳುನಗೆಯಿಂದ ಕೂಡಿದ ನಾರದನು ಹೀಗೆಂದನು : ಎಲೈ ಧರ್ಮತತ್ತ್ವವಿಶಾರದರಾದ ದೇವತೆಗಳಿರಾ, ಈ (ವಿಷಯಕ್ಕೆ) ಕೇಳಿರಿ : ರಾವಣನು ರಾಮನ ಮೇಲಿನ ವೈರದಿಂದ ಯಾವಾಗಲೂ ಅವನನ್ನೇ ಹೃದಯದಲ್ಲಿ ಚಿಂತಿಸುತ್ತಾ ಸೇವಕರೊಡಗೂಡಿ ಯಾವಾಗಲೂ ದ್ವೇಷಯುಕ್ತನಾಗಿಯೇ ರಾಮನ ಕಥೆಗಳನ್ನು ಕೇಳುತ್ತಾ ತನಗೆ ರಾಮನಿಂದ ಮರಣವು ಉಂಟಾಗುತ್ತದೆಂದು ತಿಳಿದವನಾಗಿ ಭಯದಿಂದ ಎಲ್ಲೆಲ್ಲಿಯೂ ರಾಮನನ್ನೇ ಕಾಣುತ್ತಾ ದಿನದಿನವೂ ಕನಸಿನಲ್ಲಿಯೂ ರಾಮನನ್ನೇ ನೋಡುತ್ತಿದ್ದನು.

**ಕ್ರೋಧೋಽಪಿ ರಾವಣಸ್ಯಾಶು ಗುರುಬೋಧಾಧಿಕೋಽಭವತ್ ।**
**ರಾಮೇಣ ನಿಹತಶ್ಚಾಂತೇ ನಿರ್ಧೂತಾಶೇಷಕಲ್ಮಷಃ ॥ ೮೦ ॥**
**ರಾಮಸಾಯುಜ್ಯಮೇವಾಪ ರಾವಣೋ ಮುಕ್ತಬಂಧನಃ ।**
**ಪಾಪಿಷ್ಠೋ ವಾ ದುರಾತ್ಮಾ ಪರಧನಪರದಾರೇಷು ಸಕ್ತೋ ಯದಿ ಸ್ಯಾತ್**
**ನಿತ್ಯಂ ಸ್ನೇಹಾದ್ಭಯಾದ್ವಾ ರಘುಕುಲತಿಲಕಂ ಭಾವಯನ್ ಸಂಪರೇತಃ ।**
**ಭೂತ್ವಾ ಶುದ್ಧಾಂತರಂಗೋ ಭವಶತಜನಿತಾನೇಕದೋಷೈರ್ವಿಮುಕ್ತಃ**
**ಸದ್ಯೋ ರಾಮಸ್ಯ ವಿಷ್ಣೋಃ ಸುರವರವಿನುತಂ ಯಾತಿ ವೈಕುಂಠಮಾದ್ಯಮ್। ॥ ೮೧ ॥**

೮೦-೮೧. ರಾವಣನಿಗೆ ( ರಾಮನ ವಿಷಯಕ್ಕೆ ಇದ್ದ) ಕೋಪವೂ ಗುರುವಿನ ಬೋಧೆಗಿಂತಲೂ ಹೆಚ್ಚಿನ ಪ್ರಯೋಜನಕಾರಿಯಾಯಿತು. ಕಡೆಗೆ ರಾಮನಿಂದಲೇ ಕೊಲ್ಲಲ್ಪಟ್ಟು ಎಲ್ಲಾ ಪಾಪಗಳನ್ನೂ ಕೊಡವಿಕೊಂಡವನಾಗಿ ಬಂಧನವು ಕಳಚಿದ ರಾವಣನು ರಾಮನ ಸಾಯುಜ್ಯವನ್ನೇ ಹೊಂದಿದನು. ಪಾಪಿಯಾಗಲಿ, ದುರಾತ್ಮನಾಗಲಿ, ಮತ್ತೊಬ್ಬರ ಹಣ, ಹೆಂಡತಿಯರಲ್ಲಿ ಆಸಕ್ತನಾದವನಿರಲಿ, ಅಂಥವನೂ ಯಾವಾಗಲೂ ಹೆದರಿಕೆಯಿಂದಲೋ, ಪ್ರೀತಿಯಿಂದಲೊ ರಘುಕುಲ ತಿಲಕನಾದ

(ರಾಮನನ್ನು) ಮನಸ್ಸಿನಲ್ಲಿ ಧ್ಯಾನಿಸುತ್ತಾ ಸಾವನ್ನು ಪಡೆದವನಾದರೆ ಪರಿಶುದ್ಧ ಮನಸ್ಕನಾಗಿ ನೂರುಜನ್ಮಗಳಲ್ಲಿ ಮಾಡಿರುವ ಅನೇಕ ದೋಷಗಳಿಂದ ಬಿಡುಗಡೆಯನ್ನು ಹೊಂದಿ ದೇವತೆಗಳಿಂದ ನಮಸ್ಕರಿಸಲ್ಪಟ್ಟ ವಿಷ್ಣುವಾದ ಶ್ರೀರಾಮನ ಆದ್ಯವಾದ ವೈಕುಂಠಪದವಿಯನ್ನು ಕೂಡಲೆ ಪಡೆಯುವನು.

**ಹತ್ವಾ ಯುದ್ಧೇ ದಶಾಸ್ಯಂ ತ್ರಿಭುವನವಿಷಮಂ ವಾಮಹಸ್ತೇನ ಚಾಪಂ**
**ಭೂಮೌ ವಿಷ್ಟಭ್ಯ ತಿಷ್ಠನ್ನಿತರಕರಧೃತಂ ಭ್ರಾಮಯನ್ ಬಾಣಮೇಕಮ್ ।**
**ಆರಕ್ತೋಪಾಂತನೇತ್ರಃ ಶರದಲಿತವಪುಃ ಸೂರ್ಯಕೋಟಿಪ್ರಕಾಶೋ**
**ವೀರಶ್ರೀಬಂಧುರಾಂಗಸ್ತ್ರಿದಶಪತಿನುತಃ ಪಾತು ಮಾಂ ವೀರರಾಮಃ ॥ ೮೨ ॥**

೮೨. ಮೂರು ಲೋಕಗಳಿಗೂ ಕಂಟಕನಾಗಿದ್ದ ರಾವಣನನ್ನು ಯುದ್ಧದಲ್ಲಿ ಕೊಂದು ಎಡಗೈಯಿಂದ ಬಿಲ್ಲನ್ನು ನೆಲಕ್ಕೂರಿದವನಾಗಿಯೂ ಮತ್ತೊಂದು ಕೈಯಲ್ಲಿರುವ ಬಾಣವನ್ನು ತಿರುಗಿಸುತ್ತಲೂ ಇರುವ, ತುದಿಗಣ್ಣುಗಳವರೆಗೂ ಕೆಂಪಾದ ಬಣ್ಣವುಳ್ಳವನೂ ಬಾಣಗಳಿಂದ ಗಾಯಮಾಡಲ್ಪಟ್ಟ ಶರೀರವುಳ್ಳವನೂ ಕೋಟಿಸೂರ್ಯ ಪ್ರಕಾಶನೂ ವೀರಲಕ್ಷ್ಮಿಯಿಂದ ಅಲಂಕೃತನೂ ದೇವರಾಜ ವಂದಿತನೂ ಆದ ವೀರ ರಾಮನು ನನ್ನನ್ನು ಕಾಪಾಡಲಿ!

**ಇತಿಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಏಕಾದಶಃ ಸರ್ಗಃ**

-----

## ಹನ್ನೆರಡನೆಯ ಸರ್ಗ

**ಶ್ರೀಮಹಾದೇವ ಉವಾಚ -**
**ರಾಮೋ ವಿಭೀಷಣಂ ದೃಷ್ಟ್ವಾ ಹನುಮಂತಂ ತಥಾಂಗದಮ್ ।**
**ಲಕ್ಷ್ಮಣಂ ಕಪಿರಾಜಂ ಚ ಜಾಂಬುವಂತಂ ತಥಾಽಪರಾನ್ ॥ ೧ ॥**
**ಪರಿತುಷ್ಟೇನ ಮನಸಾ ಸರ್ವಾನೇವಾಬ್ರವೀದ್ವಚಃ ।**
**ಭವತಾಂ ಬಾಹುವೀರ್ಯೇಣ ನಿಹತೋ ರಾವಣೋ ಮಯಾ ॥ ೨ ॥**
**ಕೀರ್ತಿಃ ಸ್ಥಾಸ್ಯತಿ ವಃ ಪುಣ್ಯಾ ಯಾವಚ್ಚಂದ್ರದಿವಾಕರೌ ।**
**ಕೀರ್ತಯಿಷ್ಯಂತಿ ಭವತಾಂ ಕಥಾಂ ತ್ರೈಲೋಕ್ಯಪಾವನೀಮ್ ॥ ೩ ॥**
**ಮಯೋಪೇತಾಂ ಕಲಿಹರಾಂ ಯಾಸ್ಯಂತಿ ಪರಮಾಂ ಗತಿಮ್ ।**

೧-೩. ಮಹಾದೇವನಿಂತೆಂದನು : ರಾಮನು ವಿಭೀಷಣ, ಹನುಮಂತ, ಅಂಗದ, ಲಕ್ಷ್ಮಣ, ಸುಗ್ರೀವ, ಜಾಂಬವಂತ ಹಾಗೂ ಇತರರನ್ನೆಲ್ಲ ನೋಡಿ ಸಂತುಷ್ಟ ಮನಸ್ಸಿನವನಾಗಿ ಎಲ್ಲರನ್ನೂ ಕುರಿತು ಹೀಗೆಂದನು : ''ನಿಮ್ಮೆಲ್ಲರ ಭುಜಪರಾಕ್ರಮ

ದಿಂದ ನಾನು ರಾವಣನನ್ನು ಸಂಹಾರಮಾಡಿದೆನು. ಸೂರ್ಯಚಂದ್ರರು ಇರುವವರೆಗೂ ನಿಮ್ಮ ಪುಣ್ಯತಮವಾದ ಕೀರ್ತಿಯು ಇದ್ದುಕೊಂಡಿರುವದು. ಮೂರು ಲೋಕಗಳನ್ನೂ ಪವಿತ್ರಗೊಳಿಸುವ ನಿಮ್ಮಗಳ ಕಥೆಯನ್ನು ಜನರು ಕೀರ್ತನೆಮಾಡಲಿರುವರು. ಹಾಗೂ ನನ್ನ (ಸ್ಮರಣೆಯಿಂದ) ಕೂಡಿದ ಕಲಿದೋಷಹರವಾದ ಆ ಕೀರ್ತನೆಯಿಂದ ಪರಮವಾದ ಗತಿಯನ್ನು ಹೊಂದುವರು.

**ಏತಸ್ಮಿನ್ನಂತರೇ ದೃಷ್ಟ್ವಾ ರಾವಣಂ ಪತಿತಂ ಭುವಿ ।**
**ಮಂದೋದರೀಮುಖಾಸ್ಸರ್ವಾಃ ಸ್ತ್ರಿಯೋ ರಾವಣಪಾಲಿತಾಃ ॥ ೪ ॥**
**ಪತಿತಾ ರಾವಣಸ್ಯಾಗ್ರೇ ಶೋಚಂತ್ಯಃ ಪರ್ಯದೇವಯನ್ ।**
**ವಿಭೀಷಣಃ ಶುಶೋಚಾರ್ತಃ ಶೋಕೇನ ಮಹತಾವೃತಃ ।**
**ಪತಿತೋ ರಾವಣಸ್ಯಾಗ್ರೇ ಬಹುಧಾ ಪರ್ಯದೇವಯತ್ ॥ ೫ ॥**

೪-೫. ಈ ನಡುವೆ ರಾವಣನು (ಸತ್ತು) ಬಿದ್ದುದನ್ನು ಕಂಡು ರಾವಣನಿಂದ ಕಾಪಾಡಲ್ಪಟ್ಟಿದ್ದ ಮಂದೋದರಿಯೇ ಮುಂತಾದ ಎಲ್ಲಾ ಹೆಂಗಸರೂ ರಾವಣನ ಮುಂದೆ ಬಿದ್ದು ಹೊರಳಾಡುತ್ತಾ ಅಳುತ್ತಾ ದುಃಖಿಸುತ್ತಿದ್ದರು. ಬಳಲಿದ್ದ ವಿಭೀಷಣನೂ ಹೆಚ್ಚಿನ ದುಃಖದಿಂದ ಕೂಡಿದವನಾಗಿ ರಾವಣನ ಎದುರಿಗೇ ಬಿದ್ದುಕೊಂಡು ಬಹಳವಾಗಿ ಅಳುತ್ತಿದ್ದನು.

**ರಾಮಸ್ತು ಲಕ್ಷ್ಮಣಂ ಪ್ರಾಹ ಬೋಧಯಸ್ವ ವಿಭೀಷಣಮ್ ।**
**ಕರೋತು ಭ್ರಾತೃಸಂಸ್ಕಾರಂ ಕಿಂ ವಿಲಂಬೇನ ಮಾನದ ॥ ೬ ॥**
**ಸ್ತ್ರಿಯೋ ಮಂದೋದರೀಮುಖ್ಯಾಃ ಪತಿತಾ ವಿಲಪಂತಿ ಚ ।**
**ನಿವಾರಯತು ತಾಸ್ಸರ್ವಾ ರಾಕ್ಷಸೀ ರಾವಣಪ್ರಿಯಾಃ । ॥ ೭ ॥**

೬-೭. ರಾಮನಾದರೊ, ಲಕ್ಷ್ಮಣನನ್ನು ಕುರಿತು ಇಂತೆಂದನು : ಎಲೈ ಮಾನವಂತನೆ, ವಿಭೀಷಣನನ್ನು ಎಚ್ಚರಗೊಳಿಸು. ಅವನು ಭ್ರಾತೃವಿಗೆ ಅಂತ್ಯಸಂಸ್ಕಾರವನ್ನು ಮಾಡಲಿ ; ತಡವೇಕೆ ? ರಾವಣನಿಗೆ ಪ್ರಿಯರಾದ ಮಂದೋದರಿಯೇ ಮುಂತಾದ ರಾಕ್ಷಸಿಯರು ಬಿದ್ದು ಅಳುತ್ತಿರುವರು. ಅವರೆಲ್ಲರನ್ನೂ ತಡೆಯುವವನಾಗು.

**ಏವಮುಕ್ತೋಽಥ ರಾಮೇಣ ಲಕ್ಷ್ಮಣೋಽಗಾದ್ ವಿಭೀಷಣಮ್ ।**
**ಉವಾಚ ಮೃತಕೋಪಾಂತೇ ಪತಿತಂ ಮೃತಕೋಪಮಮ್ ॥ ೮ ॥**
**ಶೋಕೇನ ಮಹತಾವಿಷ್ಟಂ ಸೌಮಿತ್ರಿರಿದಮಬ್ರವೀತ್ ।**
**ಯಂ ಶೋಚಸಿ ತ್ವಂ ದುಃಖೇನ ಕೋಽಯಂ ತವ ವಿಭೀಷಣ ॥ ೯ ॥**

**ತ್ವಂ ವಾಸ್ಯ ಕತಮಃ ಸೃಷ್ಟೇಃ ಪುರೇದಾನೀಮತಃ ಪರಮ್ ।**
**ಯದ್ವತ್ ತೋಯೌಘಪತಿತಾಃ ಸಿಕತಾ ಯಾಂತಿ ತದ್ವಶಾಃ ॥ ೧೦ ॥**
**ಸಂಯುಜ್ಯಂತೇ ವಿಯುಜ್ಯಂತೇ ತಥಾ ಕಾಲೇನ ದೇಹಿನಃ ।**

೮-೧೦. ರಾಮನಿಂದ ಈ ರೀತಿಯಾಗಿ ಹೇಳಲ್ಪಟ್ಟ ಲಕ್ಷ್ಮಣನು ವಿಭೀಷಣನ ಬಳಿಗೆ ಬಂದನು. ಸತ್ತುಹೋದ (ರಾವಣನ) ಸಮೀಪದಲ್ಲಿ ಸತ್ತುಹೋದವನಂತೆ ಬಿದ್ದಿದ್ದ ಹಾಗೂ ಬಹಳವಾದ ದುಃಖದಿಂದ ಮುಳುಗಿದ್ದ (ಅವನನ್ನು) ಕುರಿತು ಲಕ್ಷ್ಮಣನು ಹೀಗೆಂದನು : 'ಎಲೈ ವಿಭೀಷಣನೆ, ದುಃಖದಿಂದ ನೀನು ಯಾವನನ್ನು ಕುರಿತು ಶೋಕಿಸುವೆಯೋ ಅವನು ಯಾರು ? ನೀನಾದರೂ ಅವನಿಗೆ ಯಾವನು ? ಈ ಹುಟ್ಟಿಗಿಂತ ಹಿಂದೆ, ಈಗ, ಅನಂತರ ನೀನು ಯಾವನಾಗಿದ್ದೆ ? ಹೇಗೆ ನೀರಿನ ಪ್ರವಾಹದಲ್ಲಿ ಬಿದ್ದುಹೋದ ಮರಳಿನ ಕಣಗಳು ನೀರು ಕೊಚ್ಚಿಹೋದಂತೆಲ್ಲ ಹೋಗುತ್ತಾ ಒಂದಕ್ಕೊಂದು ಸೇರುತ್ತಲೂ ಬಿಟ್ಟುಹೋಗುತ್ತಲೂ ಇರುವವೋ ಹಾಗೆಯೇ ಶರೀರಿಗಳೂ ಆಯಾ ಕಾಲಕ್ಕೆ ಒಂದಾಗಿ ಅನಂತರ ಬಿಟ್ಟುಹೋಗುವರು.

**ಯಥಾ ಧಾನಾಸು ವೈ ಧಾನಾ ಭವಂತಿ ನ ಭವಂತಿ ಚ ।**
**ಏವಂ ಭೂತೇಷು ಭೂತಾನಿ ಪ್ರೇರಿತಾನೀಶಮಾಯಯಾ ॥ ೧೧ ॥**
**ತ್ವಂ ಚೇಮೇ ವಯಮನ್ಯೇ ಚ ತುಲ್ಯಾಃ ಕಾಲವಶೋದ್ಭವಾಃ ।**
**ಜನ್ಮಮೃತ್ಯೂ ಯದಾ ಯಸ್ಮಾತ್ ತದಾ ತಸ್ಮಾದ್ ಭವಿಷ್ಯತಃ ॥ ೧೨ ॥**
**ಈಶ್ವರಃ ಸರ್ವಭೂತಾನಿ ಭೂತೈಃ ಸೃಜತಿ ಹಂತ್ಯಜಃ ।**
**ಆತ್ಮಸೃಷ್ಟೈರಸ್ವತಂತ್ರೈಃ ನಿರಪೇಕ್ಷೋಽಪಿ ಬಾಲವತ್ ॥ ೧೩ ॥**

೧೧-೧೩. ಹೇಗೆ ಬೀಜಗಳಲ್ಲಿ (ಮುಂದೆ ಹುಟ್ಟುವ) ಬೀಜಗಳಿರುವವೋ, ಆದರೆ ಆ ಕಾಲಕ್ಕೆ ಏನೂ ಇರುವದಿಲ್ಲವೋ (ಬೀಜವು ಭೂಮಿಯನ್ನು ಪ್ರವೇಶಿಸಿ ಮೊಳಕೆಯಾಗಿ ಕಾಯಾಗಿ ಕಾಲಾನುಗುಣವಾಗಿ ಬೀಜವಾಗುವದೂ ಮತ್ತು ತಾನೊಂದೇ ಇರುವಾಗ ಅದರಲ್ಲಿ ಯಾವ ಮೊಳಕೆಯೂ ಕಾಣದಿರುವದೂ ಹೇಗೋ) ಹಾಗೆ ಪ್ರಾಣಿಗಳಲ್ಲಿಯೂ ಈಶ್ವರನ ಮಾಯಾವಿಲಾಸದಿಂದ ಹೊಸ ಜೀವಿಗಳ ಸೃಷ್ಟಿಯೂ ಕಾಲಕೃತವಾಗಿ ಆಗುತ್ತಿರುವದು. ನಾನು, ನೀನು, ಇವರು, ಉಳಿದವರೆಲ್ಲರೂ ಈ ಅರ್ಥದಲ್ಲಿ ಸಮಾನರು - ಎಂದರೆ ಕಾಲವಶರೇ ಆಗಿರುವೆವು. ಪ್ರಾಣಿಗಳಿಗೆ ಹುಟ್ಟುಸಾವುಗಳು ಯಾವಾಗ ಏತರಿಂದಾಗುವವೋ ಆಗ ಅದರಿಂದ ಹೊರತೋರುವವು. ಈಶ್ವರನು ಎಲ್ಲಾ ಪ್ರಾಣಿಗಳನ್ನೂ ಪಂಚಭೂತಗಳಿಂದ ಸೃಷ್ಟಿಸಿ ನಾಶಗೊಳಿಸಿದರೂ ತಾನು ಅಜನಾಗಿಯೇ ಇರುವನು. ತನ್ನಿಂದ ಹುಟ್ಟಿಸಲ್ಪಟ್ಟು ಸ್ವಾತಂತ್ರ್ಯವಿಲ್ಲದೆ ಬಾಳುತ್ತಿರುವ ಭೂತಗಳ ವಿಷಯದಲ್ಲಿ ಆತನು ಮಗುವಿನಂತೆ ಏನೂ ಆಸಕ್ತಿಯಿಲ್ಲದವನಾಗಿರುವನು.

**ದೇಹೇನ ದೇಹಿನೋ ಜೀವಾಃ ದೇಹಾದ್ದೇಹೋಽಭಿಜಾಯತೇ ।**
**ಬೀಜಾದೇವ ಯಥಾ ಬೀಜಂ ದೇಹಾನ್ಯ ಇವ ಶಾಶ್ವತಃ ॥ ೧೪ ॥**
**ದೇಹಿದೇಹವಿಭಾಗೋಽಯಮವಿವೇಕಕೃತಃ ಪುರಾ ।**
**ನಾನಾತ್ವಂ ಜನ್ಮ ನಾಶಶ್ಚ ಕ್ಷಯೋ ವೃದ್ಧಿಃ ಕ್ರಿಯಾ ಫಲಮ್ ॥ ೧೫ ॥**
**ದ್ರಷ್ಟುರಾಭಾನ್ತ್ಯತದ್ಧರ್ಮಾಃ ಯಥಾಗ್ನೇರ್ದಾರುವಿಕ್ರಿಯಾಃ ।**
**ತ ಇಮೇ ದೇಹಸಂಯೋಗಾತ್ ಆತ್ಮನೋ ಭಾನ್ತ್ಯಸದ್‌ಗ್ರಹಾತ್ ॥ ೧೬ ॥**

೧೪-೧೬. ಜೀವರುಗಳೆಂಬವರು ದೇಹದಿಂದ ಕೂಡಿದವರಾಗಿ ದೇಹಿಗಳೆನಿಸುವರು. ದೇಹದಿಂದ ಮತ್ತೊಂದು ದೇಹವು - ಬೀಜದಿಂದ ಬೀಜವು ಹುಟ್ಟುವಂತೆ - ಹುಟ್ಟುತ್ತದೆ. (ಆತ್ಮನು) ದೇಹಕ್ಕಿಂತ ಬೇರೆಯಾಗಿ ಶಾಶ್ವತನಾಗಿರುವನು. ಈ ದೇಹ-ದೇಹಿವಿಭಾಗವೂ ಕೂಡ ಹಿಂದಿನ ಅವಿದ್ಯೆಯಿಂದುಂಟಾದ ಅವಿವೇಕದ ಫಲವಾಗಿದೆ. ದ್ರಷ್ಟೃವಾದ ಆತ್ಮನಲ್ಲಿಲ್ಲದ ಹಾಗೂ ಅವನದಲ್ಲದ - ನಾನಾತ್ವ, ಹುಟ್ಟು, ನಾಶ, ಸೊರಗುವಿಕೆ, ಬೆಳೆಯುವಿಕೆ, ಮಾಡುವಿಕೆ, ಅನುಭವಿಸುವಿಕೆ -ಇವೇ ಮುಂತಾದ ಧರ್ಮಗಳು (ದ್ರಷ್ಟೃವಿನಲ್ಲಿ) ತೋರಿಕೊಳ್ಳುತ್ತಿರುವವು. ಹೇಗೆ ಬೆಂಕಿಯಲ್ಲಿ ಕಟ್ಟಿಗೆಯ (ಸಂಬಂಧವಾದ ವಕ್ರತೆ, ಸ್ಥೂಲತ್ವಾದಿಗಳು) ಕಂಡುಬರುವವೋ ಹಾಗೆ - ಎಂದು ತಿಳಿಯಬೇಕು. ಹೀಗೆ ದೇಹಸಂಬಂಧದಿಂದ ಈ (ಉತ್ಪತ್ತಿನಾಶಾದಿಗಳು) ಆತ್ಮನಲ್ಲಿ ತಪ್ಪುತಿಳಿವಳಿಕೆಯಿಂದ ಕಂಡುಬರುತ್ತಿರುವವು.

**ಯಥಾ ಯಥಾ ತಥಾ ಚಾನ್ಯತ್ ಧ್ಯಾಯತೋಽಸತ್ಸದಾಗ್ರಹಾತ್ ।**
**ಪ್ರಸುಪ್ತಸ್ಯಾನಹಂಭಾವಾತ್ ತದಾ ಭಾತಿ ನ ಸಂಸೃತಿಃ ॥ ೧೭ ॥**
**ಜೀವತೋಽಪಿ ತಥಾ ತದ್ವದ್ ವಿಮುಕ್ತಸ್ಯಾನಹಂಕೃತೇಃ ।**
**ತಸ್ಮಾನ್ಮಾಯಾಮನೋಧರ್ಮಂ ಜಹ್ಯಹಂಮಮತಾಭ್ರಮಮ್ ॥ ೧೮ ॥**
**ರಾಮಭದ್ರೇ ಭಗವತಿ ಮನೋ ಧೇಹ್ಯಾತ್ಮನೀಶ್ವರೇ ।**
**ಸರ್ವಭೂತಾತ್ಮನಿ ಪರೇ ಮಾಯಾಮಾನುಷರೂಪಿಣಿ ॥ ೧೯ ॥**

೧೭-೧೯. ಇಲ್ಲದ್ದನ್ನು ಇದೆಯೆಂದು ಭ್ರಮಿಸಿ ಹಟಹಿಡಿದವನಾಗಿ (ಚಿಂತಿಸಿದ್ದರಿಂದ) ಸಂಸಾರವುಂಟಾಗಿದೆ. ಆದರೆ ನಿದ್ರೆಮಾಡಿದವನಿಗೆ ಹೇಗೆ ಅಹಂಕಾರವೇ ಇಲ್ಲವಾಗಿರುವದೋ ಹಾಗೆಯೇ ಮುಕ್ತನಾದವನಿಗೆ ಬದುಕಿರುವಾಗಲೇ ಅಹಂಕಾರವಿಲ್ಲವಾಗಿರುವದರಿಂದ ಸಂಸಾರವು ತೋರುವದೇ ಇಲ್ಲ. ಆದ್ದರಿಂದ ಮಾಯೆಯಿಂದ ಮನೋಧರ್ಮವಾಗಿ ಕಂಡುಬರುತ್ತಿರುವ ನಾನು - ನನ್ನದೆಂಬ ಭ್ರಮೆಯನ್ನು ಬಿಡುವವನಾಗು. ಈಶ್ವರನೂ ಷಡ್ಗುಣೈಶ್ವರ್ಯಸಂಪನ್ನನೂ ಸರ್ವಭೂತಗಳ ಅಂತರಾತ್ಮನೂ ಮಾಯಾಮಾನುಷರೂಪನೂ ಆದ ಶ್ರೀರಾಮನಲ್ಲಿ ಮನಸ್ಸನ್ನಿಡು.

**ಬಾಹ್ಯೇಂದ್ರಿಯಾರ್ಥಸಂಬಂಧಾನ್ ತ್ಯಾಜಯಿತ್ವಾ ಮನಃ ಶನೈಃ ।**
**ತತ್ರ ದೋಷಾನ್ ದರ್ಶಯಿತ್ವಾ ರಾಮಾನಂದೇ ನಿಯೋಜಯ ॥ ೨೦ ॥**
**ದೇಹಬುದ್ಧ್ಯಾ ಭವೇದ್ ಭ್ರಾತಾ ಪಿತಾ ಮಾತಾ ಸುಹೃತ್ ಪ್ರಿಯಃ ।**
**ವಿಲಕ್ಷಣಂ ಯದಾ ದೇಹಾತ್ ಜಾನಾತ್ಯಾತ್ಮಾನಮಾತ್ಮನಾ ॥ ೨೧ ॥**
**ತದಾ ಕಃ ಕಸ್ಯ ವಾ ಬಂಧುರ್ಭ್ರಾತಾ ಮಾತಾ ಪಿತಾ ಸುಹೃತ್ ।**
**ಮಿಥ್ಯಾಜ್ಞಾನವಶಾಜ್ಜಾತಾ ದಾರಾಗಾರಾದಯಃ ಸದಾ ॥ ೨೨ ॥**
**ಶಬ್ದಾದಯಶ್ಚ ವಿಷಯಾ ವಿವಿಧಾಶ್ಚೈವ ಸಂಪದಃ ।**

೨೦-೨೨. ಹೊರಗಿನ ವಿಷಯಗಳ ಸಂಬಂಧದಿಂದ ಮನಸ್ಸನ್ನು ಬಿಡಿಸಿಕೊಂಡು ಅವುಗಳಲ್ಲಿರುವ ದೋಷಗಳನ್ನು ತೋರಿಸಿಕೊಡುವದರ ಮೂಲಕ (ಹಿಮ್ಮೆಟ್ಟಿ) ರಾಮನೆಂಬ ಆನಂದರೂಪದಲ್ಲಿ ನೆಲೆಗೊಳಿಸುವವನಾಗು. ಶರೀರ ಬುದ್ಧಿಯ ನಿಮಿತ್ತವಾಗಿಯೇ ಸೋದರ, ತಂದೆ, ತಾಯಿ, ಸ್ನೇಹಿತ, ಬೇಕಾದವನು-ಮುಂತಾದ ವ್ಯವಹಾರವುಂಟಾಗಿದೆ. ಯಾವಾಗ ತಾನು ದೇಹಕ್ಕಿಂತ ಬೇರೆಯೆಂದು ಅರಿತುಕೊಳ್ಳುವನೋ ಆಗ ತಾನೇ ತನ್ನನ್ನೇ ತನ್ನಲ್ಲಿಯೇ ಕಂಡುಕೊಳ್ಳುವನು. ಆಗ ಯಾರಿಗೆ ಯಾರು ಬಂಧುಗಳು ? ಯಾರು ಸೋದರ, ತಾಯಿ, ತಂದೆ, ಸ್ನೇಹಿತ ರೆನಿಸಿಕೊಂಡಾರು ? ಹೆಂಡತಿ, ಮನೆ - ಮುಂತಾದವುಗಳೆಲ್ಲ (ನನ್ನದೆಂದು) ತಪ್ಪು ತಿಳಿವಳಿಕೆಯಿಂದಲೇ ಆಗಿರುತ್ತದೆ. ಹಾಗೆಯೇ ಶಬ್ದಾದಿವಿಷಯಗಳೂ (ಭೋಗಗಳೂ) ನಾನಾವಿಧವಾದ ಭೋಗ (ಸಾಮಗ್ರಿ)ಗಳೂ ಅಜ್ಞಾನನಿಮಿತ್ತವಾಗಿ (ಅಂಟಿಕೊಂಡಿರುವವು)

**ಬಲಂ ಕೋಶೋ ಭೃತ್ಯವರ್ಗೋ ರಾಜ್ಯಂ ಭೂಮಿಃ ಸುತಾದಯಃ ।**
**ಅಜ್ಞಾನಜತ್ವಾತ್ ಸರ್ವೇ ತೇ ಕ್ಷಣಸಂಗಮಭಂಗುರಾಃ ॥ ೨೩ ॥**
**ಅಥೋತ್ತಿಷ್ಠ ಹೃದಾ ರಾಮಂ ಭಾವಯನ್ ಭಕ್ತಿಭಾವಿತಮ್ ।**
**ಅನುವರ್ತಸ್ವ ರಾಜ್ಯಾದಿ ಭುಂಜನ್ ಪ್ರಾರಬ್ಧಮನ್ವಹಮ್ ॥ ೨೪ ॥**
**ಭೂತಂ ಭವಿಷ್ಯಮಭಜನ್ ವರ್ತಮಾನಮಥಾಚರನ್ ।**
**ವಿಹರಸ್ವ ಯಥಾ ನ್ಯಾಯಂ ಭವದೋಷೈರ್ನ ಲಿಪ್ಯಸೇ ॥ ೨೫ ॥**

೨೩-೨೫. ಸೈನ್ಯ, ಭಂಡಾರ, ಸೇವಕರ ಸಮೂಹ, ರಾಜ್ಯ, ಭೂಮಿ, ಮಕ್ಕಳೇ-ಮುಂತಾದವರು ಅಜ್ಞಾನ (ಮೋಹ)ದಿಂದ ಉಂಟಾಗಿರುವದರಿಂದ ಅವೆಲ್ಲವೂ ಕ್ಷಣಕಾಲ ಕೂಡಿ ಅಗಲುವವುಗಳಾಗಿವೆ. ಆದ್ದರಿಂದ (ಎಲೈ ವಿಭೀಷಣನೆ), ಭಕ್ತಿಯಿಂದ ದೊರಕುವ ಶ್ರೀರಾಮನನ್ನು ಹೃದಯದಲ್ಲಿ ಚಿಂತಿಸುತ್ತಾ ಎದ್ದೇಳು. ಪ್ರಾರಬ್ಧನಿಮಿತ್ತವಾಗಿ ಬಂದೊದಗಿರುವ ರಾಜ್ಯಾದಿಸುಖಗಳನ್ನು ಅನುಭವಿಸುತ್ತಾ

(ರಾಮನನ್ನು) ಅನುಸರಿಸಿಕೊಂಡಿರು. ಹಿಂದಿನದನ್ನು ನೆನೆಯಬೇಡ. ಮುಂದಿನದನ್ನು ಕುರಿತೂ ಚಿಂತಿಸಬೇಡ. ಈಗ ಏನು ಒದಗಿದೆಯೋ ಅದನ್ನು ಮಾತ್ರ ನಡೆಯಿಸುತ್ತಾ ಯಥಾಯೋಗ್ಯವಾಗಿ ಆನಂದದಿಂದ ಬದುಕುವವನಾಗು. ಹೀಗಾದರೆ ಸಂಸಾರದೋಷಗಳಿಂದ ನೀನು ಲಿಪ್ತನಾಗದೆ ಇರುವೆ.

**ಆಜ್ಞಾಪಯತಿ ರಾಮಸ್ತ್ವಾಂ ಯದ್ಭ್ರಾತುಃ ಸಾಂಪರಾಯಿಕಮ್।**
**ತತ್ಕುರುಷ್ವ ಯಥಾ ಶಾಸ್ತ್ರಂ ರುದತೀಶ್ಚಾಪಿ ಯೋಷಿತಃ ॥ ೨೬ ॥**
**ನಿವಾರಯ ಮಹಾಬುದ್ಧೇ ಲಂಕಾಂ ಗಚ್ಛತು ಮಾ ಚಿರಮ್ ।**
**ಶ್ರುತ್ವಾ ಯಥಾವದ್ವಚನಂ ಲಕ್ಷ್ಮಣಸ್ಯ ವಿಭೀಷಣಃ ॥ ೨೭ ॥**
**ತ್ಯಕ್ತ್ವಾ ಶೋಕಂ ಚ ಮೋಹಂ ಚ ರಾಮಪಾರ್ಶ್ವಮುಪಾಗಮತ್ ।**

೨೬-೨೭. ರಾಮನು ನಿನಗೆ (ನಿನ್ನ) ಅಣ್ಣನ ಉತ್ತರಕ್ರಿಯಾದಿಗಳನ್ನು ಮಾಡುವಂತೆ ಅಪ್ಪಣೆಮಾಡಿರುತ್ತಾನೆ. ಶಾಸ್ತ್ರಾನುಗುಣವಾಗಿ ಅದನ್ನು ಮಾಡುವವನಾಗು. ಮತ್ತು ಅಳುತ್ತಿರುವ ಹೆಂಗಸರನ್ನೂ ತಡೆಗಟ್ಟುವವನಾಗು. ಅವರುಗಳು ತಡವಿಲ್ಲದೆ ಲಂಕೆಗೆ ಹಿಂದಿರುಗಲಿ. ಹೀಗೆ ಲಕ್ಷ್ಮಣನು ಹೇಳಿದ ಯೋಗ್ಯವಾದ ಮಾತುಗಳನ್ನು ಕೇಳಿ ವಿಭೀಷಣನು ಶೋಕಮೋಹಗಳನ್ನು ಬಿಟ್ಟು ರಾಮನ ಸಮೀಪಕ್ಕೆ ಬಂದನು.

**ವಿಮೃಶ್ಯ ಬುದ್ಧ್ಯಾ ಧರ್ಮಜ್ಞೋ ಧರ್ಮಾರ್ಥಸಹಿತಂ ವಚಃ ।**
**ರಾಮಸ್ಯೈವಾನುವೃತ್ತ್ಯರ್ಥಮುತ್ತರಂ ಪರ್ಯಭಾಷತ ॥ ೨೮ ॥**
**ನೃಶಂಸಮನೃತಂ ಕ್ರೂರಂ ತ್ಯಕ್ತಧರ್ಮವ್ರತಂ ಪ್ರಭೋ ।**
**ನಾಹೋಽಸ್ಮಿ ದೇವ ಸಂಸ್ಕರ್ತುಂ ಪರದಾರಾಭಿಮರ್ಶಿನಮ್ ॥ ೨೯ ॥**
**ಶ್ರುತ್ವಾ ತದ್ವಚನಂ ಪ್ರೀತೋ ರಾಮೋ ವಚನಮಬ್ರವೀತ್ ।**
**ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ॥ ೩೦ ॥**
**ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ।**

೨೮-೨೯. ರಾಮನನ್ನು ಹಿಂಬಾಲಿಸುವ ಬುದ್ಧಿಯಿಂದಲೇ ತನ್ನ ಅಂತಃಕರಣದಲ್ಲಿ ಧರ್ಮಜ್ಞನಾದ ಆತನು ವಿಚಾರಮಾಡಿ ಧರ್ಮಾರ್ಥಗಳಿಂದ ಕೂಡಿದ ಮಾತಿನಿಂದ ಹೀಗೆಂದನು : 'ಪ್ರಭುವೆ, ಪಾಪಿಯೂ ಸುಳ್ಳುಗಾರನೂ ಕ್ರೂರನೂ ಧರ್ಮವನ್ನು ಕೈಬಿಟ್ಟವನೂ ಪರರ ಹೆಂಡಂದಿರನ್ನು ಸ್ಪರ್ಶಮಾಡಿದವನೂ ಆದವನನ್ನು ನಾನು ಸ್ವಾಮಿ, ಸಂಸ್ಕಾರಮಾಡಲು ಸಮರ್ಥನಲ್ಲ.' ಹೀಗೆನ್ನಲು ಅವನ ಮಾತನ್ನು ಕೇಳಿದ ಶ್ರೀರಾಮನು ಸುಪ್ರೀತನಾಗಿ ''ಅಯ್ಯ, ದ್ವೇಷಕ್ಕೆ ಸಾವೆಂಬುದೇ ಕೊನೆಯು. ನಮ್ಮ ಕಾರ್ಯಸಿದ್ಧಿಯಾಗಿ ಬಿಟ್ಟಿದೆ. ಇನ್ನು ಮುಂದೆ (ರಾವಣನು) ನಿನಗೆ ಹೇಗೆ ಭ್ರಾತನಾಗಿ ನಿನ್ನವನೋ ಹಾಗೆ ನನ್ನವನೂ ಆಗಿರುವನು. ಆದ್ದರಿಂದ ಇವನಿಗೆ ಸಂಸ್ಕಾರವನ್ನು ಮಾಡುವವನಾಗು'' ಎಂದನು.

**ರಾಮಾಜ್ಞಾಂ ಶಿರಸಾ ಧೃತ್ವಾ ಶೀಘ್ರಮೇವ ವಿಭೀಷಣಃ ।**
**ಸಾಂತ್ವವಾಕ್ಯೈರ್ಮಹಾಬುದ್ಧಿಂ ರಾಜ್ಞೀಂ ಮಂದೋದರೀಂ ತದಾ ॥ ೩೧ ॥**
**ಸಾಂತ್ವಯಾಮಾಸ ಧರ್ಮಾತ್ಮಾ ಧರ್ಮಬುದ್ಧಿರ್ವಿಭೀಷಣಃ ।**
**ತ್ವರಯಾಮಾಸ ಧರ್ಮಜ್ಞಃ ಸಂಸ್ಕಾರಾರ್ಥಂ ಸ್ವಬಾಂಧವಾನ್ ॥ ೩೨ ॥**

೩೧-೩೨. ಅನಂತರ ವಿಭೀಷಣನು ಜಾಗ್ರತೆಯಾಗಿ ರಾಮಾಜ್ಞೆಯನ್ನು ಶಿರಸಾವಹಿಸಿ ಮುಂದುವರೆದು ಮಹಾಬುದ್ಧಿಶಾಲಿಯೂ ರಾವಣನ ಪತ್ನಿಯೂ ಆದ ಮಹಾರಾಣಿಯಾದ ಮಂಡೋದರಿಯನ್ನು ಸಮಾಧಾನದ ಮಾತುಗಳಿಂದ ಧರ್ಮಾತ್ಮನೂ ಧರ್ಮಬುದ್ಧಿಯವನೂ ಆದ ವಿಭೀಷಣನು ಸಮಾಧಾನಮಾಡಿದನು. ತನ್ನ ಬಂಧು ಗಳನ್ನೆಲ್ಲ (ರಾವಣನ) ಸಂಸ್ಕಾರಾರ್ಥವಾಗಿ ಆತುರಪಡಿಸಿದನು.

**ಚಿತ್ಯಾಂ ನಿವೇಶ್ಯ ವಿಧಿವತ್ ಪಿತೃಮೇಧವಿಧಾನತಃ ।**
**ಆಹಿತಾಗ್ನೇರ್ಯಥಾ ಕಾರ್ಯಂ ರಾವಣಸ್ಯ ವಿಭೀಷಣಃ ॥ ೩೩ ॥**
**ತಥೈವ ಸರ್ವಮಕರೋತ್ ಬಂಧುಭಿಃ ಸಹ ಮಂತ್ರಿಭಿಃ ।**
**ದದೌ ಚ ಪಾವಕಂ ತಸ್ಯ ವಿಧಿಯುಕ್ತಂ ವಿಭೀಷಣಃ ॥ ೩೪ ॥**
**ಸ್ನಾತ್ವಾ ಚೈವಾರ್ದ್ರವಸ್ತ್ರೇಣ ತಿಲಾನ್ ದರ್ಭಾಭಿಮಿಶ್ರಿತಾನ್ ।**
**ಉದಕೇನ ಚ ಸಂಮಿಶ್ರಾನ್ ಪ್ರದಾಯ ವಿಧಿಪೂರ್ವಕಮ್ ॥ ೩೫ ॥**
**ಪ್ರದಾಯ ಚೋದಕಂ ತಸ್ಮೈ ಮೂರ್ಧ್ನಾ ಚೈನಂ ಪ್ರಣಮ್ಯ ಚ ।**
**ತಾಃ ಸ್ತ್ರಿಯೋಽನುನಯಾಮಾಸ ಸಾಂತ್ವಮುಕ್ತ್ವಾ ಪುನಃ ಪುನಃ ॥ ೩೬ ॥**

೩೩-೩೬. ರಾವಣನ (ಶರೀರವನ್ನು) ವಿಧಿವತ್ತಾಗಿ ಚಿತಿಯಮೇಲಿರಿಸಿ, ಆಹಿತಾಗ್ನಿಯಾದ (ಯಜಮಾನನಿಗೆ ಹೇಗೆ ಸಂಸ್ಕಾರಮಾಡಬೇಕೋ ಹಾಗೆ) ವಿಭೀಷಣನು ಪಿತೃಮೇಧವಿಧಿಪ್ರಕಾರವಾಗಿ ಬಂಧುಗಳಿಂದಲೂ ಮಂತ್ರಿಗಳಿಂದಲೂ ಕೂಡಿ ಎಲ್ಲ (ಕರ್ಮ) ಗಳನ್ನೂ ಮಾಡಿದನು. ವಿಧಿಯುಕ್ತವಾಗಿ ವಿಭೀಷಣನು ಅಗ್ನಿಯನ್ನು ಸಮರ್ಪಿಸಿ (ದಹನಮಾಡಿದನು). ಅನಂತರ ಸ್ನಾನ ಮಾಡಿ ಒದ್ದೆಯಾದ ಬಟ್ಟೆಯನ್ನುಟ್ಟು ದರ್ಭೆಗಳಿಂದ ಕೂಡಿದ ಎಳ್ಳುಗಳಿಂದ ವಿಧಿಪೂರ್ವಕವಾಗಿ ನೀರಿನಿಂದ ತರ್ಪಣವನ್ನು ಕೊಟ್ಟನು. ಹೀಗೆ ಉದಕ ಪ್ರದಾನಮಾಡಿದವನಾಗಿ ತಲೆಬಾಗಿ ಅವನಿಗೆ ನಮಸ್ಕಾರ ಮಾಡಿ ಮತ್ತೆ ಮತ್ತೆ ಆ (ರಾವಣನ ಕಡೆಯ) ಸ್ತ್ರೀಯರನ್ನು ಸಮಾಧಾನಗೊಳಿಸಿದನು.

**ಗಮ್ಯತಾಮಿತಿ ತಾಸ್ಸರ್ವಾ ವಿವಿಶುರ್ನಗರಂ ತದಾ ।**
**ಪ್ರವಿಷ್ಟಾಸು ಚ ಸರ್ವಾಸು ರಾಕ್ಷಸೀಷು ವಿಭೀಷಣಃ ॥ ೩೭ ॥**

**ರಾಮಪಾರ್ಶ್ವಮುಪಾಗತ್ಯ ತದಾಽತಿಷ್ಠದ್ ವಿನೀತವತ್ ।**
**ರಾಮೋಽಪಿ ಸಹ ಸೈನ್ಯೇನ ಸಸುಗ್ರೀವಃ ಸ ಲಕ್ಷ್ಮಣಃ ॥ ೩೮ ॥**
**ಹರ್ಷಂ ಲೇಭೇ ರಿಪೂನ್ ಹತ್ವಾ ಯಥಾ ವೃತ್ರಂ ಶತಕ್ರತುಃ ।**
**ಮಾತಲಿಶ್ಚ ತದಾ ರಾಮಂ ಪರಿಕ್ರಮ್ಯಾಭಿವಂದ್ಯ ಚ ॥ ೩೯ ॥**
**ಅನುಜ್ಞಾತಶ್ಚ ರಾಮೇಣ ಯಯೌ ಸ್ವರ್ಗಂ ವಿಹಾಯಸಾ ।**

೩೭-೩೯. 'ನೀವೆಲ್ಲರೂ ಹೊರಡಿರಿ' ಎಂದು (ವಿಭೀಷಣನು) ಹೇಳಿದ ಅನಂತರ ಆ ಎಲ್ಲ ಸ್ತ್ರೀಯರೂ ನಗರವನ್ನು ಪ್ರವೇಶಿಸಿದರು. ಎಲ್ಲಾ ರಾಕ್ಷಸಿಯರೂ ಲಂಕೆಯನ್ನು ಹೊಕ್ಕಮೇಲೆ ವಿಭೀಷಣನು ರಾಮನ ಹತ್ತಿರಕ್ಕೆ ಬಂದು ವಿನಯದಿಂದ ನಿಂತುಕೊಂಡನು. ರಾಮನು ಕೂಡ ಸುಗ್ರೀವಲಕ್ಷ್ಮಣರೊಡಗೂಡಿ ಸೇನಾಸಮೇತ ನಾಗಿ ಶತ್ರುಗಳನ್ನು ಕೊಂದ ಅನಂತರ - ದೇವೇಂದ್ರನು ವೃತ್ರಾಸುರನನ್ನು ಗೆದ್ದಾಗ ಹೇಗೋ ಹಾಗೆ - ಸಂತೋಷವನ್ನು ಹೊಂದಿದನು. ಮಾತಲಿಯು ಸಹ ರಾಮನನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ರಾಮನಿಂದ ಅಪ್ಪಣೆಯನ್ನು ಪಡೆದವನಾಗಿ ಆಕಾಶ ಮಾರ್ಗದಿಂದ ಸ್ವರ್ಗಕ್ಕೆ ಹೊರಟುಹೋದನು.

**ತತೋ ಹೃಷ್ಟಮನಾ ರಾಮಃ ಲಕ್ಷ್ಮಣಂ ಚೇದಮಬ್ರವೀತ್ ।**
**ವಿಭೀಷಣಾಯ ಮೇ ಲಂಕಾರಾಜ್ಯಂ ದತ್ತಂ ಪುರೈವ ಹಿ ॥ ೪೦ ॥**
**ಇದಾನೀಮಪಿ ಗತ್ವಾ ತ್ವಂ ಲಂಕಾಮಧ್ಯೇ ವಿಭೀಷಣಮ್ ।**
**ಅಭಿಷೇಚಯ ವಿಪ್ರೈಶ್ಚ ಮಂತ್ರವದ್ ವಿಧಿಪೂರ್ವಕಮ್ ॥ ೪೧ ॥**

೪೦-೪೧. ಅನಂತರ ಸಂತೋಷಗೊಂಡ ಮನಸ್ಸುಳ್ಳ ರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು. 'ನಾನು ವಿಭೀಷಣನಿಗೆ ಲಂಕಾರಾಜ್ಯವನ್ನು ಹಿಂದೆಯೇ ಕೊಟ್ಟಿರುವೆನು. ಈಗಲೂ ನೀನು ಲಂಕೆಯ ಒಳಗೆ ಹೋಗಿ ಅಲ್ಲಿ ಮಧ್ಯದಲ್ಲಿ ವಿಭೀಷಣನನ್ನು (ಕುಳ್ಳಿರಿಸಿ) ಬ್ರಾಹ್ಮಣರಿಂದ ಕೂಡಿ ವಿಧಿಪೂರ್ವಕವಾಗಿ ಪಟ್ಟಾಭಿಷೇಕ ಮಾಡಿಸು' - ಎಂದನು.

**ಇತ್ಯುಕ್ತೋ ಲಕ್ಷ್ಮಣಸ್ತೂರ್ಣಂ ಜಗಾಮ ಸಹ ವಾನರೈಃ ।**
**ಲಂಕಾಂ ಸುವರ್ಣಕಲಶೈಃ ಸಮುದ್ರಜಲಸಂಯುತೈಃ ॥ ೪೨ ॥**
**ಅಭಿಷೇಕಂ ಶುಭಂ ಚಕ್ರೇ ರಾಕ್ಷಸೇಂದ್ರಸ್ಯ ಧೀಮತಃ ।**
**ತತಃ ಪೌರಜನೈಃ ಸಾರ್ಧಂ ನಾನೋಪಾಯನಪಾಣಿಭಿಃ ॥ ೪೩ ॥**
**ವಿಭೀಷಣಃ ಸಸೌಮಿತ್ರಿಃ ಉಪಾಯನಪುರಸ್ಕೃತಃ ।**
**ದಂಡಪ್ರಣಾಮಮಕರೋತ್ ರಾಮಸ್ಯಾಕ್ಲಿಷ್ಟಕರ್ಮಣಃ ॥ ೪೪ ॥**

೪೨-೪೪. ಹೀಗೆಂದು ಹೇಳಲ್ಪಟ್ಟ ಲಕ್ಷ್ಮಣನು ಕಪಿಗಳೊಡಗೂಡಿ ಬೇಗನೆ ಲಂಕೆಗೆ ಹೋದನು. ಸಮುದ್ರಜಲದಿಂದ ತುಂಬಿದ ಚಿನ್ನದ ಕಲಶಗಳಿಂದ ಧೀಮಂತನಾದ ರಾಕ್ಷಸಶ್ರೇಷ್ಠನಾದ ವಿಭೀಷಣನಿಗೆ ಶುಭಕರವಾದ ಪಟ್ಟಾಭಿಷೇಕವನ್ನು ನೆರವೇರಿಸಿದನು. ಅನಂತರ ನಾನಾವಿಧವಾದ ಕಪ್ಪಕಾಣಿಕೆಗಳನ್ನು ಕೈಯಲ್ಲಿ ಹಿಡಿದ ಅನೇಕ ಪೌರಜನ ರೊಡಗೂಡಿ ಲಕ್ಷ್ಮಣಸಮೇತನಾದ ವಿಭೀಷಣನು ಕಾಣಿಕೆಗಳನ್ನು ತೆಗೆದುಕೊಂಡು ರಾಮನನ್ನು ಬಳಿಸಾರಿ ಅಮೋಘಕರ್ಮನಾದ ಶ್ರೀರಾಮನಿಗೆ ದಂಡವತ್ ಪ್ರಣಾಮಗಳನ್ನು ಅರ್ಪಿಸಿದನು.

**ರಾಮೋ ವಿಭೀಷಣಂ ದೃಷ್ಟ್ವಾ ಪ್ರಾಪ್ತರಾಜ್ಯಂ ಮುದಾನ್ವಿತಃ ।**
**ಕೃತಕೃತ್ಯಮಿವಾತ್ಮಾನಮಮನ್ಯತ ಸಹಾನುಜಃ ॥ ೪೫ ॥**
**ಸುಗ್ರೀವಂ ಚ ಸಮಾಲಿಂಗ್ಯ ರಾಮೋ ವಾಕ್ಯಮಥಾಬ್ರವೀತ್ ।**
**ಸಹಾಯೇನ ತ್ವಯಾ ವೀರ ಜಿತೋ ಮೇ ರಾವಣೋ ಮಹಾನ್ ॥ ೪೬ ॥**
**ವಿಭೀಷಣೋಽಪಿ ಲಂಕಾಯಾಮಭಿಷಿಕ್ತೋ ಮಯಾನಘ ।**

೪೫-೪೬. ರಾಮನು ವಿಭೀಷಣನು ರಾಜ್ಯವನ್ನು ಪಡೆದುಕೊಂಡದ್ದನ್ನು ಕಂಡು ಸಂತೋಷಗೊಂಡವನಾಗಿ ಲಕ್ಷ್ಮಣನೊಡನೆ ತಾನು ಕೃತಕೃತ್ಯನಾದೆನು ಎಂದುಕೊಂಡನು. ಮತ್ತು ಸುಗ್ರೀವನನ್ನು ಆಲಿಂಗಿಸಿಕೊಂಡು ರಾಮನು ಹೀಗೆಂದನು : ''ಎಲೈ ವೀರನೆ, ನಿನ್ನ ಸಹಾಯದಿಂದ ದೊಡ್ಡ (ಶತ್ರುವಾದ )ರಾವಣನು ಗೆಲ್ಲಲ್ಪಟ್ಟನು. ಎಲೈ ಪಾಪರಹಿತನೆ, ವಿಭೀಷಣನು ಸಹ ಲಂಕೆಯಲ್ಲಿ ಪಟ್ಟಾಭಿಷಿಕ್ತನಾದನು.''

**ತತಃ ಪ್ರಾಹ ಹನೂಮಂತಂ ಪಾರ್ಶ್ವಸ್ಥಂ ವಿನಯಾನ್ವಿತಮ್ ।**
**ವಿಭೀಷಣಸ್ಯಾನುಮತೇರ್ಗಚ್ಛ ತ್ವಂ ರಾವಣಾಲಯಮ್ ॥ ೪೭ ॥**
**ಜಾನಕ್ಯೈ ಸರ್ವಮಾಖ್ಯಾಹಿ ರಾವಣಸ್ಯ ವಧಾದಿಕಮ್ ।**
**ಜಾನಕ್ಯಾಃ ಪ್ರತಿವಾಕ್ಯಂ ಮೇ ಶೀಘ್ರಮೇವ ನಿವೇದಯ ॥ ೪೮ ॥**

೪೭-೪೮. ಅನಂತರ ಪಕ್ಕದಲ್ಲಿ ವಿನೀತನಾಗಿ ನಿಂತಿದ್ದ ಹನುಮಂತನನ್ನು ಕುರಿತು ಇಂತೆಂದನು : ''ವಿಭೀಷಣನ ಅಪ್ಪಣೆಯನ್ನು ಪಡೆದು ನೀನು ರಾವಣನ ಅರಮನೆಗೆ ಹೋಗು. ಅಲ್ಲಿ ( ಅಶೋಕವನದಲ್ಲಿರುವ) ಸೀತೆಗೆ ರಾವಣವಧೆಯೇ ಮುಂತಾದ ವಿಚಾರಗಳನ್ನು ಎಲ್ಲವನ್ನೂ ಹೇಳು. ಜಾಗ್ರತೆಯಾಗಿ ಸೀತೆಯ ಉತ್ತರವನ್ನೂ ಪಡೆದುಬಂದು ನನಗೆ ತಿಳಿಸು.''

**ಏವಮಾಜ್ಞಾಪಿತೋ ಧೀಮಾನ್ ರಾಮೇಣ ಪವನಾತ್ಮಜಃ ।**
**ಪ್ರವಿವೇಶ ಪುರೀಂ ಲಂಕಾಂ ಪೂಜ್ಯಮಾನೋ ನಿಶಾಚರೈಃ ॥ ೪೯ ॥**

**ಪ್ರವಿಶ್ಯ ರಾವಣಗೃಹಂ ಶಿಂಶಪಾಮೂಲಮಾಶ್ರಿತಮ್ ।**
**ದದರ್ಶ ಜಾನಕೀಂ ತತ್ರ ಕೃಶಾಂ ದೀನಾಮನಿಂದಿತಾಮ್ ॥ ೫೦ ॥**
**ರಾಕ್ಷಸೀಭಿಃ ಪರಿವೃತಾಂ ಧ್ಯಾಯಂತೀಂ ರಾಮಮೇವ ಹಿ ।**
**ವಿನಯಾವನತೋ ಭೂತ್ವಾ ಪ್ರಣಮ್ಯ ಪವನಾತ್ಮಜಃ ॥ ೫೧ ॥**
**ಕೃತಾಂಜಲಿಪುಟೋ ಭೂತ್ವಾ ಪ್ರಹ್ವೋ ಭಕ್ತ್ಯಾಗ್ರತಃ ಸ್ಥಿತಃ ।**

೪೯-೫೧. ಈ ರೀತಿಯಾಗಿ ರಾಮನಿಂದ ಅಪ್ಪಣೆಮಾಡಲ್ಪಟ್ಟ ಬುದ್ಧಿವಂತನಾದ ವಾಯುಪುತ್ರನು ರಾಕ್ಷಸರಿಂದ ಗೌರವಿಲ್ಪಟ್ಟವನಾಗಿ ಲಂಕೆಯನ್ನು ಪ್ರವೇಶಿಸಿದನು. ರಾವಣನ ಅರಮನೆಯನ್ನು ಹೊಕ್ಕು ಅಲ್ಲಿ ಶಿಂಶಪಾವೃಕ್ಷದ ಬುಡದಲ್ಲಿ ಕುಳಿತಿದ್ದ ದೀನಳಾದ, ಬಡಕಲಾದ ಹಾಗೂ ಪರಿಶುದ್ಧಳಾದ ಸೀತೆಯನ್ನು ಕಂಡನು. ಆಕೆಯು ರಾಕ್ಷಸಿಯರಿಂದ ಸುತ್ತುವರೆಯಲ್ಪಟ್ಟಿದ್ದರೂ ರಾಮನನ್ನೇ ಧ್ಯಾನಿಸುತ್ತಿದ್ದಳು. ವಿನಯದಿಂದ ಬಗ್ಗಿ ನಮಸ್ಕಾರಮಾಡಿದ ಹನುಮಂತನು ಕೈಗಳನ್ನು ಮುಗಿದುಕೊಂಡು ಭಕ್ತಿಯಿಂದ ಎದುರಿಗೆ ನಿಂತುಕೊಂಡನು.

**ತಂ ದೃಷ್ಟ್ವಾ ಜಾನಕೀ ತೂಷ್ಣೀಂ ಸ್ಥಿತ್ವಾ ಪೂರ್ವಸ್ಮೃತಿಂ ಯಯೌ ।**
**ಜ್ಞಾತ್ವಾ ತಂ ರಾಮದೂತಂ ಸಾ ಹರ್ಷಾತ್ ಸೌಮ್ಯಮುಖೀ ಬಭೌ ॥ ೫೨ ॥**
**ಸ ತಾಂ ಸೌಮ್ಯಮುಖೀಂ ದೃಷ್ಟ್ವಾ ತಸ್ಯೈ ಪವನನಂದನಃ ।**
**ರಾಮಸ್ಯ ಭಾಷಿತಂ ಸರ್ವಮಾಖ್ಯಾತುಮುಪಚಕ್ರಮೇ ॥ ೫೩ ॥**

೫೨-೫೩. ಸೀತೆಯು ಅವನನ್ನು ನೋಡಿ ಸುಮ್ಮನಾದವಳಾಗಿ ಹಿಂದಿನ ನೆನಪನ್ನು ತಂದುಕೊಂಡಳು. ಆಕೆಯು ಅವನನ್ನು ರಾಮನ ಸೇವಕನೆಂಬುದನ್ನು ತಿಳಿದು ಹರ್ಷದಿಂದ ಹಸಮ್ಮುಖಿಯಾಗಿ ವಿರಾಜಿಸಿದಳು. ಆಗ ಆ ಹನುಮಂತನು ಸೌಮ್ಯಮುಖಿಯಾದ ಆಕೆಯನ್ನು ಕುರಿತು ಶ್ರೀರಾಮನು ಹೇಳಿದ್ದೆಲ್ಲವನ್ನೂ ಹೇಳಲಾರಂಭಿಸಿದನು.

**ದೇವಿ ರಾಮಃ ಸಸುಗ್ರೀವೋ ವಿಭೀಷಣಸಹಾಯವಾನ್ ।**
**ಕುಶಲೀ ವಾನರಾಣಾಂ ಚ ಸೈನ್ಯಶ್ಚ ಸಹಲಕ್ಷ್ಮಣಃ ॥ ೫೪ ॥**
**ರಾವಣಂ ಸಸುತಂ ಹತ್ವಾ ಸಬಲಂ ಸಹ ಮಂತ್ರಿಭಿಃ ।**
**ತ್ವಾಮಾಹ ಕುಶಲಂ ರಾಮೋ ರಾಜ್ಯೇ ಕೃತ್ವಾ ವಿಭೀಷಣಮ್ ॥ ೫೫ ॥**

೫೪-೫೫. 'ದೇವಿ, ವಿಭೀಷಣನ ಸಹಾಯವನ್ನು ಪಡೆದು ಸುಗ್ರೀವಸಹಿತನಾದ ರಾಮನು ವಾನರರೆಲ್ಲರ ಸೈನ್ಯದೊಡಗೂಡಿ ಲಕ್ಷ್ಮಣನೊಡಗೂಡಿ ಮಗನ ಸಮೇತನಾದ ರಾವಣನನ್ನು ಸೇನೆ ಹಾಗೂ ಮಂತ್ರಿಗಳ ಸಮೇತವಾಗಿ ನಾಶಮಾಡಿ

ನಿನಗೆ ಕುಶಲವನ್ನು ತಿಳಿಸುತ್ತಿದ್ದಾನೆ. ವಿಭೀಷಣನನ್ನು (ಲಂಕಾ) ರಾಜ್ಯದಲ್ಲಿ ಕುಳ್ಳಿಸಿರಿದ್ದಾನೆ.'

**ಶ್ರುತ್ವಾ ಭರ್ತುಃ ಪ್ರಿಯಂ ವಾಕ್ಯಂ ಹರ್ಷಗದ್ಗದಯಾ ಗಿರಾ ।**
**ಕಿಂ ತೇ ಪ್ರಿಯಂ ಕರೋಮ್ಯದ್ಯ ನ ಪಶ್ಯಾಮಿ ಜಗತ್ತ್ರಯೇ ॥ ೫೬ ॥**
**ಸಮಂ ತೇ ಪ್ರಿಯವಾಕ್ಯಸ್ಯ ರತ್ನಾನ್ಯಾಭರಣಾನಿ ಚ ।**
**ಏವಮುಕ್ತಸ್ತು ವೈದೇಹ್ಯಾ ಪ್ರತ್ಯುವಾಚ ಪ್ಲವಂಗಮಃ ॥ ೫೭ ॥**
**ರತ್ನೌಘಾದ್ ವಿವಿಧಾದ್ವಾಪಿ ದೇವರಾಜ್ಯಾದ್ವಿಶಿಷ್ಯತೇ ।**
**ಹತಶತ್ರುಂ ವಿಜಯಿನಂ ರಾಮಂ ಪಶ್ಯಾಮಿ ಸುಸ್ಥಿರಮ್ ॥ ೫೮ ॥**

೫೬-೫೮. ಗಂಡನು (ಹೇಳಿ ಕಳುಹಿಸಿದ) ಪ್ರಿಯವಾದ ಮಾತನ್ನು ಕೇಳಿ ಸಂತೋಷದಿಂದ ಗದ್ಗದಕಂಠಳಾಗಿ (ದೇವಿಯು) ಹೀಗೆಂದಳು : 'ನಿನಗೆ ಈಗ ಏನು ಪ್ರಿಯವಾದುದನ್ನು ಮಾಡಲಿ ? ಮೂರು ಲೋಕದಲ್ಲಿಯೂ ಅಂಥದ್ದು ಏನೂ ಇರುವದಿಲ್ಲ. ನಿನ್ನ ಪ್ರಿಯವಾದ ಮಾತಿಗೆ ಯಾವ ರತ್ನಗಳೂ, ಒಡವೆಗಳೂ ಸಮವಾಗಿರಲಾರವು.' ಹೀಗೆ ಸೀತೆಯಿಂದ ಹೇಳಲ್ಪಟ್ಟ ಹನುಮಂತನು ಪ್ರತ್ಯುತ್ತರವನ್ನು ಕೊಡುತ್ತಾ ಹೀಗೆಂದನು : 'ನಾನಾ ವಿಧವಾದ ರತ್ನಗಳ ಸಮೂಹಕ್ಕಿಂತ ದೇವರಾಜ್ಯಕ್ಕಿಂತ ಹೆಚ್ಚಿನದಾಗಿರುವ ಶತ್ರುವನ್ನು ಜಯಿಸಿ ವಿಜಯಿಯಾದ ಹಾಗೂ ಸುಸ್ಥಿರನಾದ ರಾಮನನ್ನು ನೋಡುತ್ತಿರುವೆನಲ್ಲವೆ ? ಇದಕ್ಕಿಂತ ಹೆಚ್ಚಿನದೇನಿದ್ದೀತು ?'

**ತಸ್ಯ ತದ್ವಚನಂ ಶ್ರುತ್ವಾ ಮೈಥಿಲೀ ಪ್ರಾಹ ಮಾರುತಿಮ್ ।**
**ಸರ್ವೇ ಸೌಮ್ಯಾ ಗುಣಾಃ ಸೌಮ್ಯ ತ್ವಯ್ಯೇವ ಪರಿನಿಷ್ಠಿತಾಃ ॥ ೫೯ ॥**
**ರಾಮಂ ದ್ರಕ್ಷ್ಯಾಮಿ ಶೀಘ್ರಂ ಮಾಮಾಜ್ಞಾಪಯತು ರಾಘವಃ ।**
**ತಥೇತಿ ತಾಂ ನಮಸ್ಕೃತ್ಯ ಯಯೌ ದ್ರಷ್ಟುಂ ರಘೂತ್ತಮಮ್ ॥ ೬೦ ॥**
**ಜಾನಕ್ಯಾ ಭಾಷಿತಂ ಸರ್ವಂ ರಾಮಸ್ಯಾಗ್ರೇ ನ್ಯವೇದಯತ್ ।**
**ಯನ್ನಿಮಿತ್ತೋಽಯಮಾರಂಭಃ ಕರ್ಮಣಾಂ ಚ ಫಲೋದಯಃ ।**
**ತಾಂ ದೇವೀಂ ಶೋಕಸಂತಪ್ತಾಂ ದ್ರಷ್ಟುಮರ್ಹಸಿ ಮೈಥಿಲೀಮ್ ॥ ೬೧ ॥**

೫೯-೬೧. ಅವನ ಆ ಮಾತನ್ನು ಕೇಳಿ ಸೀತೆಯು ಮಾರುತಿಯನ್ನು ಕುರಿತು ಹೀಗೆಂದಳು : 'ಎಲೈ ಸೌಮ್ಯನೆ, ನಿನ್ನಲ್ಲಿ ಎಲ್ಲಾ ಉತ್ತಮಗುಣಗಳೂ ನೆಲೆಸಿರುತ್ತವೆ. ಇರಲಿ; ಈಗ ನಾನು ರಾಮನನ್ನು ನೋಡಲಿಚ್ಛಿಸುತ್ತೇನೆ. ರಾಮನು ಹಾಗೆಂದು ನನಗೆ ಅಪ್ಪಣೆ ಮಾಡಲಿ !' ಹಾಗೆಯೇ ಆಗಲೆಂದು ಹೇಳಿ ಹನುಮಂತನು ಆಕೆಗೆ ನಮಸ್ಕರಿಸಿ ರಾಮನನ್ನು ಕಾಣಲು ಹೊರಟನು. ಸೀತೆಯು ಹೇಳಿದ್ದೆಲ್ಲವನ್ನೂ ರಾಮನೆದುರಿಗೆ ವಿಜ್ಞಾಪಿಸಿದನು. '(ಪ್ರಭುವೆ), ಯಾವ (ದೇವಿಯ)ನ್ನು ನೆಪಮಾಡಿಕೊಂಡು ಈ

ಮಹಾ ಕಾರ್ಯವು ಸಾಧಿಸಲ್ಪಟ್ಟು ಫಲಪ್ರಾಪ್ತಿಯನ್ನು ತಂದಿತೋ ಆ ಶೋಕ ಸಂತಪ್ತಳಾದ ಮೈಥಿಲೀದೇವಿಯನ್ನು ನೀನು ಈಗ ನೋಡಲಿರುವೆಯಷ್ಟೆ' - (ಎಂದನು)

**ಏವಮುಕ್ತೋ ಹನುಮತಾ ರಾಮೋ ಜ್ಞಾನವತಾಂ ವರಃ ।**
**ಮಾಯಾಸೀತಾಂ ಪರಿತ್ಯಕ್ತುಂ ಜಾನಕೀಮನಲೇ ಸ್ಥಿತಾಮ್ ॥ ೬೨ ॥**
**ಆದಾತುಂ ಮನಸಾ ಧ್ಯಾತ್ವಾ ರಾಮಃ ಪ್ರಾಹ ವಿಭೀಷಣಮ್ ।**
**ಗಚ್ಛ ರಾಜನ್ ಜನಕಜಾಮಾನಯಾಶು ಮಮಾಂತಿಕಮ್ ॥ ೬೩ ॥**
**ಸ್ನಾತಾಂ ವಿರಜವಸ್ತ್ರಾಢ್ಯಾಂ ಸರ್ವಾಭರಣಭೂಷಿತಾಮ್ ।**

೬೨-೬೩. ಜ್ಞಾನಿಗಳಲ್ಲಿ ಶ್ರೇಷ್ಠನಾದ ರಾಮನು ಹೀಗೆ ಹನುಮಂತನಿಂದ ಹೇಳಲ್ಪಟ್ಟವನಾಗಿ, ಅಗ್ನಿಯಲ್ಲಿದ್ದ (ನಿಜವಾದ) ಸೀತೆಯನ್ನು ಸ್ವೀಕರಿಸುವದಕ್ಕಾಗಿಯೂ ಮಾಯಾಸೀತೆಯನ್ನು ಕೈಬಿಡುವದಕ್ಕಾಗಿಯೂ ಮನಸ್ಸಿನಲ್ಲಿ ಚಿಂತಿಸಿದವನಾಗಿ ವಿಭೀಷಣನನ್ನು ಕುರಿತು ಇಂತೆಂದನು : ಎಲೈ ರಾಜನೆ, ಹೋಗು ; ಸ್ನಾನಮಾಡಿ ಶುಭ್ರವಸ್ತ್ರಗಳನ್ನು ಧರಿಸಿದವಳೂ ಸರ್ವಾಭರಣಗಳಿಂದ ಅಲಂಕೃತಳೂ ಆದ ಜನಕ ಪುತ್ರಿಯನ್ನು ಬೇಗನೆ ನನ್ನ ಹತ್ತಿರಕ್ಕೆ ಕರೆದುಕೊಂಡು ಬಾ.'

**ವಿಭೀಷಣೋಽಪಿ ತಚ್ಛ್ರುತ್ವಾ ಜಗಾಮ ಸಹ ಮಾರುತಿಃ ।**
**ರಾಕ್ಷಸೀಭಿಃ ಸುವೃದ್ಧಾಭಿಃ ಸ್ನಾಪಯಿತ್ವಾ ಚ ಮೈಥಿಲೀಮ್ ॥ ೬೪ ॥**
**ಸರ್ವಾಭರಣಸಂಪನ್ನಾಮಾರೋಪ್ಯ ಶಿಬಿಕೋತ್ತಮೇ ।**
**ಯಾಷ್ಟೀಕೈರ್ಬಹುಭಿರ್ಗುಪ್ತಾಂ ಕಂಚುಕೋಷ್ಣೀಷಿಭಿಃ ಶುಭಾಮ್ ॥ ೬೫ ॥**
**ತಾಂ ದ್ರಷ್ಟುಮಾಗತಾಃ ಸರ್ವೇ ವಾನರಾ ಜನಕಾತ್ಮಜಾಮ್ ।**

೬೪-೬೫. ವಿಭೀಷಣನೂ ಸಹ ಅದನ್ನು ಕೇಳಿ ಹನುಮಂತನೊಡನೆ ಹೊರಟನು. ವಯಸ್ಕರಾದ ಜಾಣರಾಕ್ಷಸಿಯರಿಂದ ಕೂಡಿದ್ದ ಸೀತೆಯನ್ನು ಸ್ನಾನ ಮಾಡಿಸಿ ಸರ್ವಾಭರಣಗಳಿಂದಲೂ ಅಲಂಕರಿಸಿ ಉತ್ತಮವಾದ ಪಲ್ಲಕ್ಕಿಯಲ್ಲಿ ಕೂರಿಸಿ ಕವಚ - ಪೇಟಗಳಿಂದ ಕೂಡಿ ಕೈಯಲ್ಲಿ ಕೋಲುಗಳನ್ನು ಹಿಡಿದಿದ್ದ ಬಹುಜನ ರಕ್ಷಕರಿಂದ ಕಾಪಾಡಲ್ಪಟ್ಟ ಶುಭಳಾದ (ಸೀತೆಯನ್ನು) ಕರೆತಂದನು. ಆ ಜನಕಪುತ್ರಿಯನ್ನು ನೋಡುವದಕ್ಕಾಗಿ ಎಲ್ಲಾ ಕಪಿಗಳೂ ಬಂದರು.

**ತಾನ್ ವಾರಯಂತೋ ಬಹವಃ ಸರ್ವತೋ ವೇತ್ರಪಾಣಯಃ ।**
**ಕೋಲಾಹಲಂ ಪ್ರಕುರ್ವಂತೋ ರಾಮಪಾರ್ಶ್ವಮುಪಾಯಯುಃ ॥ ೬೬ ॥**
**ದೃಷ್ಟ್ವಾ ತಾಂ ಶಿಬಿಕಾರೂಢಾಂ ದೂರಾದಥ ರಘೂತ್ತಮಃ ।**
**ವಿಭೀಷಣ ಕಿಮರ್ಥಂ ತೇ ವಾನರಾನ್ ವಾರಯಂತಿ ಹಿ ॥ ೬೭ ॥**

**ಪಶ್ಯಂತು ವಾನರಾಃ ಸರ್ವೇ ಮೈಥಿಲೀಂ ಮಾತರಂ ಯಥಾ ।**
**ಪಾದಚಾರೇಣ ಸಾ ಯಾತು ಜಾನಕೀ ಮಮ ಸನ್ನಿಧಿಮ್ ॥ ೬೮ ॥**

೬೬-೬೮. ಅಲ್ಲಿ ಸುತ್ತಲೂ ನೆರೆದಿದ್ದ ಬೆತ್ತವನ್ನು ಹಿಡಿದಿದ್ದ ರಕ್ಷಕರು ಆ ಕಪಿಗಳನ್ನು ತಡೆಯುತ್ತಿದ್ದರು. ಹೀಗೆ ಗದ್ದಲಮಾಡುತ್ತಾ ಎಲ್ಲರೂ ಶ್ರೀರಾಮನ ಬಳಿಗೆ ಬಂದರು. ರಘುಶ್ರೇಷ್ಠನು ಪಲ್ಲಕ್ಕಿಯನ್ನೇರಿ ಬರುತ್ತಿದ್ದ (ಸೀತೆಯನ್ನು) ದೂರದಿಂದಲೇ ಕಂಡು ಹೀಗೆಂದನು : ''ವಿಭೀಷಣನೆ, ಕಪಿಗಳನ್ನು ಏತಕ್ಕಾಗಿ ತಡೆಯುತ್ತಿದ್ದಾರೆ ? ಎಲ್ಲ ಕಪಿಗಳೂ ಸೀತೆಯನ್ನು ತಾಯಿಯೆಂಬ (ಭಾವನೆಯಿಂದ) ನೋಡಲಿ! ಆಕೆಯು ಕಾಲುನಡಿಗೆಯಿಂದಲೇ ನನ್ನ ಹತ್ತಿರಕ್ಕೆ ಬರಲಿ !''

**ಶ್ರುತ್ವಾ ತದ್ರಾಮವಚನಂ ಶಿಬಿಕಾದವರುಹ್ಯ ಸಾ ।**
**ಪಾದಚಾರೇಣ ಶನಕೈರಾಗತಾ ರಾಮಸನ್ನಿಧಿಮ್ ॥ ೬೯ ॥**
**ರಾಮೋಽಪಿ ದೃಷ್ಟ್ವಾ ತಾಂ ಮಾಯಾಸೀತಾಂ ಕಾರ್ಯಾರ್ಥನಿರ್ಮಿತಾಮ್**
**ಅವಾಚ್ಯವಾದಾಂಶ್ಚ ಬಹೂನ್ ಪ್ರಾಹ ತಾಂ ರಘುನಂದನಃ ॥ ೭೦ ॥**

೬೯-೭೦. ರಾಮನ ಆ ಮಾತನ್ನು ಕೇಳಿ ಪಲ್ಲಕ್ಕಿಯಿಂದ ಆಕೆಯು ಇಳಿದವಳಾಗಿ ಕಾಲುನಡಿಗೆಯಿಂದ ಮೆಲ್ಲನೆ ರಾಮನ ಹತ್ತಿರಕ್ಕೆ ಬಂದಳು. ರಾಮನು ಕೂಡ (ರಾವಣವಧ) ಕಾರ್ಯಾರ್ಥವಾಗಿ ನಿರ್ಮಿತಳಾಗಿದ್ದ ಆ ಮಾಯಾಸೀತೆಯನ್ನು ಕಂಡು ಬಹಳವಾಗಿ ಆಕೆಯನ್ನು ಕುರಿತು ಆಡಬಾರದ ಮಾತುಗಳನ್ನಾಡಿದನು.

**ಅಮೃಷ್ಯಮಾಣಾ ಸಾ ಸೀತಾ ವಚನಂ ರಾಘವೋದಿತಮ್ ।**
**ಲಕ್ಷ್ಮಣಂ ಪ್ರಾಹ ಮೇ ಶೀಘ್ರಂ ಪ್ರಜ್ವಾಲಯ ಹುತಾಶನಮ್ ॥ ೭೧ ॥**
**ವಿಶ್ವಾಸಾರ್ಥಂ ಹಿ ರಾಮಸ್ಯ ಲೋಕಾನಾಂ ಪ್ರತ್ಯಯಾಯ ಚ ।**
**ರಾಘವಸ್ಯ ಮತಂ ಜ್ಞಾತ್ವಾ ಲಕ್ಷ್ಮಣೋಽಪಿ ತದೈವ ಹಿ ॥ ೭೨ ॥**
**ಮಹಾಕಾಷ್ಠಚಯಂ ಕೃತ್ವಾ ಜ್ವಾಲಯಿತ್ವಾ ಹುತಾಶನಮ್ ।**
**ರಾಮಪಾರ್ಶ್ವಮುಪಾಗಮ್ಯ ತಸ್ಥೌ ತೂಷ್ಣೀಮರಿಂದಮಃ ॥ ೭೩ ॥**

೭೧-೭೩. ರಾಮನು ಹೇಳಿದ ಮಾತನ್ನು ಸಹಿಸಲಾರದೆ ಆ ಸೀತೆಯು ಲಕ್ಷ್ಮಣನನ್ನು ಕುರಿತು ಇಂತೆಂದಳು : ''ಬೇಗನೆ ಅಗ್ನಿಯನ್ನು ಹೊತ್ತಿಸುವವನಾಗು. ರಾಮನಿಗೆ ವಿಶ್ವಾಸವುಂಟಾಗುವದಕ್ಕಾಗಿಯೂ ಲೋಕದ ಜನರಿಗೂ ನಂಬಿಕೆಯು ಬರುವದಕ್ಕಾಗಿಯೂ (ಅಗ್ನಿಪ್ರವೇಶಮಾಡುವೆನು.)'' ರಾಮನ ಅಭಿಪ್ರಾಯವನ್ನು ಅರಿತು ಲಕ್ಷ್ಮಣನೂ ಆ ಕೂಡಲೆ ದೊಡ್ಡ ಕಟ್ಟಿಗೆಯ ಸಂಗ್ರಹವನ್ನು ಮಾಡಿ ಬೆಂಕಿಯನ್ನು ಹೊತ್ತಿಸಿ ರಾಮನ ಸಮೀಪಕ್ಕೆ ಬಂದು ಸುಮ್ಮನೆ ನಿಂತುಕೊಂಡನು.

**ತತಃ ಸೀತಾ ಪರಿಕ್ರಮ್ಯ ರಾಘವಂ ಭಕ್ತಿಸಂಯುತಾ ।**
**ಪಶ್ಯತಾಂ ಸರ್ವಲೋಕಾನಾಂ ದೇವರಾಕ್ಷಸಯೋಷಿತಾಮ್ ॥ ೭೪ ॥**
**ಪ್ರಣಮ್ಯ ದೇವತಾಭ್ಯಶ್ಚ ಬ್ರಾಹ್ಮಣೇಭ್ಯಶ್ಚ ಮೈಥಿಲೀ ।**
**ಬದ್ಧಾಂಜಲಿಪುಟಾ ಚೇದಮುವಾಚಾಗ್ನಿಸಮಿಪಗಾ ॥ ೭೫ ॥**
**ಯಥಾ ಮೇ ಹೃದಯಂ ನಿತ್ಯಂ ನಾಪಸರ್ಪತಿ ರಾಘವಾತ್ ।**
**ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥ ೭೬ ॥**

೭೪-೭೬. ಅನಂತರ ಸೀತೆಯು ಭಕ್ತಿಯಿಂದ ಕೂಡಿದವಳಾಗಿ ರಾಮನನ್ನು ಪ್ರದಕ್ಷಿಣೆಮಾಡಿ ದೇವರಾಕ್ಷಸಸ್ತ್ರೀಯರುಗಳೂ ಸಮಸ್ತಜನರೂ ನೋಡುತ್ತಿರುವಂತೆಯೇ ದೇವತೆಗಳಿಗೂ ಬ್ರಾಹ್ಮಣರಿಗೂ ನಮಸ್ಕರಿಸಿ ಆ ಮೈಥಿಲಿಯು ಅಗ್ನಿಯನ್ನು ಸಮಿಪಿಸಿ ಕೈಗಳನ್ನು ಮುಗಿದುಕೊಂಡು ನನ್ನ ಮನಸ್ಸು ಎಷ್ಟರಮಟ್ಟಿಗೆ ನಿತ್ಯವಾಗಿ ರಾಮನನ್ನು ಬಿಟ್ಟಗಲದೆ ಇದ್ದುಕೊಂಡಿದೆಯೋ ಹಾಗೆಯೇ ಸರ್ವಲೋಕಗಳಿಗೂ (ಪಾಪಪುಣ್ಯ ಗಳಿಗೆಲ್ಲ) ಸಾಕ್ಷಿಯೆನಿಸಿರುವ ಅಗ್ನಿದೇವನು ಎಲ್ಲಾ ರೀತಿಯಿಂದಲೂ ನನ್ನನ್ನು ಕಾಪಾಡಲಿ!'' ಎಂದಳು.

**ಏವಮುಕ್ತ್ವಾ ತದಾ ಸೀತಾ ಪರಿಕ್ರಮ್ಯ ಹುತಾಶನಮ್ ।**
**ವಿವೇಶ ಜ್ವಲನಂ ದೀಪ್ತಂ ನಿರ್ಭಯೇನ ಹೃದಾ ಸತೀ ॥ ೭೭ ॥**
**ದೃಷ್ಟ್ವಾ ತತೋ ಭೂತಗಣಾಃ ಸಸಿದ್ಧಾಃ**
**ಸೀತಾಂ ಮಹಾವಹ್ನಿಗತಾಂ ಭೃಶಾರ್ತಾಃ ।**
**ಪರಸ್ಪರಂ ಪ್ರಾಹುರಹೋ ಸ ಸೀತಾಂ**
**ರಾಮಃ ಶ್ರಿಯಂ ಸ್ವಾಂ ಕಥಮತ್ಯಜಜ್ಜ್ಞಃ ॥ ೭೮ ॥**

೭೭-೭೮. ಸೀತೆಯು ಈ ರೀತಿಯಾಗಿ ಹೇಳಿ ಅಗ್ನಿದೇವನಿಗೆ ಪ್ರದಕ್ಷಿಣೆ ಮಾಡಿ ಚೆನ್ನಾಗಿ ಉರಿಯುತ್ತಿರುವ ಬೆಂಕಿಗೆ ಭಯವಿಲ್ಲದವಳಾಗಿ ಪ್ರವೇಶಿಸಿಬಿಟ್ಟಳು. ಅನಂತರ ಸಿದ್ಧರುಗಳೊಡಗೂಡಿದ ಎಲ್ಲಾ ಭೂತಗಳೂ ಕೂಡಲೆ ದುಃಖಿತರಾಗಿ ಮಹತ್ತಾದ ಅಗ್ನಿಯನ್ನು ಹೊಕ್ಕ ಸೀತೆಗಾಗಿ (ಮರುಗುತ್ತಾ) ''ಅಯ್ಯೋ, ಸರ್ವಜ್ಞನಾದ ರಾಮನು ತನ್ನ (ಅನಪಾಯಿನಿಯಾದ) ಲಕ್ಷ್ಮಿಯನ್ನು ಹೇಗೆ ಕೈಬಿಟ್ಟನು ?'' ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**
**ದ್ವಾದಶಃ ಸರ್ಗಃ**

----------

# ಹದಿಮೂರನೆಯ ಸರ್ಗ

**ಶ್ರೀ ಮಹಾದೇವ ಉವಾಚ -**

**ತತಃ ಶಕ್ರಃ ಸಹಸ್ರಾಕ್ಷಃ ಯಮಶ್ಚ ವರುಣಸ್ತಥಾ ॥**
**ಕುಬೇರಶ್ಚ ಮಹಾತೇಜಾಃ ಪಿನಾಕೀ ವೃಷವಾಹನಃ ॥ ೧ ॥**
**ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ಮುನಿಭಿಃ ಸಿದ್ಧಚಾರಣೈಃ ।**
**ಪಿತರೋ ಋಷಯಃ ಸಾಧ್ಯಾ ಗಂಧರ್ವಾಪ್ಸರಸೋರಗಾಃ ॥ ೨ ॥**
**ಏತೇ ಚಾನ್ಯೇ ವಿಮಾನಾಗ್ರ್ಯೈರಾಜಗ್ಮುರ್ಯತ್ರ ರಾಘವಃ ।**
**ಅಬ್ರುವನ್ ಪರಮಾತ್ಮಾನಂ ರಾಮಂ ಪ್ರಾಂಜಲಯಶ್ಚ ತೇ ॥ ೩ ॥**

೧-೩. ಶ್ರೀ ಮಹಾದೇವನಿಂತೆಂದನು: ಅನಂತರ ಸಹಸ್ರಾಕ್ಷನಾದ ದೇವೇಂದ್ರನೂ, ಯಮನೂ, ವರುಣನೂ, ಕುಬೇರನೂ, ವೃಷಭವಾಹನನೂ, ಮಹಾತೇಜಸ್ವಿಯೂ ಆದ ಪರಮೇಶ್ವರನೂ, ಬ್ರಹ್ಮವಿದರಲ್ಲಿ ಶ್ರೇಷ್ಠನಾದ ಬ್ರಹ್ಮನೂ ಪಿತೃದೇವತೆಗಳೂ, ಋಷಿಗಳೂ, ಸಾಧ್ಯರೂ, ಗಂಧರ್ವರು, ಅಪ್ಸರೆಯರು, ನಾಗಗಳು- ಇವರುಗಳೆಲ್ಲರೂ ಮತ್ತು ಇನ್ನೂ ಕೆಲವರು ಸಹ ಸಿದ್ಧರು, ಚಾರಣರು, ಮುನಿಗಳೊಡಗೂಡಿ ಶ್ರೇಷ್ಠವಾದ ವಿಮಾನಗಳನ್ನೇರಿ ರಾಮನಿರುವಲ್ಲಿಗೆ ಬಂದರು. ಕೈಗಳನ್ನು ಮುಗಿದುಕೊಂಡವರಾಗಿ ಅವರೆಲ್ಲರೂ ಪರಮಾತ್ಮನಾದ ರಾಮನನ್ನು ಕುರಿತು ಹೀಗೆಂದರು.

**ಕರ್ತಾ ತ್ವಂ ಸರ್ವಲೋಕಾನಾಂ ಸಾಕ್ಷೀ ವಿಜ್ಞಾನವಿಗ್ರಹಃ ।**
**ವಸೂನಾಮಷ್ಟಮೋಽಸಿ ತ್ವಂ ರುದ್ರಾಣಾಂ ಶಂಕರೋ ಭವಾನ್ ॥ ೪ ॥**
**ಆದಿಕರ್ತಾಸಿ ಲೋಕಾನಾಂ ಬ್ರಹ್ಮಾ ತ್ವಂ ಚತುರಾನನಃ ।**
**ಅಶ್ವಿನೌ ಘ್ರಾಣಭೂತೌ ತೇ ಚಕ್ಷುಷೀ ಚಂದ್ರಭಾಸ್ಕರೌ ॥ ೫ ॥**
**ಲೋಕಾನಾಮಾದಿರಂತೋಽಸಿ ನಿತ್ಯ ಏಕಃ ಸದೋದಿತಃ ।**
**ಸದಾ ಶುದ್ಧಃ ಸದಾ ಬುದ್ಧಃ ಸದಾ ಮುಕ್ತೋಽಗುಣೋಽದ್ವಯಃ ॥ ೬ ॥**

೪-೬. ''ಎಲೈ ಶ್ರೀರಾಮನೆ, ನೀನು ಎಲ್ಲಾ ಲೋಕಗಳಿಗೂ ಕರ್ತೃವಾಗಿರುವೆ. ಸಾಕ್ಷಿಯೂ ವಿಜ್ಞಾನ ಸ್ವರೂಪನೂ ಆಗಿರುವೆ. ವಸುದೇವತೆಗಳಲ್ಲಿ ನೀನು ಎಂಟನೆಯವನಾಗಿರುವೆ. ರುದ್ರರಲ್ಲಿ ಶಂಕರನಾಗಿರುವೆ. ಲೋಕಗಳ ಆದಿಕರ್ತೃವೂ ನೀನೇ ; ಚತುರ್ಮುಖಬ್ರಹ್ಮನೂ ನೀನೇ. ಅಶ್ವಿನೀದೇವತೆಗಳು ನಿನ್ನ ಮೂಗುಗಳಾಗಿರುವರು. ಸೂರ್ಯಚಂದ್ರರೇ ನಿನ್ನ ಕಣ್ಣುಗಳಾಗಿರುವರು. ಲೋಕಗಳ

ತುದಿಗಳೂ ನೀನಾಗಿರುವೆ. ನಿತ್ಯನೂ ಏಕನೂ ಯಾವಾಗಲೂ ಎಚ್ಚತ್ತಿರುವವನೂ ಸದಾ ಶುದ್ಧನೂ ಬುದ್ಧನೂ ಮುಕ್ತನೂ ನಿರ್ಗುಣನೂ ಅದ್ವಿತೀಯನೂ ಆಗಿರುವೆ.

**ತ್ವನ್ಮಾಯಾಸಂವೃತಾನಾಂ ತ್ವಂ ಭಾಸಿ ಮಾನುಷವಿಗ್ರಹಃ ।**
**ತ್ವನ್ನಾಮ ಸ್ಮರತಾಂ ರಾಮ ಸದಾ ಭಾಸಿ ಚಿದಾತ್ಮಕಃ ॥ ೭ ॥**
**ರಾವಣೇನ ಹೃತಂ ಸ್ಥಾನಮಸ್ಮಾಕಂ ತೇಜಸಾ ಸಹ ।**
**ತ್ವಯಾದ್ಯ ನಿಹತೋ ದುಷ್ಟಃ ಪುನಃ ಪ್ರಾಪ್ತಂ ಪದಂ ಸ್ವಕಮ್ ॥ ೮ ॥**
**ಏವಂ ಸ್ತುವತ್ಸು ದೇವೇಷು ಬ್ರಹ್ಮಾ ಸಾಕ್ಷಾತ್ ಪಿತಾಮಹಃ ।**
**ಅಬ್ರವೀತ್ ಪ್ರಣತೋ ಭೂತ್ವಾ ರಾಮಂ ಸತ್ಯಪಥೇ ಸ್ಥಿತಮ್ ॥ ೯ ॥**

೭-೯. ನಿನ್ನ ಮಾಯೆಯಿಂದ ಆವರಿಸಲ್ಪಟ್ಟಿರುವವರಿಗೆ ನೀನು ಮನುಷ್ಯಾಕಾರನಾಗಿ ಕಂಡುಬರುತ್ತಿರುವೆ. ನಿನ್ನ ನಾಮವನ್ನು ನೆನೆಯುವವರಿಗೆ ಯಾವಾಗಲೂ ಚಿದಾತ್ಮಕನಾಗಿ ತೋರಿಕೊಳ್ಳುವೆ. ನಮ್ಮ ಸ್ಥಾನಗಳೂ ಪ್ರಭಾವವೂ ಈವರೆಗೂ ರಾವಣನಿಂದ ಅಪಹರಿಸಲ್ಪಟ್ಟಿದ್ದವು. ಆ ದುಷ್ಟನು ಈಗ ನಿನ್ನಿಂದ ಕೊಲ್ಲಲ್ಪಟ್ಟಿರುವನು. ಆದ್ದರಿಂದ ನಮ್ಮ ಜಾಗಗಳನ್ನು ನಾವು ಮತ್ತೆ ಪಡೆದು ಕೊಂಡೆವು.'' ಈ ರೀತಿಯಾಗಿ ದೇವತೆಗಳು ಸ್ತುತಿಸುತ್ತಿರಲಾಗಿ ಪಿತಾಮಹನಾದ ಬ್ರಹ್ಮನು ತಾನೇ ಸ್ವತಃ ಬಂದವನಾಗಿ ಸತ್ಯಮಾರ್ಗದಲ್ಲಿ ನೆಲೆ ಗೊಂಡಿದ್ದ ರಾಮನನ್ನು ನಮಸ್ಕರಿಸಿ ಹೀಗೆಂದು (ಸ್ತೋತ್ರಮಾಡಿದನು).

**ಬ್ರಹ್ಮೋವಾಚ-**

**ವಂದೇ ದೇವಂ ವಿಷ್ಣುಮಶೇಷಸ್ಥಿತಿಹೇತುಂ ।**
**ತ್ವಾಮಧ್ಯಾತ್ಮಜ್ಞಾನಿಭಿರಂತರ್ಹೃದಿ ಭಾವ್ಯಮ್ ।**
**ಹೇಯಾಹೇಯದ್ವಂದ್ವವಿಹೀನಂ ಪರಮೇಕಂ**
**ಸತ್ತಾಮಾತ್ರಂ ಸರ್ವಹೃದಿಸ್ಥಂ ದೃಶಿರೂಪಮ್ ॥ ೧೦ ॥**
**ಪ್ರಾಣಾಪಾನೌ ನಿಶ್ಚಯಬುದ್ಧ್ಯಾ ಹೃದಿ ರುದ್ಧ್ವಾ**
**ಛಿತ್ವಾ ಸರ್ವಂ ಸಂಶಯಬಂಧಂ ವಿಷಯೌಘಾನ್ ।**
**ಪಶ್ಯಂತೀಶಂ ಯಂ ಗತಮೋಹಾ ಯತಯಸ್ತಂ**
**ವಂದೇ ರಾಮಂ ರತ್ನಕಿರೀಟಂ ರವಿಭಾಸಮ್ ॥ ೧೧ ॥**

೧೦-೧೧. ಬ್ರಹ್ಮದೇವನಿಂತೆಂದನು : ಸಮಸ್ತ (ಭೂತಗಳ) ಸ್ಥಿತಿಗೆ ಕಾರಣನೂ ಅಧ್ಯಾತ್ಮಜ್ಞಾನಿಗಳಿಂದ ಹೃದಯದಲ್ಲಿ ಒಳಗೆ ಚಿಂತಿಸಲ್ಪಡುವವನೂ ಬೇಕು-ಬೇಡಗಳೆಂಬ ದ್ವಂದ್ವವಿಲ್ಲದವನೂ ಏಕನೂ ಪರಮನೂ ಆದ ದೇವನನ್ನು ನಾನು ನಮಸ್ಕರಿಸುವೆನು. ಸಾಧಕರಾದವರು (ಯೋಗಬಲದಿಂದ) ಪ್ರಾಣಾಪಾನ

ವಾಯುಗಳನ್ನು ನಿಶ್ಚಯರೂಪ ವಾದ ಬುದ್ಧಿಯಿಂದ ಹೃದಯದಲ್ಲಿ ತಡೆದಿಟ್ಟವರಾಗಿ ವಿಷಯಗಳ ಸಮೂಹದಿಂದ ಹಿಮ್ಮೆಟ್ಟಿ ಸಂಶಯಗಳ ಪಾಶವನ್ನು ಕತ್ತರಿಸಿಹಾಕಿ ಮೋಹವಿಲ್ಲದವರಾಗಿ ಯಾವ ಈಶನನ್ನು ಕಂಡುಕೊಳ್ಳುವರೋ ಅಂಥ ಸೂರ್ಯ ಸಮಾನಕಾಂತಿಯುಳ್ಳ ರತ್ನಮಯಕಿರೀಟಧಾರಿ ಯಾದ ರಾಮನನ್ನು ನಮಸ್ಕರಿಸುವೆನು.

**ಮಾಯಾತೀತಂ ಮಾಧವಮಾದ್ಯಂ ಜಗದಾದಿಂ**
**ಮಾನಾತೀತಂ ಮೋಹವಿನಾಶಂ ಮುನಿವಂದ್ಯಮ್ ।**
**ಯೋಗಿಧ್ಯೇಯಂ ಯೋಗವಿಧಾನಂ ಪರಿಪೂರ್ಣಂ**
**ವಂದೇ ರಾಮಂ ರಂಜಿತಲೋಕಂ ರಮಣೀಯಮ್ ॥ ೧೨ ॥**
**ಭಾವಾಭಾವಪ್ರತ್ಯಯಹೀನಂ ಭವಮುಖ್ಯೈಃ**
**ಯೋಗಾಸಕ್ತೈರರ್ಚಿತಪಾದಾಂಬುಜಯುಗ್ಮಮ್ ।**
**ನಿತ್ಯಂ ಶುದ್ಧಂ ಬುದ್ಧಮನಂತಂ ಪ್ರಣವಾಖ್ಯಂ**
**ವಂದೇ ರಾಮಂ ವೀರಮಶೇಷಾಸುರದಾವಮ್ ॥ ೧೩ ॥**

೧೨-೧೩. ಮಾಯೆಯಿಂದಾಚೆಯಿರುವವನಾದ, ಲಕ್ಷ್ಮೀಪತಿಯೂ ಆದ್ಯನೂ ಜಗತ್ಕಾರಣನೂ ಆದ, ಪ್ರಮಾಣಗಳಿಗೆ ನಿಲುಕದ, ಮೋಹವನ್ನು ಕಳೆಯುವ, ಋಷಿಗಳಿಂದ ನಮಸ್ಕೃತನಾದ, ಯೋಗಿಗಳಿಂದ ಚಿಂತಿಸಲ್ಪಡುವವನಾದ, ಯೋಗರೂಪನಾದ ಪರಿಪೂರ್ಣನಾದ ರಮಣೀಯಾಕಾರನೂ ಲೋಕಗಳನ್ನು ರಂಜಿಸುವವನೂ ಆದ ರಾಮನನ್ನು ನಮಸ್ಕರಿಸುವೆನು. ಇದೆ, ಇಲ್ಲ- ಎಂಬ ಪ್ರತ್ಯಯಗಳಿಗೂ ಮಿಗಿಲಾದವನಾದ, ಯೋಗಾಸಕ್ತರಾದ ಪರಮೇಶ್ವರನೇ ಮುಂತಾದವರಿಂದ ಪೂಜಿಸಲ್ಪಟ್ಟ ಪಾದದ್ವಯಗಳುಳ್ಳ, ನಿತ್ಯನೂ, ಶುದ್ಧನೂ, ಬುದ್ಧನೂ, ಅನಂತನೂ ಆದ ಓಂಕಾರನೆಂಬ ನಾಮಧೇಯನಾದ ವೀರನಾದ ಮತ್ತು ಸಮಸ್ತರಾಕ್ಷಸರೆಂಬ (ಕಾಡಿಗೆ) ಕಾಡುಗಿಚ್ಚಾಗಿರುವ ರಾಮನನ್ನು ನಮಸ್ಕರಿಸುವೆನು.

**ತ್ವಂ ಮೇ ನಾಥೋ ನಾಥಿತಕಾರ್ಯಾಖಿಲಕಾರೀ**
**ಮಾನಾತೀತೋ ಮಾಧವರೂಪೋಽಖಿಲಧಾರೀ ।**
**ಭಕ್ತ್ಯಾ ಗಮ್ಯೋ ಭಾವಿತರೂಪೋ ಭವಹಾರೀ**
**ಯೋಗಾಭ್ಯಾಸೈರ್ಭಾವಿತಚೇತಃಸಹಚಾರೀ ॥ ೧೪ ॥**
**ತ್ವಾಮಾದ್ಯಂತಂ ಲೋಕತತೀನಾಂ ಪರಮೇಶಂ**
**ಲೋಕಾನಾಂ ನೋ ಲೌಕಿಕಮಾನೈರಧಿಗಮ್ಯಮ್ ।**
**ಭಕ್ತಿಶ್ರದ್ಧಾಭಾವಸಮೇತೈರ್ಭಜನೀಯಂ**
**ವಂದೇ ರಾಮಂ ಸುಂದರಮಿಂದೀವರನೀಲಮ್ ॥ ೧೫ ॥**

೧೪-೧೫. ಬೇಡಿಕೊಂಡ ಎಲ್ಲಾ ಕೆಲಸಗಳನ್ನೂ ನೆರವೇರಿಸಿಕೊಡುವವನಾದ, ಅಪ್ರಮೇಯನಾದ ಮಾಧವನಾದ ಅಖಿಲರೂಪಗಳನ್ನೂ ಧರಿಸಿರುವ, ಭಾವನೆಗೆ ತಕ್ಕ ರೂಪವನ್ನು ಧರಿಸಿ ಭಕ್ತಿಯುಳ್ಳವರಿಗೆ ಗೋಚರನಾಗುವ, ಸಂಸಾರ (ದುಃಖ)ನಾಶಕನಾದ ಹಾಗೂ ಯೋಗಾಭ್ಯಾಸಿಗಳಿಂದ ಚಿಂತನಮಾಡಲ್ಪಡುವ, ಅಂತಃಕರಣದೊಡನೆಯೇ ಇದ್ದುಕೊಂಡಿರುವವನಾದ ಎಲೈ (ರಾಮನೆ,) ನೀನೇ ನನಗೆ ಒಡೆಯನು. ಲೋಕಗಳ ಸಾಲುಗಳಿಗೆಲ್ಲ ಮೊದಲೂ ಕೊನೆಯೂ ಆಗಿರುವ ಪರಮೇಶನಾದ, ಭಕ್ತಿಶ್ರದ್ಧೆಭಾವನೆಗಳಿಂದೊಡಗೂಡಿದವರಿಂದ ಭಜನೀಯನಾದ ನೀನು (ಪೂಜ್ಯನು). ಇಂಥ ಕನ್ನೈದಿಲೆಯಂತೆ ನೀಲವರ್ಣನಾದ ಸುಂದರನಾದ ರಾಮನನ್ನು ನಮಸ್ಕರಿಸುವೆನು.

**ಕೋ ವಾ ಜ್ಞಾತುಂ ತ್ವಾಮತಿಮಾನಂ ಗತಮಾನಂ**
**ಮಾಯಾಸಕ್ತೋ ಮಾಧವ ಶಕ್ತೋ ಮುನಿಮಾನ್ಯಮ್ ।**
**ವೃಂದಾರಣ್ಯೇ ವಂದಿತಬೃಂದಾರಕವೃಂದಂ**
**ವಂದೇ ರಾಮಂ ಭವಮುಖವಂದ್ಯಂ ಸುಖಕಂದಮ್ ॥ ೧೬ ॥**
**ನಾನಾಶಾಸ್ತ್ರೈರ್ವೇದಕದಂಬೈಃ ಪ್ರತಿಪಾದ್ಯಂ**
**ನಿತ್ಯಾನಂದಂ ನಿರ್ವಿಷಯಜ್ಞಾನಮನಾದಿಮ್ ।**
**ಮತ್ಸೇವಾರ್ಥಂ ಮಾನುಷಭಾವಂ ಪ್ರತಿಪನ್ನಂ**
**ವಂದೇ ರಾಮಂ ಮರಕತವರ್ಣಂ ಮಥುರೇಶಮ್ ॥ ೧೭ ॥**
**ಶ್ರದ್ಧಾಯುಕ್ತೋ ಯಃ ಪಠತೀಮಂ ಸ್ತವಮಾದ್ಯಂ**
**ಬ್ರಾಹ್ಮಂ ಬ್ರಹ್ಮಜ್ಞಾನವಿಧಾನಂ ಭುವಿ ಮರ್ತ್ಯಃ ।**
**ರಾಮಂ ಶ್ಯಾಮಂ ಕಾಮಿತಕಾಮಪ್ರದಮೀಶಂ**
**ಧ್ಯಾತ್ವಾ ಧ್ಯಾತಾ ಪಾತಕಜಾಲೈರ್ವಿಗತಃ ಸ್ಯಾತ್ ॥ ೧೮ ॥**

೧೬-೧೮. ಎಲೈ ಮಾಧವನೆ, ಪ್ರಮಾಣಗಳಿಗೆ ನಿಲುಕದವನೂ ಅವುಗಳನ್ನು ಮೀರಿದವನೂ ಆದ ಮುನಿಸೇವಿತನಾದ, (ಜಗತ್ತನ್ನು) ಆಳುವ ಸಮರ್ಥನಾದ ಮತ್ತು ದೇವವನದಲ್ಲಿ ದೇವತೆಗಳ ಸಮೂಹದಿಂದ ನಮಸ್ಕರಿಸಲ್ಪಡುವ ಈಶ್ವರನೇ ಮೊದಲಾದವರಿಂದ ವಂದಿತನಾದ, ಸುಖಕ್ಕೆಲ್ಲ ಮೂಲನಾದ ನಿನ್ನನ್ನು ಮಾಯೆಯಿಂದ ಸೆಳೆಯಲ್ಪಟ್ಟ ಯಾವನು ತಾನೆ ತಿಳಿಯಬಲ್ಲನು ? ಅನೇಕಶಾಸ್ತ್ರಗಳಿಂದಲೂ ವೇದಗಳ ಸಮೂಹದಿಂದಲೂ ಪ್ರತಿಪಾದ್ಯನಾದ ನಿತ್ಯಾನಂದರೂಪನಾದ ನಿರ್ವಿಷಯ ಜ್ಞಾನನೆನಿಸಿರುವ, ಅನಾದಿಯಾದ, ಮತ್ತು ನನ್ನ ಸೇವೆಯನ್ನು ಸ್ವೀಕರಿಸುವದಕ್ಕಾಗಿ ಮನುಷ್ಯಭಾವವನ್ನು ಹೊಂದಿರುವ ಮರತಕವೆಂಬ ರತ್ನದಂತೆ (ನೀಲವರ್ಣನಾದ),

ಮಥುರಾನಾಯಕನಾದ ರಾಮನನ್ನು ನಮಸ್ಕರಿಸುವೆನು. ಭೂಲೋಕದಲ್ಲಿ ಮನುಷ್ಯನಾದ ಯಾವನು ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ ಈ ಆದ್ಯವೂ ಬ್ರಹ್ಮಪ್ರೋಕ್ತವೂ ಬ್ರಹ್ಮಜ್ಞಾನವನ್ನು ತಿಳಿಸತಕ್ಕದ್ದೂ ಆಗಿರುವ ಸ್ತೋತ್ರವನ್ನು ಶ್ರದ್ಧಾಯುಕ್ತನಾಗಿ ಪಠಿಸುವನೋ ಅವನು ನೀಲವರ್ಣನಾದ, ಇಷ್ಟಾರ್ಥಗಳನ್ನು ಕೊಡುವ, ಈಶನಾದ, ರಾಮನನ್ನು ಚಿಂತಿಸುತ್ತಾ ಪಾಪಗಳ ಸಮೂಹದಿಂದ ಬಿಡಲ್ಪಡುವನಾಗುವನು.

**ಶ್ರುತ್ವಾ ಸ್ತುತಿಂ ಲೋಕಗುರೋರ್ವಿಭಾವಸುಃ**
**ಸ್ವಾಂಕೇ ಸಮಾಧಾಯ ವಿದೇಹಪುತ್ರಿಕಾಮ್ ।**
**ವಿಭ್ರಾಜಮಾನಾಂ ವಿಮಲಾರುಣದ್ಯುತಿಂ**
**ರಕ್ತಾಂಬರಾಂ ದಿವ್ಯವಿಭೂಷಣಾನ್ವಿತಾಮ್** ॥ ೧೯ ॥
**ಪ್ರೋವಾಚ ಸಾಕ್ಷೀ ಜಗತಾಂ ರಘೂತ್ತಮಂ**
**ಪ್ರಸನ್ನಸರ್ವಾರ್ತಿಹರಂ ಹುತಾಶನಃ ।**
**ಗೃಹಾಣ ದೇವೀಂ ರಘುನಾಥ ಜಾನಕೀಂ**
**ಪುರಾ ತ್ವಯಾ ಮಯ್ಯವರೋಪಿತಾಂ ವನೇ** ॥ ೨೦ ॥
**ವಿಧಾಯ ಮಾಯಾಜನಕಾತ್ಮಜಾಂ ಹರೇ**
**ದಶಾನನಪ್ರಾಣವಿನಾಶನಾಯ ಚ ।**
**ಹತೋ ದಶಾಸ್ಯಃ ಸಹ ಪುತ್ರಬಾಂಧವೈಃ**
**ನಿರಾಕೃತೋಽನೇನ ಭರೋ ಭುವಃ ಪ್ರಭೋ** ॥ ೨೧ ॥

೧೯-೨೧. ಅಗ್ನಿದೇವನು ಲೋಕಪೂಜ್ಯನಾದ ಬ್ರಹ್ಮನ ಸ್ತೋತ್ರವನ್ನು ಕೇಳಿ ವಿದೇಹಪುತ್ರಿಯಾದ ಸೀತೆಯನ್ನು ತನ್ನ ತೊಡೆಗಳಲ್ಲಿ ಧರಿಸಿಕೊಂಡು ಬಂದನು. ಆಕೆಯು ಪ್ರಕಾಶಮಾನಳಾಗಿ ವಿಮಲವಾದ ಅರುಣೋದಯದ ಕಾಂತಿಯನ್ನು ಹೊಂದಿದವಳೂ ಕೆಂಪಾದ ವಸ್ತ್ರವನ್ನು ಧರಿಸಿದವಳೂ ದಿವ್ಯವಾದ ಒಡವೆಗಳನ್ನು ತೊಟ್ಟವಳೂ ಆಗಿದ್ದಳು. ಜಗತ್ತಿನಲ್ಲಿರುವ ಪ್ರಾಣಿಗಳ ಕರ್ಮಗಳಿಗೆಲ್ಲ ಸಾಕ್ಷಿಯಾದ ಅಗ್ನಿದೇವನು ಶರಣಾಗತ ರಾದವರ ದುಃಖಗಳನ್ನು ಪರಿಹಾರಮಾಡುವವನೂ ರಘುಶ್ರೇಷ್ಠನೂ ಆದ ಶ್ರೀರಾಮನನ್ನು ಕುರಿತು ''ಎಲೈ ರಘುನಾಥನೆ, ಹಿಂದೆ ನೀನು ವನದಲ್ಲಿ ನನ್ನಲ್ಲಿ ಮುಡಿಪಾಗಿಟ್ಟಿದ್ದ ಸೀತೆಯನ್ನು ಸ್ವೀಕರಿಸುವವನಾಗು ; ಶ್ರೀಹರಿಯೆ, ನೀನು ರಾವಣನ ಪ್ರಾಣವಿನಾಶಕ್ಕಾಗಿ ಮಾಯಾಸೀತೆಯನ್ನು ಆಗ ಸೃಷ್ಟಿಸಿದ್ದೆಯಲ್ಲವೆ ? ಈಗ ಪುತ್ರಬಂಧುವರ್ಗದೊಡನೆ ರಾವಣನು ಹತನಾದನು. ಇದರಿಂದ ಭೂಭಾರವು ಕಳೆಯಲ್ಪಟ್ಟಿತು.

**ತಿರೋಹಿತಾ ಸಾ ಪ್ರತಿಬಿಂಬರೂಪಿಣೀ**
**ಕೃತಾ ಯದರ್ಥಂ ಕೃತಕೃತ್ಯತಾಂ ಗತಾ ।**
**ತತೋಽತಿಹೃಷ್ಟಾಂ ಪರಿಗೃಹ್ಯ ಜಾನಕೀಂ**
**ರಾಮಃ ಪ್ರಹೃಷ್ಟಃ ಪ್ರತಿಪೂಜ್ಯ ಪಾವಕಮ್** ॥ ೨೨ ॥
**ಸ್ವಾಂಕೇ ಸಮಾವೇಶ್ಯ ಸದಾನಪಾಯಿನೀಂ**
**ಶ್ರಿಯಂ ತ್ರಿಲೋಕೀಜನನೀಂ ಶ್ರಿಯಃ ಪತಿಃ ।**
**ದೃಷ್ಟ್ವಾಽಥ ರಾಮಂ ಜನಕಾತ್ಮಜಾಯುತಂ**
**ಶ್ರಿಯಾ ಸ್ಫುರಂತಂ ಸುರನಾಯಕೋ ಮುದಾ ।**
**ಭಕ್ತ್ಯಾ ಗಿರಾ ಗದ್ಗದಯಾ ಸಮೇತ್ಯ**
**ಕೃತಾಂಜಲಿಃ ಸ್ತೋತುಮಥೋಪಚಕ್ರಮೇ** ॥ ೨೩ ॥

೨೨-೨೩. ಪ್ರತಿಬಿಂಬರೂಪಳಾದ (ಸೀತೆಯು) ಈಗ ಕಣ್ಮರೆಯಾದಳು. ಆಕೆಯು ಯಾವ ಕಾರ್ಯಸಾಧನೆಗಾಗಿ ಸೃಷ್ಟಿಸಲ್ಪಟ್ಟಿದ್ದಳೋ ಅದು ನೆರವೇರಿ ಕೃತಕೃತ್ಯಳಾದಳು.'' (ಹೀಗೆನ್ನಲು) ಸಂತುಷ್ಟನಾದ ರಾಮನು ಅಗ್ನಿಯನ್ನು ಗೌರವಿಸಿದವನಾಗಿ ಸಂತೋಷಯುಕ್ತಳಾದ ಸೀತೆಯನ್ನು ಯಾವಾಗಲೂ ತನ್ನನ್ನು ಬಿಟ್ಟಗಲದೆ ಇರುವ ತ್ರಿಲೋಕಮಾತೆಯಾದ ಲಕ್ಷ್ಮೀರೂಪಳಾದ ದೇವಿಯನ್ನು ಲಕ್ಷ್ಮೀರಮಣನಾದ ರಾಮನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಹೀಗೆ ಸೀತಾಸಮೇತನಾಗಿರುವ, ಸಂಪದ್ಯುಕ್ತನಾದ ರಾಮನನ್ನು ದೇವನಾಯಕನಾದ ಇಂದ್ರನು ಕಂಡು ಸಂತೋಷಪಟ್ಟವನಾಗಿ ಅಲ್ಲಿಗೆ ಬಂದು ಗದ್ಗದವಾದ ಮಾತುಗಳಿಂದ ಭಕ್ತಿಯುಕ್ತನಾಗಿ ಕೈಗಳನ್ನು ಮುಗಿದು ಕೊಂಡು ಸ್ತೋತ್ರಮಾಡಲಾರಂಭಿಸಿದನು.

**ಇಂದ್ರ ಉವಾಚ-**

**ಭಜೇಽಹಂ ಸದಾ ರಾಮಮಿಂದೀವರಾಭಂ**
**ಭವಾರಣ್ಯದಾವಾನಲಾಭಾಭಿಧಾನಮ್ ।**
**ಭವಾನೀಹೃದಾ ಭಾವಿತಾನಂದರೂಪಂ**
**ಭವಾಭಾವಹೇತುಂ ಭವಾದಿಪ್ರಪನ್ನಮ್** ॥ ೨೪ ॥
**ಸುರಾನೀಕದುಃಖೌಘನಾಶೈಕಹೇತುಂ**
**ನರಾಕಾರದೇಹಂ ನಿರಾಕಾರಮೀಡ್ಯಮ್ ।**
**ಪರೇಶಂ ಪರಾನಂದರೂಪಂ ವರೇಣ್ಯಂ**
**ಹರಿಂ ರಾಮಮೀಶಂ ಭಜೇ ಭಾರನಾಶಮ್** ॥ ೨೫ ॥

೨೪-೨೫. ಇಂದ್ರನಿಂತೆಂದನು : ನೈದಿಲೆಯಂತೆ ಕಾಂತಿಯುಳ್ಳ ಹಾಗೂ ಸಂಸಾರವೆಂಬ ಗೊಂಡಾರಣ್ಯಕ್ಕೆ ಕಾಡುಗಿಚ್ಚಿನಂತಿರುವ ನಾಮಧೇಯವುಳ್ಳ, ಯಾವಾಗಲೂ ಪಾರ್ವತಿಯ ಹೃದಯದಲ್ಲಿ ಚಿಂತಿಸಲ್ಪಡುವ ಆನಂದರೂಪನಾದ, ಸಂಸಾರವನ್ನು ಇಲ್ಲಗೊಳಿಸುವ, ಮಹಾದೇವನೇ ಮುಂತಾದವರೆಲ್ಲರೂ ಆಶ್ರಯಿಸಿರುವ ರಾಮನನ್ನು ನಾನು ಭಜಿಸುವೆನು. ದೇವತೆಗಳ ಗುಂಪಿನ ದುಃಖವನ್ನು ಕಳೆಯುವ ಮುಖ್ಯಕಾರಣನಾದ, ಮನುಷ್ಯಾಕಾರನಾಗಿ ತೋರಿಕೊಂಡಿರುವ, ಆದರೆ ನಿರಾಕಾರನಾದ, ಸ್ತುತ್ಯನಾದ, ಪರಮಾನಂದರೂಪನೂ ಪರಮೇಶ್ವರನೂ ಆದ, ಶ್ರೇಷ್ಠನೂ ಪಾಪಹರ್ತನೂ ಭೂಭಾರವನ್ನು ಹರಣಮಾಡುವವನೂ ಆದ ಈಶನಾದ ರಾಮನನ್ನು ಭಜಿಸುವೆನು.

**ಪ್ರಪನ್ನಾಖಿಲಾನಂದದೋಹಂ ಪ್ರಪನ್ನಂ**
**ಪ್ರಪನ್ನಾರ್ತಿನಿಃಶೇಷನಾಶಾಭಿಧಾನಮ್ ।**
**ತಪೋಯೋಗಯೋಗೀಶಭಾವಾಭಿಭಾವ್ಯಂ**
**ಕಪೀಶಾದಿಮಿತ್ರಂ ಭಜೇ ರಾಮಮಿತ್ರಮ್ ॥ ೨೬ ॥**
**ಸದಾ ಭೋಗಭಾಜಾಂ ಸುದೂರೇ ವಿಭಾಂತಂ**
**ಸದಾ ಯೋಗಭಾಜಾಮದೂರೇ ವಿಭಾಂತಮ್ ।**
**ಚಿದಾನಂದಕಂದಂ ಸದಾ ರಾಘವೇಶಂ**
**ವಿದೇಹಾತ್ಮಜಾನಂದರೂಪಂ ಪ್ರಪದ್ಯೇ ॥ ೨೭ ॥**

೨೬-೨೭. ಶರಣಾಗತರಾದವರಿಗೆ ಆನಂದವನ್ನು ಹಾಲುಗರೆಯುವ ಹಾಗೂ ಅಂಥವರ ದುಃಖವನ್ನು ಸಮೂಲವಾಗಿ ನಾಶಗೊಳಿಸುವ, ತಪಸ್ವಿಗಳು, ಯೋಗಿಗಳು, ಯೋಗೀಶ್ವರರುಗಳ ಹೃದಯದಲ್ಲಿ ಪ್ರಕಟನಾಗಿರುವ, ಸುಗ್ರೀವನೇ ಮುಂತಾದವರ ಸ್ನೇಹಿತನಾದ ರಾಮನೆಂಬ ಸಖನನ್ನು ಭಜಿಸುವೆನು. ಯಾವಾಗಲೂ ಭೋಗಾಸಕ್ತರಿಗೆ ಬಹುದೂರದಲ್ಲಿರುವನಾದ, ಯೋಗಾಸಕ್ತರಿಗೆ ಹತ್ತಿರದಲ್ಲಿಯೇ ಕಂಡುಬರುವನಾದ, ಚಿದಾನಂದಮೂಲನಾದ ಹಾಗೂ ಸೀತಾದೇವಿಗೆ ಆನಂದವನ್ನುಂಟುಮಾಡುವವನಾದ ರಾಘವೇಶನನ್ನು ಶರಣುಹೊಂದುತ್ತೇನೆ.

**ಮಹಾಯೋಗಮಾಯಾವಿಶೇಷಾನುಯುಕ್ತೋ**
**ವಿಭಾಸೀಶ ಲೀಲಾನರಾಕಾರವೃತ್ತಿಃ ।**
**ತ್ವದಾನಂದಲೀಲಾಕಥಾಪೂರ್ಣಕರ್ಣಾಃ**
**ಸದಾನಂದರೂಪಾ ಭವಂತೀಹ ಲೋಕೇ ॥ ೨೮ ॥**

**ಅಹಂ ಮಾನಪಾನಾಭಿಮತ್ತಪ್ರಮತ್ತೋ**
**ನ ವೇದಾಖಿಲೇಶಾಭಿಮಾನಾಭಿಮಾನಃ ।**
**ಇದಾನೀಂ ಭವತ್ಪಾದಪದ್ಮಪ್ರಸಾದಾತ್**
**ತ್ರಿಲೋಕಾಧಿಪತ್ಯಾಭಿಮಾನೋ ವಿನಷ್ಟಃ ॥ ೨೯ ॥**

೨೮-೨೯. ಎಲೈ ಈಶನೆ, ನೀನು ಮಹಾಯೋಗಮಾಯೆಯಿಂದ ಕೂಡಿದವನಾಗಿ ಲೀಲಾಮಾನುಷರೂಪವನ್ನು ಧರಿಸಿ ನಟಿಸುವವನಾಗಿರುವೆ. ನಿನ್ನ ರಮಣೀಯವಾದ ಲೀಲಾಕಥಾವಿನೋದಗಳಿಂದ ತುಂಬಿದ ಕಿವಿಗಳುಳ್ಳ (ಭಕ್ತರು) ಈ ಲೋಕದಲ್ಲಿ ಯಾವಾಗಲೂ ಸದಾನಂದಸ್ವರೂಪರಾಗಿರುವರು. ನಾನಾದರೊ, ಅಭಿಮಾನವೆಂಬ (ರಸ) ಪಾನದಿಂದ ಮತ್ತನಾಗಿ ಮೈಮರೆತು ಎಲ್ಲಕ್ಕೂ ನಾನೇ ಒಡೆಯನೆಂಬ ಹೆಮ್ಮೆಯಿಂದ ಏನನ್ನೂ ಅರಿಯದವನಾಗಿರುವೆನು. ಈಗಲಾದರೊ, ನಿನ್ನ ಪಾದಪದ್ಮಗಳ ಅನುಗ್ರಹದಿಂದ ನಾನು ತ್ರಿಲೋಕಾಧಿಪತಿಯೆಂಬ ಅಹಂಕಾರವು ಅಳಿಸಿಹೋಯಿತು.

**ಸ್ಫುರದ್ರತ್ನಕೇಯೂರಹಾರಾಭಿರಾಮಂ**
**ಧರಾಭಾರಭೂತಾಸುರಾನೀಕದಾವಮ್ ।**
**ಶರಚ್ಚಂದ್ರವಕ್ತ್ರಂ ಲಸತ್ಪದ್ಮನೇತ್ರಂ**
**ದುರಾವಾರಪಾರಂ ಭಜೇ ರಾಘವೇಶಮ್ ॥ ೩೦ ॥**
**ಸುರಾಧೀಶನೀಲಾಭ್ರನೀಲಾಂಗಕಾಂತಿಂ**
**ವಿರಾಧಾದಿರಕ್ಷೋವಧಾಲ್ಲೋಕಶಾಂತಿಮ್ ।**
**ಕಿರೀಟಾದಿಶೋಭಂ ಪುರಾರಾತಿಲಾಭಂ**
**ಭಜೇ ರಾಮಚಂದ್ರಂ ರಘೂಣಾಮಧೀಶಮ್ ॥ ೩೧ ॥**

೩೦-೩೧. ಹೊಳೆಯುತ್ತಿರುವ ವಜ್ರಗಳುಳ್ಳ ತೋಳುಬಂದಿಗಳು, ಕಂಠಹಾರಗಳಿಂದ ವಿರಾಜಮಾನನಾದ, ಭೂಮಿಗೆ ಹೊರೆಯಾದಂಥ ರಾಕ್ಷಸರ ಸಮೂಹವನ್ನು ಸುಡುವ ದಾವಾಗ್ನಿಯಾದ, ಮತ್ತು ಶರತ್ಕಾಲದ ಚಂದ್ರನಂತೆ ಕಾಂತಿಮಯವಾದ ಮುಖವುಳ್ಳ ಪದ್ಮದಂತೆ ವಿರಾಜಮಾನವಾದ ಕಣ್ಣುಗಳುಳ್ಳ ಮುಟ್ಟಲು ದುಸ್ಸಾಧ್ಯವಾದ ದಡವುಳ್ಳ ರಾಘವೇಶನನ್ನು ವಂದಿಸುವೆನು. ದೇವರಾಜನಾದ (ಇಂದ್ರ)ನಂತೆ ಹಾಗೂ ನೀಲವಾದ ಮೇಘದಂತೆ ಶರೀರಕಾಂತಿಯುಳ್ಳವನಾದ ಮತ್ತು ವಿರಾಧನೇ ಮೊದಲಾದ ರಾಕ್ಷಸರನ್ನು ಕೊಂದು ಲೋಕಶಾಂತಿಯನ್ನುಂಟು ಮಾಡಿರುವ ಕಿರೀಟಾದ್ಯಾಭರಣಗಳಿಂದ ಹೊಳೆಯುತ್ತಿರುವ, ಮಹೇಶ್ವರನಿಗೆ ಲಾಭಕರವಾದ ಪದಾರ್ಥವೆನಿಸಿರುವ, ರಘುಕುಲದವರಿಗೆಲ್ಲ ಒಡೆಯನಾದ ರಾಮನನ್ನು ಭಜಿಸುವೆನು.

**ಲಸಚ್ಚಂದ್ರಕೋಟಿಪ್ರಕಾಶಾದಿಪೀಠೇ**
**ಸಮಾಸೀನಮಂಕೇ ಸಮಾಧಾಯ ಸೀತಾಮ್ ।**
**ಸ್ಫುರದ್ಧೇಮವರ್ಣಾಂ ತಡಿತ್ಪುಂಜಭಾಸಾಂ**
**ಭಜೇ ರಾಮಚಂದ್ರಂ ನಿವೃತ್ತಾರ್ತಿಚಂದ್ರಮ್ ॥ ೩೨ ॥**

೩೨. ಕೋಟಿಚಂದ್ರಕಾಂತಿಯುಕ್ತವಾದ ಆದಿಪೀಠದಲ್ಲಿ ಕುಳಿತು ತೊಡೆಯ ಮೇಲೆ ಚಿನ್ನದಂತೆ ಕಾಂತಿಯುಳ್ಳ ಹಾಗೂ ಮಿಂಚಿನಂತೆ ಶೋಭಿಸುವ ಸೀತೆಯನ್ನು ಕುಳ್ಳಿರಿಸಿಕೊಂಡಿರುವ, ದುಃಖಗಳನ್ನೆಲ್ಲ ದಾಟಿರುವ ಆಹ್ಲಾದಮಯನಾದ ರಾಮಚಂದ್ರನನ್ನು ನಾನು ಭಜಿಸುವೆನು.

**ತತಃ ಪ್ರೋವಾಚ ಭಗವಾನ್ ಭವಾನ್ಯಾ ಸಹಿತೋ ಭವಃ ।**
**ರಾಮಂ ಕಮಲಪತ್ರಾಕ್ಷಂ ವಿಮಾನಸ್ಥೋ ನಭಃಸ್ಥಲೇ ॥ ೩೩ ॥**
**ಆಗಮಿಷ್ಯಾಮ್ಯಯೋಧ್ಯಾಯಾಂ ದ್ರಷ್ಟುಂ ತ್ವಾಂ ರಾಜ್ಯಸತ್ಕೃತಮ್ ।**
**ಇದಾನೀಂ ಪಶ್ಯ ಪಿತರಂ ಅಸ್ಯ ದೇಹಸ್ಯ ರಾಘವ ॥ ೩೪ ॥**

೩೩-೩೪. ಅನಂತರ ಪಾರ್ವತೀಸಮೇತನಾದ ಪೂಜ್ಯನಾದ ಪರಮೇಶ್ವರನು ಆಕಾಶದಲ್ಲಿ ವಿಮಾನದಲ್ಲಿ ಕುಳಿತುಕೊಂಡು ಕಮಲನಯನನಾದ ರಾಮನನ್ನು ಕುರಿತು ಹೀಗೆಂದನು : 'ರಾಘವನೆ, ಪಟ್ಟಾಭಿಷಿಕ್ತನಾಗಿರುವ ನಿನ್ನನ್ನು ನೋಡುವದಕ್ಕಾಗಿ ನಾನು ಅಯೋಧ್ಯೆಗೆ ಬರಲಿರುವೆನು. ಈಗ ಈ (ನಿನ್ನ) ದೇಹಕ್ಕೆ (ನಿಮಿತ್ತನಾದ) ತಂದೆಯು (ಬಂದಿರುವನು). ಅವನನ್ನು ನೋಡು.

**ತತೋಽಪಶ್ಯದ್ ವಿಮಾನಸ್ಥಂ ರಾಮೋ ದಶರಥಂ ಪುರಃ ।**
**ನನಾಮ ಶಿರಸಾ ಪಾದೌ ಮುದಾ ಭಕ್ತ್ಯಾ ಸಹಾನುಜಃ ॥ ೩೫ ॥**
**ಆಲಿಂಗ್ಯ ಮೂರ್ಧ್ನ್ಯವಘ್ರಾಯ ರಾಮಂ ದಶರಥೋಽಬ್ರವೀತ್ ।**
**ತಾರಿತೋಽಸ್ಮಿ ತ್ವಯಾ ವತ್ಸ ಸಂಸಾರಾದ್ದುಃಖಸಾಗರಾತ್ ॥ ೩೬ ॥**
**ಇತ್ಯುಕ್ತ್ವಾ ಪುನರಾಲಿಂಗ್ಯ ಯಯೌ ರಾಮೇಣ ಪೂಜಿತಃ ।**

೩೫-೩೬. ಅನಂತರ ರಾಮನು (ಆಕಾಶದಲ್ಲಿ) ವಿಮಾನದಲ್ಲಿ ಕುಳಿತಿದ್ದ ದಶರಥನನ್ನು ಕಂಡನು. ಸೋದರನೊಡಗೂಡಿ ಸಂತೋಷಭರಿತನಾಗಿ ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿದನು. ಆಗ ದಶರಥನು ರಾಮನನ್ನು ಅಪ್ಪಿಕೊಂಡು ತಲೆಯಲ್ಲಿ ಮೂಸಿನೋಡಿ ಹೀಗೆಂದನು : 'ಮಗು, ಸಂಸಾರವೆಂಬ ದುಃಖಸಮುದ್ರದಿಂದ ನಾನು ನಿನ್ನಿಂದ ದಾಟಿಸಲ್ಪಟ್ಟೆನು' ಹೀಗೆಂದವನಾಗಿ ಮತ್ತೆ ಅಪ್ಪಿಕೊಂಡು ರಾಮನಿಂದ ಪೂಜಿಸಲ್ಪಟ್ಟವನಾಗಿ ಹೊರಟುಹೋದನು.

**ರಾಮೋಽಪಿ ದೇವರಾಜಂ ತಂ ದೃಷ್ಟ್ವಾ ಪ್ರಾಹ ಕೃತಾಂಜಲಿಮ್ ।**
**ಮತ್ಕೃತೇ ನಿಹತಾನ್ ಸಂಖ್ಯೇ ವಾನರಾನ್ ಪತಿತಾನ್ ಭುವಿ ॥ ೩೭ ॥**
**ಜೀವಯಾಶು ಸುಧಾವೃಷ್ಟ್ಯಾ ಸಹಸ್ರಾಕ್ಷ ಮಮಾಜ್ಞಯಾ ।**
**ತಥೇತ್ಯಮೃತವೃಷ್ಟ್ಯಾ ತಾನ್ ಜೀವಯಾಮಾಸ ವಾನರಾನ್ ॥ ೩೮ ॥**

೩೭-೩೮. ರಾಮನುಕೂಡ ಕೈಮುಗಿದು ನಿಂತುಕೊಂಡಿದ್ದ ದೇವರಾಜನಾದ ಇಂದ್ರನನ್ನು ಕಂಡು ಹೀಗೆಂದನು : 'ನನಗಾಗಿ ಯುದ್ಧಮಾಡಿ ಸಾವನ್ನಪ್ಪಿರುವ, ಭೂಮಿಯಲ್ಲಿ ಬಿದ್ದಿರುವ ಕಪಿಗಳನ್ನು ಎಲೈ ಸಹಸ್ರಾಕ್ಷನೆ, ನನ್ನ ಅಪ್ಪಣೆಯಂತೆ ಅಮೃತವನ್ನು- ಮಳೆಗರೆಯುವ ಮೂಲಕ ಬದುಕಿಸುವವನಾಗು.' ಹೀಗೆನ್ನಲು 'ಹಾಗೆಯೇ ಆಗಲಿ' ಎಂದು ಆ ವಾನರರೆಲ್ಲರನ್ನೂ ಇಂದ್ರನು ಬದುಕಿಸಿದನು.

**ಯೇ ಯೇ ಮೃತಾ ಮೃಧೇ ಪೂರ್ವಂ ತೇ ತೇ ಸುಪ್ತೋತ್ಥಿತಾ ಇವ ।**
**ಪೂರ್ವವದ್ ಬಲಿನೋ ಹೃಷ್ಟಾ ರಾಮಪಾರ್ಶ್ವಮುಪಾಯಯುಃ ॥**
**ನೋತ್ಥಿತಾ ರಾಕ್ಷಸಾಸ್ತತ್ರ ಪೀಯೂಷಸ್ಪರ್ಶನಾದಪಿ ॥ ೩೯ ॥**

೩೯. ಯಾರು ಯಾರು ಹಿಂದೆ ಯುದ್ಧದಲ್ಲಿ ಸತ್ತುಬಿದ್ದಿದ್ದರೋ ಅವರೆಲ್ಲರೂ ಮಲಗಿದ್ದವರು ಏಳುವಂತೆ ಹಿಂದಿನಂತೆಯೇ ಬಲಶಾಲಿಗಳಾಗಿ ಎದ್ದವರಾಗಿ ಸಂತೋಷದಿಂದ ರಾಮನ ಸಮೀಪಕ್ಕೆ ಬಂದರು. ಆದರೆ ಅಮೃತದ ಸ್ಪರ್ಶವಾದರೂ ರಾಕ್ಷಸರು ಮಾತ್ರ ಏಳಲಿಲ್ಲ.

**ವಿಭೀಷಣಸ್ತು ಸಾಷ್ಟಾಂಗಂ ಪ್ರಣಿಪತ್ಯಾಬ್ರವೀದ್ ವಚಃ ।**
**ದೇವ ಮಾಮನುಗೃಹ್ಣೀಷ್ವ ಮಯಿ ಭಕ್ತಿರ್ಯದಾ ತವ ॥ ೪೦ ॥**
**ಮಂಗಲಸ್ನಾನಮದ್ಯ ತ್ವಂ ಕುರು ಸೀತಾಸಮನ್ವಿತಃ ।**
**ಅಲಂಕೃತ್ಯ ಸಹ ಭ್ರಾತ್ರಾ ಶ್ವೋ ಗಮಿಷ್ಯಾಮಹೇ ವಯಮ್ ॥ ೪೧ ॥**

೪೦-೪೧. ವಿಭೀಷಣನಾದರೊ, ರಾಮನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಹೀಗೆಂದನು : 'ಸ್ವಾಮಿ, ನನ್ನನ್ನು ಅನುಗ್ರಹಿಸುವವನಾಗು ; ನನ್ನಲ್ಲಿ ನಿನಗೆ ಪ್ರೀತಿಯಿದೆಯಾದರೆ ದಯಮಾಡಿ ಸೀತಾಸಮೇತನಾಗಿ ತಮ್ಮನೊಡಗೂಡಿ ಈಗ ನೀನು ಮಂಗಲಸ್ನಾನವನ್ನು ಮಾಡು. ಅನಂತರ ಅಲಂಕರಿಸಿಕೊಂಡು ನಾವೆಲ್ಲರೂ ನಾಳೆ ಹೊರಡೋಣ'.

**ವಿಭೀಷಣವಚಃ ಶ್ರುತ್ವಾ ಪ್ರತ್ಯುವಾಚ ರಘೂತ್ತಮಃ ।**
**ಸುಕುಮಾರೋಽತಿಭಕ್ತೋ ಮೇ ಭರತೋ ಮಾಮವೇಕ್ಷತೇ ॥ ೪೨ ॥**
**ಜಟಾವಲ್ಕಲಧಾರೀ ಸ ಶಬ್ದಬ್ರಹ್ಮಸಮಾಹಿತಃ ।**
**ಕಥಂ ತೇನ ವಿನಾ ಸ್ನಾನಮಲಂಕಾರಾದಿಕಂ ಮಮ ॥ ೪೩ ॥**

**ಅತಃ ಸುಗ್ರೀವಮುಖ್ಯಾಂಸ್ತ್ವಂ ಪೂಜಯಾಶು ವಿಶೇಷತಃ ।**
**ಪೂಜಿತೇಷು ಕಪೀಂದ್ರೇಷು ಪೂಜಿತೋಽಹಂ ನ ಸಂಶಯಃ ॥ ೪೪ ॥**

೪೨-೪೪. ವಿಭೀಷಣನ ಮಾತನ್ನು ಕೇಳಿ ರಘುಶ್ರೇಷ್ಠನಾದ ರಾಮ ನಿಂತೆಂದನು : 'ಸುಕುಮಾರನೂ ನನ್ನಲ್ಲಿ ಹೆಚ್ಚಿನ ಭಕ್ತನೂ ಆಗಿರುವ ಭರತನು ನನ್ನನ್ನು ನಿರೀಕ್ಷಿಸುತ್ತಿರುವನು. ಅವನಾದರೊ, ಜಟಾವಲ್ಕಲಗಳನ್ನು ಧರಿಸಿ ನನ್ನ (ನಾಮ)ಗಳೆಂಬ ಶಬ್ದರೂಪವಾದ ಬ್ರಹ್ಮದ ಚಿಂತನೆಯಲ್ಲಿರುವನು. ಅವನನ್ನು ಬಿಟ್ಟು ನಾನು ಸ್ನಾನಾಲಂಕಾರಗಳನ್ನು ಹೇಗ ಮಾಡಲಿ ? ಆದ್ದರಿಂದ ನೀನು ಸುಗ್ರೀವನೇ ಮುಂತಾದ ಮುಖ್ಯರನ್ನು ವಿಶೇಷವಾಗಿ ಗೌರವಿಸುವವನಾಗು. ಕಪಿಶ್ರೇಷ್ಠರುಗಳನ್ನು ಗೌರವಿಸಿದೆಯಾದರೆ ನನ್ನನ್ನು ಪೂಜಿಸಿದಂತೆಯೇ ಸರಿ. ಈ ವಿಷಯದಲ್ಲಿ ಸಂದೇಹವಿಲ್ಲ' (ಎಂದನು.)

**ಇತ್ಯುಕ್ತೋ ರಾಘವೇಣಾಶು ಸ್ವರ್ಣಂ ರತ್ನಾಂಬರಾಣಿ ಚ ।**
**ವವರ್ಷ ರಾಕ್ಷಸಶ್ರೇಷ್ಠೋ ಯಥಾಕಾಮಂ ಯಥಾರುಚಿ ॥ ೪೫ ॥**
**ತತಸ್ತಾನ್ ಪೂಜಿತಾನ್ ದೃಷ್ಟ್ವಾ ರಾಮೋ ರತ್ನೈಶ್ಚ ಯೂಥಪಾನ್ ।**
**ಅಭಿನಂದ್ಯ ಯಥಾನ್ಯಾಯಂ ವಿಸಸರ್ಜ ಹರೀಶ್ವರಾನ್ ॥ ೪೬ ॥**

೪೫-೪೬. ಹೀಗೆ ರಾಮನು ಹೇಳಲಾಗಿ ಚಿನ್ನ, ರತ್ನ, ವಸ್ತ್ರಗಳು - ಮುಂತಾದವುಗಳನ್ನು ರಾಕ್ಷಸಶ್ರೇಷ್ಠನಾದ (ವಿಭೀಷಣನು) ಅವರವರ ಇಷ್ಟಾನುಸಾರ ಬೇಕುಬೇಕಾದವು ಗಳನ್ನು ಕೊಟ್ಟನು. ಅನಂತರ ರಾಮನು ರತ್ನಗಳಿಂದ ಪೂಜಿತರಾದ ಅವರುಗಳನ್ನು ಕಂಡು ಆ ಯೂಥಪರುಗಳಾದ ಕಪಿಶ್ರೇಷ್ಠರನ್ನೆಲ್ಲ ಪ್ರಶಂಸೆಮಾಡಿ ಯಥಾಯೋಗ್ಯವಾಗಿ ಬೀಳ್ಕೊಟ್ಟನು.

**ವಿಭೀಷಣಸಮಾನೀತಂ ಪುಷ್ಪಕಂ ಸೂರ್ಯವರ್ಚಸಮ್ ।**
**ಆರುರೋಹ ತತೋ ರಾಮಸ್ತದ್ವಿಮಾನಮನುತ್ತಮಮ್ ॥ ೪೭ ॥**
**ಅಂಕೇ ನಿಧಾಯ ವೈದೇಹೀಂ ಲಜ್ಜಮಾನಾಂ ಯಶಸ್ವಿನೀಮ್ ।**
**ಲಕ್ಷ್ಮಣೇನ ಸಹ ಭ್ರಾತ್ರಾ ವಿಕ್ರಾಂತೇನ ಧನುಷ್ಮತಾ ॥ ೪೮ ॥**
**ಅಬ್ರವೀಚ್ಚ ವಿಮಾನಸ್ಥಃ ಶ್ರೀರಾಮಃ ಸರ್ವವಾನರಾನ್ ।**

೪೭-೪೮. ಸೂರ್ಯಸಮಾನಕಾಂತಿಯುಳ್ಳ ಪುಷ್ಪಕವಿಮಾನವನ್ನು ವಿಭೀಷಣನು ತರಲಾಗಿ ಆ ಅತ್ಯುತ್ತಮವಾದ (ಕುಬೇರನ) ವಿಮಾನವನ್ನು ರಾಮನು ಹತ್ತಿದವನಾದನು. ನಾಚಿಕೊಳ್ಳುತ್ತಿರುವ ಹಾಗೂ ಕೀರ್ತಿಶಾಲಿನಿಯಾದ ಸೀತೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡವನಾಗಿ ಧನುರ್ಧಾರಿಯೂ ಪ್ರತಾಪಶಾಲಿಯೂ ಆದ ಸೋದರನಾದ ಲಕ್ಷ್ಮಣನೊಡಗೂಡಿದ ಶ್ರೀರಾಮನು ವಿಮಾನದಲ್ಲಿ ಕುಳಿತು ಕೊಂಡೇ ಎಲ್ಲಾ ವಾನರರನ್ನೂ ಕುರಿತು ಹೀಗೆಂದನು.

**ಸುಗ್ರೀವಂ ಹರಿರಾಜಂ ಚ ಅಂಗದಂ ಚ ವಿಭೀಷಣಮ್ ।**
**ಮಿತ್ರಕಾರ್ಯಂ ಕೃತಂ ಸರ್ವಂ ಭವದ್ಭಿಃ ಸಹ ವಾನರೈಃ ॥ ೪೯ ॥**
**ಅನುಜ್ಞಾತಾ ಮಯಾಸ್ಸರ್ವೇ ಯಥೇಷ್ಟಂ ಗಂತುಮರ್ಹಥ ।**

೪೯. ವಾನರರಾಜನಾದ ಸುಗ್ರೀವನನ್ನೂ ಅಂಗದನನ್ನೂ ಮತ್ತು ವಿಭೀಷಣನನ್ನೂ ಕುರಿತು ''ನೀವೆಲ್ಲರೂ ವಾನರರೊಡಗೂಡಿ ಮಿತ್ರಕಾರ್ಯವನ್ನು ಸಂಪೂರ್ಣಗೊಳಿಸಿ ಮಾಡಿದ್ದೀರಿ. ನನ್ನಿಂದ ಅಪ್ಪಣೆಯನ್ನು ಪಡೆದವರಾಗಿದ್ದೀರಿ. ನಿಮ್ಮ ಇಚ್ಛಾನುಸಾರವಾಗಿ ಹೊರಡಬಹುದು'' - ಎಂದನು.

**ಸುಗ್ರೀವ ಪ್ರತಿಯಾಹ್ಯಾಶು ಕಿಷ್ಕಿಂಧಾಂ ಸರ್ವಸೈನಿಕೈಃ ।**
**ಸ್ವರಾಜ್ಯೇ ವಸ ಲಂಕಾಯಾಂ ಮಮ ಭಕ್ತೋ ವಿಭೀಷಣ ।। ೫೦ ॥**
**ನ ತ್ವಾಂ ಧರ್ಷಯಿತುಂ ಶಕ್ತಾಃ ಸೇಂದ್ರಾ ಅಪಿ ದಿವೌಕಸಃ ।**

೫೦. (ಮತ್ತು ಸುಗ್ರೀವವಿಭೀಷಣರನ್ನು ಕುರಿತು) 'ಎಲೈ ಸುಗ್ರೀವನೆ, ಬೇಗನೆ ಎಲ್ಲಾ ಸೈನಿಕರೊಡಗೂಡಿ ಕಿಷ್ಕಿಂಧೆಗೆ ಹಿಂತಿರುಗುವವನಾಗು ; ವಿಭೀಷಣ, ನಿನ್ನ ಸ್ವಂತ ರಾಜ್ಯವಾದ ಲಂಕೆಯಲ್ಲಿ ನೀನು ನನ್ನ ಭಕ್ತನಾಗಿ ಇರುವವನಾಗು ; ಇಂದ್ರನಿಂದೊಡಗೂಡಿದ ದೇವತೆಗಳು ಕೂಡ ನಿನ್ನನ್ನು ಎಂದಿಗೂ ಹಿಮ್ಮೆಟ್ಟಿಸಲಾರರು' ಎಂದನು.

**ಅಯೋಧ್ಯಾಂ ಗಂತುಮಿಚ್ಛಾಮಿ ರಾಜಧಾನೀಂ ಪಿತುರ್ಮಮ ।**
**ಏವಮುಕ್ತಸ್ತು ರಾಮೇಣ ವಾನರಾಸ್ತೇ ಮಹಾಬಲಾಃ ॥ ೫೧ ॥**
**ಊಚುಃ ಪ್ರಾಂಜಲಯಸ್ಸರ್ವೇ ರಾಕ್ಷಸಶ್ಚ ವಿಭೀಷಣಃ ।**
**ಅಯೋಧ್ಯಾಂ ಗಂತುಮಿಚ್ಛಾಮಸ್ತ್ವಯಾ ಸಹ ರಘೂತ್ತಮ ॥ ೫೨ ॥**
**ದೃಷ್ಟ್ವಾ ತ್ವಾಮಭಿಷಿಕ್ತಂ ತು ಕೌಸಲ್ಯಾಮಭಿವಾದ್ಯ ಚ ।**
**ಪಶ್ಚಾದ್ ವೃಣೀಮಹೇ ರಾಜ್ಯಮನುಜ್ಞಾಂ ದೇಹಿ ನಃ ಪ್ರಭೋ ॥ ೫೩ ॥**

೫೧-೫೩. (ಮುಂದುವರೆದು ರಾಮನು) ''ನಾನು ನನ್ನ ತಂದೆಯ ರಾಜಧಾನಿಯಾದ ಅಯೋಧ್ಯೆಗೆ ಹೋಗಲಿರುವೆನು'' ಎನ್ನಲು ಮಹಾಬಲರಾದ ಆ ಕಪಿಗಳೂ ರಾಕ್ಷಸನಾದ ವಿಭೀಷಣನೂ ಕೈಮುಗಿದುಕೊಂಡವರಾಗಿ ''ಎಲೈ ರಘೂತ್ತಮನೆ, ನಿನ್ನೊಡನೆ ನಾವು ಗಳೂ ಅಯೋಧ್ಯೆಗೆ ಬರಲಿಚ್ಛಿಸುತ್ತೇವೆ. ಪಟ್ಟಾಭಿಷಿಕ್ತನಾದ ನಿನ್ನನ್ನು ಕಂಡು ಕೌಸಲ್ಯೆಗೂ ನಮಸ್ಕರಿಸಿ ಅನಂತರ ನಮ್ಮ ನಮ್ಮ ರಾಜ್ಯಗಳನ್ನು ಸ್ವೀಕರಿಸುವೆವು. ಪ್ರಭುವೆ, ಈ ವಿಷಯದಲ್ಲಿ ನಮಗೆ ಅಪ್ಪಣೆಯನ್ನು ನೀಡುವವನಾಗು.''

**ರಾಮಸ್ತಥೇತಿ ಸುಗ್ರೀವ ವಾನರೈಃ ಸವಿಭೀಷಣಃ ।**
**ಪುಷ್ಪಕಂ ಸಹನೂಮಂಶ್ಚ ಶೀಘ್ರಮಾರೋಹ ಸಾಂಪ್ರತಮ್ ॥ ೫೪ ॥**
**ತತಸ್ತು ಪುಷ್ಪಕಂ ದಿವ್ಯಂ ಸುಗ್ರೀವಃ ಸಹ ಸೇನಯಾ ।**
**ವಿಭೀಷಣಶ್ಚ ಸಾಮಾತ್ಯಃ ಸರ್ವೇ ಚಾರುರುಹುದ್ರುತಮ್ ॥ ೫೫ ॥**
**ತೇಷ್ವಾರೂಢೇಷು ಸರ್ವೇಷು ಕೌಬೇರಂ ಪರಮಾಸನಮ್ ।**
**ರಾಘವೇಣಾಭ್ಯನುಜ್ಞಾತಮುತ್ಪಪಾತ ವಿಹಾಯಸಾ ॥ ೫೬ ॥**

೫೪-೫೬. ರಾಮನು ಹಾಗೇ ಆಗಲಿ - ಎಂದವನಾಗಿ ಮತ್ತೆ ''ಎಲೈ ಸುಗ್ರೀವನೆ, ವಿಭೀಷಣಸಹಿತನಾಗಿ ಕಪಿಗಳೊಡನೆ ಮತ್ತು ಹನುಮಂತನೊಡನೆ ಈಗ ಕೂಡಲೆ ಪುಷ್ಪಕವಿಮಾನವನ್ನು ಹತ್ತುವವನಾಗು'' -ಎಂದನು. ಅನಂತರ ಸುಗ್ರೀವನು ಸೇನಾ ಸಮೇತನಾಗಿ ಹಾಗೂ ವಿಭೀಷಣನೂ ಮಂತ್ರಿಗಳೊಡನೆ ಎಲ್ಲರೂ ಬೇಗನೆ ದಿವ್ಯವಾದ ಪುಷ್ಪಕವನ್ನು ಏರಿದರು. ಅವರೆಲ್ಲರೂ ಹತ್ತಿದ ಅನಂತರ ಕುಬೇರನ ಸ್ವತ್ತಾದ ಆ ವಾಹನವು ರಾಮನ ಅಪ್ಪಣೆಯನ್ನು ಪಡೆದು ಆಕಾಶಮಾರ್ಗದಿಂದ ಹಾರಿತು.

**ಬಭೌ ತೇನ ವಿಮಾನೇನ ಹಂಸಯುಕ್ತೇನ ಭಾಸ್ವತಾ ।**
**ಪ್ರಹೃಷ್ಟಶ್ಚ ತದಾ ರಾಮಶ್ಚತುರ್ಮುಖ ಇವಾಪರಃ ॥ ೫೭ ॥**
**ತತೋ ಬಭೌ ಭಾಸ್ಕರಬಿಂಬತುಲ್ಯಂ**
**ಕುಬೇರಯಾನಂ ತಪಸಾನುಲಬ್ಧಮ್ ।**
**ರಾಮೇಣ ಶೋಭಾಂ ನಿತರಾಂ ಪ್ರಪೇದೇ**
**ಸೀತಾಸಮೇತೇನ ಸಹಾನುಜೇನ ॥ ೫೮ ॥**

೫೭-೫೮. ಶ್ರೀರಾಮನು ಹಂಸದಿಂದ ಕೂಡಿದ ವಿರಾಜಮಾನವಾದ ಆ ವಿಮಾನದಲ್ಲಿ ಸಂತೋಷಭರಿತನಾಗಿ ಮತ್ತೊಬ್ಬ ಬ್ರಹ್ಮನಂತೆ ಹೊಳೆಯುತ್ತಾ ಇದ್ದನು. ಅನಂತರ ಆ ವಿಮಾನವು ಕೂಡ ಸೂರ್ಯಮಂಡಲದಂತೆ ಹೊಳೆಯುತ್ತಿದ್ದು, ಕುಬೇರನ ತಪಸ್ಸಿನ ಫಲವಾಗಿ ಪಡೆದುಕೊಂಡದ್ದಾಗಿತ್ತು. ಅದು ಸೀತಾ ಸಮೇತನೂ ಸೋದರ(ನಾದ ಲಕ್ಷ್ಮಣನೊಡನೆಯೂ) ಕೂಡಿರುವ ರಾಮನಿಂದ ಇನ್ನೂ ಹೆಚ್ಚಿನ ಕಾಂತಿಯನ್ನು ಪಡೆಯಿತು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ತ್ರಯೋದಶಃ ಸರ್ಗಃ**

----------

# ಹದಿನಾಲ್ಕನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ಪಾತಯಿತ್ವಾ ತತಶ್ಚಕ್ಷುಃ ಸರ್ವತೋ ರಘುನಂದನಃ ।**
**ಅಬ್ರವೀನ್ಮೈಥಿಲೀಂ ಸೀತಾಂ ರಾಮಃ ಶಶಿನಿಭಾನನಾಮ್ ॥ ೧ ॥**
**ತ್ರಿಕೂಟಶಿಖರಾಗ್ರಸ್ಥಾಂ ಪಶ್ಯ ಲಂಕಾಂ ಮಹಾಪ್ರಭಾಮ್ ।**
**ಏತಾಂ ರಣಭುವಂ ಪಶ್ಯ ಮಾಂಸಕರ್ದಮಪಂಕಿಲಾಮ್ ॥ ೨ ॥**
**ಅಸುರಾಣಾಂ ಪ್ಲವಂಗಾನಾಮತ್ರ ವೈಶಸನಂ ಮಹತ್ ।**
**ಅತ್ರ ಮೇ ನಿಹತಃ ಶೇತೇ ರಾವಣೋ ರಾಕ್ಷಸೇಶ್ವರಃ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ರಘುಪುತ್ರನಾದ ಶ್ರೀರಾಮನು ಅನಂತರ ತನ್ನ ದೃಷ್ಟಿಯನ್ನು ಅತ್ತಿತ್ತ ಹರಿಸಿದವನಾಗಿ ಚಂದ್ರಸಮಾನವಾದ ಕಾಂತಿಯುಳ್ಳ ಮುಖವುಳ್ಳ ಸೀತೆಯನ್ನು ಕುರಿತು ಹೀಗೆಂದನು : ''ಮಹಾಬಲಿಷ್ಠವೂ ತ್ರಿಕೂಟಶಿಖರದ ತುದಿಯಲ್ಲಿರುವದೂ ಆದ ಲಂಕೆಯನ್ನು ನೋಡು. ಹಾಗೆಯೇ ಮಾಂಸರಕ್ತಗಳ ಕೆಸರಿನಿಂದ ಆವೃತವಾಗಿರುವ ಈ ರಣಭೂಮಿಯನ್ನು ನೋಡು. ಇಲ್ಲಿ ರಾಕ್ಷಸರಿಗೂ ಕಪಿಗಳಿಗೂ ದೊಡ್ಡ ಯುದ್ಧವಾಯಿತು. ನನ್ನಿಂದ ಕೊಲ್ಲಲ್ಪಟ್ಟ ರಾಕ್ಷಸೇಶ್ವರನಾದ ರಾವಣನು ಇಲ್ಲಿಯೇ ಬಿದ್ದವನಾದನು.''

**ಕುಂಭಕರ್ಣೇಂದ್ರಜಿನ್ಮುಖ್ಯಾಃ ಸರ್ವೇ ಚಾತ್ರ ನಿಪಾತಿತಾಃ ।**
**ಏಷ ಸೇತುರ್ಮಯಾ ಬದ್ಧಃ ಸಾಗರೇ ಸಲಿಲಾಶಯೇ ॥ ೪ ॥**
**ಏತಚ್ಚ ದೃಶ್ಯತೇ ತೀರ್ಥಂ ಸಾಗರಸ್ಯ ಮಹಾತ್ಮನಃ ।**
**ಸೇತುಬಂಧಮಿತಿ ಖ್ಯಾತಂ ತ್ರೈಲೋಕ್ಯೇನ ಚ ಪೂಜಿತಮ್ ॥ ೫ ॥**
**ಏತತ್ಪವಿತ್ರಂ ಪರಮಂ ದರ್ಶನಾತ್ ಪಾತಕಾಪಹಮ್ ।**
**ಅತ್ರ ರಾಮೇಶ್ವರೋ ದೇವೋ ಮಯಾ ಶಂಭುಃ ಪ್ರತಿಷ್ಠಿತಃ ॥ ೬ ॥**

೪-೬. ''ಕುಂಭಕರ್ಣ, ಇಂದ್ರಜಿತ್ತು, ಮುಂತಾದ ಮುಖ್ಯ (ರಾಕ್ಷಸರೆಲ್ಲರೂ) ಇಲ್ಲಿಯೇ ಕೊಲ್ಲಲ್ಪಟ್ಟರು. ನೀರಿನ ನಿಧಿಯಾದ ಸಮುದ್ರದಲ್ಲಿ ನಾನು ಕಟ್ಟಿದ್ದ ಸೇತುವೆಯು ಇದು. ಮಹಾತ್ಮನಾದ ಸಮುದ್ರರಾಜನ ಪವಿತ್ರ ತೀರ್ಥವು ಇಲ್ಲಿ ಕಂಡು ಬರುತ್ತಿದೆ. ಇದು ಸೇತುಬಂಧವೆಂಬ ಹೆಸರಿನಿಂದ ಪ್ರಖ್ಯಾತವಾಗಿದ್ದು ಮೂರು ಲೋಕಗಳಲ್ಲಿಯೂ ಪೂಜ್ಯವಾಗಿದೆ. ಇದು ಪರಮವೂ - ಪವಿತ್ರವೂ ಆಗಿದ್ದು ದರ್ಶನಮಾತ್ರದಿಂದ ಪಾಪವನ್ನು ಪರಿಹರಿಸತಕ್ಕದ್ದೂ ಆಗಿದೆ. ಇಲ್ಲಿ ರಾಮೇಶ್ವರನೆಂಬ ಹೆಸರಿನ ಶಂಭುವನ್ನು ನಾನು ಸ್ಥಾಪಿಸಿದೆನು.''

**ಅತ್ರ ಮಾಂ ಶರಣಂ ಪ್ರಾಪ್ತೋ ಮಂತ್ರಿಭಿಶ್ಚ ವಿಭೀಷಣಃ ।**
**ಏಷಾ ಸುಗ್ರೀವನಗರೀ ಕಿಷ್ಕಿಂಧಾ ಚಿತ್ರಕಾನನಾ ॥ ೭ ॥**
**ತತ್ರ ರಾಮಾಜ್ಞಯಾ ತಾರಾಪ್ರಮುಖಾ ಹರಿಯೋಷಿತಃ ।**
**ಆನಯಾಮಾಸ ಸುಗ್ರೀವಃ ಸೀತಾಯಾಃ ಪ್ರಿಯಕಾಮ್ಯಯಾ ॥ ೮ ॥**

೭-೮. ''ಇಲ್ಲಿ ಮಂತ್ರಿಗಳೊಡನೆ ವಿಭೀಷಣನು ನನ್ನನ್ನು ಶರಣುಹೊಕ್ಕನು. ಚಿತ್ರವಾದ ವನಗಳುಳ್ಳ ಸುಗ್ರೀವನ ಊರಾದ ಕಿಷ್ಕಿಂಧೆಯೇ ಇದು''- (ಎಂದನು.) ಅಲ್ಲಿ ಶ್ರೀರಾಮನ ಆಜ್ಞೆಯಂತೆ ತಾರೆಯೇ ಮುಂತಾದ ವಾನರಸ್ತ್ರೀಯರನ್ನು - ಸೀತೆಗೆ ಸಂತೋಷವನ್ನುಂಟುಮಾಡುವ ಉದ್ದೇಶದಿಂದ - ಸುಗ್ರೀವನು ಕರೆತಂದನು.

**ತಾಭಿಃ ಸಹೋತ್ಥಿತಂ ಶೀಘ್ರಂ ವಿಮಾನಂ ಪ್ರೇಕ್ಷ್ಯ ರಾಘವಃ ।**
**ಪ್ರಾಹ ಚಾದ್ರಿಂ ಋಷ್ಯಮೂಕಂ ಪಶ್ಯ ವಾಲ್ಯತ್ರ ಮೇ ಹತಃ ॥ ೯ ॥**
**ಏಷಾ ಪಂಚವಟೀ ನಾಮ ರಾಕ್ಷಸಾ ಯತ್ರ ಮೇ ಹತಾಃ ।**
**ಅಗಸ್ತ್ಯಸ್ಯ ಸುತೀಕ್ಷ್ಣಸ್ಯ ಪಶ್ಯಾಶ್ರಮಪದೇ ಶುಭೇ ॥ ೧೦ ॥**
**ಏತೇ ತೇ ತಾಪಸಾಸ್ಸರ್ವೇ ದೃಶ್ಯಂತೇ ವರವರ್ಣಿನಿ ।**

೯-೧೦. ಅನಂತರ ಶ್ರೀರಾಮನು ಅವರೆಲ್ಲರೊಡನೆ ವೇಗವಾಗಿ ಹೊರಟ ವಿಮಾನದಲ್ಲಿ ಕುಳಿತವನಾಗಿ (ಸೀತೆಯನ್ನು ಕುರಿತು) 'ಇದೊ, ಋಷ್ಯಮೂಕ ಪರ್ವತವನ್ನು ನೋಡು, ಇಲ್ಲಿಯೇ ವಾಲಿಯು ಕೊಲ್ಲಲ್ಪಟ್ಟನು. ರಾಕ್ಷಸರನ್ನೆಲ್ಲ ಸಂಹಾರಮಾಡಿದ ಈ ಪಂಚವಟಿಯನ್ನು ನೋಡು ; ಎಲೈ ಶುಭಳೆ, ಅಗಸ್ತ್ಯ ಮಹಾ ಮುನಿಗಳ, ಹಾಗೂ ಸುತೀಕ್ಷ್ಣರ ಆಶ್ರಮಗಳನ್ನು ನೋಡು. ಎಲೈ ಉತ್ತಮವಾದ ಬಣ್ಣದವಳೆ, ಇದೊ ಈ ತಪಸ್ವಿಗಳೆಲ್ಲರೂ ಇಲ್ಲಿ ಕಾಣುತ್ತಿದ್ದಾರೆ.

**ಅಸೌ ಶೈಲವರೋ ದೇವಿ ಚಿತ್ರಕೂಟಃ ಪ್ರಕಾಶತೇ ।**
**ಅತ್ರ ಮಾಂ ಕೈಕಯೀಪುತ್ರಃ ಪ್ರಸಾದಯಿತುಮಾಗತಃ ॥ ೧೧ ॥**
**ಭರದ್ವಾಜಾಶ್ರಮಂ ಪಶ್ಯ ದೃಶ್ಯತೇ ಯಮುನಾತಟೇ ।**
**ಏಷಾ ಭಾಗೀರಥೀ ಗಂಗಾ ದೃಶ್ಯತೇ ಲೋಕಪಾವನೀ ॥ ೧೨ ॥**
**ಏಷಾ ಸಾ ದೃಶ್ಯತೇ ಸೀತೇ ಸರಯೂರ್ಯೂಪಮಾಲಿನೀ ।**
**ಏಷಾ ಸಾ ದೃಶ್ಯತೇಽಯೋಧ್ಯಾ ಪ್ರಣಾಮಂ ಕುರು ಭಾಮಿನಿ ॥ ೧೩ ॥**

೧೧-೧೩. ಎಲೌ ದೇವಿಯೆ, ಇದೊ, ಚಿತ್ರಕೂಟವೆಂಬ ಶ್ರೇಷ್ಠವಾದ ಬೆಟ್ಟವು ಕಾಣುತ್ತಿದೆ. ಕೈಕೇಯಿಯ ಮಗನಾದ ಭರತನು ಇಲ್ಲಿ ನನ್ನನ್ನು ಸಮಾಧಾನ ಗೊಳಿಸಲು ಬಂದಿದ್ದನು. ಇದೊ, ಯಮುನಾ ನದಿಯ ದಡದಲ್ಲಿರುವ ಭರದ್ವಾಜಾಶ್ರಮವನ್ನು ನೋಡು. ಇದೊ, ಲೋಕವನ್ನು ಪವಿತ್ರಗೊಳಿಸುವ

ಭಗೀರಥನ ಪುತ್ರಿಯಾದ ಗಂಗೆಯು ಕಂಡುಬರುತ್ತಿರುವಳು. ಸೀತೆಯೆ, ಇದೊ, ಯೂಪಸ್ತಂಭಗಳ ಸಾಲುಗಳ (ದಡವುಳ್ಳ) ಸರಯೂನದಿಯು ಕಂಡುಬರುತ್ತಿದೆ. ಇನ್ನು ಮುಂದೆ ಕಂಡುಬರುತ್ತಿರುವದೇ ಅಯೋಧ್ಯೆಯು. ಎಲೈ ಭಾಮಿನಿ, ನಮಸ್ಕರಿಸುವಳಾಗು.''

**ಏವಂಕ್ರಮೇಣ ಸಂಪ್ರಾಪ್ತೋ ಭರದ್ವಾಜಾಶ್ರಮಂ ಹರಿಃ ।**
**ಪೂರ್ಣೇ ಚತುರ್ದಶೇ ವರ್ಷೇ ಪಂಚಮ್ಯಾಂ ರಘುನಂದನಃ ॥ ೧೪ ॥**
**ಭರದ್ವಾಜಂ ಮುನಿಂ ದೃಷ್ಟ್ವಾ ವವಂದೇ ಸಾನುಜಃ ಪ್ರಭುಃ ।**
**ಪಪ್ರಚ್ಛ ಮುನಿಮಾಸೀನಂ ವಿನಯೇನ ರಘೂತ್ತಮಃ ॥ ೧೫ ॥**
**ಶೃಣೋಷಿ ಕಚ್ಚಿದ್ ಭರತಃ ಕುಶಲ್ಯಾಸ್ತೇ ಸಹಾನುಜಃ ।**
**ಸುಭಿಕ್ಷಾ ವರ್ತತೇಽಯೋಧ್ಯಾ ಜೀವನ್ತಿ ಚ ಹಿ ಮಾತರಃ ॥ ೧೬ ॥**

೧೪-೧೬. ಈ ಕ್ರಮದಲ್ಲಿ ಹದಿನಾಲ್ಕು ವರ್ಷಗಳು ತುಂಬಿರಲಾಗಿ ಪಂಚಮಿಯ ದಿನ ಹರಿಯೆನಿಸಿದ ಶ್ರೀರಾಮನು ಭರದ್ವಾಜರ ಆಶ್ರಮಕ್ಕೆ ಬಂದು ತಲುಪಿದನು. ಆ ರಘುಶ್ರೇಷ್ಠನು ಕುಳಿತಿದ್ದ ಆ ಋಷಿಯನ್ನು ವಿನಯದಿಂದ ''ಭರತನು ಸಹೋದರನೊಡನೆ ಕುಶಲಿಯಾಗಿರುತ್ತಾನೆಂದು ಕೇಳಿದ್ದೀರಾ ? ಅಯೋಧ್ಯೆಯು ಸುಭಿಕ್ಷವಾಗಿದೆಯೆ ? ತಾಯಂದಿರೆಲ್ಲರೂ ಬದುಕಿರುವರೆ ? ಹೇಗೆ?'' ಎಂದು ಕೇಳಿದನು.

**ಶ್ರುತ್ವಾ ರಾಮಸ್ಯ ವಚನಂ ಭರದ್ವಾಜಃ ಪ್ರಹೃಷ್ಟಧೀಃ ।**
**ಪ್ರಾಹ ಸರ್ವೇ ಕುಶಲಿನೋ ಭರತಸ್ತು ಮಹಾಮನಾಃ ॥ ೧೭ ॥**
**ಫಲಮೂಲಕೃತಾಹಾರೋ ಜಟಾವಲ್ಕಲಧಾರಕಃ ।**
**ಪಾದುಕೇ ಸಕಲಂ ನ್ಯಸ್ಯ ರಾಜ್ಯಂ ತ್ವಾಂ ತು ಪ್ರತೀಕ್ಷತೇ ॥ ೧೮ ॥**
**ಯದ್ಯತ್ ಕೃತಂ ತ್ವಯಾ ಕರ್ಮ ದಂಡಕೇ ರಘುನಂದನ ।**
**ರಾಕ್ಷಸಾನಾಂ ವಿನಾಶಂ ಚ ಸೀತಾಹರಣಪೂರ್ವಕಮ್ ॥ ೧೯ ॥**
**ಸರ್ವಂ ಜ್ಞಾತಂ ಮಯಾ ರಾಮ ತಪಸಾ ತೇ ಪ್ರಸಾದತಃ ।**

೧೭-೧೯. ರಾಮನ ಮಾತನ್ನು ಕೇಳಿ ಭರದ್ವಾಜನು ಸಂತುಷ್ಟನಾದವನಾಗಿ ಹೀಗೆಂದನು : ''ರಾಮನೆ, ಎಲ್ಲರೂ ಕುಶಲಿಗಳಾಗಿರುವರು. ಮಹಾಮನಸ್ಕನಾದ ಭರತನಾದರೊ, ಕಂದಮೂಲಫಲಗಳನ್ನೇ ಆಹಾರವಾಗಿ ಸ್ವೀಕರಿಸುತ್ತಾ ಜಟಾವಲ್ಕಲ ಗಳನ್ನು ಧರಿಸಿ ಪಾದುಕೆಗಳಿಗೇ ಎಲ್ಲಾ ಗೌರವಗಳನ್ನರ್ಪಿಸುತ್ತಾ ರಾಜ್ಯವನ್ನು (ಕಾಪಾಡುತ್ತಾ) ನಿನಗಾಗಿ ಕಾದಿರುತ್ತಾನೆ. ಎಲೈ ರಘುನಂದನನೆ, ನೀನು ದಂಡಕಾರಣ್ಯದಲ್ಲಿ ಸೀತೆಯ ಅಪಹಾರದಿಂದಾರಂಭಿಸಿ ರಾಕ್ಷಸರ ಸಂಹಾರದವರೆಗೆ

ಏನೇನು ಕೆಲಸಗಳನ್ನು ನೆರವೇರಿಸಿದೆಯೋ ಅದೆಲ್ಲವನ್ನೂ ನಾನು ನಿನ್ನ ಅನುಗ್ರಹ ದಿಂದ ಹಾಗೂ ತಪಸ್ಸಿನ (ಬಲದಿಂದ) ತಿಳಿದುಕೊಂಡೆನು.

**ತ್ವಂ ಬ್ರಹ್ಮ ಪರಮಂ ಸಾಕ್ಷಾದಾದಿಮಧ್ಯಾಂತವರ್ಜಿತಃ ।**
**ತ್ವಮಗ್ರೇ ಸಲಿಲಂ ಸೃಷ್ಟ್ವಾ ತತ್ರ ಸುಪ್ತೋಽಸಿ ಭೂತಕೃತ್ ॥ ೨೦ ॥**
**ನಾರಾಯಣೋಽಸಿ ವಿಶ್ವಾತ್ಮನ್ ನರಾಣಾಮಂತರಾತ್ಮಕಃ ।**
**ತ್ವನ್ನಾಭಿಕಮಲೋತ್ಪನ್ನೋ ಬ್ರಹ್ಮಾ ಲೋಕಪಿತಾಮಹಃ । ॥ ೨೧ ॥**
**ಅತಸ್ತ್ವಂ ಜಗತಾಮೀಶಃ ಸರ್ವಲೋಕನಮಸ್ಕೃತಃ ।**
**ತ್ವಂ ವಿಷ್ಣುರ್ಜಾನಕೀ ಲಕ್ಷ್ಮೀಃ ಶೇಷೋಽಯಂ ಲಕ್ಷ್ಮಣಾಭಿಧಃ ॥ ೨೨ ॥**

೨೦-೨೨. ನೀನಾದರೊ, ಸಾಕ್ಷಾತ್‌ಪರಬ್ರಹ್ಮವಾಗಿರುವೆ. ಆದಿಮಧ್ಯಾಂತ ಗಳಿಲ್ಲ ದವನಾಗಿರುವೆ. ನೀನು ಮೊದಲು ನೀರನ್ನು ಸೃಷ್ಟಿಸಿ ಭೂತಗಳನ್ನುಂಟು ಮಾಡಿರುವೆ ; ಎಲೈ ವಿಶ್ವಾತ್ಮನೆ, ನೀನು ನಾರಾಯಣನು. ನರರೆಲ್ಲರ ಅಂತರಾತ್ಮನು. ಲೋಕಪಿತಾಮಹನಾದ ಬ್ರಹ್ಮನು ನಿನ್ನ ನಾಭಿಕಮಲದಿಂದ ಉದಯಿಸಿರುವನು. ಆದ್ದರಿಂದ ನೀನು ಜಗತ್ತುಗಳಿಗೆ ಒಡೆಯನು. ಸರ್ವಲೋಕಗಳಿಂದ ನಮಸ್ಕೃತನಾದ ವನು. ನೀನೇ ವಿಷ್ಣುವು. ಸೀತೆಯೇ ಲಕ್ಷ್ಮಿಯು. ಆದಿಶೇಷನೇ ಈ ಲಕ್ಷ್ಮಣನೆಂಬ ಹೆಸರಿನವನಾಗಿರುವನು.

**ಆತ್ಮನಾ ಸೃಜಸೀದಂ ತ್ವಮಾತ್ಮನ್ಯೇವಾತ್ಮಮಾಯಯಾ ।**
**ನ ಸಜ್ಜಸೇ ನಭೋವತ್ ತ್ವಂ ಚಿಚ್ಛಕ್ತ್ಯಾ ಸರ್ವಸಾಕ್ಷಿಕಃ ॥ ೨೩ ॥**
**ಬಹಿರಂತಶ್ಚ ಭೂತಾನಾಂ ತ್ವಮೇವ ರಘುನಂದನ ।**
**ಪೂರ್ಣೋಽಪಿ ಮೂಢದೃಷ್ಟೀನಾಂ ವಿಚ್ಛಿನ್ನ ಇವ ಲಕ್ಷ್ಯಸೇ ॥ ೨೪ ॥**
**ಜಗತ್ತ್ವಂ ಜಗದಾಧಾರಸ್ತ್ವಮೇವ ಪರಿಪಾಲಕಃ ।**
**ತ್ವಮೇವ ಸರ್ವಭೂತಾನಾಂ ಭೋಕ್ತಾ ಭೋಜ್ಯಂ ಜಗತ್ಪತೇ ॥ ೨೫ ॥**

೨೩-೨೫. ನೀನಾದರೊ, ಚಿಚ್ಛಕ್ತಿಯಿಂದ ನಿನ್ನನ್ನೇ ನಿನ್ನಲ್ಲಿಯೇ ನಿನ್ನಿಂದಲೇ ಸೃಷ್ಟಿಸುವೆ. ಸರ್ವಸಾಕ್ಷಿಯಾದ ನೀನು ಆಕಾಶದಂತೆ ಇರುವನಾಗಿ ಏತಕ್ಕೂ ಅಂಟಿ ಕೊಳ್ಳದಿರುವೆ. ರಘುನಂದನನೆ, ಪ್ರಾಣಿಗಳ ಹೊರಗೂ ಒಳಗೂ ನೀನೇ ಇದ್ದು ಕೊಂಡಿರುವೆ. ನೀನು ಎಲ್ಲೆಲ್ಲಿಯೂ ಪೂರ್ಣನಾಗಿರುವೆಯಾದರೂ ಮೂಢ ಬುದ್ಧಿಯವರಿಗೆ ಬಿಡಿಬಿಡಿಯಾಗಿರುವಂತೆ ಕಂಡುಬರುತ್ತಿರುವೆ. ನೀನೇ ಈ ಜಗತ್ತೆಲ್ಲವೂ ಆಗಿರುವೆ. ಹಾಗೂ ಜಗತ್ತಿಗೆಲ್ಲ ಆಧಾರನಾಗಿ ನೀನೇ ಎಲ್ಲವನ್ನೂ ಕಾಪಾಡುತ್ತಿರುವೆ. ಎಲ್ಲಾ ಪ್ರಾಣಿ ಗಳಲ್ಲಿಯೂ ಭೋಕ್ತೃವಾಗಿಯೂ ಭೋಜ್ಯ ವಾಗಿಯೂ ಎಲೈ ಜಗತ್ಪತಿಯೆ, ನೀನೇ ಇದ್ದುಕೊಂಡಿರುವೆ.

**ದೃಶ್ಯತೇ ಶ್ರೂಯತೇ ಯದ್ಯತ್ ಸ್ಮರ್ಯತೇ ವಾ ರಘೂತ್ತಮ ।**
**ತ್ವಮೇವ ಸರ್ವಮಖಿಲಂ ತ್ವದ್ವಿನಾನ್ಯನ್ನ ಕಿಂಚನ ॥ ೨೬ ॥**
**ಮಾಯಾ ಸೃಜತಿ ಲೋಕಾಂಶ್ಚ ಸ್ವಗುಣೈರಹಮಾದಿಭಿಃ ।**
**ತ್ವಚ್ಛಕ್ತಿಪ್ರೇರಿತಾ ರಾಮ ತಸ್ಮಾತ್ ತ್ವಯ್ಯುಪಚರ್ಯತೇ ॥ ೨೭ ॥**
**ಯಥಾ ಚುಂಬಕಸಾನ್ನಿಧ್ಯಾತ್ ಚಲಂತ್ಯೇವಾಯ ಆದಯಃ ।**
**ಜಡಸ್ತಥಾ ತ್ವಯಾ ದೃಷ್ಟಾ ಮಾಯಾ ಸೃಜತಿ ವೈ ಜಗತ್ ॥ ೨೮ ॥**

೨೬-೨೮. ಎಲೈ ರಘೂತ್ತಮನೆ, ಏನೇನು ಕಂಡುಬರುತ್ತಿದೆಯೋ, ಕೇಳ ಬರುತ್ತಿದೆಯೋ, ನೆನಪಿಗೆ ಬರುತ್ತಿದೆಯೋ, ಅದೆಲ್ಲವೂ ನೀನೇ. ನಿನ್ನ ಹೊರತು ಒಂದಿಷ್ಟೂ ಏನೂ ಇರುವದಿಲ್ಲ. ರಾಮನೆ, ಮಾಯೆಯು ನಿನ್ನ ಶಕ್ತಿಯಿಂದ ಪ್ರೇರಿತ ವಾಗಿ ತನ್ನ ಗುಣವಾದ ಅಹಂಕಾರಾದಿಗಳಿಂದ ಲೋಕಗಳನ್ನೆಲ್ಲ ಸೃಷ್ಟಿಮಾಡುತ್ತದೆ. ಆದ್ದರಿಂದ ಆ ಮಾಯಾಕಾರ್ಯವನ್ನು ನಿನ್ನಲ್ಲಿ (ಅಜ್ಞರು) ಆರೋಪಿಸಿ ಹೇಳುವರು. ಹೇಗೆ ಸೂಜಿಗಲ್ಲಿನ ಹತ್ತಿರದಲ್ಲಿದ್ದ ಮಾತ್ರದಿಂದಲೇ ಜಡವಾದ ಕಬ್ಬಿಣವೇ ಮುಂತಾದವು ಚಲಿಸಿಯೇ ತೀರುವವೋ ಹಾಗೆಯೇ ನಿನ್ನ ದೃಷ್ಟಿಪಾತಮಾತ್ರದಿಂದ ಮಾಯೆಯು ಜಗತ್ತನ್ನುಂಟು ಮಾಡುತ್ತಿರುವದು.

**ದೇಹದ್ವಯಮದೇಹಸ್ಯ ತವ ವಿಶ್ವಂ ರಿರಕ್ಷಿಷೋಃ ।**
**ವಿರಾಟ್ ಸ್ಥೂಲಂ ಶರೀರಂ ತೇ ಸೂತ್ರಂ ಸೂಕ್ಷ್ಮಮುದಾಹೃತಮ್ ॥ ೨೯ ॥**
**ವಿರಾಜಃ ಸಂಭವಂತ್ಯೇತೇ ಅವತಾರಾಃ ಸಹಸ್ರಶಃ ।**
**ಕಾರ್ಯಾಂತೇ ಪ್ರವಿಶಂತ್ಯೇವ ವಿರಾಜಂ ರಘುನಂದನ ॥ ೩೦ ॥**
**ಅವತಾರಕಥಾಂ ಲೋಕೇ ಯೇ ಗಾಯಂತಿ ಗೃಣಂತಿ ಚ ।**
**ಅನನ್ಯಮನಸೋ ಮುಕ್ತಿಸ್ತೇಷಾಮೇವ ರಘೂತ್ತಮ ॥ ೩೧ ॥**

೨೯-೩೧. ಜಗತ್ತನ್ನು ಕಾಪಾಡಲಿಚ್ಛಿಸುವ ನಿನಗೆ ಎರಡು ದೇಹಗಳಿರುವವು. ವಿರಾಟ್ ಎಂಬ ಹೆಸರಿನ ಸ್ಥೂಲಶರೀರವೊಂದು, ಸೂತ್ರ(ವಾಯು)ವೆಂಬ ಹೆಸರಿನ ಸೂಕ್ಷ್ಮಶರೀರವೊಂದು - ಹೀಗೆ ಎರಡು ದೇಹಗಳು ಹೇಳಲ್ಪಟ್ಟಿರುವವು. ಸ್ಥೂಲವಾದ ವಿರಾಟ್‌ಶರೀರದಿಂದ ಸಹಸ್ರಾರು ಅವತಾರಗಳು ಸಂಭವಿಸುವವು. ಎಲೈ ರಘುನಂದನನೆ, ಅವು ತಮ್ಮ ಕಾರ್ಯವು ಪೂರೈಸಿದೊಡನೆ ವಿರಾಟ್‌ಶರೀರವನ್ನೇ ಪ್ರವೇಶಿಸಿಬಿಡುವವು. ಇಂಥ ನಿನ್ನ ಅವತಾರಗಳಲ್ಲಿ ನಡೆದ ಕಥೆಗಳನ್ನು ಯಾರು ಗಾನಮಾಡುವರೋ, ಯಾರು ಸ್ತುತಿಸುವರೋ ಎಲೈ ರಘೂತ್ತಮನೆ, ಅನನ್ಯಮನಸ್ಕರಾದ ಅಂಥ (ಭಕ್ತರಿಗೇ) ಮುಕ್ತಿಯು ಲಭಿಸತಕ್ಕದ್ದಾಗಿರುವದು.

**ತ್ವಂ ಬ್ರಹ್ಮಣಾ ಪುರಾ ಭೂಮೇರ್ಭಾರಹಾರಾಯ ರಾಘವ ।**
**ಪ್ರಾರ್ಥಿತಸ್ತಪಸಾ ತುಷ್ಟಃ ತ್ವಂ ಜಾತೋಽಸಿ ರಘೋಃ ಕುಲೇ ॥ ೩೨ ॥**
**ದೇವಕಾರ್ಯಮಶೇಷೇಣ ಕೃತಂ ತೇ ರಾಮ ದುಷ್ಕರಮ್ ।**
**ಬಹುವರ್ಷಸಹಸ್ರಾಣಿ ಮಾನುಷಂ ದೇಹಮಾಶ್ರಿತಃ ॥ ೩೩ ॥**
**ಕುರ್ವನ್ ದುಷ್ಕರಕರ್ಮಾಣಿ ಲೋಕದ್ವಯಹಿತಾಯ ಚ ।**
**ಪಾಪಹಾರೀಣಿ ಭುವನಂ ಯಶಸಾ ಪೂರಯಿಷ್ಯಸಿ ॥ ೩೪ ॥**

೩೨-೩೪. ನೀನು ಹಿಂದೆ ಚತುರ್ಮುಖಬ್ರಹ್ಮನಿಂದ ಭೂಭಾರಹರಣಕ್ಕಾಗಿ ಪ್ರಾರ್ಥಿಸಲ್ಪಟ್ಟವನಾಗಿ ತಪಸ್ಸಿಗೆ ಒಲಿದವನಾಗಿ ರಘುಕುಲದಲ್ಲಿ ಹುಟ್ಟಿರುವೆ. ಎಲೈ ರಾಮನೆ, ನೀನು ಕಠಿನವಾದ ಈ ದೇವತೆಗಳ ಕಾರ್ಯವನ್ನು ಸಹಸ್ರಾರು ವರ್ಷಗಳ ಕಾಲ ಮಾನುಷದೇಹವನ್ನಾಶ್ರಯಿಸಿ ಮಾಡಿರುವೆ. (ಭೂಲೋಕದೇವಲೋಕಗಳೆಂಬ) ಎರಡು ಲೋಕಗಳ ಹಿತಕ್ಕಾಗಿ ಕಷ್ಟಕರವಾದ ಹಾಗೂ ಪಾಪಪರಿಹಾರಕವಾದ ಕೆಲಸಗಳನ್ನು ಮಾಡುತ್ತಾ ಜಗತ್ತನ್ನೆಲ್ಲ ನಿನ್ನ ಕೀರ್ತಿಯಿಂದ ತುಂಬಲಿರುವೆ.

**ಪ್ರಾರ್ಥಯಾಮಿ ಜಗನ್ನಾಥ ಪವಿತ್ರಂ ಕುರು ಮೇ ಗೃಹಮ್ ।**
**ಸ್ಥಿತ್ವಾಽದ್ಯ ಭುಕ್ತ್ವಾ ಸಬಲಃ ಶ್ವೋ ಗಮಿಷ್ಯಸಿ ಪತ್ತನಮ್ ॥ ೩೫ ॥**
**ತಥೇತಿ ರಾಘವೋಽತಿಷ್ಠತ್ತಸ್ಮಿನ್ನಾಶ್ರಮ ಉತ್ತಮೇ ।**
**ಸಸೈನ್ಯಃ ಪೂಜಿತಸ್ತೇನ ಸೀತಯಾ ಲಕ್ಷ್ಮಣೇನ ಚ ॥ ೩೬ ॥**

೩೫-೩೬. ಎಲೈ ಜಗತ್ಪತಿಯೆ, ನಿನ್ನನ್ನು ಬೇಡಿಕೊಳ್ಳುತ್ತಿದ್ದೇನೆ. ನನ್ನ ಮನೆಯನ್ನು ಪವಿತ್ರಗೊಳಿಸು. ಈಗ ಇಲ್ಲಿಯೇ ಸೇನಾಸಮೇತವಾಗಿ ಉಳಿಯುವವನಾಗಿ ಊಟಮಾಡಿ ಕೊಂಡು (ಅಯೋಧ್ಯಾಪಟ್ಟಣಕ್ಕೆ) ನಾಳೆ ಹೋಗುವೆಯಂತೆ.' ಹೀಗೆ (ಭರದ್ವಾಜರು) ಹೇಳಲು ರಾಮನು ಹಾಗೆಯೇ ಆಗಲೆಂದು ಒಪ್ಪಿ ಆ ಉತ್ತಮವಾದ ಆಶ್ರಮದಲ್ಲಿಯೇ ನಿಂತನು. ಸೇನೆಯೊಡನೆ ಆ (ಋಷಿಗಳಿಂದ), ಪೂಜಿತನಾಗಿ ಸೀತಾಲಕ್ಷ್ಮಣರೊಡಗೂಡಿ (ಅಲ್ಲೇ ಇದ್ದನು.)

**ತತೋ ರಾಮಶ್ಚಿಂತಯಿತ್ವಾ ಮುಹೂರ್ತಂ ಪ್ರಾಹ ಮಾರುತಿಮ್ ।**
**ಇತೋ ಗಚ್ಛ ಹನೂಮನ್ ತ್ವಂ ಅಯೋಧ್ಯಾಂ ಪ್ರತಿ ಸತ್ವರಃ ॥ ೩೭ ॥**
**ಜಾನೀಹಿ ಕುಶಲೀ ಕಶ್ಚಿತ್ ಜನೋ ನೃಪತಿಮಂದಿರೇ ।**
**ಶೃಂಗವೇರಪುರಂ ಗತ್ವಾ ಬ್ರೂಹಿ ಮಿತ್ರಂ ಗುಹಂ ಮಮ ॥ ೩೮ ॥**
**ಜಾನಕೀಲಕ್ಷ್ಮಣೋಪೇತಮಾಗತಂ ಮಾಂ ನಿವೇದಯ ।**
**ನಂದಿಗ್ರಾಮಂ ತತೋ ಗತ್ವಾ ಭ್ರಾತರಂ ಭರತಂ ಮಮ ॥ ೩೯ ॥**
**ದೃಷ್ಟ್ವಾ ಬ್ರೂಹಿ ಸಭಾರ್ಯಸ್ಯ ಸಭ್ರಾತುಃ ಕುಶಲಂ ಮಮ ।**

೩೭-೩೯. ಅನಂತರ ರಾಮನು ಮುಹೂರ್ತಕಾಲ ಆಲೋಚಿಸಿ ಹನುಮಂತನನ್ನು ಕುರಿತು ಹೀಗೆಂದನು : 'ಎಲೈ ಹನುಮಂತನೆ, ನೀನು ಇಲ್ಲಿಂದ ಅಯೋಧ್ಯೆಯನ್ನು ಕುರಿತು ಬೇಗನೆ ಹೊರಡುವವನಾಗು ; ರಾಜಗೃಹದಲ್ಲಿ ಎಲ್ಲರೂ ಕ್ಷೇಮವೆ ? ಎಂಬುದನ್ನು ತಿಳಿದುಕೊ. ಅನಂತರ ಶೃಂಗವೇರಪುರಕ್ಕೆ ಹೋಗಿ ನನ್ನ ಮಿತ್ರನಾದ ಗುಹನಿಗೆ ಸೀತಾಲಕ್ಷ್ಮಣಸಮೇತನಾಗಿ ನಾನು ಬಂದಿರುವ ವರ್ತಮಾನ ವನ್ನು ತಿಳಿಸು. ಅನಂತರ ನಂದಿಗ್ರಾಮಕ್ಕೆ ಹೋಗಿ ನನ್ನ ಭ್ರಾತೃವಾದ ಭರತನಿಗೆ ಪತ್ನೀಸೋದರ ನೊಡಗೂಡಿ ಬಂದಿರುವ ನನ್ನ ಕುಶಲವಾರ್ತೆಯನ್ನು ಹೇಳು.

**ಸೀತಾಪಹರಣಾದೀನಿ ರಾವಣಸ್ಯ ವಧಾದಿಕಮ್ ।**
**ಬ್ರೂಹಿ ಕ್ರಮೇಣ ಮೇ ಭ್ರಾತುಃ ಸರ್ವಂ ತತ್ರ ವಿಚೇಷ್ಟಿತಮ್ ॥ ೪೦ ॥**
**ಹತ್ವಾ ಶತ್ರುಗಣಾನ್ ಸರ್ವಾನ್ ಸಭಾರ್ಯಃ ಸಹಲಕ್ಷ್ಮಣಃ ।**
**ಉಪಯಾತಿ ಸಮೃದ್ಧಾರ್ಥಃ ಸಹಋಕ್ಷಹರೀಶ್ವರೈಃ ॥ ೪೧ ॥**
**ಇತ್ಯುಕ್ತ್ವಾ ತತ್ರ ವೃತ್ತಾಂತಂ ಭರತಸ್ಯ ವಿಚೇಷ್ಟಿತಮ್ ।**
**ಸರ್ವಂ ಜ್ಞಾತ್ವಾ ಪುನಃ ಶೀಘ್ರಂ ಆಗಚ್ಛ ಮಮ ಸನ್ನಿಧಿಮ್ ॥ ೪೨ ॥**

೪೦-೪೨. ಸೀತೆಯ ಅಪಹರಣ, ರಾವಣವಧಾದಿಗಳು ಮುಂತಾಗಿ ಅಲ್ಲಿ ನಡೆದ ಎಲ್ಲಾ ವೃತ್ತಾಂತಗಳನ್ನೂ ಕ್ರಮವಾಗಿ ಹೇಳು. ಶತ್ರುಸಮೂಹವನ್ನೆಲ್ಲ ಸಂಹಾರಮಾಡಿ ಲಕ್ಷ್ಮಣ-ಸೀತೆಯರೊಡನೆ ಮತ್ತು ಕರಡಿಕಪೀಶ್ವರರುಗಳೊಡನೆ ಕೃತಕಾರ್ಯನಾಗಿ (ರಾಮನು) ಬರುತ್ತಿದ್ದಾನೆ - ಎಂದು ತಿಳಿಸು. ಹೀಗೆ ಹೇಳಿ ಅಲ್ಲಿನ ವಿಚಾರಗಳನ್ನು ಭರತನ ನಡೆವಳಿಕೆಯನ್ನೂ, ಎಲ್ಲವನ್ನೂ ತಿಳಿದುಕೊಂಡು ಬೇಗನೆ ಮತ್ತೆ ನನ್ನ ಹತ್ತಿರಕ್ಕೆ ಬಂದುಬಿಡು' (ಎಂದನು).

**ತಥೇತಿ ಹನುಮಾಂಸ್ತತ್ರ ಮಾನುಷಂ ವಪುರಾಸ್ಥಿತಃ ।**
**ನಂದಿಗ್ರಾಮಂ ಯಯೌ ತೂರ್ಣಂ ವಾಯುವೇಗೇನ ಮಾರುತಿಃ ॥ ೪೩ ॥**
**ಗರುತ್ಮಾನಿವ ವೇಗೇನ ಜಿಘೃಕ್ಷನ್ ಭುಜಗೋತ್ತಮಮ್ ।**
**ಶೃಂಗವೇರಪುರಂ ಪ್ರಾಪ್ಯ ಗುಹಮಾಸಾದ್ಯ ಮಾರುತಿಃ ॥ ೪೪ ॥**
**ಉವಾಚ ಮಧುರಂ ವಾಕ್ಯಂ ಪ್ರಹೃಷ್ಟೇನಾಂತರಾತ್ಮನಾ ॥**

೪೩-೪೪. ಹಾಗೆಯೇ ಆಗಲೆಂದು ಹನುಮಂತನು ಆಗ ಮನುಷ್ಯಶರೀರವನ್ನು ಧರಿಸಿದವನಾಗಿ ಬೇಗನೆ ವಾಯುಗತಿಯಿಂದ ಹೇಗೆ ಗರುಡನು ಹಾವನ್ನು ತಿನ್ನಲಿಚ್ಛೆಯಿಂದ ಹಾರುವನೋ ಹಾಗೆ ನಂದಿಗ್ರಾಮವನ್ನು ಕುರಿತು ಹೊರಟನು. ಮೊದಲು ಶೃಂಗವೇರ ಪುರವನ್ನು ಹೊಕ್ಕು ಗುಹನನ್ನು ಕಂಡು ಆ ಮಾರುತಿಯು ಹೃದಯದಿಂದ ತುಷ್ಟನಾಗಿ ಸಂತೋಷದಿಂದ ಮಧುರವಾಕ್ಯದಿಂದ ಹೀಗೆಂದನು :

**ರಾಮೋ ದಾಶರಥಿಃ ಶ್ರೀಮಾನ್ ಸಖಾ ತೇ ಸಹ ಸೀತಯಾ ।**
**ಸಲಕ್ಷ್ಮಣಸ್ತ್ವಾಂ ಧರ್ಮಾತ್ಮಾ ಕ್ಷೇಮೀ ಕುಶಲಮಬ್ರವೀತ್ ॥ ೪೫ ॥**
**ಅನುಜ್ಞಾತೋಽದ್ಯ ಮುನಿನಾ ಭರದ್ವಾಜೇನ ರಾಘವಃ ।**
**ಆಗಮಿಷ್ಯತಿ ತಂ ದೇವಂ ದ್ರಕ್ಷ್ಯಸಿ ತ್ವಂ ರಘೂತ್ತಮಮ್ ॥ ೪೬ ॥**
**ಏವಮುಕ್ತ್ವಾ ಮಹಾತೇಜಾಃ ಸಂಪ್ರಹೃಷ್ಟತನೂರುಹಃ ।**
**ಉತ್ಪಪಾತ ಮಹಾವೇಗೋ ವಾಯುವೇಗೇನ ಮಾರುತಿಃ ॥ ೪೭ ॥**

೪೫-೪೭. ''ನಿನ್ನ ಸ್ನೇಹಿತನಾದ ಧರ್ಮಾತ್ಮನಾದ ದಶರಥಪುತ್ರನಾದ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಕ್ಷೇಮದಿಂದಿರುವವನಾಗಿ ನಿನಗೆ ಕುಶಲವನ್ನು ಹೇಳಿದನು. ಆ ರಾಘವನು ಮುನಿಯಾದ ಭರದ್ವಾಜನಿಂದ ಅಪ್ಪಣೆಯನ್ನು ಪಡೆದವನಾಗಿ ಇಷ್ಟರಲ್ಲೇ ಬರಲಿದ್ದಾನೆ. ಆ ರಘುಶ್ರೇಷ್ಠನನ್ನು ನೀನು ನೋಡಲಿರುವೆ''. ಹೀಗೆಂದು ನುಡಿದು ಮಹಾತೇಜಸ್ವಿಯಾದ ಹನುಮಂತನು ಬಹಳವಾಗಿ ಹಿಗ್ಗಿದವನಾಗಿ ವಾಯುವೇಗದಿಂದ ಮತ್ತೆ ಮೇಲಕ್ಕೆ ಹಾರಿದನು.

**ಸೋಽಪಶ್ಯದ್ ರಾಮತೀರ್ಥಂ ಚ ಸರಯೂಂ ಚ ಮಹಾನದೀಮ್ ।**
**ತಾಮತಿಕ್ರಮ್ಯ ಹನುಮಾನ್ ನಂದಿಗ್ರಾಮಂ ಯಯೌ ಮುದಾ ॥ ೪೮ ॥**
**ಕ್ರೋಶಮಾತ್ರೇ ತ್ವಯೋಧ್ಯಾಯಾಶ್ಚೀರಕೃಷ್ಣಾಜಿನಾಂಬರಮ್ ।**
**ದದರ್ಶ ಭರತಂ ದೀನಂ ಕೃಶಮಾಶ್ರಮವಾಸಿನಮ್ ॥ ೪೯ ॥**
**ಮಲಪಂಕವಿದಿಗ್ಧಾಂಗಂ ಜಟಿಲಂ ವಲ್ಕಲಾಂಬರಮ್ ।**
**ಫಲಮೂಲಕೃತಾಹಾರಂ ರಾಮಚಿಂತಾಪರಾಯಣಮ್ ॥ ೫೦ ॥**
**ಪಾದುಕೇ ತೇ ಪುರಸ್ಕೃತ್ಯ ಶಾಸಯಂತಂ ವಸುಂಧರಾಮ್ ।**
**ಮಂತ್ರಿಭಿಃ ಪೌರಮುಖ್ಯೈಶ್ಚ ಕಾಷಾಯಾಂಬರಧಾರಿಭಿಃ ॥ ೫೧ ॥**
**ವೃತದೇಹಂ ಮೂರ್ತಿಮಂತಂ ಸಾಕ್ಷಾದ್ಧರ್ಮಮಿವ ಸ್ಥಿತಮ್ ।**
**ಉವಾಚ ಪ್ರಾಂಜಲಿರ್ವಾಕ್ಯಂ ಹನೂಮಾನ್ ಮಾರುತಾತ್ಮಜಃ ॥ ೫೨ ॥**

೪೮-೫೨. ಅವನು ರಾಮತೀರ್ಥವನ್ನೂ ಸರಯೂನದಿಯನ್ನೂ ಕಂಡನು. ಆ ನದಿಯನ್ನು ದಾಟಿ ಹನುಮಂತನು ನಂದಿಗ್ರಾಮಕ್ಕೆ ಸಂತೋಷದಿಂದ ಹೊರಟನು. ಅಯೋಧ್ಯೆಯಿಂದ ಕ್ರೋಶಮಾತ್ರದಷ್ಟು ದೂರದಲ್ಲಿರುವ ಆ ಗ್ರಾಮದಲ್ಲಿ ನಾರುಮಡಿ, ಕೃಷ್ಣಾಜಿನಗಳನ್ನುಟ್ಟು ದೀನನಾಗಿ ಬಡಕಲಾಗಿ ಆಶ್ರಮವಾಸಿಯಾಗಿದ್ದ ಭರತನನ್ನು ಕಂಡನು. ಅವನು ಮೈಯೆಲ್ಲಾ ಕೊಳೆಯಾಗಿಯೂ ಜಟಾಧಾರಿಯೂ ತೊಗಟೆಗಳನ್ನೇ ಬಟ್ಟೆಯಾಗಿ ಉಪಯೋಗಿಸಿದವನಾಗಿಯೂ ಗೆಡ್ಡೆಗಳು ಹಣ್ಣುಗಳನ್ನೇ ಆಹಾರವಾಗಿ ಉಳ್ಳವನಾಗಿಯೂ ಶ್ರೀರಾಮನನ್ನೇ ಚಿಂತಿಸುತ್ತಿರುವವ

ನಾಗಿಯೂ ಆ (ರಾಮನ) ಪಾದುಕೆಗಳನ್ನೇ ಮುಂದಿಟ್ಟುಕೊಂಡು ಭೂಮಿಯನ್ನಾಳುವವನಾಗಿಯೂ ಕಾಷಾಯವಸ್ತ್ರಧಾರಿಗಳಾದ ಮಂತ್ರಿಗಳಿಂದಲೂ ಪುರಪ್ರಮುಖರಿಂದಲೂ ಸುತ್ತುವರೆಯಲ್ಪಟ್ಟವನಾಗಿಯೂ ದೇಹವನ್ನು ಧರಿಸಿ ಎದುರಿಗೇ ನಿಂತಿರುವ ಧರ್ಮ (ದೇವತೆ)ಯಂತೆಯೂ ಕಂಡುಬರುತ್ತಿದ್ದನು. ಆಗ ಹನುಮಂತನು ಕೈಮುಗಿದುಕೊಂಡು ಹೀಗೆಂದನು :

**ಯಂ ತ್ವಂ ಚಿಂತಯಸೇ ರಾಮಂ ತಾಪಸಂ ದಂಡಕೇ ಸ್ಥಿತಮ್ ।**
**ಅನುಶೋಚಸಿ ಕಾಕುತ್ಸ್ಥಃ ಸ ತ್ವಾಂ ಕುಶಲಮಬ್ರವೀತ್ ॥ ೫೩ ॥**
**ಪ್ರಿಯಮಾಖ್ಯಾಮಿ ತೇ ದೇವ ಶೋಕಂ ತ್ಯಜ ಸುದಾರುಣಮ್ ।**
**ಅಸ್ಮಿನ್ ಮುಹೂರ್ತೇ ಭ್ರಾತ್ರಾ ತ್ವಂ ರಾಮೇಣ ಸಹ ಸಂಗತಃ ॥ ೫೪ ॥**
**ಸಮರೇ ರಾವಣಂ ಹತ್ವಾ ರಾಮಃ ಸೀತಾಮವಾಪ್ಯ ಚ ।**
**ಉಪಯಾತಿ ಸಮೃದ್ಧಾರ್ಥಃ ಸಸೀತಃ ಸಹಲಕ್ಷ್ಮಣಃ ॥ ೫೫ ॥**

೫೩-೫೫. 'ಎಲೈ ದೇವನೆ, ದಂಡಕಾರಣ್ಯದಲ್ಲಿ ನೆಲಸಿ ತಪಸ್ವಿಯಾಗಿರುವ ಯಾವ ರಾಮನನ್ನು ಕುರಿತು ನೀನು ಧ್ಯಾನಿಸುತ್ತಿರುವೆಯೋ ಹಾಗೂ ಶೋಕಪಡುತ್ತಿರುವೆಯೋ ಆ ಕಾಕುತ್ಸ್ಥನು ನಿನಗೆ ಕುಶಲವಾರ್ತೆಯನ್ನು ತಿಳಿಸಿರುತ್ತಾನೆ. ನಿನಗೆ ಪ್ರಿಯವನ್ನು ನುಡಿಯುತ್ತಿರುವೆನು. ದಾರುಣವಾದ ಶೋಕವನ್ನು ಬಿಡು. ಈ ಮುಹೂರ್ತದಲ್ಲಿಯೇ ಭ್ರಾತೃವಾದ ರಾಮನೊಡನೆ ನೀನು ಸಮಾಗಮವನ್ನು ಹೊಂದುವೆ. ರಾಮನು ಯುದ್ಧದಲ್ಲಿ ರಾವಣನನ್ನು ಸಂಹರಿಸಿ ಸೀತೆಯನ್ನು ಪಡೆದುಕೊಂಡು ಕಾರ್ಯಸಿದ್ಧಿಯನ್ನು ಹೊಂದಿದವನಾಗಿ ಸೀತಾಲಕ್ಷ್ಮಣರೊಡನೆ ಬರುತ್ತಿದ್ದಾನೆ.' (ಎಂದನು).

**ಏವಮುಕ್ತೋ ಮಹಾತೇಜಾಃ ಭರತೋ ಹರ್ಷಮೂರ್ಛಿತಃ ।**
**ಪಪಾತ ಭುವಿ ಚಾಸ್ವಸ್ಥಃ ಕೈಕೇಯೀಪ್ರಿಯನಂದನಃ ॥ ೫೬ ॥**
**ಆಲಿಂಗ್ಯ ಭರತಃ ಶೀಘ್ರಂ ಮಾರುತಿಂ ಪ್ರಿಯವಾದಿನಮ್ ।**
**ಆನಂದಜೈರಶ್ರುಜಲೈಃ ಸಿಷೇಚ ಭರತಃ ಕಪಿಮ್ ॥ ೫೭ ॥**
**ದೇವೋ ವಾ ಮಾನುಷೋ ವಾ ತ್ವಮನುಕ್ರೋಶಾದಿಹಾಗತಃ ।**
**ಪ್ರಿಯಾಖ್ಯಾನಸ್ಯ ತೇ ಸೌಮ್ಯ ದದಾಮಿ ಬ್ರುವತಃ ಪ್ರಿಯಮ್ ॥ ೫೮ ॥**
**ಗವಾಂ ಶತಸಹಸ್ರಂ ಚ ಗ್ರಾಮಾಣಾಂ ಚ ಶತಂ ವರಮ್ ।**
**ಸರ್ವಾಭರಣಸಂಪನ್ನಾ ಮುಗ್ಧಾಃ ಕನ್ಯಾಸ್ತು ಷೋಡಶ ॥ ೫೯ ॥**

೫೬-೫೯. ಈ ರೀತಿಯಾಗಿ ಹೇಳಲ್ಪಟ್ಟ ಕೈಕೇಯಿಯ ಮಗನಾದ ಭರತನು ಹರ್ಷದಿಂದ ಮೈಮರೆತವನಾಗಿ ಮೂರ್ಛೆಗೊಂಡವ(ನಂತೆ) ನೆಲದ ಮೇಲೆ

ಕುಸಿದನು. (ಅನಂತರ ಎಚ್ಚತ್ತವನಾಗಿ) ಎದ್ದು ಪ್ರಿಯವನ್ನು ನುಡಿದ ಹನುಮಂತನನ್ನು ಆಲಿಂಗಿಸಿಕೊಂಡು ಆನಂದಬಾಷ್ಪದ ನೀರುಗಳಿಂದ ಕಪಿಯನ್ನು ತೋಯಿಸಿಬಿಟ್ಟನು. ''ಅಯ್ಯಾ, ನೀನು ಯಾವನೋ ದೇವತೆಯೋ ಮನುಷ್ಯನೋ ಆಗಿದ್ದು ನನ್ನ ಮೇಲಿನ ಕರುಣೆಯಿಂದ ಇಲ್ಲಿಗೆ ಬಂದಿರುವೆಯಷ್ಟೆ ? ಪ್ರಿಯವನ್ನು ನುಡಿದ ನಿನಗೆ ಎಲೈ ಸೋಮ್ಯನೆ, ಪ್ರಿಯವಾದದ್ದನ್ನು ನೀಡುವೆನು. ಇದೊ, ನೂರುಸಾವಿರ ಗೋವುಗಳು, ನೂರು ಗ್ರಾಮ ಗಳು, ಸರ್ವಾಭರಣಸುಂದರಿಯರಾದ ಎಳೆಯರಾದ ಹದಿನಾರು ಜನ ಕನ್ಯೆಯರನ್ನು ಕೊಡುವೆನು'. ಎಂದನು.

**ಏವಮುಕ್ತ್ವಾ ಪುನಃ ಪ್ರಾಹ ಭರತೋ ಮಾರುತಾತ್ಮಜಮ್ ।**
**ಬಹೂನೀಮಾನಿ ವರ್ಷಾಣಿ ಗತಸ್ಯ ಸುಮಹದ್ವನಮ್ ॥ ೬೦॥**
**ಶೃಣೋಮ್ಯಹಂ ಪ್ರೀತಿಕರಂ ಮಮ ನಾಥಸ್ಯ ಕೀರ್ತನಮ್ ।**
**ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ॥ ೬೧ ॥**
**ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ।**
**ರಾಘವಸ್ಯ ಹರೀಣಾಂ ಚ ಕಥಮಾಸೀತ್ ಸಮಾಗಮಃ ॥ ೬೨ ॥**
**ತತ್ತ್ವಮಾಖ್ಯಾಹಿ ಭದ್ರಂ ತೇ ವಿಶ್ವಸೇಯಂ ವಚಸ್ತವ ।**

೬೦-೬೨. ಈ ರೀತಿಯಾಗಿ ಹೇಳಿ ಭರತನು ಮತ್ತೆ ಹನುಮಂತನನ್ನು ಕುರಿತು ಹೀಗೆಂದನು : 'ನನ್ನ ಒಡೆಯನಾದ (ರಾಮನ) ಕಥೆಯನ್ನು ಅವನು ಮಹಾರಣ್ಯಕ್ಕೆ ಹೊರಟುಹೋದ ಬಹಳ ವರ್ಷಗಳ ಅನಂತರ ಈಗ ಕೇಳುತ್ತಿರುವೆನು. ಅಹೋ, ಆಶ್ಚರ್ಯವು. ಈ ಮಂಗಳಕರವಾದ ಲೌಕಿಕ (ಕ್ಷೇಮಸಮಾಚಾರದ) ಸುದ್ದಿಯು ನನಗೆ -ಮನುಷ್ಯನಿಗೆ ನೂರು ವರ್ಷಗಳ ಮೇಲಾದರೂ ಆನಂದವು ದೊರಕಿಯೇ ದೊರಕುತ್ತದೆ ಎಂಬುದನ್ನು ನೆನಪುಕೊಡುತ್ತದೆ. ಅಯ್ಯ ಕಪಿಯೆ, ನಿನಗೆ ಮಂಗಳವಾಗಲಿ ; ಶ್ರೀರಾಮನಿಗೂ ಕಪಿಗಳಿಗೂ ಸಮಾಗಮವು ಹೇಗೆ ಉಂಟಾಯಿತು? ನಿಜವನ್ನು ಹೇಳು. ನಿನ್ನ ಮಾತನ್ನು ನಂಬಿರುವೆನು.

**ಏವಮುಕ್ತೋಽಥ ಹನುಮಾನ್ ಭರತೇನ ಮಹಾತ್ಮನಾ ।**
**ಆಚಚಕ್ಷೇಽಥ ರಾಮಸ್ಯ ಚರಿತಂ ಕೃತ್ಸ್ನಶಃ ಕ್ರಮಾತ್ ॥ ೬೩ ॥**
**ಶ್ರುತ್ವಾ ತು ಪರಮಾನಂದಂ ಭರತೋ ಮಾರುತಾತ್ಮಜಾತ್ ।**
**ಆಜ್ಞಾಪಯತ್ ಶತ್ರುಹಣಂ ಮುದಾ ಯುಕ್ತಂ ಮುದಾನ್ವಿತಃ ॥ ೬೪ ॥**
**ದೈವತಾನಿ ಚ ಯಾವಂತಿ ನಗರೇ ರಘುನಂದನ ।**
**ನಾನೋಪಹಾರಬಲಿಭಿಃ ಪೂಜಯಂತು ಮಹಾಧಿಯಃ ॥ ೬೫ ॥**

೬೩-೬೫. ಮಹಾತ್ಮನಾದ ಭರತನಿಂದ ಹೀಗೆ ಹೇಳಲ್ಪಟ್ಟ ಹನುಮಂತನು ಶ್ರೀರಾಮನ ಚರಿತ್ರೆಯನ್ನು ಸಂಪೂರ್ಣವಾಗಿ ಕ್ರಮವಾಗಿ ಹೇಳಲಾರಂಭಿಸಿದನು. ಹನುಮಂತನ ಕಡೆಯಿಂದ ಭರತನು ಪರಮಾನಂದಯುಕ್ತವಾದ ಚರಿತ್ರೆಯನ್ನು ಕೇಳಿ ಸಂತೋಷಗೊಂಡವನಾಗಿ ಆನಂದಭರಿತನಾಗಿ ಶತ್ರುಘ್ನನನ್ನು ಕುರಿತು ''ಎಲೈ ರಘುಶ್ರೇಷ್ಠನೆ, (ಅಯೋಧ್ಯಾ)ನಗರಿಯಲ್ಲಿ ಎಷ್ಟು ದೇವರುಗಳಿರುವವೋ ಅವುಗಳನ್ನೆಲ್ಲ ಪ್ರಾಜ್ಞರಾದ (ಅರ್ಚಕರು) ನಾನಾ ವಿಧವಾದ ಪೂಜಾ-ಬಲಿ-ಉಪಚಾರಗಳಿಂದ ಅರ್ಚಿಸಲಿ''.

**ಸೂತಾ ವೈತಾಲಿಕಾಶ್ಚೈವ ವಂದಿನಸ್ತುತಿಪಾಠಕಾಃ ।**
**ವಾರಮುಖ್ಯಾಶ್ಚ ಶತಶಃ ನಿರ್ಯಾಂತ್ವದ್ಯೈವ ಸಂಘಶಃ ॥ ೬೬ ॥**
**ರಾಜದಾರಾಸ್ತಥಾಮಾತ್ಯಾ ಸೇನಾಹಸ್ತ್ಯಶ್ವಪತ್ತಯಃ ।**
**ಬ್ರಾಹ್ಮಣಾಶ್ಚ ತಥಾ ಪೌರಾ ರಾಜಾನೋ ಯೇ ಸಮಾಗತಾಃ ॥ ೬೭ ॥**
**ನಿರ್ಯಾಂತು ರಾಘವಸ್ಯಾದ್ಯ ದ್ರಷ್ಟುಂ ಶಶಿನಿಭಾನನಮ್ ।**

೬೬-೬೭. ಸೂತರುಗಳು, ಸ್ತುತಿಪಾಠಕರು, ವಂದಿಮಾಗಧರು, ವಾರಾಂಗನೆಯರು - ಮುಂತಾಗಿ ಎಲ್ಲರೂ ಗುಂಪಾಗಿ ನೂರಾರುಗಟ್ಟಲೆ ಹೊರಡಲಿ. ರಾಜಪತ್ನಿಯರು, ಅಮಾತ್ಯರುಗಳು, ಕುದುರೆ, ಆನೆ, ಕಾಲಾಳುಗಳಿಂದ ಕೂಡಿದ ಸೇನೆ, ಬ್ರಾಹ್ಮಣರು, ಪೌರರು (ಅಯೋಧ್ಯೆಗೆ) ಬಂದಿರುವ ರಾಜರುಗಳು ಎಲ್ಲರೂ ಶ್ರೀರಾಮನ ಚಂದ್ರಸಮಾನವಾದ ಮುಖವನ್ನು ದರ್ಶನಮಾಡುವದಕ್ಕಾಗಿ ಹೊರಡಲಿ.

**ಭರತಸ್ಯ ವಚಃ ಶ್ರುತ್ವಾ ಶತ್ರುಘ್ನಪರಿಚೋದಿತಾಃ ।**
**ಅಲಂಚಕ್ರುಶ್ಚ ನಗರೀಂ ಮುಕ್ತಾರತ್ನಮಯೋಜ್ಜ್ವಲೈಃ ॥ ೬೮ ॥**
**ತೋರಣೈಶ್ಚ ಪತಾಕಾಭಿರ್ವಿಚಿತ್ರಾಭಿರನೇಕಧಾ ।**
**ಅಲಂಕುರ್ವಂತಿ ವೇಶ್ಮಾನಿ ನಾನಾಬಲಿವಿಚಕ್ಷಣಾಃ ॥ ೬೯ ॥**

೬೮-೬೯. ಭರತನ ಮಾತನ್ನು ಕೇಳಿ ಶತ್ರುಘ್ನನಿಂದ ಪ್ರೇರಿತರಾದ (ಜನರು) ಪಟ್ಟಣವನ್ನು ಮುತ್ತುರತ್ನಗಳಿಂದ ಹೊಳೆಯುವ ತೋರಣಗಳಿಂದಲೂ ವಿಚಿತ್ರವಾದ ಬಾವುಟಗಳಿಂದಲೂ ನಾನಾರೀತಿಯಾಗಿ ಅಲಂಕರಿಸಿದರು. ಹಾಗೆಯೇ ಅನೇಕ ರೀತಿಯ ಪೂಜಾಲಂಕಾರಗಳಿಂದ ಮನೆಗಳನ್ನು ಸಿಂಗರಿಸಿದರು.

**ನಿರ್ಯಾಂತಿ ವೃಂದಶಃ ಸರ್ವೇ ರಾಮದರ್ಶನಲಾಲಸಾಃ ।**
**ಹಯಾನಾಂ ಶತಸಾಹಸ್ರಂ ಗಜಾನಾಮಯುತಂ ತಥಾ ॥ ೭೦ ॥**

**ರಥಾನಾಂ ದಶಸಾಹಸ್ರಂ ಸ್ವರ್ಣಸೂತ್ರವಿಭೂಷಿತಮ್ ।**
**ಪಾರಮೇಷ್ಠ್ಯೀನ್ಯುಪಾದಾಯ ದ್ರವ್ಯಾಣ್ಯುಚ್ಚಾವಚಾನಿ ಚ ॥ ೭೧**

೭೦-೭೧. ನೂರುಸಾವಿರ ಕುದುರೆಗಳು, ಹತ್ತುಸಾವಿರ ಆನೆಗಳು, ಮತ್ತು ಚಿನ್ನದ ದಾರಗಳನ್ನು ಹೆಣೆದು ಅಲಂಕರಿಸಿದ್ದ ರಥಗಳು, ಹೀಗೆ ಬೆಲೆಬಾಳುವ ಹಾಗು ಸಾಧಾರಣವಾದ ಎಲ್ಲಾ ಪದಾರ್ಥಗಳನ್ನೂ ಕಾಣಿಕೆಗಳಾಗಿ ತೆಗೆದುಕೊಂಡು ರಾಮನನ್ನು ನೋಡಬೇಕೆಂಬ ಇಚ್ಛೆಯಿಂದ ಗುಂಪುಗುಂಪಾಗಿ ಎಲ್ಲರೂ ಬರುತ್ತಿದ್ದರು.

**ತತಸ್ತು ಶಿಬಿಕಾರೂಢಾ ನಿರ್ಯಯೂ ರಾಜಯೋಷಿತಃ ।**
**ಭರತಃ ಪಾದುಕೇ ನ್ಯಸ್ಯ ಶಿರಸ್ಯೇವ ಕೃತಾಂಜಲಿಃ ॥ ೭೨ ॥**
**ಶತ್ರುಘ್ನಸಹಿತೋ ರಾಮಂ ಪಾದಚಾರೇಣ ನಿರ್ಯಯೌ ।**

೭೨. ಅನಂತರ ರಾಜಸ್ತ್ರೀಯರೆಲ್ಲರೂ ಪಲ್ಲಕ್ಕಿಗಳನ್ನು ಏರಿದವರಾಗಿ ಹೊರಟರು. ಭರತನಾದರೊ, ತಲೆಯಮೇಲೆಯೇ (ರಾಮ)ಪಾದುಕೆಗಳನ್ನು ಹೊತ್ತು ಕೈಮುಗಿದುಕೊಂಡು ಶತ್ರುಘ್ನನೊಡಗೂಡಿ ಕಾಲುನಡಗೆಯಿಂದಲೆ ಹೊರಟನು.

**ತದೈವ ದೃಶ್ಯತೇ ದೂರಾದ್ ವಿಮಾನಂ ಚಂದ್ರಸನ್ನಿಭಮ್ ।**
**ಪುಷ್ಪಕಂ ಸೂರ್ಯಸಂಕಾಶಂ ಮನಸಾ ಬ್ರಹ್ಮನಿರ್ಮಿತಮ್ ॥ ೭೩ ॥**
**ಏತಸ್ಮಿನ್ ಭ್ರಾತರೌ ವೀರೌ ವೈದೇಹ್ಯಾ ರಾಮಲಕ್ಷ್ಮಣೌ ।**
**ಸುಗ್ರೀವಶ್ಚ ಕಪಿಶ್ರೇಷ್ಠೋ ಮಂತ್ರಿಭಿಶ್ಚ ವಿಭೀಷಣಃ ॥ ೭೪ ॥**
**ದೃಶ್ಯತೇ ಪಶ್ಯತ ಜನಾ ಇತ್ಯಾಹ ಪವನಾತ್ಮಜಃ ।**

೭೩-೭೪. ಆ ವೇಳೆಗಾಗಲೇ ಚಂದ್ರನಂತೆ ಕಾಣುತ್ತಿದ್ದ ಹಾಗೂ ಸೂರ್ಯನಂತೆ ಹೊಳೆಯುತ್ತಿದ್ದ ಬ್ರಹ್ಮನ ಮಾನಸಸೃಷ್ಟಿಯಾದ ಪುಷ್ಪಕವಿಮಾನವು ಕಾಣಿಸಿಕೊಂಡಿತು. ಆಗ ಹನುಮಂತನು "ಎಲೈ ಜನಗಳಿರಾ, ನೋಡಿರಿ ; ಈ ವಿಮಾನದಲ್ಲಿ ವೀರರಾದ ಭ್ರಾತೃಗಳಾದ ರಾಮಲಕ್ಷ್ಮಣರು ಸೀತೆಯೊಡನೆ ಇದ್ದಾರೆ. ಕಪಿಶ್ರೇಷ್ಠನಾದ ಸುಗ್ರೀವನೂ ಮಂತ್ರಿಗಳೊಡಗೂಡಿದ ವಿಭೀಷಣನೂ ಕಂಡು ಬರುತ್ತಿದ್ದಾರೆ" ಎಂದನು.

**ತತೋ ಹರ್ಷಸಮುದ್ಭೂತೋ ನಿಃಸ್ವನೋ ದಿವಮಸ್ಪೃಶತ್ ।**
**ಸ್ತ್ರೀಬಾಲಯುವವೃದ್ಧಾನಾಂ ರಾಮೋಽಯಮಿತಿ ಕೀರ್ತನಾತ್ ॥ ೭೫ ॥**
**ರಥಕುಂಜರವಾಜಿಸ್ಥಾ ಅವತೀರ್ಯ ಮಹೀಂ ಗತಾಃ ।**
**ದದೃಶುಸ್ತೇ ವಿಮಾನಸ್ಥಂ ಜನಾಃ ಸೋಮಮಿವಾಂಬರೇ ॥ ೭೬ ॥**

೭೫-೭೬. ಅನಂತರ ಸ್ತ್ರೀಯರು, ಬಾಲಕರು, ಯುವಜನರು, ವೃದ್ಧರೇ ಮುಂತಾದವರ ಹರ್ಷದಿಂದೊಡಗೂಡಿದ 'ಇವನೇ ರಾಮನು' ಎಂಬ ಗಟ್ಟಿಯಾದ ಕೂಗು ಸ್ವರ್ಗಲೋಕವನ್ನು ಮುಟ್ಟಿತು. ರಥ, ಆನೆ, ಕುದುರೆಗಳಮೇಲೆ ಕುಳಿತಿದ್ದವರೆಲ್ಲರೂ ಕೆಳಗಿಳಿದು ಭೂಮಿಯಮೇಲೆ ನಿಂತರು. ಆ ಜನರೆಲ್ಲರೂ ಆಕಾಶದಲ್ಲಿ ಚಂದ್ರನನ್ನು ಕಂಡಂತೆ ವಿಮಾನದಲ್ಲಿದ್ದ ರಾಮನನ್ನು ಕಂಡರು.

**ಪ್ರಾಂಜಲಿರ್ಭರತೋ ಭೂತ್ವಾ ಪ್ರಹೃಷ್ಟೋ ರಾಘವೋನ್ಮುಖಃ ।**
**ತತೋ ವಿಮಾನಾಗ್ರಗತಂ ಭರತೋ ರಾಘವಂ ಮುದಾ ॥ ೭೭ ॥**
**ವವಂದೇ ಪ್ರಣತೋ ರಾಮಂ ಮೇರುಸ್ಥಮಿವ ಭಾಸ್ಕರಮ್ ।**
**ತತೋ ರಾಮಾಭ್ಯನುಜ್ಞಾತಂ ವಿಮಾನಮುಪತದ್ ಭುವಿ ॥ ೭೮ ॥**
**ಆರೋಪಿತೋ ವಿಮಾನಂ ತದ್ಭರತಃ ಸಾನುಜಸ್ತದಾ ।**
**ರಾಮಮಾಸಾದ್ಯ ಮುದಿತಃ ಪುನರೇವಾಭ್ಯವಾದಯತ್ ॥ ೭೯ ॥**

೭೭-೭೯. ರಾಮನಕಡೆಗೆ ತಿರುಗಿದ, ಕೈಮುಗಿದುಕೊಂಡಿದ್ದ ಭರತನು ಬಹಳ ಸಂತೋಷಗೊಂಡವನಾಗಿ ವಿಮಾನದಲ್ಲಿ ಅಗ್ರಾಸನದಲ್ಲಿ ಕುಳಿತಿದ್ದ ಮೇರುಪರ್ವತ ದಲ್ಲಿರುವ ಸೂರ್ಯನಂತಿದ್ದ ರಾಮನನ್ನು ನಮ್ರವಾಗಿ ನಮಸ್ಕರಿಸಿದನು. ಅನಂತರ ರಾಮನ ಅಪ್ಪಣೆಯನ್ನು ಪಡೆದು ವಿಮಾನವು ಭೂಮಿಗೆ ಇಳಿಯಿತು. ಶತ್ರುಘ್ನ ನೊಡನೆ ವಿಮಾನವನ್ನೇರಿದ ಭರತನು ರಾಮನನ್ನು ಬಳಿಸಾರಿ ಸಂತೋಷದಿಂದ ಮತ್ತೆ ನಮಸ್ಕಾರಮಾಡಿದನು.

**ಸಮುತ್ಥಾಪ್ಯ ಚಿರಾದ್ ದೃಷ್ಟಂ ಭರತಂ ರಘುನಂದನಃ ।**
**ಭ್ರಾತರಂ ಸ್ವಾಂಕಮಾರೋಪ್ಯ ಮುದಾ ತಂ ಪರಿಷಸ್ವಜೇ ॥ ೮೦ ॥**
**ತತೋ ಲಕ್ಷ್ಮಣಮಾಸಾದ್ಯ ವೈದೇಹೀಂ ನಾಮ ಕೀರ್ತಯನ್ ।**
**ಅಭ್ಯವಾದಯತ ಪ್ರೀತೋ ಭರತಃ ಪ್ರೇಮವಿಹ್ವಲಃ ॥ ೮೧ ॥**
**ಸುಗ್ರೀವಂ ಜಾಂಬವಂತಂ ಚ ಯುವರಾಜಂ ತಥಾಂಗದಮ್ ।**
**ಮೈಂದದ್ವಿವಿದನೀಲಾಂಶ್ಚ ಋಷಭಂ ಚೈವ ಸಸ್ವಜೇ ॥ ೮೨ ॥**
**ಸುಷೇಣಂ ಚ ನಲಂ ಚೈವ ಗವಾಕ್ಷಂ ಗಂಧಮಾದನಮ್ ।**
**ಶರಭಂ ಪನಸಂ ಚೈವ ಭರತಃ ಪರಿಷಸ್ವಜೇ ॥ ೮೩ ॥**

೮೦-೮೩. ರಘುಪುತ್ರನಾದ ಶ್ರೀರಾಮನು ಬಹಳ ಕಾಲದ ಅನಂತರ ಕಂಡ ಭರತನನ್ನು ಮೇಲಕ್ಕೆಬ್ಬಿಸಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆನಂದದಿಂದ ಆಲಿಂಗಿಸಿಕೊಂಡನು. ಅನಂತರ ಭರತನು ಸೀತಾದೇವಿಯ ಹೆಸರನ್ನು ಉಚ್ಚರಿಸುತ್ತಾ

ಪ್ರೇಮಪೂರಿತ ನಾಗಿ ನಮಸ್ಕರಿಸಿದನು. ಲಕ್ಷ್ಮಣನನ್ನು (ಚಿಕ್ಕವನಾದ್ದರಿಂದ) ಅಭಿನಂದಿಸಿದನು. ಹಾಗೆಯೇ ಸುಗ್ರೀವ, ಜಾಂಬವಂತ, ಯುವರಾಜನಾದ ಅಂಗದ, ಮೈಂದ, ದ್ವಿವಿದ, ನೀಲ, ಋಷಭರುಗಳನ್ನೂ, ಸುಷೇಣ, ನಲ, ಗವಾಕ್ಷ, ಗಂಧ-ಮಾದನ, ಶರಭ, ಪನಸ - ಇವರುಗಳನ್ನೂ ಭರತನು ಅಪ್ಪಿಕೊಂಡನು.

**ಸರ್ವೇ ತೇ ಮಾನುಷಂ ರೂಪಂ ಕೃತ್ವಾ ಭರತಮಾದೃತಾಃ ।**
**ಪಪ್ರಚ್ಛುಃ ಕುಶಲಂ ಸೌಮ್ಯಾಃ ಪ್ರಹೃಷ್ಟಾಶ್ಚ ಪ್ಲವಂಗಮಾಃ ॥ ೮೪ ॥**
**ತತಃ ಸುಗ್ರೀವಮಾಲಿಂಗ್ಯ ಭರತಃ ಪ್ರಾಹ ಭಕ್ತಿತಃ ।**
**ತ್ವತ್ಸಹಾಯೇನ ರಾಮಸ್ಯ ಜಯೋಽಭೂದ್ ರಾವಣೋ ಹತಃ ॥ ೮೫ ॥**
**ತ್ವಮಸ್ಮಾಕಂ ಚತುರ್ಣಾಂ ತು ಭ್ರಾತಾ ಸುಗ್ರೀವ ಪಂಚಮಃ ।**

೮೪-೮೫. ಸೌಮ್ಯರಾದ ಅವರೆಲ್ಲರೂ ಮನುಷ್ಯರೂಪವನ್ನು ಧರಿಸಿ ಆದರ ದಿಂದ ಭರತನನ್ನು ಕುಶಲಪ್ರಶ್ನೆಮಾಡಿದರು. ಹಾಗೂ ಆ ಕಪಿಗಳೆಲ್ಲರೂ ಬಹಳ ಆನಂದದಿಂದ ಕೂಡಿದ್ದರು. ಅನಂತರ ಭರತನು ಸುಗ್ರೀವನನ್ನು ಆಲಿಂಗಿಸಿಕೊಂಡು ಭಕ್ತಿಯಿಂದ ಹೀಗೆಂದನು. ''ಎಲೈ ಸುಗ್ರೀವನೆ, ನಿನ್ನ ಸಹಾಯದಿಂದ ರಾಮನಿಗೆ ವಿಜಯವಾಯಿತು. ರಾವಣನು ನಾಶಹೊಂದಿದನು. ನೀನಾದರೊ, ನಾವು ನಾಲ್ವರು ಸಹೋದರರ ಜೊತೆಗ ಐದನೆಯವನಾಗಿರುವೆ.''

**ಶತ್ರುಘ್ನಶ್ಚ ತದಾ ರಾಮಮಭಿವಾದ್ಯ ಸಲಕ್ಷ್ಮಣಮ್ ।**
**ಸೀತಾಯಾಶ್ಚರಣೌ ಪಶ್ಚಾದ್ ವವಂದೇ ವಿನಯಾನ್ವಿತಃ ॥ ೮೬ ।**
**ರಾಮೋ ಮಾತರಮಾಸಾದ್ಯ ವಿವರ್ಣಾಂ ಶೋಕವಿಹ್ವಲಾಮ್ ।**
**ಜಗ್ರಾಹ ಪ್ರಣತಃ ಪಾದೌ ಮನೋ ಮಾತುಃ ಪ್ರಸಾದಯನ್ ॥ ೮೭ ॥**
**ಕೈಕೇಯೀಂ ಚ ಸುಮಿತ್ರಾಂ ಚ ನನಾಮೇತರಮಾತರಃ ।**

೮೬-೮೭. ಆಗ ಶತ್ರುಘ್ನನು ಲಕ್ಷ್ಮಣಸಹಿತನಾದ ರಾಮನನ್ನು ನಮಸ್ಕರಿಸಿ ಅನಂತರ ಸೀತಾದೇವಿಯ ಎರಡು ಪಾದಗಳಿಗೂ ವಿನಯದಿಂದ ನಮಸ್ಕರಿಸಿದನು. ದುಃಖದಿಂದ ಬಳಲಿದವಳೂ ವಿಷಾದಹೊಂದಿದವಳೂ ಆಗಿದ್ದ ತಾಯಿಯಾದ (ಕೌಸಲ್ಯೆಯನ್ನು) ರಾಮನು ಬಳಿಸಾರಿದವನಾಗಿ, ತಾಯಿಯ ಮನಸ್ಸನ್ನು ಸಮಾಧಾನಗೊಳಿಸುತ್ತಾ, ಬಗ್ಗಿ ಪಾದಗಳನ್ನು ಹಿಡಿದುಕೊಂಡನು. ಅನಂತರ ಕೈಕೇಯಿ, ಸುಮಿತ್ರಾ - ತಾಯಂದಿರಿಗೂ ನಮಸ್ಕರಿಸಿದನು.

**ಭರತಃ ಪಾದುಕೇ ತೇ ತು ರಾಘವಸ್ಯ ಸುಪೂಜಿತೇ ।**
**ಯೋಜಯಾಮಾಸ ರಾಮಸ್ಯ ಪಾದಯೋರ್ಭಕ್ತಿಸಂಯುತಃ ॥ ೮೮ ॥**

**ರಾಜ್ಯಮೇತನ್ನ್ಯಾಸಭೂತಂ ಮಯಾ ನಿರ್ಯಾತಿತಂ ತವ ।**
**ಅದ್ಯ ಮೇ ಸಫಲಂ ಜನ್ಮ ಫಲಿತೋ ಮೇ ಮನೋರಥಃ ॥ ೮೯ ॥**
**ಯತ್ಪಶ್ಯಾಮಿ ಸಮಾಯಾತಮಯೋಧ್ಯಾಂ ತ್ವಾಮಹಂ ಪ್ರಭೋ ।**
**ಕೋಷ್ಠಾಗಾರಂ ಬಲಂ ಕೋಶಂ ಕೃತಂ ದಶಗುಣಂ ಮಯಾ ।**
**ತ್ವತ್ತೇಜಸಾ ಜಗನ್ನಾಥ ಪಾಲಯಸ್ವ ಪುರಂ ಸ್ವಕಮ್ ॥ ೯೦ ॥**

೮೮-೯೦. ಭರತನು ಚೆನ್ನಾಗಿ ಪೂಜಿಸಲ್ಪಟ್ಟ ಶ್ರೀರಾಮನ ಆ ಎರಡು ಪಾದುಕೆಗಳನ್ನು ಭಕ್ತಿಯಿಂದ ಕೂಡಿದವನಾಗಿ ರಾಮನ ಎರಡು ಪಾದಗಳಿಗೆ ತೊಡಿಸಿದನು. ''ಎಲೈ ಪ್ರಭುವೆ, ಈ ಯಾವ ರಾಜ್ಯವು ನನ್ನಲ್ಲಿ ನ್ಯಾಸವಾಗಿ ಇಡಲ್ಪಟ್ಟಿತ್ತೋ ಅದನ್ನು ನಿನಗೆ ಈಗ ಅರ್ಪಿಸಿರುವೆನು. ಇನ್ನು ನನ್ನ ಹುಟ್ಟು ಸಾರ್ಥಕವಾಯಿತು. ನನ್ನ ಇಷ್ಟಾರ್ಥವೂ ನೆರವೇರಿತು. ಏಕೆಂದರೆ ನೀನು ಅಯೋಧ್ಯೆಗೆ ಹಿಂದಿರುಗಿ ಬಂದಿರುವೆ. ಈವರೆಗೆ ಸೈನ್ಯ, ಭಂಡಾರ, ಬಲ, ಎಲ್ಲವನ್ನೂ ಹತ್ತುಪಟ್ಟು ಬೆಳೆಯಿಸಿರುವೆನು. ಇದು ನಿನ್ನ ಮಹಿಮೆಯೇ - ಎಂದು ತಿಳಿದಿರುವೆನು. ಎಲೈ ಜಗನ್ನಾಥನೆ, ಇನ್ನು ನಿನ್ನ ನಗರವನ್ನು ನೀನು ಕಾಪಾಡುವವನಾಗು''- (ಎಂದು ಹೇಳಿದನು.)

**ಇತಿ ಬ್ರುವಾಣಂ ಭರತಂ ದೃಷ್ಟ್ವಾ ಸರ್ವೇ ಕಪೀಶ್ವರಾಃ ।**
**ಮುಮುಚುರ್ನೇತ್ರಜಂ ತೋಯಂ ಪ್ರಶಶಂಸುರ್ಮುದಾನ್ವಿತಾಃ ॥ ೯೧ ॥**
**ತತೋ ರಾಮಃ ಪ್ರಹೃಷ್ಟಾತ್ಮಾ ಭರತಂ ಸ್ವಾಂಕಗಂ ಮುದಾ ।**
**ಯಯೌ ತೇನ ವಿಮಾನೇನ ಭರತಸ್ಯಾಶ್ರಮಂ ತದಾ ॥ ೯೨ ॥**
**ಅವರುಹ್ಯ ತದಾ ರಾಮೋ ವಿಮಾನಾಗ್ರ್ಯಾನ್ಮಹೀತಲಮ್ ।**

೯೧-೯೨. ಈ ರೀತಿಯಾಗಿ ಹೇಳುತ್ತಿರುವ ಭರತನನ್ನು ಕಂಡು ಕಪಿಶ್ರೇಷ್ಠರೆಲ್ಲರೂ ಆನಂದಬಾಷ್ಪವನ್ನು ಸುರಿಸಿದರು. ಸಂತೋಷದಿಂದ ಭರತನನ್ನು ಹೊಗಳಿದರು. ಅನಂತರ ರಾಮನು ಸಂತೋಷಗೊಂಡವನಾಗಿ ತನ್ನ ತೊಡೆಯಮೇಲೆ ಭರತನು ಕುಳಿತಿದ್ದಂತೆಯೇ ಅದೇ ವಿಮಾನದಲ್ಲಿ ಭರತನ ಆಶ್ರಮಕ್ಕೆ ಬಂದನು. ಆ ಶ್ರೇಷ್ಠವಾದ ವಿಮಾನದಿಂದ ನೆಲದ ಮೇಲೆ ಅಲ್ಲಿಳಿದುಬಿಟ್ಟನು.

**ಅಬ್ರವೀತ್ ಪುಷ್ಪಕಂ ದೇವೋ ಗಚ್ಛ ವೈಶ್ರವಣಂ ವಹ ।**
**ಅನುಗಚ್ಛಾನುಜಾನಾಮಿ ಕುಬೇರಂ ಧನಪಾಲಕಮ್ ॥ ೯೩ ॥**
**ರಾಮೋ ವಸಿಷ್ಠಸ್ಯ ಗುರೋಃ ಪದಾಂಬುಜಂ**
**ನತ್ವಾ ಯಥಾ ದೇವಗುರೋಃ ಶತಕ್ರತುಃ ।**
**ದತ್ವಾ ಮಹಾರ್ಹಾಸನಮುತ್ತಮಂ ಗುರೋ-**
**ರುಪಾವಿವೇಶಾಥ ಗುರೋಃ ಸಮೀಪತಃ ॥ ೯೪ ॥**

೯೩-೯೪. ದೇವನಾದ (ರಾಮನು) ಪುಷ್ಪಕ (ವಿಮಾನವನ್ನು)ಕುರಿತು ಹೀಗೆಂದನು: ''ನೀನು ಇಲ್ಲಿಂದ ಹೊರಡು ; ಇನ್ನು ಮುಂದೆ ಧನಪಾಲಕನಾದ ಕುಬೇರನನ್ನು ಸೇರಿ ಅವನನ್ನು ಸೇವಿಸುವವನಾಗು. ನಿನಗೆ ಅಪ್ಪಣೆಯನ್ನು ಕೊಟ್ಟಿರುವೆನು.'' ಅನಂತರ ರಾಮನು ಗುರುಗಳಾದ ವಸಿಷ್ಠರ ಪಾದಾರವಿಂದಗಳನ್ನು ನಮಸ್ಕರಿಸಿ - ದೇವೇಂದ್ರನು ಬೃಹಸ್ಪತಿಯನ್ನು ಗೌರವಿಸುವಂತೆ - ಆ ಗುರುವಿಗೆ ಬಹಳ ಬೆಲೆಬಾಳುವ ಉತ್ತಮ ಆಸನವನ್ನು ನೀಡಿ ಅನಂತರ ತಾನೂ ಗುರುವಿನ ಹತ್ತಿರದಲ್ಲಿಯೇ ಕುಳಿತನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ**

**ಚತುರ್ದಶಃ ಸರ್ಗಃ**

-----------

## ಹದಿನೈದನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ತತಸ್ತು ಕೈಕೇಯಿಪುತ್ರೋ ಭರತೋ ಭಕ್ತಿಸಂಯುತಃ ।**
**ಶಿರಸ್ಯಂಜಲಿಮಾಧಾಯ ಜ್ಯೇಷ್ಠಂ ಭ್ರಾತರಮಬ್ರವೀತ್ ॥ ೧ ॥**
**ಮಾತಾ ಮೇ ಸತ್ಕೃತಾ ರಾಮ ದತ್ತಂ ರಾಜ್ಯಂ ತ್ವಯಾ ಮಮ ।**
**ದದಾಮಿ ತತ್ತೇ ಚ ಪುನಃ ಯಥಾ ತ್ವಮದದಾ ಮಮ ॥ ೨ ॥**
**ಇತ್ಯುಕ್ತ್ವಾ ಪಾದಯೋರ್ಭಕ್ತ್ಯಾ ಸಾಷ್ಟಾಂಗಂ ಪ್ರಣಿಪತ್ಯ ಚ ।**
**ಬಹುಧಾ ಪ್ರಾರ್ಥಯಾಮಾಸ ಕೈಕೇಯ್ಯಾ ಗುರುಣಾ ಸಹ ॥ ೩ ॥**

೧-೩. ಶ್ರೀಮಹಾದೇವನಿಂತೆಂದನು : ಅನಂತರ ಕೈಕೇಯಿಪುತ್ರನಾದ ಭರತನು ಭಕ್ತಿಯಿಂದ ಕೂಡಿದವನಾಗಿ ಕೈಗಳನ್ನು ತಲೆಯ ಮೇಲಕ್ಕೆ ಜೋಡಿಸಿಕೊಂಡು ಹಿರಿಯಣ್ಣನಾದ ರಾಮನನ್ನು ಕುರಿತು ಹೀಗೆಂದನು : ''ಎಲೈ ರಾಮನೆ, ನಮ್ಮ ತಾಯಿಯು ಸತ್ಕರಿಸಲ್ಪಟ್ಟಳು - ಎಂದರೆ (ದಶರಥನು ಆಕೆಗೆ ರಾಜ್ಯವನ್ನು ಕೊಟ್ಟನು). ನೀನೂ ಅದನ್ನು ಬಿಟ್ಟಕೊಡುವವನಾಗಿದ್ದೆ. ಈಗ ಮತ್ತೆ ಅದೇ ರಾಜ್ಯವನ್ನು - ನೀನು ಹೇಗೆ ಕೊಟ್ಟಿದ್ದೆಯೋ ಹಾಗೆ - ಹಿಂದಕ್ಕೆ ನಿನಗೆ ಕೊಡುವೆನು''. ಹೀಗೆಂದು ಹೇಳಿ ಭಕ್ತಿಯಿಂದ ಎರಡು ಕಾಲುಗಳಿಗೂ ಸಾಷ್ಟಾಂಗವಾಗಿ ನಮಸ್ಕರಿಸಿ ಕೈಕೇಯಿಯೊಡನೆ ಹಾಗೂ ಗುರುವಾದ ವಸಿಷ್ಠನೊಡಗೂಡಿ ಬಹಳವಾಗಿ ಬೇಡಿಕೊಂಡನು.

**ತಥೇತಿ ಪ್ರತಿಜಗ್ರಾಹ ಭರತಾದ್ ರಾಜ್ಯಮೀಶ್ವರಃ ।**
**ಮಾಯಾಮಾಶ್ರಿತ್ಯ ಸಕಲಾಂ ನರಚೇಷ್ಟಾಮುಪಾಗತಃ ॥ ೪ ॥**
**ಸ್ವಾರಾಜ್ಯಾನುಭವೋ ಯಸ್ಯ ಸುಖಜ್ಞಾನೈಕರೂಪಿಣಃ ।**
**ನಿರಸ್ತಾತಿಶಯಾನಂದರೂಪಿಣಃ ಪರಮಾತ್ಮನಃ ॥ ೫ ॥**
**ಮಾನುಷೇಣ ತು ರಾಜ್ಯೇನ ಕಿಂ ತಸ್ಯ ಜಗದೀಶಿತುಃ । ॥ ೬ ॥**

೪-೬. ಹಾಗೆಯೇ ಆಗಲಿ - ಎಂದು ಭರತನಿಂದ ರಾಜ್ಯವನ್ನು ಸ್ವೀಕರಿಸಿದನು. ಈಶ್ವರನಾದ (ರಾಮನು) ಮಾಯೆಯನ್ನಾಶ್ರಯಿಸಿ ಎಲ್ಲಾ ವಿಧವಾದ ಮಾನುಷಲೀಲೆಯನ್ನೂ ಧರಿಸಿದ್ದನು. ಜಗದೀಶ್ವರನಾದ ಹಾಗೂ ಸುಖಜ್ಞಾನರೂಪನೂ ಆನಂದದ ಎಲ್ಲೆಯನ್ನೇ ಮೀರಿದ ಸ್ವರೂಪನೂ ಆದ ಪರಮಾತ್ಮನಾದ ಅವನಿಗೆ ತನ್ನ ಸ್ವರೂಪಾನಂದವೆಂಬ ಸ್ವಾರಾಜ್ಯಾನುಭವವೇ ಇದ್ದುಕೊಂಡಿರುವಾಗ ಈ ಮನುಷ್ಯ ರಾಜ್ಯಮಾತ್ರದಿಂದ ಆಗಬೇಕಾದದ್ದಾದರೂ ಏನಿದ್ದೀತು ?

**ಯಸ್ಯ ಭ್ರೂಭಂಗಮಾತ್ರೇಣ ತ್ರಿಲೋಕೀ ನಶ್ಯತಿ ಕ್ಷಣಾತ್ ।**
**ಯಸ್ಯಾನುಗ್ರಹಮಾತ್ರೇಣ ಭವತ್ಯಾಖಂಡಲಶ್ರಿಯಃ ॥ ೭ ॥**
**ಲೀಲಾಸೃಷ್ಟಮಹಾಸೃಷ್ಟೇಃ ಕಿಯದೇತದ್ ರಮಾಪತೇಃ ।**
**ತಥಾಪಿ ಭಜತಾಂ ನಿತ್ಯಂ ಕಾಮಪೂರವಿಧಿತ್ಸಯಾ ॥ ೮ ॥**
**ಲೀಲಾಮಾನುಷದೇಹೇನ ಸರ್ವಮಪ್ಯನುವರ್ತತೇ ॥**

೭-೮. ಯಾವನು ಹುಬ್ಬನ್ನು ಮಿಟುಕಿಸಿದ ಮಾತ್ರದಿಂದ ಮೂರು ಲೋಕವೂ ಕ್ಷಣಮಾತ್ರದಲ್ಲಿ ನಾಶವಾಗಿಬಿಡುವದೋ- ಯಾವನ ಅನುಗ್ರಹಮಾತ್ರದಿಂದ ದೇವೇಂದ್ರನ ಸಂಪತ್ತುಗಳುಂಟಾಗುವವೋ - ಅಂಥ ರಮಾಪತಿಯಾದ, ಲೀಲಾ ಮಾತ್ರದಿಂದ ಜಗತ್ಸೃಷ್ಟಿ ಯನ್ನು ಕೈಗೊಳ್ಳುವವನಿಗೆ ಈ ರಾಜ್ಯವು ಎಷ್ಟರ ಮಟ್ಟಿನದಾಗಿದ್ದೀತು ? ಹೀಗಿದ್ದರೂ ಭಜಿಸುವವರಿಗೆ ಯಾವಾಗಲೂ ಇಷ್ಟಾರ್ಥವನ್ನು ಪೂರೈಸುವ ದೃಷ್ಟಿಯಿಂದ ಲೀಲಾಮನುಷ್ಯ ದೇಹದಿಂದ ಎಲ್ಲಾ ಜಗದ್ವ್ಯಾಪಾರಗಳೂ ನಡೆಸಲ್ಪಡುವವು.

**ತತಃ ಶತ್ರುಘ್ನವಚನಾತ್ ನಿಪುಣಃ ಶ್ಮಶ್ರುಕೃಂತಕಃ ।**
**ಸಂಭಾರಾಶ್ಚಾಭಿಷೇಕಾರ್ಥಮಾನೀತಾ ರಾಘವಸ್ಯ ಹಿ ॥ ೯ ॥**
**ಪೂರ್ವಂ ತು ಭರತೇ ಸ್ನಾತೇ ಲಕ್ಷ್ಮಣೇ ಚ ಮಹಾತ್ಮನಿ ।**
**ಸುಗ್ರೀವೇ ವಾನರೇಂದ್ರೇ ಚ ರಾಕ್ಷಸೇಂದ್ರೇ ವಿಭೀಷಣೇ ॥ ೧೦ ॥**
**ವಿಶೋಧಿತಜಟಃ ಸ್ನಾತಃ ಚಿತ್ರಮಾಲ್ಯಾನುಲೇಪನಃ ।**
**ಮಹಾರ್ಹವಸನೋಪೇತಃ ತಸ್ಥೌ ತತ್ರ ಶ್ರಿಯಾ ಜ್ವಲನ್ ॥ ೧೧ ॥**

೯-೧೦. ಅನಂತರ ಶತ್ರುಘ್ನನ ಅಪ್ಪಣೆಯಂತೆ ಗಡ್ಡವನ್ನು ಬೋಳಿಸುವದರಲಿ ಜಾಣನಾದ (ನಾಪಿತನು) ಬಂದನು. ಹಾಗೆಯೇ ಮಂಗಳಸ್ನಾನಕ್ಕಾಗಿ ಪದಾರ್ಥಗಳು ತರಲ್ಪಟ್ಟವು. ಮೊದಲು ಭರತನು ಸ್ನಾನಮಾಡಲಾಗಿ ಕ್ರಮವಾಗಿ ಮಹಾತ್ಮನಾದ ಲಕ್ಷ್ಮಣ, ವಾನರರಾಜನಾದ ಸುಗ್ರೀವ, ರಾಕ್ಷಸರಾಜನಾದ ವಿಭೀಷಣ - ಇವರುಗಳ ಸ್ನಾನ ಮಾಡಲಾಗಿ ರಾಮನು ಜಟೆಗಳನ್ನು ಶೋಧಿಸಿಕೊಂಡು ಸ್ನಾನಮಾಡಿ ಬಹ ವಾಗಿ ಬೆಲೆ ಬಾಳುವ ವಸ್ತ್ರಗಳನ್ನುಟ್ಟು ಚಿತ್ರವಾದ ಮಾಲೆಗಳನ್ನೂ ಸುಗಂಧಗಳನ್ ಧರಿಸಿ ಲಕ್ಷ್ಮಿಯಿಂದ ಬೆಳಗುತ್ತಾ ಅಲ್ಲಿ ಕಾಣಿಸಿಕೊಂಡನು.

**ಪ್ರತಿಕರ್ಮ ಚ ರಾಮಸ್ಯ ಲಕ್ಷ್ಮಣಸ್ಯ ಮಹಾಮತಿಃ ।**
**ಕಾರಯಾಮಾಸ ಭರತಃ ಸೀತಯಾ ರಾಜಯೋಷಿತಃ** ॥ ೧೨
**ಮಹಾರ್ಹವಸ್ತ್ರಾಭರಣೈರಲಂಚಕ್ರುಃ ಸುಮಧ್ಯಮಾಮ್ ।**
**ತತೋ ವಾನರಪತ್ನೀನಾಂ ಸರ್ವಾಸಾಮೇವ ಶೋಭನಾ** ॥ ೧೩
**ಅಕಾರಯತ ಕೌಸಲ್ಯಾ ಪ್ರಹೃಷ್ಟಾ ಪುತ್ರವತ್ಸಲಾ ॥**

೧೨-೧೩. ಮಹಾಬುದ್ಧಿಶಾಲಿಯಾದ ಭರತನು ರಾಮನಿಗೂ ಲಕ್ಷ್ಮಣನಿಗೂ ಅಲಂಕಾರಗಳನ್ನು ಮಾಡಿಸಿದನು. ರಾಜಸ್ತ್ರೀಯರುಗಳು ಬಹಳ ಬೆಲೆಬಾಳುವ ವಸ್ತ್ರಾಭರಣಗಳಿಂದ ಸುಂದರ ನಡುವುಳ್ಳ ಸೀತೆಯನ್ನು ಸಿಂಗರಿಸಿದರು. ಅನಂತ ಎಲ್ಲಾ ವಾನರಸ್ತ್ರೀಯರಿಗೂ ಪುತ್ರಪ್ರೇಮವುಳ್ಳ ಸಂತುಷ್ಟಳಾದ ಕೌಸಲ್ಯೆಯೇ ಸಿಂಗಾ ಗಳನ್ನು ಮಾಡಿಸಿದಳು.

**ತತಃ ಸ್ಯಂದನಮಾದಾಯ ಶತ್ರುಘ್ನವಚನಾತ್ ಸುಧೀಃ ।**
**ಸುಮಂತ್ರಃ ಸೂರ್ಯಸಂಕಾಶಂ ಯೋಜಯಿತ್ವಾಗ್ರತಃ ಸ್ಥಿತಃ** ॥ ೧೪ ॥
**ಆರುರೋಹ ರಥಂ ರಾಮಃ ಸತ್ಯಧರ್ಮಪರಾಯಣಃ ।**
**ಸುಗ್ರೀವೋ ಯುವರಾಜಶ್ಚ ಹನೂಮಾಂಶ್ಚ ವಿಭೀಷಣಃ** ॥ ೧೫ ॥
**ಸ್ನಾತ್ವಾ ದಿವ್ಯಾಂಬರಧರಾ ದಿವ್ಯಾಭರಣಭೂಷಿತಾಃ ।**
**ರಾಮಮನ್ವೀಯುರಗ್ರೇ ಚ ರಥಾಶ್ಚ ಗಜವಾಹನಾಃ** ॥ ೧೬ ॥
**ಸುಗ್ರೀವಪತ್ನ್ಯಃ ಸೀತಾ ಚ ಯಯುರ್ಯಾನೈಃ ಪುರಂ ಮಹತ್ ॥**

೧೪-೧೬. ಅನಂತರ ಶತ್ರುಘ್ನನ ಅಪ್ಪಣೆಯಂತೆ ಬುದ್ಧಿಶಾಲಿಯಾದ ಸುಮಂತ್ರನು ಸೂರ್ಯನಂತೆ ವಿರಾಜಮಾನವಾದ ರಥವನ್ನು ಕುದುರೆಗಳನ್ನು ಹೂಡಿ ತಂದು ಎದುರಿಗೆ ನಿಲ್ಲಿಸಿದನು. ಸತ್ಯಧರ್ಮಪರಾಯಣನಾದ ರಾಮನು ರಥವನ್ನೇರಿದನು. ಅನಂತರ ಯುವರಾಜನಾದ ಸುಗ್ರೀವನೂ ಹನುಮಂತನೂ ವಿಭೀಷಣನೂ ಸ್ನಾನಮಾಡಿ ದಿವ್ಯವಾದ ವಸ್ತ್ರಾಭರಣಗಳನ್ನು ಉಟ್ಟು ತೊಟ್ಟು

ಅಲಂಕೃತರಾಗಿ ರಾಮನನ್ನು ಹಿಂದೆಯೂ ಮುಂದೆಯೂ ಸುತ್ತುವರೆದು ರಥ, ಕುದುರೆ, ಆನೆಗಳನ್ನೇರಿ ಹೊರಟರು. ಸೀತೆಯೂ ಸುಗ್ರೀವನ ಹೆಂಡತಿಯರೂ ವಾಹನಗಳಲ್ಲಿ ನಗರವನ್ನು ಕುರಿತು ಪ್ರಯಾಣಮಾಡಿದರು.

**ವಜ್ರಪಾಣಿರ್ಯಥಾ ದೇವೈಃ ಹರಿತಾಶ್ವರಥೇ ಸ್ಥಿತಃ ।**
**ಪ್ರಯಯೌ ರಥಮಾಸ್ಥಾಯ ತಥಾ ರಾಮೋ ಮಹತ್ಪುರಮ್ ॥ ೧೭ ॥**
**ಸಾರಥ್ಯಂ ಭರತಶ್ಚಕ್ರೇ ರತ್ನದಂಡಂ ಮಹಾದ್ಯುತಿಃ ।**
**ಶ್ವೇತಾತಪತ್ರಂ ಶತ್ರುಘ್ನೋ ಲಕ್ಷ್ಮಣೋ ವ್ಯಜನಂ ದಧೇ ॥ ೧೮ ॥**
**ಚಾಮರಂ ಚ ಸಮೀಪಸ್ಥೋ ನ್ಯವೀಜಯದರಿಂದಮಃ ।**
**ಶಶಿಪ್ರಕಾಶಂ ತ್ವಪರಂ ಜಗ್ರಾಹಾಸುರನಾಯಕಃ ॥ ೧೯ ॥**

೧೭-೧೯. ಹೇಗೆ ದೇವೇಂದ್ರನು ಹಸಿರಾದ ಕುದುರೆಗಳ ರಥದಲ್ಲಿ ಕುಳಿತು ದೇವತೆಗಳೊಡಗೂಡಿ ಹೊರಡುವನೋ ಹಾಗೆ ರಾಮನು ಎಲ್ಲರೊಡನೆ ಮಹಾಪುರಿಯಾದ ಅಯೋಧ್ಯೆಗೆ ಹೊರಟನು. ಭರತನೇ ಸಾರಥ್ಯವನ್ನು ವಹಿಸಿದನು. ಮಹಾಕಾಂತಿ ಯುಕ್ತನಾದ ಶತ್ರುಘ್ನನು ರತ್ನದ ಕೋಲುಳ್ಳ ಬಿಳುಪಾದ ಛತ್ರಿಯನ್ನು ಹಿಡಿದಿದ್ದನು. ಲಕ್ಷ್ಮಣನು ಬೀಸಣಿಗೆಯನ್ನು ಹಿಡಿದನು. ಮತ್ತು ಹತ್ತಿರದಲ್ಲೇ ನಿಂತು ಒಂದು ಚಾಮರವನ್ನು ಹಿಡಿದು ಬೀಸುತ್ತಿದ್ದನು. ಚಂದ್ರನಂತೆ ಹೊಳೆಯುತ್ತಿದ್ದ ಮತ್ತೊಂದು ಚಾಮರವನ್ನು ರಾಕ್ಷಸರೊಡೆಯನಾದ ವಿಭೀಷಣನು ಹಿಡಿದಿದ್ದನು.

**ದಿವಿಜೈಃ ಸಿದ್ಧಸಂಘೈಶ್ಚ ಋಷಿಭಿರ್ದಿವ್ಯದರ್ಶನೈಃ ।**
**ಸ್ತೂಯಮಾನಸ್ಯ ರಾಮಸ್ಯ ಶುಶ್ರುವೇ ಮಧುರಧ್ವನಿಃ ॥ ೨೦ ॥**
**ಮಾನುಷಂ ರೂಪಮಾಸ್ಥಾಯ ವಾನರಾ ಗಜವಾಹನಾಃ ।**
**ಭೇರೀಶಂಖನಿನಾದೈಶ್ಚ ಮೃದಂಗಪಣವಾನಕೈಃ ।**
**ಪ್ರಯಯೌ ರಾಘವಶ್ರೇಷ್ಠಸ್ತಾಂ ಪುರೀಂ ಸಮಲಂಕೃತಾಮ್ ॥ ೨೧ ॥**
**ದದೃಶುಸ್ತೇ ಸಮಾಯಾಂತಂ ರಾಘವಂ ಪುರವಾಸಿನಃ ।**

೨೦-೨೧. ದೇವತೆಗಳು, ಸಿದ್ಧರ ಗುಂಪುಗಳು, ದಿವ್ಯದರ್ಶನವುಳ್ಳ ಋಷಿಗಳು - ಎಲ್ಲರಿಂದಲೂ ಹೊಗಳಲ್ಪಡುತ್ತಿರುವ ರಾಮನ ಸ್ತೋತ್ರಗಳ ಮಧುರವಾದ ಸದ್ದು ಕೇಳಬರುತ್ತಿತ್ತು. ಕಪಿಗಳು ಮನುಷ್ಯರ ರೂಪವನ್ನೇ ಧರಿಸಿ ಆನೆಗಳ ಮೇಲೆ ಕುಳಿತು (ಬರುತ್ತಿದ್ದರು). ಹೀಗೆ ಭೇರಿ, ಶಂಖ, ಮೃದಂಗ, ಪಣವ, ನಗಾರಿ- ಗಳ ವಾದ್ಯಘೋಷ ದಿಂದ ಕೂಡಿ, ಅಲಂಕೃತವಾದ ಆ ನಗರಿಯನ್ನು ರಾಮನು ಪ್ರವೇಶಿಸಿದನು.

ದೂರ್ವಾದಲಶ್ಯಾಮತನುಂ ಮಹಾರ್ಹ-
ಕಿರೀಟರತ್ನಾಭರಣಾಂಚಿತಾಂಗದಮ್ ।
ಆರಕ್ತಕಂಜಾಯತಲೋಚನಾಂತಂ
ದೃಷ್ಟ್ವಾ ಯಯುರ್ಮೋದಮತೀವ ಪುಣ್ಯಾಃ ॥ ೨೨ ॥
ವಿಚಿತ್ರರತ್ನಾಂಚಿತಸೂತ್ರನದ್ಧ-
ಪೀತಾಂಬರಂ ಪೀನಭುಜಾಂತರಾಲಮ್ ।
ಅನರ್ಘ್ಯಮುಕ್ತಾಫಲದಿವ್ಯಹಾರೈ
ರ್ವಿರೋಚಮಾನಂ ರಘುನಂದನಂ ಪ್ರಜಾಃ ॥ ೨೩ ॥
ಸುಗ್ರೀವಮುಖ್ಯೈಃ ಹರಿಭಿಃ ಪ್ರಶಾಂತೈಃ
ನಿಷೇವ್ಯಮಾಣಂ ರವಿತುಲ್ಯಭಾಸಮ್ ।
ಕಸ್ತೂರಿಕಾಚಂದನಲಿಪ್ತಗಾತ್ರಂ
ನಿವೀತಕಲ್ಪದ್ರುಮ ಪುಷ್ಪಮಾಲಮ್ ॥ ೨೪ ॥

೨೨-೨೪. ಗರಿಕೆಯ ದಳದಂತೆ ನೀಲವರ್ಣವಾದ ಶರೀರವುಳ್ಳವನೂ ಬೆಲೆಬಾಳುವ ಕಿರೀಟ, ರತ್ನಾಭರಣಗಳು, ಭುಜಕೀರ್ತಿಗಳಿಂದ ಅಲಂಕೃತನೂ ಕಮಲದ ಎಸುಳಿನಂತೆ ಸ್ವಲ್ಪ ಕೆಂಪಾದ ಅರಳಿದ ಕಣ್ಣುಗಳುಳ್ಳವನೂ ಆದ, ವಿಚಿತ್ರವಾದ ರತ್ನಗಳಿಂದ ಮೆಟ್ಟಿದ ಉಡಿದಾರವನ್ನು ಬಿಗಿದಿರುವ ಪೀತಾಂಬರವನ್ನುಟ್ಟವನೂ ದಪ್ಪವಾದ ತೋಳುಗಳುಳ್ಳವನೂ ಆದ, ಬೆಲೆಕಟ್ಟಲಾಗದಂಥ ಮುತ್ತುಗಳ ದಿವ್ಯಹಾರಗಳಿಂದ ವಿರಾಜಮಾನನೂ ಆಗಿದ್ದ, ಹಾಗೂ ಸುಗ್ರೀವನೇ ಮುಂತಾದ ಪ್ರಶಾಂತರಾದ ಕಪಿಗಳಿಂದ ಸೇವಿಸಲ್ಪಡುತ್ತಿರುವ, ಸೂರ್ಯನಂತೆ ಕಾಂತಿಯುಕ್ತನಾದ ಮತ್ತು ಕಸ್ತೂರಿ, ಚಂದನ -ಗಳಿಂದ ಲೇಪಿಸಲ್ಪಟ್ಟ ಶರೀರವುಳ್ಳ ಹಾಗೂ ಕಲ್ಪವೃಕ್ಷದ ಹೂಗಳ ಮಾಲೆಯಿಂದ ಕಂಠದಲ್ಲಿ ಅಲಂಕೃತನಾಗಿರುವ ರಘುರಾಮನನ್ನು ಪಟ್ಟಣಿಗರಾದ ಅತ್ಯಂತಪುಣ್ಯಶಾಲಿಗಳಾದ ಪ್ರಜೆಗಳು ಕಂಡು ಅತ್ಯಂತ ಆನಂದಭರಿತರಾದರು.

ಶ್ರುತ್ವಾ ಸ್ತ್ರಿಯೋ ರಾಮಮುಪಾಗತಂ ಮುದಾ
ಪ್ರಹರ್ಷವೇಗೋತ್ಕಲಿತಾನನಶ್ರಿಯಃ ।
ಅಪಾಸ್ಯ ಸರ್ವಂ ಗೃಹಕಾರ್ಯಮಾಹಿತಂ
ಹರ್ಮ್ಯಾಣಿ ಚೈವಾರುರುಹುಃ ಸ್ವಲಂಕೃತಾಃ ॥ ೨೫ ॥
ದೃಷ್ಟ್ವಾ ಹರಿಂ ಸರ್ವದೃಗುತ್ಸವಾಕೃತಿಂ
ಪುಷ್ಪೈಃ ಕಿರಂತ್ಯಃ ಸ್ಮಿತಶೋಭಿತಾನನಾಃ ।
ದೃಗ್ಭಿಃ ಪುನರ್ನೇತ್ರಮನೋರಸಾಯನಂ
ಸ್ವಾನಂದಮೂರ್ತಿಂ ಮನಸಾಭಿರೇಭಿರೇ ॥ ೨೬ ॥

**ರಾಮಃ ಸ್ಮಿತಸ್ನಿಗ್ಧದೃಶಾ ಪ್ರಜಾಸ್ತಥಾ**
**ಪಶ್ಯನ್ ಪ್ರಜಾನಾಥ ಇವಾಪರಃ ಪ್ರಭುಃ ।**
**ಶನೈರ್ಜಗಾಮಾಥ ಪಿತುಃ ಸ್ವಲಂಕೃತಂ**
**ಗೃಹಂ ಮಹೇಂದ್ರಾಲಯಸನ್ನಿಭಂ ಹರಿಃ ॥ ೨೭ ॥**

೨೫-೨೭. ರಾಮನು ಬಂದನು - ಎಂಬ ವೃತ್ತಾಂತವನ್ನು ಕೇಳಿದ ಸ್ತ್ರೀಯರುಗಳು ಸಂತೋಷದಿಂದ ಅರಳಿದ ಮುಖಕಾಂತಿಯುಳ್ಳವರಾಗಿ ಅಲಂಕಾರಗಳನ್ನು ಸರಿಪಡಿಸಿಕೊಂಡು ಎಲ್ಲಾ ಮನೆಗೆಲಸಗಳನ್ನೂ ಬಿಟ್ಟು ಉಪ್ಪರಿಗೆಗಳನ್ನು ಏರಿದವರಾದರು. ಎಲ್ಲರ ಕಣ್ಣುಗಳಿಗೂ ಹಬ್ಬವನ್ನುಂಟುಮಾಡುವಂಥ ಶ್ರೀಹರಿಯನ್ನು ಕಂಡು ಹೂವುಗಳನ್ನು ಎರಚುತ್ತಾ ಮುಗುಳುನಗೆಯ ಮುಖವುಳ್ಳವರಾಗಿ ಮತ್ತೆ ತಮ್ಮ ಕಣ್ಣುಗಳಿಂದ ಹೃದಯಕ್ಕೂ ನೋಟಕ್ಕೂ ಅಮೃತದಂತಿದ್ದ ಆನಂದಮೂರ್ತಿಯಾದ (ರಾಮನನ್ನೇ) ಮನಸ್ಸಿನಲ್ಲಿ ಬಯಸುತ್ತಿದ್ದರು. ಪ್ರಭುವಾದ ರಾಮನಾದರೊ, ಮುಗುಳುನಗೆಯ ಹಾಗೂ ಸ್ನೇಹಪೂರಿತ ದೃಷ್ಟಿಯಿಂದ ಪ್ರಜೆಗಳೆಲ್ಲರನ್ನೂ ನೋಡುತ್ತಾ ಬೇರೊಬ್ಬ ಪ್ರಜಾಪತಿಯಂತೆ ಕಂಡು ಬಂದನು. ಅಲಂಕಾರಗೊಳಿಸಲ್ಪಟ್ಟಿದ್ದ ಹಾಗೂ ದೇವೇಂದ್ರನ ಅರಮನೆಯಂತಿದ್ದ ತಂದೆಯ ಮನೆಯನ್ನು ಮೆಲ್ಲಮೆಲ್ಲನೆ ಹೋಗಿ ಸೇರಿದನು.

**ಪ್ರವಿಶ್ಯ ವೇಶ್ಮಾಂತರಸಂಸ್ಥಿತೋ ಮುದಾ**
**ರಾಮೋ ವವಂದೇ ಚರಣೌ ಸ್ವಮಾತುಃ ।**
**ಕ್ರಮೇಣ ಸರ್ವಾಃ ಪಿತೃಯೋಷಿತಃ ಪ್ರಭುಃ**
**ನನಾಮ ಭಕ್ತ್ಯಾ ರಘುವಂಶಕೇತುಃ ॥ ೨೮ ॥**
**ತತೋ ಭರತಮಾಹೇದಂ ರಾಮಃ ಸತ್ಯಪರಾಕ್ರಮಃ ।**
**ಸರ್ವಸಂಪತ್ಸಮಾಯುಕ್ತಂ ಮಮ ಮಂದಿರಮುತ್ತಮಮ್ ॥ ೨೯ ॥**
**ಮಿತ್ರಾಯ ವಾನರೇಂದ್ರಾಯ ಸುಗ್ರೀವಾಯ ಪ್ರದೀಯತಾಮ್ ।**
**ಸರ್ವೇಭ್ಯಃ ಸುಖವಾಸಾರ್ಥಂ ಮಂದಿರಾಣಿ ಪ್ರಕಲ್ಪಯ ॥ ೩೦ ॥**

೨೮-೩೦. ರಾಮನು ಅರಮನೆಯನ್ನು ಪ್ರವೇಶಿಸಿ ಒಳಹೊಕ್ಕವನಾಗಿ ಸಂತೋಷದಿಂದ ತನ್ನ ತಾಯಿಯ ಪಾದಗಳಿಗೆ ನಮಸ್ಕರಿಸಿದನು. ಅನಂತರ ರಘುವಂಶ ಭೂಷಣನಾದ ಆ ಪ್ರಭುವು ಎಲ್ಲಾ ತಾಯಂದಿರಿಗೂ (ದಶರಥನ ಪತ್ನಿಯರುಗಳಿಗೂ) ಕ್ರಮವಾಗಿ ನಮಸ್ಕರಿಸಿದನು. ಅನಂತರ ಭರತನನ್ನು ಕುರಿತು ಸತ್ಯಪರಾಕ್ರಮನಾದ ರಾಮನು ಹೀಗೆಂದನು :''ಸಕಲಸಂಪತ್ತುಗಳಿಂದಲೂ ಕೂಡಿರುವ ಉತ್ತಮವಾದ ನನ್ನ ಮನೆಯನ್ನು ಸ್ನೇಹಿತನೂ ವಾನರಶ್ರೇಷ್ಠನೂ ಆದ

ಸುಗ್ರೀವನಿಗೆ ಬಿಟ್ಟುಕೊಡು. ಹಾಗೆಯೇ ಸುಖವಾಗಿ ತಂಗುವ ಸಲುವಾ
ಜಾಗಗಳನ್ನು ಎಲ್ಲರಿಗೂ ಮಾಡಿಕೊಡು.''

**ರಾಮೇಣೈವಂ ಸಮಾದಿಷ್ಟೋ ಭರತಶ್ಚ ತಥಾಽಕರೋತ್ ।**
**ಉವಾಚ ಚ ಮಹಾತೇಜಾಃ ಸುಗ್ರೀವಂ ರಾಘವಾನುಜಃ ॥ ೩೧**
**ರಾಘವಸ್ಯಾಭಿಷೇಕಾರ್ಥಂ ಚತುಃಸಿಂಧುಜಲಂ ಶುಭಮ್ ।**
**ಆನೇತುಂ ಪ್ರೇಷಯಸ್ವಾಶು ದೂತಾಂಸ್ತ್ವರಿತವಿಕ್ರಮಾನ್ ॥ ೩೨**

೩೧-೩೨. ರಾಮನಿಂದ ಹೀಗೆ ಆಜ್ಞೆಮಾಡಲ್ಪಟ್ಟ ಭರತನು ಹಾಗೆಯೆ
ಮಾಡಿದನು ಮತ್ತು ರಾಮನ ಸೋದರನಾದ ಮಹಾತೇಜಸ್ವಿಯಾದ ಆತನ
ಸುಗ್ರೀವನನ್ನು ಕುರಿತು ಹೀಗೆಂದನು : ''ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ನಾಲ
ಸಮುದ್ರಗಳ ಪವಿತ್ರವಾದ ಜಲವನ್ನು ತರುವದಕ್ಕಾಗಿ ಬೇಗನೆ ವೇಗಶಾಲಿಗಳಾ
ದೂತರನ್ನು ಕಳುಹಿಸಿಕೊಡು.''

**ಪ್ರೇಷಯಾಮಾಸ ಸುಗ್ರೀವೋ ಜಾಂಬವಂತಂ ಮರುತ್ಸುತಮ್ ।**
**ಅಂಗದಂ ಚ ಸುಷೇಣಂ ಚ ತೇ ಗತ್ವಾ ವಾಯುವೇಗತಃ ॥ ೩೩**
**ಜಲಪೂರ್ಣಾನ್ ಶಾತಕುಂಭಕಲಶಾಂಶ್ಚ ಸಮಾನಯನ್ ।**
**ಆನೀತಂ ತೀರ್ಥಸಲಿಲಂ ಶತ್ರುಘ್ನೋ ಮಂತ್ರಿಭಿಃ ಸಹ ॥ ೩೪**
**ರಾಘವಸ್ಯಾಭಿಷೇಕಾರ್ಥಂ ವಸಿಷ್ಠಾಯ ನ್ಯವೇದಯತ್ ।**

೩೩-೩೪. ಆಗ ಸುಗ್ರೀವನು ಜಾಂಬವಂತ, ಹನುಮಂತ, ಅಂಗದ, ಸುಷೇ
- (ಈ ನಾಲ್ವರನ್ನು) ಕಳುಹಿಸಿದನು. ಅವರುಗಳು ವಾಯುವೇಗದಿಂದ ಹೊರಟ
(ಸಮುದ್ರಗಳನ್ನು) ತಲುಪಿ ನೀರಿನಿಂದ ತುಂಬಿದ ಚಿನ್ನದ ಕೊಡಗಳನ್ನು ತಂದರು
ಹೀಗೆ ತರಲ್ಪಟ್ಟ ನೀರನ್ನು ಶತ್ರುಘ್ನನು ಮಂತ್ರಿಗಳೊಡಗೂಡಿ ರಾಮನ ಅಭಿಷೇಕಕ್ಕಾ
- ಎಂದು ಹೇಳಿ ವಸಿಷ್ಠರಿಗೆ ಸಮರ್ಪಿಸಿದನು.

**ತತಃ ಸ ಪ್ರಯತೋ ವೃದ್ಧೋ ವಸಿಷ್ಠೋ ಬ್ರಾಹ್ಮಣೈಃ ಸಹ ।**
**ರಾಮಂ ರತ್ನಮಯೇ ಪೀಠೇ ಸಸೀತಂ ಸಂನ್ಯವೇಶಯತ್ ॥ ೩೫**
**ವಸಿಷ್ಠೋ ವಾಮದೇವಶ್ಚ ಜಾಬಾಲಿರ್ಗೌತಮಸ್ತಥಾ ।**
**ವಾಲ್ಮೀಕಿಶ್ಚ ತಥಾ ಚಕ್ರುಸ್ಸರ್ವೇ ರಾಮಾಭಿಷೇಚನಮ್ ॥ ೩೬**
**ಕುಶಾಗ್ರತುಲಸೀಯುಕ್ತಪುಣ್ಯಗಂಧಜಲೈರ್ಮುದಾ ।**
**ಅಭ್ಯಷಿಂಚನ್ ರಘುಶ್ರೇಷ್ಠಂ ವಾಸವಂ ವಸವೋ ಯಥಾ ॥ ೩೭**

೩೫-೩೭. ಅನಂತರ ಶ್ರದ್ಧಾಯುಕ್ತನಾದ ವೃದ್ಧನಾದ ವಸಿಷ್ಠನು ಬ್ರಾಹ್ಮಣರೊಡಗೂಡಿ ರತ್ನಮಯವಾದ ಪೀಠದಲ್ಲಿ ಸೀತಾಸಮೇತನಾದ ರಾಮನನ್ನು ಕುಳ್ಳಿರಿಸಿದನು. ಮತ್ತು ವಸಿಷ್ಠ, ವಾಮದೇವ, ಜಾಬಾಲಿ, ಗೌತಮ, ವಾಲ್ಮೀಕಿ, - ಎಲ್ಲರೂ ಸೇರಿ ರಾಮನಿಗೆ ಪಟ್ಟಾಭಿಷೇಕವನ್ನೂ ಮಾಡಿದರು. ವಸುದೇವತೆಗಳು ದೇವೇಂದ್ರನನ್ನು ಹೇಗೋ ಹಾಗೆ - ದರ್ಭೆಯ ಅಗ್ರಗಳು, ತುಲಸಿ - ಇವುಗಳಿಂದ ಕೂಡಿದ ಪುಣ್ಯಕರವಾದ ಸುಗಂಧಯುಕ್ತನೀರಿನಿಂದ ಸಂತೋಷಭರಿತರಾಗಿ ಆ ರಘುಶ್ರೇಷ್ಠನಿಗೆ ಅಭಿಷೇಕ ಮಾಡಿದರು.

**ಋತ್ವಿಗ್ಭಿಃ ಬ್ರಾಹ್ಮಣಶ್ರೇಷ್ಠೈಃ ಕನ್ಯಾಭಿಃ ಸಹ ಮಂತ್ರಿಭಿಃ ।**
**ಸರ್ವೌಷಧಿರಸೈಶ್ಚೈವ ದೈವತೈರ್ನಭಸಿ ಸ್ಥಿತೈಃ ॥ ೩೮ ॥**
**ಚತುರ್ಭಿರ್ಲೋಕಪಾಲೈಶ್ಚ ಸ್ತುವದ್ಭಿಃ ಸಗಣೈಸ್ತಥಾ ।**
**ಛತ್ರಂ ಚ ತಸ್ಯ ಜಗ್ರಾಹ ಶತ್ರುಘ್ನಃ ಪಾಂಡುರಂ ಶುಭಮ್ ॥ ೩೯ ॥**
**ಸುಗ್ರೀವರಾಕ್ಷಸೇಂದ್ರೌ ತೌ ದಧತುಃ ಶ್ವೇತಚಾಮರೇ ।**
**ಮಾಲಾಂ ಚ ಕಾಂಚನೀಂ ವಾಯುರ್ದದೌ ವಾಸವಚೋದಿತಃ ॥ ೪೦ ॥**

೩೮-೪೦. ಋತ್ವಿಜರುಗಳಿಂದಲೂ ಶ್ರೇಷ್ಠಬ್ರಾಹ್ಮಣರುಗಳಿಂದಲೂ ಕನ್ಯೆಯರು, ಮಂತ್ರಿಗಳು, ಆಕಾಶದಲ್ಲಿ ನೆರೆದಿದ್ದ ದೇವತೆಗಳು, ಪರಿವಾರಸಮೇತರಾಗಿ ಬಂದು ಸುತ್ತಿಸುತ್ತಿರುವ ನಾಲ್ವರು ಲೋಕಪಾಲಕರುಗಳಿಂದಲೂ ಕೂಡಿ ಎಲ್ಲಾ ರೀತಿಯ ಸಸ್ಯರಸಗಳಿಂದ ರಾಮನಿಗೆ ಅಭಿಷೇಕಮಾಡಿದರು. ಶತ್ರುಘ್ನನು ಬಿಳುಪಾದ ಶುಭವಾದ ಛತ್ರಿಯನ್ನು ಹಿಡಿದಿದ್ದನು. ಸುಗ್ರೀವವಿಭೀಷಣರು ಬಿಳುಪಾದ ಚಾಮರಗಳನ್ನು ಹಿಡಿದಿದ್ದರು. ವಾಯುದೇವನು ದಿವ್ಯವಾದ ಕಾಂಚನಮಾಲೆಯನ್ನು ಇಂದ್ರನಿಂದ ಪ್ರೇರಿತನಾಗಿ (ರಾಮನಿಗೆ) ಕೊಟ್ಟನು.

**ಸರ್ವರತ್ನಸಮಾಯುಕ್ತಂ ಮಣಿಕಾಂಚನಭೂಷಿತಮ್ ।**
**ದದೌ ಹಾರಂ ನರೇಂದ್ರಾಯ ಸ್ವಯಂ ಶಕ್ರಸ್ತು ಭಕ್ತಿತಃ ॥ ೪೧ ॥**
**ಪ್ರಜಗುರ್ದೇವಗಂಧರ್ವಾ ನನೃತುಶ್ಚಾಪ್ಸರೋ ಗಣಾಃ ।**
**ದೇವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಖಾತ್ ॥ ೪೨ ॥**
**ನವದೂರ್ವಾದಲಶ್ಯಾಮಂ ಪದ್ಮಪತ್ರಾಯತೇಕ್ಷಣಮ್ ।**
**ರವಿಕೋಟಿಪ್ರಭಾಯುಕ್ತಕಿರೀಟೇನ ವಿರಾಜಿತಮ್ ॥ ೪೩ ॥**

೪೧-೪೩. ದೇವೇಂದ್ರನು ತಾನೇ ಸ್ವತಃ ಭಕ್ತಿಯಿಂದ ಕೂಡಿದವನಾಗಿ ಸಕಲ ವಿಧವಾದ ರತ್ನಗಳಿಂದ ಕೂಡಿರುವ ಹಾಗೂ (ವಜ್ರ) ಮಣಿಗಳು, ಚಿನ್ನ ಇವುಗಳಿಂದ ಅಲಂಕೃತವಾದ ಒಂದು ಹಾರವನ್ನು ರಾಜಶ್ರೇಷ್ಠನಾದ ರಾಮನಿಗೆ ಕೊಟ್ಟನು. (ಆ

ಸಮಯ ದಲ್ಲಿ) ದೇವತೆಗಳೂ ಗಂಧರ್ವರೂ ಗಾನಮಾಡಿದರು. ಅಪ್ಸರಸ್ತ್ರೀಯರು ನೃತ್ಯಮಾಡಿದರು. ದೇವಲೋಕದ ನಗಾರಿಗಳು ಬಾರಿಸಿದವು. ಆಕಾಶದಿಂದ ಹೂವಿನ ಮಳೆಯು ಬಿದ್ದಿತು. ಹೊಸದೂರ್ವೆಯಂತೆ ನೀಲವರ್ಣನೂ ಪದ್ಮದಂತೆ ಕಣ್ಣುಗಳುಳ್ಳವನೂ ಕೋಟಿಸೂರ್ಯ ಪ್ರಕಾಶವುಳ್ಳ ಕಿರೀಟವನ್ನು ಧರಿಸಿ ವಿರಾಜಮಾನನೂ ಆದ (ರಾಮನನ್ನು ಮಹಾದೇವನು ಕಂಡನು)

**ಕೋಟಿಕಂದರ್ಪಲಾವಣ್ಯಂ ಪೀತಾಂಬರಸಮಾವೃತಮ್ ।**
**ದಿವ್ಯಾಭರಣಸಂಪನ್ನಂ ದಿವ್ಯಚಂದನಲೇಪನಮ್ ॥ ೪೪ ॥**
**ಅಯುತಾದಿತ್ಯಸಂಕಾಶಂ ದ್ವಿಭುಜಂ ರಘುನಂದನಮ್ ।**
**ವಾಮಭಾಗೇ ಸಮಾಸೀನಾಂ ಸೀತಾಂ ಕಾಂಚನಸನ್ನಿಭಾಮ್ ॥ ೪೫ ॥**
**ಸರ್ವಾಭರಣಸಂಪನ್ನಾಂ ವಾಮಾಂಕೇ ಸಮುಪಸ್ಥಿತಾಮ್ ।**
**ರಕ್ತೋತ್ಪಲಕರಾಂಭೋಜಾಂ ವಾಮೇನಾಲಿಂಗ್ಯ ಸಂಸ್ಥಿತಮ್ ॥ ೪೬ ॥**
**ಸರ್ವಾತಿಶಯಶೋಭಾಢ್ಯಂ ದೃಷ್ಟ್ವಾ ಭಕ್ತಿಸಮನ್ವಿತಃ ।**
**ಉಮಯಾ ಸಹಿತೋ ದೇವಃ ಶಂಕರೋ ರಘುನಂದನಮ್ ।**
**ಸರ್ವದೇವಗಣೈರ್ಯುಕ್ತಃ ಸ್ತೋತುಂ ಸಮುಪಚಕ್ರಮೆ ॥ ೪೭ ॥**

೪೪-೪೭. ಕೋಟಿಮನ್ಮಥರಿಗೆ ಸಮಾನವಾದ ಲಾವಣ್ಯವುಳ್ಳ ಪೀತಾಂಬರವನ್ನುಟ್ಟಿರುವನಾದ, ದಿವ್ಯಾಭರಣಗಳಿಂದ ಸಂಪನ್ನನಾದ, ದಿವ್ಯವಾದ ಚಂದನಗಂಧವನ್ನು ಲೇಪಿಸಿಕೊಂಡಿರುವನಾದ ಹತ್ತುಸಾವಿರ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ದ್ವಿಭುಜನಾದ ಹಾಗೂ ಚಿನ್ನದಂತೆ ಹೊಳೆಯುವವಳಾದ, ಸಕಲಾಭರಣಸಂಪನ್ನಳಾದ, ಕೆಂಪುನೈದಿಲೆಯನ್ನು ಕೈಯಲ್ಲಿ ಹಿಡಿದವಳಾದ, ಮತ್ತು ಎಡಭಾಗದಲ್ಲಿ ಕುಳಿತಿರುವ ಸೀತೆಯನ್ನು ಆಲಿಂಗಿಸಿಕೊಂಡು ಕುಳಿತಿರುವ ಅತಿಶಯಕಾಂತಿಸಂಪನ್ನನಾದ ರಾಮನನ್ನು ಕಂಡು ಭಕ್ತಿಪೂರಿತನಾದ ಉಮಾಸಮೇತನಾದ ಶಂಕರನು ಸಮಸ್ತದೇವಗಣಗಳಿಂದ ಕೂಡಿದವನಾಗಿ ಸ್ತೋತ್ರಮಾಡಲಾರಂಭಿಸಿದನು.

**ಶ್ರೀ ಮಹಾದೇವ ಉವಾಚ-**

**ನಮೋಽಸ್ತು ರಾಮಾಯ ಸಶಕ್ತಿಕಾಯ**
**ನೀಲೋತ್ಪಲಶ್ಯಾಮಲಕೋಮಲಾಯ ।**
**ಕಿರೀಟಹಾರಾಂಗದಭೂಷಣಾಯ**
**ಸಿಂಹಾಸನಸ್ಥಾಯ ಮಹಾಪ್ರಭಾಯ ॥ ೪೮ ॥**
**ತ್ವಮಾದಿಮಧ್ಯಾಂತವಿಹೀನ ಏಕಃ**
**ಸೃಜಸ್ಯವಸ್ಯತ್ಸಿ ಚ ಲೋಕಜಾತಮ್ ।**

**ಸ್ವಮಾಯಯಾ ತೇನ ನ ಲಿಪ್ಯಸೇ ತ್ವಂ**
**ಯತ್ ಸ್ವೇ ಸುಖೇಽಜಸ್ರರತೋಽನವದ್ಯಃ** ॥ ೪೯ ॥
**ಲೀಲಾಂ ನಿಧತ್ಸೇ ಗುಣಸಂವೃತಸ್ತ್ವಂ**
**ಪ್ರಸನ್ನಭಕ್ತಾನುವಿಧಾನಹೇತೋಃ ।**
**ನಾನಾವತಾರೈಃ ಸುರಮಾನುಷಾದ್ಯೈಃ**
**ಪ್ರತೀಯಸೇ ಜ್ಞಾನಿಭಿರೇವ ನಿತ್ಯಮ್** ॥ ೫೦ ॥

೪೮-೫೦. ಶ್ರೀ ಮಹಾದೇವನಿಂತೆಂದನು : ''ಶ್ರೀರಾಮನಿಗೆ ನಮಸ್ಕಾರ. ಶಕ್ತಿ ಸಮೇತನೂ ಕನ್ನೈದಿಲೆಯಂತೆ ಶ್ಯಾಮಲವರ್ಣನೂ ಕೋಮಲನೂ ಆದ, ಮತ್ತು ಕಿರೀಟ, ಹಾರ, ಭುಜಕೀರ್ತಿಗಳಿಂದ ಅಲಂಕೃತನೂ ಸಿಂಹಾಸನದಲ್ಲಿ ಕುಳಿತಿರುವವನೂ ಮಹಾಕಾಂತಿ ಶಾಲಿಯೂ ಆದವನಿಗೆ ನಮಸ್ಕಾರಗಳು. ಎಲೈ ರಾಮನೆ, ನೀನು ಆದಿಮಧ್ಯಾಂತಗಳಿಲ್ಲ ದವನು ; ಏಕನು ; ನಿನ್ನ ಮಾಯೆಯಿಂದ ಲೋಕಗಳನ್ನೆಲ್ಲ ಸೃಷ್ಟಿಮಾಡಿ ಕಾಪಾಡುತ್ತಿರುವೆ. ಆದರೂ ನೀನು ಆ ಕಾರ್ಯಗಳಿಂದ ಅಂಟಿದವನಾಗಿರುವದಿಲ್ಲ. ಏಕೆಂದರೆ ಯಾವಾಗಲೂ ನಿನ್ನ ಸ್ವಸುಖರೂಪದಲ್ಲಿ ನಿರತನೂ ದೋಷರಹಿತನೂ ಆಗಿರುವೆಯಲ್ಲವೆ ? ಗುಣಗಳಿಂದ ಕೂಡಿದವನಾಗಿ ಪ್ರಸನ್ನ (ಮನಸ್ಸಿನ) ಭಕ್ತರುಗಳ ಸಲುವಾಗಿ ದೇವಮನುಷ್ಯಾದಿ ರೂಪವಾದ ನಾನಾವತಾರಗಳಿಂದ ಲೀಲೆಯನ್ನು ಕೈಗೊಂಡಿರುವೆಯಲ್ಲವೆ ? ಜ್ಞಾನಿಗಳಿಗೆ ಮಾತ್ರವೇ ನೀನು ಕಂಡುಬರುತ್ತಿರುವೆ.

**ಸ್ವಾಂಶೇನ ಲೋಕಂ ಸಕಲಂ ವಿಧಾಯ ತಂ**
**ಬಿಭರ್ಷಿ ಚ ತ್ವಂ ತದಧಃ ಫಣೀಶ್ವರಃ ।**
**ಉಪರ್ಯಧೋ ಭಾನ್ವನಿಲೋಡುಪೌಷಧೀ-**
**ಪ್ರವರ್ಷರೂಪೋಽವಸಿ ನೈಕಧಾ ಜಗತ್** ॥ ೫೧ ॥
**ತ್ವಮಿಹ ದೇಹಭೃತಾಂ ಶಿಖಿರೂಪಃ**
**ಪಚಸಿ ಭುಕ್ತಮಶೇಷಮಜಸ್ರಮ್ ।**
**ಪವನಪಂಚಕರೂಪಸಹಾಯೋ**
**ಜಗದಖಂಡಮನೇನ ಬಿಭರ್ಷಿ** ॥ ೫೨ ॥
**ಚಂದ್ರಸೂರ್ಯಶಿಖಿಮಧ್ಯಗತಂ ಯತ್**
**ತೇಜ ಈಶ ಚಿದಶೇಷತನೂನಾಮ್ ।**
**ಪ್ರಾಭವತ್ ತನುಭೃತಾಮಿವ ಧೈರ್ಯಂ**
**ಶೌರ್ಯಮಾಯುರಖಿಲಂ ತವ ಸತ್ತ್ವಮ್** ॥ ೫೩ ॥

೫೧-೫೩. ನೀನು ನಿನ್ನ ಅಂಶದಿಂದ ಎಲ್ಲಾ ಲೋಕಗಳನ್ನೂ ಉಂಟುಮಾಡಿ ಅವುಗಳನ್ನು ಆದಿಶೇಷನಾಗಿ ಭರಿಸಿರುವೆ. ಮೇಲುಗಡೆ ಸೂರ್ಯ, ಗಾಳಿ, ಚಂದ್ರ ರಾಗಿಯೂ ಕೆಳಗಡೆ ಗಿಡಮರಗಳಾಗಿಯೂ, ಮಳೆಯಾಗಿಯೂ ನಾನಾ ರೀತಿಯಿಂದ ಜಗತ್ತನ್ನು ಕಾಪಾಡುತ್ತಿರುವೆ. ನೀನು ಪ್ರಾಣಿಗಳ ಒಳಗೆ ಅಗ್ನಿಯಾಗಿ ಕುಳಿತು ತಿಂದ ಅನ್ನಾದಿಗಳನ್ನೆಲ್ಲ ಅರಗಿಸುವೆ, ಹಾಗೆಯೇ ಐದು ಬಗೆಯ ಗಾಳಿಗಳ ರೂಪದಿಂದ ಸಹಾಯವನ್ನು ಪಡೆದು ಅಖಂಡವಾದ ಈ ಜಗತ್ತನ್ನು ಧರಿಸಿರುವೆ ; ಹಾಗೂ ಚಂದ್ರ, ಸೂರ್ಯ, ಅಗ್ನಿ - ಇವರುಗಳಲ್ಲಿ ಅಡಗಿರುವ ಯಾವ ತೇಜಸ್ಸುಂಟೋ ಅದು ಎಲೈ ಈಶನೆ, ಎಲ್ಲಾ ಪ್ರಾಣಿಗಳ ಚಿಚ್ಛಕ್ತಿರೂಪವಾಗಿಯೂ ಹೊರತೋರಿಕೊಂಡಿರುವದು. ಮತ್ತು ಎಲ್ಲ ಜೀವಿಗಳ ಧೈರ್ಯ, ಶೌರ್ಯ, ಆಯುಸ್ಸು, ಶಕ್ತಿ - ಎಲ್ಲವೂ ಆ ನಿನ್ನ (ತೇಜಸ್ಸೇ) ಆಗಿರುವದು.

**ತ್ವಂ ವಿರಿಂಚಿಶಿವವಿಷ್ಣುವಿಭೇದಾತ್**
**ಕಾಲಕರ್ಮಶಶಿಸೂರ್ಯವಿಭಾಗಾತ್ ।**
**ವಾದಿನಾಂ ಪೃಥಗಿವೇಶ ವಿಭಾಸಿ**
**ಬ್ರಹ್ಮ ನಿಶ್ಚಿತಮನನ್ಯದಿಹೈಕಮ್ ॥ ೫೪ ॥**
**ಮತ್ಸ್ಯಾದಿರೂಪೇಣ ಯಥಾ ತ್ವಮೇಕಃ**
**ಶ್ರುತೌ ಪುರಾಣೇಷು ಚ ಲೋಕಸಿದ್ಧಃ ।**
**ತಥೈವ ಸರ್ವಂ ಸದಸದ್ವಿಭಾಗಃ**
**ತ್ವಮೇವ ನಾನ್ಯದ್ ಭವತೋ ವಿಭಾತಿ ॥ ೫೫ ॥**
**ಯದ್ಯತ್ ಸಮುತ್ಪನ್ನಮನಂತಸೃಷ್ಟಾ-**
**ವುತ್ಪತ್ಸ್ಯತೇ ಯಚ್ಚ ಭವಚ್ಚ ಯಚ್ಚ ।**
**ನ ದೃಶ್ಯತೇ ಸ್ಥಾವರಜಂಗಮಾದೌ**
**ತ್ವಯಾ ವಿನಾತಃ ಪರತಃ ಪರಸ್ತ್ವಮ್ ॥ ೫೬ ॥**

೫೪-೫೬. ಎಲೈ ಈಶನೆ, ನೀನು ಬ್ರಹ್ಮ, ಶಿವ, ವಿಷ್ಣು - ಎಂಬೀ ರೀತಿ ಯಿಂದಲೂ ಕಾಲ, ಕರ್ಮ, ಚಂದ್ರ, ಸೂರ್ಯ - ಎಂಬ ವಿಭಾಗಗಳಿಂದಲೂ ವಾದ ಮಾಡುವವರಿಗೆ ಬೇರೆಬೇರೆಯಾಗಿರುವವನಂತೆ ಕಂಡುಬರುವೆ. ಆದರೆ ನಿಶ್ಚಯ ವಾಗಿಯೂ ಬೇರೊಂದಿಲ್ಲದ ಬ್ರಹ್ಮವೊಂದೇ ಆಗಿರುವೆ. ಮತ್ಸ್ಯನೇ ಮುಂತಾದ ರೂಪದಿಂದ ಹೇಗೆ ನೀನೊಬ್ಬನೇ ಶ್ರುತಿಪುರಾಣಗಳಲ್ಲಿ ಪ್ರಸಿದ್ಧನಾಗಿರುವೆಯೋ ಹಾಗೆಯೇ ಇರತಕ್ಕದ್ದು, ಇಲ್ಲದ್ದು - ಎಂಬ ರೀತಿಯಿಂದಲೂ ಲೋಕದಲ್ಲಿ ಪ್ರಸಿದ್ಧನಾಗಿರುವೆ. ನಿನಗಿಂತ ಬೇರೆಯಾಗಿರುವದು ಯಾವದೂ ಕಂಡುಬರುತ್ತಿಲ್ಲ. ಈ ಅನಂತವಾದ ಸೃಷ್ಟಿಯಲ್ಲಿ ಏನೇನು ಹುಟ್ಟಿರುವದೋ ಏನೇನು ಹುಟ್ಟಲಿರುವದೋ,

ಮತ್ತು ಈಗ ಏನು ಇದ್ದುಕೊಂಡಿದೆಯೋ ಈ ಸ್ಥಾವರಜಂಗಮಾದಿಗಳೆಲ್ಲವೂ ನಿನ್ನನ್ನು ಬಿಟ್ಟು ಕಂಡು ಬರುವದೇ ಇಲ್ಲ. ಆದ್ದರಿಂದ ಹೆಚ್ಚಿನದೆಲ್ಲಕ್ಕಿಂತಲೂ ಹೆಚ್ಚಿನವನು ನೀನು.

**ತತ್ತ್ವಂ ನ ಜಾನಂತಿ ಪರಾತ್ಮನಸ್ತೇ**
**ಜನಾಃ ಸಮಸ್ತಾಃ ತವ ಮಾಯಯಾತಃ ।**
**ತ್ವದ್ಭಕ್ತಸೇವಾಮಲಮಾನಸಾನಾಂ**
**ವಿಭಾತಿ ತತ್ತ್ವಂ ಪರಮೇಕಮೈಶಮ್ ॥ ೫೭ ॥**
**ಬ್ರಹ್ಮಾದಯಸ್ತೇ ನ ವಿದುಃ ಸ್ವರೂಪಂ**
**ಚಿದಾತ್ಮತತ್ತ್ವಂ ಬಹಿರರ್ಥಭಾವಾಃ ।**
**ತತೋ ಬುಧಸ್ತ್ವಾಮಿದಮೇವ ರೂಪಂ**
**ಭಕ್ತ್ಯಾ ಭಜನ್ ಮುಕ್ತಿಮುಪೈತ್ಯದುಃಖಃ ॥ ೫೮ ॥**

೫೭-೫೮. ಎಲ್ಲಾ ಜನರೂ ನಿನ್ನ ಮಾಯೆಯಿಂದ (ಮೋಹಿತರಾಗಿ) ಪರಮಾತ್ಮನಾದ ನಿನ್ನ ಸ್ವರೂಪವನ್ನು ಅರಿಯಲಾರದೆ ಇರುವರು. ನಿನ್ನ ಭಕ್ತರ ಸೇವೆಯಿಂದ ಪರಿಶುದ್ಧವಾದ ಮನಸ್ಸುಳ್ಳವರಿಗೆ ಪರಮವೂ ಏಕವೂ ಸ್ವತಂತ್ರವೂ ಆದ ತತ್ತ್ವವು ಗೋಚರವಾಗುವದು. ಬಾಹ್ಯವಾದ ವಸ್ತುಗಳಲ್ಲಿ ಮನಸ್ಸುಳ್ಳ ಬ್ರಹ್ಮಾದಿದೇವತೆಗಳು ನಿನ್ನ ಚಿದಾತ್ಮತತ್ತ್ವಸ್ವರೂಪವನ್ನರಿಯರು. ಆದ್ದರಿಂದ ಜ್ಞಾನನಾದವನು ಈ ನಿನ್ನ ರೂಪವನ್ನು ಭಕ್ತಿಯಿಂದ ಭಜಿಸುವನಾಗಿದ್ದಲ್ಲಿ ದುಃಖವನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದಲಿರುವನು.

**ಅಹಂ ಭವನ್ನಾಮ ಗೃಣನ್ ಕೃತಾರ್ಥೋ**
**ವಸಾಮಿ ಕಾಶ್ಯಾಮನಿಶಂ ಭವಾನ್ಯಾ ।**
**ಮುಮೂರ್ಷಮಾಣಸ್ಯ ವಿಮುಕ್ತಯೇಽಹಂ**
**ದಿಶಾಮಿ ಮಂತ್ರಂ ತವ ರಾಮ ನಾಮ ॥ ೫೯ ॥**
**ಇಮಂ ಸ್ತವಂ ನಿತ್ಯಮನನ್ಯಭಕ್ತ್ಯಾ**
**ಶೃಣ್ವಂತಿ ಗಾಯಂತಿ ಲಿಖಂತಿ ಯೇ ವೈ ।**
**ತೇ ಸರ್ವಸೌಖ್ಯಂ ಪರಮಂ ಚ ಲಬ್ಧ್ವಾ**
**ಭವತ್ಪದಂ ಯಾಂತು ಭವತ್ಪ್ರಸಾದಾತ್ ॥ ೬೦ ॥**

೫೯-೬೦. ಎಲೈ ರಾಮನೆ, ನಾನಾದರೊ, ನಿನ್ನ ನಾಮವನ್ನು ಯಾವಾಗಲೂ ಉಚ್ಚರಿಸುತ್ತಾ ಕಾಶೀಕ್ಷೇತ್ರದಲ್ಲಿ ಪಾರ್ವತೀದೇವಿಯೊಡನೆ ವಾಸಮಾಡಿಕೊಂಡು ಕೃತಾರ್ಥನಾಗಿರುವೆನು. ಹಾಗೂ ಕಾಶಿಯಲ್ಲೇ ಶರೀರವನ್ನು ಬಿಡಲಿಚ್ಛಿಸುವವನಿಗೆ

ಮೋಕ್ಷವುಂಟಾಗುವದಕ್ಕಾಗಿ ನಿನ್ನ ಮಂತ್ರವನ್ನು ಉಪದೇಶಿಸುವೆನು. ಈ ಸ್ತೋತ್ರವನ್ನು ಪ್ರತಿದಿನವೂ ಅನನ್ಯಭಕ್ತಿಯಿಂದ ಯಾರು ಕೇಳುವರೋ, ಗಾನಮಾಡುವರೋ, ಬರೆಯುವರೋ ಅಂಥವರು ಸಕಲವಿಧವಾದ ಹೆಚ್ಚಿನ ಸುಖವನ್ನು ಹೊಂದಿ ನಿನ್ನ ಅನುಗ್ರಹದಿಂದ ನಿನ್ನ ಪದವಿಯನ್ನು ಸೇರುವವರಾಗಲಿ.

**ಇಂದ್ರ ಉವಾಚ-**

**ರಕ್ಷೋಧಿಪೇನಾಖಿಲದೇವಸೌಖ್ಯಂ**
**ಹೃತಂ ಚ ಮೇ ಬ್ರಹ್ಮವರೇಣ ದೇವ ।**
**ಪುನಶ್ಚ ಸರ್ವಂ ಭವತಃ ಪ್ರಸಾದಾತ್**
**ಪ್ರಾಪ್ತಂ ಹತೋ ರಾಕ್ಷಸದುಷ್ಟಶತ್ರುಃ ॥ ೬೧ ॥**

೬೧. ಇಂದ್ರನಿಂತೆಂದನು : ಎಲೈ ದೇವನೆ, ಬ್ರಹ್ಮನ ವರಬಲವುಳ್ಳ ರಾಕ್ಷಸಾಧಿಪ ನಾದ ರಾವಣನಿಂದ ಸಮಸ್ತದೇವತೆಗಳ ಹಾಗೂ ನನ್ನ ಸುಖವೆಲ್ಲವೂ ಅಪಹರಿಸಲ್ಪಟ್ಟಿತ್ತು. ಮತ್ತೆ ಈಗ ನಿನ್ನ ಅನುಗ್ರಹದಿಂದ ಅದು ದೊರಕಿತು. ಆ ದುಷ್ಟಶತ್ರುವಾದ ರಾಕ್ಷಸನು (ನಿನ್ನಿಂದ) ಹತನಾಗಿರುವನು.

**ದೇವಾ ಊಚುಃ -**

**ಹೃತಾ ಯಜ್ಞಭಾಗಾ ಧರಾದೇವದತ್ತಾ**
**ಮುರಾರೇ ಖಲೇನಾದಿದೈತ್ಯೇನ ವಿಷ್ಣೋ ।**
**ಹತೋಽದ್ಯ ತ್ವಯಾ ನೋ ವಿತಾನೇಷು ಭಾಗಾಃ**
**ಪುರಾವದ್ ಭವಿಷ್ಯಂತಿ ಯುಷ್ಮತ್ ಪ್ರಸಾದಾತ್ ॥ ೬೨ ॥**

೬೨. ದೇವತೆಗಳಿಂತೆಂದರು : ಎಲೈ ವಿಷ್ಣುವೆ, ಭೂದೇವತೆಗಳೆನಿಸಿದ ಬ್ರಾಹ್ಮಣರಿಂದ ಕೊಡಲ್ಪಟ್ಟ ಯಜ್ಞಭಾಗಗಳೆಲ್ಲವೂ ದುಷ್ಟನಾದ ಆ ಹಿರಿಯ ದೈತ್ಯನಿಂದ ಅಪಹರಿಸಲ್ಪಟ್ಟಿದ್ದವು. ಈಗ ಅವನು ನಿನ್ನಿಂದ ಕೊಲ್ಲಲ್ಪಟ್ಟನು. ನಿಮ್ಮ ಪ್ರಸಾದದಿಂದ ಇನ್ನು ಮುಂದೆ (ಯಜ್ಞ) ಭಾಗಗಳು ನಮಗೆ ಹಿಂದಿನಂತೆಯೇ ದೊರಕಲಿರುವವು.

**ಪಿತರ ಊಚುಃ-**

**ಹತೋಽದ್ಯ ತ್ವಯಾ ದುಷ್ಟದೈತ್ಯೋ ಮಹಾತ್ಮನ್**
**ಗಯಾದೌ ನರೈರ್ದತ್ತಪಿಂಡಾದಿಕಾನ್ನಃ ।**
**ಬಲಾದತ್ತಿ ಹತ್ವಾ ಗೃಹೀತ್ವಾ ಸಮಸ್ತಾನ್**
**ಇದಾನೀಂ ಪುನರ್ಲಬ್ಧಸತ್ವಾ ಭವಾಮಃ ॥ ೬೩ ॥**

೬೩. ಪಿತೃಗಳಿಂತೆಂದರು : ಎಲೈ ಮಹಾತ್ಮನೆ, ದುಷ್ಟರಾಕ್ಷಸನಾದ ಆತನು (ರಾವಣನು) ಈಗ ನಿನ್ನಿಂದ ಕೊಲ್ಲಲ್ಪಟ್ಟಿರುವನು. ಈತನು, ಮನುಷ್ಯರು ಗಯೆ - ಮುಂತಾದ ಕ್ಷೇತ್ರಗಳಲ್ಲಿ ನಮಗೆ ಕೊಟ್ಟ ಪಿಂಡಾದಿಗಳನ್ನು ಎಲ್ಲವನ್ನೂ ಬಲಾತ್ಕಾರದಿಂದ ಅಪಹರಿಸಿ ತಿಂದುಬಿಡುತ್ತಿದ್ದನು. (ಈಗ ಇವನು ನಾಶವಾದ್ದರಿಂದ) ನಾವು ಮತ್ತೆ ಪಿತೃಗಳಾಗಿ ನಮ್ಮ ಇರುವಿಕೆಯನ್ನು ಹೊಂದಿದವರಾಗಿರುವೆವು.

**ಯಕ್ಷಾ ಊಚುಃ-**

**ಸದಾ ವಿಷ್ಟಿಕರ್ಮಣ್ಯನೇನಾಭಿಯುಕ್ತಾ**
**ವಹಾಮೋ ದಶಾಸ್ಯಂ ಬಲಾದ್ ದುಃಖಯುಕ್ತಾಃ ।**
**ದುರಾತ್ಮಾ ಹತೋ ರಾವಣೋ ರಾಘವೇಶ**
**ತ್ವಯಾ ತೇ ವಯಂ ದುಃಖಜಾತಾದ್ ವಿಮುಕ್ತಾಃ ॥ ೬೪ ॥**

೬೪. ಯಕ್ಷರಿಂತೆಂದರು : ಎಲೈ ರಾಘವೇಶನೆ, ನಾವು ಯಾವಾಗಲೂ ಈ ರಾವಣನಿಂದ ಪಲ್ಲಕ್ಕಿಯನ್ನು ಹೊರುವ ಕೆಲಸದಲ್ಲಿ ನೇಮಿತರಾಗಿದ್ದು ಬಲಾತ್ಕಾರವಾಗಿ ದುಃಖದಿಂದ ಕೂಡಿ ಸೇವೆಮಾಡುತ್ತಿದ್ದೆವು. ಈಗ ದುರಾತ್ಮನಾದ ರಾವಣನು ನಿನ್ನಿಂದ ಹತನಾದನು. ನಾವು ದುಃಖಸಮೂಹದಿಂದ ಈಗ ಬಿಡಿಸಲ್ಪಟ್ಟಿರುವೆವು.

**ಗಂಧರ್ವಾ ಊಚುಃ -**

**ವಯಂ ಸಂಗೀತನಿಪುಣಾ ಗಾಯಂತಸ್ತೇ ಕಥಾಮೃತಮ್ ।**
**ಆನಂದಾಮೃತಸಂದೋಹಯುಕ್ತಾಃ ಪೂರ್ಣಾಃ ಸ್ಥಿತಾಃ ಪುರಾ ॥ ೬೫ ॥**
**ಪಶ್ಚಾದ್ದುರಾತ್ಮನಾ ರಾಮ ರಾವಣೇನಾಭಿವಿದ್ರುತಾಃ ।**
**ತಮೇವ ಗಾಯಮಾನಾಶ್ಚ ತದಾರಾಧನತತ್ಪರಾಃ ॥ ೬೬ ॥**
**ಸ್ಥಿತಾಸ್ತ್ವಯಾ ಪರಿತ್ರಾತಾ ಹತೋಽಯಂ ದುಷ್ಟರಾಕ್ಷಸಃ ।**

೬೫-೬೬. ಗಂಧರ್ವರಿಂತೆಂದರು :ಸಂಗೀತನಿಪುಣರಾದ ನಾವು ಹಿಂದೆ ನಿನ್ನ ಕಥಾಮೃತವನ್ನು ಗಾನಮಾಡುತ್ತಾ ಆನಂದಾಮೃತಸಾಗರದಲ್ಲಿ ಮುಳುಗಿದವರಾಗಿ ಪೂರ್ಣರಾಗಿದ್ದುಕೊಂಡಿದ್ದೆವು. ಅನಂತರ ಎಲೈ ರಾಮನೆ, ದುರಾತ್ಮನಾದ ರಾವಣನಿಂದ ಪೀಡಿಸಲ್ಪಟ್ಟವರಾಗಿ, ಅವನನ್ನೇ ಗಾನಮಾಡುತ್ತಾ ಅವನ ಆರಾಧನೆಯಲ್ಲಿ ತತ್ಪರರಾಗಿ ಬಿಟ್ಟೆವು. ಹೀಗಿದ್ದ ನಮ್ಮನ್ನು ನೀನು ಕಾಪಾಡಿರುವೆ. ಆ ದುಷ್ಟರಾಕ್ಷಸನು ಹತನಾದನು.

**ಏವಂ ಮಹೋರಗಾಃ ಸಿದ್ಧಾಃ ಕಿನ್ನರಾ ಮರುತಸ್ತಥಾ ।**
**ವಸವೋ ಮುನಯೋ ಗಾವಃ ಗುಹ್ಯಕಾಶ್ಚ ಪತತ್ರಿಣಃ ॥ ೬೭ ॥**

**ಸಪ್ರಜಾಪತಯಶ್ಚೈತೇ ತಥಾ ಚಾಪ್ಸರಸಾಂ ಗಣಾಃ ।**
**ಸರ್ವೇ ರಾಮಂ ಸಮಾಸಾದ್ಯ ದೃಷ್ಟ್ವಾ ನೇತ್ರಮಹೋತ್ಸವಮ್ ॥ ೬೮ ॥**
**ಸ್ತುತ್ವಾ ಪೃಥಕ್ ಪೃಥಕ್ ಸರ್ವೇ ರಾಘವೇಣಾಭಿವಂದಿತಾಃ ।**
**ಯಯುಃ ಸ್ವಂ ಸ್ವಂ ಪದಂ ಸರ್ವೇ ಬ್ರಹ್ಮರುದ್ರಾದಯಸ್ತಥಾ ॥ ೬೯ ॥**

೬೭-೬೯. ಈ ರೀತಿಯಾಗಿ ದೊಡ್ಡ ದೊಡ್ಡ ನಾಗರುಗಳು, ಸಿದ್ಧರು, ಕಿನ್ನರರು, ಮರುದ್ದೇವತೆಗಳು, ಹಾಗೆಯೇ ವಸುಗಳು, ಮುನಿಗಳು, (ಸುರಭಿ ಮುಂತಾದ) ಗೋವುಗಳು, ಗುಹ್ಯಕರು, ಪಕ್ಷಿಶ್ರೇಷ್ಠರು, ಪ್ರಜಾಪತಿ (ಬ್ರಹ್ಮರು)ಗಳು, ಅಪ್ಸರಃಸ್ತ್ರೀಯರ ಗುಂಪುಗಳು - ಎಲ್ಲರೂ ಶ್ರೀರಾಮನನ್ನು ಬಳಿಸಾರಿದವರಾಗಿ ಕಣ್ಣಿಗೆ ಹಬ್ಬವನ್ನುಂಟು ಮಾಡುವ ರಾಮನನ್ನು ಕಂಡು ಎಲ್ಲರೂ ಬೇರೆ ಬೇರೆಯಾಗಿ ಸ್ತುತಿಸಿ, ರಾಮನಿಂದ ಗೌರವಿಸಲ್ಪಟ್ಟವರಾಗಿ - ಬ್ರಹ್ಮರುದ್ರರೇ ಮೊದಲಾದವರೂ ಸಹ - ತಮ್ಮ ತಮ್ಮ ಜಾಗ ಗಳಿಗೆ ಹೊರಟುಹೋದರು.

**ಪ್ರಶಂಸಂತೋ ಮುದಾ ರಾಮಂ ಗಾಯಂತಸ್ತಸ್ಯ ಚೇಷ್ಟಿತಮ್ ।**
**ಧ್ಯಾಯಂತಸ್ತ್ವಭಿಷೇಕಾರ್ದ್ರಂ ಸೀತಾಲಕ್ಷ್ಮಣಸಂಯುತಮ್ ॥ ೭೦ ॥**
**ಸಿಂಹಾಸನಸ್ಥಂ ರಾಜೇಂದ್ರಂ ಯಯುಃ ಸರ್ವೇ ಹೃದಿ ಸ್ಥಿತಮ್ ।**

**ಖೇ ವಾದ್ಯೇಷು ಧ್ವನತ್ಸು ಪ್ರಮುದಿತಹೃದಯೈರ್ದೇವವೃಂದೈಃ ಸ್ತುವದ್ಭಿಃ**
**ವರ್ಷದ್ಭಿಃ ಪುಷ್ಪವೃಷ್ಟಿಂ ದಿವಿ ಮುನಿನಿಕರೈರೀಡ್ಯಮಾನಂ ಸಮಂತಾತ್ ।**
**ರಾಮಃ ಶ್ಯಾಮಃ ಪ್ರಸನ್ನಸ್ಮಿತರುಚಿರಮುಖಃ ಸೂರ್ಯಕೋಟಿಪ್ರಕಾಶಃ**
**ಸೀತಾಸೌಮಿತ್ರಿವಾತಾತ್ಮಜಮುನಿಹರಿಭಿಃ ಸೇವ್ಯಮಾನೋ ವಿಭಾತಿ ॥ ೭೧ ॥**

೭೦-೭೧. ಜನರೆಲ್ಲರೂ ತಮ್ಮ ಹೃದಯದಲ್ಲಿಯೇ ಇರುವ ರಾಮನನ್ನು ಸಂತೋಷಭರಿತರಾಗಿ ಹೊಗಳುತ್ತಾ ಅವನ ಲೀಲೆಗಳನ್ನು ಗಾನಮಾಡುತ್ತಾ ಪಟ್ಟಾಭಿಷಿಕ್ತನಾಗಿ ಶಾಂತನಾದ ರಾಜಶ್ರೇಷ್ಠನಾದ, ಹಾಗೂ ಸಿಂಹಾಸನದಲ್ಲಿ ಕುಳಿತು ಸೀತಾಲಕ್ಷ್ಮಣ ಸಹಿತನಾಗಿರುವ ಆತನನ್ನು ಧ್ಯಾನಮಾಡುತ್ತಾ ಹೊರಟುಹೋದರು. ಆಕಾಶದಲ್ಲಿ ವಾದ್ಯಗಳು ಮೊಳಗುತ್ತಿರಲಾಗಿ ಅರಳಿದ ಹೃದಯವುಳ್ಳ ದೇವತೆಗಳ ಗುಂಪಿನಿಂದ ಸ್ತೋತ್ರಮಾಡಲ್ಪಡುತ್ತಾ ಹಾಗೂ ಹೂಮಳೆಗರೆಯುತ್ತಾ ಇರುವವನಾಗಿ, ಮತ್ತು ಸುತ್ತಲೂ ನೆರೆದಿದ್ದ ಋಷಿಗಳ ಸಮೂಹದಿಂದ ಹೊಗಳಲ್ಪಡುತ್ತಿರು ವವನಾಗಿ, ಸೂರ್ಯ ಕೋಟಿಪ್ರಕಾಶನೂ, ಪ್ರಸನ್ನವಾದ ಮುಗುಳುನಗೆಯ ಸುಂದರ ಮುಖದವನೂ, ಶ್ಯಾಮಲ ವರ್ಣನೂ ಆದ ರಾಮನು ಸೀತೆ, ಲಕ್ಷ್ಮಣ, ಆಂಜನೇಯ, ಮುನಿಗಳು, ಕಪಿಗಳಿಂದ ಸೇವಿಸಲ್ಪಟ್ಟವನಾಗಿ ವಿರಾಜಮಾನನಾಗಿದ್ದನು.

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಪಂಚದಶಃ ಸರ್ಗಃ**

-----------

# ಹದಿನಾರನೆಯ ಸರ್ಗ

**ಶ್ರೀ ಮಹಾದೇವ ಉವಾಚ-**

**ರಾಮೇऽಭಿಷಿಕ್ತೇ ರಾಜೇಂದ್ರೇ ಸರ್ವಲೋಕಸುಖಾವಹೇ ।**
**ವಸುಧಾ ಸಸ್ಯಸಂಪನ್ನಾ ಫಲವಂತೋ ಮಹೀರುಹಾಃ ॥ ೧ ॥**
**ಗಂಧಹೀನಾನಿ ಪುಷ್ಪಾಣಿ ಗಂಧವಂತಿ ಚಕಾಶಿರೇ ।**
**ಸಹಸ್ರಶತಮಶ್ವಾನಾಂ ಧೇನೂನಾಂ ಚ ಗವಾಂ ತಥಾ ॥ ೨ ॥**
**ದದೌ ಶತವೃಷಾನ್ ಪೂರ್ವಂ ದ್ವಿಜೇಭ್ಯೋ ರಘುನಂದನಃ ।**
**ತ್ರಿಂಶತ್ ಕೋಟೀಃ ಸುವರ್ಣಸ್ಯ ಬ್ರಾಹ್ಮಣೇಭ್ಯೋ ದದೌ ಪುನಃ ॥ ೩ ॥**
**ವಸ್ತ್ರಾಭರಣರತ್ನಾನಿ ಬ್ರಾಹ್ಮಣೇಭ್ಯೋ ಮುದಾ ತಥಾ ॥**

೧-೩. ಶ್ರೀ ಮಹಾದೇವನಿಂತೆಂದನು : ಸರ್ವಲೋಕಗಳಿಗೂ ಸುಖವನ್ನುಂಟುಮಾಡುವ ರಾಜೇಂದ್ರನಾದ ಶ್ರೀರಾಮನು ಪಟ್ಟಾಭಿಷಿಕ್ತನಾಗಲಾಗಿ ಭೂಮಿಯು ಸಸ್ಯಗಳಿಂದ ಸಮೃದ್ಧವಾಗಿಬಿಟ್ಟಿತು. ಮರಗಳೆಲ್ಲವೂ ಹಣ್ಣುಗಳುಳ್ಳವಾದವು. ವಾಸನೆಯಿಲ್ಲದ ಹೂಗಳು ಸಹ ಗಂಧವುಳ್ಳವುಗಳಾಗಿ ವಿರಾಜಿಸಿದವು. ಶ್ರೀರಾಮನು ನೂರುಸಾವಿರ ಸಂಖ್ಯೆಯ ಕುದುರೆಗಳು, ಹಸುಗಳು, ಹಾಗೆಯೇ ನೂರು ಸಂಖ್ಯೆಯ ಹೋರಿಗಳಿಂದ ಕೂಡಿದ ಗೋವುಗಳ ವೃಂದವನ್ನು ಬ್ರಾಹ್ಮಣರಿಗೆ ದಾನಮಾಡಿದನು. ಮತ್ತೆ ಮೂವತ್ತು ಕೋಟಿ ಚಿನ್ನದ (ನಾಣ್ಯ)ಗಳನ್ನು ಬ್ರಾಹ್ಮಣರಿಗೆ ವಿತರಣಮಾಡಿದನು. ಹಾಗೆಯೇ ಬ್ರಾಹ್ಮಣರಿಗೆ ವಸ್ತ್ರಾಭರಣರತ್ನಗಳನ್ನೂ ಸಂತೋಷದಿಂದ ಕೊಟ್ಟನು.

**ಸೂರ್ಯಕಾಂತಿಸಮಪ್ರಖ್ಯಾಂ ಸರ್ವರತ್ನಮಯೀಂ ಸ್ರಜಮ್ ।**
**ಸುಗ್ರೀವಾಯ ದದೌ ಪ್ರೀತ್ಯಾ ರಾಘವೋ ಭಕ್ತವತ್ಸಲಃ ॥ ೪ ॥**
**ಅಂಗದಾಯ ದದೌ ದಿವ್ಯೇ ಹ್ಯಂಗದೇ ರಘುನಂದನಃ ।**
**ಚಂದ್ರಕೋಟಿಪ್ರತೀಕಾಶಂ ಮಣಿರತ್ನವಿಭೂಷಿತಮ್ ॥ ೫ ॥**
**ಸೀತಾಯೈ ಪ್ರದದೌ ಹಾರಂ ಪ್ರೀತ್ಯಾ ರಘುಕುಲೋತ್ತಮಃ ।**

೪-೫. ಸೂರ್ಯನಂತೆ ಕಾಂತಿಯುಳ್ಳ ಸಕಲರತ್ನಗಳಿಂದ ಮಾಡಿಸಿದ ಹಾರವನ್ನು ಭಕ್ತವತ್ಸಲನಾದ ರಾಮನು ಪ್ರೀತಿಯಿಂದ ಸುಗ್ರೀವನಿಗೆ ಕೊಟ್ಟನು. ಆ ರಘುನಂದನನು ಅಂಗದನಿಗೆ ದಿವ್ಯವಾದ ಎರಡು ಭುಜಾಭರಣಗಳನ್ನು ಕೊಟ್ಟನು. ಕೋಟಿಚಂದ್ರಸಮಾನ ವಾದ ಕಾಂತಿಯುಳ್ಳ ಮಣಿರತ್ನಗಳಿಂದ ಅಲಂಕೃತವಾದ ಹಾರವೊಂದನ್ನು ಆ ರಘುಕುಲಶ್ರೇಷ್ಠನು ಪ್ರೀತಿಯಿಂದ ಸೀತೆಗೆ ಕೊಟ್ಟನು.

**ಅವಮುಚ್ಯಾತ್ಮನಃ ಕಂಠಾದ್ಧಾರಂ ಜನಕನಂದಿನೀ ।**
**ಅವೈಕ್ಷತ ಹರೀನ್ ಸರ್ವಾನ್ ಭರ್ತಾರಂ ಚ ಮುಹುರ್ಮುಹುಃ ॥ ೬ ॥**
**ರಾಮಸ್ತಾಮಾಹ ವೈದೇಹೀಮಿಂಗಿತಜ್ಞೋ ವಿಲೋಕಯನ್ ।**
**ವೈದೇಹಿ ಯಸ್ಯ ತುಷ್ಟಾಸಿ ದೇಹಿ ತಸ್ಯೈ ವರಾನನೇ ॥ ೭ ॥**
**ಹನೂಮತೇ ದದೌ ಹಾರಂ ಪಶ್ಯತೋ ರಾಘವಸ್ಯ ಚ ।**
**ತೇನ ಹಾರೇಣ ಶುಶುಭೇ ಮಾರುತಿರ್ಗೌರವೇಣ ಚ ॥ ೮ ॥**

೬-೮. ಸೀತಾದೇವಿಯು ತನ್ನ ಕೊರಳಿನಿಂದ ಹಾರವನ್ನು ಬಿಚ್ಚಿ (ಕೈಯಲ್ಲಿ ಹಿಡಿದು) ಎಲ್ಲಾ ಕಪಿಗಳನ್ನೂ ಯಜಮಾನನಾದ (ರಾಮನನ್ನೂ) ಮತ್ತೆ ಮತ್ತೆ ನೋಡುತ್ತಿದ್ದಳು. ಇಂಗಿತಜ್ಞನಾದ ರಾಮನು ವೈದೇಹಿಯಾದ ಆಕೆಯನ್ನು ನೋಡುತ್ತಾ ''ವೈದೇಹಿ, ನೀನು ಯಾರ ವಿಷಯದಲ್ಲಿ ತೃಪ್ತಳಾಗಿರುವೆಯೋ ಅವನಿಗೆ ಎಲೈ ವರಾನನೆ, (ಹಾರವನ್ನು) ಕೊಡುವವಳಾಗು'' ಎಂದನು. ರಾಮನು ನೋಡುತ್ತಿರುವಂತೆಯೇ ಆಕೆಯು ಹಾರವನ್ನು ಹನುಮಂತನಿಗೆ ಇತ್ತಳು. ಮಾರುತಿಯು ಆ ಹಾರದಿಂದಲೂ ಆಕೆಯು ಇತ್ತ ಗೌರವದಿಂದಲೂ ಬಹಳವಾಗಿ ಶೋಭಿಸುತ್ತಿದ್ದನು.

**ರಾಮೋಽಪಿ ಮಾರುತಿಂ ದೃಷ್ಟ್ವಾ ಕೃತಾಂಜಲಿಮುಪಸ್ಥಿತಮ್ ।**
**ಭಕ್ತ್ಯಾ ಪರಮಯಾ ತುಷ್ಟ ಇದಂ ವಚನಮಬ್ರವೀತ್ ॥ ೯ ॥**
**ಹನೂಮಂಸ್ತೇ ಪ್ರಸನ್ನೋಽಸ್ಮಿ ವರಂ ವರಯ ಕಾಂಕ್ಷಿತಮ್ ।**
**ದಾಸ್ಯಾಮಿ ದೇವೈರಪಿ ಯದ್ದುರ್ಲಭಂ ಭುವನತ್ರಯೇ ॥ ೧೦ ॥**

೯-೧೦. ಶ್ರೀರಾಮನೂ ಕೈಮುಗಿದು ನಿಂತಿದ್ದ ಹನುಮಂತನನ್ನು ಕಂಡು ಅವನ ಪರಮವಾದ ಭಕ್ತಿಗೆ ಮೆಚ್ಚಿದವನಾಗಿ ಈ ಮಾತನ್ನು ಹೇಳಿದನು : ''ಎಲೈ ಹನುಮಂತನೆ, ನಿನಗೆ ನಾನು ಒಲಿದಿರುತ್ತೇನೆ. ನಿನ್ನ ಇಷ್ಟಕ್ಕೆ ತಕ್ಕಂತೆ ವರವನ್ನು ಕೇಳಿಕೊ. ಅದು ಮೂರು ಲೋಕಗಳಲ್ಲಿಯೂ, ದೇವತೆಗಳಿಗೂ ದುರ್ಲಭವಾದಂಥದ್ದಾದರೂ ಸರಿ, ನಿನಗೆ ಕೊಡುವೆನು.''

**ಹನುಮಾನಪಿ ತಂ ಪ್ರಾಹ ನತ್ವಾ ರಾಮಂ ಪ್ರಹೃಷ್ಟಧೀಃ ।**
**ತ್ವನ್ನಾಮ ಸ್ಮರತೋ ರಾಮ ನ ತೃಪ್ಯತಿ ಮನೋ ಮಮ ॥ ೧೧ ॥**
**ಅತಸ್ತ್ವನ್ನಾಮ ಸತತಂ ಸ್ಮರನ್ ಸ್ಥಾಸ್ಯಾಮಿ ಭೂತಲೇ ।**
**ಯಾವತ್ ಸ್ಥಾಸ್ಯತಿ ತೇ ನಾಮ ಲೋಕೇ ತಾವತ್ ಕಲೇವರಮ್ ॥ ೧೨ ॥**
**ಮಮ ತಿಷ್ಠತು ರಾಜೇಂದ್ರ ವರೋಽಯಂ ಮೇಽಭಿಕಾಂಕ್ಷಿತಃ ।**

೧೧-೧೨. ಹನುಮಂತನು ಕೂಡ ಶ್ರೀರಾಮನಿಗೆ ವಂದಿಸಿ ಸಂತೋಷದಿಂದ ಕೂಡಿದ ಬುದ್ಧಿಯುಳ್ಳವನಾಗಿ ಹೀಗೆಂದನು : ''ಎಲೈ ರಾಮನೆ, ನಿನ್ನ ನಾಮವನ್ನು ಸ್ಮರಿಸುತ್ತಾ ಇರುವಲ್ಲಿ ನನ್ನ ಮನಸ್ಸಿಗೆ ತೃಪ್ತಿಯೇ ಆಗುವಂತಿಲ್ಲ. ಆದ್ದರಿಂದ ನಿನ್ನ ಹೆಸರನ್ನು ಜಪಮಾಡುತ್ತಾ ಭೂಮಿಯಲ್ಲಿದ್ದುಕೊಂಡಿರುವೆನು. ಎಲ್ಲಿಯವರೆಗೆ ನಿನ್ನ ನಾಮವು ಭೂಮಂಡಲದಲ್ಲಿ ಕೀರ್ತನೆಮಾಡಲ್ಪಡುತ್ತಿರುವದೋ ಅಲ್ಲಿಯವರೆಗೂ ಈ ನನ್ನ ಶರೀರವು ಇದ್ದುಕೊಂಡಿರಲಿ. ಇದೇ ನಾನು ಕೇಳಿಕೊಳ್ಳುವ ವರವು'' (ಎಂದನು).

**ರಾಮಸ್ತಥೇತಿ ತಂ ಪ್ರಾಹ ಮುಕ್ತಸ್ತಿಷ್ಠ ಯಥಾಸುಖಮ್ ।**
**ಕಲ್ಪಾಂತೇ ಮಮ ಸಾಯುಜ್ಯಂ ಪ್ರಾಪ್ಸ್ಯಸೇ ನಾತ್ರ ಸಂಶಯಃ ॥ ೧೩ ॥**
**ತಮಾಹ ಜಾನಕೀ ಪ್ರೀತಾ ಯತ್ರ ಕುತ್ರಾಪಿ ಮಾರುತೇ ।**
**ಸ್ಥಿತಂ ತ್ವಾಮನುಯಾಸ್ಯಂತಿ ಭೋಗಾಃ ಸರ್ವೇ ಮಮಾಜ್ಞಯಾ ॥ ೧೪ ॥**

೧೩-೧೪. ಆಗ ರಾಮನು ''ಹಾಗೆಯೇ ಆಗಲಿ ; ನೀನು ಜೀವನ್ಮುಕ್ತನಾಗಿ ಆನಂದ ದಿಂದ (ಚಿರಂಜೀವಿಯಾಗಿ) ಇದ್ದುಕೊಂಡಿರು. ಕಲ್ಪದ ಕೊನೆಯಲ್ಲಿ ನನ್ನ ಸಾಯುಜ್ಯವನ್ನೇ ಹೊಂದುವೆ. ಈ ವಿಷಯದಲ್ಲಿ ಸಂಶಯವಿಲ್ಲ'' ಎಂದನು. ಸುಪ್ರೀತಳಾದ ಸೀತೆಯು ಅವನನ್ನು ಕುರಿತು ಹೀಗೆಂದಳು : ''ಎಲೈ ಮಾರುತಿಯೆ, ನೀನು ಎಲ್ಲಿಯೇ ಇದ್ದು ಕೊಂಡಿದ್ದರೂ ನನ್ನ ಅಪ್ಪಣೆಯಂತೆ ಸಕಲಭೋಗಗಳೂ ನಿನ್ನನ್ನು ಅನುಸರಿಸಿ ಬರುವವು.''

**ಇತ್ಯುಕ್ತೋ ಮಾರುತಿಸ್ತಾಭ್ಯಾಮೀಶ್ವರಾಭ್ಯಾಂ ಪ್ರಹೃಷ್ಟಧೀಃ ।**
**ಆನಂದಾಶ್ರುಪರೀತಾಕ್ಷೋ ಭೂಯೋಭೂಯಃ ಪ್ರಣಮ್ಯ ತೌ ॥ ೧೫ ॥**
**ಕೃಛ್ರಾದ್ಯಯೌ ತಪಸ್ತಪ್ತುಂ ಹಿಮವಂತಂ ಮಹಾಮತಿಃ ।**

೧೫. ಈ ರೀತಿಯಾಗಿ ಹನುಮಂತನು ಆ ಇಬ್ಬರು ಒಡೆಯ-ಒಡತಿಯ ರಿಂದ ಹೇಳಲ್ಪಟ್ಟವನಾಗಿ ಸಂತೋಷದಿಂದ ಆನಂದಬಾಷ್ಪವನ್ನು ಸುರಿಸುತ್ತಾ ಮತ್ತೆ ಮತ್ತೆ ಅವರಿಬ್ಬರನ್ನೂ ನಮಸ್ಕರಿಸಿ ಬಹಳ ಕಷ್ಟದಿಂದ (ಅವರನ್ನಗಲಿ) ಆ ಮಹಾ ಬುದ್ಧಿಶಾಲಿಯು ತಪಸ್ಸುಮಾಡುವದಕ್ಕಾಗಿ ಹಿಮವತ್‌ಪರ್ವತಕ್ಕೆ ಹೊರಟು ಹೋದನು.

**ತತೋ ಗುಹಂ ಸಮಾಸಾದ್ಯ ರಾಮಃ ಪ್ರಾಂಜಲಿಮಬ್ರವೀತ್ ।**
**ಸಖೇ ಗಚ್ಛ ಪುರಂ ರಮ್ಯಂ ಶೃಂಗವೇರಮನುತ್ತಮಮ್ ॥ ೧೬ ॥**

**ಮಾಮೇವ ಚಿಂತಯನ್ನಿತ್ಯಂ ಭುಂಕ್ಷ್ವ ಭೋಗಾನ್ ನಿಜಾರ್ಜಿತಾನ್ ।**
**ಅಂತೇ ಮಮೈವ ಸಾರೂಪ್ಯಂ ಪ್ರಾಪ್ಸ್ಯಸೇ ತ್ವಂ ನ ಸಂಶಯಃ ॥ ೧೭ ॥**
**ಇತ್ಯುಕ್ತ್ವಾ ಪ್ರದದೌ ತಸ್ಮೈ ದಿವ್ಯಾನ್ಯಾಭರಣಾನಿ ಚ ।**
**ರಾಜ್ಯಂ ಚ ವಿಪುಲಂ ದತ್ವಾ ವಿಜ್ಞಾನಂ ಚ ದದೌ ವಿಭುಃ ॥ ೧೮ ॥**
**ರಾಮೇಣಾಲಿಂಗಿತೋ ಹೃಷ್ಟೋ ಯಯೌ ಸ್ವಭವನಂ ಗುಹಃ ।**

೧೬-೧೮. ಅನಂತರ ಕೈಮುಗಿದು ನಿಂತಿದ್ದ ಗುಹನನ್ನು ಕಂಡು ರಾಮನು ಹೀಗೆಂದನು : ''ಎಲೈ ಸ್ನೇಹಿತನೆ, ರಮ್ಯವಾದ ಉತ್ತಮವಾದ ಶೃಂಗವೇರಪುರಕ್ಕೆ ನೀನು ಹೊರಡುವವನಾಗು. ನನ್ನನ್ನೇ ಚಿಂತಿಸುತ್ತಾ ನೀನು ಸಂಪಾದಿಸಿರುವ ಭೋಗಗಳನ್ನು ಅನುಭವಿಸುವವನಾಗು. ಕಡೆಯಲ್ಲಿ ನನ್ನ ಸಾರೂಪ್ಯವನ್ನೇ ಹೊಂದುವೆ. ಈ ಬಗ್ಗೆ ಸಂಶಯವಿಲ್ಲ.'' ಹೀಗೆಂದು ಹೇಳಿ ಅವನಿಗೆ ದಿವ್ಯವಾದ ಆಭರಣಗಳನ್ನೂ ವಿಸ್ತಾರವಾದ ರಾಜ್ಯವನ್ನೂ ಜ್ಞಾನವನ್ನೂ ವಿಭುವಾದ (ರಾಮನು) ದಯಪಾಲಿಸಿದನು. ರಾಮನಿಂದ ಆಲಿಂಗಿತನಾದ (ಗುಹನು) ಸಂತುಷ್ಟನಾಗಿ ತನ್ನ ಮನೆಗೆ ಹೋದನು.

**ಯೇ ಚಾನ್ಯೇ ವಾನರಶ್ರೇಷ್ಠಾಃ ಅಯೋಧ್ಯಾಂ ಸಮುಪಾಗತಾಃ ।**
**ಅಮೂಲ್ಯಾಭರಣೈರ್ವಸ್ತ್ರೈಃ ಪೂಜಯಾಮಾಸ ರಾಘವಃ ॥ ೧೯ ॥**
**ಸುಗ್ರೀವಪ್ರಮುಖಾಃ ಸರ್ವೇ ವಾನರಾಃ ಸವಿಭೀಷಣಾಃ ।**
**ಯಥಾರ್ಹಂ ಪೂಜಿತಾಸ್ತೇನ ರಾಮೇಣ ಪರಮಾತ್ಮನಾ ॥ ೨೦ ॥**
**ಪ್ರಹೃಷ್ಟಮನಸಃ ಸರ್ವೇ ಜಗ್ಮುರೇವ ಯಥಾಗತಮ್ ॥**

೧೯-೨೦. ಇನ್ನುಳಿದ ಕಪಿಶ್ರೇಷ್ಠರುಗಳು ಯಾರು ಯಾರು ಅಯೋಧ್ಯೆಗೆ ಬಂದಿದ್ದರೋ ಅವರೆಲ್ಲರನ್ನೂ ಅಮೂಲ್ಯವಾದ ಒಡವೆಗಳು, ವಸ್ತ್ರಗಳಿಂದ ರಾಮನು ಗೌರವಿಸಿದನು. ವಿಭೀಷಣನೊಡಗೂಡಿ ಸುಗ್ರೀವನೇ ಮುಂತಾದ ಎಲ್ಲಾ ಮುಖ್ಯ ಕಪಿಗಳೂ ಯಥಾಯೋಗ್ಯವಾಗಿ ಪರಮಾತ್ಮನಾದ ಶ್ರೀರಾಮನಿಂದ ಪೂಜಿಸಲ್ಪಟ್ಟವ ರಾಗಿ ಬಹಳ ಸಂತುಷ್ಟರಾಗಿ ತಮ್ಮ ತಮ್ಮ (ಸ್ಥಾನಗಳಿಗೆ) ಹಿಂದಿರುಗಿದರು.

**ಸುಗ್ರೀವಪ್ರಮುಖಾಃ ಸರ್ವೇ ಕಿಷ್ಕಿಂಧಾಂ ಪ್ರಯಯುರ್ಮುದಾ ।**
**ವಿಭೀಷಣಸ್ತು ಸಂಪ್ರಾಪ್ಯ ರಾಜ್ಯಂ ನಿಹತಕಂಟಕಮ್ ।**
**ರಾಮೇಣ ಪೂಜಿತಃ ಪ್ರೀತ್ಯಾ ಯಯೌ ಲಂಕಾಮನಿಂದಿತಃ ॥ ೨೧ ॥**

೨೧. ಸುಗ್ರೀವನೇ ಮುಂತಾದವರೆಲ್ಲರೂ ಸಂತೋಷದಿಂದ ಕಿಷ್ಕಿಂಧೆಗೆ ಹೊರಟುಹೋದರು. ದೋಷರಹಿತನಾದ ವಿಭೀಷಣನಾದರೊ, ಶತ್ರುಗಳ

ಕಾಟವಿಲ್ಲದ ರಾಜ್ಯವನ್ನು ಪಡೆದವನಾಗಿ ರಾಮನಿಂದ ಪ್ರೀತಿಯಾಗಿ ಪೂಜಿಸಲ್ಪಟ್ಟು ಲಂಕೆಗೆ ಹಿಂದಿರುಗಿದನು.

**ರಾಘವೋ ರಾಜ್ಯಮಖಿಲಂ ಶಶಾಸಾಖಿಲವತ್ಸಲಃ ।**
**ಅನಿಚ್ಛನ್ನಪಿ ರಾಮೇಣ ಯೌವರಾಜ್ಯೇಽಭಿಷೇಚಿತಃ ॥ ೨೨ ॥**
**ಲಕ್ಷ್ಮಣಃ ಪರಯಾ ಭಕ್ತ್ಯಾ ರಾಮಸೇವಾಪರೋಽಭವತ್ ।**

೨೨. ಸಕಲರನ್ನೂ ಪ್ರೀತಿಸುವ ಶ್ರೀರಾಮನು ಇಡಿಯರಾಜ್ಯವನ್ನೆಲ್ಲ ಆಳುತ್ತಿದ್ದನು. ಲಕ್ಷ್ಮಣನು ಬಯಸದಿದ್ದರೂ ರಾಮನು ಅವನನ್ನು ಯೌವರಾಜ್ಯದಲ್ಲಿ ಅಭಿಷೇಕ ಮಾಡಿದನು. ಆತನು ಪರಮಭಕ್ತಿಯಿಂದ ರಾಮಸೇವಾ ತತ್ಪರನಾಗಿದ್ದನು.

**ರಾಮಸ್ತು ಪರಮಾತ್ಮಾಪಿ ಕರ್ಮಾಧ್ಯಕ್ಷೋಽಪಿ ನಿರ್ಮಲಃ ।**
**ಕರ್ತೃತ್ವಾದಿವಿಹೀನೋಽಪಿ ನಿರ್ವಿಕಾರೋಽಪಿ ಸರ್ವದಾ ॥ ೨೩ ॥**
**ಸ್ವಾನಂದೇನಾಪಿ ತುಷ್ಟಃ ಸನ್ ಲೋಕಾನಾಮುಪದೇಶಕೃತ್ ।**
**ಅಶ್ವಮೇಧಾದಿಯಜ್ಞೈಶ್ಚ ಸರ್ವೈರ್ವಿಪುಲದಕ್ಷಿಣೈಃ ॥ ೨೪ ॥**
**ಅಯಜತ್ ಪರಮಾನಂದೋ ಮಾನುಷಂ ವಪುರಾಶ್ರಿತಃ ।**

೨೩-೨೪. ಶ್ರೀರಾಮನು ಯಾವಾಗಲೂ ಪರಮಾತ್ಮನೂ ಕರ್ಮಸಾಕ್ಷಿಯೂ ನಿರ್ಮಲನೂ ಕರ್ತೃತ್ವಾದಿಗಳಿಲ್ಲದವನೂ ನಿರ್ವಿಕಾರನೂ ಆಗಿದ್ದರೂ ತನ್ನ ಆನಂದ ಸ್ವರೂಪದಿಂದಲೇ ಸಂತುಷ್ಟನಾಗಿದ್ದರೂ ಲೋಕದ ಜನರಿಗೆ ತಿಳಿಯಹೇಳುವ ಸಲುವಾಗಿ ಅಶ್ವಮೇಧವೇ ಮುಂತಾದ ಬಹಳವಾದ ದಕ್ಷಿಣೆಗಳುಳ್ಳ ಎಲ್ಲಾ ಯಜ್ಞಗಳಿಂದಲೂ ಮನುಷ್ಯ ಶರೀರಧಾರಿಯಾಗಿ ಪರಮಾನಂದದಿಂದ ಕೂಡಿ (ಕರ್ಮಗಳನ್ನು) ಅನುಷ್ಠಾನ ಮಾಡಿದನು.

**ನ ಪರ್ಯದೇವನ್ ವಿಧವಾ ನ ಚ ವ್ಯಾಲಕೃತಂ ಭಯಮ್ ।**
**ನ ವ್ಯಾಧಿಜಂ ಭಯಂ ಚಾಸೀದ್ ರಾಮೇ ರಾಜ್ಯಂ ಪ್ರಶಾಸತಿ ॥ ೨೫ ॥**
**ಲೋಕೇ ದಸ್ಯುಭಯಂ ನಾಸೀದ್ ಅನರ್ಥೋ ನಾಸ್ತಿ ಕಶ್ಚನ ।**
**ವೃದ್ಧೇಷು ಸತ್ಸು ಬಾಲಾನಾಂ ನಾಸೀನ್ಮೃತ್ಯುಭಯಂ ತಥಾ ॥ ೨೬ ॥**
**ರಾಮಪೂಜಾಪರಾಃ ಸರ್ವೇ ಸರ್ವೇ ರಾಘವಚಿಂತಕಾಃ ।**

೨೫-೨೬. ರಾಮನು ರಾಜ್ಯವಾಳುತ್ತಿರಲಾಗಿ ವಿಧವೆಯರು ಕಣ್ಣೀರು ಹಾಕುವ ಪ್ರಸಂಗವಿರಲಿಲ್ಲ. ಹಾವುಗಳ (ನಿಮಿತ್ತವಾದ ಮರಣ) ಭಯವಿರಲಿಲ್ಲ. ಹಾಗೆಯೇ ರೋಗಭಯವೂ ಇರಲಿಲ್ಲ. ಕಳ್ಳಕಾಕರ ಹೆದರಿಕೆಯೂ ಇರಲಿಲ್ಲ. ಯಾರಿಗೂ ಏನೊಂದೂ ಕೆಡುಕು ಉಂಟಾಗುತ್ತಿರಲಿಲ್ಲ. ಹಿರಿಯರು ಬದುಕಿರಲಾಗಿ ಬಾಲಕರಿಗೆ

ಮೃತ್ಯುಭಯವಿರಲಿಲ್ಲ. ಎಲ್ಲರೂ ಶ್ರೀರಾಮಪೂಜಾತತ್ಪರರೂ ರಾಮಚಿಂತಕರೂ ಆಗಿರುತ್ತಿದ್ದರು.

**ವವರ್ಷುರ್ಜಲದಾಸ್ತೋಯಂ ಯಥಾ ಕಾಲಂ ಯಥಾ ರುಚಿ ।**
**ಪ್ರಜಾಃ ಸ್ವಧರ್ಮನಿರತಾಃ ವರ್ಣಾಶ್ರಮಗುಣಾನ್ವಿತಾಃ ॥ ೨೭ ॥**
**ಔರಸಾನಿವ ರಾಮೋಽಪಿ ಜುಗೋಪ ಪಿತೃವತ್ ಪ್ರಜಾಃ ।**
**ಸರ್ವಲಕ್ಷಣಸಂಯುಕ್ತಃ ಸರ್ವಧರ್ಮಪರಾಯಣಃ ॥ ೨೮ ॥**
**ದಶವರ್ಷಸಹಸ್ರಾಣಿ ರಾಮೋ ರಾಜ್ಯಮುಪಾಸ್ತ ಸಃ ।**

೨೭-೨೮. ಕಾಲಕ್ಕೆ ಸರಿಯಾಗಿ ಲೋಕದ ಕ್ಷೇಮಕ್ಕೆ ತಕ್ಕಷ್ಟು ಮಳೆಯನ್ನು ಮೋಡಗಳು ಸುರಿಸುತ್ತಿದ್ದವು. ಪ್ರಜೆಗಳು ಸ್ವಧರ್ಮನಿರತರಾಗಿರುತ್ತಿದ್ದರು. ವರ್ಣಾಶ್ರಮ ಧರ್ಮನಿಷ್ಠರಾಗಿದ್ದರು. ಪ್ರಜೆಗಳನ್ನು ರಾಮನು - ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ತಂದೆಯು ಕಾಪಾಡುವಂತೆ - ಪರಿಪಾಲಿಸುತ್ತಿದ್ದನು. ಆತನು ಸರ್ವಲಕ್ಷಣಸಂಪನ್ನನೂ ಸರ್ವಧರ್ಮಪರಾಯಣನೂ ಆಗಿದ್ದನು. ಹೀಗೆ ಅವನು ಹತ್ತುಸಾವಿರವರ್ಷಗಳ ಕಾಲ ರಾಜ್ಯಭಾರಮಾಡಿದನು.

**ಇದಂ ರಹಸ್ಯಂ ಧನಧಾನ್ಯಋದ್ಧಿಮತ್**
**ದೀರ್ಘಾಯುರಾರೋಗ್ಯಕರಂ ಸುಪುಣ್ಯದಮ್ ।**
**ಪವಿತ್ರಮಾಧ್ಯಾತ್ಮಿಕಸಂಜ್ಞಿತಂ ಪುರಾ**
**ರಾಮಾಯಣಂ ಭಾಷಿತಮಾದಿಶಂಭುನಾ ॥ ೨೯ ॥**
**ಶೃಣೋತಿ ಭಕ್ತ್ಯಾ ಮನುಜಃ ಸಮಾಹಿತೋ**
**ಭಕ್ತ್ಯಾ ಪಠೇದ್ವಾ ಪರಿತುಷ್ಟಮಾನಸಃ ।**
**ಸರ್ವಾಃ ಸಮಾಪ್ನೋತಿ ಮನೋಗತಾಶಿಷೋ**
**ವಿಮುಚ್ಯತೇ ಪಾತಕಕೋಟಿಭಿಃ ಕ್ಷಣಾತ್ ॥ ೩೦ ॥**

೨೯-೩೦ ಈ ರಾಮಾಯಣವು ಆಧ್ಯಾತ್ಮಿಕವೆಂಬ ಹೆಸರುಳ್ಳದ್ದು. ಪವಿತ್ರವಾದದ್ದು. ಆದಿಶಂಭುವೆನಿಸಿದ (ಈಶ್ವರನಿಂದ) ಹೇಳಲ್ಪಟ್ಟದ್ದು. ಧನಧಾನ್ಯಸಮೃದ್ಧಿಯುಂಟುಮಾಡತಕ್ಕದ್ದು. ದೀರ್ಘಾಯುರಾರೋಗ್ಯಕರವೂ ಪುಣ್ಯಪ್ರದವೂ ರಹಸ್ಯವೂ ಆದುದು. ಯಾವ ಮನುಷ್ಯನು ಸಮಾಧಾನಚಿತ್ತನಾಗಿ ಭಕ್ತಿಯಿಂದ ಕೇಳುವನೋ ಅಥವಾ ತೃಪ್ತಿಯಾದ ಅಂತಃಕರಣದಿಂದ ಪಠಿಸುವನೋ ಅವನು ಮನೋರಥಗಳೆಲ್ಲವನ್ನೂ ಪಡೆಯುವನು. ಕ್ಷಣಮಾತ್ರದಲ್ಲಿ ಕೋಟಿಪಾಪಗಳಿಂದ ಬಿಡುಗಡೆ ಹೊಂದುವನು.

**ರಾಮಾಭಿಷೇಕಂ ಪ್ರಯತಃ ಶೃಣೋತಿ ಯೋ**
**ಧನಾಭಿಲಾಷೀ ಲಭತೇ ಮಹದ್ಧನಮ್ ।**
**ಪುತ್ರಾಭಿಲಾಷೀ ಸುತಮಾರ್ಯಸಂಮತಂ**
**ಪ್ರಾಪ್ನೋತಿ ರಾಮಾಯಣಮಾದಿತಃ ಪಠನ್ ॥ ೩೧ ॥**
**ಶೃಣೋತಿ ಯೋಽಧ್ಯಾತ್ಮಿಕರಾಮಸಂಹಿತಾಂ**
**ಪ್ರಾಪ್ನೋತಿ ರಾಜಾ ಭುವಮೃದ್ಧಸಂಪದಮ್ ।**
**ಶತ್ರೂನ್ ವಿಜಿತ್ಯಾರಿಭಿರಪ್ರಧರ್ಷಿತೋ**
**ವ್ಯಪೇತದುಃಖೋ ವಿಜಯೀಭವೇನ್ನೃಪಃ ॥ ೩೨ ॥**

೩೧-೩೨. ಯಾವನು ಹಣವನ್ನು ಬಯಸಿದವನಾಗಿ ರಾಮಪಟ್ಟಾಭಿಷೇಕದ (ಕಥೆಯನ್ನು) ಕೇಳುವನೋ ಅವನು ಹೆಚ್ಚಿನ ಧನವನ್ನು ಪಡೆಯುವನು. ಪುತ್ರರನ್ನು ಇಚ್ಛಿಸಿ (ಈ ರಾಮಾಯಣವನ್ನು) ಪ್ರಾರಂಭದಿಂದ ಓದುವವನು ಆರ್ಯಜನರಿಗೆ ಸಂಮತವಾದ ನಡತೆಯುಳ್ಳ ಯೋಗ್ಯನಾದ ಮಗನನ್ನು ಪಡೆಯುವನು. ಇನ್ನು ರಾಜನಾದವನು ಯಾವನು ಈ ಆಧ್ಯಾತ್ಮಿಕರಾಮಸಂಹಿತೆಯನ್ನು ಕೇಳುವನೋ ಅವನು ಸಮೃದ್ಧಿಯಿಂದ ಕೂಡಿದ ಭೂಮಿಯನ್ನು ಪಡೆಯುವನು. ಮತ್ತು ಶತ್ರುಗಳನ್ನು ಗೆದ್ದು ಅವರುಗಳಿಗೆ ವಶನಾಗದೆ ವಿಜಯಿಯಾಗಿ ದುಃಖವನ್ನು ನೀಗಿಕೊಂಡು ಸುಖಿಸುವನು.

**ಸ್ತ್ರಿಯೋಽಪಿ ಶೃಣ್ವಂತ್ಯಧಿರಾಮಸಂಹಿತಾಂ**
**ಭವಂತಿ ತಾ ಜೀವಸುತಾಶ್ಚ ಪೂಜಿತಾಃ ।**
**ವಂಧ್ಯಾಪಿ ಪುತ್ರಂ ಲಭತೇ ಸುರೂಪಿಣಂ**
**ಕಥಾಮಿಮಾಂ ಭಕ್ತಿಯುತಾ ಶೃಣೋತಿ ಯಾ ॥ ೩೩ ॥**
**ಶ್ರದ್ಧಾನ್ವಿತೋ ಯಃ ಶೃಣುಯಾತ್ ಪಠೇನ್ನರೋ**
**ವಿಜಿತ್ಯ ಕೋಪಂ ಚ ತಥಾ ವಿಮತ್ಸರಃ ।**
**ದುರ್ಗಾಣಿ ಸರ್ವಾಣಿ ವಿಜಿತ್ಯ ನಿರ್ಭಯೋ**
**ಭವೇತ್ ಸುಖೀ ರಾಘವಭಕ್ತಿಸಂಯುತಃ ॥ ೩೪ ॥**

೩೩-೩೪. ಹೆಂಗಸರು ಕೂಡ ಈ ಅಧ್ಯಾತ್ಮರಾಮಾಯಣವನ್ನು ಕೇಳಿದ್ದೇ ಆದರೆ ಅವರು ಪೂಜ್ಯರೂ ಬದುಕಿರುವ ಮಕ್ಕಳ ತಾಯಂದಿರೂ ಆಗುವರು. ಇನ್ನು ಯಾವಳು ಭಕ್ತಿಪೂರಿತಳಾಗಿ ಈ ಕಥೆಯನ್ನು ಕೇಳುವಳೋ ಆಕೆಯು (ಮೊದಲು) ಬಂಜೆ ಯಾಗಿದ್ದರೂ ಅನಂತರ ಸುರೂಪನಾದ ಮಗನನ್ನು ಪಡೆಯುವಳು. ಇನ್ನು ಯಾವನು ಶ್ರದ್ಧಾಸಂಪನ್ನನಾಗಿ ಕೋಪವನ್ನೂ ಮಾತ್ಸರ್ಯವನ್ನೂ ಬಿಟ್ಟವನಾಗಿ

ಕಥೆಯನ್ನು ಕೇಳು ವನೋ ಅವನು ನಿರ್ಭಯವಾಗಿ ಎಲ್ಲಾ ದುರ್ಗ(ಕಷ್ಟ)ಗಳನ್ನೂ ದಾಟಿ ರಾಮಭಕ್ತಿ ಸಂಪನ್ನನಾಗಿ ಸುಖಿಯಾಗುವನು.

**ಸುರಾಃ ಸಮಸ್ತಾ ಅಪಿ ಯಾಂತಿ ತುಷ್ಟತಾಂ**
**ವಿಘ್ನಾಃ ಸಮಸ್ತಾ ಅಪಯಾಂತಿ ಶೃಣ್ವತಾಮ್ ।**
**ಅಧ್ಯಾತ್ಮರಾಮಾಯಣಮಾದಿತೋ ನೃಣಾಂ**
**ಭವಂತಿ ಸರ್ವಾ ಅಪಿ ಸಂಪದಃ ಪರಾಃ ॥ ೩೫ ॥**
**ರಜಸ್ವಲಾ ವಾ ಯದಿ ರಾಮತತ್ಪರಾ**
**ಶೃಣೋತಿ ರಾಮಾಯಣಮೇತದಾದಿತಃ ।**
**ಪುತ್ರಂ ಪ್ರಸೂತೇ ಋಷಭಂ ಚಿರಾಯುಷಂ**
**ಪತಿವ್ರತಾ ಲೋಕಸುಪೂಜಿತಾ ಭವೇತ್ ॥ ೩೬ ॥**

೩೫-೩೬. ಅಧ್ಯಾತ್ಮರಾಮಾಯಣವನ್ನು ಪ್ರಾರಂಭದಿಂದಲೂ ಕೇಳುವ ಮನುಷ್ಯ ರಿಗೆ ಎಲ್ಲಾ ದೇವತೆಗಳೂ ಸಂತುಷ್ಟರಾಗುವರು. ಎಲ್ಲಾ ವಿಘ್ನಗಳೂ ಪರಿಹಾರವಾಗುವವು. ಎಲ್ಲಾ ಹೆಚ್ಚಿನ ಸಂಪತ್ತುಗಳೂ ದೊರಕುವವು. ರಾಮನಲ್ಲೇ ತತ್ಪರಳಾಗಿ ಈ ರಾಮಾಯಣ ವನ್ನು ಯಾವ ರಜಸ್ವಲಾಸ್ತ್ರೀಯು ಕೇಳುವಳೋ ಅವಳು ಲೋಕಪೂಜಿತಳೂ ಪತಿವ್ರತೆಯೂ ಆಗಿ ಬಾಳಿ ದೀರ್ಘಾಯುಷ್ಮಂತನಾದ ಶ್ರೇಷ್ಠ ನಾದ ಮಗನನ್ನು ಹಡೆಯುವಳು.

**ಪೂಜಯಿತ್ವಾ ತು ಯೇ ಭಕ್ತ್ಯಾ ನಮಸ್ಕುರ್ವಂತಿ ನಿತ್ಯಶಃ ।**
**ಸರ್ವಪಾಪೈರ್ವಿನಿರ್ಮುಕ್ತಾಃ ವಿಷ್ಣೋರ್ಯಾಂತಿ ಪರಂ ಪದಮ್ ॥ ೩೭ ॥**
**ಅಧ್ಯಾತ್ಮರಾಮಚರಿತಂ ಕೃತ್ಸ್ನಂ ಶೃಣ್ವಂತಿ ಭಕ್ತಿತಃ ।**
**ಪಠಂತಿ ವಾ ಸ್ವಯಂ ವಕ್ತ್ರಾತ್ ತೇಷಾಂ ರಾಮಃ ಪ್ರಸೀದತಿ ॥ ೩೮ ॥**
**ರಾಮ ಏವ ಪರಂ ಬ್ರಹ್ಮ ತಸ್ಮಿಂಸ್ತುಷ್ಟೇಽಖಿಲಾತ್ಮನಿ ।**
**ಧರ್ಮಾರ್ಥಕಾಮಮೋಕ್ಷಾಣಾಂ ಯದ್ಯದಿಚ್ಛತಿ ತದ್ಭವೇತ್ ॥ ೩೯ ॥**

೩೭-೩೯. ಇನ್ನು ಯಾರು (ಓದುವದಕ್ಕೆ ಬಾರದವರೂ ಕೇಳಲು ಅವಕಾಶ ವಿಲ್ಲದವರೂ ಇರುವರೋ ಅಂಥವರು) ಈ ಗ್ರಂಥವನ್ನು ಭಕ್ತಿಯಿಂದ ಪೂಜಿಸಿ ನಮಸ್ಕರಿಸುತ್ತಾರೋ ಅವರು ಎಲ್ಲಾ ಪಾಪಗಳಿಂದಲೂ ಬಿಡಲ್ಪಟ್ಟವರಾಗಿ ವಿಷ್ಣುವಿನ ಪರಮಪದವನ್ನು ಸೇರುವರು. ಅಧ್ಯಾತ್ಮರಾಮಚರಿತ್ರವನ್ನು ಪೂರ್ತಿಯಾಗಿ ಭಕ್ತಿ ಯಿಂದ ಕೇಳಿದರೆ ಅಥವಾ ಮುಖದಿಂದ ಖುದ್ದು ಪಠಿಸಿದರೆ ಅಂಥವರಿಗೆ ಶ್ರೀರಾಮನು ಪ್ರಸನ್ನನಾಗುವನು. ಶ್ರೀರಾಮನೇ ಪರಬ್ರಹ್ಮವು. ಅಖಿಲಾತ್ಮನಾದ ಆತನು ಸಂತುಷ್ಟನಾಗ ಲಾಗಿ (ಭಕ್ತರು) ಧರ್ಮಾರ್ಥಕಾಮಮೋಕ್ಷಗಳಲ್ಲಿ ಏನೇನನ್ನು ಬಯಸುವರೋ ಅದದು ಪ್ರಾಪ್ತವಾಗುವದು.

**ಶ್ರೋತವ್ಯಂ ನಿಯಮೇನೈತದ್ ರಾಮಾಯಣಮಖಂಡಿತಮ್ ।**
**ಆಯುಷ್ಯಮಾರೋಗ್ಯಕರಂ ಕಲ್ಪಕೋಟ್ಯಘನಾಶನಮ್ ॥ ೪೦ ॥**
**ದೇವಾಶ್ಚ ಸರ್ವೇ ತುಷ್ಯಂತಿ ಗ್ರಹಾಸ್ಸರ್ವೇ ಮಹರ್ಷಯಃ ।**
**ರಾಮಾಯಣಸ್ಯ ಶ್ರವಣೇ ತೃಪ್ಯಂತಿ ಪಿತರಸ್ತಥಾ ॥ ೪೧ ॥**
**ಅಧ್ಯಾತ್ಮರಾಮಾಯಣಮೇತದದ್ಭುತಂ**
**ವೈರಾಗ್ಯವಿಜ್ಞಾನಯುತಂ ಪುರಾತನಮ್ ।**
**ಪಠಂತಿ ಶೃಣ್ವಂತಿ ಲಿಖಂತಿ ಯೇ ನರಾಃ**
**ತೇಷಾಂ ಭವೇಽಸ್ಮಿನ್ ನ ಪುನರ್ಭವೋ ಭವೇತ್ ॥ ೪೨ ॥**

೪೦-೪೨. ಈ ರಾಮಾಯಣವು ನಿಯಮದಿಂದ ಅಖಂಡಿತವಾಗಿ (ವಿಚ್ಛೇದವಿಲ್ಲದೆ) ಕೇಳಲ್ಪಡಬೇಕು. ಇದು ಆಯುಷ್ಯ, ಆರೋಗ್ಯಗಳನ್ನುಂಟುಮಾಡಿ ಕೋಟಿಕಲ್ಪಗಳ ಪಾಪವನ್ನು ಕಳೆಯುವದು. ರಾಮಾಯಣವನ್ನು ಕೇಳುವದರಿಂದ ಎಲ್ಲಾ ದೇವತೆಗಳೂ ಗ್ರಹಗಳೂ ಮಹರ್ಷಿಗಳೂ ಪಿತೃಗಳೂ ತೃಪ್ತರಾಗುವರು. ಪುರಾತನವೂ ವೈರಾಗ್ಯವಿಜ್ಞಾನೋಪದೇಶಗಳಿಂದ ಕೂಡಿರುವದೂ ಅದ್ಭುತವೂ ಆದ ಈ ಅಧ್ಯಾತ್ಮ ರಾಮಾಯಣವನ್ನು ಯಾರು ಪಠಿಸುವರೋ, ಕೇಳುವರೋ, ಬರೆಯುವರೋ ಅಂಥ ಮನುಷ್ಯರಿಗೆ ಈ ಸಂಸಾರದಲ್ಲಿ ಮತ್ತೆ ಹುಟ್ಟು ಸಂಭವಿಸುವದಿಲ್ಲ.

**ಆಲೋಡ್ಯಾಖಿಲವೇದರಾಶಿಮಸಕೃತ್ ಯತ್ತಾರಕಂ ಬ್ರಹ್ಮ ತತ್ ।**
**ರಾಮೋ ವಿಷ್ಣುರಹಸ್ಯಮೂರ್ತಿರಿತಿ ಯೋ ವಿಜ್ಞಾಯ ಭೂತೇಶ್ವರಃ ॥**
**ಉದ್ಧೃತ್ಯಾಖಿಲಸಾರಸಂಗ್ರಹಮಿದಂ ಸಂಕ್ಷೇಪತಃ ಪ್ರಸ್ಫುಟಂ ।**
**ಶ್ರೀರಾಮಸ್ಯ ನಿಗೂಢತತ್ತ್ವಮಖಿಲಂ ಪ್ರಾಹ ಪ್ರಿಯಾಯೈ ಭವಃ॥**

೪೩. ಯಾವ ಭೂತೇಶ್ವರನಾದ ಪರಮೇಶ್ವರನು- ಸಮಸ್ತವೇದರಾಶಿಯನ್ನೂ ಅನೇಕ ಬಾರಿ ಅಧ್ಯಯನಮಾಡಿ ತಾರಕಬ್ರಹ್ಮವೆಂಬುದು ಯಾವದೋ ಆ ರಹಸ್ಯವಾದ ವಿಷ್ಣುಮೂರ್ತಿಯೇ ರಾಮನು - ಎಂದು ಅರಿತವನಾಗಿ, ಸಂಕ್ಷೇಪವಾಗಿ ಅಖಿಲವೇದಗಳ ಸಾರಸಂಗ್ರಹವಾದ ಈ (ರಾಮಾಯಣವನ್ನು) ಕಡೆದು ಎತ್ತಿದವನಾಗಿ, ಹೆಚ್ಚು ಸ್ಫುಟವಾಗಿ ಶ್ರೀರಾಮನ ನಿಗೂಢತತ್ತ್ವವನ್ನು ತನ್ನ ಪ್ರಿಯಳಾದ ಪಾರ್ವತಿಗೆ ಉಪದೇಶಿಸಿದನೋ ಆ ಭವ (ನೆಂಬ ಸದ್ಗುರುವು ವಿಜಯಿಯಾಗಿರುವನು).

**ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಷೋಡಶಃ ಸರ್ಗಃ**

**॥ ಸಮಾಪ್ತಮಿದಂ ರಾಮಾಯಣಮ್ ॥**

--------

# ಅಧ್ಯಾತ್ಮರಾಮಾಯಣಮಾಹಾತ್ಮ್ಯೆ

**ಅಧ್ಯಾತ್ಮರಾಮಾಯಣತಃ ಶ್ಲೋಕಂ ಶ್ಲೋಕಾರ್ಧಮೇವ ವಾ ।**
**ಯಃ ಪಠೇತ್ ಭಕ್ತಿಸಂಯುಕ್ತಃ ಸ ಪಾಪಾನ್ಮುಚ್ಯತೇ ಕ್ಷಣಾತ್ ॥ ೧ ॥**

೧. ಯಾವನು ಅಧ್ಯಾತ್ಮರಾಮಾಯಣದ ಒಂದು ಶ್ಲೋಕವನ್ನಾಗಲಿ, ಅರ್ಧ ಶ್ಲೋಕವನ್ನಾಗಲಿ, ಭಕ್ತಿಯಿಂದ ಪಠಿಸುವನೋ ಅವನುಕೂಡಲೆ ಪಾಪದಿಂದ ಬಿಡುಗಡೆ ಹೊಂದುವನು.

**ಯಸ್ತು ಪ್ರತ್ಯಹಮಧ್ಯಾತ್ಮರಾಮಾಯಣಮನನ್ಯಧೀಃ ।**
**ಯಥಾಶಕ್ತಿ ವದೇತ್ ಭಕ್ತ್ಯಾ ಸ ಜೀವನ್ಮುಕ್ತ ಉಚ್ಯತೇ ॥ ೨ ॥**

೨. ಯಾವನು ಪ್ರತಿದಿನವೂ ಭಕ್ತಿಯಿಂದ ಏಕಾಗ್ರಚಿತ್ತನಾಗಿ ಅಧ್ಯಾತ್ಮ ರಾಮಾಯಣ ವನ್ನು ಶಕ್ತಿಯಿದ್ದಷ್ಟು ಪಠಿಸುವನೋ ಅವನು ಜೀವನ್ಮುಕ್ತನೆನಿಸುವನು.

**ಲಿಖಿತ್ವಾ ಪುಸ್ತಕೇऽಧ್ಯಾತ್ಮರಾಮಾಯಣಮಶೇಷತಃ ।**
**ಯೋ ದದ್ಯಾದ್ರಾಮಭಕ್ತೇಭ್ಯಸ್ತಸ್ಯ ಪುಣ್ಯಫಲಂ ಶೃಣು ॥ ೩ ॥**
**ಅಧೀತೇಷು ಚ ವೇದೇಷು ಶಾಸ್ತ್ರೇಷು ವ್ಯಾಕೃತೇಷು ಚ ।**
**ಯತ್ಫಲಂ ದುರ್ಲಭಂ ಲೋಕೇ ತತ್ಫಲಂ ತಸ್ಯ ಸಂಭವೇತ್ ॥ ೪ ॥**

೩-೪. ಇಡಿಯ ಅಧ್ಯಾತ್ಮರಾಮಾಯಣವನ್ನು ಪುಸ್ತಕ (ರೂಪವಾಗಿ) ಕೈಬರಹ ದಿಂದ ಬರೆದು ರಾಮಭಕ್ತರಿಗೆ ಕೊಟ್ಟವನಿಗೆ ಲಭಿಸುವ ಪುಣ್ಯಫಲವನ್ನು ಕೇಳು. ವೇದಗಳನ್ನೆಲ್ಲ ಅಧ್ಯಯನಮಾಡಿ ಶಾಸ್ತ್ರಗಳನ್ನೆಲ್ಲ ವ್ಯಾಖ್ಯಾನಮಾಡಿದ್ದರಿಂದ ದುರ್ಲಭವಾದ ಯಾವ ಪುಣ್ಯಫಲವು ಲಭಿಸಬಹುದೋ ಅಂಥ ಫಲವು (ಆ ಸಾಧಕನಿಗೆ) ದೊರಕುವದು.

**ಪಠನ್ ಪ್ರತ್ಯಹಮಧ್ಯಾತ್ಮರಾಮಾಯಣಮನುವ್ರತಃ ।**
**ಯದ್ಯತ್ ಕರೋತಿ ತತ್ಕರ್ಮ ತತಃ ಕೋಟಿಗುಣಂ ಭವೇತ್ ॥ ೫ ॥**

೫. ಪ್ರತಿದಿನವೂ ವ್ರತ (ನಿಯಮ) ನಿಷ್ಠನಾಗಿ ಯಾವನು ಅಧ್ಯಾತ್ಮ ರಾಮಾಯಣವನ್ನು ಓದುತ್ತಾ ಏನೇನು ಸತ್ಕಾರ್ಯಗಳನ್ನು ಮಾಡುವನೋ ಅವುಗಳು ಕೋಟಿಗುಣವಾಗಿ ವೃದ್ಧಿಯಾಗುವವು.

**॥ ಇತಿ ಶ್ರೀಮದಧ್ಯಾತ್ಮರಾಮಾಯಣಮಾಹಾತ್ಮ್ಯಮ್ ॥**

T. B. Bharathi
c/o. B. Mahesh - 934121347[illegible]
T. B. Nagaraj -
No. 544, 20th Main
4th 'T' Block
Jayanagar.
Bangalore - 41

Radha. Off - 22282221

## ಇದೇ ಲೇಖಕರ ಕನ್ನಡ ಗ್ರಂಥಗಳು

| | ಗ್ರಂಥ | ಪುಟಗಳು |
|---|---|---|
| 1. | ರುದ್ರಭಾಷ್ಯಪ್ರಕಾಶ | 156 |
| 2. | ಚಮಕಾಧ್ಯಾಯ ಭಾಷ್ಯ | 82 |
| 3. | ಪುರುಷಸೂಕ್ತ ಭಾಷ್ಯ | 107 |
| 4. | ಶ್ರೀಸೂಕ್ತ ಭಾಷ್ಯ | 62 |
| 5. | ವಿಷ್ಣುಸೂಕ್ತ ಭಾಷ್ಯ | 107 |
| 6. | ಸೌರಸೂಕ್ತ ಭಾಷ್ಯ | 104 |
| 7. | ಅಧ್ಯಾತ್ಮರಾಮಾಯಣ | 612 |
| 8. | ಅಧ್ಯಾತ್ಮ ಶಂಕರವಿಜಯ | 188 |
| 9. | ಶ್ರೀ ಗುರುಚರಿತಾಮೃತ | 234 |
| 10. | ಸ್ತೋತ್ರಮಾಲಾ - ಭಾಗ 1 | 103 |
| 11. | ಸ್ತೋತ್ರಮಾಲಾ - ಭಾಗ 2 | 84 |
| 12. | ಶಿವಾಪರಾಧಕ್ಷಮಾಪಣ ಸ್ತೋತ್ರ | 38 |
| 13. | ಭಗವನ್ನಾಮಚಂದ್ರಿಕೆ | 52 |
| 14. | ಸನತ್ಸುಜಾತೀಯಮ್ | 254 |
| 15. | ಪ್ರಬೋಧಸುಧಾಕರ | 118 |
| 16. | ದೇವೀಮಹಾತ್ಮ್ಯ | 116 |
| 17. | ಗೀತಾಮನನ | 48 |
| 18. | ಗೃಹಪ್ರವೇಶ | 42 |
| 19. | ಸ್ತುತಿಪುಷ್ಪಾಂಜಲಿ | 72 |
| 20. | ಮಹಾನಾರಾಯಣೋಪನಿಷತ್ತು | 220 |
| 21. | ತೈತ್ತಿರೀಯೋಪನಿಷದ್ಭಾಷ್ಯವಾರ್ತಿಕ | 200 |
| 22. | ಆತ್ಮಪ್ರತಿಬೋಧ | 48 |
| 23. | ಸರಸ್ವತೀರಹಸ್ಯೋಪನಿಷಚ್ಚಂದ್ರಿಕೆ | 48 |
| 24. | ಬೃಹದಾರಣ್ಯಕೋಪನ್ಯಾಸಮಂಜರಿ | 58 |
| 25. | ಛಾಂದೋಗ್ಯೋಪನ್ಯಾಸಮಂಜರಿ | 340 |
| 26. | ಶ್ವೇತಾಶ್ವತರೋಪನ್ಯಾಸಮಂಜರಿ | 354 |

## IV ಹೊರ ಬರಲಿರುವ ಗ್ರಂಥಗಳು

- ❖ ತೈತ್ತಿರೀಯೋಪನ್ಯಾಸಮಂಜರಿ
- ❖ ಐತರೇಯೋಪನ್ಯಾಸಮಂಜರಿ
- ❖ ಗೀತಾಶಾಸ್ತ್ರಾರ್ಥ ವಿವೇಕ
  (ಶ್ರೀ ಶ್ರೀಗಳವರ ಸಂಸ್ಕೃತ ಗ್ರಂಥದ ಅನುವಾದ)

## ವೇ॥ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳ ಕಿರುಪರಿಚಯ



**ಶ್ರೀ** ಕೃಷ್ಣಯಜುರ್ವೇದ ಸಲಕ್ಷಣ ಘನಾಂತ ಸ್ಮಾರ್ತಪ್ರಯೋಗ ಉಭ ವಿದ್ವಾನ್ ದಿ॥ ಶೃಂಗೇರಿ ಶ್ರೀಕಂಠಘನಪಾಠಿಗಳವರು ಮ ಕಮಲಮ್ಮನವರ ಸೀಮಂತಪುತ್ರರಾದ **ಶ್ರೀ ಹೆಚ್. ಎಸ್ ಲಕ್ಷ್ಮೀನರಸಿಂಹಮೂರ್ತಿ**ಗಳು ತಾ॥ 2-6-1928ರಲ್ಲಿ ಜನಿಸಿದರ ಒಂಭತ್ತನೆಯ ವಯಸ್ಸಿನಲ್ಲಿಯೇ ಬ್ರಹ್ಮಚರ್ಯಾಶ್ರಮವನ್ನು ಸ್ವೀಕರಿ ತಂದೆಯವರಿಂದಲೇ ವೇದಾಧ್ಯಯನ ಕಾಲೋಚಿತ ಭಾಗಗಳನ್ನು ಅಭ್ಯಾ ಮಾಡಿದರು. 14ನೆಯ ವಯಸ್ಸಿನಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಅದೇ ಸಂದರ್ಭದ ಪಿತೃವಿಯೋಗವಾದ್ದರಿಂದ ಆಂಗ್ಲವಿದ್ಯಾಭ್ಯಾಸದಿಂದ ನಿವೃತ್ತರಾಗಿ ಬೇಲೂರಿನಲ್ಲಿ ಸಂಸ್ಕೃತಪಾಠಶಾಲ ಸೇರಿ ನಾಲ್ಕು ವರ್ಷಗಳ ಕಾಲ ಸಂಸ್ಕೃತಾಭ್ಯಾಸ ಮಾಡಿ ಚಂಪೂ ನಾಟಕ (ಸಾಹಿತ್ಯ) ಪರೀಕ್ಷೆಯಲ್ಲಿ ಪ್ರಥ ದರ್ಜೆಯಲ್ಲಿ ಉತ್ತೀರ್ಣರಾದರು. ಅನಂತರ 1947ರಲ್ಲಿ ಹೊಳೆನರಸೀಪುರಕ್ಕೆ ಬಂದ ಅಧ್ಯಾತ್ಮವಿದ್ಯಾನಿಲಯಕ್ಕೆ ಸೇರಿ ಐದು ವರ್ಷಗಳ ಕಾಲ ಶಾಂಕರವೇದಾಂತಾಧ್ಯಯನವನ ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ಸನ್ನಿಧಿಯಲ್ಲಿ ಅಭ್ಯಾಸಮಾಡಿ 1952ರ ''**ಅಧ್ಯಾತ್ಮವಿದ್ಯಾಪ್ರವೀಣ**'' ಎಂಬ ಪ್ರಶಸ್ತಿಯನ್ನು ಪಡೆದರು. ಅನಂತರ ಅಧ್ಯಾತ್ಮಪ್ರಕಾ ಕಾರ್ಯಾಲಯದಲ್ಲಿಯೇ ಪಂಡಿತರಾಗಿ ನೇಮಿಸಲ್ಪಟ್ಟು ಪಾಠ ಪ್ರವಚನಗಳು ಉಪನ್ಯಾಸಗಳು ಹಾಗ ಸಂಸ್ಥೆಯ ಆಡಳಿತ ವಿಭಾಗದಲ್ಲಿಯೂ ಸೇವೆಯನ್ನು ಸಲ್ಲಿಸುತ್ತಾ ಈಗಲೂ ಸಂಸ್ಥೆಯಲ್ಲಿ ಸೇವಾತತ್ಪರರಾಗಿದ್ದಾ

ಅಧ್ಯಾತ್ಮ ಪ್ರಕಾಶಕಾರ್ಯಾಲಯದ ಸಂಸ್ಥಾಪಕರಾದ ಪೂಜ್ಯ **ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು** 1975ರಲ್ಲಿ ಬ್ರಹ್ಮೀಭೂತರಾದ ಮೇಲೆ ಇವರು **'ಅಧ್ಯಾತ್ಮಪ್ರಕಾಶ'** ಮಾಸಪತ್ರಿಕೆ ಸಂಪಾದಕರೂ, ಲೇಖಕರೂ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಜೊತೆಗೆ ಅಧ್ಯಾತ್ಮ ಗ್ರಂಥಗಳ ಬರಹಗಾರರ ಪ್ರಕಾಶಕರೂ ಆಗಿ ಸೇವೆ ಸಲ್ಲಿಸುತ್ತಾ ಪ್ರಧಾನಕಾರ್ಯಾಲಯದಲ್ಲಿಯೇ ಕಳೆದ 48 ವರ್ಷಗಳಿಂದಲ ಸೇವಾನಿರತರಾಗಿದ್ದಾರೆ. ಶ್ರೀಶ್ರೀಗಳವರ ಕಾಲಾನಂತರ ಈವರೆಗೆ 26 ಅಧ್ಯಾತ್ಮ ಗ್ರಂಥಗಳನ ಹೊರತಂದಿದ್ದಾರೆ. ನಾಲ್ಕು ಪರ್ಯಾಯಗಳಲ್ಲಿ ಬ್ರಹ್ಮಸೂತ್ರ ಶಾಂಕರಭಾಷ್ಯದ ಮೇಲೆ 12 ಪ್ರವಚನಗಳನ್ನು ನೀಡಿದ್ದಾರೆ. ಇವು 108 ಕ್ಯಾಸೆಟ್‌ಗಳಲ್ಲಿ ಅಡಕವಾಗಿದ್ದು ಜನಪ್ರಿಯವಾಗಿವೆ. ಹೀ ಪೂಜ್ಯ ಶ್ರೀಶ್ರೀಗಳವರ ಶಿಷ್ಯರಲ್ಲಿ ಗಣ್ಯರಾಗಿದ್ದು ಈಗಲೂ ತಮ್ಮ ಅಮೋಘಸೇವೆಯಿಂದ ಸಂಸ್ಥೆ ಅಭಿವೃದ್ಧಿಗೆ ಕಾರಣರಾಗಿದ್ದಾರೆ - ಎಂದು ತಿಳಿಸಲು ಸಂತೋಷಪಡುತ್ತೇವೆ.

**7-7-2000** **ಅಧ್ಯಕ್ಷ**